ಬಿ.ಎಚ್. ಶ್ರೀಧರ

# ಸಮಗ್ರ ಸಾಹಿತ್ಯ

ಸಂಪುಟ - ೫

## ಅನುವಾದ - ೧



ಸಂಪಾದಕರು

ರಾಜಶೇಖರ ಹೆಬ್ಬಾರ




ತೇಜು ಪಬ್ಲಿಕೇಷನ್ಸ್

## ಬಿ.ಎಚ್. ಶ್ರೀಧರ ಸಮಗ್ರ ಸಾಹಿತ್ಯ

### ಸಂಪುಟ – ೫

# ಅನುವಾದ – ೧

ಸಂಪಾದಕರು

**ರಾಜಶೇಖರ ಹೆಬ್ಬಾರ**




**ತೇಜು ಪಬ್ಲಿಕೇಷನ್ಸ್**

ನಂ. 1014, 24ನೇ ಮುಖ್ಯರಸ್ತೆ, 16ನೇ ಕ್ರಾಸ್,
ಬಿ.ಎಸ್.ಕೆ. 2ನೇ ಹಂತ, ಬೆಂಗಳೂರು – 560 070.

B.H. Shridhar's Complete Works
Volume - 5
**ANUVADA - 1**

Edited by
**Rajashekhar Hebbar**

Published by
V. Padmavathi, on behalf of **Teju Publications**
# 1014, 24th Main, 16th Cross, BSK 2nd Stage
Bangalore - 560 070. Mob : 9900195626



First Edition : 2018

Pages : 726 (Box Binding)

Price : ₹ 620 ಬೆಲೆ : ರೂ. ೬೨೦

No. of Copies : 1100

70 GSM N.S. Maplitho – 1/8 Demy

***ಸಲಹೆ ಸಹಕಾರ***
ಪ್ರೊ. ಎಚ್.ಆರ್.ಅಮರನಾಥ, ಡಾ. ಎಮ್.ಜಿ.ಹೆಗಡೆ, ಶ್ರೀ ಸಿ.ಆರ್.ಶಾನಭಾಗ,
ಡಾ. ಸುಮಿತ್ರ ಮೋತಿಲಾಲ ಹಲವಾಯಿ, ಶ್ರೀಮತಿ ರಾಜೇಶ್ವರಿ ಲೋಕರೆ, ಶ್ರೀಕೃಷ್ಣ ಲೋಕರೆ,
ಶ್ರೀಮತಿ ಭುವನೇಶ್ವರಿ ಹೆಗಡೆ

***Cover Design :*** **Bagur Markandaya**

***Typeset at :*** **Page Designers**
Bangalore - 560 004. Ph : 41691270 E-mail : bsmadhu75@gmail.com

***Printed at :*** **Sathyananada Printers**
Pipeline Service Road, Magadi Road,
Bangalore.

# ಅರ್ಪಣೆ

ನೋವು ನುಂಗಿ ನಕ್ಕ ಶ್ರೀಧರರ ಧರ್ಮಪತ್ನಿ

**ಶ್ರೀಮತಿ ರಮಾದೇವಿಯವರಿಗೆ**



## ಚಂದ್ರಲೋಕದ ತಾಯಿ

ತುಸುವೆ ನೋಡಿದೆವು ಎನ್ನುವಂತಿಲ್ಲ
ಅರೆಗಳಿಗೆ ಕಂಡರೂ ಅದು ಪೂರ್ಣವೇ
ಕಂಡದ್ದಲ್ಲ, ಕಣ್ಣ ತುಂಬಿತು ನೋಟ
ಕಣ್ಣುತುಂಬಿದ ಮೇಲೆ ಮನ ಬಾಕಿಯೇ?

ಹಲವೊಮ್ಮೆ ನೋಡಿದ್ದಕ್ಕೆ ಹೆಚ್ಚಾಗಲಿಲ್ಲ
ಹೊಟ್ಟೆಯಲಿ ಹುಟ್ಟಿದ್ದಕ್ಕೇ ಮಕ್ಕಳೆನಿಸಿದ್ದಲ್ಲ
ದೂರ ನಿಂತವರೂ ತಮ್ಮ ಹತ್ತಿರದ ಬಂಧುಗಳೇ
ಅರಿಯದಿದ್ದವರೂ ತಮ್ಮ ಸ್ವಂತದವರೇ!

ಹುಲ್ಲು ಸಸಿ ಕಲ್ಲುಗಳೆಲ್ಲವನೂ ಹಾದು
ಹೊಳೆಸುತ್ತ ಹರಿಸುತ್ತ ಮತ್ತೆ ಹಡೆದಿರಿ ತಾವು
ಭೂಮಿಯೆಂದೆನಲಾರೆ ಚಂದ್ರನಂಥವರನ್ನು
ಮಣ್ಣಾಗಬಹುದೇ ಬೆಳದಿಂಗಳು?

**–ಎಸ್.ಮಂಜುನಾಥ್**

(ಖ್ಯಾತ ಕವಿ)

# ಕವಿ ಕಾವ್ಯ ವಿಚಾರ

ಕವಿ, ಚಿಂತಕ, ವಿಮರ್ಶಕ, ವಾಗ್ಮಿ, ಬಹುಶ್ರುತ ವಿದ್ವಾಂಸ ಪ್ರೊ.ಬಿ.ಎಚ್.ಶ್ರೀಧರರ ಜನನ ೧೯೧೮, ಏಪ್ರಿಲ್ ೨೪ ರಂದು ಬಿಜೂರಿನ (ದ.ಕನ್ನಡ) ಬವಲಾಡಿಯಲ್ಲಿ. ತಂದೆ ಸೀತಾರಾಮ ಹೆಬ್ಬಾರ, ತಾಯಿ ನಾಗಮ್ಮ. ಲಕ್ಷ್ಮಿಯದಿಲ್ಲದಿದ್ದರೂ ಸರಸ್ವತಿಯ ಕೃಪಾಕಟಾಕ್ಷ ಧಾರಾಳವಾಗಿ ಇದ್ದ ಆಶುಕವಿಗಳ, ಪಂಡಿತರ, ಸತ್ಯವ್ರತರ ಕುಟುಂಬ. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಜ್ಞಾನನಿಧಿಗಳೂ, ಗುಣನಿಧಿಗಳೂ ಆದ ಶಿಕ್ಷಕರಿಂದ ಬೋಧನೆ, ಸಂಸ್ಕೃತ ಎಮ್.ಎ. ಪೂರ್ತೈಕೆ (೧೯೪೨). ರಮಾದೇವಿಯವರೊಡನೆ ೧೯೪೬ರಲ್ಲಿ ವಿವಾಹ. ನಾಲ್ಕು ಹೆಣ್ಣು, ಒಂದು ಗಂಡು ಮಕ್ಕಳ ತಂದೆ. ೧೯೪೨ರಲ್ಲಿ ಮಿಲಿಟರಿ ಅಕೌಂಟ್ಸ್ ಆಫೀಸಿನಲ್ಲಿ ಗುಮಾಸ್ತಗಿರಿಯಿಂದ ಆರಂಭವಾದ ಉದ್ಯೋಗಪರ್ವ ಶಿಕ್ಷಕವೃತ್ತಿ, ಪತ್ರಿಕೋದ್ಯಮ ಪ್ರಾಚಾರ್ಯಗಿರಿಯವರೆಗೆ ಹಬ್ಬಿದೆ. ಈ ಎಲ್ಲ ಕಾಲಘಟ್ಟಗಳಲ್ಲೂ (೧೯೪೫ರಿಂದಲೇ) ವಿವಿಧ ಸಾಹಿತ್ಯಪ್ರಕಾರಗಳಲ್ಲಿ ಅವಿರತವಾಗಿ ಬರಹ, ಬರಹ–ದೇಹ ಸಂಪೂರ್ಣವಾಗಿ ಸೋಲುವ (ನಿಧನ ೧೯೯೦ ಏಪ್ರಿಲ್ ೨೪) ತುಸು ಮುಂಚಿನವರೆಗೂ. ಶಿಶುಸಾಹಿತ್ಯದಿಂದ ಹಿಡಿದು ವಿಮರ್ಶೆ, ಇತಿಹಾಸ, ದರ್ಶನಗಳವರೆಗೂ ಶ್ರೀಧರರ ಆಸಕ್ತಿ, ಅಭ್ಯಾಸ, ಕೊಡುಗೆ. ಕಾವ್ಯಸೂತ್ರ, ಜ್ಞಾನಸೂತ್ರ, ರಾಷ್ಟ್ರಸೂತ್ರಗಳು ಸೂತ್ರತ್ರಯಗಳೆನಿಸಿಕೊಂಡವುಗಳು, ಬಹು–ಬಹುಮಾನಿತವಾದವುಗಳು. ಜೀವನದ ಮತ್ತು ಸಾಹಿತ್ಯ ಶ್ರೇಷ್ಠತೆಯ ನಿಕಷದ ಅನ್ವೇಷಣೆಯಲ್ಲಿ ಪಾಶ್ಚಾತ್ಯ–ಪೌರಾತ್ಯ ಇತಿಹಾಸ, ಸಾಹಿತ್ಯ, ದರ್ಶನಗಳನ್ನು ಅಭ್ಯಸಿಸಿ ಅರಗಿಸಿಕೊಂಡು ನಿಖರ ನಿಲುವಿಗೆ ಬಂದು ಅದನ್ನು ತಮ್ಮ ಐವತ್ತಕ್ಕೂ ಹೆಚ್ಚಿನ ಕೃತಿಗಳಲ್ಲಿ, ಅಸಂಖ್ಯಾತ ಲೇಖನಗಳಲ್ಲಿ ಸ್ಪಷ್ಟವಾಗಿ ("ಧರ್ಮಾದರ್ಥಶ್ಚ ಕಾಮಶ್ಚ" ಎಂದ ವ್ಯಾಸನಷ್ಟೇ ಖಚಿತವಾಗಿ) ಅಭಿವ್ಯಕ್ತಿಸಿದ ವಿಶಿಷ್ಟ ಲೇಖಕ.

# ಸಂಪಾದಕೀಯ

ಯಾವುದೇ ಲೇಖಕನ ಕೃತಿಯೊಂದು ಇಂದಿಗೂ, ಎಂದಿಗೂ ಪ್ರಸ್ತುತವೆನಿಸುವದು ಅದು ಸಾರ್ವಕಾಲಿಕ ಮೌಲ್ಯವನ್ನು ಪ್ರತಿಪಾದಿಸುತ್ತಿದ್ದರೆ ಮಾತ್ರ. ಶತಕ–ದಶಕಗಳ ಹಿಂದಿನ ಶ್ರೇಷ್ಠ ಕೃತಿಗಳು ಇಂದಿಗೂ ಪ್ರಸ್ತುತವೆನಿಸುವದು ಇದೇ ಕಾರಣಕ್ಕೆ ಮತ್ತು ಬದಲಾದ ಕಾಲ–ದೇಶಗಳ ಆವರಣದಲ್ಲಿ ಅವುಗಳ ಪುನರಧ್ಯಯನ ಹೊಸ ಕಾಣ್ಕೆಗೂ, ಜಾಗರಕ್ಕೂ ಕಾರಣವಾಗುತ್ತದೆ. ಏಕೆಂದರೆ ಕಾಲ–ದೇಶಗಳು ಬದಲಾದರೂ ಸಮಾಜವನ್ನು ಕಟ್ಟಿ ನಿಲ್ಲಿಸುವ ಶಕ್ತಿ ಇಂದಿಗೂ ಬದಲಾಗಿಲ್ಲ ಮತ್ತು ಅದರ ಸ್ವರೂಪ ನೈತಿಕವಾದುದೆಂಬುದನ್ನು ಮಾನವಕುಲದ ಚರಿತ್ರೆಯನ್ನು ಅಭ್ಯಸಿಸಿ ಅರ್ಥೈಸಿಕೊಂಡ ಪೂರ್ವಗ್ರಹರಹಿತ ವಿವೇಕಿಗಳೆಲ್ಲರೂ ಒಪ್ಪುತ್ತಾರೆ.

ಪ್ರೊ.ಬಿ.ಎಚ್.ಶ್ರೀಧರರ ಎಲ್ಲ ಕೃತಿಗಳಲ್ಲೂ ಸಮಾಜದ ಸುದೃಢತೆಗೆ ಅನಿವಾರ್ಯವಾದ ಮತ್ತು ಅತ್ಯವಶ್ಯವಾದ ಈ ನೈತಿಕತೆಯ ಅಂತಃಸೂತ್ರದ ಅಭಿವ್ಯಕ್ತಿ ಖಚಿತವಾಗಿ ಮತ್ತು ಪ್ರಬಲವಾಗಿ ಪಡಿಮೂಡಿದೆ. ಹೀಗಾಗಿ ಅವು ಅಂದಿಗೂ, ಇಂದಿಗೂ ಸಲ್ಲುವಂಥವುಗಳೆಂಬ ವಿಚಾರವೇ ಅವುಗಳ ಪುನರ್ಮುದ್ರಣಕ್ಕೆ ಪ್ರೇರಣೆ. ಅವರ ಐವತ್ತಕ್ಕೂ ಹೆಚ್ಚಿನ ಕೃತಿಗಳಲ್ಲಿ ಹಲವಾರು ಪ್ರಾತಿನಿಧಿಕ ಕೃತಿಗಳ ಪ್ರತಿಗಳು ಮುಗಿದುಹೋಗಿ ವಾಚಕವರ್ಗಕ್ಕೆ ಲಭ್ಯವಾಗದ ಪರಿಸ್ಥಿತಿ ಇತ್ತು. ಈಗ ಶ್ರೀಧರರು ಕಾಲವಾದ ೨೨–೨೩ ವರ್ಷಗಳ ಬಳಿಕ ಅವೆಲ್ಲ ಮತ್ತೆ ಬೆಳಕು ಕಾಣುವ, ಬೆಳಕು ಬೀರುವ ಸುಯೋಗ ಬಂದೊದಗಿದೆ.

೧೯೪೫ರಲ್ಲಿ ಪ್ರಕಟವಾದ "ಮೇಘನಾದ" ಕವನಸಂಕಲನದೊಂದಿಗೆ ಆರಂಭವಾದ ಅವರ ಸಾಹಿತ್ಯಕೃಷಿ ೧೯೮೮ರಲ್ಲಿ ಬಂದ "ಭಾರತೀಯ ಮೂರ್ತಿಶಿಲ್ಪ" ಗ್ರಂಥದವರೆಗೂ ಅವಿರತವಾಗಿ ನಡೆಯಿತು. ಕಾವ್ಯ, ವಿಮರ್ಶೆ, ವೈಚಾರಿಕ ಪ್ರಬಂಧಗಳು, ವಿಡಂಬನೆ, ಇತಿಹಾಸ, ನಾಟಕ, ಯಕ್ಷಗಾನ, ಅನುವಾದ ಇತ್ಯಾದಿ ಸಾಹಿತ್ಯದ ಬಹುತೇಕ ಎಲ್ಲ ಪ್ರಕಾರಗಳಲ್ಲೂ ಅವರ ಕೊಡುಗೆ ಇದೆ. ಆದರೆ ಪ್ರಮಾಣದಿಂದಾಗಿ ಅಲ್ಲ, ಅವುಗಳೆಲ್ಲವೂ 'ಸಮ್ಯಗ್' ಜೀವನಕ್ಕೆ ಪೋಷಕವಾದ ಮೌಲ್ಯಗಳನ್ನು ಪ್ರತಿಪಾದಿಸುವುದರಿಂದ ಮಹತ್ವದ್ದೆನಿಸಿವೆ. ಶ್ರೀಧರರ ಪ್ರಕಾರ "ಸಾಹಿತ್ಯವು ಉತ್ತಮ ಜೀವನದಿಂದ ಸಂಪೂರ್ಣ ಪ್ರತ್ಯೇಕವೂ, ಸ್ವತಂತ್ರವೂ ಆದ ಅಸ್ತಿತ್ವ ಉಳ್ಳದ್ದಲ್ಲ. ಸತ್ಯವೂ, ಶಿವವೂ ಆದದ್ದಷ್ಟೇ

ನಿಜಸೌಂದರ್ಯ ಉಳ್ಳದ್ದು"–(ಕಾವ್ಯಸೂತ್ರ). ಶುಚಿ, ಸದಭಿರುಚಿ ಬದುಕು–ಬರಹಗಳಲ್ಲಿ ಅವರ ಅಪೇಕ್ಷೆಯಾಗಿತ್ತು, ಆಗ್ರಹವಾಗಿತ್ತು. ಅದಿಲ್ಲದುದು, ಅದಲ್ಲದುದು ವರ್ಜ್ಯ ಎಂಬುದವರ ಧೀರೋದಾತ್ತ ನಿಲುವು. ಶ್ರೇಷ್ಠ ಕಾವ್ಯಗಳಾದ ರಾಮಾಯಣ–ಮಹಾಭಾರತಗಳನ್ನು ಪೂಜಿಸಿದಷ್ಟೇ ಭಕ್ತಿಯಿಂದ ವಾಲ್ಮೀಕಿ–ವ್ಯಾಸರನ್ನೂ ಪೂಜಿಸುವ ಭಾರತೀಯ ಮನೋಭಾವ ಬದುಕು–ಬರಹಗಳಿಗೆ ಸಮಾನ ಮಹತ್ವ ನೀಡುತ್ತದೆ. ಶ್ರೀಧರರ ಈ ನಿಲುವು ಅವರ ಕೌಟುಂಬಿಕ, ಶೈಕ್ಷಣಿಕ ಹಾಗೂ ಅಂದಿನ ಸಾಮಾಜಿಕ ಪರಿಸರದಿಂದ ರೂಪಿತವಾಗಿದ್ದಿರಬಹುದು ಎಂದಿಟ್ಟುಕೊಂಡರೂ ಪಾಶ್ಚಾತ್ಯ ಕಾವ್ಯ, ವಿಮರ್ಶೆ, ದರ್ಶನಗಳನ್ನು ಓದಿದ ಬಳಿಕವೂ ಅವರ ಮೂಲಭೂತ ನಿಲುವು ಬದಲಾಗಲಿಲ್ಲ ಅಥವಾ ಇನ್ನಷ್ಟು ಗಟ್ಟಿಗೊಂಡಿತು – ಪಾಶ್ಚಾತ್ಯ ವಿಚಾರಧಾರೆಯ ದೋಷ, ಮಿತಿಗಳನ್ನು ಕಂಡುಕೊಂಡದ್ದರಿಂದ ಎಂಬುದು ಗಮನಾರ್ಹ. ಹೀಗಾಗಿ ಅವರ ಕೃತಿಗಳು, ಅವುಗಳಲ್ಲಿಯ ಖಚಿತ ನಿಗಮನಗಳು ಇಂದಿನ ಸಂದರ್ಭದಲ್ಲೂ ಚರ್ಚೆಗೆ ಯೋಗ್ಯವಾಗಿವೆ ಮತ್ತು ಸಮಕಾಲೀನತೆಯನ್ನು ಪಡೆದುಕೊಂಡಿವೆ. ತೆರೆದ ಮನಸ್ಸಿನ, ಪಾಶ್ಚಾತ್ಯ–ಪೌರಾತ್ಯ ಚಿಂತನೆಗಳನ್ನು ಅಭ್ಯಸಿಸಿ ಅರಗಿಸಿಕೊಂಡ, ಸಮಷ್ಟಿಕಲ್ಯಾಣದ ಕಳಕಳಿಯುಳ್ಳ ವಿದ್ವಾಂಸವೃಂದ ಶ್ರೀಧರರ ನಿಗಮನಗಳನ್ನು ಮರುಪರಿಶೀಲಿಸಬೇಕಿದೆ, ಸಮಾಜಸೌಧದ ಸುದೃಢತೆಗೆ. ಶ್ರೀಧರರ ಕೃತಿಗಳನ್ನೋದಿ ಅವರ ನಿಲುವನ್ನು ನಿಖರವಾಗಿ ಅರಿತು ಅರ್ಥೈಸಿಕೊಂಡ ಅವರ ಕುಟುಂಬಮಿತ್ರ ಮತ್ತು ಶ್ರೀಧರರ ಪುತ್ರ ಸಮಾನ ಪ್ರೊ.ಎಚ್.ಆರ್.ಅಮರನಾಥರು ತಮ್ಮ "ಪ್ರವೇಶ"ದಲ್ಲಿ ಈ ಕುರಿತು ಸವಿವರವಾಗಿ ಚರ್ಚಿಸಿದ್ದಾರೆ.

ಐದು ಸಂಪುಟಗಳಲ್ಲಿ ಶ್ರೀಧರರ ಎಲ್ಲಾ ಕೃತಿಗಳು ಆಯಾ ಪ್ರಕಾರಗಳಿಗೆ ಅನುಗುಣವಾಗಿ ಬರುತ್ತಿವೆ – ಕಾವ್ಯ, ವಿಮರ್ಶೆ, ವಿಚಾರ, ಸಂಕೀರ್ಣ, ಅನುವಾದ ಎಂಬುದಾಗಿ.

ಶ್ರೀಧರರ ಸಮಗ್ರಸಾಹಿತ್ಯದ ಪುನರ್ಮುದ್ರಣವೆಂಬ ಸುವಿಚಾರದ ಬೀಜವನ್ನು ನಮ್ಮೊಳಗೆ ಬಿತ್ತಿ, ಈ ಧನ್ಯ ಕಾರ್ಯಕ್ಕೆ ನಮ್ಮನ್ನು ಪ್ರೇರೇಪಿಸಿದ ಶ್ರೇಯಸ್ಸು ಶ್ರೀಧರರ ಶಿಷ್ಯೆ ಶ್ರೀಮತಿ ಡಾ, ಸುಮಿತ್ರ ಮೋತಿಲಾಲ ಹಲವಾಯಿ ಅವರಿಗೆ ಸಲ್ಲಬೇಕು. ಅವರಿಗೆ ನಮ್ಮ ಮೊದಲ ಕೃತಜ್ಞತೆಗಳು. ಇನ್ನು ಈ ಬೃಹತ್ (ಸುಮಾರು ೬೦೦೦ ಪುಟಗಳು) ಹಾಗೂ ಮಹತ್ತಾದ ಕಾರ್ಯ ಒಬ್ಬಿಬ್ಬರಿಂದ ಸಾಧ್ಯವಿಲ್ಲವೆಂಬುದು ಸುವಿದಿತ. ಇದರ ಹಿಂದೆ ಹಲವು ಹಿರಿಯರ, ಸ್ನೇಹಿತರ, ಶ್ರೀಧರರ ಶಿಷ್ಯರ, ಕುಟುಂಬ ಬಂಧುಗಳ ಸಲಹೆ, ಸಹಕಾರ, ಹಾರೈಕೆಗಳಿವೆ. ಅವರೆಲ್ಲರಿಗೂ ಹೃತ್ಪೂರ್ವಕ ನಮನಗಳು.

ಸಂಪುಟಗಳ ಪ್ರಕಟಣೆಯ ಕಾರ್ಯಭಾರವನ್ನು ಪ್ರೀತಿಯಿಂದ ಮತ್ತು ನಿಜ–ಆಸಕ್ತಿಯಿಂದ (ಇದು ಔಪಚಾರಿಕ ಮಾತಲ್ಲ) ವಹಿಸಿಕೊಂಡು ಶುದ್ಧವಾಗಿ ಮತ್ತು

ಮನೋಹರವಾಗಿ ಪ್ರಕಟಿಸಿಕೊಟ್ಟ ತೇಜು ಪ್ರಕಾಶನ, ಬೆಂಗಳೂರು ಅವರಿಗೆ ತುಂಬುಹೃದಯದ ವಂದನೆಗಳು. ಅವರನ್ನು ಪರಿಚಯಿಸಿದ ಖ್ಯಾತ ಹಾಸ್ಯ ಲೇಖಕಿ, ಶ್ರೀಮತಿ ಭುವನೇಶ್ವರಿ ಹೆಗಡೆಯವರಿಗೆ ಹಾರ್ದಿಕ ನಮನಗಳು.

ಈ ಎಲ್ಲಾ ಸಂಪುಟಗಳನ್ನು ಶ್ರೀಧರರ 'ಜೀವಯಾನ'ದ ಜತೆಗಾತಿ, ಜೀವಸಖಿ ಶ್ರೀಮತಿ ರಮಾದೇವಿಯವರಿಗೆ ಅರ್ಪಿಸುತ್ತಿದ್ದೇವೆ. ೨೦೦೭, ಏಪ್ರಿಲ್ ೨೪ರಂದು ರಮಾದೇವಿಯವರ ಹಸ್ತದಿಂದಲೇ ಬಿ.ಎಚ್.ಶ್ರೀಧರ ಪ್ರಶಸ್ತಿಯನ್ನು ಖ್ಯಾತ ಕವಿ ಶ್ರೀ ಎಸ್. ಮಂಜುನಾಥರು ಸ್ವೀಕರಿಸಿದ್ದರು. ಮುಂದೆ ಮೂರೇ ತಿಂಗಳಲ್ಲಿ (ಜುಲೈ ೨೦, ೨೦೦೭) ರಮಾದೇವಿಯವರು ದೈವಾಧೀನರಾದಾಗ ಸುದ್ದಿ ತಿಳಿದು ನೊಂದ ಮಂಜುನಾಥರು ಬರೆದು ಕಳುಹಿಸಿದ್ದ ರಮಾದೇವಿಯವರ ಒಳ-ಹೊರಗನ್ನು ತದ್ವತ್ ಕಟ್ಟಿಕೊಟ್ಟ ಕವನವನ್ನೇ ಅರ್ಪಣೆಯಲ್ಲಿ ಬಳಸಿಕೊಂಡಿದ್ದೇವೆ. ಅವರಿಗೆ ನಮ್ಮ ವಿಶೇಷ ಪ್ರಣಾಮಗಳು. ಹಾಗೆಯೇ ಸಂಪುಟದ ಬೆನ್ನುಡಿಗೆ ಶ್ರೀ ಸತೀಶ್ ಎಲ್ಲಾಪುರ ಅವರ ಕಾರ್ಟೂನನ್ನು ಉಪಯೋಗಿಸಿಕೊಂಡಿದ್ದೇವೆ. ಕಲಾವಿದನಿಗೆ ಕೃತಜ್ಞತೆಗಳು.

ನಂಬಿದಂತೆ ನಡೆದ, ನುಡಿದ, ಬರೆದ ಬಿ.ಎಚ್. ಶ್ರೀಧರರ ಕೃತಿ ನಿಮ್ಮ ಮುಂದಿದೆ. ಇವುಗಳ ವಾಚನ, ಮನನ ಬುದ್ಧಿಯ ಔನ್ನತ್ಯಕ್ಕೂ, ಹೃದಯ ಸಂಸ್ಕಾರಕ್ಕೂ ಕಾರಣವಾಗಲೆಂಬುದೇ ಆಶಯ. ಶ್ರೀಧರರು ಕಾಯೇನ-ವಾಚಾ-ಮನಸಾ ನಂಬಿದ್ದ ಶ್ರೀರಮಣರ ಅನುಗ್ರಹವೇ ಎಲ್ಲ ಕಾರ್ಯಕ್ಕೂ ಕಾರಣವೆಂಬ ಸತ್ಯದ ಅರಿವು ನಮ್ಮೊಳಗೆ ಇದ್ದೇ ಇದೆ. ಅವರಲ್ಲಿ ತುಡಿಯುತ್ತಿದ್ದ ಸಮಷ್ಟಿಯ ಒಳಿತಿನ ಬಯಕೆ ಶ್ರೀಗುರುವಿಗೆ ತಲುಪಲೆಂಬುದೇ ಹರಕೆ.

**– ರಾಜಶೇಖರ ಹೆಬ್ಬಾರ**

# ಪ್ರವೇಶ

ಪ್ರೊ.ಬಿ.ಎಚ್.ಶ್ರೀಧರರು ನನ್ನ ತಂದೆ ವಿದ್ವಾನ್ ರಾ.ಭ. ಹಾಸಣಗಿಯವರ ಮಿತ್ರರು, ಆಪ್ತರು, ನನಗೆ ತಂದೆ ಸಮಾನರು. ಇಬ್ಬರೂ ಕವಿ ದ.ರಾ.ಬೇಂದ್ರೆಯವರೊಂದಿಗೆ ಒಡನಾಟ, ವಿಶ್ವಾಸ ಹೊಂದಿವರು. ಈ ತ್ರಿಮೂರ್ತಿಗಳು ನನ್ನ ಚಾರಿತ್ರ್ಯವನ್ನು ರೂಪಿಸಿದ ಶಿಲ್ಪಿಗಳು. ಇವರಲ್ಲಿ ಶ್ರೀಧರರದು ವಿಷ್ಣುಸ್ಥಾನ. ಮೂರ್ತಿಪೂಜೆಯೇ ಕಂದಾಚಾರವಾಗಿ, ರಾಜಕೀಯವಾಗಿ, ಮೂರ್ತಿಭಂಜನೆಯೇ ಮೌಲ್ಯವಾಗಿ ಕಂಡುಬರುವ ಕಾಲದಲ್ಲಿ ಬರೆಯುತ್ತಿದ್ದೇನೆ. ಈ ಮೂವರಲ್ಲಿ ನನ್ನ ತಂದೆಯವರಿಗೆ ಇಂಗ್ಲೀಷ್ ಬರುತ್ತಿರಲಿಲ್ಲ. ಮೂವರಿಗೂ ಸಂಸ್ಕೃತ–ಕನ್ನಡ, ಮಾರ್ಗ–ದೇಸಿಗಳ ಹಾಸುಹೊಕ್ಕಿನ ಸೂಕ್ಷ್ಮ ಜ್ಞಾನವಿತ್ತು. ನಾನು ಇವರಿಂದ ಕಲಿತದ್ದು ತರಗತಿಯಲ್ಲಿ ಅಲ್ಲ, ಅಂತೇವಾಸದ (one-to-one)ಸಂಬಂಧದಲ್ಲಿ. ಇಂದಿಗೂ ನಾನು ಅವರೊಂದಿಗೆ ಮನೋಸಂವಾದದಲ್ಲಿ ತೊಡಗಿರುತ್ತೇನೆ. ಅವರ ಗ್ರಂಥಗಳಲ್ಲಿ ಏನನ್ನೋ ಹುಡುಕುತ್ತಿರುತ್ತೇನೆ. ಅವರನ್ನೂ ನನ್ನನ್ನೂ ಅರ್ಥೈಸಿಕೊಳ್ಳಲು ಯತ್ನಿಸುತ್ತೇನೆ. ಅವರ ನಿರೀಕ್ಷೆಯಂತೆ ನಾನು ಬೆಳೆದಿದ್ದೇನೆಯೇ ಎಂಬುದು ನನಗೆ ಗೊತ್ತಿಲ್ಲ. ಆದರೂ ಶ್ರೀಧರರ ಮಕ್ಕಳ ಅಪೇಕ್ಷೆಯಂತೆ ಅವರ ಸಮಗ್ರ ಸಾಹಿತ್ಯ ಸಂಪುಟಕ್ಕೆ ಒಂದು ಪ್ರಸ್ತಾವನೆ ಬರೆಯಲು ಅಳುಕುತ್ತಲೇ ಒಪ್ಪಿಕೊಂಡಿದ್ದೇನೆ. ಅವರ ಸಾವಿರಾರು ಪುಟಗಳ, ಹಲವು ಜ್ಞಾನ ಕ್ಷೇತ್ರಗಳ ಶಾಸ್ತ್ರ ಸಾಹಿತ್ಯವನ್ನೂ, ಸೃಜನಶೀಲ ಸಾಹಿತ್ಯ–ವಿಮರ್ಶೆಗಳನ್ನೂ ಹಿಂಡಿ ಭಟ್ಟಿ ಇಳಿಸಿ ಐದಾರು ಪುಟಗಳಲ್ಲಿ ಸಾರಾಂಶ ಕೊಡುವ ಅಸಾಧ್ಯ ಪ್ರಯತ್ನಕ್ಕೆ ಕೈ ಹಾಕುವುದಿಲ್ಲ. ಅವರ ಬರಹಗಳನ್ನು ಗಮನಿಸಬೇಕಾದ, ಅವು ನಮಗೆ ಪ್ರಸ್ತುತವಾಗುವ ಒಂದು ದಿಕ್ಸೂಚಿಯನ್ನು ಮಾತ್ರ ನೀಡಬಯಸುತ್ತೇನೆ.

ಶ್ರೀಧರರ ಬರಹಗಳಲ್ಲಿ ಎದ್ದು ಕಾಣುವ ಒಂದು ಮುಖ್ಯ ಅಂಶವೆಂದರೆ ಭಾರತೀಯತೆಯಲ್ಲಿ ಅಚಲ ವಿಶ್ವಾಸ ಮತ್ತು ಅದರ ಅಧಿಕಾರಯುತ ಪ್ರತಿಪಾದನೆ. ಮೂಲಭೂತವಾದ ಮತ್ತು ಪಾಶ್ಚಾತ್ಯೀಕರಣದ ಅತಿರೇಕಗಳ ನಡುವೆ ಅವರು ಒಂದು ಮಧ್ಯಮ ಮಾರ್ಗ ಕಂಡುಕೊಂಡಿದ್ದರು. ಭಾರತವೆಂಬುದು ಅವರಿಗೆ ಕೇವಲ ಭೌಗೋಳಿಕ/ರಾಜಕೀಯ ನಕಾಶೆ ಆಗಿರಲಿಲ್ಲ, ಒಂದು ಜೀವನ ದರ್ಶನವಾಗಿತ್ತು. ಅವರ ಸೂತ್ರತ್ರಯಗಳಲ್ಲಿ (ಜ್ಞಾನಸೂತ್ರ, ಕಾವ್ಯಸೂತ್ರ, ರಾಷ್ಟ್ರಸೂತ್ರ) ಇದು ಮಂಡಿಸಲ್ಪಟ್ಟಿದೆ. ಇದರ ಹಿನ್ನೆಲೆಯಲ್ಲಿ ಪ್ರಾಚೀನ ಭಾರತದ ಮೂವರು ಸೂತ್ರಕಾರರಿದ್ದಾರೆ– ಪಾಣಿನಿ,

ಭರತ ಮತ್ತು ವ್ಯಾಸ. ಇವರ ಸಾರ್ವಕಾಲಿಕ ಶ್ರೇಷ್ಠತೆ, ಪ್ರಸ್ತುತತೆಗಳ ಬಗ್ಗೆ ಅವರಿಗೆ ಯಾವುದೇ ಅನುಮಾನವಿರಲಿಲ್ಲ. ಪಾಣಿನಿಯನ್ನು ಸ್ಮರಿಸದ ಧ್ವನಿಶಾಸ್ತ್ರ, ಭಾಷಾಶಾಸ್ತ್ರ; ಭರತನನ್ನು ಮೆಚ್ಚದ ಸಾಹಿತ್ಯ ಸಿದ್ಧಾಂತ, ವಿಮರ್ಶೆ; ವ್ಯಾಸರ ಶಾಂತಿಪರ್ವಕ್ಕೆ ಮನ್ನಣೆ ನೀಡದ ರಾಜ್ಯಶಾಸ್ತ್ರ – ಇವು ಅವರಿಗೆ ದ್ರೋಹವಾಗಿ, ವಿದ್ರೋಹವಾಗಿ ಕಾಣುತ್ತಿದ್ದವು. ವ್ಯಾಸರ ಬ್ರಹ್ಮಸೂತ್ರಕ್ಕೆ ಶಾಂಕರ ಭಾಷ್ಯದ ಬಗ್ಗೆ ಅವರಿಗೆ ವಿಶೇಷ ಒಲವಿದ್ದಿತಾದರೂ ಅದ್ವೈತ–ದ್ವೈತ–ವಿಶಿಷ್ಟಾದ್ವೈತಗಳ ಅಂತಃಕಲಹದಲ್ಲಿ ಅವರು ಪಾಲ್ಗೊಂಡಿದ್ದು ನನಗಂತೂ ಕಂಡುಬಂದಿಲ್ಲ. ಭರತನ ನಾಟ್ಯಶಾಸ್ತ್ರ, ರಸಸಿದ್ಧಾಂತಗಳಲ್ಲಿ ನಾಟಕ–ಕಾವ್ಯ–ಸಾಹಿತ್ಯ–ಕಲಾ ಸಾಧಕರು ಮಾತ್ರವಲ್ಲ, ಮನೋವಿಜ್ಞಾನಿಗಳೂ ಆಸಕ್ತರಾಗಬೇಕು ಎಂಬುದು ಅವರ ಅಪೇಕ್ಷೆಯಾಗಿತ್ತು. ಅವರು ಮೆಚ್ಚಿದ ಚಾಣಕ್ಯ ಗದ್ದುಗೆಯ ಗುರಿಯಾಗಿ ಏನನ್ನೂ ಮಾಡುವ ದಾರಿ ಸರಿ ಎನ್ನುವ ಮೆಕೆವಿಲಿ ಆಗಿರಲಿಲ್ಲ; ಚಂದ್ರಗುಪ್ತನ ಸತ್ವವನ್ನು ಬೀಜರೂಪದಲ್ಲಿ ಗುರುತಿಸುವ, ಅಮಾತ್ಯ ರಾಕ್ಷಸನನ್ನು ಆಳದಲ್ಲಿ ಗೌರವಿಸುವ, ಅಂತರಂಗದಲ್ಲಿ ಸನ್ಯಾಸಿಯಾಗಿರುವ ಚಾಣಕ್ಯನ ನೀತಿ ಬೇಕೆನ್ನುತ್ತಿದ್ದರು. ನೀತಿಪ್ರಧಾನ ಸಮಾಜ, ಸರ್ವಧರ್ಮ ಸಾಮರಸ್ಯ, ಭ್ರಷ್ಟಾಚಾರರಹಿತ ಆಡಳಿತ ವ್ಯವಸ್ಥೆ ಅವರ ಕಾಳಜಿಯ ವಿಷಯಗಳಾಗಿದ್ದವು. ಆತ್ಮಪೌರುಷವಿಲ್ಲದ ನಾಡು ಪರಕೀಯರ ಪಾಲಾಗುವುದು  ಎಲ್ಲ ರಾಷ್ಟ್ರಗಳ ಹಣೆಬರಹವೆಂದು ಇತಿಹಾಸ ಸಾರಿಸಾರಿ ಹೇಳುತ್ತದೆ. ಮನೆಮುರುಕರನ್ನು ಹೊರ ಹಾಕಬೇಕಾಗುತ್ತದೆ, ಸಮಯಸಾಧಕರ ಬಗ್ಗೆ ಎಚ್ಚರಿಕೆ ವಹಿಸಬೇಕಾಗುತ್ತದೆ. ನಮ್ಮೊಳಗೆ ಜಗಳವಾದರೆ ನಾವು (ಪಾಂಡವರು) ಐದು ಜನ, ಅವರು (ಕೌರವರು) ನೂರು ಜನ; ಹೊರಗಿನವರೊಂದಿಗೆ ಜಗಳ ಬಂದರೆ ನಾವು ನೂರೈದು ಜನ ಎಂಬ ಧರ್ಮರಾಯನ ಭ್ರಾತೃತ್ವದ ರಾಜನೀತಿ ಶ್ರೀಧರರಿಗೆ ಮಾನ್ಯವಿತ್ತು.

ಇಪ್ಪತ್ತನೆಯ ಶತಮಾನದ ಪಾಶ್ಚಾತ್ಯ ಚಿಂತಕರಲ್ಲಿ ಶ್ರೀಧರರ ಹೃದಯ ಗೆದ್ದವರು ಇಬ್ಬರು: ವಿಜ್ಞಾನಿಗಳಲ್ಲಿ ಐನ್‌ಸ್ಟೀನ್ ಮತ್ತು ಸಾಹಿತಿಗಳಲ್ಲಿ ಟಿ.ಎಸ್.ಎಲಿಯಟ್. ಅವರ ವಿಶೇಷ ಆಗ್ರಹವಿರುವುದು ಮಾರ್ಕ್ಸ್ ಮತ್ತು ಫ್ರಾಯ್ಡ್ ಕುರಿತು. ಮಾರ್ಕ್ಸ್‌ನದು ಅರ್ಥಮೂಲದ ದೃಷ್ಟಿ, ಫ್ರಾಯ್ಡನದು ಕಾಮಮೂಲದ ದೃಷ್ಟಿ. ಇವೆರಡೂ ವ್ಯಕ್ತಿಯ ಮತ್ತು ಸಮಾಜದ ಸ್ವಾಸ್ಥ್ಯಕ್ಕೆ ಪೂರಕವಲ್ಲ ಎಂಬುದು ಶ್ರೀಧರರ ಖಚಿತ ನಿಲುವು. ಪಂಪನ ಆದಿಪುರಾಣದಲ್ಲಿ ಭರತನ ಸ್ವಗತವಾಗಿ ಬರುವ ಒಂದು ಪದ್ಯದೆಡೆ ಓದುಗರ ಗಮನ  ಸೆಳೆಯಬಯಸುತ್ತೇನೆ.

**ಧರ್ಮಂ ಪ್ರಧಾನಂ, ಅರ್ಥಂ**
**ಧರ್ಮಾಂಘ್ರಿಪ ಫಲಂ, ಅದರ್ಕೆ ರಸಮದು ಕಾಮಂ. (೧೦–೫೦)**

ಧರ್ಮವು ಮೂಲ, ಅರ್ಥವು ಧರ್ಮವೃಕ್ಷದ ಹಣ್ಣು, ಅದರ ರಸವೇ ಕಾಮ. ಇದು ಜೀವನ ಮೌಲ್ಯಗಳ ಆದ್ಯತಾ ಮಾರ್ಗಸೂಚಿ. ಈ ಬಗ್ಗೆ ಯಾವುದೇ ಭರತರ ಅಥವಾ ಬಾಹುಬಲಿಗಳ ಆಕ್ಷೇಪವಿರಲಾರದು ಎಂದು ಭಾವಿಸುತ್ತೇನೆ.

ಶ್ರೀಧರರು ಬರೆಯಲಾರಂಭಿಸಿದಾಗ ನವ್ಯಪಂಥ ಚಿಗುರೊಡೆಯುತ್ತಿತ್ತು. ಅಡಿಗರು ಶ್ರೀಧರರ ಸಮವಯಸ್ಕರು, ಸಂಬಂಧಿಗಳೂ ಕೂಡ. ಶ್ರೀಧರರು ನವ್ಯ ಪಂಥದೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲಿಲ್ಲ. ಅವರು ಸಂಸ್ಕೃತ ಪ್ರಾಧ್ಯಾಪಕರಾಗಿದ್ದು, ಹೆಚ್ಚಿನ ನವ್ಯರು ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದುದು ಗಮನಾರ್ಹ ಸಂಗತಿ. (ಯುಗಧರ್ಮ, ವಯೋಧರ್ಮ, ಮನೋಧರ್ಮ ಮತ್ತು ವೃತ್ತಿಧರ್ಮಗಳ ಸಂಬಂಧವನ್ನು ಬಿಡಿಸಿ ವಿವರಿಸಿ ಹೇಳುವುದು ನನಗೆ ಸದ್ಯಕ್ಕಂತೂ ಸಾಧ್ಯವಿಲ್ಲ.) ವಿ.ಕೃ.ಗೋಕಾಕರ ನವ್ಯಕ್ಕೆ ಶ್ರೀಧರರ ಆಕ್ಷೇಪವಿರಲಿಲ್ಲ. ಉಳಿದವರ ಸಾಹಿತ್ಯ ಕೇವಲ 'ಸಂಕರ', 'ಸಂಸೃಷ್ಟಿ' ಅಲಂಕಾರಗಳ ಉದಾಹರಣೆ ಎಂದು ಒಂದೇ ವಾಕ್ಯದಲ್ಲಿ ನಿರ್ಣಯ ಹೇಳುತ್ತಿದ್ದರು. ದೇವರನ್ನು ತಲೆಹಿಡುಕನನ್ನಾಗಿ ಗ್ರಹಿಸಿ ಇಂತಿಂಥ ಹೆಣ್ಣುಗಳ ತನ್ನ ಬಳಿ ಕಳಿಸು ಎಂದು ಬೇಡುವ ಅಡಿಗರ 'ಪ್ರಾರ್ಥನೆ'ಯಂತೂ ವಿಕೃತಿಯ ಪರಮಾವಧಿ ಎನ್ನುತ್ತಿದ್ದರು. ಶಿಲ್ಪಶಾಸ್ತ್ರದಿಂದ ಹಿಡಿದು ಮಕ್ಕಳ ಸಾಹಿತ್ಯದವರೆಗಿನ ಅವರ ಆಸಕ್ತಿ ಮತ್ತು ಕೃಷಿ ನವ್ಯ ಪಾಳೆಯದಲ್ಲಿ ಕಂಡುಬರುವುದಿಲ್ಲ. ನವ್ಯರದೇನಿದ್ದರೂ ಬರಿ ಕಾವ್ಯಶಿಲ್ಪದ ಕಾಳಜಿ. ನವ್ಯರಲ್ಲಿ ಕಾಣದ ವಾತ್ಸಲ್ಯ ಭಾವ ಮತ್ತು ಹಾಸ್ಯ ಪ್ರಜ್ಞೆ ಶ್ರೀಧರರ ಕಾವ್ಯದಲ್ಲಿವೆ. ಹಲವು ಬಗೆಯ ಛಂದಸ್ಸುಗಳಲ್ಲಿ ಅವರ ಪ್ರಭುತ್ವ ಯಕ್ಷಗಾನ ಪ್ರಸಂಗಗಳ ದೇಸಿ ಮತ್ತು ಪಂಪಾದಿ ಮಾರ್ಗಕಾವ್ಯಗಳಿಂದ ಹೀರಿಕೊಂಡದ್ದಾಗಿದೆ. ಯಕ್ಷಗಾನದ ವೇಷ ಕಟ್ಟಿ ನಿಲ್ಲಿಸಿದರೆ ತಾನು ಕುಣಿಯಲಾರೆನಾದರೂ ಅರ್ಥ ಹೇಳಬಲ್ಲೆ ಎಂದು ಅವರು ಹೇಳಿದ್ದು ನನಗೆ ನೆನಪಿದೆ.

ಕನ್ನಡವು ನನ್ನ ತಾಯಿನುಡಿ, ಸಂಸ್ಕೃತವು ತಂದೆನುಡಿ ಎಂದು ಘೋಷಿಸಿದ ಶ್ರೀಧರರು ಕನ್ನಡ-ಸಂಸ್ಕೃತಗಳಿಗೆ ಬಾಂಧವ್ಯವಿದೆ, ದಾಯಾದಿತನವಿಲ್ಲ ಎಂದು ಸಾಧಿಸಿದ್ದಾರೆ. ತಾಯಿ-ತಂದೆಯರ ನಡುವೆ ವಿರಸವಾದಾಗ ಮಕ್ಕಳೇನು ಮಾಡಬೇಕೆಂಬುದು ಯಕ್ಷಪ್ರಶ್ನೆ. ವಾಗರ್ಥ ದಾಂಪತ್ಯದ ತಾಯಿತಂದೆ ಎಲ್ಲರಿಗೂ ಸಿಗುವುದಿಲ್ಲ. ತಾಯಿತಂದೆಯರನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ಯಾವ ಮಕ್ಕಳಿಗೂ ಇರುವುದಿಲ್ಲ. ಹೆಚ್ಚೆಂದರೆ ರಾಮ-ಸೀತೆಯರ ಬಿಂಬವನ್ನು ಹೃದಯದಲ್ಲಿರಿಸಿಕೊಂಡು ಅವರು ಒಂದಾಗಲು ಶ್ರಮಿಸುವ ಹನುಮರಾಗಬಹುದು. ಸಂಸ್ಕೃತ=ಬ್ರಾಹ್ಮಣಿಕೆ=ಪುರೋಹಿತಶಾಹಿ=ಶೋಷಣೆ ಎಂಬ ಅತಾರ್ಕಿಕ ಸಮೀಕರಣವನ್ನಿಟ್ಟುಕೊಂಡು ಇಂಗ್ಲೀಷ್=ಉದ್ಧಾರ ಎಂಬ ನಿರ್ಣಯಕ್ಕೆ ಜಿಗಿಯುವವರ ಬಗ್ಗೆ ಶ್ರೀಧರರಿಗೆ ಯಾವ ಗೌರವವೂ ಇರಲಿಲ್ಲ. ಆಯಾ ಪ್ರಾಧ್ಯಾಪಕರು ತಮ್ಮದು ಅಂತರರಾಷ್ಟ್ರೀಯ ಮಟ್ಟ, ರಾಷ್ಟ್ರಮಟ್ಟ, ಪ್ರಾದೇಶಿಕ ಮಟ್ಟ ಎಂದು ಮೇಲರಿಮೆಯನ್ನೋ, ಕೀಳರಿಮೆಯನ್ನೋ ಬೆಳೆಸಿಕೊಳ್ಳುವುದು ಆರೋಗ್ಯದ ಲಕ್ಷಣವಲ್ಲ. ಎಂಥ ವಿಶ್ವಮಾನವನಾದರೂ ನಿಂತಷ್ಟು ನೆಲ ಪ್ರಾದೇಶಿಕವಾಗಿರುತ್ತದೆ ಎಂಬ ಅರಿವು ಕುವೆಂಪು ಅವರಿಗೂ ಇತ್ತು. "ಕನ್ನಡದ ಮನೆಯಲ್ಲಿ ಕನ್ನಡಿತಿ ಯಜಮಾನಿತಿ/ಮಿಕ್ಕ ಹೆಂಗಸರೆಲ್ಲ ಒಕ್ಕಲಷ್ಟೇ" ಎಂಬುದು ಶ್ರೀಧರರ ಒಂದು ಕವಿತೆಯ ಸಾಲು.

ಅವರ ಕನ್ನಡ ಪ್ರೀತಿ ಉಕ್ಕಿ ಹರಿಯುವುದು ಕದಂಬರ, ಅದರಲ್ಲೂ ಮಯೂರಶರ್ಮನ ಬಗ್ಗೆ ಬರೆಯುವಾಗ. ಬನವಾಸಿಯ ಕದಂಬರು (ಇತಿಹಾಸ ಸಂಶೋಧನೆ), ನೌಕಾಗೀತ (ಖಂಡಕಾವ್ಯ), ಕದಂಬ ವೈಭವ ('ರಘುವಂಶ' ಮಾದರಿಯ ಕಥನಕಾವ್ಯ), ಮಯೂರಶರ್ಮ (ಚಾರಿತ್ರಿಕ ನಾಟಕ)– ಎಲ್ಲದರ ಆಶಯ ಒಂದೇ: ರಾಷ್ಟ್ರ ಕಟ್ಟುವ ಕನಸು. ಸಮೃದ್ಧ, ಸ್ಥಿರ, ಸಮರ್ಥ ರಾಜ್ಯ ವ್ಯವಸ್ಥೆಯಲ್ಲಿ ವೇದಮಂತ್ರಗಳಿಂದ ಸ್ಫೂರ್ತಿ ಪಡೆದು ಬೇಡರು, ಬೆಸ್ತರವರೆಗೆ ಎಲ್ಲರ ಸಹಕಾರದೊಂದಿಗೆ ನಿರ್ಮಿಸಿದ ಸಕಾರಾತ್ಮಕ ಮಾದರಿಯ ಚಿತ್ರಣವಿದೆ. ಮಯೂರಶರ್ಮನ ವ್ಯಕ್ತಿತ್ವಕ್ಕೆ ಪರಶುರಾಮನ ಪುರಾಣಕಥೆಯ ಪ್ರೇರಣೆ ಇದೆಯಾದರೂ ಶ್ರೀಧರರಿಗೆ ಪುರಾಣ–ಇತಿಹಾಸಗಳ ವ್ಯತ್ಯಾಸದ ಸ್ಪಷ್ಟತೆ ಇದೆ. ಧರ್ಮ, ವಾಣಿಜ್ಯ, ವಿಜ್ಞಾನಗಳ ಸ್ಥಾನದ ಬಗ್ಗೆಯೂ ಕಾಳಜಿಯದೆ.

ಪರಶುರಾಮನ ಬಗ್ಗೆ ಸ್ವಲ್ಪ ಹೆಚ್ಚು ಬರೆಯಬೇಕೆನಿಸುತ್ತದೆ. ಸಂಪ್ರದಾಯ ಇವನನ್ನು ಚಿರಂಜೀವಿ ಎಂದೂ, ವಿಷ್ಣುವಿನ ಅವತಾರವೆಂದೂ ಪರಿಗಣಿಸುತ್ತದೆ. ಇವನ ತಂದೆ ಜಮದಗ್ನಿಯನ್ನು ಒಬ್ಬ ಗೋತ್ರ ಪ್ರವರ್ತಕನೆಂದು ವೈದಿಕ ಸಂಸ್ಕೃತಿ ಒಪ್ಪಿಕೊಳ್ಳುತ್ತದೆ. ಇವನ ತಾಯಿ ರೇಣುಕೆ=ಎಲ್ಲಮ್ಮ ಎಂಬ ನಂಬಿಕೆ ಕೆಲವು ತಳಸಮುದಾಯಗಳ ಜಾನಪದ ಆಚರಣೆಗಳಲ್ಲಿ ಕಂಡುಬರುತ್ತದೆ. (ಇದು ಬೆತ್ತಲೆ ಸೇವೆಯ ಸಮರ್ಥನೆಯಲ್ಲ). 'ರೇಣುಕಾ ಮಹಾತ್ಮೆ' ಜನಪ್ರಿಯ ಯಕ್ಷಗಾನ ಪ್ರಸಂಗವೂ ಹೌದು. ಶ್ರೀಧರರ ಕದಂಬ ವೈಭವದ ಮೊದಲ ಸಾಲಿನಲ್ಲೇ ಭಾರ್ಗವರಾಮ ಕಾಣಿಸಿಕೊಳ್ಳುತ್ತಾನೆ. ಮಯೂರಶರ್ಮ ನಾಟಕದಲ್ಲಿ ಬ್ರಾಹ್ಮಣ ವಟು ಮಯೂರಶರ್ಮ ಪಲ್ಲವ ದೊರೆ ಶಿವಸ್ಕಂದನಿಂದ ಅವಮಾನಿತನಾದಾಗ "ಬ್ರಾಹ್ಮಣನಾದ ಪರಶುರಾಮ ಇಪ್ಪತ್ತೊಂದು ಸಲ ಭೂಪ್ರದಕ್ಷಿಣೆ ಮಾಡಿ ಕ್ಷತ್ರಿಯರನ್ನೆಲ್ಲ ಸಮೂಲನಾಶ ಮಾಡಿದಂತೆ ನಿನ್ನ ಗರ್ವವನ್ನು ಹಿಂಡದಿದ್ದಲ್ಲಿ ನಾನು ಮಯೂರಶರ್ಮನಲ್ಲ" ಎಂದು ಪ್ರತಿಜ್ಞೆ ಮಾಡುತ್ತಾನೆ. ಇತರ ಕೃತಿಗಳಲ್ಲೂ 'ಇದಂ ಬ್ರಾಹ್ಮಂ ಇದಂ ಕ್ಷಾತ್ರಂ ಶಾಪಾದಪಿ ಶರಾದಪಿ" (ಪರಶುರಾಮ) ಮತ್ತು 'ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋ ಬಲಂ ಬಲಂ' (ವಿಶ್ವಾಮಿತ್ರ) ಎಂಬ ಮಾತುಗಳು ಕಾಣಿಸಿಕೊಂಡಿವೆ. ಕಾವ್ಯಸೂತ್ರದಲ್ಲಿ "ಧರ್ಮಕ್ಷೇತ್ರಕ್ಕೆ ಕುರುಕ್ಷೇತ್ರದ ಕಳೆ ಬಂದಿದೆ" ಎಂದಿದ್ದಾರೆ ಬೇಂದ್ರೆ. ಶ್ರೀಧರರ ಗದ್ಯ ಶೈಲಿಯಲ್ಲಿ ಕ್ಷಾತ್ರ ತೇಜಸ್ಸಿದೆ (ಆ ಪದ ಬಳಸಬಹುದಾದರೆ).

ಇಂದಿನ ಸಾಹಿತ್ಯಿಕ ಪರಿಸರದಲ್ಲಿ ಪರಶುರಾಮನ ಬಗ್ಗೆ ಎರಡು ಆಕ್ಷೇಪಗಳಿವೆ: ಒಂದು ಮಾತೃಹಂತಕ ಎಂದು, ಇನ್ನೊಂದು ಜನಾಂಗದ್ವೇಷಿ ಎಂದು. ಮಾತೃಹಂತಕ ಎನ್ನುವವರು ತಾಯಿಗೆ ಮತ್ತೆ ಜೀವ ತಂದುದನ್ನು ಒಪ್ಪಿಕೊಳ್ಳುವುದಿಲ್ಲ. ಅದು ಹೇಗೆ ಸಾಧ್ಯ ಎಂದು ಭೌತವಾದಿ, ವಿಚಾರವಾದಿ ನೆಲೆಯಿಂದ ಪ್ರಶ್ನಿಸುತ್ತಾರೆ. ಪುರಾಣ ಕಥೆಗಳಲ್ಲಿ ಎಲ್ಲವೂ ಸಾಧ್ಯ, ಸಮಗ್ರವಾಗಿ ಓದಿ ಎನ್ನಬೇಕಾಗುತ್ತದೆ. ಪುರಾಣದ ಪಠ್ಯ

ಸಾಹಿತ್ಯಿಕ ಪಠ್ಯದಂತಲ್ಲ; ಹಲವು ಆವೃತ್ತಿಗಳಿರುವುದು ಸಹಜ. "ತಾಯೀ ತಲೀ ಕಡದಾ/ಮತ್ತ ಮಾತೃಭಕ್ತನಾಗಿ ಉಳದಾ" ಎಂದಿದ್ದಾರೆ ಬೇಂದ್ರೆ. (ತಾ ಲೆಕ್ಕಣಿಕಿ ತಾ ದೌತಿ, ಪುಟ ೫೮). ಇನ್ನು ಜನಾಂಗ ದ್ವೇಷದ ಬಗ್ಗೆ. ವಶಿಷ್ಠ–ವಿಶ್ವಾಮಿತ್ರರ ಸಂಘರ್ಷ ವೈಯಕ್ತಿಕವೆಂದೂ, ಭಾರ್ಗವ ಬ್ರಾಹ್ಮಣರು ಮತ್ತು ಹೈಹೆಯ ಕ್ಷತ್ರಿಯರದು ಜನಾಂಗ/ವರ್ಗ/ಸಮುದಾಯಗಳ ಸಂಘರ್ಷವೆಂದೂ ವಿಶ್ಲೇಷಿಸಿದವರಿದ್ದಾರೆ. 'ಸಂಘರ್ಷ' ಪದ ಸ್ವಲ್ಪ ವಸ್ತುನಿಷ್ಠವೆನಿಸಿದರೆ 'ದ್ವೇಷ'ವು ಮನಃಕಷಾಯವನ್ನು ಸೂಚಿಸುತ್ತದೆ. ಹುಯಿಲಗೋಳ ನಾರಾಯಣರಾಯರ 'ಉದಯವಾಗಲಿ ನಮ್ಮ ಚಲುವ ಕನ್ನಡನಾಡು' ಹಾಡಿನಲ್ಲಿ 'ರಾಜನ್ಯರಿಪು ಪರಶುರಾಮನಮ್ಮನ ನಾಡು' ಎಂಬ ಸಾಲಿನ ಬಗ್ಗೆ ಎದ್ದ ವಿವಾದವೂ ಇದೇ ನೆಲೆಯದು. ವಿನಾಯಕರ ಭಾರತ ಸಿಂಧುರಶ್ಮಿಯಲ್ಲಿ ವಿಶ್ವಾಮಿತ್ರರೆದುರು ಪರಶುರಾಮ ತನ್ನ ಸ್ವಭಾವದೋಷ ಒಪ್ಪಿಕೊಳ್ಳುತ್ತಾನೆ – "ಅಂಕಿತದೊಳಿಲ್ಲ ಹಲವಾರು ಮರ್ತ್ಯಾಂಶಗಳು:/ ಪ್ರಶಂಸೆಯ ಪ್ರೀತಿ, ಮುಂಗೋಪ, ಹಿತ್ತಾಳೆ ಕಿವಿ" (ಸಂಪುಟ ೨, ಪುಟ ೭೧೩). ಈ ಲೇಖನದ ಚಿಂತನೆ ಮಾಡುತ್ತಿರುವಾಗ ನಾನೊಂದು ಚುಟುಕ ಬರೆದೆ.

**ಪರಶುರಾಮನ ಶಪಥ ಕ್ಷತ್ರಿಯರ ಕುಲನಾಶ**
**ಜನಕ ದಶರಥರೆಂತೊ ಉಳಿದರಲ್ಲ ।**
**ಇನ್ನೊಂದು ಶಪಥ ಕ್ಷತ್ರಿಯಗೆ ಕಲಿಸುವುದಿಲ್ಲ**
**ಭೀಷ್ಮನಿವನಿಂದಲೇ ಕಲಿತನಲ್ಲ ॥**

ಈ ಚುಟುಕ ಮೂಡಿದ್ದು ನನ್ನ ಸ್ಪಷ್ಟತೆಗೇ ಹೊರತು ಯಾರದೋ ಕಾಮಾಲೆ ರೋಗಕ್ಕೆ ಔಷಧಿಯಾಗಿ ಅಲ್ಲ.

ಆಫ್ರಿಕಾ ಬಗ್ಗೆ ಜೊಸೆಫ್ ಕಾನ್ರಾಡನ ಕತ್ತಲೆಯ ಹೃದಯ (Heart of Darkness, 1899) ಕಾದಂಬರಿ ಯುರೋಪಿಯನ್ನರ 'ಹೃದಯದ ಕತ್ತಲೆ' ಎಂದು ವಾದಿಸುವ ಆಫ್ರಿಕಾದ ಲೇಖಕ ಚಿನುವಾ ಅಛಬೆ ಆ ಕಾದಂಬರಿಯಲ್ಲಿ ಜನಾಂಗವಾದದ ಕುರುಹುಗಳನ್ನು ಎಳೆ ಎಳೆಯಾಗಿ ಬಿಡಿಸುತ್ತಾನೆ. ಅವನ ಲೇಖನದ (೧೯೭೭) ಕೊನೆಯಲ್ಲಿ ಒಂದು ವಾಕ್ಯ ಬರುತ್ತದೆ: "ಕಾನ್ರಾಡ್ ಸಾಮ್ರಾಜ್ಯವಾದೀ ಶೋಷಣೆಯ ಕೇಡನ್ನು ಕಂಡನು, ಖಂಡಿಸಿದನು, ಆದರೆ ಅದು ತನ್ನ ಕಬ್ಬಿಣದ ಹಲ್ಲುಗಳನ್ನು ಮಸೆದುಕೊಂಡ ಜನಾಂಗವಾದದ ಬಗ್ಗೆ ಅವನಿಗೆ ಗೊತ್ತಿಲ್ಲದಿರುವುದು ವಿಚಿತ್ರವಾಗಿದೆ." ಅರ್ಧವಾಕ್ಯದಲ್ಲಿ ಸಾಧನೆ ಗುರುತಿಸಿ, ಇನ್ನರ್ಧದಲ್ಲಿ ಇತಿಮಿತಿ ತೋರಿದ ಅಛಬೆ ನನಗೆ ಒಪ್ಪಿಗೆ. ತ್ರಿಮೂರ್ತಿಗಳನ್ನಾಗಲೀ, ಅವತಾರಗಳನ್ನಾಗಲೀ ಒಪ್ಪದ ಬುದ್ಧನ ಹೃದಯ ಅಮಾಯಕರಿಗೆ ಕರುಣೆ ಹರಿಸುವಾಗ ಬ್ರಾಹ್ಮಣ ಅಬ್ರಾಹ್ಮಣ ಭೇದ ನೋಡುವುದಿಲ್ಲ ಎಂಬ ನಂಬಿಕೆ ನನಗಿದೆ. ಹೃದಯಕ್ಕೆ ಹೃದಯವೇ ಸಾಕ್ಷಿ, ಬೇರೆ ಇಲ್ಲ ಪ್ರಾಕ್ಸಿ (proxy). ವಾರಾನ್ನದ ವಿದ್ಯಾರ್ಥಿಯಾಗಿ, ಗುಮಾಸ್ತರಾಗಿ, ಚಾಕರಿ –

ನೌಕರಿಗಳಲ್ಲಿ, ಸಂಸಾರಿಕೆಯ ತಪಸ್ಸಿನಲ್ಲಿ ಶ್ರೀಧರರು ಎಲ್ಲೋ ಅನುಭವಿಸಿದ ಅವಮಾನ, ನಂಬಿಕೆ ದ್ರೋಹಗಳು ಛಲ, ನಿಷ್ಠುರತೆಯಾಗಿ ರೂಪುಗೊಂಡಿವೆ ಎಂದು ನನ್ನ ಅನಿಸಿಕೆ.

ಶ್ರೀಧರರ ಸ್ವಭಾವ, ಸಂಬಂಧಗಳನ್ನು ಎತ್ತಿ ತೋರುವ ಒಂದೆರಡು ನಿದರ್ಶನಗಳನ್ನು ನೀಡಬಹುದು. ಬೇಂದ್ರೆಯವರ ಕನ್ನಡ ಮೇಘದೂತದ ಮೊದಲನೇ ಪದ್ಯದಲ್ಲಿ 'ಶಪಿತ ವರುಷವನು' ಎಂಬ ಪದಪ್ರಯೋಗವಿದ್ದು 'ಶಪಿತ' ಎಂಬುದು ಅಪಾಣಿನೀಯ, 'ಶಪ್ತ' ಎಂದಾಗಬೇಕು ಎಂದು ಹೇಳಿದರಂತೆ. ಶಿವರಾಮ ಕಾರಂತರ ಕಾದಂಬರಿಯೊಂದರಲ್ಲಿ 'ಏನಕೇನ ಪ್ರಕಾರೇಣ' ಎಂಬ ಪದವಿದ್ದು 'ಏನಕೇನ' ತಪ್ಪು, 'ಯೇನ ಕೇನ' ಎಂದಾಗಬೇಕು ಎಂದರಂತೆ. ಆ ಹಿರಿಯರಿಬ್ಬರೂ 'ಬಾಲಾದಪಿ ಸುಭಾಷಿತಂ' ಎಂದು ಶ್ರೀಧರರನ್ನು ಒಪ್ಪಿಕೊಂಡರಂತೆ. ಇವರ ಧೈರ್ಯ, ಅವರ ಔದಾರ್ಯ ಎರಡೂ ಮೆಚ್ಚಬೇಕಾದ್ದೇ. ಈ ಘಟನೆಗಳಿಂದ ಅವರ ಸಂಬಂಧಗಳು ಹಾಳಾಗಲಿಲ್ಲ ಎಂಬುದು ಮುಖ್ಯ. ಲಿಪಿದೋಷ, ವ್ಯಾಕರಣ ದೋಷಗಳೇನೂ ನೈತಿಕ ಪತನವಲ್ಲ.

ಜೀವನದ ನಾಟ್ಯಶಾಲೆಯಲ್ಲಿ ಶ್ರೀಧರರು ಪಾಲ್ಗೊಂಡ ವಾರಾನ್ನದೂಟ, ಗುಮಾಸ್ತಗಿರಿ, ಪತ್ರಿಕಾವೃತ್ತಿ, ಆಡಳಿತ ನಿರ್ವಹಣೆ, ಶಾಸ್ತ್ರ ಸಾಹಿತ್ಯ ರಚನೆ, ಇತಿಹಾಸ ಸಂಶೋಧನೆ–ಈ ಯಾವುದರ ನೇರ ಕ್ಷೇತ್ರಾನುಭವವೂ ನನಗಿಲ್ಲ. ಅವರನ್ನು ಆತ್ಮೀಕವಾಗಿ ಹಚ್ಚಿಕೊಂಡವನೆಂಬ ಕಾರಣಕ್ಕಾಗಿ ನನ್ನಿಂದ ಈ ಲೇಖನ ಬರೆಸಿದ್ದಾರೆ. ಇದು ಪಾಮರರಿಗೆ ಅಜೀರ್ಣವೂ, ಪಂಡಿತರಿಗೆ ಅಪಥ್ಯವೂ ಆಗದೇ ಶ್ರೀಧರ ಸಾಹಿತ್ಯದ ಅನುಸಂಧಾನಕ್ಕೆ ಪೀಠಿಕೆಯಾಗಲಿ ಎಂದು ಆಶಿಸುತ್ತೇನೆ. ಒಳಗೆ ಬನ್ನಿ.

**ಎಚ್.ಆರ್. ಅಮರನಾಥ**
ಇಂಗ್ಲೀಷ್ ಸಹ ಪ್ರಾಧ್ಯಾಪಕ
ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು
ಸಾಗರ (ಶಿವಮೊಗ್ಗ ಜಿಲ್ಲೆ) ೫೭೭೪೦೧

# ಹರಕೆ

**ಡಿ.ವೀರೇಂದ್ರ ಹೆಗ್ಗಡೆಯವರು** ಶ್ರೀ ಧರ್ಮಸ್ಥಳ – ೫೭೪೨೧೬

ದಕ್ಷಿಣ ಕನ್ನಡ, ಕರ್ನಾಟಕ

ಕಛೇರಿ : (೦೮೨೫೬) ೨೭೭೧೨೧

ಫ್ಯಾಕ್ಸ್ : ೨೭೭೧೧೬

ತಾ. ೩.೫.೨೦೧೨

ಶ್ರೀಮತಿ ರಾಜೇಶ್ವರಿ ಲೊಕಾರೆಯವರಿಗೆ,

ಖ್ಯಾತ ಸಾಹಿತಿಗಳೂ, ವಿಮರ್ಶಕರೂ ಆಗಿದ್ದ ಬಿ.ಎಚ್.ಶ್ರೀಧರರ ಸಮಗ್ರ ಕೃತಿಗಳ ಪುನರ್ ಮುದ್ರಣ ಮಾಡುವ ವಿಚಾರ ತಿಳಿದು ಸಂತೋಷವಾಯಿತು.

ತನ್ನ ವಿಭಿನ್ನ ಚಿಂತನಾ ಶೈಲಿಯಿಂದ ಅವರು ಕನ್ನಡ ನಾಡು–ನುಡಿಗೆ ಅನುಪಮ ಸೇವೆ ಸಲ್ಲಿಸಿದ್ದಾರೆ. ಅವರ ಕೃತಿಗಳ ಪುನರ್ ಮುದ್ರಣ ಮಾಡುತ್ತಿರುವುದು ಅವರಿಗೆ ನೀಡುವ ಗೌರವವಾಗಿದೆ.

ನೀವು ಹಮ್ಮಿಕೊಂಡ ಕಾರ್ಯ ಯಶಸ್ವಿಯಾಗುವಂತೆ ಶ್ರೀ ಮಂಜುನಾಥ ಸ್ವಾಮಿ ಹರಸಲೆಂದು ಪ್ರಾರ್ಥಿಸುತ್ತೇನೆ.

ಇತಿ,

(ಡಿ.ವೀರೇಂದ್ರ ಹೆಗ್ಗಡೆಯವರು)

# ಹಾರೈಕೆ

## ಜಿ. ವೆಂಕಟಸುಬ್ಬಯ್ಯ

ಶ್ರೀಮತಿ ರಾಜೇಶ್ವರಿಯವರೇ,

ನಿಮ್ಮ ತಂದೆಯವರನ್ನು ನಾನು ಚೆನ್ನಾಗಿ ಬಲ್ಲೆ. ನಾನು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಅತ್ಯಂತ ಕಿರಿಯ ಉಪನ್ಯಾಸಕನಾಗಿದ್ದಾಗ ಶ್ರೀ ಬಿ.ಎಚ್.ಶ್ರೀಧರ ಅವರು ಸಂಸ್ಕೃತ ವಿಭಾಗದಲ್ಲಿ ಐ.ಜೆ.ವಿದ್ಯಾರ್ಥಿಯಾಗಿದ್ದರು. ನಾವು ಆಗಾಗ ಸಂಧಿಸುತ್ತಿದ್ದೆವು. ೧೯೪೨ರಲ್ಲಿ ಪಂಪಮಹಾಕವಿಯ ಸಹಸ್ರಮಾನೋತ್ಸವವನ್ನು ನಾವೆಲ್ಲ ನೆರವೇರಿಸಿದಾಗ ಶ್ರೀ ಶ್ರೀಧರ ಅವರು ಪಂಪನ ಮೇಲೆ ಸಂಸ್ಕೃತ ಭಾಷೆಯಲ್ಲಿ ಹೊಗಳಿಕೆಯ ಸ್ತುತಿ ರಚಿಸಿ ಎಲ್ಲ ವಿದ್ವಾಂಸರ ಮನಸ್ಸನ್ನು ಗೆದ್ದರು. ಆ ಕಾಲದಲ್ಲಿಯೇ ಅವರು ಆಗಾಗ ಲೇಖನಗಳನ್ನು ರಚಿಸುತ್ತಿದ್ದರು. ನೇರವಾದ ಮಾತಿನ, ಗಟ್ಟಿ ನಿಲುವಿನ, ದೃಢವಿಶ್ವಾಸದ ವ್ಯಕ್ತಿಯಾಗಿದ್ದರು ಅವರು. ಅವರು ಉ.ಕನ್ನಡದಲ್ಲಿ ಸಂಸ್ಕೃತ ಉಪಾಧ್ಯಾಯರಾಗಿ ನಿಂತಮೇಲೆ, ಸಿದ್ಧಾಪುರದಲ್ಲಿ ಪ್ರಾಂಶುಪಾಲರಾಗಿದ್ದ ಕಾಲದಲ್ಲಿ ನಮ್ಮಿಬ್ಬರಿಗೂ ಸ್ವಲ್ಪ ಕಾಲ ಪತ್ರ ವ್ಯವಹಾರವಿತ್ತು. ಆ ಬಳಿಕ ನಾವಿಬ್ಬರೂ ವೃತ್ತಿಯ ಗೊಂದಲದಲ್ಲಿ ಮುಳುಗಿಬಿಟ್ಟಿತ್ತು. ಅವರು ರಚಿಸಿದ ಕೆಲವು ಪುಸ್ತಕಗಳು ಈಗಲೂ ನನ್ನ ಬಂಡಾರದಲ್ಲಿ ಮುಳುಗಿರುತ್ತವೆ. ಹುಡುಕಿದರೆ ಸಿಗುತ್ತವೆ. ಈ ವಯಸ್ಸಿನಲ್ಲಿ ಆ ಕೆಲಸ ಕಷ್ಟ.

ಶ್ರೀಧರರ ಪುಸ್ತಕಗಳನ್ನು ಪುನರ್ಮುದ್ರಿಸುವ ಕೆಲಸ ಸ್ತುತ್ಯವಾದುದು. ಅವರ ಎಲ್ಲ ಪ್ರಕಾರದ ಕೃತಿಗಳನ್ನು ಸಮಗ್ರವಾಗಿ ಒಂದೊಂದು ಸಂಪುಟವಾಗಿ ಪ್ರಕಟಿಸಿದರೆ ಕನ್ನಡಕ್ಕೆ ಸಹಾಯವಾಗುತ್ತದೆ. ನಿಮ್ಮ ಕಾರ್ಯದಲ್ಲಿ ನಿಮಗೆ ಗೆಲುವು ದೊರಕಲಿ. ನನ್ನ ಶುಭಾಶಯಗಳು.

ಇಂತೀ ನಿಮ್ಮ

**ಜಿ.ವೆಂಕಟಸುಬ್ಬಯ್ಯ**
೯-೩-೧೨

# ಶ್ರೀಧರರ ಅನುವಾದಗಳು

**"**ಕನ್ನಡವು ನನ್ನ ತಾಯ್ನುಡಿ, ಸಂಸ್ಕೃತವು ನನ್ನ ತಂದೆನುಡಿ**"** ಎಂದು **'ಕನ್ನಡ–ಸಂಸ್ಕೃತ ಬಾಂಧವ್ಯ'**ವೆಂಬ ಪ್ರಕರಣಗ್ರಂಥದ ಅರಿಕೆಯಲ್ಲಿ ಶ್ರೀಧರರು ಹೇಳಿಕೊಂಡಿದ್ದರು, ಜೊತೆಗೆ ಅತಿಥಿಯಾಗಿ ಬಂದ ಇಂಗ್ಲೀಷಿನಲ್ಲಿಯೂ ಅವರಿಗೆ ಸಾಕಷ್ಟು ಪರಿಶ್ರಮವಿತ್ತು. ಬಹುಶ್ರುತತೆ ಅವರ ಸಾಹಿತ್ಯದ ಒಂದು ಮಹತ್ವದ ಆಯಾಮ. ಹೀಗಾಗಿ, ತಾವು ತಿಳಿದ ಭಾಷೆಗಳ ನಡುವಿನ ಸಾಂಸ್ಕೃತಿಕ ವಿನಿಮಯದಲ್ಲಿ ಅವರು ಆಸ್ಥೆ ತಳೆದರು. ಕನ್ನಡದ ಪೂರ್ವ ಪರಂಪರೆಯ ಹಾಗೂ ಅದು ಸಂಬಂಧ ಬೆಳೆಸಿಕೊಂಡ ಇನ್ನಿತರ ಪರಂಪರೆಗಳ ಸ್ಪಷ್ಟವಾದ ತಿಳಿವಳಿಕೆ ಶ್ರೀಧರರಿಗೆ ಇದ್ದಿತ್ತಾದ್ದರಿಂದ ಅವರ ಮಧ್ಯಸ್ತಿಕೆಯಲ್ಲಿ ನಡೆದ ವಿನಿಮಯ ಕಾರ್ಯ ಮೌಲಿಕವಾದುದೂ ಆಯಿತು. ಆದರೂ, ನಮ್ಮ ಗ್ರಂಥವಿತರಣಾ ವ್ಯವಸ್ಥೆಯ ವೈಪರೀತ್ಯ, ಅನುವಾದದ ಕುರಿತ ಅನಾಸ್ಥೆ, ಅನಾದರ ಮೊದಲಾದ ಕಾರಣಗಳಿಂದ ಒಟ್ಟೂ ಅನುವಾದ ಸಾಹಿತ್ಯದಂತೆ ಶ್ರೀಧರರ ಅನುವಾದಗಳೂ ಚರ್ಚೆಗೆ ಬರಲಿಲ್ಲ. ಮುಂದೆ ಅವು ಕಣ್ಮರೆಯೂ ಆದವು. ಈಗ ಭಾಷಾಂತರ ಅಧ್ಯಯನ ಸಾಕಷ್ಟು ಬೆಳೆದಿರುವ ಹೊತ್ತಿನಲ್ಲಿ ಶ್ರೀಧರರ ಅನುವಾದಗಳ ಸಮಗ್ರ ಸಂಪುಟ ಪ್ರಕಟವಾಗುತ್ತಿದೆ. ಈ ಸಂಪುಟ ಶ್ರೀಧರರ ಆಸ್ಥೆಯ ಆಳ ಹಾಗೂ ವಿಸ್ತಾರದ ಒಂದು ಚಿತ್ರಣ ನೀಡುವುದರೊಂದಿಗೆ ಅವರು ನಡೆಸಿದ ಸಾಂಸ್ಕೃತಿಕ ವಿನಿಮಯದ ಮಹತ್ವವನ್ನು ಚರ್ಚಿಸಲೂ ಅನುವು ಮಾಡಿಕೊಡುತ್ತದೆ.

**'ಕಾವ್ಯಸೂತ್ರ'** ದಲ್ಲಿ ಕಾವ್ಯಮೌಲ್ಯಕ್ಕೆ ವಿಶ್ವವ್ಯಾಪಕ ನಿಕಷ ಅಗತ್ಯವೆಂದು ಶ್ರೀಧರರು ವಾದಿಸುತ್ತಾರೆ. ತಾತ್ವಿಕವಾಗಿ ವಿಶ್ವಸಾಹಿತ್ಯದ ಪರಿಕಲ್ಪನೆ ಅವರಿಗೆ ಸಮ್ಮತವಾದದ್ದು. ಇದೇ ರೀತಿ **"**ಭಾರತೀಯ ಸಾಹಿತ್ಯ**"**ದ ಪರಿಕಲ್ಪನೆ ಕೂಡ. ಭಾಷೆ ಮತ್ತು ಸಾಹಿತ್ಯಗಳ 'ಬಾಂಧವ್ಯ'ವನ್ನು ಚರ್ಚಿಸುವ ಹಿಂದಿನ ಅವರ ಗ್ರಹೀತ ಈ ಪರಿಕಲ್ಪನೆಯೇ. ಅನುವಾದಗಳ ನೆರವಿಲ್ಲದೆಯೇ ಇಂತಹ ಪರಿಕಲ್ಪನೆಗಳನ್ನು ಊಹಿಸಿಕೊಳ್ಳುವುದೂ ಸಾಧ್ಯವಾಗುವುದಿಲ್ಲ. ಈ ಕಾರಣದಿಂದ ಶ್ರೀಧರರ ವಾಙ್ಮಯದಲ್ಲಿ ಒಂದು ದೊಡ್ಡ ಸವಾಲು ಅನು–ವಾದ ಹಾಗೂ ಭಾಷಾಂತರಗಳದ್ದು.

ದಿಙ್ನಾಗನ **'ಕುಂದಮಾಲೆ'**ಯ ಅನುವಾದದ ಮೊದಲ ಮಾತಿನಲ್ಲಿ ಭಾಷಾಂತರ ನೀತಿಯ ಬಗ್ಗೆ ತಮ್ಮ ನಿಲುವನ್ನು ಶ್ರೀಧರರು ಸ್ಪಷ್ಟಪಡಿಸಿದ್ದಾರೆ. **"**ಅಪತಿವ್ರತೆಯಲ್ಲದ, ಆದರೆ ಆತ್ಮಹತ್ಯೆಗೆ ಕೂಡಲೇ ಸಿದ್ಧವಾಗುವ ಅತಿಪತಿವ್ರತೆಯೂ ಆಗದ ದಿಙ್ನಾಗನ ಸೀತೆಯಂತೆ ಭಾಷಾಂತರವು ಮಾಧ್ಯಮದ ಹಾಗೂ ರಂಗಪ್ರದರ್ಶನದ ವರ್ತಮಾನ ಕಾಲೀನ ರೂಢಿ – ಸಂಪ್ರದಾಯಗಳನ್ನು ಪಾತ್ರಗಾಂಭೀರ್ಯಕ್ಕೆ ಧಕ್ಕೆ ಬಾರದಂತೆ ಉಳಿಸಿಕೊಂಡು ಹೋಗುವುದು ಅಗತ್ಯ.**"** ಅಂದರೆ, ಅವರ ಉದ್ದೇಶ ಸಾಮಾನ್ಯ

ಭಾಷಾಂತರಕಾರನ ಉದ್ದೇಶಕ್ಕಿಂತ ಸೃಜನಶೀಲವಾದದ್ದು. ಮೂಲಭಾಷೆ ಹಾಗೂ ಕೃತಿಗಿಂತ ಗುರಿ – ಭಾಷೆ ಮತ್ತು ಓದುಗರೊಡನೆಯ ಸಂಬಂಧವೇ ಅವರಿಗೆ ಮುಖ್ಯವಾದದ್ದು. ಕಾವ್ಯ – ನಾಟಕಗಳಲ್ಲದೇ ವೈಚಾರಿಕ ಗದ್ಯದ ಭಾಷಾಂತರದಲ್ಲೂ ಅವರು ಈ ನೀತಿಯನ್ನು ಅನುಸರಿಸಿದರು. ಹೀಗಾಗಿಯೇ ಅವೆಲ್ಲ ಅನು–ವಾದಗಳು.

ಶ್ರೀಧರರ ಅನುವಾದಗಳಲ್ಲಿ ಸಿಂಹಪಾಲು ಅರವಿಂದ ವಾಙ್ಮಯಕ್ಕೆ ಸಂದಿದೆ. ಅವರು ಅರವಿಂದರ "The foundation of Indian culture" ಗ್ರಂಥವನ್ನು **'ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪ'** ಹಾಗೂ **'ಭಾರತೀಯ ವಾಙ್ಮಯ'** ಗಳಲ್ಲಿ ಅನುವಾದಿಸಿದ್ದರೆ, "The secret of the Veda" ವನ್ನು 'ವೇದರಹಸ್ಯ ಸಾರ' ಹಾಗೂ 'ವೇದರಹಸ್ಯ' ಗಳಲ್ಲಿ ಕನ್ನಡದ ಕೃತಿಗಳನ್ನಾಗಿಸಿದ್ದಾರೆ. ಇವು ಇಂದಿಗೂ ಚಾಲ್ತಿಯಲ್ಲಿರುವ ಪೌರಸ್ತ್ಯವಾದಿ ಚಿಂತನಕ್ರಮವನ್ನು ಅಲ್ಲಗಳೆದು ಪ್ರಾಚೀನ ಭಾರತದ ಕುರಿತು ಪುನರಾವಲೋಕಿಸುವಂತೆ ಒತ್ತಾಯಿಸುವ ಕೃತಿಗಳು. ಅದರಲ್ಲೂ **'ಭಾರತೀಯ ರಾಜ್ಯಧರ್ಮ'**ವು ಇಂದು ಸಾಮಾನ್ಯಜ್ಞಾನವೇ ಆಗಿಬಿಟ್ಟಿರುವ. ಮಧ್ಯಕಾಲೀನ ಭಾರತವೆಂದರೆ ಕೋಮುಸಂಘರ್ಷ ಹಾಗೂ ಅವನತಿಯುತ್ತ ಸಾಗಿದ ಕಾಲಘಟ್ಟವೆಂಬುದನ್ನು ಅಲ್ಲಗಳೆದು ಬ್ರಿಟಿಷರದೊಂದೇ ಭಾರತ ಕಂಡ 'ಮೊಟ್ಟ ಮೊದಲಿನ ನಿಜವಾದ ಅವಿಚ್ಛಿನ್ನ ಪರಶಾಸನ' ಎಂದು ವಾದಿಸುತ್ತದೆ.

ನವ್ಯ–ಕಾವ್ಯವನ್ನು ಎಂದೂ ಒಪ್ಪಿಕೊಂಡಿರದ ಶ್ರೀಧರರು ಬ್ರ್ಯಾಡ್‌ಬ್ರೂಕಳ **'T.S. Eliot'** ನ್ನು ಅನುವಾದಿಸಿದ್ದು ಕುತೂಹಲಕಾರಿಯಾಗಿದೆ. ಏಲಿಯಟ್ ಇಂಗ್ಲೀಷ್ ನವ್ಯಕಾವ್ಯದ ಆದ್ಯರಲ್ಲೊಬ್ಬ ಹಾಗೂ ಬ್ರ್ಯಾಡ್‌ಬ್ರೂಕಳದು ಏಲಿಯಟ್ ಸಾಹಿತ್ಯದ ರಸವಿಮರ್ಶೆ. ಹೀಗಾಗಿ ಆಕೆ ಏಲಿಯಟ್ ಕಾವ್ಯ ಹಾಗೂ ಗೀತನಾಟಕಗಳಿಂದ ಧಾರಾಳವಾಗಿ ಉದ್ಧರಣೆಗಳನ್ನು ನೀಡಿದ್ದಾರೆ. ಶ್ರೀಧರರ ತಾತ್ವಿಕ ಭಿನ್ನಾಭಿಪ್ರಾಯ ಅವರ ಅನುವಾದವನ್ನು ಪ್ರಭಾವಿಸಿಲ್ಲವೆಂಬುದು ಮುಖ್ಯವಾದದ್ದು. ಹಾಗೆ ನೋಡಿದರೆ, ಏಲಿಯಟ್ ಕಾವ್ಯ–ಪಂಕ್ತಿಗಳ ಉತ್ತಮ ಅನುವಾದಗಳ ಉದಾಹರಣೆಗಳು ಈ ಕೃತಿಯುದ್ದಕ್ಕೂ ಕಾಣಿಸುತ್ತವೆ ಹಾಗೂ ನವ್ಯಕಾವ್ಯ ಕನ್ನಡ ಛಂದಸ್ಸಿನ ಜಾಯಮಾನಕ್ಕೆ ಹೊರತಾಗಿರಬೇಕಾಗಿಲ್ಲ ಎಂಬುದಕ್ಕೆ ಕೂಡ. ಉದಾಹರಣೆಗೆ, ಏಲಿಯಟ್ ತನ್ನ ಶೈಲಿಯನ್ನು ತಾನೇ ವಿಡಂಬಿಸಿಕೊಂಡು ಬರೆದ ಕಿರುಗವನದ ಅನುವಾದ ನೋಡಿ:

> ಕಾರಕೂನನ ಲಕ್ಷಣಗಳಿಂದ
> ಭಾರಿ ಬಿಗುಮೊಗವುಳ್ಳ ಮೇಣುಪ –
> ಚಾರನಿರ್ಭರ ಬಾಯ ಸಂಭಾಷಣೆಯ ಶೈಲಿಯಲಿ।
> ತೀರ ಸರಿತನ, 'ಬಹುಶಃ' 'ಆದರೆ' –
> ತೋರ ರೇಫದುಪಾಧಿದೋರುವ
> (ಶಾರದಾ) ಶ್ರೀ ಈಲಿಯಟ್ಟರನೊಳ್ಪುದೆಷ್ಟು ಸುಖ॥

ಅಥವಾ 'Marina' (ಶ್ರೀಧರರ ಅನುವಾದದಲ್ಲಿ 'ಸಾಮುದ್ರಿಕೆ') ಕವನದ ಸಾಲುಗಳನ್ನು ನೋಡಿ:

ಆವ ಕಡಲುಗಳಿಗಾವ ತೀರಗಳು, ಬೂದುಬಂಡೆ,
ನಡುಗಡ್ಡೆಗಳು?
ಆವ ನೀರು ಮಳೆಬಿಲ್ಲ ಸುತ್ತಿಹುದು, ಸೆಲ್ಲೆಯಾಗಿ
ಹೇಳೆಲೆ ಮಗಳೆ?
ಪೈನುಮರದ ಈ ಗಂಧವಾವುದಿದು, ಆವ ಮರಕುಟುಕ
ಹಾಡುತಿದೆ
ಮಂಜುಮುಸುಕಿನಲಿ? ಎಂಥ ಪ್ರತಿಮೆಗಳು ಕಣ್ಣಿನೆದುರು
ಗೋಚರಿಸುತಿವೆ?

ತಮ್ಮ ಎಲ್ಲ ಅನುವಾದಿತ ಕೃತಿಗಳಿಗೂ ಪ್ರಸ್ತಾವನೆ ಬರೆಯುತ್ತಿದ್ದ ಶ್ರೀಧರರು ಇದೊಂದು ಪುಸ್ತಕಕ್ಕೆ ಮಾತ್ರವೇ 'No comments' ಅನ್ನುವ ರೀತಿಯಲ್ಲಿ ಅನುವಾದವನ್ನಷ್ಟೇ ನೀಡಿದ್ದಾರೆಂಬುದರ ಮೇಲೇ ಏಲಿಯಟ್ ಕಾವ್ಯವನ್ನು ಕುರಿತ ಅವರ ನಿಲುವನ್ನು ಊಹಿಸಬೇಕು.

**'ಮನುಸ್ಮೃತಿ', 'ಸಂಸ್ಕೃತ ಸುಭಾಷಿತ'** ಇವನ್ನೆಲ್ಲ ವಿಶ್ವವಿದ್ಯಾಲಯದ ಪಠ್ಯಪುಸ್ತಕ ನಿರ್ದೇಶನಾಲಯಕ್ಕಾಗಿ ಅನುವಾದಿಸಿದ್ದು. ಇವು ಶ್ರೀಧರರದೇ ಆಯ್ಕೆಗಳಲ್ಲ. ಇಂಗ್ಲೀಷ್‌ನಂತಹ ಪರಕೀಯ ಭಾಷೆಯಿಂದ ಅನುವಾದಿಸುವಾಗ ಎದುರಿಸಬೇಕಾದ ತೊಡಕುಗಳೂ ಇಲ್ಲಿ ಅವರಿಗೆ ಎದುರಾಗಿಲ್ಲ. ಮೂಲಕ್ಕೆ ಅತ್ಯಂತ ನಿಕಟವರ್ತಿಯಾಗಿರುವ ಈ ಬರಹಗಳನ್ನು ಶ್ರೀಧರರು **'ಭಾಷಾಂತರ'** ಎಂದು ಕರೆದಿದ್ದಾರೆ.

ಶ್ರೀಧರರ ಆರಂಭಿಕ ಅನುವಾದಗಳಲ್ಲೊಂದಾದ J.S. Mill ನ 'On Liberty' – **'ಸ್ವಾತಂತ್ರ್ಯ ಮೀಮಾಂಸೆ'**ಗೆ ಬರೆದ ಸುದೀರ್ಘವಾದ ಮುನ್ನುಡಿಯಲ್ಲಿ ಡಿ.ವಿ.ಜಿ.ಯವರು ಶ್ರೀಧರರನ್ನು "ವಿದ್ವಾಂಸರು, ಕನ್ನಡದಲ್ಲಿ ಬರವಣಿಗೆಯ ಅಭ್ಯಾಸಕ್ಕಾಗಿ ಪರಿಶ್ರಮ ಮಾಡಿರುವವರು, ಪ್ರಪಂಚದ ಇಂದಿನ ಪರಿಸ್ಥಿತಿಯನ್ನು ವಿಚಾರದಿಂದ ಕಂಡುಕೊಂಡಿರುವವರು, ಎಲ್ಲಕ್ಕಿಂತ ಹೆಚ್ಚಾಗಿ ತಮ್ಮ ಜನದಲ್ಲಿ ಜ್ಞಾನೋನ್ನತಿಯೂ, ವಿಚಾರೋನ್ನತಿಯೂ ಬೆಳೆಯಬೇಕೆಂದು ತಮ್ಮ ಹೃದಯದಲ್ಲಿ ಆಸೆ – ಆಕಾಂಕ್ಷೆಗಳನ್ನು ಬೆಳೆಸಿಕೊಂಡಿರುವವರು" ಎಂದು ಶ್ಲಾಘಿಸಿದ್ದಾರೆ. ಅನುವಾದಿಸಲು ಶ್ರೀಧರರಿಗಿದ್ದ ಅಧಿಕಾರ ಹಾಗೂ ಅವರ ಅನುವಾದಗಳ ಉದ್ದೇಶಗಳನ್ನು ಸೂಚಿಸುವ ಮಾತುಗಳಿವು.

**– ಡಾ. ಎಮ್.ಜಿ. ಹೆಗಡೆ**

# ಐದನೆಯ ಸಂಪುಟದ ಕುರಿತು.....

ಕವಿ, ವಿಮರ್ಶಕ, ಚಿಂತಕ ಬಿ.ಎಚ್. ಶ್ರೀಧರರ ಸಮಗ್ರ ಸಾಹಿತ್ಯ ಸರಣಿಯಲ್ಲಿ ಕಾವ್ಯ, ವಿಮರ್ಶೆ, ವಿಚಾರ ಹಾಗೂ ಸಂಕೀರ್ಣ ಎಂಬ ನಾಲ್ಕು ಸಂಪುಟಗಳು ಈಗಾಗಲೇ ಬಂದಿವೆ.

ಈಗ ಪ್ರಕಟವಾಗುತ್ತಿರುವುದು ಅವರಿಂದ ಅನುವಾದಿತವಾದ ಕೃತಿಗಳ ಸಂಕಲನ. ಕನ್ನಡ, ಸಂಸ್ಕೃತ, ಇಂಗ್ಲಿಷ್; ಈ ಮೂರೂ ಭಾಷೆಗಳಲ್ಲಿ ಪಾಂಡಿತ್ಯವಿದ್ದ ಶ್ರೀಧರರು ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳೆರಡರಿಂದಲೂ ಕೆಲವು ಕೃತಿಗಳನ್ನು ಅನುವಾದಿಸಿದ್ದಾರೆ. ಅವರು ಸಂಸ್ಕೃತದಿಂದ ಅನುವಾದಿಸಿದ ಕೃತಿಗಳನ್ನು ಈ ಐದನೆಯ ಸಂಪುಟದಲ್ಲಿ ಸಂಕಲಿಸಿದ್ದೇವೆ. ಅವುಗಳೆಂದರೆ – ಕುಂದಮಾಲೆ, ಸಂಸ್ಕೃತ ಸುಭಾಷಿತ ಸಂಗ್ರಹ, ಮನುಸ್ಮೃತಿಯ ಏಳನೆಯ ಅಧ್ಯಾಯ ಮತ್ತು ಶಿವಪುರಾಣ.

'ಕುಂದಮಾಲೆ' ಸಂಸ್ಕೃತ ಕವಿ ದಿಙ್ನಾಗನ ನಾಟಕದ ಅನುವಾದ. 1967ರಲ್ಲಿ ಮೈಸೂರಿನ ಗೀತಾ ಬುಕ್ ಹೌಸ್‌ನ ಪ್ರಕಟಣೆ ಇದು. ಸೀತಾ ಪರಿತ್ಯಾಗದಿಂದ ಆರಂಭವಾಗಿ ರಾಮ–ಸೀತೆಯರ ಪುನರ್ಮಿಲನದವರೆಗಿನ ಘಟನಾವಳಿಗಳ ನಿರೂಪಣೆ ಇಲ್ಲಿದೆ. ಇತರ ಸಂಸ್ಕೃತ ನಾಟಕಕಾರರೊಂದಿಗೆ ತುಲನೆ ಮಾಡಿ ದಿಙ್ನಾಗ ಕವಿಯ ವೈಶಿಷ್ಟ್ಯವನ್ನು ಶ್ರೀಧರರು ತಮ್ಮ ಸವಿಸ್ತಾರವಾದ ಮುನ್ನುಡಿಯಲ್ಲಿ ಎತ್ತಿ ತೋರಿಸಿದ್ದಾರೆ. ಹಾಗೆಯೇ ತಾವು ಅನುಸರಿಸಿದ ಅನುವಾದದ ಪದ್ಧತಿಯನ್ನೂ ಸ್ಪಷ್ಟಪಡಿಸಿದ್ದಾರೆ. ಪದ್ಯಭಾಗವನ್ನು ಅನುವಾದಿಸುವಾಗ ಓದುಗರಿಗೆ ಸುಲಭಗ್ರಾಹ್ಯವಾಗಲೆಂದು ಹಳಗನ್ನಡ ವೃತ್ತಗಳನ್ನು ಬಿಟ್ಟು ಹೊಸಗನ್ನಡದ ವೈವಿಧ್ಯಮಯ ಛಂದಸ್ಸಿನಲ್ಲಿ ಪದ್ಯಗಳನ್ನು ಹೆಣೆದಿದ್ದಾರೆ. ಸೀತೆ ಕೊನೆಯಲ್ಲಿ ಪಾತಾಳಕ್ಕೆ ಹೋಗಿಬಿಡುವ ರಾಮಾಯಣದ ದುಃಖಾಂತ ಇಲ್ಲಿಲ್ಲ. ರಾಮ–ಸೀತೆಯರ ಶುಭ ಸಮಾಗಮದ ಸುಖಾಂತವಿರುವುದು ವಿಶಿಷ್ಟ. ಶ್ರೀಧರರ ಅನುವಾದದ ಸುಲಲಿತತೆ ಈ ಕೃತಿಯಲ್ಲಿ ಸ್ವಯಂವೇದ್ಯ.

1971ರಲ್ಲಿ ಪಠ್ಯಪುಸ್ತಕ ನಿರ್ದೇಶನಾಲಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಪಿ.ಯು.ಸಿ., ಬಿ.ಎ. ಭಾಗ – 1 ಮತ್ತು ಬಿ.ಎಸ್.ಸಿ. ಭಾಗ – 1 ರ ಪೂರಕ ಪಠ್ಯಪುಸ್ತಕವೆಂದು "ಸಂಸ್ಕೃತ ಸುಭಾಷಿತ ಸಂಗ್ರಹ"ವನ್ನು ಪ್ರಕಟಿಸಿತು. ಮೂಲಭೂತವಾಗಿ ಒಬ್ಬ perfectionist ಆದ ಶ್ರೀಧರರ ಯಾವ ಕೃತಿಯೂ ಆಳ ಚಿಂತನೆಯೂ, ಅಭ್ಯಾಸವೂ ಇಲ್ಲದೆ ರಚಿತವಾದದ್ದಿಲ್ಲ. ಶ್ರೀಧರರು ಈ ಸಂಗ್ರಹದ

ತಮ್ಮ ಮೊದಲ ಮಾತಿನಲ್ಲಿ ವಿವರಿಸಿದಂತೆ – ಈ ಕೃತಿ ರಚನೆಯ ಉದ್ದೇಶಗಳು ನಾಲ್ಕು : 1. ಸಂಸ್ಕೃತ ಸಾಹಿತ್ಯದ ಸ್ಥೂಲ ಪರಿಚಯ. 2. ಅತಿ ಗಣ್ಯ ಸಂಸ್ಕೃತ ಗ್ರಂಥಗಳಿಂದ ಕೆಲವನ್ನಾದರೂ ಪರಿಚಯಾತ್ಮಕವಾಗಿ ಉದ್ಧರಿಸುವುದು. 3. ಸಂಸ್ಕೃತದ 'ಹಳೆಯ ಭಂಡಾರ' ದಲ್ಲಿ ಇಂದಿಗೆ ಬೇಕಾದುದ್ದೇನಾದರೂ ಇದೆಯೇ ಎಂಬ ಕುತೂಹಲಕ್ಕೆ ಸಮಾಧಾನಕರ ಉತ್ತರ ನೀಡುವುದು. 4. ಇಂದಿನ ಸಾಮಾಜಿಕ ಮನೋಧರ್ಮದಲ್ಲಿ ಜೀವನದ ದೃಷ್ಟಿಕೋನ, ಮನಃಪ್ರಣಾಳಿಗಳ ಸ್ತರದಲ್ಲಿ ಮೂಲಭೂತ ಬದಲಾವಣೆಗಳೇನಾದರೂ ಆಗಿವೆಯೇ ಎಂಬ ತುಲನೆಗೆ ಸಾಧನವನ್ನೊದಗಿಸುವುದು. ಇಂಥ ಖಚಿತ ಉದ್ದೇಶವನ್ನಿಟ್ಟುಕೊಂಡು ರಚಿತವಾದ ಕೃತಿ ಸಹಜವಾಗಿಯೇ ಪ್ರಾತಿನಿಧಿಕ ಸಂಗ್ರಹದ ಮಹತ್ವವನ್ನು ಪಡೆದಿದೆ.

'ಮನುಸ್ಮೃತಿ (ಅಧ್ಯಾಯ – 7)' ಮುಂದಿನ ಕೃತಿ. 1974ರಲ್ಲಿ ಬಿ.ಎ. ಭಾಗ – 1 ರ ಸಂಸ್ಕೃತ ಮೇಜರ್ ಪಠ್ಯಪುಸ್ತಕದ ರೂಪದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಇದನ್ನು ಪ್ರಕಟಿಸಿತು. ಹೆಸರೇ ಹೇಳುವಂತೆ ಮನುಸ್ಮೃತಿಯ ಏಳನೆಯ ಅಧ್ಯಾಯವಾದ 'ರಾಜಧರ್ಮ'ದ ಅನುವಾದ ಇದು. ಇಲ್ಲಿಯೂ ಸವಿವರವಾದ ಪೀಠಿಕೆ ಇದ್ದು, ರಾಜಧರ್ಮದ ಅನೇಕ ಅಂಗಗಳ ವಿವೇಚನೆ ಇಲ್ಲಿದೆ. ಟಿಪ್ಪಣಿಗಳಲ್ಲಿ ವಿಷಯವನ್ನು ಪೂರ್ಣವಾಗಿ ತಿಳಿಯಲು ಅನುಕೂಲವಾಗುವಂತೆ ಕುಲ್ಲೂಕ, ರಾಮಚಂದ್ರ, ಸರ್ವಜ್ಞ ನಾರಾಯಣ ಮುಂತಾದ ಪ್ರಸಿದ್ಧ ಟೀಕಾಕಾರರ ಅವತರಣಿಕೆಗಳನ್ನು ನೀಡಲಾಗಿದೆ. "ವರ್ತಮಾನ ಭಾರತದ ಪ್ರಜೆಗಳೂ, ಶಾಸಕರೂ ಈ ಗ್ರಂಥದ ಅಭ್ಯಾಸದಿಂದ ಬಹುವಿಧವಾಗಿ ಬುದ್ಧಿವಿಕಾಸವನ್ನೂ, ಮಾರ್ಗದರ್ಶನವನ್ನೂ ಪಡೆಯಬಹುದು" ಎಂಬುದು ಶ್ರೀಧರರ ಆಶಯ.

ಈ ಸಂಪುಟದ ಕೊನೆಯ ಕೃತಿ 'ಶಿವಪುರಾಣ'. ಇದು ಡಾ. ಪುಷ್ಪೇಂದ್ರಕುಮಾರ್ ಅವರು ಸಂಪಾದಿಸಿದ ಅಷ್ಟಾದಶ ಪುರಾಣಗಳಲ್ಲೊಂದಾದ 'ಶ್ರೀ ಶಿವಮಹಾಪುರಾಣಮ್' ಎಂಬ ಸಂಸ್ಕೃತ ಗ್ರಂಥದ ಸಾರರೂಪ. ಶ್ರೀ ಕ್ಷೇತ್ರ ಧರ್ಮಸ್ಥಳದ ಮಾಸಪತ್ರಿಕೆ 'ಮಂಜುವಾಣಿ'ಯಲ್ಲಿ 1984ರಿಂದ 1988ರ ವರೆಗೆ ಇದು ಧಾರಾವಾಹಿಯಾಗಿ ಪ್ರಕಟವಾಗುತ್ತಿತ್ತು.

'ಶಿವಪುರಾಣ'ದ ವೈಶಿಷ್ಟ್ಯವನ್ನೂ, ಮಹತ್ವವನ್ನೂ ಹೆಜ್ಜೆಹೆಜ್ಜೆಗೆ ಗುರುತಿಸುತ್ತಲೇ ಸಾಗುವ ಈ ಸಾರನಿರೂಪಣೆಯ ಶೈಲಿಯೇ ವಿಶಿಷ್ಟ. ಭಗವದ್ಗೀತೆ, ಶಂಕರಾದ್ವೈತ, ಅರವಿಂದದರ್ಶನ, ರಮಣದೃಷ್ಟಿ, ಬೇಂದ್ರೆ ಅನುಭಾವ, ಪಾಶ್ಚಾತ್ಯ ತತ್ವಶಾಸ್ತ್ರ, ಎಲ್ಲವೂ ಅಲ್ಲಲ್ಲಿ ಉಲ್ಲೇಖಿಸಲ್ಪಡುತ್ತವೆ. ಹಾಗೆಯೇ ಇಂದಿನ ಸ್ಥಿತ್ಯಂತರದ ವಿಶ್ಲೇಷಣೆಯೂ! ಶ್ರೀಧರರ ಪ್ರಕಾರ ಶಿವಪುರಾಣ "ಸರ್ವಧರ್ಮ ಸಮನ್ವಯದ ನಿರುಪಮ ಪಠ್ಯ." ಅದನ್ನವರು ಸಾಧಾರವಾಗಿ ಸಿದ್ಧಮಾಡಿದ್ದಾರೆ. ಹೀಗಾಗಿ ಈ ಅನುವಾದ ಅಥವಾ ಸಾರನಿರೂಪಣೆ ಕೇವಲ 'ಪುರಾಣ' ಎನಿಸದೇ, 'ಅತ್ಯುನ್ನತವೂ, ಅತಿ ಸಮಗ್ರವೂ ಆದ ಶಾಶ್ವತ ನೀತಿಧರ್ಮ'ದ ಹೊತ್ತಿಗೆಯೆನಿಸುತ್ತದೆ.

ತ್ರಿಭಾಷಾ ಕೋವಿದ ಶ್ರೀಧರರ 'ಅನುವಾದ' ಸಂಪುಟದ ಮೊದಲ ಭಾಗ ಇದು. ಮುಂದಿನ, ಅಂದರೆ ಆರನೆಯ ಸಂಪುಟದಲ್ಲಿ ಇಂಗ್ಲೀಷಿನಿಂದ ಅನುವಾದಿತವಾದ ಕೃತಿಗಳು ಇರಲಿವೆ.

ಶ್ರೀಧರರ ಸಮಗ್ರ ಸಾಹಿತ್ಯವನ್ನು ಅಭ್ಯಸಿಸಿ ಅರಗಿಸಿಕೊಂಡ ಖ್ಯಾತ ವಿಮರ್ಶಕ ಡಾ. ಎಮ್.ಜಿ.ಹೆಗಡೆಯವರು "ಶ್ರೀಧರರ ಅನುವಾದಗಳು" ಎಂಬ ತಮ್ಮ ನುಡಿಯಲ್ಲಿ ಅವರ ಅನುವಾದಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಅವುಗಳ ವೈಶಿಷ್ಟ್ಯವನ್ನು ಪ್ರಸ್ತಾಪಿಸಿದ್ದಾರೆ. ಮುಖ್ಯವಾಗಿ, ಶ್ರೀಧರರು ಭಾಷಾಂತರ ಮತ್ತು ಅನುವಾದಗಳ ನಡುವಿನ ವ್ಯತ್ಯಾಸವನ್ನು ತಿಳಿಸಿದ್ದನ್ನೂ, ಮೂಲಕೃತಿಗೆ ನಿಷ್ಠವಾಗಿದ್ದೂ ಆ ನಿಷ್ಠೆ ಅತಿಯಾಗಬಾರದ ಸಮತ್ವವನ್ನು ಕಾಯ್ದುಕೊಳ್ಳುವ ಎಚ್ಚರಿಕೆ ನೀಡಿದ್ದನ್ನೂ ಸಮರ್ಪಕವಾಗಿ ಗಮನಿಸಿದ್ದಾರೆ. ಡಾ. ಎಮ್.ಜಿ.ಹೆಗಡೆಯವರು ಶ್ರೀಧರರ ಒಟ್ಟೂ ಅನುವಾದಗಳ ಕುರಿತು, ಅಂದರೆ ಶ್ರೀಧರರು ಇಂಗ್ಲೀಷ್‌ನಿಂದ ಅನುವಾದಿಸಿದ ಕೃತಿಗಳನ್ನೂ ಗಮನಕ್ಕೆ ತಂದುಕೊಂಡು ಇಲ್ಲಿ ಚರ್ಚಿಸಿರುವುದರಿಂದ ಶ್ರೀಧರರ ಅನುವಾದಗಳ ಎರಡೂ ಸಂಪುಟಗಳಿಗೆ ಈ ಪ್ರಸ್ತಾವನೆಯೇ ಸಲ್ಲುತ್ತದೆ. ಶ್ರೀ ಹೆಗಡೆಯವರಿಗೆ ನಮ್ಮ ವಿಶೇಷ ಕೃತಜ್ಞತೆಗಳು.

ಶ್ರೀಧರರ ಅನುವಾದಗಳು ಕೇವಲ ಅನುವಾದಗಳಾಗಿರದೆ ಅಭ್ಯಸನಯೋಗ್ಯ ಆಕರಗ್ರಂಥಗಳೂ ಆಗಿರುವುದು ಇವುಗಳ ಗರಿಮೆ.

ಸಂಪಾದಕರ ಪರವಾಗಿ<br>ರಾಜೇಶ್ವರಿ ಶ್ರೀಧರ ಹೆಬ್ಬಾರ

# ಪರಿವಿಡಿ

# ೧. ಮೊದಲ ಮಾತು

ಕಲ್‌ಕತ್ತೆಯ ಸಂಸ್ಕೃತ ಕಾಲೇಜಿನ ಪ್ರಕಟನ ಶಾಖೆಯು 'ಕುಂದಮಾಲೆ' ಎಂಬ ನಾಟಕವನ್ನು ೧೯೬೪ರಲ್ಲಿ ಪ್ರಕಟಿಸಿತು. ಅದರ ಹಸ್ತಪ್ರತಿಗಳನ್ನು ಸಂಶೋಧಿಸಿ ಅಧಿಕೃತ ಪಾಠವನ್ನು ರಚಿಸಿದ ಸಂಪಾದಕರೆಂದರೆ, ಶ್ರೀ ಕಾಳೀಕುಮಾರದತ್ತ ಶಾಸ್ತ್ರಿ, ಎಂ.ಎ., ಡಿ.ಫಿಲ್., ಕಾವ್ಯ ಸಾಂಖ್ಯ ತೀರ್ಥ, ಸಂಸ್ಕೃತ ಭಾಷೆ–ಸಾಹಿತ್ಯಗಳ ಪ್ರಾಧ್ಯಾಪಕರು, ಸ್ನಾತಕೋತ್ತರ ತರಬೇತು–ಸಂಶೋಧನಗಳ ಶಾಖೆ, ಸಂಸ್ಕೃತ ಕಾಲೇಜು, ಕಲ್‌ಕತ್ತೆ–ಎಂಬುವರು. ಬಾಹ್ಯಪ್ರಮಾಣ–ಅಂತಃಪ್ರಮಾಣಗಳಿಂದ ಅವರು ನಾಟಕದ ಕಾಲ ಸುಮಾರು ೫ನೆಯ ಶತಮಾನ ಎಂದು ಸಿದ್ಧಾಂತಿಸಿದ್ದಾರೆ. ನಾಟಕಕಾರ ದಿಙ್ನಾಗ.

ವಾದ–ಪ್ರತಿವಾದಗಳ ಪರಾಮರ್ಶೆಯಿಂದ ಈ ದಿಙ್ನಾಗನು ಕಾಳಿದಾಸನು ತನ್ನ 'ಮೇಘದೂತ'ದಲ್ಲಿ ಸೂಚಿಸಿದ ಬೌದ್ಧ ದಿಙ್ನಾಗನೆಂದು ನಮಗೆ ತೋರುತ್ತದೆ. ಆದರೆ ಈ ನಾಟಕವನ್ನು ರಚಿಸುವಾಗ ಅವನಿನ್ನೂ ಬೌದ್ಧನಾಗಿರಲಿಲ್ಲ ಎಂಬುದು ಆಂತರಿಕ ಪ್ರಮಾಣದಿಂದ ಸಿದ್ಧವಾಗುತ್ತದೆ. ಕಾಳಿದಾಸನಷ್ಟು ಅಚ್ಚುಕಟ್ಟುತನ ಮತ್ತು ಭವಭೂತಿಯಷ್ಟು ಅತ್ಯಾವೇಶ ಈ ನಾಟಕಕಾರನ ಶೈಲಿಯಲ್ಲಿ ಕಂಡುಬರುವುದಿಲ್ಲ. ಆದರೆ ಇವನ ಭಾಷಾಬಂಧವನ್ನು ನೋಡಿದರೆ ಈತನು ಪ್ರಾಜ್ಞನೂ ಕಾವ್ಯಜ್ಞಶಿಕ್ಷೆಯನ್ನು ಚೆನ್ನಾಗಿ ಪಡೆದವನೂ ಆಗಿದ್ದಾನೆ ಎಂದು ಕಾಣುತ್ತದೆ. ಕಾಳಿದಾಸನ 'ಶಾಕುಂತಲ' ಮತ್ತು ಭವಭೂತಿಯ 'ಉತ್ತರರಾಮಚರಿತೆ'ಗಳನ್ನು ಅವಲೋಕಿಸಿದವರಿಗೆ ಈತನ ಶೈಲಿಯ ನಾಟಕೋಚಿತವಾದ ಸರಳತೆ ಎದ್ದು ಕಾಣಿಸದಿರದು, ಸಂವಾದದ ಅಭಿಪ್ರಾಯಸ್ಫುಟತೆ ವಿಶೇಷವೆಂದು ತೋರದಿರದು.

**ಉದಾತ್ತನಾಯಿಕೆ:** ವಾಲ್ಮೀಕೆಯ ಸೀತೆ, ಕಾಳಿದಾಸನ ಸೀತೆ ಮತ್ತು ಭವಭೂತಿಯ ಸೀತೆಯರನ್ನು ಪರಿಶೀಲಿಸಿದರೆ ಆ ಸೀತಾತ್ರಯದ ಸೌಂದರ್ಯಸಾರವನ್ನು ದಿಙ್ನಾಗನು ತನ್ನ ಈ ನಾಟಕದಲ್ಲಿ ಕಣ್ಣಿಗೆ ಕಟ್ಟುವಂತೆ ನಿಃಸಂದಿಗ್ಧ ಪ್ರಮಾಣಗಳ ಮೇಲೆ ಕಡೆದು ನಿಲ್ಲಿಸಿದ್ದಾನೆ ಎಂದು ಭಾಸವಾಗುತ್ತದೆ. ಭವಭೂತಿಯು ಆಮೇಲೆ ಬಂದ ಕವಿ; ಆತನು ದಿಙ್ನಾಗನ ಸೀತೆಗಿಂತ ಹೆಚ್ಚಿನ ಸೀತೆಯನ್ನು ರೂಪಿಸಲು ಪ್ರಯತ್ನಿಸಿರಬಹುದು; ಆದರೆ ಆ ಪ್ರಯತ್ನದಲ್ಲಿ ಆತ ಪಡೆದ ಜಯ ಸಂದೇಹಾಸ್ಪದವೆನ್ನಬೇಕು. ನಿಃಸಂದಿಗ್ಧ ಪ್ರಮಾಣಗಳ ಮೇಲೆ ಕಡೆದು ನಿಲ್ಲಿಸಿದ್ದಾನೆ ಎಂದು ಭಾಸವಾಗುತ್ತದೆ. ಭವಭೂತಿಯು ಆಮೇಲೆ ಬಂದ ಕವಿ; ಆತನು ದಿಙ್ನಾಗನ ಸೀತೆಗಿಂತ ಹೆಚ್ಚಿನ ಸೀತೆಯನ್ನು ರೂಪಿಸಲು

ಪ್ರಯತ್ನಿಸಿರಬಹುದು; ಆದರೆ ಆ ಪ್ರಯತ್ನದಲ್ಲಿ ಆತ ಪಡೆದ ಜಯ ಸಂದೇಹಾಸ್ಪದವೆನ್ನಬೇಕು.

**ಸುಕುಮಾರ ಪ್ರಯೋಗ :** ರಾಮಾಯಣವು ಕವಿಪ್ರಿಯ; ಅದರಲ್ಲೂ ಅದರ ಉತ್ತರಕಾಂಡದ ಕಥಾಭಾಗವಾದ 'ಸೀತಾಪರಿತ್ಯಾಗ' ಭಾರತದ ಸಂಸ್ಕೃತ–ಸಂಸ್ಕೃತೇತರ ಕವಿಗಳಲ್ಲಿ ಅನೇಕರ ಮನಸ್ಸನ್ನು ಸೆಳೆದಿದೆ. ಈ ಕಥೆ ಆವಿದ್ಧವಾದರೆ ಚೆಂದವೋ, ಸುಕುಮಾರವಾದರೆ ಚೆಂದವೋ? ಎಂಬುದು ವಿಮರ್ಶಾರ್ಹವಾದುದು. ಸೀತೆಯಲ್ಲಿ ಯಾವ ದುರಂತ ದೌರ್ಬಲ್ಯ (tragic flaw)ವಿದೆ? ಅವಳ ಅಸೀಮ ಪಾತಿವ್ರತ್ಯವು ದುರಂತ ದೌರ್ಬಲ್ಯ ಎನ್ನಿಸೀತೆ? ರಾಮನಲ್ಲಿ ಅಂಥ ಯಾವ ದೌರ್ಬಲ್ಯವಿದೆ? ಅವನು ಸೀತಾತ್ಯಾಗವನ್ನು ನಿರ್ಣಯಿಸಿದ್ದು ಅವಿವೇಕ (ಅಸಮೀಕ್ಷ್ಯ ಕಾರಿತ್ವ)ದಿಂದಲೇ? ಅದು ದುರಂತಕಾರಿಯಾದ ದೋಷವೆಂದೆನ್ನಿಸೀತೆ? ಈ ಪ್ರಶ್ನೆಗಳಿಗೆ ದಿಙ್ನಾಗನ ಉತ್ತರ ನಕಾರಾತ್ಮಕ: ಅವನ ಈ ನಾಟಕದ ಸಂವಾದಗಳೂ ಸಂವಿಧಾನವೂ ಸನ್ನಿವೇಶಗಳೂ ಕಲಾತ್ಮಕವಾಗಿ ಇದರ ಮಂಗಲಾಂತತೆಯನ್ನು ಅಪರಿಹಾರ್ಯವನ್ನಾಗಿ ಮಾಡಿರುವುದು ಪ್ರೇಕ್ಷಣೀಯವಾಗಿದೆ.

**ವಾಲ್ಮೀಕಿಯ ಪೌರೋಹಿತ್ಯ :** ಓದು ನಾಟಕ, ಕೇಳು ನಾಟಕಗಳು ನಾಟಕಾಭಾಸಗಳು, ನಿಜವಾದ ನಾಟಕಗಳಲ್ಲ. ನಾಟಕವನ್ನು ಆಡಬೇಕು, ಆಮೇಲೆ ಅದನ್ನು ನೋಡಿ ಹೇಳಬೇಕು. ಈ ದೃಷ್ಟಿಯಿಂದ ಪರಾಮರ್ಶಿಸಿದಾಗ ವಾಲ್ಮೀಕಿಯು ಈ ನಾಟಕದಲ್ಲಿ ಸೀತೆಯ ವಕೀಲನಾಗಿ, ರಾಮನು ಸೀತಾತ್ಯಾಗವನ್ನು ಜನಾಪವಾದದ ದೆಸೆಯಿಂದ ನಿರ್ಣಯಿಸಿದ್ದು ತಪ್ಪೆನ್ನುವಂತೆ ವಾದಿಸಿದರೂ ಮುಂದೆ ಭೂದೇವಿ ಅವತರಿಸಿ ಸೀತೆಯ ಪಾತಿವ್ರತ್ಯಕ್ಕೆ ಸಾಕ್ಷಿಯನ್ನು ಕೊಡುವಂತೆ ಮಾಡಿದ್ದು ಕುಲಧರ್ಮದ ಔಚಿತ್ಯವನ್ನು ಕಂಡೇ ರಾಮ ಅಂಥ ನಿರ್ಣಯಕ್ಕೆ ಬಂದಿದ್ದ– ಎಂಬುದನ್ನು ಅಪ್ರತ್ಯಕ್ಷವಾಗಿ ಒಪ್ಪಿಕೊಂಡ ಅಂಶವನ್ನು ಧ್ವನಿಸುತ್ತದೆ. ಸೀತೆಯ ಪರವಾದ ಅವನ ವಾದ ಮತ್ತು ಭೂದೇವಿಯ ಅವತಾರ– ಈ ಎರಡೂ ರಾಮನ ಯಜ್ಞಶಿಬಿರದ ಲೋಕಸಭೆಯಲ್ಲಿ ನಡೆದುದು ಅಪವಾದ ಹೊರಿಸಿದ ಜನರ ಮನಸ್ಸನ್ನು (ಸೀತೆಯ ಬಗ್ಗೆ) ಶುದ್ಧಗೊಳಿಸಲೆಂದಲ್ಲದೆ, ಸೀತೆಯನ್ನು ಪಾವನ ಮಾಡಲೆಂದಲ್ಲ. ಸೀತೆ ನಿತ್ಯಪಾವನೆಯೆಂಬುದು ರಾಮನಿಗೂ ಗೊತ್ತು, ವಾಲ್ಮೀಕಿಗೂ ಗೊತ್ತು. ಆದರೆ ರಾಮನಲ್ಲಿ ಜನಮನಶುದ್ಧೀಕರಣಕ್ಕಾಗಿ ದಿವ್ಯಸಾಕ್ಷಿಗಳನ್ನು ಒದಗಿಸುವ ಶಕ್ತಿ ಇರಲಿಲ್ಲ. ಅವನು ಅವತಾರ ಪುರುಷನಾದರೂ ಮರ್ಯಾದಾ ಪುರುಷೋತ್ತಮನು; ಪದೇ ಪದೇ ಅಗ್ನಿದಿವ್ಯವನ್ನು ಮಾಡಿಸುವಷ್ಟು ಗಡಿಮೀರುವ ದಿವ್ಯತ್ವವುಳ್ಳವನಲ್ಲ. ವಾಲ್ಮೀಕಿಯಾದರೋ ತಪೋಧನ; ಅವನು ದೇವತಾ ಸಾಕ್ಷಾತ್ಕಾರ ಮಾಡಿಸುವ ಹಕ್ಕನ್ನು ಪಡೆದ ಪುರೋಹಿತ ಸ್ವರೂಪದವನು. ಆದುದರಿಂದ ಅವನಿಂದ ಅಗ್ನಿಯ ಪ್ರತ್ಯಕ್ಷಕ್ಕಿಂತಲೂ ಒಮ್ಮೆ ಹೆಚ್ಚಿನದೆನ್ನಿಸಬಹುದಾದ ಭೂದೇವಿಯ

ಪ್ರತ್ಯಕ್ಷವನ್ನು ಕವಿ ಮಾಡಿಸಿದ್ದಾನೆ– ಅದೂ ರಾಮನೊಬ್ಬನಿಗಲ್ಲ, ಸಮಸ್ತ ಪೌರಜಾನಪದ ಪ್ರಮುಖರಿಗೆ!

**ತುಲನಾಸಂದರ್ಭ** : ಬುದ್ಧಿವಂತ ರಸಿಕರು ಕಾಳಿದಾಸನ ಶಕುಂತಲೆಯ ಪಾತಿವ್ರತ್ಯವನ್ನೂ ದಿಙ್ನಾಗನ ಸೀತೆಯ ಪಾತಿವ್ರತ್ಯವನ್ನೂ ಪತಿಗತ ಆಲೋಚನೆಗಳನ್ನೂ ಪರಿತ್ಯಾಗ ಸಂದರ್ಭದ ಆದ್ಯಂತಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸಿ ತೂಗಿ ನೋಡಬಹುದು. ಸ್ವಯಂವರ–ಪಾತಿವ್ರತ್ಯಗಳಿಗಿರುವಷ್ಟು ಮಾನಸಶಾಸ್ತ್ರೀಯ ಹೊಂದಿಕೆ ಗಾಂಧರ್ವ ವಿವಾಹಕ್ಕೂ ಪಾತಿವ್ರತ್ಯಕ್ಕೂ ಇದೆಯೇ? ಎಂಬುದೂ ವಿಚಾರಣೀಯ. ಹಾಗೇ ದುಷ್ಯಂತನ ಪತಿಧರ್ಮ ರಾಜಧರ್ಮಗಳನ್ನೂ ರಾಮನ ಪತಿಧರ್ಮ ಕುಲಧರ್ಮಗಳನ್ನೂ ಸಂದರ್ಭಶಃ ಹೋಲಿಸಿ ನೋಡಬಹುದು; ಆ ಈ ಪಾತ್ರಗಳು ಪಟ್ಟ ಕಷ್ಟಗಳನ್ನು ತುಲನೆ ಮಾಡಬಹುದು : ಉಭಯ ಕಷ್ಟ ಸಂದರ್ಭಗಳ ಶೋಕೋತ್ತೇಜಕತೆಯನ್ನು ಅಳೆದು ನೋಡಬಹುದು.

**ಕಲೆ ಮತ್ತು ಸಂಭಾವ್ಯತೆ** : ಉತ್ತಮವಾದ ಕಾವ್ಯದಲ್ಲಾಗಲಿ, ನಾಟಕದಲ್ಲಾಗಲಿ, ಸರ್ವಕಾಲ–ಸರ್ವದೇಶ–ಸರ್ವಭಾಷೆಗಳಲ್ಲಿ ರಸ ಪರ್ಯವಸಾಯಿತ್ವವೊಂದೇ ಕೃತಿಯ ಯೋಗ್ಯತೆಗೆ ಕಲಾತ್ಮಕ ನಿಕಷ. ಗಾಢವಾದ ಲೌಕಿಕೇತರ ಭಾವನಾನುಭವ (intense aesthetic emotion)ವನ್ನು 'ರಸ' ಎಂದು ಸಾರತಃ ಗ್ರಹಿಸಿದರೆ ತಪ್ಪಾಗದು. ಅಂಥ ರಸವೊಂದೇ ಕೃತಿಯಲ್ಲಿ ರಸಿಕನನ್ನು ಮುಳುಗಿಸಿ ಮೈಮರೆಸಬಲ್ಲುದು. ಈ ದೃಷ್ಟಿಯಿಂದ 'ಕುಂದಮಾಲೆ' ಸಂಪೂರ್ಣ ಯಶಸ್ವಿಯಾಗಿದೆ ಎನ್ನಬಹುದು. ಈ ನಾಟಕದ ಅನುಶೀಲನದ ಕೊನೆಯಲ್ಲಿ ವಿಚಾರಬುದ್ಧಿಗೆ 'ಉತ್ತರರಾಮಚರಿತೆ'ಯನ್ನು ಕಂಡು ಅದು ಮುಗಿಯುವಷ್ಟರಲ್ಲಿಯೇ ಉಂಟಾಗುವ ಹಲವಾರು ಅಸಂಭಾವ್ಯತಾ ಪ್ರವೇಶನದ ಅಸಮರ್ಥನೀಯ ಅಕಲಾತ್ಮಕ ಸನ್ನಿವೇಶಗಳ ನಿವಾರ್ಯತೆಯು ಕಲ್ಪನೆ ಹೊಳೆಯುವುದಿಲ್ಲವೇ? ಕಾಳಿದಾಸನು 'ಶಾಕುಂತಲ'ದಲ್ಲಿ ಪ್ರವೇಶಗೊಳಿಸಿದ ಅಸಂಭಾವ್ಯತೆ (impossibilities) ಗಳಂತೆಯೇ ದಿಙ್ನಾಗನ ಅಸಂಭಾವ್ಯತೆಗಳೂ ಕಲಾತ್ಮಕ ಸಮರ್ಥನೆಗಳನ್ನು ಸುಲಭವಾಗಿ ಹೊಳೆಯಿಸಬಲ್ಲವು.

**ಅನುವಾದದ ಪದ್ಧತಿ** : ಇಂಗ್ಲಿಷಿಗಾಗಲಿ, ಕನ್ನಡಕ್ಕಾಗಲಿ–ಸಂಸ್ಕೃತ ನಾಟಕವೊಂದನ್ನು ಭಾಷಾಂತರಿಸುವಾಗ, ಮಾಡಿದ ಭಾಷಾಂತರವು (ಮೂಲದ ಅಪೇಕ್ಷೆಯಿಲ್ಲದೆ) ರಂಗದ ಮೇಲೆ ಪ್ರದರ್ಶಿಸಿದಾಗ ಯಶಸ್ವಿಯಾಗಬಲ್ಲುದೋ ಇಲ್ಲವೋ ಎಂಬ ಔಚಿತ್ಯ ಕಲ್ಪನೆ ಜಾಗ್ರತವಾಗಿರುವುದು ಅತ್ಯಂತ ಅಗತ್ಯ. ಅಪತಿವ್ರತೆಯಲ್ಲದ, ಆದರೆ ಆತ್ಮಹತ್ಯೆಗೆ ಕೂಡಲೇ ಸಿದ್ಧವಾಗುವ ಅತಿಪತಿವ್ರತೆಯೂ ಆಗದ ದಿಙ್ನಾಗನ ಸೀತೆಯಂತೆ ಭಾಷಾಂತರವು ಮಾಧ್ಯಮದ ಹಾಗೂ ರಂಗಪ್ರದರ್ಶನದ ವರ್ತಮಾನ ಕಾಲೀನ ರೂಢಿ ಸಂಪ್ರದಾಯಗಳನ್ನು ಪಾತ್ರಗಾಂಭೀರ್ಯಕ್ಕೆ ಧಕ್ಕೆಬಾರದಂತೆ ಉಳಿಸಿಕೊಂಡು ಹೋಗುವುದು

ಅಗತ್ಯ. ಕಾಳಿದಾಸನ ಕೃತಿಗಳನ್ನು ಭಾಷಾಂತರಿಸುವಲ್ಲಿ ಶ್ರೀ ಅರವಿಂದರೂ, ಅವನ 'ಮೇಘದೂತ'ವನ್ನು ಅನುವಾದಿಸುವುದರಲ್ಲಿ ಶ್ರೀ ಬೇಂದ್ರೆಯವರೂ ಇಂಥ ಔಚಿತ್ಯ ಅಥವಾ ಸಮತ್ವಯೋಗವನ್ನು ಆಧರಿಸಿದ್ದು ಸುವಿದಿತ. ಈ ಆದರ್ಶವನ್ನು ಹೃತ್ಪೂರ್ವಕವಾಗಿ ನಂಬಿದ ಪ್ರಸ್ತುತ ಅನುವಾದವು ವಾಕ್ಯಗಳ ಹಾಗೂ ಅರ್ಥಸಂದರ್ಭಗಳ ಸಹಜತೆ, ಸ್ಫುಟಾಭಿಪ್ರಾಯ ಸಮನ್ವಿತತೆ ಮತ್ತು ನಾಟಕೀಯ ವೇಗಧ್ವನಿಗಳನ್ನ ಕನ್ನಡದಲ್ಲಿ ಮೂಡಿಸುವುದಕ್ಕೆ ಪ್ರಥಮ ಪ್ರಾಶಸ್ತ್ಯವನ್ನು ಕೊಟ್ಟಿದೆ. ಆದರೂ ಮೂಲದ ಅಕ್ಷರಾರ್ಥ ಬೇಕೆನ್ನಿಸಿದಾಗ ತಿಳಿದುಕೊಳ್ಳಲು ಅನುಕೂಲವಾಗಲೆಂದು ಪದ್ಯಗಳಲ್ಲಿ ಸ್ವಯಂಭೃತ ಪದಾವಳಿಗಳನ್ನು ಆವರಣ ಚಿಹ್ನಗಳ ನಡುವೆ ಇಡಲಾಗಿದೆ. ಹೀಗಿದ್ದರೂ ಹೆಚ್ಚಾಗಿ ಗದ್ಯವೂ ಪದ್ಯವೂ ಅಕ್ಷರಾರ್ಥವನ್ನು ಶಕ್ಯವಿದ್ದ ಅನೇಕ ಕಡೆಗಳಲ್ಲಿ ಉದ್ದಕ್ಕೂ ಅನುಸರಿಸಿಕೊಂಡೇ ಹೋಗಿವೆ ಎಂಬುದನ್ನು ಯಾರೂ ಮರೆಯಬಾರದು. ಇಲ್ಲವಾದರೆ ಇದು ದಿಙ್ನಾಗನ ನಾಟಕವಾಗುವುದರ ಬದಲು ಭಾಷಾಂತರಕಾರನ ನಾಟಕವಾದೀತು!

ಕನ್ನಡ ನಾಡಿನ ಸಾರ್ವಜನಿಕರು ಸಂಗೀತ ನಾಟಕವನ್ನು ಬಿಟ್ಟು ಕೇವಲ ಗದ್ಯರೂಪದ ಸಂವಾದಗಳಿಂದ ಕೂಡಿದ ಶಾಲೆ, ಕಾಲೇಜು, ಕರ್ನಾಟಕ ಸಂಘಗಳ ಉತ್ಸವ ಸಂದರ್ಭಗಳಲ್ಲಿ ಆಡುವ ಚಿಕ್ಕ–ದೊಡ್ಡ ಸಾಮಾಜಿಕ ನಾಟಕಗಳನ್ನು ದುಡ್ಡು ಕೊಟ್ಟು ನೋಡಿ ಪ್ರೋತ್ಸಾಹಿಸುವುದಿಲ್ಲ; ದುಡ್ಡು ಕೊಡಬೇಕಾಗಿಲ್ಲವೆಂದಾಗ ಹಾಗೇ ನೋಡಿ ಹರಸಿಹೋಗುತ್ತಾರೆ. ಈ ಪರಿಸ್ಥಿತಿಯು ಕೈಲಾಸಂ–ಶ್ರೀರಂಗರಂತಹ ನಾಟಕಕಾರರು ಬರೆದ ನಾಟಕಗಳಿಗೂ ಅನ್ವಯಿಸುತ್ತದೆ. ಆದರೆ ಸದ್ಯಃ ಹಳೆಯ ಅಭಿಜಾತ ನಾಟಕವೊಂದನ್ನು ಭಾಷಾಂತರಿಸುವಾಗ ಅದರ ಪದ್ಯಗಳೆಲ್ಲವನ್ನೂ ಸಂಗೀತ ರಚನೆಗಳಿಗೆ ಪರಿವರ್ತಿಸಿದರೆ ಸಾಮಾನ್ಯ ಓದುಗನಿಗೆ ತೊಂದರೆಯುಂಟಾದೀತು ಎಂದು ಭಾವಿಸಿ ಒಂದು ಮಧ್ಯ ಮಾರ್ಗವನ್ನು ಹಿಡಿಯಲಾಗಿದೆ. ಇತರ ಕೆಲ ಅನುವಾದಕಾರರಂತೆ ಹಳಗನ್ನಡ ವೃತ್ತಗಳಿಗೆ ಮೂಲ ಪದ್ಯಗಳನ್ನು ಪರಿವರ್ತಿಸಲಿಲ್ಲ; ಹಾಗಲ್ಲದೆ ಸಂಗೀತ ಕೃತಿಗಳ ಆಕೃತಿಗಳಿಗೂ ರೂಪಾಂತರ ಮಾಡಿಲ್ಲ: ಕನ್ನಡದ ಜಾತಿಚ್ಛಂದಗಳ ಗಣಗತಿಗಳಿಗನುಸಾರವಾಗಿ (ಹೊಸಗನ್ನಡದ ಸರಳ–ಮುಕ್ತಾದಿ ನವ್ಯಸ್ವರೂಪಗಳನ್ನು ಬಿಟ್ಟು) ತಾಳ–ಲಯಬದ್ಧವಾಗಿ (ಪ್ಲುತರಹಿತವಾಗಿ) ಹಾಡಲು ಅನುಕೂಲವಾಗುವಂತೆ ಮೂಲದ ವೃತ್ತ–ಶ್ಲೋಕಗಳನ್ನು ಅನುವಾದಿಸಲಾಗಿದೆ. ಕೇವಲ ಕುಶಲವರು ಹಾಡುವ ರಾಮಾಯಣ ಕಥಾಭಾಗವೊಂದನ್ನು ಆದಿತಾಳದ ಕಲ್ಯಾಣಿರಾಗದ ಛಂದಸ್ಸಿನಲ್ಲಿ (ಪಲ್ಲದ ಆದಿಯಲ್ಲಿ ಮಾತ್ರ ಪ್ಲುತಪ್ರಯೋಗವನ್ನಿಟ್ಟು) ರಚಿಸಲಾಗಿದೆ. ಜಾತಿಚ್ಛಂದದ ವಿವಿಧ ಆಕೃತಿಗಳಲ್ಲಿ ಬರೆದ ಇತರ ಪದ್ಯಗಳನ್ನು ಓದುಗನು ಗದ್ಯದಂತೆ ಓದಿಯೂ ಅರ್ಥ ಮಾಡಿಕೊಳ್ಳಬಹುದು; ಇಲ್ಲವೆ ನಟರು ಬಲ್ಲವರಿಂದ ಸುಲಭವಾಗಿ ಸಂಗೀತದ ರಚನೆಗಳನ್ನಾಗಿಯೂ ಪರಿವರ್ತಿಸಿಕೊಂಡು ಹಾಡಬಹುದು. ಮುಖ್ಯವಾಗಿ

ಈ ನಾಟಕವನ್ನು ರಂಗದ ಮೇಲೆ ಆಡಿ ತೋರಿಸಲು ಅನುಕೂಲವಾಗಬೇಕು ಎಂಬುದು ತಾತ್ಪರ್ಯ. ರಂಗದರ್ಶನವಿಲ್ಲದೆ ಹೋದರೆ ಚತುರ್ವಿಧವಾದ ಅಭಿನಯ ಮಾಧ್ಯಮದಿಂದ ಭಾವಿಸಿಕೊಳ್ಳಬೇಕಾದ ನಾಟಕದ ತಾತ್ಪರ್ಯವು ಏಕಮಾಧ್ಯಮದಿಂದ (ಕೇವಲ ವಾಚಿಕಾಭಿನಯದ ಮೂಲಕ) ಅಪೂರ್ಣವಾಗಿ ಗ್ರಹಿಸಲ್ಪಡುವ ದುರವಸ್ಥೆಯು ಪ್ರಾಪ್ತವಾಗಿ ಅಪವಿಮರ್ಶೆಗೆ ತುತ್ತಾಗುವ ಸಂಭವವಿದೆ. ಏಕೆಂದರೆ, ಅಧ್ಯಾಹೃತವಾಗುವ (ಇತರ ಅಭಿನಯಗಳಿಂದ ವ್ಯಂಜಿಸಲ್ಪಡಬೇಕಾದ) ಭಾವವಿವರಗಳೆಲ್ಲವನ್ನೂ ಕೇವಲ ಓದಿ ಊಹಿಸುವ ಶಕ್ತಿ ಎಲ್ಲರಿಗೂ ಬೇಕಾದಷ್ಟು ಪ್ರಮಾಣದಲ್ಲಿ ಇರಲಾರದು. ಇದನ್ನು ನೆನೆದು ಮೂಲವನ್ನು ಭಾಷಾಂತರಿಸುವಾಗ ಯಥಾಶಕ್ತಿಯಿಂದ ತಾತ್ಪರ್ಯಕ್ಕೆ ಅವಿರುದ್ಧವಾದ ಅಕ್ಷರಾರ್ಥವನ್ನೇ ಹಿಡಿದು ಕನ್ನಡತನದ ಶೈಲಿಯ ವಿಶಿಷ್ಟತೆಗನುಗುಣವಾಗಿ ಸಾಗಲಾಗಿದೆ. ಪಂಡಿತ–ಪಾಮರ ಉಭಯ ರಂಜಕತ್ವವೇ ಇದರ ಗುರಿ.

ರಸಾಸ್ವಾದದ ದೃಷ್ಟಿಯಿಂದ ಅಡ್ಡ ಬರಬಹುದಾದ ಅಡೆತಡೆಗಳನ್ನು ತೆಗೆದುಹಾಕಲು ಅಲ್ಲಲ್ಲಿ ಅಡಿಟಿಪ್ಪಣಿಗಳನ್ನು ಕೊಡುತ್ತ ಹೋಗಲಾಗಿದೆ. ಅದರ ಲಾಭಾಲಾಭಗಳನ್ನು ವಿಮರ್ಶಕದೃಷ್ಟಿಯ ರಸಿಕರಿಗೇ ಬಿಟ್ಟು ಬಿಡಲಾಗಿದೆ. ಬೇಕಾದರೆ ಈ ಮೊದಲ ಮಾತನ್ನೂ ಅಡಿಟಿಪ್ಪಣಿಗಳನ್ನೂ ಬಿಟ್ಟು ಕೂಟ ರಸಿಕರು ಓದಿ ರಸಾಸ್ವಾದ ಮಾಡಬಹುದು. ಅತ್ಯಂತ ಅಸಮರ್ಥನೀಯ ಅಂಶಗಳನ್ನು ಬಿಟ್ಟು ಕ್ಷಮ್ಯವಾದ ಗ್ರಂಥಕರ್ತೃಗತ ಲೋಪದೋಷಗಳನ್ನು ತಿದ್ದಿಕೊಂಡು ಅರ್ಥಮಾಡಿಕೊಳ್ಳುವ ಪರಂಪರಾಗತ ವ್ಯಾಖ್ಯಾನ ಪದ್ಧತಿಯ ದೃಷ್ಟಿಕೋನದಿಂದ ಅನುವಾದ ಉದ್ದಕ್ಕೂ ಸಾಗಿದೆ ಎಂಬುದನ್ನು ಈ ಮೂಲಕ ಸ್ಪಷ್ಟಪಡಿಸಲಾಗುತ್ತದೆ. ಭಾಷಾಂತರದಲ್ಲಿ ಮೂಲದ ಸ್ವಾರಸ್ಯ ಕೆಡದಂತೆ (ಅದಕ್ಕೆ ಪುಷ್ಟಿ ದೊರೆವಂತೆ) ಲೋಪ–ಆಗಮ–ಆದೇಶರೂಪದ ಆ ಈ ಪದಗಳನ್ನು ವಿರಳವಾಗಿ ಬಳಸಿರುವುದರಿಂದಲೇ ಈ ವಿವರಣೆಯನ್ನಿಲ್ಲಿ ಕೊಡಬೇಕಾಯಿತು. ಹೀಗೆ ಮಾಡಲು ಆಗಲೇ ಹೇಳಿದಂತೆ ಮೂಲದ ಭಾಷಾಂತರವು ಆಡಬಹುದಾದ ಸ್ವಾಭಾವಿಕ ಶೈಲಿಯ ನಾಟಕವಾಗಿರಬೇಕಲ್ಲದೆ, ಕೇವಲ ಅರ್ಥಾವಧಾರಣಕ್ಕೆ ಸಹಕಾರಿಯಾದ ಭಂಡಾರಸ್ಥ ಸಹಾಯಕ ಪುಸ್ತಕ (reference book)ವಾಗಿರಬಾರದು – ಎಂದು ಭಾವಿಸಿದ್ದೇ ಕಾರಣ.

**ಕುಂದಮಾಲೆಯ ಸಂಕೇತ :** 'ಕುಂದಮಾಲೆ'ಯೊಂದು ಆಕರ್ಷಕವಾದ ಕಾವ್ಯಮಯ ಸಂಕೇತ. ಇದರ ಅನನ್ಯತೆಯು 'ಹಿಂಡಬಾರದು ದುಂಡು ಮಲ್ಲಿಗೆಯ ದಂಡೆಯನು' ಎಂದ ಶ್ರೀ ಕೆ.ಎಸ್.ನರಸಿಂಹಸ್ವಾಮಿಯವರ ಸಾಲನ್ನು ನೆನೆದಾಗ ಗೊತ್ತಾಗುತ್ತದೆ. ಸೀತೆ ಇಲ್ಲಿ ಒಂದು ಮಲ್ಲಿಗೆಯ ಮಾಲೆಯಂತಿದ್ದಾಳೆ. ಗಂಗೆಯಲ್ಲಿ ಅವಳು ತೇಲಿ ಬಿಡುವ ಕುಂದಮಾಲೆಯು ಅರಣ್ಯದಲ್ಲಿ ಗೊತ್ತುಗುರಿ ಇಲ್ಲದೆ ರಾಮಲಕ್ಷ್ಮಣರು

ಅವಳನ್ನು ಬಿಟ್ಟು ಬರಲು ನಿರ್ಧರಿಸಿದ್ದನ್ನು ಸಂಕೇತಿಸುತ್ತದೆ. ಅದು ಆಕಸ್ಮಿಕವಾಗಿ ವಿಹರಿಸುತ್ತ ಅಲ್ಲಿಗೆ ಹೋದ ರಾಮನ ಪಾದವನ್ನು ಸೇರುವಂತೆ ಸೀತೆಯಾದರೂ ಅಕಸ್ಮಾತ್ತಾಗಿ ಯಜ್ಞಕಾಲದಲ್ಲಿ ವಾಲ್ಮೀಕಿಯ ಮೂಲಕ ರಾಮಸಾನ್ನಿಧ್ಯವನ್ನು ಸೇರುತ್ತಾಳೆ. ನೀರು–ನೆಲಗಳು ಮಾನವ ಜೀವನದ ಭೌತಿಕ ಆಧಾರಗಳು. ಸೀತೆಯ ತಾಯಿ ಭೂದೇವಿ; ಭೂದೇವಿಯ ಪ್ರಾಣಸಖಿ ಗಂಗೆ. ಆದುದರಿಂದ ಗಂಗೆಗೆ ಮಾಡಿಕೊಂಡ ಅರಿಕೆ ಭೂಮಿತಾಯಿಗೆ ಕೊನೆಯಲ್ಲಿ ಮುಟ್ಟುತ್ತದೆ. ಭೂದೇವಿಯು ಶ್ರೀಮನ್ನಾರಾಯಣನ ಪತ್ನಿ. ಅವಳನ್ನು ದೇವ–ದಾನವ–ಮಾನವರೆಲ್ಲರೂ ಪೂಜ್ಯೆ ಎಂದು ನಂಬಿದ್ದಾರೆ. ಅವಳ ಮಾತನ್ನು ನಂಬದ ದೇವತಾ ವಿಶೇಷವಿಲ್ಲ. ಆದುದರಿಂದ ಅವಳನ್ನೆ ನಾಟಕಕಾರನು ಔಚಿತ್ಯೈಕನಿಕೇತನನಾಗಿ ಸೀತಾಪಾತಿವ್ರತ್ಯಕ್ಕೆ ಸಾಕ್ಷಿ ಕೊಡಲು ಪಾತಾಳದಿಂದ ಭೂಲೋಕಕ್ಕೆ ಕರೆಯಿಸಿದ್ದಾನೆ. ಇಲ್ಲಿ ಕಂಡುಬರುವ ನಾಟಕೀಯ ಅದ್ಭುತ ಗಾಂಭೀರ್ಯವನ್ನು, ಈ ಸಂದರ್ಭವನ್ನು ಚಿತ್ರಿಸುವ ಇತರ ಯಾವ ನಾಟಕವೂ ಮೂಡಿಸಿಲ್ಲ ಎನ್ನಬಹುದಾಗಿದೆ. ಇಲ್ಲಿಯ ಭೂದೇವಿಯ ಅವತಾರವು ಅವತರಣವಲ್ಲ (ಕೆಳಕ್ಕೆ ಇಳಿಯುವುದಲ್ಲ); ಉದ್ಧರಣ: ಸೀತೆಯ ಪಾತಿವ್ರತ್ಯದ ಸತ್ಯನಿಷ್ಠೆಯ ಪ್ರಭಾವವು ಭೂದೇವಿಯನ್ನು ಪಾತಾಳದಿಂದ ಮೇಲಕ್ಕೆ ಎಳೆದು ತರುತ್ತದೆ; ಎಂದರೆ ಸೀತೆಯನ್ನು ಭೂದೇವಿ ಸತ್ಯವಂತೆಯನ್ನಾಗಿ ದೃಢಪಡಿಸಿದ ಸಂದರ್ಭದ ಗರ್ಭದಲ್ಲಿ ಸೀತೆಯು ಭೂಮಿಯನ್ನು ಉದ್ಧರಿಸಿದ (ಮೇಲಕ್ಕೆ ಎತ್ತಿದ) ಅರ್ಥವು ಅಡಗಿರುವುದು ಸುವೇದ್ಯ. ಇದು ನಾಟಕದ ಮಹಾಧ್ವನಿ: 'ಸತ್ಯೇನ ವಿಧೃತಂ ಸರ್ವಂ' ಎಂಬ ವ್ಯಾಸವಾಣಿಯ ಪ್ರಾತ್ಯಕ್ಷಿಕೆ.

ವೇದದಲ್ಲಿ 'ಸೀತೆ' ಎಂದರೆ ಗದ್ದೆಯಲ್ಲಿ ಉತ್ತು ಮಾಡಿದ ಆವಳಿ (furrow). ಅವಳು ಅಲ್ಲಿ ಕೃಷಿಪೋಷಕ ದೇವತೆ. 'ಕೃಷಿ' ಎಂದರೆ (culture)ಪರಿಷ್ಕೃತವಾದದ್ದು ಅಥವಾ ಸಂಸ್ಕೃತವಾದದ್ದು – ಎಂದರ್ಥ. ಕೃಷ್ಟಿಗಳು ಅಥವಾ ಸುಸಂಸ್ಕೃತರು, ಪ್ರಜೆಗಳು (ಪ್ರಕೃಷ್ಟವಾಗಿ ಜನಿಸಿದವರು, ನಿಕೃಷ್ಟವಾಗಿ ಅಲ್ಲ). ನೈಸರ್ಗಿಕನು ಪ್ರಾಕೃತ, ಅಸಂಸ್ಕೃತ, ಪ್ರಾಣಿ ಧರ್ಮಾನುಯಾಯಿ. ತಾಮಸ–ರಾಜಸವರ್ತನಗಳು ಮನುಷ್ಯಾದಿ ಪ್ರಾಣಿ ಸಾಧಾರಣ. ಸಾತ್ವಿಕತೆಯು ದಿವ್ಯವಾದ ಪರಾಪ್ರಕೃತಿ ಅಥವಾ ಶ್ರೇಷ್ಠ ಸ್ವಭಾವ. ಸೀತೆಯು ಅದರ ಸಂಕೇತ. ರಾಮನ ಸತ್ಯೋನ್ಮುಖವಾದ ರಾಜಧರ್ಮದ ರಾಜಸಕ್ಕೆ ಸೀತೆಯ ಆರ್ಷಧರ್ಮದ ಸಾತ್ವಿಕತೆ ಕಲಶಪ್ರಾಯವಾದುದು. ಇಂಥ ಸಮಾಗಮವು ಭೂಪತಿಯತಿಯ ಅಥವಾ ರಾಜರ್ಷಿಯ (philosopher-king) ಆದರ್ಶವನ್ನು ನೆನಪಿಗೆ ತಂದು ಕೊಡುತ್ತದೆ. ಆದ್ದರಿಂದ ಸೀತಾರಾಮರ ರಾಜ್ಯವು ರಾಮರಾಜ್ಯ; ಸೀತಾರಹಿತವಾದ ರಾಜ್ಯವು ರಾಮರಾಜ್ಯವಲ್ಲ!

**ಪರಿತ್ಯಾಗದ ಅರ್ಥ :** 'ರಾಮಸೀತಾಲಕ್ಷ್ಮಣ' ಎಂದರೆ ರಾಮ ಸೀತಾ ಲಕ್ಷಣ. ಈ ಲಕ್ಷಣಗಳ ಅವತಾರ ಕುಶಲವರಲ್ಲಾಗಿದೆ ಎಂಬುದನ್ನು ತೋರಿಸಲು ನಾಟಕಾಂತ್ಯದಲ್ಲಿ ರಾಜ್ಯ–ಯೌವರಾಜ್ಯ ಪಟ್ಟಾಭಿಷೇಕಗಳು ಅವರಿಗಾಗುತ್ತವೆ. ಲಕ್ಷ್ಮಣನು ಸೀತೆಯ

ಪುರುಷಾವತಾರವಾಗಿ ಇಲ್ಲಿ ತೋರುವುದರಿಂದ ಅವನು ಗುಣಶಃ ಸೀತಾಪಾತ್ರದಲ್ಲಿ ಲೀನ: ಲಕ್ಷ್ಮಣ ಸೀತೆಯರು ರಾಮತ್ವದ ಅರ್ಧಭಾಗವನ್ನು ಪ್ರತಿನಿಧಿಸುತ್ತಾರೆ. ಸೀತಾ ತ್ಯಾಗವನ್ನು ಜನರ ಸಮಾಧಾನಕ್ಕಾಗಿ (ಒಬ್ಬ ಅಗಸನ ಸಮಾಧಾನಕ್ಕಾಗಿ ಅಲ್ಲ) ಕೈಕೊಂಡ ರಾಮನು ನಾಟಕಾಂತ್ಯದಲ್ಲಿ ರಾಜ್ಯತ್ಯಾಗವನ್ನು ಮಾಡುವುದು (ಅಂದರೆ ಕುಶಲವರಿಗೆ ವಹಿಸಿಕೊಡುವುದು) ಅವನ ವ್ಯಕ್ತಿತ್ವ ಚಾರಿತ್ರ್ಯಗಳಿಗೆ ಕಿರೀಟವನ್ನಿಡುತ್ತದೆ. “ತೇನ ತ್ಯಕ್ತೇನ ಭುಂಜೀಥಾಃ” ಎಂದ ಈಶಾವಾಸ್ಯದ ಸಂದೇಶವನ್ನು ಈ ನಾಟಕದಲ್ಲಿ ರಾಮನು ಆಚರಿಸಿ ತೋರಿಸುತ್ತಾನೆ. ಯಾಗವು ತ್ಯಾಗಪ್ರಧಾನವಾದ ಮಹಾಕರ್ಮ. ನೈಮಿಷಾರಣ್ಯದಲ್ಲಿ ಯಜ್ಞವನ್ನು ರಾಮ ಮಾಡಹೊರಟದ್ದು ಸೀತಾತ್ಯಾಗವನ್ನು ಮಾಡಿದ ಅನಂತರ. ಆ ಯಜ್ಞ ಮುಗಿಯಿತೋ ಇಲ್ಲವೋ ಎಂಬುದನ್ನು ಸ್ಪಷ್ಟವಾಗಿ ಈ ನಾಟಕದ ಕವಿ ಹೇಳದೆ ಇರಲು, ಸೀತಾತ್ಯಾಗದ (ಅಂದರೆ ಅವಳ ಪತ್ನೀತ್ವದ ಶಾರೀರಿಕ ಸ್ವರೂಪದ ಸಂಪರ್ಕವನ್ನು ತ್ಯಾಗಮಾಡಿದ) ರೂಪದಲ್ಲಿ ಆಗಲೇ ಅರ್ಧ ಯಜ್ಞವನ್ನು ಮುಗಿಸಿದ್ದ ರಾಮನು ಕೊನೆಯಲ್ಲಿ ರಾಜ್ಯ ತ್ಯಾಗವನ್ನು ಮಾಡುವುದರ ಮೂಲಕ ಪ್ರಾರಂಭಿಸಿದ ಯಜ್ಞವನ್ನು ಸಾರ್ಥಕವಾಗಿ ಮುಗಿಸಿದನು ಎಂಬುದನ್ನು ಧ್ವನಿಸಲು ಯುತ್ನಿಸಿದ್ದೇ ಕಾರಣ. ಸೀತಾ ಹೃದಯುವನ್ನು ತನ್ನಲ್ಲಿ ಸಮನ್ವಯಿಸಿಕೊಂಡಿರುವುದನ್ನು ಆಮೇಲೆ ಭೂದೇವೀ ಸಾಕ್ಷಿಯಾಗಿ ಅವಳನ್ನು ಶರೀರತಃ ಪುನಃ ಸ್ವೀಕರಿಸಿ ಸಾಮಾನ್ಯ ಜನರ ಅವಗಾಹನೆಗೆ ತಂದುಕೊಟ್ಟಂತೆಯೇ ರಾಜ್ಯಾಧಿಕಾರ ದಾನವನ್ನು ಮಾಡಿದ ಮೇಲೆ ಕುಶನು ತಂದೆಯ ಅಪ್ಪಣೆಯಂತೆ ನಡೆದುಕೊಳ್ಳುವ ಪ್ರವೃತ್ತಿಯನ್ನು ತೋರಿಸಿದ್ದು ರಾಜ್ಯಾಧಿಕಾರದ ಅಂತರ್ಹೃದಯವನ್ನು ರಾಮನು ಸಾತ್ಮ್ಯಗೊಳಿಸಿಕೊಂಡನೆಂಬುದನ್ನು ಸಮರ್ಥವಾಗಿ ಸೂಚಿಸುತ್ತದೆ. ರಾಜ್ಯತ್ಯಾಗ ಮಾಡಿದ ರಾಮನ ಸ್ಥಾನವು ಕೃಷ್ಣ–ಗಾಂಧಿಗಳ ಸ್ಥಾನಕ್ಕೆ ಸದೃಶ ಎನ್ನಬಹುದು. ಕೃಷ್ಣನು ರಾಜನಿರ್ಮಾಪಕ, ಗಾಂಧಿಯವರು (ಜವಾಹರರಂಥ) ಮಂತ್ರಿಗಳನ್ನು ನಿರ್ಮಿಸಿದವರು. ಕುಶಲವರಿಂದ ಆಮೇಲೆ ರಾಜ್ಯಕ್ಕೆ ಕುಶಲವಲ್ಲದೆ ಇನ್ನಾವುದೂ ಸಂಭವಿಸದು. ಕುಶೀಲವ, ಕುಶೀವಾಸ ಎಂಬಿವು ವಾಲ್ಮೀಕಿಯ ಹೆಸರುಗಳು. ಕುಶಲವರು ರಾಮಸೀತೆಯರ ಔರಸಪುತ್ರರಾದರೆ ಧರ್ಮದ ಹುತ್ತವಾದ ವಾಲ್ಮೀಕಿಯ ಮಾನಸಪುತ್ರರು. ಕುಶದ (ದರ್ಭೆಯ) ಲವ (ಚೂರು) ಸೀತಾರಾಮರ ಅರ್ಧನಾರೀಶ್ವರ ಸಮನ್ವಯದ ಒಂದು ಅಂಶ ಎಂದೂ ಆಗಬಹುದು. ದರ್ಭೆಯು ಪಾವಿತ್ರ್ಯದ ಸಂಕೇತ, ಶುದ್ಧಿಯ ಸೂಚೀಪತ್ರ. ಒಳ ಹೊರ ಶುಚಿ ಇಲ್ಲದವರಿಂದ ಜಗದ್ಧಿತ ಎಂದೂ ಸಾಧ್ಯವಾಗಲಾರದು ಎಂಬುದು ದಿಙ್ನಾಗನು ದಿಗ್ಗಜ ಧ್ವನಿಯಿಂದ ಈ ನಾಟಕದ ಮೂಲಕ ಕೊಟ್ಟ ಸಂದೇಶ. The Elemental is to be unearthed from the mental- ಮಾನಸ ದೃಶ್ಯವಾದ ಈ ಸಂಮಿಶ್ರ, ಪಾಂಚ ಭೌತಿಕ, ಶರೀರೇಂದ್ರಿಯ ನಿಷ್ಠ ಜೀವನದಲ್ಲಿ ಮಾಡಿದ ಆತ್ಮಶೋಧದ ಪ್ರಯತ್ನವು ಶುದ್ಧ ಪೃಥಿವೀ ತತ್ವದ ಸಾಕ್ಷಾತ್ಕಾರದಲ್ಲಿ ಮುಗಿತಾಯವಾಗುವಂತೆ ಕವಿ

ಚಿತ್ರಿಸಿರುವುದು ರಾಮನು ಮನಸ್ಸು, ಸೀತೆ ಅವನ ಆತ್ಮ ಎಂಬುದನ್ನು ಹೊಳೆಯಿಸುತ್ತದೆ. ಆತ್ಮ–ಸತ್ಯಗಳು ಅಭಿನ್ನ. ಪೃಥಿವಿಯ, ಮನದ ಮತ್ತು ಇತರ ಮೂರ್ತ ಪದಾರ್ಥಗಳೆಲ್ಲವುಗಳ ಅಂತಃಸಾರರೂಪದ ನಿತ್ಯಸತ್ಯ ಅಥವಾ ಆತ್ಮವು ಸೀತೆಯ ಶುದ್ಧ ಹೃದಯದಿಂದ ಸೂಚಿತವಾಗುತ್ತದೆ. ಇದು ರಾಮಾಯಣದ ಅಂತರರ್ಥವನ್ನು ಹೇಳುವ ಕಾಲ್ಪನಿಕ ಸಾಹಸಕೃತ್ಯವಲ್ಲ. 'ಆದಿರಾಜಯಶೋಬಿಂಬಂ ಆದರ್ಶಂ ಪ್ರಾಪ್ಯವಾಙ್ಮಯಂ । ತೇಷಾಮಸನ್ನಿ ಧಾನೇಽಪಿ ನ ಸ್ವಯಂ ಪಶ್ಯ ನಶ್ಯತಿ' ಎಂಬ ದಂಡಿಯ ಮಾತಿನಂತೆ ಅಥವಾ ಡಾ॥ ರೇನೆ ವೆಲೆಕ್ (Rene Wellek) ಮಹಾಶಯನು Literature and Ideas-ಸಾಹಿತ್ಯ ಮತ್ತು ಅವುಗಳ ಅಂತರ್ವಾಹಿನಿಯಾದ ಭಾವಗಳು (ಅಭಿಪ್ರಾಯ, ಕಲ್ಪನೆ, ಮಹಾವಿಚಾರ ಅಥವಾ ತತ್ವಗಳು)– ಎಂಬ ಪ್ರಕರಣದಲ್ಲಿ ಹೇಳಿರುವಂತೆ ನಾಟಕಾಂತರ್ಗತವಾದ ರಸಾಸ್ವಾದೋತ್ತರ ಕಾಲದ ಚಿಂತನಾಂಶಗಳನ್ನು (ಡಿ.ವಿ.ಜಿ. ಅವರ 'ಸಾಹಿತ್ಯಶಕ್ತಿ' ಯಲ್ಲಿ ಹೇಳಿರುವಂತೆ) ಶೋಧಿಸಲು ಮಾಡಿದ ಅಲ್ಪ ಪ್ರಯತ್ನ. ಸಾಹಿತ್ಯದ ಕನ್ನಡಿಯಲ್ಲಿ ಧ್ವನಿಖಚಿತವಾಗಿರುವ ಸಾಂಸ್ಕೃತಿಕ ಮಹಾ ಮೌಲ್ಯಗಳನ್ನು ಮಹಾಭಾರತ–ರಾಮಾಯಣಗಳಲ್ಲಿ ಮತ್ತು ಅವನ್ನಾಧರಿಸಿ ಬರೆದ ಗ್ರಂಥಗಳಲ್ಲಿ ಹುಡುಕಿದರೆ ಅಸ್ವಾಭಾವಿಕವೆಂದೆನ್ನಿಸಲಾರದಲ್ಲವೇ?

**ದಿಙ್ನಾಗ ಮಾಡಿದ ಹೊಸ ಬದಲಾವಣೆಗಳು :** ದಿಙ್ನಾಗನು ಕಾಳಿದಾಸನಂತೆ ('ರಘುವಂಶ'ದಲ್ಲಿ ಕಂಡುಬರುವಂತೆ) ರಾಮವಂಶದ ಅನುಕ್ರಮವನ್ನು ತನಗೆ ದೊರೆತ ವಿಶಿಷ್ಟ ಆಕರದಿಂದ ಆಯ್ದುಕೊಂಡಿರಬೇಕಲ್ಲದೆ, ವಾಲ್ಮೀಕಿಯ ರಾಮಾಯಣದ ಉಪಲಬ್ಧ ರೂಪದಿಂದ ಅಲ್ಲ. ಸೀತಾ ದುರಂತವನ್ನು ಉಲ್ಲೇಖಿಸದಿದ್ದ ಪ್ರಾಚೀನತರ ರಾಮಾಯಣ ರೂಪದಿಂದ ಕವಿ ಕಥಾವಸ್ತುವನ್ನು ಆಯ್ದುಕೊಂಡು ಈ ನಾಟಕದಲ್ಲಿ ಸಂವಿಧಾನಿಸಿರಬೇಕು– ಎಂಬುದು ವಿದ್ವಾಂಸರ ತರ್ಕ. ದಿಙ್ನಾಗನು ಅನುಪ್ರವೇಶಿಸಿದ ನವಾಂಶಗಳು:

(೧) ವಾಲ್ಮೀಕಿಯ ಎಲೆವನೆಯನ್ನು ಸೇರಲು ಬಯಸಿ ಸೀತೆಯೊಡನೆ ಲಕ್ಷ್ಮಣನು ಗಂಗಾನದಿಯನ್ನು ದಾಟಲಿಲ್ಲ. ವಾಲ್ಮೀಕಿಯ ಆಶ್ರಮ ತಮಸಾ ನದಿಯ ದಂಡೆಯ ಮೇಲಿರುವ ಸನ್ನಿವೇಶ ಈ ನಾಟಕದಲ್ಲಿಲ್ಲ.

(೨) ರಾಮಾಯಣದಲ್ಲಿರುವಂತೆ ಮೊದಲೇ ವಾಲ್ಮೀಕಿಗೆ ಸೀತೆ ಬರುವಳೆಂಬುದು ಗೊತ್ತಾಗಿರುವ ಸಂಗತಿ ನಾಟಕದಲ್ಲಿಲ್ಲ.

(೩) ಗಂಗಾ ಗೋಮತೀ ಸಂಗಮದ ಪರಿಸರದ ಜಲ ಪ್ರವಾಹದಲ್ಲಿ ರಾಮಲಕ್ಷ್ಮಣರಿಗೆ ಸೀತೆ ತೇಲಿಬಿಟ್ಟ ಕುಂದಮಾಲೆ ದೊರಕುವುದು ಮತ್ತು ಅದು ಸೀತೆಯದೆಂದೇ ಗುರುತಿಸಿ, ಹೆಜ್ಜೆ ಹಿಡಿದು ಸೀತೆಯಿರುವ ಸ್ಥಳದ ಹತ್ತಿರದಲ್ಲಿ ಹೋಗಿ ಕುಳಿತು (ಸೀತೆ ಅಲ್ಲಿರುವುದನ್ನು ಅರಿಯದೆ) ಅವಳನ್ನು

ನೆನೆದು ವಿಧವಿಧವಾಗಿ ವಿಲಪಿಸುವುದು ಹಾಗೂ ಅದನ್ನು ಅಲ್ಲೇ ಅಡಗಿದ್ದ ಸೀತೆ ಕೇಳುವುದು.

(೪) ಅಲ್ಲಿದ್ದ ಕೆರೆಯ ಏರಿಯ ಮೇಲೆ ಋಷಿ ಕನ್ಯೆಯರೊಡನೆ ಸೀತೆ ವಾಲ್ಮೀಕಿಯ ವರದ ದೆಸೆಯಿಂದ ಅದೃಶ್ಯಳಾಗಿರುವುದು ಮತ್ತು ಅವಳ ನಿಜರೂಪದ ಪ್ರತಿಬಿಂಬವನ್ನು ರಾಮನು ನೀರಿನಲ್ಲಿ ಕಾಣುವುದು. ರಾಮ ಸೀತೆಯನ್ನು ಮುಟ್ಟಲು ಪ್ರಯತ್ನಿಸಿ ವಿಫಲವಾಗಿ ಮೂರ್ಛೆ ಬೀಳುವುದು ಮತ್ತು ಸೀತೆ ತನ್ನ ಮೇಲುದುವಿನಿಂದ ಗಾಳಿಬೀಸಿ ಎಚ್ಚರಿಸುವುದು. ಅವಳ ಆ ಮೇಲುದುವನ್ನು ರಾಮ ಎಳೆದುಕೊಂಡು ಸೀತೆಯುದೆಂದು ಗುರುತಿಸುವುದು ಮತ್ತು ಅದಕ್ಕೆ ಬದಲಾಗಿ ಅವಳು ಅವನೆಸೆದ ಉತ್ತರೀಯವನ್ನು ತೆಗೆದುಕೊಂಡು ಹೋಗುವುದು. ರಾಮ ತನಗೆ ಪ್ರತ್ಯಕ್ಷಳಾಗೆಂದು ಸೀತೆಯನ್ನು ಬೇಡಿಕೊಳ್ಳುವುದು ಮತ್ತು ಈ ಹೊತ್ತಿಗೆ ಸರಿಯಾಗಿ ರಾಮಸಖನಾದ ವಿದೂಷಕನು ಅಲ್ಲಿಗೆ ಬಂದು ಅದೆಲ್ಲಾ ತಿಲೋತ್ತಮೆಯ ಮಾಯೆಯೆಂದು ವಿವರಿಸಿ ರಾಮನ ಮನಸ್ಸಿನಲ್ಲಿ ಕೆಲಕಾಲ ಅದು ಹೌದೆನ್ನಿಸುವಂತೆ ಮಾಡಿಬಿಟ್ಟದ್ದು.

(೫) ಸೀತಾಪರಿತ್ಯಾಗದ ಸಂದರ್ಭದಲ್ಲಿ ರಾಮ ಸೀತೆಯರು ಪರಸ್ಪರ ಸಂದೇಶವನ್ನು ಲಕ್ಷ್ಮಣನ ಮೂಲಕ ಪಡೆದದ್ದು. ವಾಲ್ಮೀಕಿಯ ರಾಮಾಯಣದಲ್ಲಿ ಸೀತೆ ಮಾತ್ರ ರಾಮನಿಗೆ ಸಂದೇಶವನ್ನು ಕಳಿಸುತ್ತಾಳೆ.

(೬) ರಾಮಾಯಣದಲ್ಲಿ ಸೀತೆ ಕೊನೆಯಲ್ಲಿ ಪಾತಾಳಕ್ಕೆ ಹೋಗಿ ಬಿಡುವಳು; ಆದರೆ ಈ ನಾಟಕದಲ್ಲಿ ಅವಳು ಕೊನೆಗೆ ರಾಮನನ್ನು ಕೂಡಿಕೊಂಡು ಸುಖಿಯಾಗುವಳು.

**ರಾಮಕಥೆಯ ಆಕರಗಳು :** (೧) ಭಾಸನ ಅಭಿಷೇಕ ನಾಟಕ, ಪ್ರತಿಮಾನಾಟಕ ಮತ್ತು ಯಜ್ಞಫಲ; (೨) ಕಾಳಿದಾಸನ ರಘುವಂಶ; (೩) ವಿಷ್ಣುಪುರಾಣ; (೪) ಪದ್ಮಪುರಾಣ; (೫) ಹರಿವಂಶ; (೬) ಬ್ರಹ್ಮಪುರಾಣ; (೭) ವಾಯುಪುರಾಣ; (೮) ಭಾಗವತ; (೯) ಭವಭೂತಿಯ ಉತ್ತರರಾಮಚರಿತ ಮತ್ತು ಮಹಾವೀರ ಚರಿತ; (೧೦) ಮಹಾನಾಟಕ; (೧೧) ಛಲಿತ ರಾಮ; (೧೨) ಅನಾಮಕರಾಜ, ದಶರಥ ಮತ್ತು ರಾಜ ನಿದಾನ ಎಂಬ ಜಾತಕಗಳು; (೧೩) ಗುಣಭದ್ರನ ಉತ್ತರ ಪುರಾಣ ಮತ್ತು ವಿಮಲಸೂರಿಯ ಪಉುಮಚರಿಯ; (೧೪) ಸೋಮದೇವನ ಕಥಾಸರಿತ್ಸಾಗರ; (೧೫) ಕೂರ್ಮ–ಅಗ್ನಿ–ಸ್ಕಂದ–ಗರುಡ–ನೃಸಿಂಹ–ನಾರದ–ದೇವಿ–ಬ್ರಹ್ಮ ವೈವರ್ತ– ವಿಷ್ಣುಧರ್ಮೋತ್ತರ ಮುಂತಾದ ಪುರಾಣಗಳು; (೧೬) ವಿದೇಶಗಳಲ್ಲಿ ನಡೆದು ಬಂದ ರಾಮ ಕಥೆಗಳು – ಎಂಬ ವಿವಿಧ ಆಕರಗಳು ರಾಮ ಕಥೆಗಿದ್ದರೂ

ದಿಙ್ನಾಗಕವಿಯ ಕಾಲಕ್ಕಿಂತ (ಕ್ರಿ.ಶ.೫೦೦) ಇವುಗಳಲ್ಲಿ ಎಷ್ಟೋ ಇತ್ತೀಚಿನವು; ಅಲ್ಲದೆ, ತನಗಿಂತ ಹಿಂದಿನ ಹಾಗೂ ಸಮಕಾಲದ ರಾಮಕಥಾ ಗ್ರಂಥಗಳೆಲ್ಲವನ್ನೂ ಅವನು ನೋಡಿರಬಹುದೆಂದು ಊಹಿಸುವುದೂ ಸರಿಯಾಗಲಾರದು. ಪ್ರಸಿದ್ಧ ಕವಿಗಳಾದ ಭಾಸ, ಕಾಳಿದಾಸ ಮತ್ತು ಗುಣಾಢ್ಯರ ಕೃತಿಗಳನ್ನು ದಿಙ್ನಾಗ ಒಮ್ಮೆ ನೋಡಿದ್ದರೂ ನೋಡಿರಬಹುದೆಂದು ಊಹಿಸಬಹುದು. ವಾಲ್ಮೀಕಿಯ ರಾಮಾಯಣವಂತೂ (ಈಗಿಲ್ಲದ ಸ್ವರೂಪದ ಉತ್ತರಕಾಂಡದೊಡನೆ) ಇದ್ದೇ ಇತ್ತು ಅವನ ಕಾಲದಲ್ಲಿ; ಅಂದರೆ ಸೀತೆಯ ಆತ್ಯಂತಿಕ ಪಾತಾಳಗಮನ ಅದರಲ್ಲಿ ಇದ್ದಿಲ್ಲ. 'ತಿಣಿಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ' ಎಂಬ ಮಾತನ್ನು ಕುಮಾರವ್ಯಾಸನು ಕ್ರಿ.ಶ. ೫ನೆಯ ಶತಮಾನದಲ್ಲೇ ಇದ್ದಿದ್ದರೂ ಹೇಳಬಹುದಾಗಿತ್ತು. ಆದುದರಿಂದ ಕಥಾವಸ್ತುವಿನ ಅಸ್ಥಿಪಂಜರದ ವಿಷಯದಲ್ಲಿ ಅನೇಕ ರಾಮಕಥಾಕೃತಿಗಳೊಂದಿಗೆ ಕುಂದಮಾಲೆಯೂ ಬಹಳ ಅನನ್ಯತೆಗೆ ಹೆಸರು ಗಳಿಸಲಾರದು. ಆದರೆ ಮೇಲೆ ಕೊಟ್ಟ ಕೆಲ ನವಾಂಶಗಳ ಅನುಪ್ರವೇಶನವು ಕವಿಯ ಅನನ್ಯತೆ ಕಥಾ ಸಂವಿಧಾನದಲ್ಲಿ ಕೆಲಮಟ್ಟಿಗೆ ಇದೆ ಎಂಬುದನ್ನು ನಿದರ್ಶಿಸುತ್ತದೆ.

**ದಿಙ್ನಾಗನ ರಸೈಕ ದೃಷ್ಟಿ :** ನಾಟಕಕ್ಕೆ ಕಥೆಯೊಂದು ಭಿತ್ತಿ. ಆದುದರಿಂದ ಕವಿಯ ಕಲಾಕೌಶಲ ಇರುವುದು ಅದರ ಘಟನೆಗಳನ್ನು ಸಂವಿಧಾನಿಸುವುದರಲ್ಲಿ, ಪಾತ್ರಗಳನ್ನು ರೂಪಿಸುವುದರಲ್ಲಿ ಮತ್ತು ರಸಾನುಗುಣವಾಗಿ ಸಂವಾದಗಳನ್ನೂ ಕಾರ್ಯಗಳನ್ನೂ ಕಲ್ಪಿಸಿ ಜೋಡಿಸುತ್ತ ಹೋಗುವುದರಲ್ಲಿ. ರಸದ ಹೃದ್ರಸಾಯನ (psycho-chemistry) ಶಾಸ್ತ್ರದಂತೆ ಪಾತ್ರ, ಸನ್ನಿವೇಶ, ಸಂಚಾರಿ ಭಾವಗಳ ಆಂಗಿಕ ಮತ್ತು ಸಾತ್ವಿಕ ಆವಿಷ್ಕರಣಗಳ ಸಮರಸೀಕರಣವಾಗುವಂತೆ ಯೋಜಿಸುವುದು ನಾಟಕ ಕವಿಯ ಜಾಣ್ಮೆಗೆ ನಿಕಷ. ಈ ಅಂಶವನ್ನು ನೆನೆದು ದಿಙ್ನಾಗನ 'ಕುಂದಮಾಲೆ'ಯನ್ನು ಪ್ರೇಕ್ಷಿಸಿದರೆ ಯಾರೂ ನಿರಾಶರಾಗಲಾರರು. ಇದರಲ್ಲಿ ರಸಭಂಗವಾಗುವಂಥ ಸಂದರ್ಭವಿಲ್ಲವಷ್ಟೇ ಅಲ್ಲ; ರಸಪೋಷಕವಾದ ಸಂವಾದ, ಸನ್ನಿವೇಶ, ಕಾರ್ಯಗತಿಗಳ ಜೋಡಣೆ ಬಹಳ ಚೆನ್ನಾಗಿರುವುದು ಕಂಡುಬರುತ್ತದೆ. ಭಾಸನ ನಾಟಕಗಳನ್ನು ಕಂಡಮೇಲೆ ಕಾಳಿದಾಸನ ನಾಟಕಗಳ ಪರಿಣಾಮಕತೆಗಳ ಹೊಗಳಿಕೆ ಹೇಗೆ ಅತಿಯಾಗದೆ ಸಮಸ್ಥಿತಿಗೆ ಬಂತೋ ಹಾಗೇ ಕುಂದಮಾಲೆಯನ್ನು ಸಹೃದಯತೆಯಿಂದ ಕಂಡು ಅನುಭವಿಸಿದ ಮೇಲೆ ಉತ್ತರರಾಮಚರಿತೆ ಮತ್ತು ವೇಣೀ ಸಂಹಾರಗಳ ರಂಗಪ್ರದರ್ಶನಾರ್ಹತೆ ಎಷ್ಟು ನ್ಯೂನವಾದುದು ಎಂಬುದು ಸ್ಪಷ್ಟವಾಗದಿರದು. ನಾಟಕದ ನಾಟಕತ್ವಕ್ಕೆ ಧಕ್ಕೆ ತರುವಷ್ಟು (ಶ್ರವ್ಯ) ಕಾವ್ಯತ್ವ ಕಂಡು ಬರುವ ನಾಟಕವು ಹೇಗೆ ಒಳ್ಳೆಯ ನಾಟಕವೆನ್ನಿಸೀತು? ದೃಶ್ಯ ದೃಶ್ಯವಾಗಿರಬೇಕು, ಶ್ರವ್ಯ ಶ್ರವ್ಯವಾಗಿರಬೇಕು. ಶ್ರವ್ಯ ಕಾವ್ಯವು ನಾಟಕತ್ವವನ್ನು ಅತಿಯಾಗಿ ತೋರುವಂಥದಾದಾಗ ಒಳ್ಳೆಯ ಶ್ರವ್ಯವೆನ್ನಿಸಿಕೊಳ್ಳದು– ಎಂಬುದನ್ನು ಪದ್ಯಕಾವ್ಯದಲ್ಲಿಯ ನಾಟಕೀಯತೆಯನ್ನು ಹೊಗಳುವವರು ಶುದ್ಧಬುದ್ಧಿಯಿಂದ ಪರಾಮರ್ಶಿಸಿ

ತಿಳಿದುಕೊಳ್ಳುವುದೊಳಿತು. ನಾಟಕಕ್ಕೆ ಬೇಕಾದಷ್ಟೇ ಕಾವ್ಯತ್ವವನ್ನು ಇಟ್ಟುಕೊಂಡಿರುವುದರಲ್ಲಿ ದಿಙ್ನಾಗ ಭಾಸ ಸಂಪ್ರದಾಯಕ್ಕೆ ಹತ್ತಿರವಾಗಿದ್ದಾನೆ. ಶ್ಲೋಕಸಂಖ್ಯೆ ಭಾಸನಾಟಕಗಳಿಗಿಂತ ಇಲ್ಲಿ ಹೆಚ್ಚಾಗಿ ಕಂಡರೂ ದಿಙ್ನಾಗನ ಅನುಷ್ಟುಪ್ ಮುಂತಾದ ಚಿಕ್ಕ ಛಂದೋವೃತ್ತಗಳು ಎಷ್ಟೋ ಗದ್ಯಕ್ಕಿಂತ ಬಹಳ ಕಡೆ ಸರಳವಾಗಿವೆ, ಗದ್ಯ ಧಾರೆಯಲ್ಲೇ ಹರಿಯುತ್ತವೆ. ಆದುದರಿಂದ ಅವು ದೂರಾನ್ವಯ ಮುಂತಾದ ಪದ್ಯಸಹಜ ಗುಣಗಳಿಂದ ಮುಕ್ತವಾಗಿವೆ. ಹಾಗೆಂದು ಅಲಂಕಾರಗಳೇ (metaphorical expressions) ಇಲ್ಲದ ಸಪ್ಪೆಯಾದ ಗದ್ಯಾತ್ಮಕ ಪದ್ಯಗಳೂ ಬಹಳ ಇಲ್ಲ; ಬಳಸಿದ ಅಲಂಕಾರಗಳು ವಿರಳ ಮತ್ತು ಸುಂದರ. ಒಂದು ಸಲ ಕಿವಿಯ ಮೇಲೆ ಬಿದ್ದೊಡನೆಯೇ ಚೆನ್ನಾಗಿ ಅರ್ಥವಾಗುವಷ್ಟು ಸುಲಭ ಗ್ರಾಹ್ಯತೆ ನಾಟಕದ ಪದ್ಯಗಳಿಗಿರಬೇಕೆಂಬುದನ್ನು 'ಕುಂದಮಾಲೆ' ನಿದರ್ಶಿಸುತ್ತದೆ.

**ನಾಟಕದ ಸಂವಾದ:** ಸಂವಾದದ ಗತಿಯು ಶೀಘ್ರ; ಆದರೆ ಅಭಿಪ್ರಾಯ ವಿನಿಮಯಕ್ಕೆ ಸಾಕಾಗದಷ್ಟು ಕಡಿಮೆ ವಾಕ್ಯಗಳು 'ಕುಂದಮಾಲೆ'ಯಲ್ಲಿ ಇಲ್ಲ. ಜೊತೆಗೆ ಅಭಿಪ್ರಾಯಸ್ಪಷ್ಟತೆಗೆ ಬೇಕಾದಷ್ಟು ಉದ್ದವಾಗಿಯೂ ಮಾತು–ಕತೆಗಳಲ್ಲಿ ನಡೆಯುತ್ತವೆ. ಇತರ ಸಂಸ್ಕೃತ ನಾಟಕಗಳಲ್ಲಿ ಈ ಅಂಶವನ್ನು ಅಲ್ಲಿ ಇಲ್ಲಿ ಚೆನ್ನಾಗಿ ಪಾಲಿಸದವೇ ದಿಙ್ನಾಗೋತ್ತರ ಕಾಲದಲ್ಲಿ ಕಂಡುಬರುತ್ತವೆ. ಒಮ್ಮೆ ಪಾಲಿಸಿದಲ್ಲೂ ಅನವಶ್ಯಕವಾದ ಪದ–ವಾಕ್ಯಗಳ ಬಳಕೆ ಕಂಡುಬರುತ್ತದೆ. ಅತಿ ಉದ್ದದ ಭಾಷಣಗಳು ನಾಟಕಕ್ಕೆ ಅಸಹಜ; ಅತಿ ಮೊಟಕು ಮತ್ತು ಅತ್ಯಲಂಕೃತ ವಾಕ್ಯಗಳೂ ಅರ್ಥಗ್ರಹಣಬಾಧಕಗಳು. ಇಂಥ ಅವಲಕ್ಷಣ ದಿಙ್ನಾಗನ ಹತ್ತಿರ ಸುಳಿಯವು. ಹಾಗೇ ಈತನು ದೃಷ್ಟಾಂತ ತತ್ತ್ವೋಕ್ತಿಗಳನ್ನು (corroborating generalisations) ಬಳಸುವುದರಲ್ಲೂ ಬಹಳ ಸಂಯಮಿಯಾಗಿದ್ದಾನೆ.

**ಆರಂಭ, ಮುಕ್ತಾಯ:** ದಿಙ್ನಾಗನ ನಾಟಕಾರಂಭವು ವಿಘ್ನೇಶ್ವರನ ಸ್ತೋತ್ರದಿಂದ. ಇದರಲ್ಲಿ ಯಾವ ತತ್ವಜ್ಞಾನದ ಅಥವಾ ಪುರಾಣದ ತತ್ವಸಂಕೇತಗಳೂ ಇಲ್ಲ. ಆದರೆ ತರ್ಕಶಾಸ್ತ್ರದಲ್ಲಿ ಹೇಳಿರುವಂತೆ ಕಾರ್ಯವಾಗಲು ಪ್ರತಿಬಂಧಕದ ಅಭಾವದಿಂದ ಕೂಡಿರುವ ಕಾರಣ ಸಾಮಗ್ರಿ ಇರುವುದು ಅಗತ್ಯ. ಸಾಮಾನ್ಯರ ಮಾತಿನಲ್ಲಿ ಪ್ರತಿಬಂಧಕವೆಂದರೆ ಅಡ್ಡಿ, ವಿಘ್ನ. ವಿಘ್ನವು ಸರ್ವರಿಗೂ ಸರ್ವ ಉದ್ದೇಶಗಳ ಸಾಧನೆಯ ಪ್ರಯತ್ನದಲ್ಲೂ ಅನಪೇಕ್ಷಿತ. ಆದುದರಿಂದ ವಿಘ್ನನಿವಾರಣೆಯ ಪ್ರಾರ್ಥನೆ ಅತ್ಯಂತ ವ್ಯಾಪಕವಾದ ಸಾರ್ವಜನಿಕತೆಯುಳ್ಳದ್ದು. ವಿಘ್ನಗಳು ಅನಿರೀಕ್ಷಿತ ಕಂಟಕಗಳು; ಅವುಗಳ ಪ್ರೇರಕ ಶಕ್ತಿಯು ಅಜ್ಞಾತನಾದ (the unknown) ಪರಮೇಶ್ವರ ಸ್ವರೂಪವುಳ್ಳದ್ದು. ಆದುದರಿಂದ ವಿಘ್ನೇಶ್ವರನು ದೇವೇಂದ್ರನಿಂದ ವಂದ್ಯ, ವಿಘ್ನ ಪರಿಹಾರವು ಶುಭದಾಯಕ. ಸೂತ್ರಧಾರ ಅದರಿಂದಲೇ ಅನಂತರ ಶಂಭು (ಶುಭದಾಯಕ ದೇವ)ನನ್ನು ಸ್ತುತಿಸುತ್ತಾನೆ. ಈ

ಶಂಭುವು ಪೌರಾಣಿಕ ತತ್ವ ಸಂಕೇತ ಸಂಪನ್ನ. ತಪಸ್ಸು, ಗಂಗೆ, ಸರ್ಪ, ಚಂದ್ರ, ಜಟೆಗಳು ಶಿವಸೂಚಕಗಳಾಗಿವೆ. ಶಿವನೆಂಬ ಬ್ರಹ್ಮನಿಗೆ ಈ ಐದು ಅನುಕ್ರಮವಾಗಿ ಆಕಾಶ, ಜಲ, ಪೃಥ್ವಿ, ತೇಜಸ್ಸು, ವಾಯುಗಳೆಂಬ ಸ್ವಭಾವಾಂಗಗಳು ಎಂದುಕೊಳ್ಳಬಹುದು. ತಪಸ್ಸಿನಿಂದ ಜಟೆ, ಜಟೆಯಲ್ಲಿ ಚಂದ್ರ, ಚಂದ್ರನ ಬುಡದಲ್ಲೇ ಗಂಗೆ, ಗಂಗೆಯ ಕೆಳಗೆ ಸರ್ಪ–ಆಕಾಶದಿಂದ ಅಗ್ನಿತತ್ವ, ಅಗ್ನಿತತ್ವದಿಂದ ಜಲತತ್ವ, ಜಲದಿಂದ ಪೃಥ್ವೀ (ಅನ್ನ) ತತ್ವ ಹುಟ್ಟುವುದು ಸೃಷ್ಟಿವಿಕಾಸಕ್ರಮ. ಭರತವಾಕ್ಯದಲ್ಲಿ ಶಿವ, ಬ್ರಹ್ಮ, ವಿಷ್ಣು, ಸಮುದ್ರ, ಅಗ್ನಿ, ವಾಯು, ಪಾತಾಳ, ಭೂ, ಭೂವ, ಸುವ, ಸಾಮ, ಇತರ ವೇದಗಳು, ವಿದ್ಯಾವಂತರು, ಧರ್ಮದಲ್ಲಿ ಅಧಿಕಾರವಂತರು ಮತ್ತು ತಪಸ್ವಿಗಳು ಶಿವಕಾರಕ ಶಕ್ತಿಗಳೆಂದು ವರ್ಣಿಸಲ್ಪಟ್ಟಿವೆ. ಈ ೧೫ ಮಾನವ ಸಂಸ್ಕೃತಿಯ ದ್ರವ್ಯಗುಣ ಸಂಕೇತಗಳು: ಸತ್, ಚಿತ್, ಆನಂದ, ಜೀವನ, ತೇಜಸ್ಸು, ಚಲನ ಅಥವಾ ಕರ್ಮ, ಗಾಂಭೀರ್ಯ, ಘನತೆ, ದ್ರವತೆ, ಅನಿಲತೆ, ನಾದ, ಅರ್ಥ, ಅರ್ಥಜ್ಞತೆ, ಅರ್ಥವಿನಿಯೋಜಕತೆ ಮತ್ತು ಆದರ್ಶೋನ್ಮುಖ ಪ್ರಯತ್ನಶೀಲತೆ– ಎಂಬಿವೇ ಆ ದ್ರವ್ಯ ಗುಣಗಳು. ಶಿವಕಾರಕ ಶಕ್ತಿಗಳು ಮಹಾರಾಜನಾದ ಕುಶನಿಗೆ ಶ್ರೇಯಸ್ಸನ್ನು ದಯಪಾಲಿಸಲಿ ಮತ್ತು ಗೋಸಂಪತ್ತು ದೇಶದಲ್ಲಿ ಬೆಳೆಯಲಿ ಎಂಬುದೇ ವಾಲ್ಮೀಕಿಯ ಬಾಯಿಯಿಂದ ಹೇಳಿಸಿದ ದಿಙ್ನಾಗನ ಹರಕೆ. ಕುಶನಿಗೆ ಶ್ರೇಯಸ್ಸಾದರೆ ಅವನ ಪ್ರಜೆಗಳೆಲ್ಲರಿಗೂ ಶ್ರೇಯಸ್ಸು ದೊರೆತಂತೆಯೇ, ದೊರಕಿಯೇ ದೊರಕುತ್ತದೆ– ಎಂಬುದಿಲ್ಲಿ ಇಂಗಿತ. ಏಕೆಂದರೆ, ಕುಶನು ರಾಮನಂಥ ಧಾರ್ಮಿಕ. ಅಪ್ಯರ್ಥ ಕಾಮೌ ತಸ್ಯಾಸ್ತಾಂ ಧರ್ಮ ಏವ ಮನೀಷಿಣಃ – ಎಂಬ ಕಾಳಿದಾಸೋಕ್ತಿಯ ಪ್ರಕಾರ ರಾಜ್ಯವಾಳಿದ ದಿಲೀಪನ ಧೋರಣೆ ರಾಮನದು ಮತ್ತು ಅವನ ಮಗ ಕುಶನದು. ಕುಶನ ಕುಶಲ ಎಲ್ಲರ ಕುಶಲ! ರಾಘವರ ಸತ್ಯಸಂಧತೆಗೆ ಅವನು ತಕ್ಕ ವಾರಸುದಾರ. ಶುದ್ಧ ಸತ್ಯವಷ್ಟೇ ಶಿವ, ಸಂಪೂರ್ಣ ಶಿವ (ಶುಭ)ವಾದುದಷ್ಟೇ ಸುಂದರ; ಸುಂದರವೆನ್ನಿಸಿದ್ದೆಲ್ಲಾ ಶಿವ (ಮಂಗಲ)ವಲ್ಲ, ಶಿವವೆಂದು ತೋರಿದ್ದೆಲ್ಲಾ ಸತ್ಯವಲ್ಲ. ಆದುದರಿಂದ ರಾಮ ಆಳಿದರೂ ಕುಶ ಆಳಿದರೂ ಒಂದೇ; ಅವರು ಸತ್ಯನಿಷ್ಠರಾದುದರಿಂದ ಸತ್ಯವೇ ರಾಜರೂಪದಲ್ಲಿ ಪ್ರಜೆಗಳನ್ನಾಳುತ್ತದೆ– ಎಂಬುದು ರಾಮ (ಕುಶ) ರಾಜ್ಯದ ವೈಶಿಷ್ಟ್ಯವಲ್ಲವೇ? ಅದು ಮುಂದುವರಿಯಲಿ ಎಂಬುದೇ ಭರತ (ನಟ) ವಾಕ್ಯದ ಆಶಯ.

**ಆರ್ಟ್ಸ್ ಮತ್ತು ಸೈನ್ಸ್ ಕಾಲೇಜು**
**ಶಿರಸಿ (ಉ.ಕನ್ನಡ ಜಿಲ್ಲೆ)**

**–ಬಿ.ಎಚ್. ಶ್ರೀಧರ**
**ಸಂಸ್ಕೃತದ ಪ್ರಧಾನ ಪ್ರಾಧ್ಯಾಪಕ**

**ದಿಙ್ನಾಗ ಕವಿ ವಿರಚಿತ ಸಂಸ್ಕೃತ ನಾಟಕ**
**ಕುಂದಮಾಲೆ**

# ೨. ಪಾತ್ರಗಳು

೧. ರಾಮ – ಕಥಾನಾಯಕ, ಅಯೋಧ್ಯೆಯ ಮಹಾರಾಜ
೨. ಲಕ್ಷ್ಮಣ – ರಾಮನ ತಮ್ಮ
೩. ಸುಮಂತ್ರ – ಸಾರಥಿ
೪. ವಾಲ್ಮೀಕಿ – ರಾಮಾಯಣದ ಗ್ರಂಥಕರ್ತ, ಕವಿ, ಋಷಿ.
೫. ಕಾಶ್ಯಪ – ವಾಲ್ಮೀಕಿಯ ಶಿಷ್ಯನಾದ ಒಬ್ಬ ಋಷಿ
೬. ಬಾದರಾಯಣ – ವಾಲ್ಮೀಕಿಯ ಶಿಷ್ಯನಾದ ಒಬ್ಬ ಋಷಿ.
೭. ಕೌಶಿಕ – ವಿದೂಷಕ
೮. ತಾಪಸ – ಒಬ್ಬ ಋಷಿ
೯. ಸೀತೆ – ರಾಮನ ರಾಣಿ, ಕಥಾನಾಯಿಕೆ.
೧೦. ವೇದವತಿ – ವಾಲ್ಮೀಕಿಯ ಆಶ್ರಮದವಳು
೧೧. ಯಜ್ಞವತಿ – ವಾಲ್ಮೀಕಿಯ ಆಶ್ರಮದವಳು
೧೨. ಭೂದೇವಿ – ಭೂಮಿಯ ಅಧಿಷ್ಠಾನದೇವತೆ.

## ಅನಂತರ

ಭರತ, ಶತ್ರುಘ್ನ ಮತ್ತು ಅವರ ಹೆಂಡತಿಯರು, ರಾಜಮಾತೆಯರಾದ ಕೌಸಲ್ಯೆ–ಕೈಕೇಯಿ–ಸುಮಿತ್ರೆಯರು, ಲಕ್ಷ್ಮಣನ ಹೆಂಡತಿ, ಸ್ವರ್ಗದ ಸುಂದರಿ ತಿಲೋತ್ತಮೆ, ನಾಗರಿಕ ಪ್ರಮುಖರು, ಭೂದೇವಿಯ ಸೇವಿಕೆಯರು, ವಾಲ್ಮೀಕಿಯ ಆಶ್ರಮದ ಹೆಂಗಸರು ಮುಂತಾದವರು.

## ಸ್ಥಳ

೧. ಗಂಗಾತೀರದಲ್ಲಿಯ ವಾಲ್ಮೀಕಿಯ ಆಶ್ರಮ (೧–೨ ಅಂಕಗಳು)

೨. ಗೋಮತಿಯ ದಂಡೆಯಲ್ಲಿಯ ನೈಮಿಷಾರಣ್ಯ (೩–೬ ಅಂಕಗಳು)

## ಕಾಲ

೧ನೆಯ ಅಂಕ : ಸಾಯಂಕಾಲ (ಹೊತ್ತು ಮುಳುಗುವ ಮುನ್ನ ಮತ್ತು ಆಮೇಲೆ)

೨ನೆಯ ಅಂಕ : ಪೂರ್ವಾಹ್ನ.

೩ನೆಯ ಅಂಕ : ಮಧ್ಯಾಹ್ನ

೪ನೆಯ ಅಂಕ : ಮಧ್ಯಾಹ್ನದಿಂದ ಸೂರ್ಯ ಮುಳುಗುವತನಕ.

೫ನೆಯ ಅಂಕ : ಬೆಳಗಿನಿಂದ ಮಧ್ಯಾಹ್ನದವರೆಗೆ.

೬ನೆಯ ಅಂಕ : ಅಪರಾಹ್ನ

# ೩. ಪ್ರಸ್ತಾವನೆ

(ರೂಪಕ–ಗತಿ) ಇಂದ್ರಮೌಳಿ ಮಂದಾರದ ಮಾಲೆಯ ಮಧುಗೆ।
ಮುತ್ತನಿತ್ತ ಗಜಮುಖಪದರೇಣುಗಳೆರಡರ।
ಕಡಲನಿಡೀ ಕುಡಿಯಲಿ ।
ಕುಡಿಯಲಿ ॥೧॥
(ನಾಂದಿಯಾದ ಮೇಲೆ ಸೂತ್ರಧಾರನು ಪ್ರವೇಶಿಸುತ್ತಾನೆ)

**ಸೂತ್ರಧಾರ:** ಶಿವನ ಪರಿಣತವಾದ ಅಂತಸ್ತಪಸ್ತೇಜ
ಉರಿದು ದಬ್ಬುತ್ತಿತ್ತೊ ಎನ್ನುವಂತೆ ॥
ಗಂಗಾತರಂಗ ಸರ್ಪಾವಾಸವಾಗಿರ್ದು
ವಲ್ಮೀಕಲಕ್ಷ್ಮಿ ತಾನೆನ್ನುವಂತೆ ॥
ನೆನದ ತಾವರೆ ತೊಟ್ಟಿನಂಥ ಮಿದು ಮೈಯುಳ್ಳ
ತಿಂಗಳೊಡನಿರ್ದು ಮುಚ್ಚಂಜೆಯಂತೆ ॥
ತರುಣಾರುಣನ ಕರದ ಎಳಗೆಂಪ ಸೂಸುತಿಹ
ಶಿವಜಟಾಸಂತಾನ ಪೊರೆಗೆ ನಿಮ್ಮ ॥೨॥

ಅನುರಾಧಾಪುರದ ದಿಙ್ನಾಗ ಕವಿ ಬರೆದ ಕುಂದಮಾಲೆ ಎಂಬ ನಾಟಕವನ್ನು ಆಡಬೇಕೆಂದು ಈ ಸಭೆ ಅಪ್ಪಣೆ ಕೊಟ್ಟಿದೆ. ಆದುದರಿಂದ ಈ ಪ್ರಯೋಗ ಕಾರ್ಯದಲ್ಲಿ ನನಗೆ ಸಹಕಾರಿಯಾಗುವ ಮಹಿಳೆಯನ್ನು ಕರೆದು ನಾನೀಗ ರಂಗಸ್ಥಳವನ್ನು ಪ್ರವೇಶಿಸುತ್ತೇನೆ.

(ತೆರೆಯಲ್ಲಿ) ಇತ್ತ ಬನ್ನಿ ಅಮ್ಮನವರೇ!

**ಸೂತ್ರಧಾರ:** ಅರೆ, ಯಾರದು? ನಮ್ಮವಳನ್ನು ಕರೆದು ನನಗೆ ಯಾರು ಜೊತೆಯ ಕಾರ್ಯಕರ್ತ್ರಿಯನ್ನು ಒದಗಿಸಿ ಕೊಡುತ್ತಿದ್ದಾರೆ? (ಸುತ್ತಲೂ ನೋಡಿ) ಅಯ್ಯೋ, ಎಂಥ ಕಷ್ಟದ ಕಾಲ! ಎಷ್ಟು ಕರುಣಾಜನಕ ಪರಿಸ್ಥಿತಿ!

**ರಾವಣನ ಮನೆಯಲ್ಲಿ ಬಹುಕಾಲವಿದ್ದಳೀಕೆ**
**ಎಂದು ಜನ ನಿಂದಿಸಲು ಅದಕಂಜಿ ರಾಮಚಂದ್ರ ॥**
**ಬಸಿರಿಯಾಗಿಹ ಸೀತೆಯನು ಬಿಡಲು ಅವನ ತಮ್ಮ**
**ರಾಜ್ಯದಾಚೆಯ ಕಾಡಿಗೊಯ್ಯುತಿಹ ರಾಮರಾಮಾ!** ॥೩॥

(ಎಂದು ಹೋಗುತ್ತಾನೆ)

ಇಲ್ಲಿಗೆ ಪ್ರಸ್ತಾವನೆ ಮುಗಿಯಿತು.

# ೪. ಮೊದಲಿನಂಕ

(ರಥ ಹತ್ತಿದ ಸೀತೆ, ಸಾರಥಿ, ಲಕ್ಷ್ಮಣ ಪ್ರವೇಶಿಸುತ್ತಾರೆ)

**ಲಕ್ಷ್ಮಣ :** ಈ ಕಡೆ ಇಳಿಯಿರಿ ಅಮ್ಮಾ. ಇದು ಗಂಗೆಯ ತೀರದಲ್ಲಿರುವ ಗಹನವಾದ ಗಿಡ–ಬಳ್ಳಿ–ಮರಗಳಿಂದ ತುಂಬಿದ ಕಾಡು. ಇಲ್ಲಿ ರಥ ಹೋಗುವುದಿಲ್ಲ. ಆದುದರಿಂದ ಇಳಿಯಿರಿ ಅಮ್ಮಾ.

**ಸೀತೆ :** ಮಗು, ಲಕ್ಷ್ಮಣಾ, ಕುದುರೆಯ ಅತಿವೇಗದ ದೆಸೆಯಿಂದ ನನ್ನ ಮೈಯೆಲ್ಲಾ ನಡುಗುತ್ತಿದೆ. ಅದರಿಂದ ನನಗಿಲ್ಲಿ ನಿಲ್ಲುವುದೇ ಅಸಾಧ್ಯವಾಗಿದೆ. ಹೀಗಿರುವಾಗ ಇಳಿಯುವುದು ಸಾಧ್ಯವೇ?

**ಲಕ್ಷ್ಮಣ :** ಸುಮಂತ್ರ, ಕುದುರೆಯನ್ನು ನಿಲ್ಲಿಸಲು ಯತ್ನಿಸು ನೋಡೋಣ.

**ಸುಮಂತ್ರ:** ದಿವ್ಯಗೀತ ಪ್ರೇಮಿಗಳಾದ ಈ ಕುದುರೆಗಳು ನಿಲ್ಲಿಸಲು ಯತ್ನಿಸಿದರೂ ಆ ಯತ್ನವನ್ನು ಮೀರಿ ಹೋಗುತ್ತಿವೆ. ಅದರಿಂದಲೇ–

**ತಾರ ಕಲಹಂಸನಾದ।**
**ಕೇಳಿಸಿದ । ರೂನು ಹಿಡಿದೆಳೆಯುವಾಗ ।**
**ನಾನೀಗ ಅತಿಜವದಲಿ ।**
**ಅವಿಧೇಯ । ವಾರುವಗಳೋಡುತಿಹವು ॥೪॥**

**ಲಕ್ಷ್ಮಣ :** ಸುಮಂತ್ರ, ಅತ್ಯಂತ ರಭಸದಿಂದ ಓಡುತ್ತಿರುವ ಈ ಕುದುರೆಗಳು ಏರು ತಗ್ಗುಗಳನ್ನು ಕಾಣದೆ ಗಂಗಾಪ್ರಪಾತದಲ್ಲಿ ಈ ರಥವನ್ನು ಬೀಳಿಸಬಹುದು[1]. ಆದುದರಿಂದ ಇವುಗಳನ್ನು ತಡೆಯಲು ಶಕ್ತಿ ಮೀರಿ ಪ್ರಯತ್ನಿಸು.

**ಸುಮಂತ್ರ:** (ಕಡಿವಾಣವನ್ನು ಎಳೆಯುವಂತೆ ಅಭಿನಯಿಸುತ್ತಾನೆ).

**ಲಕ್ಷ್ಮಣ :** ಇದೋ ರಥ ನಿಂತಿತು. ಆದುದರಿಂದ ಸೀತಾದೇವಿಯರೇ, ರಥದಿಂದ ಇಳಿಯಿರಿ.

**ಸೀತೆ :** (ಇಳಿದು ನಡೆಯುತ್ತಾಳೆ).

---

1. ಇಲ್ಲಿ ಕವಿಯು ಸೀತೆಗೆ ಒದಗಲಿರುವ ಸಂಕಟವನ್ನು ಧ್ವನಿಸಿದ್ದಾನೆ. ಗಂಗೆಯಲ್ಲಿ ಬೀಳಬೇಕೆಂದು ಭಾವಿಸುವಷ್ಟು ಅಸಹನೀಯ ದುಃಖ ಅವಳಿಗೀಗ ಕಾದಿದೆ.

**ಲಕ್ಷ್ಮಣ :** ಸುಮಂತ್ರ, ಈ ಕುದುರೆಗಳು ಬಹಳ ದೂರದ ಪ್ರಯಾಣದಿಂದ ಬಳಲಿವೆ; ಇವುಗಳಿಗೆ ವಿಶ್ರಾಂತಿಯನ್ನು ಕೊಡು.

**ಸುಮಂತ್ರ:** ದೊರೆಗಳ ಅಪ್ಪಣೆಯಂತೆ (ಎಂದು ರಥದಿಂದ ಇಳಿದು ಹೋಗುವನು)

**ಲಕ್ಷ್ಮಣ :** (ಸ್ವಲ್ಪ ದೂರ ನಡೆದು ತನ್ನಲ್ಲಿಯೇ)

ಅಣ್ಣ ಹೇಳಿದ–ಅಲ್ಲಲ್ಲ–ಒಡೆಯ ಅಪ್ಪಣೆ ಕೊಟ್ಟ–ತಮ್ಮಾ ಲಕ್ಷ್ಮಣ, ರಾವಣನ ಮನೆಯಲ್ಲಿದ್ದಳೆಂಬ ಕಾರಣದಿಂದ ಸೀತಾ ದೇವಿಯ ಚಾರಿತ್ರದ ಬಗ್ಗೆ ಸಾರ್ವಜನಿಕರು ಹೇಳಬಾರದ್ದನ್ನೆಲ್ಲಾ ಹೇಳಲಾರಂಭಿಸಿದ್ದರಿಂದ ಕೇವಲ ಸೀತೆಗಾಗಿ ಶರದ ಚಂದ್ರನಷ್ಟು ಚೊಕ್ಕವಾಗಿರುವ ಇಕ್ಷ್ವಾಕುಕುಲಕ್ಕೆ ಕಲಂಕವನ್ನು ತರಲಾರೆ. ಬಸಿರಿಯಾದ ಸೀತೆ ಗಂಗಾನದಿಯನ್ನು ನೋಡುವ ತನ್ನ ಬಯಕೆಯನ್ನು ಪೂರಯಿಸಲು ಕೇಳಿಕೊಂಡಿದ್ದಾಳೆ. ಆದುದರಿಂದ ನೀನು ಗಂಗಾ ಪ್ರದೇಶಕ್ಕೆ ಒಯ್ಯುವ ನೆವದಿಂದ ಸುಮಂತ್ರ ಸಾರಥ್ಯದ ರಥದಲ್ಲಿ ಕುಳ್ಳಿರಿಸಿಕೊಂಡು[2] ಯಾವುದಾದರೂ ಕಾಡಿನಲ್ಲಿ ಬಿಟ್ಟು ಬಾ ಎಂದು. ಆದುದರಿಂದ ನಾನೀಗ ತನ್ನ ಆತ್ಮೀಯನೆಂದು ನಿಃಶಂಕೆಯಿಂದ ನನ್ನನ್ನು ನಂಬಿ ಬಂದ ಸೀತಾದೇವಿಯನ್ನೀಗ ಮನೆಯಲ್ಲಿ ಸಾಕಿದ ಜಿಂಕೆಯನ್ನು ಕಟುಕಸಾಲೆಯಂತಿರುವ ಕಾಡಿಗೆ ಕರೆದುಕೊಂಡು ಬಂದಿದ್ದೇನೆ.

**ಸೀತೆ :** ಮಗು, ಲಕ್ಷ್ಮಣ, ತುಂಬಿದ ಬಸಿರಿನ ಭಾರವನ್ನು ಹೊತ್ತ ನನ್ನ ಕಾಲುಗಳು ಬಹಳ ಬಳಲಿರುವುದರಿಂದ ಮುಂದಕ್ಕೆ ಹೆಜ್ಜೆಯಿಡಲಾರವು. ಆದುದರಿಂದ ನೀನೇ ಮುಂದಾಗಿ ಪರಮ ಪೂಜನೀಯ ಗಂಗಾನದಿ ಎಷ್ಟು ದೂರದಲ್ಲಿದೆ ಎಂಬುದನ್ನು ತೋರಿಸು.

**ಲಕ್ಷ್ಮಣ :** ಗಂಗಾನದಿ ಹತ್ತಿರದಲ್ಲೇ ಇದೆ, ಬೇಸರ ಪಡಬೇಡಿ. ನಾವಾಗಲೇ ಅದರ ಹತ್ತಿರ ಬಂದುಬಿಟ್ಟಿದ್ದೇವೆ. ನೋಡಿ–

---

2. ಜನರನ್ನು ವಂಚಿಸಲು ರಾಮನಿಲ್ಲಿ ಸೀತೆಗೆ ರಕ್ಷಣೆಯನ್ನು ಕಾಡಿನಲ್ಲಿ ಪೂರ್ವಭಾವಿಯಾಗಿ ಸಜ್ಜು ಮಾಡಲು ಯೋಜಿಸಿಲ್ಲ; ರಾಜಧರ್ಮ–ಪತಿಧರ್ಮಗಳ ಪೈಪೋಟಿ ಇಲ್ಲಿಲ್ಲ. ಕುಲದ ಹಿರಿಯರ ಒಳ್ಳೆಯ ಹೆಸರಿಗೂ ಪತಿಧರ್ಮಕ್ಕೂ ವಿರೋಧವಿಲ್ಲಿ ಕಂಡುಬರುತ್ತದೆ. ಲೋಕಾಪವಾದವಿಲ್ಲಿ ಒಬ್ಬ ಅಗಸನ ದೂರಿನ ರೂಪದ್ದಲ್ಲ; ಕುಲಕೀರ್ತಿ ರಕ್ಷೆಯು ದೇಹಋಣಹಾರಿ. ದೈಹಿಕ ಪತಿತ್ವದ ರಕ್ಷೆ ಅಂಥ ಋಣವನ್ನು ಪರಿಹರಿಸಲಾರದು. ಹಾರ್ದಿಕ ಪತಿತ್ವದ ರಕ್ಷೆಗೆ ದೇಹಸಾನ್ನಿಧ್ಯ ಅತ್ಯವಶ್ಯಕವಲ್ಲ. ಕುಲಕ್ಕೆ ಅಪತ್ಯದಾನ ಮಾಡದಿರುವುದಕ್ಕಿಂತ ಜನನಿಂದಿತಳಾದ ಅಪ್ಪನ ಸೊಸೆಯನ್ನು ಪತ್ನಿಯೆಂದಿಟ್ಟುಕೊಳ್ಳುವುದು ಹೆಚ್ಚು ಕುಲಕಂಟಕ ಕೆಲಸ– ಎಂಬುದಿಲ್ಲಿ ರಾಮನ ಇಂಗಿತ.

**ತಮ್ಮೆಡೆ ಬರುತಿದೆ ದೇವಿಯರೇ**
**ಬರುತಿದೆ ದೇವಿಯರೇ ॥ಪಲ್ಲ॥**
**ತಾವರೆದೋಟದ ಮಧುವಿನ ಗಂಧವ**
**ಹೊತ್ತೆಳೆದೀ ಕಲಹಂಸಾಳಿ।**
**ಹಾಡಿದ ಇಂಪನು ಗಂಗೆಯ ತೆರೆಗಳ**
**ತಂಬನಿಗಳ ತಾಳಿದೆ ಗಾಳಿ।**
**ತಮ್ಮನು ಸತ್ಕರಿಸಲೊ ಎಂಬಂತಿದೊ**
**ಬರುತಿದೆ ದೇವಿಯರೇ।**
**ತಮ್ಮೆಡೆ । ಬರುತಿದೆ ದೇವಿಯರೇ ॥೫॥**

**ಸೀತೆ :** (ತಂಗಾಳಿಯ ಸ್ಪರ್ಶವನ್ನು ಅಭಿನಯಿಸಿ)
ಈಗ ತಾಯ್ಗೈಯ ತಣಿವಿನ ಗಂಗೆದೆರೆಗಾಳಿಯ ಸ್ಪರ್ಶದಿಂದ ಪಾಪ ಹಿಂಗುವಂತೆ ನನ್ನ ಶ್ರಮ ಹಿಂಗಿತು. ಆದರೂ ಬಸಿರಿನ ಬಯಕೆ ಗಂಗಾಸ್ನಾನ ಮಾಡೆಂದು ನನ್ನನ್ನು ಹುರಿದುಂಬಿಸುತ್ತಿದೆ. ಆದುದರಿಂದ ಸುಸ್ತಾದ ನನಗೆ ಅನುಗುಣವಾದಂಥ ದಾರಿಯನ್ನು ತೋರಿಸು, ಲಕ್ಷ್ಮಣ!

**ಲಕ್ಷ್ಮಣ :** (ತೋರಿಸಿ) ಇದು ಜನಸಂಚಾರ ಬಹಳ ಕಡಿಮೆಯಾಗಿರುವ ಸ್ಥಳವಾದ್ದರಿಂದ ಇಲ್ಲಿ ಹೊಳೆಗಿಳಿಯುವುದು ಅಸಾಧ್ಯವಾಗಿದೆ. ಸ್ವಲ್ಪ ಮುಂದೆ ಹೋಗಿ ಇಳಿಯೋಣ.

**ವಾನೀರಲತೆಯನೆಡಗೈಯಿಂದ ಹಿಡಿದು ಬಲ–**
**ಗೈಯಿಂದ ಮೊಣಕಾಲಿಗೊತ್ತನಿತ್ತು ।**
**ನನ್ನ ಹೆಜ್ಜೆಯ ಮೇಲೆ ಹೆಜ್ಜೆ ಹಾಕುತ ನೀವು**
**ಮೆಲ್ಲ ಮೆಲ್ಲಗೆ ಬನ್ನಿ ಸ್ವಲ್ಪ ಹೊತ್ತು ॥೬॥**

**ಸೀತೆ :** (ಹೇಳಿದಂತೆ ಇಳಿದು) ಮಗು, ಬಹಳ ಸುಸ್ತಾಗಿದೆ. ಈ ಮರದ ನೆರಳಿನಲ್ಲಿ ಸ್ವಲ್ಪ ಹೊತ್ತು ಕುಳಿತು ವಿಶ್ರಾಂತಿ ಪಡೆಯುತ್ತೇನೆ.

**ಲಕ್ಷ್ಮಣ :** ಅಮ್ಮನವರಿಷ್ಟದಂತೆ ಆಗಲಿ.

**ಸೀತೆ :** (ಕುಳಿತು ವಿಶ್ರಾಂತಿಯನ್ನು ಅನುಭವಿಸುತ್ತಾಳೆ).

**ಲಕ್ಷ್ಮಣ :** (ಸ್ವಗತ) ಆಹಾ, ಪುಣ್ಯವಂತರಿಗೆ ಎಂಥ ಅವಿನಾಶಿ ಪರಿವಾರಗಳಿರುತ್ತವೆ! ಅದರಿಂದಲೇ ಈಕೆ–

**ಹನಿಯ ಹೊತ್ತ ತಂಗಾಳಿಯನ್ನು ಬೀಸುವುದು ಜಲತರಂಗ**
**ಇನಿಯ ನುಡಿಯ ಕಲಹಂಸ ಉಲಿಯುವುದ ಕೇಳುವ ಪ್ರಸಂಗ ॥**
**ಗೆಳತಿಯಂತೆ ಎದೆಗವುಚಿಕೊಂಡು ನೆರಳಿದೋ ರಮಿಸುತಿಹುದು ।**
**ಜನರೆ ಇಲ್ಲದೀ ವನದಿ ಪರಿಜನರ ಹೊಂದಿದಂತಿರುವಳು ॥೭॥**

**ಸೀತೆ :** ಮಗು, ನೀನು ಹೇಳಿದ ಹಾಗೆ ಸ್ವಜನರ[3] ನಡುವೆ ಇರುವಂತೆ ನನ್ನ ಮನಸ್ಸು ಸಂತೋಷಪಡುತ್ತಿದೆ.

**ಲಕ್ಷ್ಮಣ :** (ತನ್ನೊಳಗೆ) ಈಕೆ ಈಗ ವಿಶ್ರಾಂತಿ ಪಡೆದಿದ್ದಾಳೆ, ಸುಖವಾಗಿ ಕುಳಿತಿದ್ದಾಳೆ. ಆದ್ದರಿಂದ ನಿಜ ಸಂಗತಿಯನ್ನು ತಿಳಿಸಲು ಇದೇ ತಕ್ಕ ಸಂದರ್ಭ. (ಗಟ್ಟಿಯಾಗಿ) (ಸೀತೆಯ ಕಾಲಿಗೆ ಕೂಡಲೇ ಬಿದ್ದು) ಯಾವಾಗಲೂ ಊರುಬಿಟ್ಟಿರುವ ದುಃಖವನ್ನುಂಡಂಥ ಲಕ್ಷಣವಿಲ್ಲದ ಈ ಲಕ್ಷ್ಮಣನು ಅರಿಕೆ ಮಾಡಿಕೊಳ್ಳುತ್ತಾನೆ– ಎದೆ ಗಟ್ಟಿಮಾಡಿಕೊಳ್ಳಿ.

**ಸೀತೆ :** (ಗಾಬರಿಯಿಂದ) ಆರ್ಯಪುತ್ರ ಕುಶಲವಾಗಿದ್ದಾನೆಯೇ?

**ಲಕ್ಷ್ಮಣ :** (ಕಾಡನ್ನು ತೋರಿಸಿ) ಹೀಗಾದ ಮೇಲೆ ಆತನಿಗೆಲ್ಲಿಯ ಕುಶಲ?

**ಸೀತೆ :** ಕೈಕೇಯೀ ತಾಯಿ ಮತ್ತೆ ಕಾಡಿಗೆ ಹೋಗು ಎಂದಳೆ?

**ಲಕ್ಷ್ಮಣ :** ಕಾಡಿಗೆ ಹೋಗಹೇಳಿದ್ದು ಹೌದು; ಆದರೆ ಅವಳಲ್ಲ.

**ಸೀತೆ :** ಹಾಗದರೆ ಯಾರು ಹೇಳಿದ್ದು?

**ಲಕ್ಷ್ಮಣ :** ಅಣ್ಣ.

**ಸೀತೆ :** ಹೇಗೆ ಹೇಳಿದ?

ಲಕ್ಷ್ಮಣ : (ಕಣ್ಣೀರಿನಿಂದ ಕಂಠ ಬಿಗಿದು)

**ಅಣ್ಣನಪ್ಪಣೆಯೆಂದೆ ಯತ್ನದಿಂದುಸಿರ ಬಯಸುವೆನು ॥**
**ಆದರೂ ಮಾತೆದೆಯ ಹೊಕ್ಕು ಗಂಟಿಕ್ಕಿಕೊಳುತಿಹುದು ॥೮॥**

**ಸೀತೆ :** ಏನು, ನನಗೆ ವನವಾಸ–ಅಂದಿದ್ದಾನೆಯೆ?

**ಲಕ್ಷ್ಮಣ :** ನಿಮಗೆ ಮಾತ್ರವಲ್ಲ; ತನಗೂ.

**ಸೀತೆ :** ಅದು ಹೇಗೆ?

---

3. ಪ್ರಕೃತಿಯ ಅಂತರ್ಗತವಾಗಿರುವ ಪರಾಪ್ರಕೃತಿ ಸೀತೆಗೆ ಸ್ವಜನ. ರಾಮನದು ಮಾನವ ಮನೋಧರ್ಮವಾದರೆ, ಸೀತೆಯದು ದಿವ್ಯ ಮನೋಧರ್ಮ ಎಂಬುದಿಲ್ಲಿ ಸೂಚಿತ; ಸೀತೆ ವನದೇವತಾ ಸ್ವಭಾವದವಳು; ಅವಳ ಮಾತೃತ್ವದ ಔದಾರ್ಯವು ಪತ್ನೀತ್ವದ ಪ್ರೇಮಕ್ಕಿಂತ ವಿಸ್ತಾರವಾದುದು. ಸೀತೆಯು ಲೋಕಮಾತೆ ಎಂಬುದನ್ನು ಗರ್ಭರಕ್ಷಣೆಗಾಗಿ ಅವಳು ಪ್ರಾಣತ್ಯಾಗ ಮಾಡದೆ ಮುಂದೆ ಬದುಕಿರಲು ನಿರ್ಧರಿಸುವ ಸಂದರ್ಭವು ಪ್ರಮಾಣಿಸುವುದು. ಪತಿತ್ವ–ಪತ್ನೀತ್ವಗಳು ಮಾನವ (ರಾಜಸ) ಗುಣಗಳಾದರೆ, ಪಿತೃತ್ವ–ಮಾತೃತ್ವಗಳು ದೇವ (ಸಾತ್ವಿಕ) ಗುಣಗಳು ಎಂಬುದು ಹದಿನಾರಾಣೆ ಭಾರತೀಯ ಮತ.

**ಲಕ್ಷ್ಮಣ :** **ತನ್ನದೀ ಮನೆ ಇಲ್ಲಿ ಪ್ರಾಣಸಖಿ–ಸಖರಿಹರು**
**ಗೃಹಯಜ್ಞನಿತ್ಯವೂ ನಡೆಯುತಿದೆ, ಅದರಿಂದ॥**
**ರಮಣೀಯವಿದು ಎಂದು ತಿಳಿದು ಬಾಳ್ದಣ್ಣನಿಗೆ**
**ನೀವಿರದ ಗೃಹವಾಸ ವನವಾಸವೇ ॥೯॥**

**ಸೀತೆ :** ಮಗು, ಬಿಡಿಸಿ ಹೇಳಪ್ಪಾ–ಹೇಗೆ ನನಗೂ ವನವಾಸ ಆರ್ಯಪುತ್ರನಿಗೂ ವನವಾಸ–ಎನ್ನುವುದನ್ನು?

**ಲಕ್ಷ್ಮಣ :** ಮತ್ತೇನನ್ನೀ ಹತಭಾಗ್ಯ ಹೇಳಬೇಕು ತಾಯಿ?

**ತ್ಯಕ್ತರಾದಿರಹಹ ಸುಚರಿತಕ್ಕೆ ಹೆಸರುವಾಸಿಯಾದ**
**ಅಣ್ಣನಿಂದ ತಾಯಿ ನೀವು ಈಗ ವನದಲಿ।**
**ಬಿಟ್ಟು ಹೋಗಲಿರುವೆ ನಾನು ನಿಮ್ಮನೇನ ಮಾಡಲಿದುವೆ**
**ಕಟ್ಟಿಕೊಟ್ಟ ಕಾರ್ಯ ನನಗೆ ಸ್ವಜನರಿದಿರಲಿ ॥೧೦॥**

**ಸೀತೆ :** ಹಾ, ತಂದೆ, ಕೋಸಲದೊಡೆಯ, ಈಗ ನೀನಿಲ್ಲ; ಅಯ್ಯೋ!

**ಲಕ್ಷ್ಮಣ :** (ಗಾಬರಿಯಿಂದ)(ಸ್ವಗತ) ಅಯ್ಯೋ, ಅಯ್ಯೋ– ತಲೆಯ ಮೇಲೆ ಹೊಡೆದ ಹಾಗೆ ಪರಿತ್ಯಾಗವಾರ್ತೆಯನ್ನು ಕೇಳಿದ ದೇವತಾಸ್ವರೂಪಳಾದ ಅತ್ತಿಗೆ ಖಂಡಿತವಾಗಿಯೂ ಪ್ರಾಣಬಿಟ್ಟಳು ! (ಪರೀಕ್ಷಿಸಿ) ಸುದೈವದಿಂದ ಉಸಿರಿದೆ. ಆದರೆ ಇವಳು ಮೂರ್ಛೆಯಿಂದ ಮುಕ್ತಳಾಗಿ ಸುಧಾರಿಸಿಕೊಳ್ಳುವಂತೆ ಏನು ಮಾಡಬಲ್ಲೆ? ಅಯ್ಯೋ! (ತೀವ್ರ ವಿಷಾದವನ್ನು ಹೊಂದಿ) ಹಾ, ಆಶ್ಚರ್ಯ, ಆಶ್ಚರ್ಯ!

**ಗಂಗೆಯ ತುಂತುರು ತುಂಬಿದ ಗಾಳಿಯು**
**ತೀಡಿದ ತಂಪಿನ ಬಲದಿಂದ!**
**ಎಚ್ಚತ್ತಳು ಈ ರಾಜಕುಮಾರಿ**
**ನನ್ನ ಸುದೈವದ ಕೃಪೆಯಿಂದ**
**ಈ ನನ್ನ ಸುದೈವದ ಕೃಪೆಯಿಂದ ॥೧೧॥**

**ಸೀತೆ :** ಮಗು, ಹೋಗಿಬಿಟ್ಟೆಯಾ?

**ಲಕ್ಷ್ಮಣ :** ಅಪ್ಪಣೆ ಕೊಡಿರಿ; ದುರ್ದೈವಿಯಾದ ನಾನಿಲ್ಲಿ ನಿಂತಿದ್ದೇನೆ.

**ಸೀತೆ :** ಯಾವ ದೂರಿಗಂಜಿ ನನ್ನನ್ನು ಬಿಡಬೇಕಾಯ್ತು?

**ಲಕ್ಷ್ಮಣ :** ದೇವತಾಸ್ವರೂಪದ ನಿಮಗೆ ಎಂಥ ನಿಂದೆ ತಟ್ಟೀತು?

**ಸೀತೆ :** ಅಯ್ಯೋ, ನನ್ನ ದೌರ್ಭಾಗ್ಯವೇ? ಯಾವ ದೂರೂ ಇಲ್ಲದೆ ನನಗೀ ದಂಡನೆಯೇ? ಆರ್ಯಪುತ್ರ ಈ ಬಗ್ಗೆ ಏನನ್ನಾದರೂ ಹೇಳಿದ್ದಾನೆಯೇ?

ಲಕ್ಷ್ಮಣ : ಹೇಳಿದ್ದಾನೆ.

ಸೀತೆ : ಹೇಳು, ಹೇಳು

ಲಕ್ಷ್ಮಣ : **ಕುಲದಲಿ ಗುಣದಲಿ ಸುಖದುಃಖಗಳಲಿ**
**ಸಹಚರಿ ನೀನೆನಗೊರೆದೊರೆಯೇ ॥**
**ಅರಿತಿಹೆನಿದನಪವಾದಕ್ಕಷ್ಟೇ**
**ಹೆದರಿ ಬಿಡುವೆ ತಪ್ಪಿಲ್ಲದೆಯೇ** ॥೧೨॥

ಇದು ಅಣ್ಣ ಹೇಳಿಕಳಿಸಿದ್ದು.

ಸೀತೆ : ಅಪವಾದಕ್ಕೆ ಹೆದರಿ ಅಂದರೆ? ನನ್ನ ಮೇಲೆ ಯಾವುದಾದರೂ ಅಪವಾದ ಇದೆಯೇ?

ಲಕ್ಷ್ಮಣ : **ನಾನು ನನ್ನಣ್ಣ ರಿಸಿಮುನಿ ಲೋಕಪಾಲರೆದುರು ।**
**ಅಗ್ನಿಶುದ್ಧಿಯ ಪಡೆದಿರಮ್ಮ ಅಂತಾದರೂನೂ ॥**

ಸೀತೆ : (ನಾಚಿಕೆಯನ್ನು ಅಭಿನಯಿಸುತ್ತಾಳೆ) ಹೇಳು, ಹೇಳು, ಏನದು?

ಲಕ್ಷ್ಮಣ : **ಜನರ ಬಾಯಿಗೆ ಬೀಗವುಂಟೆ? ಬಿಡದಪಲಪಿಸುವ ।**
**ಅಂಕುಶವೆ ಇರದಾನೆಯಂಥ ಜನ ಕಡಿಮೆಯೇನು?** ॥೧೩॥

ಸೀತೆ : ಅಗ್ನಿಶುದ್ಧಿಯ ಅನುಭವವನ್ನು ನೆನಪು ಮಾಡಿಕೊಟ್ಟದ್ದರಿಂದ ನನ್ನನ್ನೀಗ ಜಾಗ್ರತಳನ್ನಾಗಿ ಮಾಡಿದೆ. ರಾವಣನ ಮನೆಯಲ್ಲಿದ್ದದ್ದರ ಪಾಪ ಮತ್ತೆ ಈಗ ಕಾಡಿಸಲಾರಂಭಿಸಿದೆ.[4] ಸೀತೆಯಂಥವಳಿಗೂ ಇಂಥ ಅಪವಾದ ಉಂಟಾಗುವುದಾದರೆ ಮಹಿಳೆಯ ಬಾಳು ಇಲ್ಲಿಗೆ ಸಾಕು, ಇನ್ನೆಂದೂ ಬೇಡ! ಓಹೋ, ಹೀಗೆ ನನ್ನನ್ನು ಬಿಡಲಾಯಿತೇ? ಹೌದು– ನಾನೀಗ ನಿಜವಾಗಿಯೂ ಪರಿತ್ಯಕ್ತೆ. ಆರ್ಯಪುತ್ರ ನನ್ನನ್ನು ಬಿಡುವುದು

---

4. ಪಾಪಿಯು ನೆರಳೊಳಗೆ ಇರುವುದು ನಿರಂತರ ದುಃಖಕ್ಕೆ ಹೇತು ಎಂಬುದನ್ನು ಇದು ಸೂಚಿಸುತ್ತದೆ. ವಿಕ್ಟರ್ ಹ್ಯೂಗೋ ಬರೆದ "ಲಾ ಮಿಸರಬಲ್ಸ್" ಎಂಬ ಕಾದಂಬರಿಯ ಕಥಾನಾಯಕನ ಅಪವಾದಬದ್ಧತೆ ಇಲ್ಲಿ ಸ್ಮರಣೀಯ. ಅಲ್ಲಿ ಹೆಂಡತಿ ಮಕ್ಕಳ ಮೇಲಿನ ಅವನ ದಯೆಯೇ ದೋಷವಾಗಿ ಪರಿಣಮಿಸಿದಂತೆ ಇಲ್ಲಿ ಗಂಡನ ಬೆನ್ನುಬಿಡದೆ ವನವಾಸಕ್ಕೆ ಹೋದ ಪಾತಿವ್ರತ್ಯಶೀಲವೇ ದುಷ್ಪರಿಣಾಮಕಾರಿಯಾಯ್ತು. ಈ ದೋಷ ದುರಂತಕಾರಿಯಾದ ದೌರ್ಬಲ್ಯದ (tragici flaw) ವರ್ಗಕ್ಕೆ ಸೇರದು. ಜೈಲಿಗೆ ಹೋಗಿ ಬಂದ ಕಳ್ಳನೆಂಬ ಕಾರಣದಿಂದ ಉಂಟಾದ ಸಂಶಯದಿಂದ ಆ ಕಥಾನಾಯಕ ಏನು ಮಾಡಿದರೂ ಮುಕ್ತನಾಗದೆ ಹೋದಂತೆ ರಾವಣನ ಮನೆಯಲ್ಲಿದ್ದು ಬಂದವಳೆಂಬ ಕಾರಣದಿಂದ ಉಂಟಾದ ಶಂಕಾಸ್ಪದತೆ ಸೀತೆಯ ಬೆನ್ನುಬಿಡದಾಯಿತು.

ನ್ಯಾಯವಾದರೆ, ನಾನು ನನ್ನ ಪ್ರಾಣವನ್ನು ಬಿಡುವುದು ಏಕೆ ನ್ಯಾಯವೆನ್ನಿಸದು? ಅಥವಾ ಆ ನಿರ್ದಯನಿಗೆ ಸಮಾನರಾಗಿ ನಾಳೆ ನನ್ನ ಗರ್ಭದಿಂದ ಹುಟ್ಟುವ ಮಕ್ಕಳನ್ನಾತ ನೋಡಬೇಕು– ಎಂಬ ಉದ್ದೇಶದಿಂದ ನಿಂದಾಸ್ಪದವಾದ ನನ್ನ ಈ ಬಾಳನ್ನು ಉಳಿಸಿಕೊಳ್ಳಲೇ?

**ಲಕ್ಷ್ಮಣ :** ಅಮ್ಮಾ ನಾನೀಗ ಅನುಗ್ರಹೀತನಾದೆ. (ಎದ್ದು ನಮಸ್ಕರಿಸುತ್ತಾನೆ) ಅಣ್ಣ ಇನ್ನೂ ಒಂದು ಮಾತನ್ನು ಹೇಳಿ ಕಳಿಸಿದ್ದಾನೆ:

**ಮನೆಯ ದೇವಿ ನೀನೆನ್ನ ಮನದಿ ಮನೆ ಮಾಡಿಕೊಂಡ ಮಹಿಳೆ**
**ಮಲಗಿದಾಗ ಕನಸಿನಲಿ ಗೆಳತಿ ನೀ ಮೂಡಿ ಬರುವೆ ಸರಳೆ ॥**
**ನಿನ್ನ ಬಿಟ್ಟು ಇನ್ನೊಬ್ಬಳನ್ನು ಕೈಹಿಡಿಯಲಿಚ್ಛೆ ಇಲ್ಲ**
**ನಿನ್ನ ಬೊಂಬೆ ಯಾಗದಲಿ ನನ್ನ ಕುಲಧರ್ಮಪತ್ನಿಯಲ್ಲಾ ॥೧೪॥**

**ಸೀತೆ :** ಆರ್ಯಪುತ್ರ ಹೇಳಿಕಳಿಸಿದ್ದರಿಂದ ನನ್ನಲ್ಲಿರುವ ಪರಿತ್ಯಾಗ ದುಃಖವನ್ನೆಲ್ಲಾ (ಒಂದು ಗಳಿಗೆ) ಆತ ಪರಿಹಾರ ಮಾಡಿದಂತಾಯಿತು. ಅನ್ಯಾಸಕ್ತನಾದ ಗಂಡನಿಂದ ಹೆಂಡತಿ ಸಂಕಟಪಡುವಷ್ಟು ಮಟ್ಟಿಗೆ ಅನ್ಯಾಸಕ್ತೆಯಾದ ಹೆಂಡತಿಯಿಂದ ಗಂಡ ಸಂಕಟಪಡುವುದಿಲ್ಲ.

**ಲಕ್ಷ್ಮಣ :** ಮನೆಗೆ ಏನು ಹೇಳಿಕಳಿಸಬೇಕೆಂದಿದ್ದೀರಿ?

**ಸೀತೆ :** ಯಾರಿಗೆ?

**ಲಕ್ಷ್ಮಣ :** ಅಣ್ಣನಿಗೆ.

**ಸೀತೆ :** ಇಷ್ಟಾದ ಮೇಲೆ ಇನ್ನೂ ಹೇಳಿಕಳಿಸುವುದಿದೆಯೇ? ಕಾಲಿಗೆ ಬಿದ್ದು ನಾನು ಹೇಳಿದ್ದೇನೆಂದು ತಾಯಂದಿರಿಗೆ ತಿಳಿಸು– ಹೀಗೆ ಅರಕ್ಷಿತೆಯಾಗಿ ಕ್ರೂರಮೃಗಗಳಿಂದ ತುಂಬಿರುವ ಕಾಡಿನಲ್ಲಿ ಬದುಕಿರುವ ನನ್ನ ಮೇಲೆ ನಿಮ್ಮ ಹೃತ್ಪೂರ್ವಕವಾದ ಅನುಗ್ರಹವಿರಲಿ– ಎಂದು.

**ಲಕ್ಷ್ಮಣ :** ಅಪ್ಪಣೆ. ಆದರೆ ಅಣ್ಣನಿಗೆ ತಿಳಿಸಲು ಏನನ್ನೂ ಹೇಳಲಿಲ್ಲವಲ್ಲ?

**ಸೀತೆ :** (ತನ್ನೊಳಗೆ) ನಿಷ್ಠುರನಾದ ಅಣ್ಣನಿಗೆ ಅಷ್ಟೇ ನಿಷ್ಠುರಳಾಗಿ ನಾನು ಪ್ರತ್ಯುತ್ತರ ಕೊಟ್ಟೇನು ಎಂದು ಭಾವಿಸಿ ಲಕ್ಷ್ಮಣ ಈಗ ನನ್ನನ್ನು ಕೆರೆಕೆರೆದು ಕೇಳುತ್ತಿದ್ದಾನೆ; ಈತ ಈ ಇರಾದೆಯಿಂದ ಕೇಳುವುದು ಸೀತೆಗೆ ಧನ್ಯತೆಯನ್ನು ತರತಕ್ಕದ್ದಲ್ಲ. (ಎಲ್ಲರಿಗೂ ಕೇಳಿಸುವಂತೆ) ನಾ ಹೇಳಿದ್ದೇನೆಂದು ಆತನಿಗೆ ತಿಳಿಸು– ಈ ಹತಭಾಗ್ಯಳನ್ನು ನೆನೆದು ಪ್ರಜೆಗಳನ್ನು ವರ್ಣಾಶ್ರಮಧರ್ಮದ ಪ್ರಕಾರ ಪಾಲಿಸುವುದನ್ನು ಬಿಟ್ಟು ತೊಂದರೆ

ತಂದುಕೊಳ್ಳಬೇಡ, ಸ್ವಶರೀರ–ಸ್ವಧರ್ಮಗಳ ಬಗ್ಗೆ ಲಕ್ಷ್ಯ ಹಾಕು– (ಸಾಕಲ್ಲವೇ) ಲಕ್ಷ್ಮಣ? ನಾನೇಕೆ ಮಹಾರಾಜನನ್ನು ನಿಂದಿಸಲಿ?

**ಲಕ್ಷ್ಮಣ :** ಅಷ್ಟು ಮಾಡಲೂ ಶಕ್ತರಲ್ಲವೇ ನೀವು?[5]

**ಸೀತೆ :** ಹಾಗಾದರೆ ದೊರೆಗೆ ಹೇಳು: ಈ ನಿರಪರಾಧಿನಿಯನ್ನು ಹೃದಯದಿಂದ ಹೊರಹಾಕುವುದೇ ತಪ್ಪು; ಹೀಗಿರುವಾಗ ದೇಶದಿಂದ ಹೊರತಳ್ಳುವುದು ಎಷ್ಟು ದೊಡ್ಡ ತಪ್ಪಾಗಲಾರದು?–ಎಂದು.

**ಲಕ್ಷ್ಮಣ :** ಹೇಳಿ ಕಳಿಸತಕ್ಕದ್ದನ್ನು ಹೇಳಿದಿರಿ.

**ಪ್ರಭು ಹೃದಯದಿಂದ ದೇವಿಯರ ಹೊರದೂಡುವುದು ಎಂದರೇನು?**
**ಮನೆಯಿಂದ ಹೊರಗಟ್ಟುವುದನೊಮ್ಮೆ ಕಂಡಾತ ಸುಮ್ಮನಿದ್ದಾನು;**
**ದೇಶದಾಚೆಗೆ ಕಳಿಸುವುದನಾವ ತಮ್ಮನ್ನು ಕಂಡು ಸಹಿಸುವನು?** ॥೧೫॥

**ಸೀತೆ :** ದೊರೆಗೆ ನಾನು ಹೇಳಿದ್ದೇನೆಂದು ಇದನ್ನೂ ತಿಳಿಸು– ತಲೆಯ ಮೇಲೆ ಕೈಯೆತ್ತಿ ಜೋಡಿಸಿ (ನಮಿಸಿ) ಅವಳು ಕೇಳಿಕೊಳ್ಳುತ್ತಾಳೆ– ಎನ್ನು; ನಾನು ನಿರ್ಗುಣೆ, ಚಿರಪರಿಚಿತೆ, ಅನಾಥೆ ಅಥವಾ (ಬರಿ) ಸೀತೆ ಎಂದಾದರೂ ಭಾವಿಸಿ ನನ್ನನ್ನು ನೆನಪಿಟ್ಟುಕೊಳ್ಳುವ ಕೃಪೆ ಮಾಡಬೇಕು– ಎಂದು.

**ಲಕ್ಷ್ಮಣ :** **ಈ ಮಾತು ಕೇಳಿದರೆ ಗಾಯಕ್ಕೆ ಉಪ್ಪು ಸುರಿದಂತೆ ॥**
**ಆಗದಿರದಣ್ಣ ದುಃಸಹ ದುಃಖದಲಿ ಬೀಳದಿರನು** ॥೧೬॥

**ಸೀತೆ :** ಬಳಗ ಬಹಳ ದೊಡ್ಡದಿದ್ದರೂ ದೊರೆಗೆ ಅವನ ದುಃಖದಲ್ಲಿ ಸಹಭಾಗಿಗಳಾಗುವವರು ಎಲ್ಲಿದ್ದಾರೆ? ಈಗ ಅವನ ಬಗ್ಗೆ ನನ್ನನ್ನುಳಿದರೆ ನೀನೊಬ್ಬನೇ ಎಚ್ಚರಿಕೆ ವಹಿಸಬೇಕಾಗಿದೆ. ನೀನು ನಿನ್ನ ಅಣ್ಣನ ಆರೋಗ್ಯದ ಬಗ್ಗೆ ಲಕ್ಷ್ಯ ಹಾಕಬೇಕು.

**ಲಕ್ಷ್ಮಣ :** ಇದು ನಿಮ್ಮ ಮಹಾನುಭಾವತೆಗೆ ತಕ್ಕ ಮಾತು.

**ಸೀತೆ :** ಮಗೂ, ಲಕ್ಷ್ಮಣಾ, ನನ್ನ ಪರವಾಗಿ ನೀನು ರಾಘವಕುಲದ ರಾಜಧಾನಿಯಾದ ಅಯೋಧ್ಯೆಯ ಅಧಿದೇವತೆಗೆ ವಂದಿಸಬೇಕು;

---

5. ಗಂಡನನ್ನು ಸಾಧ್ವಿ ಎಂದೂ ದೂರಲಾರಳು– ಎಂಬುದು ನಿಜವಾದರೂ ನ್ಯಾಯವಾದ ಕಾರಣಕ್ಕಾಗಿ ಪ್ರಜೆ ರಾಜನನ್ನು ದೂರಲು ಸಮರ್ಥ; ಸೀತೆ ಈಗ ರಾಮರಾಜನ ಪ್ರಜೆ: ಆದುದರಿಂದ ಅವಳು ರಾಜನಾದ ರಾಮನ ನಡತೆಯನ್ನು ವಿಮರ್ಶಿಸಬಹುದು– ಎಂಬುದಿಲ್ಲಿ ಧ್ವನಿತ.

ಪ್ರತಿಮಾ ರೂಪದಲ್ಲಿರುವ ಅಯೋಧ್ಯೆಯ ದಶರಥ ಮಹಾರಾಜನನ್ನು ಸೇವಿಸಬೇಕು : ತಾಯಂದಿರ ಆಜ್ಞೆಗಳನ್ನು ಪಾಲಿಸಬೇಕು; ನನ್ನ ಪ್ರಿಯ ಸಖಿಯರಾದ ಪ್ರಿಯಂವದೆ ಮುಂತಾದವರನ್ನು ಸಮಾಧಾನಪಡಿಸಬೇಕು ಮತ್ತು ಹತಭಾಗ್ಯಳಾದ ಈ ನನ್ನನ್ನು ಯಾವಾಗಲೂ ನೆನಪಿನಲ್ಲಿಡಬೇಕು.

**ಲಕ್ಷ್ಮಣ :** (ಉದ್ವೇಗದಿಂದ)

**ನನ್ನ ಶತ್ರು ಆ ಮಾರುತಿ– ನಿಜ, ನಿಜ, ನಿಜ:**
**ಲಂಕಾ ಸಮರದಲಿ ಸತ್ತೆನೆಂದು ನಾನು ಸುಖದಲಿ ॥**
**ಪೂಜ್ಯರಾದ ನಿಮ್ಮನೀ ಕಾಡಿನಲ್ಲಿ ಬಿಟ್ಟು**
**ನಿಮ್ಮಳುವನು ಕೇಳಲೆಂದು ಬದುಕಿಸಿದನು ನನ್ನ** ॥೧೭॥

(ಸುತ್ತಲೂ ನೋಡಿ)

**ಹಸಿರನುಳಿದು ಹರಿಣಗಣ**
**ರೋದಿಸುತ್ತಿದೆ।**
**ಶೋಕವಿಧುರ ಹಂಸಗಳೂ**
**ದನಿ ಗೂಡಿಸಿವೆ ॥**
**ದೇವಿಯರೇ ನಿಮ್ಮ ನೋಡಿ**
**ಕುಣಿಯುವುದನು ಬಿಟ್ಟಿವೆ ।**
**ನವಿಲುಗಳೂ– ಎಂದ ಮೇಲೆ**
**ಪ್ರಾಣಿಗಳೇ ಉತ್ತಮ ॥**
**ನರನಿಗಿಂತ ಎಂದೆಂದೂ**
**ನಿರ್ಘೃಣ ನರನಧಮ** ॥೧೮॥

**ಸೀತೆ :** ಮಗು, ಲಕ್ಷ್ಮಣಾ, ಹೊತ್ತು ಮುಳುಗುತ್ತ ಬಂತು. ಈ ಪ್ರದೇಶವು ಮನುಷ್ಯಸಂಚಾರದಿಂದ ದೂರವಾಗಿದೆ. ಹಕ್ಕಿಗಳು ಹಾರಿಹೋಗಿವೆ. ದುಷ್ಟ ಮೃಗಗಳು ಹೊರ ಹೊರಡುತ್ತಿವೆ. ಹೋಗು, ತಡಮಾಡುವುದು ಒಳ್ಳೆಯದಲ್ಲ.

**ಲಕ್ಷ್ಮಣ :** (ಕೈಮುಗಿದು) ಇದು ನಿಮಗೆ ಲಕ್ಷ್ಮಣನ ಕೊನೆಯ ನಮಸ್ಕಾರ. ಆದುದರಿಂದ ಲಕ್ಷ್ಯವಿತ್ತು ಇದನ್ನು ಸ್ವೀಕರಿಸಿರಿ.

**ಸೀತೆ :** ನಾನು ಸದಾ ಅವಧಾನವುಳ್ಳವಳಲ್ಲವೇ?

**ಲಕ್ಷ್ಮಣ :** ದೇವಿಯರಿಗೆ ಬಿನ್ನವಿಸಿಕೊಳ್ಳುತ್ತೇನೆ:

**ನಿಮ್ಮ ಜೀವದ ಗೆಳೆಯ ಅಣ್ಣನ ನೆನೆದೊ**
**ಅಥವಾ ನಂಬಿದ ।**
**ಇತರ ಬಾಂಧವ ಜನರ ನೆನೆದೋ ಶೋಕ**
**ಉಕ್ಕಲು ಎದೆಯಲಿ ॥**
**ಕೊನೆಗೊಳಿಸಿಕೊಳ್ಳದಿರಿ ಬಾಳನು ಗರ್ಭ**
**ದೊಳಗಿಕ್ಷ್ವಾಕುವ**
**ಕುಲದ ಸಂತತಿ ಇರುವುದದ ಹೇಗಾದರೂ**
**ರಕ್ಷಿಸುವುದು !** ॥೧೯॥

ಸೀತೆ : ಆಗದೆನ್ನಲು ಸಾಧ್ಯವಿಲ್ಲದಂಥ ಮಾತು– ಲಕ್ಷ್ಮಣಾ, ನೀನು ಆಡಿದ್ದು.

ಲಕ್ಷ್ಮಣ : ಇನ್ನೊಂದು ಬಿನ್ನಹ :

ಸೀತೆ : ಇನ್ನೊಂದು ಯಾವುದು?

ಲಕ್ಷ್ಮಣ : **ನಿಮ್ಮ ಬಿಟ್ಟಹೆ, ದೇವಿಯರೆ, ವಿಜನವನದಲ್ಲಿ**
**ಅಣ್ಣನಾಜ್ಞೆಯ ಹೊತ್ತು ಜೀವನದಲಿ ॥**
**ಅನ್ಯಾಯ ಮಾಡಿರುವೆನಿದನೊಂದ ದಯವಿಟ್ಟು**
**ಮನ್ನಿಸಿರಿ ಸೆರಗೊಡ್ಡಿ ಬೇಡಿಕೊಂಬೆ** ॥೨೦॥

ಸೀತೆ : (ಅವಸರದಿಂದ) ಹಿರಿಯನಾಜ್ಞೆಯನ್ನು ಪಾಲಿಸಿ ಒಳ್ಳೆಯವನೆನ್ನಿಸಿಕೊಂಡಿರುವ ಈ ಸಂತೋಷಕಾಲದಲ್ಲಿ ನೀನೇಕೆ ಹೀಗೆ ಅನ್ಯಾಯ ಮಾಡಿದೆನೋ ಏನೋ ಎಂಬ ಶಂಕೆಗೆ ಒಳಗಾಗಿದ್ದೀಯೆ?

ಲಕ್ಷ್ಮಣ : (ಪ್ರದಕ್ಷಿಣೆ ಹಾಕಿ ಹೊರಡಲು ಸಿದ್ಧನಾಗುತ್ತಾನೆ).

ಸೀತೆ : (ಅಳುತ್ತಾಳೆ)

ಲಕ್ಷ್ಮಣ : (ಸುತ್ತಲೂ ನೋಡಿ)

ಲೋಕ ಪಾಲಕರೆ ಕೇಳಿರಿ ನನ್ನ ಮಾತ:

**ದಶರಥ ಮಹಾರಥನ ಸೊಸೆಯಂದಿರಿವರು ॥**

ಸೀತೆ : ಅತ್ಯಂತ ಶ್ಲಾಘನೀಯವಾದ ಮಾತನ್ನೀಗ ನಾನು ಕೇಳುತ್ತಿದ್ದೇನೆ.

ಲಕ್ಷ್ಮಣ : **ಮಧುಸೂದನನ ಗೃಹಿಣಿಯರು ರಾಮನೆಂಬ ।**

ಸೀತೆ : ಅಂಥ ಪುಣ್ಯ ನನಗೆಲ್ಲಿಂದ ಬಂದೀತು?

ಲಕ್ಷ್ಮಣ : **ಪತಿಭವನದಿಂದ ನಿರ್ವಾಸಿತೆಯರಾಗಿ ॥**

ಸೀತೆ : (ಕಿವಿ ಮುಚ್ಚಿಕೊಳ್ಳುತ್ತಾಳೆ).

ಲಕ್ಷ್ಮಣ : **ನಿರ್ಜನಾರಣ್ಯದಲಿ ಒಬ್ಬರೇ ಇಹರು ।**
**ಪರಿರಕ್ಷಿಸಿರಿ ಇವರ ದಯವಿಟ್ಟು ನೀವು**[6] ॥೨೧॥

ಸೀತೆ : (ತನ್ನ ಬಸಿರನ್ನು ನೆಟ್ಟದೃಷ್ಟಿಯಿಂದ ನೋಡಿ ಅನಂತರ ಲೋಕಪಾಲಕರಿಗೆ ಬಿನ್ನವಿಸಿಕೊಳ್ಳುವವಳಂತೆ ನಿಲ್ಲುತ್ತಾಳೆ).

ಲಕ್ಷ್ಮಣ : ಸೀತಾದೇವಿಯ ಪರವಾಗಿ ಭಗವತಿ ಭಾಗೀರಥಿಯನ್ನು ಪ್ರಾರ್ಥಿಸುತ್ತೇನೆ:

**ಎಡಬಲದ ತಾವರೆಯ ತಂಗೊಳಗಳ ಮಡಿ ನೀರ ಕೂಡಿ ಎದ್ದ**
**ನಿಡುದೋಳ್ಗಳಂಥ ವೀಚಿಗಳ ಬೀಸಿ ಓ ಗಂಗೆ ದಣಿದು ಬಿದ್ದ ॥**
**ಈ ಮಹಿಳೆಯರನು ಸಂತವಿಸು ಇವರು ಪತಿದೇವಪೂಜೆಗೆಂದು**
**ಇಳಿದೊಡನೆ ಮೀಹಕರೆಗಳಿಗೆ ಇಳಿಸು ಜಲಜವವ ತಾಯೆ ಇಂದು ॥೨೨॥**

ಅಲ್ಲದೆ ಇಲ್ಲೇ ಎಲ್ಲಾದರೂ ಇರಬಹುದಾದ ಇತರ ಎಲ್ಲರನ್ನೂ ಬೇಡಿಕೊಳ್ಳುತ್ತೇನೆ:

**ತವಸಿಗಳ ಬನದ ನಿಮಗಿದೋ ನಮನ ಇವರಬಲೆಯರ್ಕಳೆಂದೋ**
**ಕುಲವನಿತೆಯರ್ಕಳೋ ನಿಃಸಹಾಯರೋ ಪರಿತ್ಯಕ್ತರೆಂದೋ ॥**
**ದೇವಿಯರ ಮೇಲೆ ದಯೆದೋರಿ ಧರ್ಮಿಗಳೆ ನೀವು ಸಲಹದಿಹಿರೆ?**
**(ಮಾವರವಿದೆಂದು ಭಾವಿಸುವೆ ನನಗೆ ನೀವಿಷ್ಟು ಕರುಣಿಸಿದರೆ) ॥೨೩॥**

**ವನದೇವತೆಗಳೆ, ನಿಮಗಿದೋ ಅಂಜಲೀಹಸ್ತ ಬಿನ್ನವಿಸುವೆ**
**ಮಲಗಿರಲಿ, ತಪ್ಪಿಬಿದ್ದಿರಲಿ, ಸಂಕಟದೊಳಿರಲಿ ಇವರು ನೀವೆ ॥**
**ತಿಳಿದಿತ್ತ ಬಂದು ಶತಯತ್ನ ಮಾಡಿಯಾದರೂ ಕಾಯಬೇಕು**
**(ಉಳಿದಿಲ್ಲಿ ಕಾಯಲಾರದ ಪರಾಯಣನ ಕಂಡು ಕ್ಷಮಿಸಬೇಕು) ॥೨೪॥**

---

6. ರಾಮನೂ ಲಕ್ಷ್ಮಣನೂ ಸೀತೆಯನ್ನು ಯಾವ ರಕ್ಷಣೆಯ ಸಂಭವವನ್ನೂ ಊಹಿಸದೆ ಸಹಜವಾಗಿ ಘೋರಾರಣ್ಯದಲ್ಲಿ ಬಿಡಲು ನಿರ್ಧರಿಸಿದ ವಾಸ್ತವಿಕ ಭಾವನೆ ಇದರಿಂದ ಸ್ಪಷ್ಟವಾಗುತ್ತದೆ. ಇದು ಕರುಣರಸದ ಅಗಾಧ ಆಕರ. ಅವರು ನಿಶ್ಚಿತವೆಂದು ಊಹಿಸದ ವಾಲ್ಮೀಕಿ ರಕ್ಷಣೆ ಸೀತೆಗೆ ಮುಂದೆ ದೊರಕುವುದು ಒಂದು ವಿಧದ ನಾಟಕೀಯ ಮುನ್‌ಸೂಚನೆಯಾಗಿ ಲೋಕಪಾಲಕರಿಗೆ ಲಕ್ಷ್ಮಣ ಮಾಡಿಕೊಂಡ ಈ ಪ್ರಾರ್ಥನೆಯಲ್ಲಿ ಮೂಡಿದೆ. ಈ ಮುನ್‌ಸೂಚನೆಯು ದುರಂತಕಾರಿಯಾದ ದೋಷ ಅಥವಾ ದೌರ್ಬಲ್ಯ ಎಳ್ಳಷ್ಟೂ ಇಲ್ಲದ ಸೀತೆಗೆ ದುರಂತವಿಲ್ಲ, ಮಂಗಳಾಂತವಿದೆ ಎಂಬ ಅಂಶವನ್ನು ಪ್ರೇಕ್ಷಕರಲ್ಲಿ ಹೊಳೆಯಿಸುತ್ತದೆ.

ಹಿಂಸೆಯಿಂದಲೇ ಬಾಳುತಿರುವ ಜಂತುಗಳೆ ಬಿಟ್ಟು ಹೋಗಿ
ಶಂಕೆ ಬೇಡ ಇದು ಪರರ ಭೂಮಿ ಇಹುದಲ್ಲ ನಿಮ್ಮದಾಗಿ ॥
ನಿಮ್ಮ ಸಖಿಯರೀ ಇವರು ಜಿಂಕೆಗಳೆ ಬಿಡದಿರಿವರ ಜೊತೆಯ
ವಿರಹದಲ್ಲಿ ನೀವಿನಿಯೆಯರಿಗೆ ಗೆಳತಿಯರು ಕಳೆಯೆ ವೆತೆಯ ॥೨೫॥

ಗೆಳೆತನವ ತೋರ್ಪ ಹೊಳೆಗಳೇ, ಲೋಕಗಳ ಕಾವ ಹೆದ್ದೊರೆಗಳೇ
ತಳತಳಿಸಿ ಹರಿವ ತಾಯ್ ಗಂಗೆ, ಸಹಜತೆಯ ತಳೆದ ಪರ್ವತಗಳೇ॥
ಮತ್ತೆ ಮತ್ತೆ ಬೇಡುತ್ತಲಿರುವ ಲಕ್ಷ್ಮಣನು ನಿಮ್ಮೊಳಿದನು:
ಯತ್ನದಿಂದ ಕಾಯುವುದು, ಹೋಹೆನಿದೊ, ರಾಜಪುತ್ರಿಯರನು ॥೨೬॥

(ನಮಿಸಿ ಹೋಗುತ್ತಾನೆ).

ಸೀತೆ : ಏಕಾಕಿನಿಯಾದ ನನ್ನನ್ನು ಲಕ್ಷ್ಮಣನು ನಿಜವಾಗಿಯೂ ಬಿಟ್ಟು ಹೋದ! ಇದು ಹೇಗೆ ಸಾಧ್ಯ?

(ಸುತ್ತಲೂ ನೋಡಿ)

ಅಯ್ಯೋ, ಸೂರ್ಯ ಮುಳುಗಿದ; ಲಕ್ಷ್ಮಣನ ದನಿ ಕೂಡ ಕೇಳಿಸುವುದಿಲ್ಲ. ಜಿಂಕೆಗಳು ತಮ್ಮ ಪೊದೆಗಳನ್ನು ಸೇರುತ್ತಿವೆ. ಹಕ್ಕಿಗಳು ಗೂಡುಗಳಿಗೆ ಹಾರಿಹೋಗಿವೆ. ಹಿಂಸ್ರಜಂತುಗಳು ಓಡಾಡಲಾರಂಭಿಸಿವೆ. ಕಣ್ಣಿಗೆ ಕತ್ತಲು ಕವಿಯುತ್ತಿದೆ. ಈ ಮಹಾರಣ್ಯವೀಗ ನಿರ್ಜನವಾಗಿದೆ. ಮಂದಭಾಗ್ಯಳಾದ ನಾನೀಗ ಏನು ಮಾಡಬಲ್ಲೆ? ಒಬ್ಬಳೇ ಹೇಗೆ ಈ ಅರಣ್ಯದಲ್ಲಿ ತಿರುಗಲಿ? ಈ ಅನನುಕೂಲ ಪ್ರದೇಶದಲ್ಲಿ ನನಗೆ ಆಧಾರವಾಗಿ ಒಂದು ಕಡ್ಡಿ ಕೂಡ ಇಲ್ಲ. ನಾನು ಯಾವ ಪಾಪ ಮಾಡಿದ್ದೆನೋ ಹಿಂದೆ! ಅದರ ಫಲವಾಗಿಯೇ ನಾನು ಈಗಲೇ ಪತಿವಿಯೋಗವನ್ನು ಅನುಭವಿಸಬೇಕಾಗಿ ಬಂದಿದೆ. ಲಕ್ಷಣನಿಂದ ನಿಯೋಜಿತರಾದ ವನದೇವತೆಗಳೀಗ ಎಲ್ಲಿಯೂ ರೂಪತಃ ಕಾಣಿಸುವುದಿಲ್ಲವಲ್ಲ? ರಾಘವ ಕುಲಕ್ರಮಾಗತವಾಗಿ ನಡೆದು ಬಂದ ಪರಂಪರೆಗೆ ಸೇರಿದ ವಸಿಷ್ಠ–ವಾಲ್ಮೀಕಿ ಮುಂತಾದ ಮಹಾಪ್ರಭಾವಿಗಳಾದ ಮಹರ್ಷಿಗಳೀಗ ಎಲ್ಲಿ ಹೋದರು? ಅವರೇ ಈಗ ನನ್ನನ್ನೀ ಭಯಂಕರ ಸನ್ನಿವೇಶದಿಂದ ಪಾರು ಮಾಡಿ ಸಲಹಲಿ. (ಎಂದು ನುಡಿದು ಮೂರ್ಛೆ ಹೋಗುತ್ತಾಳೆ).

(ವಾಲ್ಮೀಕಿ ಮುನಿಯು ಪ್ರವೇಶಿಸುತ್ತಾನೆ).

ವಾಲ್ಮೀಕಿ: (ಅವಸರದಿಂದ)

**ಸಂಧ್ಯಾವಂದನೆಗೆಂದು ಗಂಗೆಯೆಡೆ**
**ಗೆಯ್ದಿದ ರಿಸಿಗುವರರು ಇಲ್ಲಿ ।**
**ಬಸಿರಿನ ಭಾರದೆ ದಣಿದು ಅಳುತಲಿಹ**
**ಅಸಹಾಯ ಸ್ತ್ರೀಯೊಬ್ಬಳನು ॥**
**ಕಂಡೆವೆನಲು ನಾ ಕೇಳಿ ಬಂದೆನತಿ**
**ತೀವ್ರ ಗತಿಯೊಳೀ ತಾಣಕ್ಕೆ ।**
**ಅವಳೆಲ್ಲಿರುವಳೊ ಹುಡುಕುವೆನೀಗಳೆ**
**ಇವಳೇ ಅವಳೋ ಇದಿರಾದ** ॥೨೭॥

(ಹುಡುಕುತ್ತಾನೆ. ಸೀತೆ ಕಾಣಿಸುತ್ತಾಳೆ)

**ಸೀತೆ :** (ಎದುರು ಬಂದು)
ಯಾರು ನನಗೆ ಗಾಳಿ ಬೀಸುತ್ತಿದ್ದಾರೆ? (ವಿಚಾರ ಮಾಡಿ) ಮತ್ತೆ ಯಾರೂ ಅಲ್ಲ. ಆಜ್ಞಾಪಾಲಕನಾದ ಲಕ್ಷ್ಮಣನ ವಿಜ್ಞಾಪನೆಯನುಸಾರವಾಗಿ ಭಗವತಿ ಭಾಗೀರಥಿಯು ತನ್ನ ಅಲೆಗಳಿಂದ ನನಗೆ ಅನುಗ್ರಹ ಮಾಡುತ್ತಿದ್ದಾಳೆ.

**ವಾಲ್ಮೀಕಿ:** (ಸ್ವಗತ) ಕತ್ತಲು ಕವಿದಿರುವುದರಿಂದ ಕಣ್ಣು ಕಾಣುವುದಿಲ್ಲ. ಆದುದರಿಂದ ಸದ್ದು ಮಾಡುತ್ತೇನೆ. (ಪ್ರಕಾಶ) ಇಗೋ ಇಲ್ಲಿ ನೋಡು– ನಾನು ಬಂದಿದ್ದೇನೆ.

**ಸೀತೆ :** (ಸಂತೋಷದಿಂದ) ಮಗು ಲಕ್ಷ್ಮಣಾ! ತಿರುಗಿ ಬಂದೆಯಾ?

**ವಾಲ್ಮೀಕಿ :** ನಾನು ಲಕ್ಷ್ಮಣನಲ್ಲ.

**ಸೀತೆ :** (ಮುಸುಕು ಹಾಕಿಕೊಂಡು ಸ್ವಗತ) ಅಯ್ಯೋ, ಬರಬಾರದ್ದು ಬಂತು! ಇವನಾವನೋ ಪರಪುರುಷ. ಈ ಮಹಾನರ್ಥದಿಂದ ನಾನು ಹೇಗೆ ತಪ್ಪಿಸಿಕೊಳ್ಳಲಿ? (ವಿಚಾರಿಸಿ) ಹೀಗೆ ಹೇಳುತ್ತೇನೆ: (ಪ್ರಕಾಶ) ನಾನೊಬ್ಬಳು ಏಕಾಕಿನಿಯಾದ ಸ್ತ್ರೀ.

**ವಾಲ್ಮೀಕಿ :** ನಿನ್ನೆದುರೀಗ ನಾನು ನಿಂತಿದ್ದೇನೆ. ಮಗಳೇ, ಪರಪುರುಷನೆಂಬ ಭೀತಿ ಬೇಡ. ಸಂಧ್ಯಾವಂದನೆಗಾಗಿ ಬಂದು ಗಂಗೆಯನ್ನು ಆರಾಧಿಸಿ ತಿರುಗಿ ಬಂದ ಮುನಿಕುಮಾರಕರಿಂದ ನಿನ್ನ ಸುದ್ದಿಯನ್ನು ಕೇಳಿ ತಪೋಧನನಾದ ನಾನು ನಿನ್ನನ್ನೇ ಹುಡುಕಿಕೊಂಡು ಬಂದೆ. ಈಗ ನಿನ್ನನ್ನು ಕೇಳುತ್ತೇನೆ: ಮಗಳೇ–

**ಧರ್ಮದಿಂದ ಕಾಳಗದಲಿ ಗೆದ್ದು ರಾಮಚಂದ್ರನು ॥**
**ರಾಜ್ಯಗೈಯುತಿರಲು ನಿನಗೆ ಹೇಗೆ ಬಂತು ಸಂಕಟ?** ॥೨೮॥

ಹೇಳು ಹೇಳು; ಸಂಕೋಚ ಬೇಡ.

ಸೀತೆ : ಆ ಪೂರ್ಣಚಂದ್ರಲೋಕದಿಂದಲೇ ನನ್ನ ಮೇಲೆ ಸಿಡಿಲೆರಗಿದ್ದು !

ವಾಲ್ಮೀಕಿ : ರಾಮಚಂದ್ರನಿಂದಲೇ, ಅವನ ಇಚ್ಛಾನುಸಾರವಾಗಿಯೇ ನಿನಗೆ ವಿಪತ್ತು ಒದಗಿತೋ?

ಸೀತೆ : ಹೌದು.

ವಾಲ್ಮೀಕಿ : ವರ್ಣಾಶ್ರಮ ವ್ಯವಸ್ಥಾಪನೆಗೆ ಕಾರಣನಾದ ಮಹಾರಾಜನಿಂದಲೇ ನೀನು ನಿರ್ವಾಸಿತೆಯಾಗಿದ್ದರೆ ನಾನೇನನ್ನೂ ಮಾಡಲಾರೆ; ಒಳ್ಳೆಯದಾಗಲಿ ನಿನಗೆ; ನಾನು ಹೊರಟೆ. (ಹೋಗಲು ಉಪಕ್ರಮಿಸುತ್ತಾನೆ).

ಸೀತೆ : ನನ್ನ ಬಿನ್ನಹವೊಂದಿದೆ–

ವಾಲ್ಮೀಕಿ : ಹೇಳು.

ಸೀತೆ : ರಾಮಚಂದ್ರನಿಂದ ಪರಿತ್ಯಕ್ತೆ ನಾನೆಂಬ ಕಾರಣದಿಂದ ನಾನು ನಿಮ್ಮ ದಯೆಗೆ ಅನರ್ಹಳಾದರೆ ಆಗಲಿ. ಬಸಿರಿಯಾದ ನಾನು ರಘು–ಸಗರ–ದಿಲೀಪ–ದಶರಥ ಮುಂತಾದ ಮಹಾರಾಜರ ಮತ್ತು ಅಂಥವರ ಸಂತತಿಯವಳೆಂಬ ಕಾರಣದಿಂದಲಾದರೂ ರಕ್ಷಣಾರ್ಹಳೆನ್ನಿಸುತ್ತೇನೆ.

ವಾಲ್ಮೀಕಿ : (ಹಿಂದಿರುಗಿ ಸ್ವಗತ) ಏನಿದು? ಇಕ್ಷ್ವಾಕುವಂಶವನ್ನು ಎತ್ತಿ ಹೇಳುತ್ತಾಳೆ ಈಕೆ! ಆದುದರಿಂದ ಪ್ರಶ್ನಿಸುತ್ತೇನೆ: (ಪ್ರಕಾಶ) ಮಗಳೇ, ನೀನು ದಶರಥನ ಸೊಸೆಯೇ?

ಸೀತೆ : ಹೌದು, ಪೂಜ್ಯರಾದ ತಾವು ಅಪ್ಪಣೆ ಕೊಡಿಸಿದಂತೆಯೇ.

ವಾಲ್ಮೀಕಿ: ವಿದೇಹದ ದೊರೆಯಾದ ಜನಕನ ಮಗಳೇನು ನೀನು?

ಸೀತೆ : ನಿಜ.

ವಾಲ್ಮೀಕಿ: ಸೀತೆಯೇನು ನೀನು?

ಸೀತೆ : ಸೀತೆಯಲ್ಲ ನಾನೀಗ ; ಒಬ್ಬಳು ಹತಭಾಗ್ಯ ಸ್ತ್ರೀ.

ವಾಲ್ಮೀಕಿ: ಅಯ್ಯೋ ತಪ್ಪು ಮಾಡಿಬಿಟ್ಟೆ. ಏನು ಮಾಡಿ ಈ ಮಹಿಳೆಯನ್ನೀಗ ನಾನು ಸಂತೈಸಲಿ?

ಸೀತೆ : (ನಾಚುತ್ತಾಳೆ).

ವಾಲ್ಮೀಕಿ: (ಸ್ವಗತ) ಇದೇನಿದು–ನಾಚುತ್ತಾಳೆ ಹೀಗೆ! ಆಗಲಿ, ಯೋಗ ದೃಷ್ಟಿಯಿಂದ ನೋಡಿ ತಿಳಿದುಕೊಳ್ಳುತ್ತೇನೆ. (ಧ್ಯಾನಮಗ್ನನಾಗಿ) (ಪ್ರಕಾಶ) ಮಗಳೆ, ಕೇವಲ ಜನಾಪವಾದಕ್ಕೆ ಹೆದರಿ ರಾಮ ನಿನ್ನನ್ನು ಬಿಟ್ಟ. ಮನಃಪೂರ್ವಕವಾಗಿ

ಬಿಡಲಿಲ್ಲ. ನಿರಪರಾಧಿನಿಯಾದ ನೀನು ನಮ್ಮಿಂದ ಬಿಡಲ್ಪಡಲು ತಕ್ಕವಳಾಗಿಲ್ಲ. ಬಾ, ಆಶ್ರಮಕ್ಕೆ ಹೋಗೋಣ.

**ಸೀತೆ :** ನೀವು ಯಾರು?

**ವಾಲ್ಮೀಕಿ:** ಕೇಳು–

**ನಿನ್ನ ತಂದೆಯಾದ ಜನಕರಾಜನ ಹಳೆಗೆಳೆಯ ನಾನು**
**ನಿನ್ನ ಮಾವ ದಶರಥನೃಪ ನನಗೆ ಬಾಲ್ಯಮಿತ್ರನು ॥**
**ಅನ್ಯನೆಂಬ ಶಂಕೆಯನ್ನು ತ್ಯಜಿಸು ನಾನೆ ವಾಲ್ಮೀಕಿಯು**
**ನಿನ್ನ ತಂದೆ ನಿನ್ನ ಮಾವ ಎಲ್ಲ ನಾನೆ ತಿಳಿ ಮಗು ॥೨೯॥**

**ಸೀತೆ :** ಪೂಜ್ಯರೆ, ನಮಸ್ಕಾರ ನಿಮಗೆ.

**ವಾಲ್ಮೀಕಿ:** ವೀರರನ್ನು ಹಡೆ; ನಿನಗೆ ಪತಿಯ ಪುನರ್ದರ್ಶನವಾಗಲಿ.

**ಸೀತೆ :** ನೀವು ಲೋಕಕ್ಕೆ ವಾಲ್ಮೀಕಿಯಾದರೆ ನನಗೆ ತಂದೆಯೇ ಆದುದರಿಂದ ನಿಮ್ಮ ಆಶ್ರಮಕ್ಕೆ ಹೋಗೋಣ, ನಡೆಯಿರಿ.

(ಗಂಗೆಯನ್ನು ಕಂಡು ಕೈ ಜೋಡಿಸಿ)

ಭಗವತಿ ಭಾಗೀರಥಿ, ನಾನು ಸುಖವಾಗಿ ಪ್ರಸವಿಸಿದರೆ ನಿನ್ನನ್ನು ಪ್ರತಿದಿನವೂ ನಾನೇ ಮಾಡಿದ ಮಲ್ಲಿಗೆ ಮಾಲೆಯನ್ನು ಅರ್ಪಿಸಿ ಪೂಜಿಸುತ್ತೇನೆ.

**ವಾಲ್ಮೀಕಿ:** ಇದು ಬಹಳ ದುರ್ಗಮವಾದ ಮಾರ್ಗ– ಅದರಲ್ಲೂ ಹೆಚ್ಚಾಗಿ ನಿನಗೆ. ಆದುದರಿಂದ ನಾನು ದಾರಿ ತೋರಿಸುತ್ತ ಹೋದ ಹಾಗೆ ನನ್ನ ಹಿಂದೆ ಹಿಂದೆ ಬಾ.

**ತುರುಚುದರ್ಭೆಪೊದೆಯೆದುರು ಮೆಲ್ಲನಿಡು ಹೆಜ್ಜೆಯನ್ನು ಮಗಳೇ**
**ಮರದ ಕೊಂಬೆಯಿದು ಬಾಗಿ ನಡೆದು ಬಾ ಎಡಕೆ ದೊಡ್ಡ ಗುಡಿ ॥**
**ಬಲದೊಳಿರುವ ಬೋಳ್ಮರದ ಮುಂಡ ನೀ ಹಿಡಿದು ಗಟ್ಟಿಯಾಗಿ**
**ಚಲಿಸು ಮುಂದೆ ನೀ ತಾವರೆಗೆರೆಯಲಿ ಕಾಲು ತೊಳೆಯಬಹುದು ॥೩೦॥**

**ಸೀತೆ :** (ವಾಲ್ಮೀಕಿ ಹೇಳಿದಂತೆ ಮಾಡುತ್ತಾಳೆ).

**ವಾಲ್ಮೀಕಿ:** (ಬೊಟ್ಟಿಟ್ಟು ತೋರಿಸುತ್ತ),

ಇದು ನಮ್ಮ ಆಶ್ರಮ.

**ಪುಂಸವನ ಮೊದಲಾದ ಸಂಸ್ಕಾರಗಳ ಮಗಳೆ**
**ಇಕ್ಷ್ವಾಕು ವಂಶದವರೆಲ್ಲ ಇಲ್ಲೇ ॥**

ನಮ್ಮಿಂದಲೇ ಮಾಡಿಸುವರು ಅದರಿಂದ ನೀ
ನಿನ್ನ ಗರ್ಭದ ಬಗೆಗೆ ಚಿಂತಿಸದಿರು ॥೩೧॥
ಇಲ್ಲಿರುವ ವೃದ್ಧೆಯರ ಸೇವೆಯಿಂದಲೆ ನೀನು
ನಿನ್ನತ್ತೆಯರ ಸೇವಿಸುವ ಸುಖವ ಪಡೆವೆ॥
ನಿನ್ನ ಗೆಳತಿಯರೆಲ್ಲ ಈ ಮುನಿಕುಮಾರಿಯರು
ಇವರೆ ನಿನ್ನಕ್ಕ ತಂಗಿಯರು ನೋಡಮ್ಮಾ ॥೩೨॥

(ಎಲ್ಲರೂ ಹೋಗುತ್ತಾರೆ)

ಮೊದಲನೆಯಂಕ ಮುಗಿದುದು

# ೫. ಎರಡನೆಯಂಕ

(ಇಬ್ಬರು ಮುನಿಕನ್ನಿಕೆಯರು ಪ್ರವೇಶಿಸುತ್ತಾರೆ)

**ಮೊದಲಿನವಳು:** ಲೇ ವೇದವತಿ, ದೇವರ ದಯದಿಂದ ಸುಖವಾಗಿ ನೀನು ಶುಭದ ಮೇಲೆ ಶುಭವನ್ನು ಹೊಂದುತ್ತಿರುವೆ. ರಾಮನ ಹೆಂಡತಿಯೂ ನಿನ್ನ ಪ್ರಿಯಸಖಿಯೂ ಆದ ಸೀತೆಗೆ ಎರಡು ಅವಳಿ ಮಕ್ಕಳು ಹುಟ್ಟಿವೆ!

**ವೇದವತಿ:** ಬಹಳ ಸಂತೋಷ, ಬಹಳ ಸಂತೋಷ. ಆ ಮಕ್ಕಳ ಹೆಸರೇನು?

**ಮೊದಲಿನವಳು:** ಹಿರಿಯನನ್ನು ಪೂಜ್ಯರು ಕುಶನೆಂದು ಕರೆಯುತ್ತಾರೆ, ಕಿರಿಯನನ್ನು ಲವ ಎಂದು.

**ವೇದವತಿ:** ಅವರು ನಡೆದಾಡಬಲ್ಲರೇನು?

**ಮೊದಲಿನವಳು:** ಏನು, ನಡೆದಾಡಬಲ್ಲರೇ– ಎಂದು ಕೇಳುತ್ತೀಯಾ?

**ಏನೆಂದು ಕೇಳುವೆ । ಗೆಳತಿ । ಏನೆಂದು ಕೇಳುವೆ । ಗೆಳತಿ ॥ಪಲ್ಲ॥**
**ಚಿಗರೆಗಳ ಜೊತೆಗೆ ಧಾವಿಸುತ್ತಾರೆ**
**'ಮರಿಸಿಂಗದೊಡನೆ ಗುದ್ದಾಡುತಾರೆ ॥**
**ಆ ಬಡವೆಯೆದೆಗೆ ತಂಪೆರೆಯುತಾರೆ**
**ಕಣ್ಗೆಮ್ಮ ಹಬ್ಬವಾಗಿರುತ್ತಾರೆ ॥೧॥**

ಅವರು ಮುನಿಜನರಲ್ಲಿ ಒಬ್ಬರ ತೊಡೆಯಿಂದ ಇನ್ನೊಬ್ಬರ ತೊಡೆಗೆ ಹೋಗುತ್ತಲೇ ಇರುತ್ತಾರೆ. ಈಗ ವಾಲ್ಮೀಕಿ ರಚಿಸಿದ ರಾಮಾಯಣವನ್ನು ಓದುತ್ತಿದ್ದಾರೆ.

**ವೇದವತಿ:** ಈ ಸಮಾಚಾರವನ್ನು ಕೇಳಿ ಇಷ್ಟರಮಟ್ಟಿಗಾದರೂ ಸೀತೆ ಪುಣ್ಯವಂತೆ ಎಂದು ಹೇಳುತ್ತೇನೆ. ಆದರೆ ಅನ್ಯೋನ್ಯವಾಗಿ ಸ್ನೇಹದಿಂದ ಬೆಳೆದು ಬಂದ ಕುಶಲವರ ಏಳಿಗೆಯು ಅತ್ಯಂತ ಆಳವಾಗಿ ಬೇರೂರಿರುವ ಸೀತೆಯ ಶೋಕವನ್ನು ಬೆಳೆಯಿಸುತ್ತಲೇ ಬಂದು ಅವಳನ್ನು ಗಾಸಿಗೊಳಿಸಿದೆ.

**ಮೊದಲಿನವಳು:** ಈ ಶೋಕವನ್ನು ಅವಳು ಬೆಳೆಯಗೊಡುವುದು ಅನಿವಾರ್ಯವಾಗಿದೆ. ಸನಿಹದ ನೈಮಿಶಾರಣ್ಯದ ಸುದ್ದಿಯೇನು ಬಲ್ಲೆಯಾ?

**ವೇದವತಿ:** ಮಹಾರಾಜನ ಯಜ್ಞಸಂಭಾರ ಬಂದು ತುಂಬಿದೆ. ಯಜ್ಞಕ್ಕೆ ಸಪತ್ನೀಕ ಋಷಿಮುನಿಗಳನ್ನು ಬರಹೇಳಲಾಗಿದೆ.

**ಮೊದಲಿನವಳು:** ಪೂಜ್ಯ ವಾಲ್ಮೀಕಿಗಳನ್ನು ಕರೆಯಲಾಗಿದೆಯೇ?

**ವೇದವತಿ:** ವಾಲ್ಮೀಕಿಗಳ ತಪೋವನಕ್ಕೂ ರಾಮದೂತ ಬಂದಿದ್ದಾನೆ ಎಂದು ಕೇಳಿದ್ದೇನೆ.

**ಮೊದಲಿನವಳು:** ಈಗ ಸೀತೆಯನ್ನೆಲ್ಲಿ ನೋಡಬಹುದು?

**ವೇದವರಿ:** ಇಲ್ಲೇ ಈ ಸಾಲವೃಕ್ಷದ ನೆರಳಿನಲ್ಲಿ. ಹೇಗೆ ರಾಮದೂತನ ಕಣ್ಣು ತಪ್ಪಿಸಲಿ?– ಎಂದು ಅವಳು ಚಿಂತಿಸುತ್ತ ಕುಳಿತಿದ್ದಾಳೆ.

(ಇಬ್ಬರೂ ಹೋಗುತ್ತಾರೆ)

ಇಲ್ಲಿಗೆ ಪ್ರವೇಶಕ ಮುಗಿದುದು.

(ಅನಂತರ ನೆಲದ ಮೇಲೆ ಕುಳಿತ ಚಿಂತಾಸಕ್ತೆಯಾದ ಸೀತೆ ಪ್ರವೇಶಿಸುತ್ತಾಳೆ)

**ಸೀತೆ :** (ನಿಟ್ಟುಸಿರಿಟ್ಟು) (ಸ್ವಗತ)

ಸ್ವಭಾವತಃ ಕಠಿನವಾಗಿರುವ ಗಂಡೆದೆ ನಂಬಲರ್ಹವಲ್ಲ. ಏಕೆಂದರೆ ನಮ್ಮಿಬ್ಬರದು ಶಿಲಾಲೇಖಯೋಗ್ಯವಾದ ಗೆಳೆತನ, ದೇವಲೋಕದ ಉಮಾಮಹೇಶ್ವರರಿದ್ದ ಹಾಗೆ ಸೀತಾರಾಮರಿದ್ದಾರೆ– ಎಂಬಷ್ಟು ಪ್ರಸಿದ್ಧಿ ಹಬ್ಬಿರುವಾಗ ನಿರಪರಾಧಿನಿಯಾದ ನಾನು ಈಗ ಇಂಥ ಸ್ಥಿತಿಯನ್ನು ಅನುಭವಿಸುತ್ತಿದ್ದೇನೆ. ಅಥವಾ ನಾನೀಗ ಆರ್ಯಪುತ್ರನನ್ನಾದರೂ ಹೇಗೆ ದೂಷಿಸಲಿ? ಹಿಂದೆ ನಾನು ಆರ್ಯಪುತ್ರನೊಂದಿಗೆ ಏಕಶಯನೆಯಾಗಿದ್ದಾಗ ಕೇವಲ ಒಂದು ಚೂರು ವಸ್ತ್ರದಿಂದಷ್ಟೇ ಬೇರೆಯಾಗಿದ್ದೇನೆ ಎಂದು ಕೊಂಡಿದ್ದೆ; ಈಗ ಅನೇಕ ಯೋಜನ ದೂರದಲ್ಲಿ ನಿರ್ವಾಸಿತೆಯ ಬಾಳನ್ನು ಬಾಳುತ್ತಿದ್ದೇನೆ! ನನ್ನಷ್ಟು ಆತನಿಗೆ ಯಾರು ದುಃಖವನ್ನು ಉಂಟುಮಾಡಬಲ್ಲರು? ಆಗ ಅವನೊಡನೆ ಬೆಳದಿಂಗಳನ್ನು ಕಂಡೆ. ಅವನೊಡನೆ ಕೋಗಿಲೆಯ ಹಾಡನ್ನು ಕೇಳಿದೆ. ಅವನೊಡನೆ ಮಲಯಾನಿಲ ಸ್ಪರ್ಶವನ್ನು ಅನುಭವಿಸಿದೆ. ಈಗಲಾದರೋ ಏಕಾಕಿನಿಯಾದ ನನ್ನಿಂದ ಚಂದ್ರಮನು ನೋಡಲ್ಪಟ್ಟ, ಕೋಗಿಲೆಯ ಹಾಡು ಕೇಳಲ್ಪಟ್ಟಿತು, ಮಲಯಾನಿಲ ಸ್ಪರ್ಶಿಸಲ್ಪಟ್ಟ. ನನ್ನಂಥ ಹೆಂಗಸು ಪ್ರಾಣ ತೆಗೆದುಕೊಂಡಾಳೆಂಬುದು ಶುದ್ಧ ಸುಳ್ಳು. ಹಿಂದೆ ನಾನು ನನ್ನ ಸ್ವಾಮಿಗೆ ಪ್ರಿಯೆಯಾಗಿ ಮಿಥಿಲೆಯ ಎಲ್ಲ ಜನರಿಗೂ ಬೇಕಾದವಳಾಗಿದ್ದು ಈಗ ಈ ಅವಸ್ಥೆಗಿಳಿದು ಶೋಚನೀಯೆಯಾಗಿ ಬಿಟ್ಟೆನಲ್ಲಾ! ಎಂಬ

ಲಜ್ಜೆ ನನ್ನನ್ನು ಬಹಳವಾಗಿ ಕಾಡಿಸುತ್ತಿದೆ. ಹುಡುಗರಿಬ್ಬರು ಈಗ ಹುಟ್ಟಿದರು; ಅವರನ್ನು ಬೆಳೆಯಿಸಿಯೂ ಆಯಿತು. ಪೂಜ್ಯ ವಾಲ್ಮೀಕಿಗಳು ಆದರದಿಂದ ನೋಡಿಕೊಳ್ಳುತ್ತಿದ್ದಾರೆ. ತಪೋವನದಲ್ಲಿರುವವರಿಗೆ ಹೊಂದಲಾರದ ನಿಟ್ಟುಸಿರ ಬಾಳನ್ನು ಕಳೆಯುವುದು ನನಗೆ ತಕ್ಕದ್ದಲ್ಲ. ನನ್ನ ಪ್ರಿಯಸಖಿ ವೇದವತಿಗೆ ಕರೆಗೊಟ್ಟಿಲ್ಲ, ಅವಳಿಗೆ ಏನನ್ನೂ ಹೇಳಿಲ್ಲ– ಎಂಬುದೇ ಪ್ರಾಣತ್ಯಾಗ ಮಾಡಲು ಈಗ ನನಗಿರುವ ಪ್ರತಿಬಂಧ.

(ಆಮೇಲೆ ವೇದವತಿ ಪ್ರವೇಶಿಸುತ್ತಾಳೆ)

**ವೇದವತಿ:** (ಸ್ವಗತ) ತಪೋಧನರನ್ನು ನಮಸ್ಕರಿಸಿದ್ದಾಯಿತು. ಅತಿಥಿಗಳನ್ನು ಸತ್ಕರಿಸುವುದೂ ಮುಗಿಯಿತು. ಆದ್ದರಿಂದ ಈ ಕಡೆಯಿಂದ ಸಾಲವೃಕ್ಷದೆಡೆಗೆ ಹೋಗಿ ನನ್ನ ಪ್ರಿಯ ಸ್ನೇಹಿತೆಯನ್ನು ಮಾತಾಡಿಸುತ್ತೇನೆ. ಈ ವಿದೇಹರಾಜಪುತ್ರಿಯು ಬೇಸಿಗೆಯ ಬಳ್ಳಿಯಂತೆ ಬಡವಾಗಿ ಬಿಳಿಚಿಕೊಂಡು ತನ್ನ ಹೃದಯವನ್ನೇ ದೂರುತ್ತ ಸಾಲವೃಕ್ಷದ ಬುಡವನ್ನು ಅಲಂಕರಿಸಿದ್ದಾಳೆ. ಹೋಗುತ್ತೇನೆ ಅವಳ ಹತ್ತಿರ. ಚಿಂತಾಪರವಶೆಯಂತೆ ಕೆಳಮೋರೆ ಮಾಡಿಕೊಂಡ ಈಕೆ ನಿಡುಗೂದಲಿನಿಂದ ಮರೆಮಾಡಲ್ಪಟ್ಟ ಕಣ್ಣುಗಳಿಂದ ದೀನೆಯಾಗಿ ತೋರುತ್ತಾಳೆ. ಕರೆಯುತ್ತೇನೆ ಇವಳನ್ನು (ಪ್ರಕಾಶ) ಗೆಳತಿ, ವೈದೇಹಿ! (ಎಂದು ಕರೆಯುತ್ತಾಳೆ)

**ಸೀತೆ :** (ಗಡಿಬಿಡಿಯಿಂದ ನೋಡಿ) ಒಳ್ಳೆಯದು, ಒಳ್ಳೆಯದಾಯಿತು. ಪ್ರಿಯ ಸಖಿಯಾದ ವೇದವತಿ! ಬಂದೆಯಾ? ನಿನಗೆ ಸ್ವಾಗತ.

(ತಬ್ಬಿ ಕುಳ್ಳಿರಿಸುತ್ತಾಳೆ)

**ವೇದವತಿ:** ಕುಶಲವರಿಗೆ ಕುಶಲವೇ?

**ಸೀತೆ :** ವನವಾಸಿಗಳೆಲ್ಲರಿಗೂ ಇರುವ ಕುಶಲ ಅವರಿಗಿದೆ.

**ವೇದವತಿ:** ನಿಮ್ಮ ಸಮಾಚಾರ ಏನು?

**ಸೀತೆ :** (ಜಡೆಯನ್ನು ತೋರಿಸಿ) ಇದು ಹೇಗಿದೆ? ನೋಡು.

**ವೇದವತಿ:** (ಸ್ವಗತ) ಈ ಬಡವೆ ಬಹಳ ನೊಂದುಕೊಂಡಿದ್ದಾಳೆ. ರಾಮನನ್ನು ದೂರಿ ಅವಳಲ್ಲಿ ದುಃಖತ್ಯಾಗ ಶಕ್ತಿಯನ್ನು ತುಂಬುತ್ತೇನೆ. (ಪ್ರಕಾಶ) ಅಯ್ಯೋ ಮಂಕೇ, ಅಂಥ ನಿರಪೇಕ್ಷನೂ ನಿರ್ದಯನೂ ಆದ ಮನುಷ್ಯನಿಗಾಗಿ ನೀನು ಕೃಷ್ಣಪಕ್ಷದ ಚಂದ್ರನಂತೆ ದಿನೇ ದಿನೇ ಎಷ್ಟು ಕ್ಷೀಣವಾಗುತ್ತಿದ್ದೀಯೆ!

**ಸೀತೆ :** ಅವನು ಹೇಗೆ ನಿರ್ದಯನು?

**ವೇದವತಿ:** ನಿನ್ನನ್ನು ಪರಿತ್ಯಜಿಸಿದ್ದರಿಂದ.

**ಸೀತೆ :** ನಾನು ಪರಿತ್ಯಕ್ತೆಯೇ?

**ವೇದವತಿ:** (ನಕ್ಕು ಜಡೆಯನ್ನು ನೇವರಿಸಿ) ಜಗತ್ತು ಹಾಗೆ ಹೇಳುತ್ತಿದೆ. ನಿಜವಾಗಿಯೂ ನೀನು ಪರಿತ್ಯಕ್ತೆ!

**ಸೀತೆ :** ಆದರೆ ;ನಾನು ಶರೀರದಿಂದಲ್ಲದೆ ಮನಸಾ ಪರಿತ್ಯಕ್ತೆಯಲ್ಲ.

**ವೇದವತಿ:** ಪರಕೀಯರ ಮನಸ್ಸನ್ನು ನೀನು ಹೇಗೆ ತಿಳಿದುಕೊಳ್ಳುವೆ?

**ಸೀತೆ :** ಅವನ ಹೃದಯ ಸೀತೆಗೆ ಪರಕೀಯವಾಗುವುದು ಹೇಗೆ?

**ವೇದವತಿ:** ಭೇಷ್, ನಿನ್ನ ಅಪರಿತ್ಯಕ್ತ ಅನುರಾಗವೇ!

**ಸೀತೆ :** ಅಧನ್ಯೆಯಾದ ನನಗಾಗಿ ಸೇತುಬಂಧ ಮುಂತಾದ ಕಾರ್ಯಗಳನ್ನು ಮಾಡಿ ಆರ್ಯಪುತ್ರ ಪರಿಶ್ರಮಪಟ್ಟದ್ದು ಪ್ರಸಿದ್ಧವಾಗಿಲ್ಲವೇ? ಅದೆಲ್ಲ ನನ್ನ ಮೇಲೆ ಅನುರಾಗವಿಲ್ಲದೆಯೆ ಮಾಡಿದ್ದೇ?

**ವೇದವತಿ:** ಅಯ್ಯೋ, ಆತ್ಮಶ್ಲಾಘಿನಿ, ರಾವಣನ ಮೇಲೆ ಕೋಪ ಬರುವುದು ಕ್ಷತ್ರಿಯರಿಗೆ ಸಹಜ; ಅದು ಸೀತೆಯ ಮೇಲಿನ ಪ್ರೀತಿಯಲ್ಲ.

**ಸೀತೆ :** ಇನ್ನೊಂದು ಪ್ರಮಾಣವಿದೆಯಲ್ಲಾ!

**ವೇದವತಿ:** ಅದಾವುದು ಇನ್ನೊಂದು?

**ಸೀತೆ :** ಇದು.

**ವೇದವತಿ:** ಇದೆಂದರೆ ಯಾವುದು?

**ಸೀತೆ :** (ನಾಚಿ) ಸವತಿಯರಿದ್ದಿದ್ದರೆ ಅವರಿಗೆ ನಿಟ್ಟುಸಿರು ಬರುವಂತೆ ರಾಮನ ವಕ್ಷಃಸ್ಥಲದಲ್ಲಿ ಬಹಳ ಕಾಲ ನಾನು ಮುದ್ದಾಡಲ್ಪಟ್ಟದ್ದು.

**ವೇದವತಿ:** ಸಖಿ, ಬಹಳ ಹೆಮ್ಮೆ ಪಡಬೇಡ. ರಾಮನ ಯಜ್ಞದೀಕ್ಷೆಯ ಕಾಲವೀಗ ಬಂದಿದೆ.

**ಸೀತೆ :** ಅದರಿಂದ ಏನು?

**ವೇದವತಿ:** ಅದರಲ್ಲಿ ರಾಮನು ಅಶ್ವಸ್ತ್ರೀಯ ಕೈಹಿಡಿಯಬೇಕಾಗುತ್ತದೆ!

**ಸೀತೆ :** ನಾನು ಆರ್ಯಪುತ್ರನ ಹೃದಯದ ಮೇಲೆ ಪ್ರಭಾವವುಳ್ಳವಳಲ್ಲದೆ ಕೈಯ ಮೇಲಲ್ಲ.

**ವೇದವತಿ:** (ಸ್ವಗತ) ಭಲೇ, ಇವಳ ಅನುರಾಗದ ಆಳವೇ! (ಪ್ರಕಾಶ) ಸಖಿ, ಮಕ್ಕಳ ಮೋರೆಯುನ್ನು ಕಂಡ ಮೇಲೂ ನಿನ್ನ ಪ್ರವಾಸದ ಶೋಕ ಹೋಗಲಿಲ್ಲವೇ?

**ಸೀತೆ :** ಶೋಕ ಹೋಗಬೇಕೆಂದು ಮಾಡಿದ ಉಪಾಯದಿಂದಲೇ ಶೋಕ ಹೆಚ್ಚಾಗುತ್ತಿದೆ.

**ವೇದವತಿ:** ಅದು ಹೇಗೆ?

**ಸೀತೆ :** ಮೊದಲು ಕಿರುಹಲ್ಲು ಮೂಡಿ ಬರುತ್ತಿರುವಾಗ ಬಾಯ್ದೆರೆದು ಬಾಲಕರು ನನ್ನ ನೋಡಿ ನಕ್ಕಾಗ ಮತ್ತು ಮುದ್ದು ಮುದ್ದಾಗಿ ಮಾತಾಡಿದಾಗ ಅವರ ನಡುವೆ ಮುಳುಗಿ ಹೋದೆನೆಂದು ಎನ್ನಿಸುತ್ತಿತ್ತು. ಆದರೆ ಅವರೀಗ ಕೌಮಾರದಶೆಯಲ್ಲಿ ಕಾಲಿಡುತ್ತಿರುವುದರಿಂದ ನನ್ನ ವೇದನೆ ಹೆಚ್ಚುತ್ತ ಹೋಗಿದೆ.

**ವೇದವತಿ:** ಎಳೆ ಮಕ್ಕಳ ತಾಯಿಯಾದ ನೀನು ಇಂಥ ಅವಸ್ಥೆಯಲ್ಲಿ ತೊಳಲಾಡುವ ಹಾಗೆ ಮಾಡಿದ ಮಹಾರಾಯ ಎಷ್ಟು ನಿರ್ದಯ, ಅಬ್ಬಬ್ಬಾ!

**ಸೀತೆ :** ಸಖಿ, ವೇದವತಿ, ಅಂದರೆ...?

**ವೇದವತಿ:** ನಾಚಿಕೆಯೇತಕ್ಕೆ? ಆರ್ಯಪುತ್ರನನ್ನು ನೋಡಬೇಕೆನ್ನಿಸುತ್ತದೆ ಎನ್ನು.

**ಸೀತೆ :** (ಸ್ವಗತ) ನಾಚಿಕೆಯಿಂದೇನು? ಹೀಗೆನ್ನುವೆ:

ಕುಶಲವರ ತಂದೆಯನ್ನು ಕಂಡದ್ದರಿಂದ ನನ್ನ ಜನ್ಮ ಅಮೂಲ್ಯವಾಗುವುದೆಂದು ಭಾವಿಸಿದ್ದೇನೆ. ತಪ್ಪೇನಿದರಲ್ಲಿ?

**ವೇದವತಿ:** ನಿನಗೆ ರಾಜದರ್ಶನವಾಗುವ ಕಾಲ ಬಂದಿದೆ.

**ಸೀತೆ :** ಹೇಗೆ?

(ತೆರೆಯ ಹಿಂದೆ ಸರಿಸಿ)

ಎಲೈ ಆಶ್ರಮವಾಸಿಗಳೇ; ಕೇಳಿ, ಕೇಳಿ: ಹತ್ತಿರದಲ್ಲೇ ಅಶ್ವಮೇಧವೆಂಬ ದೊಡ್ಡ ಯಜ್ಞ ನಡೆಯುತ್ತಿದೆ. ಯಜ್ಞ ಸಾಮಗ್ರಿಗಳೆಲ್ಲವನ್ನೂ ತರಲಾಗಿದೆ. ವಸಿಷ್ಠ, ಆತ್ರೇಯ ಮುಂತಾದ ಮಹರ್ಷಿಗಳು ನಾನಾ ದೇಶಗಳ ಆಶ್ರಮಗಳಿಂದ ಬಂದಿದ್ದಾರೆ. ಕೇವಲ ವಾಲ್ಮೀಕಿ ಮುನಿಗಳ ಆಗಮನವನ್ನು ನಿರೀಕ್ಷಿಸುತ್ತ, ಅವರು ಇನ್ನೂ ಬಾರದಿರುವುದರಿಂದ, ಮಹಾರಾಜರು ಯಜ್ಞ ದೀಕ್ಷೆಯನ್ನು ತೆಗೆದುಕೊಂಡಿಲ್ಲ. ವಾಲ್ಮೀಕಿಗಳ ತಪೋವನದಲ್ಲಿರುವವರನ್ನು ಆಮಂತ್ರಿಸಲು ಈಗ ರಾಮದೂತ ಬಂದಿದ್ದಾನೆ. ಆದುದರಿಂದ ತಡಮಾಡತಕ್ಕದ್ದಲ್ಲ.

**ಹಿಡಿದು ತೀರ್ಥೋದಕಗಳ । ತುಂಬಿರುವ**
**ಗಡಿಗೆಗಳ, ದರ್ಭೆಹುಲ್ಲ ॥**

**ನಡೆಯಲೀ ಮುನಿಗಳೆಲ್ಲ । ಸಲೆ ಚೆಲ್ಲಿ**
**ಬಿಡಲಿ ಮಂಗಲಬಲಿಗಳ ॥೨॥**

ತಿಳಿಯಿತೇ? ಮುಂದೆ ಗಡಿಗೆ ಹಿಡಿದ ಮುನಿಗಳು, ಹಿಂದೆ ಪರ್ಣಕುಟಿಗಳ ಅಂಗಳಗಳಲ್ಲಿ ಬಲಿ ಚೆಲ್ಲುವ ಮುನಿಕನ್ನಿಕೆಯರು–ಹೀಗೆ ಹೋಗಲಿ ನಮ್ಮ ಆಶ್ರಮವಾಸಿಗಳ ಗುಂಪು!

**ಸೀತೆ** : ವೇದವತಿ; ಬೇಗ ಹೊರಡು; ಎಲ್ಲರಿಗೂ ಹೊರಡಲು ಕರೆಗೊಟ್ಟ ಪೂಜ್ಯ ಕಾಶ್ಯಪನು ಯಜ್ಞಸಂಭಾರಗಳನ್ನು ತೆಗೆದುಕೊಂಡು ಮುಂದೆ ಹೊರಟು ನಿಂತಿದ್ದಾನೆ. ನಾನು ಕುಶಲವರನ್ನು ಹೊರಡಲು ಸಜ್ಜುಗೊಳಿಸುತ್ತೇನೆ.

(ಎರಡನೆಯಂಕ ಮುಗಿದುದು)

# ೬. ಮೂರನೆಯಂಕ

(ಹೊರೆ ಹೊತ್ತು ಮಾರ್ಗಾಯಾಸದಿಂದ ಬಳಲಿದ ತಪಸ್ವಿಯೊಬ್ಬ ಈಗ ಪ್ರವೇಶಿಸುತ್ತಾನೆ.)

**ತಪಸ್ವಿ** : (ಸ್ವಗತ) ಅಬ್ಬಬ್ಬಾ, ಸುಸ್ತು! ಚೆನ್ನಾಗಿ ದಣಿದು ಹೋಗಿದ್ದೇನೆ. ಈ ವರ್ಷ ಸೀತಾಪರಿತ್ಯಾಗದಿಂದ ಬೇಸಿಗೆ ಬಹಳ ಉದ್ದವಾಗಿ ತೋರುತ್ತಿದೆ. ನನ್ನ ಕಾಲು ಎಷ್ಟು ಸೋತಿದೆ ಅಂದರೆ ಈ ಹೊರೆಯನ್ನು ಎತ್ತಿ ಹೊರಲಾರೆ, ಹೊತ್ತರೆ ಅದನ್ನು ಕೆಳಗಿಳಿಸಲಾರೆ! ಅಂಗಾಲುಗಳಲ್ಲಿ ಗುಳ್ಳೆಗಳೆದ್ದಿವೆ! ನಮ್ಮ ಜೊತೆಗೇ ಹೊರಟ ಸುಕುಮಾರಿ ಸೀತೆ ಮತ್ತು ಎಳೆ ಮಕ್ಕಳಾದ ಕುಶಲವರು ಹೊತ್ತು ಮುಳುಗುವುದರೊಳಗೇ ಈ ನೈಮಿಶಾರಣ್ಯಕ್ಕೆ ಬಂದು ಮುಟ್ಟಿದ್ದು ಎಲ್ಲದಕ್ಕಿಂತ ಹೆಚ್ಚಿನದು. ಆ ಗಂಗಾತಟದಿಂದ ಈ ಗೋಮತೀತೀರದ ಗಂಗಾತಟಕ್ಕೆ ಬರುವದರೊಳಗೆ ನನ್ನ ಕಾಲು ತಟಪಟವಾಯಿತು! ಹೊಳೆದಾಟಬೇಕಾದ್ದಿಲ್ಲವಾದರೂ ಈ ಕಾಡ ಕೊಳೆ ದಾಟಬೇಕಾಯ್ತಲ್ಲ– ಎಂಥ ಕಾಡು, ಏನು ಜೇಡು! ಅಬ್ಬಬ್ಬಾ! ಆ ಅರಣ್ಯ–ಈ ಅರಣ್ಯಗಳನ್ನು ಜೋಡಿಸುವ ಅರಣ್ಯ ಅರಣ್ಯವೇ ಅಲ್ಲ, ಯಮನೂರ ಹಾದಿ! ಆದರೆ ನಮ್ಮ ಆಶ್ರಮಾರಣ್ಯ ಮತ್ತೊಂದು ಬಗೆಯ ಚೆಲುವುಳ್ಳದ್ದು! ಅಂತೂ ಬಂದು ಬಿದ್ದೆ ನೈಮಿಶಾರಣ್ಯದ ಆಶ್ರಮಾಂಗಳದಲ್ಲಿ! ಉಶ್ ![7]

ಇಲ್ಲಿಗೆ ಪ್ರವೇಶಕ ಮುಗಿದುದು.

---

7. ಈ ತಪಸ್ವಿಯ ಮಾತನ್ನು ಇದ್ದದ್ದಕ್ಕಿಂತ ಇಲ್ಲಿ ಸ್ವಲ್ಪ ಉದ್ದ ಮಾಡಲಾಗಿದೆ. ಏಕೆ? ಕವಿ ದಿಙ್ನಾಗನಿಗೆ ಭೂಗೋಲ ಪರಿಚಯ ಸಾಲದೆಂದು ಕೆಲ ವಿಮರ್ಶಕರು ಹೇಳಿದ್ದಾರೆ. ಅಯ್ಯೋ, ಭಾರತಗದಲ್ಲಿ ಪ್ರಸಿದ್ಧ ಸ್ಥಳಗಳ ಹೆಸರುಗಳಿಗೆ ಹತ್ತು ಪಟ್ಟು ಪ್ರಾದೇಶಿಕ ಪ್ರಸಿದ್ಧಿಯ ತತ್ಸಮ ಸ್ಥಲನಾಮಗಳಿರುವಾಗ ಕವಿ ನೈಮಿಶಾರಣ್ಯವೆಂದು ಹೇಳಿದ್ದನ್ನು ವಿಮರ್ಶಕ ಊಹಿಸಿದ ಭಾರತದ ಒಂದು ಭಾಗದೊಡನೆ ಏಕೀಕರಿಸಿಕೊಂಡು ನಾಟಕದ ರಸಚರ್ವಣಕ್ಕೆ ಭಂಗವನ್ನೇಕೆ ತಂದುಕೊಳ್ಳಬೇಕು? ಇದು ನೈಮಿಶಾರಣ್ಯವಾಗಿರಬಹುದು; ಅಥವಾ ದೊಡ್ಡ ನೈಮಿಶಾರಣ್ಯದ ಒಂದು ಅಂಚಾಗಿರಬಹುದು. ವಾಲ್ಮೀಕಿಯ ಆಶ್ರಮದಿಂದ ಹೊರಟರೆ ಇಲ್ಲಿಗೆ ನಡೆದು ಬರಲು ೮–೧೦ ತಾಸುಗಳು ಬೇಕು. ಅಲ್ಲಿದ್ದಂತೆಯೇ ಇಲ್ಲಿಯೂ ಗಂಗಾನದಿಯಿದೆ, ಗೋಮತೀ ನದಿಯಿದೆ.

(ಶೋಕಾತುರ ರಾಮ ಮತ್ತು ಲಕ್ಷ್ಮಣ ನೈಮಿಶಾರಣ್ಯದ ಯಜ್ಞಭೂಮಿಯ ಡೇರೆಯೊಂದರಲ್ಲಿ ಪ್ರವೇಶಿಸುತ್ತಾರೆ)

**ಲಕ್ಷ್ಮಣ :** ಅಣ್ಣಾ, ಈ ಕಾಡಿಗೆ ನಡೆ (ತಿರುಗಿ ತನ್ನಷ್ಟಕ್ಕೇ)

**ಅಪರಾಧ ಮಾಡದಿಹ ದೇವಿಯನು ಕರೆದುಕೊಂಡು**
**ಕಾಡಿನಲಿ ಬಿಡಲು ನಾ ಮೊದಲು ಹೊರಟಿದ್ದೆನೆಂದು ॥**
**ಅಪರಾಧವನು ಮತ್ತೆ ಮಾಡಲೀ ಕುಲಶೇಷನಾದ**
**ಅಣ್ಣನನು ಕರೆದುಕೊಂಡೆತ್ತಲೋ ಹೊರಟಿರುವೆನೀಗ ॥೧॥**

ಸ್ವಜನರಿಗೆ ಸಂಕಟವನ್ನು ತಂದೊಡ್ಡುವುದರಲ್ಲಿ ದಕ್ಷನಾದ ನನ್ನಂಥ ಅಧನ್ಯನಿಗೆ ಏನು ಹೇಳಬೇಕು! ಅಯ್ಯೋ, ಇದು ನಿಜವಾದ ಮಾತು, ಸುಳ್ಳಾಗದ ಮಾತು–

**ಹಾಳು ಮಾಡುವುದು ಸಂಪತ್ತನು ಹಾ ಪ್ರಮಾದವೀನರನ**
**ಏಳು ಕಡಲುಗಳ ಆಚೆಗೆಸೆಯುವುದು ಪ್ರೀತಿಯನ್ನು ಸೊಕ್ಕು ॥**
**ವ್ಯಸನ ವಿನಯವನು ದೂರ ಸರಿಸುವುದು ಮನುಜಜಾತಿಯಲ್ಲಿ**
**ನಶಿಸಿಹೋಗುವುದು ಧೈರ್ಯ ಶೋಕದಿಂದೆಲ್ಲ ಕಾಲದಲ್ಲೂ ॥೨॥**

ಅದರಿಂದಲೇ ಮಂದರ ಪರ್ವತಕ್ಕೆ ಸರಿಸಮವಾದ ಧೈರ್ಯವನ್ನುಳ್ಳ ಅಣ್ಣನೀಗ ವಾಲ್ಮೀಕಿಗಳು ಬಂದದ್ದನ್ನು ತಿಳಿದು ಅವರ ಬಿಡಾರವಿರುವ ಗೋಮತೀ ತೀರದ ಸ್ಥಳದತ್ತ ಹೊರಟಿದ್ದಾನೆ. ಆದರೆ ಈಗ ಇವನು ಆ ದಿಕ್ಕನ್ನು ಬಿಟ್ಟು ಶೋಕದಿಂದ ಪ್ರಕ್ಷುಬ್ಧನಾಗಿ ಗೊಂಡಾರಣ್ಯದತ್ತ

---

ಈ ಸ್ಥಳ ವಾಲ್ಮೀಕಿಯ ಆಶ್ರಮವಿದ್ದ ಸ್ಥಳಕ್ಕಿಂತ ಗಂಗಾಪ್ರವಾಹಾನುಸಾರವಾಗಿ ಕೆಳಗಿನ ಮಟ್ಟದ್ದಾಗಿದೆ. ಇಷ್ಟೇ ನಮಗೆ ಬೇಕಾದದ್ದು. ಭಾರತ – ರಾಮಾಯಣಗಳು ಉಲ್ಲೇಖಿಸಿದ ಎಲ್ಲ ಸ್ಥಳಗಳನ್ನೂ ಸಂಶಯಾಸ್ಪದವಿಲ್ಲದಂತೆ ಯಾರಾದರೂ ಈವರೆಗೆ ನಿರ್ಧರಿಸಿ ಕೊಟ್ಟಿದ್ದಾರೆಯೇ? ಆದ್ದರಿಂದ ಕವಿಯ ಆಶಯವನ್ನು ಸ್ಪಷ್ಟಪಡಿಸಲು ತಪಸ್ವಿಯ ಸ್ವಗತವನ್ನು ಇಲ್ಲಿ ಬೆಳೆಸಲಾಗಿದೆ. ಭಾರತದ ಭೂಪಟದಲ್ಲಿ ಅಯೋಧ್ಯೆಯು ಗೋಮತಿಯ ಉತ್ತರಕ್ಕೆ ಶಾರದಾನದಿಯ ಸಂಗಮವೊಂದರ ಸ್ಥಳದಲ್ಲಿದೆ. ಗೋಮತಿಯು ಗಂಗೆಯ ಉತ್ತರದಲ್ಲಿದೆ. ಕವಿ ಹೇಳಿದ ಪ್ರಕಾರ ನೈಮಿಶಾರಣ್ಯವಿದ್ದದ್ದು ಗಂಗಾಗೋಮತಿಗಳ ಸಂಗಮ ಸ್ಥಳದಲ್ಲಿ. ಗಂಗೆಯ ಪ್ರವಾಹದ ಪಶ್ಚಿಮದಲ್ಲಿದ್ದ ವಾಲ್ಮೀಕಿ ಆಶ್ರಮದವರು ನೈಮಿಶಾರಣ್ಯಕ್ಕೆ ಹೋಗಲು ಹೊಳೆ ದಾಟಬೇಕಾಗಿಲ್ಲ. ಅಯೋಧ್ಯೆಯವರೂ ಅಲ್ಲಿಂದ ನೈಮಿಶಾರಣ್ಯಕ್ಕೆ ತಲುಪಲು ನದಿಯನ್ನು ದಾಟಬೇಕಾದ್ದಿಲ್ಲ. ಸೀತೆ ಗಂಗೆಯಲ್ಲಿ ತೇಲಿಬಿಟ್ಟ ಮಲ್ಲಿಗೆಮಾಲೆ (ಕುಂದಮಾಲೆ) ಗೋಮತಿಯಲ್ಲಿ ರಾಮನಿಗೆ ಕಾಣಿಸಿತೆಂದರೆ ಗಂಗಾ ಗೋಮತೀ ಸಂಗಮದ ಪ್ರವಾಹದಲ್ಲಿ ಎಂದು ತಿಳಿದುಕೊಳ್ಳುವುದು ಸುಲಭ. ಆ ಸಂಗಮಸ್ಥಳದ ಹತ್ತಿರ ಹಿಂದೆ ಕೆರೆಯೊಂದು ಇದ್ದಿದ್ದರೆ ಅಸಂಭಾವ್ಯವಾಗದು. ಯಜ್ಞಶಿಬಿರ ಅದರ ದಂಡೆಗೆ ತಾಗಿ ಸ್ಥಾಪಿತವಾಗಿತ್ತು. ವಾಲ್ಮೀಕಿ ಮುಂತಾದ ಅತಿಥಿಗಳಿಗೆ ಉಳಿದುಕೊಳ್ಳಲು ಅಲ್ಲಿ ಆಶ್ರಮಸದೃಶವಾದ ಡೇರೆ (ತಂಬು)ಗಳನ್ನು ರಾಮರಾಜ ಕಟ್ಟಿಸಿದ್ದನೆಂಬುದು ಸುಲಭೋಹ್ಯ. ವಾಲ್ಮೀಕಿಯ ಪರಿವಾರದಲ್ಲಿ ಸೇರಿದ್ದ ಸೀತೆ, ಲವ, ಕುಶರೂ ಅಲ್ಲೇ ತಂಗಿದ್ದು ಸ್ಪಷ್ಟ.

ತಿರುಗಿದ್ದಾನೆ. ಆದ್ದರಿಂದ ಇವನಿಗೆ ತಿಳಿಸಿ ಹೇಳಲೆ? ಅಥವಾ ತಿಳಿಸಿ ಹೇಳುವುದೇನು ಬಂತು? ಈ ಮಾರ್ಗದರ್ಶಕ ಹೋಗುತ್ತಿರುವ ಹಾದಿಯನ್ನೇ ಹಿಡಿಸುತ್ತೇನೆ. ಆಗ ತನಗೆ ಅರಿವಿಲ್ಲದೆಯೇ ಈತ ವಾಲ್ಮೀಕಿಗಳ ಆಶ್ರಮವನ್ನು ತಲುಪುತ್ತಾನೆ. (ಪ್ರಕಾಶ) ಈ ಕಡೆಗೆ ನಡೆ ಅಣ್ಣಾ !

**ರಾಮ :** (ನಿಟ್ಟುಸಿರು ಬಿಟ್ಟು)

**ಸಾಗರದ ಅಡ್ಡ ಕಟ್ಟಿದ ಶೈಲಸೇತು ತಾ ವ್ಯರ್ಥ ಪ್ರಯತ್ನವಾಯ್ತು.**
**ಶುದ್ಧಿಸಾಕ್ಷಿಯ ಕೊಟ್ಟ ಅಗ್ನಿದೇವನನೀಗ ಕಡೆಗಣಿಸಿಬಿಟ್ಟುದಾಯ್ತು**
**ಇಕ್ಷ್ವಾಕುಗಳ ಮನೆಯ ಮಹಿಮೆಯನು ತಾಳಿರುವ ಸಂತತಿ ಅಲಕ್ಷ್ಯವಾಯ್ತು**
**ಆ ಮೈಥಿಲಿಯ ತಿರಸ್ಕರಿಸಿ ಮಂದತೆಯಿಂದ ಏಗೈದೆನೇನಿದಾಯ್ತು ॥೩॥**

(ತಿರುಗಿ)

ಅಯ್ಯೋ, ಆ ಬಡವೆಯನ್ನು ಕಳಿಸಿದ್ದು ಅತ್ಯಂತ ಅಸಹಾಯತೆಯ ಪ್ರದೇಶಕ್ಕೆ :

**ಎಲ್ಲಾಕೆ ಕಣ್ಣು ಹರಿಯಿಸಬೇಕು, ಯಾರ ಕಂಡಾಕೆ ಸಾಂತ್ವನ ಪಡೆವಳು?**
**ಖುಲ್ಲ ಮೃಗಗಳು ತುಂಬಿದಡವಿಯಲಿ ಕಳೆದಾಸೆ ಎಂತಾಕೆ ಜೀವಿಸುವಳು? ॥೪॥**

**ಲಕ್ಷ್ಮಣ :** (ಸ್ವಗತ) ಪೂಜ್ಯೆಯರಾದ ಸೀತಾದೇವಿಯರ ವಿಪರೀತ ಪ್ರವಾಸವನ್ನೂ ಸಂತತಿ ದುರಂತವನ್ನೂ ಎಣಿಸಿ ಈತನು ಬಹಳ ದುಃಖ ಪಡುತ್ತಿದ್ದಾನೆ. ಆದ್ದರಿಂದ ಇವನ ಮನಸ್ಸಿನಿಂದ ದೇವಿಯರ ವಿಷಯವನ್ನು ದೂರಗೊಳಿಸುತ್ತೇನೆ. (ಪ್ರಕಾಶ) ಅಣ್ಣಾ, ಈ ಕಡೆ ನೋಡು–

**ಮರಕತದ ಹಾಗೆ ಹಸಿರಾದ ನೀರು ತುಂಬಿರುವುದಿಲ್ಲಿ ಕೇಳು**
**ಮದಕಲದ ಹಂಸಗಳು ಹಾಡುತಿಹವು ದಂಡೆಯಲಿ ಸಾಲುಸಾಲು ॥**
**ನಲಿನಗಳ ಕಂಪು ಕೊಳದಿಂದ ಹೊರಟು ದೆಸೆಗಳಲಿ ಹರಡಿರುವುದು**
**ಜನರಾಜ ನಿಂತು ನೋಡಿದಿರು ಗೋಮತೀ ತೀರ ಮೆರೆಯುತಿಹುದು ॥೫॥**

**ರಾಮ :** (ಗೋಮತಿಯ ತೀರದ ಗಾಳಿಯನ್ನು ಅನುಭವಿಸಿ)

**ಮುತ್ತಿನ ಸರ ಮಲಯಮರುತ ಚಂದ್ರಪಾದ ಚಂದನ**
**ತ್ಯಕ್ತೆಯಾದ ಸೀತೆಯಿಂದ ಸುಟ್ಟವೆನ್ನನನುದಿನ ॥**
**ಆದರೀಗ ಗೋಮತೀ ಪ್ರದೇಶದನಿಲ ತಣಿಸುವ**
**ಇಲ್ಲೆ ಎಲ್ಲೊ ದೂರ ಹೋದ ಆಕೆ ಇಹುದು ಸಂಭವ ॥೬॥**

**ಲಕ್ಷ್ಮಣ :** ಈ ಹೊಳೆಯನ್ನು ಇಳಿಯುವುದು ಬಹಳ ಕಷ್ಟ; ಜಾಗರೂಕತೆಯನ್ನು ವಹಿಸಿ ಇಳಿ. (ಇಬ್ಬರೂ ಇಳಿದು ಅತ್ತಿತ್ತ ನೋಡಿ) ಈ ಮಳಲುದಿಣ್ಣೆಯ ಮೇಲೆ ಸಾಲು ಸಾಲು ಹೆಜ್ಜೆಗಳಿವೆ. ತೀರದ ಮೇಲಿನ ಹೂಬಳ್ಳಿಗಳಲ್ಲಿ ತೊಟ್ಟುಗಳು ಮಾತ್ರ ಇವೆ; ಹೂವುಗಳನ್ನು ಯಾರೋ ಕೊಯ್ದುಕೊಂಡು ಹೋಗಿರುವುದರಿಂದ ಅವುಗಳ ನೆರಳು ಅಷ್ಟೇನೂ ಸಾಂದ್ರವಾಗಿಲ್ಲ. ಆದ್ದರಿಂದ ಇಲ್ಲೇ ಹತ್ತಿರದಲ್ಲಿ ಯಾರಾದರೂ ನೆಲೆಸಿರಬೇಕು. ಅದರಿಂದಲೇ–

**ಜಲಕುಸುಮಗಳನು ಕೊಯ್ದಿಕ್ಕಿ ಬಲಿಯ ಹೊಸದಾಗಿ ಮಳಲ ಮೇಲೆ**
**ಜಲದೇವತೆಗಳನರ್ಚಿಸಿದ ಚಿಹ್ನೆಯಿದೆ ಬರಿಯದಲ್ಲ ಬೇಲೆ ॥**
**ಜಲದಲೆಯ ಮಾಲೆಗಳ ಮೇಲೆ ತೇಲುತಿದೆ ಅದೋ ಕುಂದಮಾಲೆ**
**ಚಲಿಸುತ್ತ ಬರುವ ಅದರಲ್ಲಿ ತೋರುತಿದೆ ಸಿತಭುಜಂಗಲೀಲೆ ॥೭॥**

**ರಾಮ :** ಹತ್ತಿರದ ಈ ಕಡೆಯಲ್ಲಷ್ಟೇ ಅಲ್ಲ, ನದಿಯ ಪ್ರವಾಹದ ವಿರುದ್ಧ ದಿಕ್ಕಿನಲ್ಲೂ ಜನವಸತಿ ಇರಬೇಕು ಎನ್ನಿಸುತ್ತದೆ.

**ಲಕ್ಷ್ಮಣ :** ಅರೇ, ಇದೇನಾಶ್ಚರ್ಯ! ಈ ಮಲ್ಲಿಗೆಮಾಲೆಯು ಪಾದಪೂಜೆ ಮಾಡಲೋ ಎಂಬಂತೆ ಅಲೆಗಳನ್ನೇರಿ ಮೆಲ್ಲಗೆ ಅಣ್ಣನ ಪಾದಗಳ ಹತ್ತಿರಕ್ಕೆ ಬಂದು ಬಿಟ್ಟಿತಲ್ಲಾ! ಜಾಗರೂಕತೆಯಿಂದ ಮಾಲೆಯ ಹೆಣಿಗೆಯನ್ನು ಪರೀಕ್ಷಿಸಬೇಕು. ಆದ್ದರಿಂದ ನೋಡು ಅಣ್ಣಾ!

(ರಾಮನು ಎತ್ತಿ ಹಿಡಿದುಕೊಳ್ಳುತ್ತಾನೆ).

**ರಾಮ :** (ಚೆನ್ನಾಗಿ ಪರೀಕ್ಷಿಸಿ, ನವಿರೆದ್ದುದನ್ನು ಅನುಭವಿಸಿ) ಹೂವುಗಳನ್ನು ಈ ಪ್ರಕಾರ ಕಟ್ಟಿದ ಕೌಶಲವನ್ನು ನಾನು ನೋಡಿ ಬಲ್ಲೆ.

**ಲಕ್ಷ್ಮಣ :** ಎಲ್ಲಿ ನೋಡಿದ್ದೆ?

**ರಾಮ :** ಇನ್ನೆಲ್ಲಿ ಈ ಪ್ರಕಾರದ ಹೆಣಿಗೆಯನ್ನು ನೋಡಲು ಸಾಧ್ಯ?

**ಲಕ್ಷ್ಮಣ :** ಸೀತಾದೇವಿಯರು ಕಟ್ಟಿದ ಹೂಮಾಲೆಯಲ್ಲೇ?

**ರಾಮ :** ಹೌದು.

**ಲಕ್ಷ್ಮಣ :** ಕುಪಂಡಿತನಾದ ಬ್ರಹ್ಮನು ನಡೆಸುವ ಲೀಲೆ ಎಂಥೆಂಥದೆಂಬುದನ್ನು ಯಾರು ಬಲ್ಲರು? ನಡೆ ಅಣ್ಣಾ. ಈಗ ಗೋಮತಿಯ ಹೊನಲಿನ ವಿರುದ್ಧ ದಿಕ್ಕನ್ನು ಅನುಸರಿಸಿ ಹೋಗಿ ಈ ಮಾಲೆ ಎಲ್ಲಿಂದ ಬಂತು–ಎಂಬುದನ್ನು ಶೋಧಿಸೋಣ.

**ರಾಮ :** ಲೋಕದಲ್ಲಿ ಒಂದರಂತೆ ಇನ್ನೊಂದು ಎಷ್ಟೋ ಇರಬಹುದು. ಇದು ನಮಗೆ ಸಿಕ್ಕಿದ್ದು ಮಹಾಭಾಗ್ಯವೆಂದು ನಾವೇನೂ ತಿಳಿದುಕೊಳ್ಳುವ ಕಾರಣವಿಲ್ಲ. ಇಂಥ ಅತಿ ದೂರದ ಪ್ರದೇಶದಲ್ಲಿ ಪರಿತ್ಯಕ್ತೆಯಾದ ಸೀತೆ ಬಂದಿರುವುದು ತೀರ ಅಸಂಭವ. ಆದರೂ ದಾರಿದೋರು. ಈ ನೀರಂಚನ್ನು ಬಿಡದೆಯೇ ಜನವಸತಿಯಿರುವುದನ್ನು ಕಂಡುಹಿಡಿಯೋಣ.

**ಲಕ್ಷ್ಮಣ :** ಇದು ಎಂಥ ನದೀಪ್ರದೇಶವೆಂದು ತಿಳಿದೆ? ಇಲ್ಲಿ ಎಲ್ಲಿ ನೋಡಿದರೂ ಮುಳ್ಳು, ಬಿಳಿಗಲ್ಲು, ಕಪ್ಪೆಚಿಪ್ಪು– ಇದರ ಮೇಲೆ ನಡೆಯುವುದೇ ಕಷ್ಟ! ಆದುದರಿಂದ ನಾನು ನಡೆದು ತೋರಿಸಿದಂತೆ ನನ್ನನ್ನು ಅನುಸರಿಸಿ ಹೆಜ್ಜೆಯಿಟ್ಟು ಬಾ.

**ರಾಮ :** ಹಾಗೇ ಮಾಡು. ಈ ಮಲ್ಲಿಗೆ ಮಾಲೆ ಬಹಳ ಚೆನ್ನಾಗಿದ್ದರೂ ದೇವರಿಗರ್ಪಿಸಿದ್ದಾದ್ದರಿಂದ ನಾವು ಬಳಸಬಾರದು (ಎಂದು ಅಲ್ಲೇ ನೀರಿಗೆ ಎಸೆಯುತ್ತಾನೆ).

ಲಕ್ಷ್ಮಣ : **ಇದು ಬೆತ್ತದ ಬಳ್ಳಿ ಹಾರಿ ದಾಟಿದನ್ನು, ಇಡದಿರು ।**
**ಹೆಜ್ಜೆಗಳನ್ನಿವು ಮೊನಚಾಗಿರುವ ಚಿಪ್ಪು ತಡೆದಿರು ॥**
**ಮರದ ಕೊಂಬೆ ಬಾಗಿದೆ ತಲೆ ಬಾಗಿಸಿ ಬಾ ಮುಂದಿಕೋ ।**
**ಅಡ್ಡರೆಂಬೆಯನ್ನು ಬಿಲ್ಲಿನಿಂದ ದೂರ ಸರಿಸಿಕೋ ॥**
**ದುಷ್ಟಮೃಗಗಳಂಜಿಸುತಿವೆ ಅತ್ತ ಕಡೆಗೆ ಜಾಗ್ರತೆ ।**
**ಧೈರ್ಯದಿಂದ ಇತ್ತ ಬಾ ಅಪಾಯಜನಕ ವ್ಯಗ್ರತೆ** ॥೮॥

**ರಾಮ :** (ಹೇಳಿದಂತೆ ನಡೆದು ಹೋಗಿ)
ತಮ್ಮಾ, ಪೂಜ್ಯ ವಾಲ್ಮೀಕಿಗಳ ಆಶ್ರಮ ಈ ಕಡೆಯೇ ಇದೆಯೇ?

**ಲಕ್ಷ್ಮಣ :** ಕಾಣಿಸಿತೇನು ನಿನಗೆ?

**ರಾಮ :** **ದೆಸೆದೆಸೆಗೆ ಬೀಸಿಕೊಂಡೊಯ್ಯುತಿದೆ ನಿಡುಗಾಳಿ ಹೊಗೆಯ ॥**
**ಪಿಸುಮಾತಿನಂತೆ ಸಾಮೋಚ್ಚಾರ ಮುಟ್ಟುತಿದೆ ಬಗೆಯ** ॥೯॥

ಸ್ವಲ್ಪ ಲಕ್ಷ್ಯವಿಟ್ಟು ನೋಡಬೇಕು– ಅಷ್ಟೆ. ಏಕೆಂದರೆ ಧೂಮಲೇಖೆ ಬಹಳ ತೆಳ್ಳಗಿದೆ.

**ಲಕ್ಷ್ಮಣ :** ಅಣ್ಣಾ, ನೀನು ನೋಡಿ ಹೇಳಿದ್ದು ನಿಜ. ಆದರೆ ನಾನೀಗ ಮುಂದೆ ಹೋಗಿ ಚೆನ್ನಾಗಿ ನೋಡಿಕೊಂಡು ಬರುತ್ತೇನೆ. (ಸ್ವಲ್ಪ ದೂರ ಹೋಗಿ ಮೊಣಕಾಲುಗಳ ಮೇಲೆ ಕೈಯಿಟ್ಟು ನೋಡುತ್ತ) ಅರೆ, ಹೆಜ್ಜೆಯನ್ನು ಇಡಲು

ಯತ್ನಿಸುತ್ತಿರುವಾಗಲೇ ನನಗೇಕೋ ಎದೆ ನಡುಗುತ್ತಿದೆಯಲ್ಲಾ! ಕಾಲು ಮರವಟ್ಟು ಹೋಗಿವೆ! ಎತ್ತಿದ ಕಾಲು ಮುಂದಕ್ಕೆ ಹೋಗುವುದೇ ಇಲ್ಲವಲ್ಲಾ! ಏನಿದು?

(ಆಲೋಚಿಸಿ) ಇದು ಗುರುಹಿರಿಯರು ನಡೆದು ಹೋದ ಜಾಗವಾಗಿರಬೇಕೆಂಬುದು ಖಂಡಿತ. ಹೆಜ್ಜೆಗಳೂ ಕಾಣಿಸುತ್ತಿವೆ.

(ನೆಲವನ್ನು ಪರೀಕ್ಷಿಸುತ್ತಾನೆ)

**ರಾಮ :** ಲಕ್ಷ್ಮಣನೇಕೆ ಹೀಗೆ ನೆಲವನ್ನು ಪರೀಕ್ಷಿಸುತ್ತಾನೆ?

**ಲಕ್ಷ್ಮಣ :** ಇಲ್ಲಿ ಬಹಳ ಸೊಗಸಾಗಿರುವ, ಮೃದುವಾದ ಹೆಣ್ಣು ಹೆಜ್ಜೆಗಳು ಕಾಣಿಸುತ್ತಿವೆ. ಇವು ಆ ಮಳಲು ದಿಣ್ಣೆಯ ಮೇಲೆ ಕಂಡಂಥ ಹೆಜ್ಜೆಗಳೇ ಆಗಿವೆ. ನೀನೇ ಬಂದು ನೋಡು:

**ಗೆಲವಿನಿಂದಲೋ ಸುಸ್ತಿನಿಂದಲೋ ಸ್ವಭಾವ ಬಲದಿಂದೋ ।**
**ಬಹಳ ಮೆಲ್ಲನಿಟ್ಟಂಥ ಹೆಜ್ಜೆಗಳು ಊರಿ ನೆಟ್ಟಿರುವುವೋ ॥**
**ಹಂಸಪಾದ ವಿನ್ಯಾಸ ಸದೃಶವಾಗಿರುವುವಿಲ್ಲಿ ನಮಗೆ ।**
**ದಿಣ್ಣೆ ಮೇಲೆ ಕಾಣಿಸಿದ ಹೆಜ್ಜೆಗಳೆ ಕಾಣುತ್ತಿವೆ (ಕಣ್ಗೆ) ॥೧೦॥**

**ರಾಮ :** (ಹೋಗಿ ನೋಡಿ ಸಂತೋಷದಿಂದ)

ತಮ್ಮಾ, ಇದು ಇನ್ನಾರ ಹೆಜ್ಜೆಗಳೂ ಅಲ್ಲ; ಸೀತೆಯ ಹೆಜ್ಜೆಗಳೇ ಸರಿ; ನೋಡು, ಇವುಗಳ ರಚನೆ ಹೇಗಿದೆ ಎಂದು–

**ಸಮಕಟ್ಟಿನಿಂದ ಲಲಿತತೆಯಿಂದ ಗಾಢತೆಯ ವಿನ್ಯಾಸದಿಂದ ಹೆಜ್ಜೆ**
**ಕಮಲ ರೇಖೆಗಳಿಂದ ತಿಲಕಲಾಂಛನದಿಂದ (ಮೂಡಿ ಬಿದ್ದಿರುವ ಗೆಜ್ಜೆ) ॥**
**ದುಃಖ ಸಂತಪ್ತನಾದೆನ್ನ ಹೃದಯವನು ಸೆರೆಗೊಳ್ಳುವಂತೆಯೆ ಮೈಥಿಲಿ**
**ಹೆಜ್ಜೆಯಿಟ್ಟಿಹಳಿಲ್ಲಿ (ದೇವಿ ಲಕ್ಷ್ಮಣ ನೋಡು ಈ ವನೋದ್ದೇಶದಲ್ಲಿ) ॥೧೧॥**

**ಲಕ್ಷ್ಮಣ :** (ಸಂತೋಷಗೊಂಡು)

ಈ ಹೆಜ್ಜೆಗಳನ್ನನುಸರಿಸಿ ನಡೆದೇ ವಾಲ್ಮೀಕಿಗಳ ಆಶ್ರಮವನ್ನು ಸೇರೋಣ. ಈ ಹೆಜ್ಜೆಗಳು ಎದುರಾಗಿ ಬಿದ್ದಿರುವುದರಿಂದ ಸೀತಾದೇವಿಯವರು ಹತ್ತಿರದಲ್ಲೇ ಇರಬಹುದೆಂದು ತೋರುತ್ತದೆ.

(ಸೀತೆ ಪ್ರವೇಶಿಸುತ್ತಾಳೆ)

**ಸೀತೆ :** (ಸ್ವಗತ) ಗಂಗಾಸ್ನಾನ ಮುಗಿಸಿದ್ದಾಯಿತು, ಸಂಧ್ಯಾವಂದನೆ ಮಾಡಿದ್ದಾಯಿತು, ಅರ್ಘ್ಯವನ್ನು ಬಿಟ್ಟಿದ್ದಾಯಿತು; ಅಗ್ನಿಕಾರ್ಯವನ್ನು ನೆರವೇರಿಸಿದ್ದಾಯಿತು, ಗಂಗೆಗೆ ಹರಕೆ ಹೊತ್ತಂತೆ ನನ್ನ ಕೈಯಿಂದಲೇ

ಹೆಣೆದ ಕುಂದಮಾಲೆಯನ್ನು ಅರ್ಪಿಸಿ ಬಂದದ್ದೂ ಆಯಿತು. ಈಗ ನಾನು ಎತ್ತರವಾಗಿ ಬೆಳೆದು ತಂಪಾಗಿರುವ, ಸಾಂದ್ರವಾದ ಹೂಬಳ್ಳಿಗಳಲ್ಲಿ ಹೊಕ್ಕು ಅತಿಥಿಪೂಜೆಗೆ ತಕ್ಕ ಹೂಗಳನ್ನು ಕೊಯ್ದುಕೊಂಡು ಬರುತ್ತೇನೆ.
(ಹೂ ಕೊಯ್ಯಲು ಪ್ರಾರಂಭಿಸುತ್ತಾಳೆ)

**ಲಕ್ಷ್ಮಣ :** ಈ ಹೆಜ್ಜೆ ಸಾಲು ಕ್ರಮೇಣ ಮಳಲು ದಿಣ್ಣೆಯನ್ನು ಬಿಟ್ಟು ನೆಲವನ್ನು ಏರಿ ಕಾಣದಾಗಿದೆ. ಆದ್ದರಿಂದ ಇಲ್ಲೇ ಎದುರಿನಲ್ಲಿ ಕಾಣುವ ಬಳ್ಳಿಯ ಮಟ್ಟಿಯ ನೆಳಲಿನಲ್ಲಿ ಕುಳಿತು ದಣಿವಾರಿಸಿ ಕೊಂಡು ಪೂಜ್ಯರಾದ ವಾಲ್ಮೀಕಿಗಳನ್ನು ಸಂದರ್ಶಿಸೋಣ.

**ರಾಮ :** ನಿನ್ನ ಇಷ್ಟದಂತೆ ಆಗಲಿ.
(ಹೋಗಿ ಕುಳಿತುಕೊಂಡು, ನಿಟ್ಟುಸಿರುಬಿಟ್ಟು, ಕಣ್ಣೀರು ಸುರಿಸಿ)
ತಮ್ಮಾ, ತಮ್ಮಾ !

**ಸೀತೆ :** (ಕಿವಿಗೊಟ್ಟು) (ಸ್ವಗತ)

ಮಳೆಗಾಲದ ಗುಡುಗಿನ ಗಾಂಭೀರ್ಯದಿಂದ ಕೂಡಿದ ವಿಶಿಷ್ಟ ಸ್ವರದಿಂದ ಅತ್ಯಂತ ದುಃಖದ ದನಿಯನ್ನೆತ್ತಿದವರಾರು? ಯಾರೆಂದು ನೋಡಿಕೊಂಡು ಬರುತ್ತೇನೆ ಸ್ವಲ್ಪ. ಅಥವಾ ವಸ್ತುಸ್ಥಿತಿ ಗೊತ್ತಿಲ್ಲದಾಗ ಅಸ್ಥಾನದತ್ತ ಕಣ್ಣು ಹಾಕುವುದು ಸರಿಯಾಗಲಿಕ್ಕಿಲ್ಲ. ಇಲ್ಲಿ ಗೊತ್ತು ಮಾಡಿಕೊಳ್ಳತಕ್ಕದ್ದಾದರೂ ಏನು?

ನನ್ನ ಮೈಯಲ್ಲಿ ಪರಪುರುಷರ ದನಿಯನ್ನು ಕೇಳಿ ಎಂದೂ ನವಿರೇಳದು. ಆ ನಿರ್ದಯನು ನಿಜವಾಗಿಯೂ ಇಲ್ಲಿಗೆ ದಯಮಾಡಿಸಿರಬೇಕು. ಆದ್ದರಿಂದ ನೋಡಿಯೇ ಬಿಡುತ್ತೇನೆ. ಅಥವಾ ಆ ಪ್ರಕಾರ ವಿಮುಖನಾದವನೆದುರು ನಿಲ್ಲುವುದನ್ನೆಣಿಸಿದರೆ ನನಗೆ ನಿಜವಾಗಿಯೂ ನಾಚಿಕೆಯಾಗುತ್ತದೆ. ಆದ್ದರಿಂದ ನೋಡುವುದಿಲ್ಲ. ಏನು? ನನ್ನ ಮೇಲೆಯೇ ನನಗೆ ಹಿಡಿತವಿಲ್ಲವೇ? ನನ್ನ ಕಣ್ಣುಗಳು ಬಲಾತ್ಕಾರ ಮಾಡಿ ಅಲ್ಲಿಗೇ ಹೋಗುತ್ತವೆ! ಇನ್ನೇನು ಮಾಡಲಿ? ರಾಜಾಧೀನೆ ನಾನಲ್ಲವೇ? ಅವನನ್ನು ಅನುಸರಿಸುವುದಷ್ಟೇ ನನ್ನ ಕೆಲಸ. ಕಂಡನೆಂದು ಸಂತೋಷ, ಇಷ್ಟು ದೀರ್ಘಕಾಲ ನನ್ನನ್ನು ಹೊರಗಿಟ್ಟನೆಂದು ಸಿಟ್ಟು, ಬಹಳ ಸೊರಗಿ ಹೋಗಿದ್ದಾನಲ್ಲಾ ಎಂದು ಕಳವಳ, ನಿರ್ದಯನಾದನೆಂದು ಎದುರು ನಿಲ್ಲುವ ಹೆಮ್ಮೆ, ಸಲಿಗೆಯವನೆಂದು ಪ್ರೀತಿ, ಸುಂದರನೆಂದು ತವಕ, ಒಡೆಯನೆಂದು ಗೌರವ, ಕುಶಲವರ ತಂದೆಯೆಂದು ಕುಟುಂಬಿನಿಯ ಆದರ, ನನ್ನನ್ನು ತಪ್ಪಿತಸ್ಥಳ ಸಾಲಿಗೆ

ಸೇರಿಸಿದನೆಂದು ನಾಚಿಕೆ– ಅಂತೂ ಆರ್ಯಪುತ್ರನನ್ನು ಕಂಡ ನನಗೆ ಏನಾಗಿದೆಯೆಂಬುದನ್ನು ನಾನರಿಯೆ!

**ಲಕ್ಷ್ಮಣ :** ಅಣ್ಣಾ, ಅಕಸ್ಮಾತ್ತಾಗಿ ಎಂಬಂತೆ ನನ್ನನ್ನು ಕರೆದು ಆ ಮೇಲೆ ಕಣ್ಣೀರು ಸುರಿಸುತ್ತ ಮಾತಾಡದೆ ಮೋರೆಯನ್ನು ಏಕೆ ಕೆಳಕ್ಕೆ ತಿರುಗಿಸಿದೆ?

**ರಾಮ :** ಈ ಕಾಡು ನಿರ್ಜನವಾಗಿದೆ. ಇಲ್ಲಿ ಯಾರೂ ಬಂದಿಲ್ಲ: ನದೀ ತೀರದ ಮರಗಳ ನೆರಳಿಂದ ಇದು ಬಹಳ ಸುಂದರವಾಗಿದೆ. ಇದರೊಟ್ಟಿಗೆ ಈ ತಿಳಿನೀರ ನದಿ; ಇದು ಸಮುದ್ರ ಮುಖವಾಗಿ ಹರಿಯುತ್ತಿದೆ. ಇವುಗಳನ್ನು ಕಂಡು ದಂಡಕಾರಣ್ಯದಲ್ಲಿ ನಾವಿದ್ದದ್ದು ನೆನಪಾಯಿತು. ಆದ್ದರಿಂದ ದುಃಖ ಉಕ್ಕಿ ಬಂತು ಅಷ್ಟೆ.

**ಸೀತೆ :** (ಸ್ವಗತ) ಆರ್ಯಪುತ್ರ, ನಿನಗೆ ವನವಾಸದ ನೆನಪಾಗುತ್ತದೆ; ಆದರೆ ಬಲಾತ್ಕಾರದಿಂದ ನೀನು ಯಾವಳನ್ನು ವನವಾಸಕ್ಕೆ ಅಟ್ಟಿದೆಯೋ ಅವಳ ನೆನಪಾಗುವುದಿಲ್ಲ–ಅಲ್ಲವೇ?

**ಲಕ್ಷ್ಮಣ :** ಅಂಥ ದುಃಖಕರವಾದ ವನವಾಸದಲ್ಲಿ ನೆನೆಸಿಕೊಳ್ಳುವಂಥದೇನಿದೆ?

**ರಾಮ :** ತಮ್ಮಾ, ಲಕ್ಷ್ಮಣಾ! ಹೀಗೇಕೆ ಹೇಳುತ್ತೀಯೆ? ದುಃಖಕರವಾದ ವನವಾಸದಲ್ಲಿ ನೆನೆಸಿಕೊಳ್ಳುವಂಥದೇನೂ ಇದ್ದಿಲ್ಲವೇ? ನೋಡು, ನೋಡು–

**ಚಿಗುರಂತೆ ಮೃದುವಾದ ಕೈ ಅವಳದು ।**
**ಅದ ಹಿಡಿದು ಸಂಜೆ ಹೊಳೆದಂಡೆಗೆಳೆದು ॥**
**ಸರಸ ಸಲ್ಲಾಪ ಮಾಡುತ್ತ ನಾ ಬೇಗ ।**
**ನಡೆದಿದ್ದೆ ನೀರೊಸರುತಿದ್ದ ಮಳಲಾಗ ॥**
**ಚೆಲ್ಲಿ ಹರಹಿದ್ದ ಗಲವಾದ ದಿಬ್ಬದಲಿ**
**ಅದನೀಗ ನೆನೆಯುತಿಹೆ (ವಿರಹ ವ್ಯಥೆಯಲಿ)** ॥೧೨॥

**ಸೀತೆ :** (ಸ್ವಗತ) ಎಲೈ 'ದಯಾಹೀನನೇ, ಏಕೆ ಇಂಥ ವಿಲಾಪಮಾಡಿ ಈ ಅಸಹಾಯೆಯಾದ ದುಃಖಭಾಗಿನಿಯ ದುಃಖವನ್ನು ಹೆಚ್ಚಿಸಿ ಕಾಡಿಸುವೆ?

**ಲಕ್ಷ್ಮಣ :** ಅಣ್ಣಾ, ಅಳಬೇಡ.

**ರಾಮ :** ಹೇಗೆ ಮಂದಭಾಗ್ಯನಾದ ನಾನು ಅಳದಿರಲಿ? ನೋಡು–

**ಆದಿಯಲಿ ವನವಾಸ ಆಮೇಲೆ ಲಂಕಾನಿವಾಸ ।**
**ಮುಂದೆ ಅವಳಿಗೆ ಹೀಗೆ (ಕೊನೆಗಾಣದಿಹ) ವಿಪ್ರವಾಸ ॥**

**ಈ ಅಧನ್ಯನ ಕೈಯ ಹಿಡಿದದ್ದರಿಂದ ನಿತ್ಯ ।**
**ಸೀತೆಗೊಂದರ ಮೇಲೆ ಮತ್ತೊಂದು ದುಃಖದಾತಿಥ್ಯ ॥೧೩॥**

ಹಾ ಪ್ರಿಯೇ!

**ಸೀತೆ :** (ಸ್ವಗತ) ಆರ್ಯಪುತ್ರ, ನಿರ್ವಾಸಿತೆಯನ್ನು 'ಪ್ರಿಯೆ' ಎಂದು ಕರೆಯುವುದು ಅನುಚಿತ.

**ರಾಮ :** ಹಾ, ಜನಕರಾಜಪುತ್ರಿ !

**ಸೀತೆ :** (ಸ್ವಗತ) ಅಲ್ಪಪುಣ್ಯಭಾಗಿನಿಯಾದ ನನಗೆ ಇಂಥ ವರ್ಣನೆ ವರ್ಜನೀಯ.

**ರಾಮ :** ಹಾ, ವನವಾಸದಲ್ಲಿ ಜೊತೆಗಾರ್ತಿಯಾಗಿದ್ದವಳೇ !

**ಸೀತೆ :** (ಸ್ವಗತ) ಇದೂ ಈಗ ಹೊಂದುವಂಥದಲ್ಲ.

**ರಾಮ :** ಅಯ್ಯೋ, ಎಲ್ಲಿಗೆ ಹೋದೆ?

**ಸೀತೆ :** (ಸ್ವಗತ) ಹತಭಾಗ್ಯರೆಲ್ಲ ಹೋಗುವ ಸ್ಥಳಕ್ಕೆ.

**ರಾಮ :** ನನಗೆ ಪ್ರತ್ಯುತ್ತರವನ್ನು ಕೊಡು.

**ಸೀತೆ :** (ಸ್ವಗತ) ಇರುವುದೇ ಅಸಂಭವವಾಗಿರುವಂಥ ಜನ ಯಾವ ಉತ್ತರವನ್ನು ಕೊಟ್ಟೀತು?

**ರಾಮ :** (ಅಳುತ್ತಾನೆ)

**ಲಕ್ಷ್ಮಣ :** ಅಣ್ಣಾ, ಭಿನ್ನವಿಸಿಕೊಳ್ಳುತ್ತೇನೆ ಅಳಬೇಡ.

**ರಾಮ :** ಅಳಲೇಬೇಕಾಗಿರುವಂಥ ಪರಿಸ್ಥಿತಿಯಲ್ಲಿರುವ ವೈದೇಹಿಯನ್ನು ನೆನೆದು ಅಳದೆ ಇರಲು ಸಾಧ್ಯವೇ?

**ಸೀತೆ :** (ಸ್ವಗತ) ಆರ್ಯಪುತ್ರ, ವೈದೇಹಿ ಇಂದು ಅಳಬೇಕಾದ ಪರಿಸ್ಥಿತಿಯಲ್ಲಿರುವ ಜನ ಎನ್ನಿಸಿಲ್ಲ. ಪ್ರಿಯತಮ ಹೀಗೆ ಯಾರನ್ನು ಕುರಿತು ಅಳುತ್ತಾನೋ ಅಂಥವಳೆಂದೂ ಅಳಬೇಕಾದ ಪರಿಸ್ಥಿತಿಯಲ್ಲಿ ಇರಳು.

**ರಾಮ :** ತಮ್ಮಾ, ಲಕ್ಷ್ಮಣಾ! ಅವಳೆಲ್ಲಿದ್ದಾಳೆ ಎಂಬುದನ್ನು ತಿಳಿಯಲು ಸಾಧ್ಯವಾಗುತ್ತದೆಯೇ?

**ಸೀತೆ :** (ಸ್ವಗತ) ದಿನಾಂತದಲ್ಲಿ ಪ್ರಿಯಸಮಾಗಮವು ಕೊನೆಗೊಳಿಸಲ್ಪಟ್ಟ ಚಕ್ರವಾಕವಧುವಿನಂತೆ ನಾನು ಇಲ್ಲೇ ಪ್ರತ್ಯೇಕವಾಗಿ ಇದ್ದೇನೆ.

**ಲಕ್ಷ್ಮಣ :** ಎಲ್ಲಿದ್ದಾಳೆ ಎಂದು ತಿಳಿಯಲು ಸಾಧ್ಯವಾಗದು.

**ರಾಮ :** ಬಹುಕಾಲ ಅವಿಚ್ಛಿನ್ನವಾಗಿ ನಡೆದು ಬಂದ ರಘುಕುಲವನ್ನೀಗ ನಾನು ನಿರ್ಮೂಲಗೊಳಿಸಿದೆ. (ಎಂದು ಅಳುತ್ತಾನೆ.)

ಸೀತೆ : (ದುಃಖದಿಂದ) (ಸ್ವಗತ) ಆರ್ಯಪುತ್ರನು ಬಹಳವಾಗಿ ಅಳುತ್ತಿದ್ದಾನೆ. ಏನು ಮಾಡಲಿ? ನಿಯಮವನ್ನು ಉಲ್ಲಂಘಿಸಿ ಇವನಿಗೆ ಕಾಣಿಸಿಕೊಳ್ಳಲೇ? ಕಣ್ಣೀರನ್ನು ಒರಿಸಲೇ? ಅಥವಾ ಹಾಗಲ್ಲ; ಹಾಗೆ ಮಾಡಿದರೆ ಜನಾಪವಾದ ಬಂದೀತು. ಆದ್ದರಿಂದ ಆರ್ಯಪುತ್ರನಿಗೆ ಕಾಣಿಸಿಕೊಳ್ಳದೆ ಇಲ್ಲಿಂದ ಹೊರಟುಹೋಗುತ್ತೇನೆ. ಏನಿದು? ದುಃಖದ ಕೈಯಲ್ಲಿ ಸಿಕ್ಕಿದ ನನಗೆ ಒಂದು ಹೆಜ್ಜೆಯನ್ನೂ ಆಚೆಗೆ ಸರಿಸಿ ಇಡಲು ಸಾಧ್ಯವಾಗುತ್ತಿಲ್ಲವಲ್ಲಾ! ಇಲ್ಲಿಗೆ ಎಲ್ಲಾದರೂ ಮುನಿಜನರು ಬಂದಾರು. ಹಾಗೆ ಬಂದು ಯಾರಾದರೂ ನನ್ನನ್ನು ನೋಡಿಯಾರು. ಆದ್ದರಿಂದ ಬಳ್ಳಿಗಳು ಹೆಣೆದುಕೊಂಡಿರುವ ಈ ಸುಗಮವಾದ ಹಾದಿಯನ್ನು ಹಿಡಿದು ಆಶ್ರಮಕ್ಕೆ ಹೋಗಿ ಕುಶಲವರನ್ನು ಮಾತಾಡಿಸುತ್ತೇನೆ. (ರಾಮನನ್ನು ನೋಡುತ್ತಲೇ ಹೊರಟು ಹೋಗುತ್ತಾಳೆ).

(ಮರುದಿನ ಮಧ್ಯಾಹ್ನ ಕಾಲದಲ್ಲಿ ರಿಸಿಯೊಬ್ಬನು ಬರುತ್ತಾನೆ.)

ರಿಸಿ : (ಸ್ವಗತ) ಪೂಜ್ಯ ವಾಲ್ಮೀಕಿಗಳು ಅಪ್ಪಣೆ ಕೊಡಿಸಿದ್ದಾರೆ. ಮಗು, ಬಾದರಾಯಣಾ! ಲಕ್ಷ್ಮಣನೊಡನೆ ರಾಮಚಂದ್ರನು ಈ ತಪೋವನಕ್ಕೆ ಬಂದಿದ್ದಾನೆ ಎಂದು ಕೇಳಿದ್ದೇನೆ. ನಾವಿಲ್ಲಿ ಮಾಧ್ಯಾಹ್ನಿಕವನ್ನು ಮುಗಿಸಿ ಅವನ ಬರವನ್ನು ಎದುರು ನೋಡುತ್ತಿದ್ದೇವೆ ಎಂದು ಅವನಿಗೆ ತಿಳಿಸು ಎಂದು. ಆದ್ದರಿಂದ ಪೂಜ್ಯ ವಾಲ್ಮೀಕಿಗಳ ಅಪ್ಪಣೆಯ ಪ್ರಕಾರ ನಾನು ರಾಮನೆಲ್ಲಿದ್ದಾನೆ ಎಂದು ಹುಡುಕುತ್ತೇನೆ.

(ಹೊರಗೆ ಬಂದು ಅತ್ತಿತ್ತ ಹುಡುಕುತ್ತಾನೆ.)

ಲಕ್ಷ್ಮಣ : (ನೋಡಿ ಲಗುಬಗೆಯಿಂದ) ಅಂತೂ ಇಲ್ಲೇ ನಾವು ಇರುಳನ್ನು ಕಳೆದು ಸನಿಹದ ಕೊಳದಲ್ಲಿ ಪ್ರಾತರ್ವಿಧಿಗಳನ್ನು ಮುಗಿಸಿ, ಯಾರಾದರೂ ಮುನಿಜನರು ಬರುತ್ತಾರೋ ಎಂದು ಈವರೆಗೆ ಕಾದೆ. ಈಗ, ಅಣ್ಣಾ, ಇಲ್ಲೊಬ್ಬ ತಪಸ್ವಿ ನಮ್ಮೆದುರು ಬರುತ್ತಿದ್ದಾನೆ.

ರಾಮ : (ಕಣ್ಣೊರಿಸಿಕೊಂಡು ಸಮಾಧಾನದಿಂದ ನಿಲ್ಲುತ್ತಾನೆ)

ರಿಸಿ : (ಚೆನ್ನಾಗಿ ನೋಡಿ)
ಅರೆ, ಈ ಬಳ್ಳಿಮಟ್ಟಿಯ ನೆರಳಿನಲ್ಲಿ ಇಬ್ಬರು ಗಂಡಸರು ನಿಂತ ಹಾಗೆ ತೋರುತ್ತದೆ. ಇವರು ರಾಮ ಲಕ್ಷ್ಮಣರಾಗಿರಬಹುದೇ? (ವಿಚಾರ ಮಾಡಿ) ಇದರಲ್ಲಿ ಸಂದೇಹವೇನು?

**ಗಾಳಿ ಬೀಸುತಿದೆ ಮಂದವಾಗಿ, ಬೇಸಿಗೆಯ ಬೇಗೆ ಇಲ್ಲ ।**
**ತಾಳದಳುಕ ಜಿಂಕೆಗಳು ಸಿಂಗಗಳ ಜೊತೆಗೆ ಕುಣಿವವೆಲ್ಲ ॥**

**ದಿನದ ಮಧ್ಯದಲ್ಲಿಯೂ ಇವರು ಕುಳಿತಿರುವ ಮಟ್ಟಿ ನೆರಳು ।**
**ಗಣಿಸದವನು ಹರಿದತ್ತ ಹೋಗದಿದೆ (ತಿಳಿದೆನಿದರ ಹುರುಳು) ॥೧೪॥**

ಇವರಲ್ಲಿ ಹರಿಯ ಅವತಾರವೆನ್ನಿಸಿದ ರಾಮ ಇದ್ದೇ ಇರಬೇಕು; ಇಲ್ಲಿ ಅವನು ಬಂದಿರುವುದೇ ಇಂಥ ಆಶ್ಚರ್ಯಕ್ಕೆ ಕಾರಣ. (ಪರೀಕ್ಷಿಸಿ ನೋಡಿ)

**ಕಸರತ್ತಿನಿಂದ ಕಡುಪಾದ ಮೈಯ, ನಿಡುಗೈಯ ಉದ್ದನಿಲುವ।**
**(ಕಿಸುದುಟಿಯ) ಕಿವಿಯ ಮುಟ್ಟುವುದೊ ಎಂದು ಕಾಣಿಸುವ ಕಣ್ಣ ಚೆಲುವ ॥**
**ಪಸರಿಸಿದ (ಸಮರಲಾಂಛನದ) ಎದೆಯ ಈ (ಮಹಾಕ್ಷತ್ರಯೋಧ)।**
**(ನಸುನೀಲ ರೂಪ) ನಿಜವಾಗಿ ರಾಮ ದಶರಥನ ಪುತ್ರನಾದ ॥೧೫॥**

ಆದುದರಿಂದ ಈತನೆಡೆಗೆ ಹೋಗಿ ಇದ್ದ ಸಂಗತಿಯನ್ನು ತಿಳಿಸುತ್ತೇನೆ. (ಹತ್ತಿರ ಹೋಗಿ) ದೊರೆಯೇ, ನಿನಗೆ ಒಳ್ಳೆಯದಾಗಲಿ.

**ರಾಮ** : ಸಾಷ್ಟಾಂಗ ನಮಸ್ಕಾರ.

ರಿಸಿ : ವಿಜಯಿಯಾಗು.

**ರಾಮ** : ಪೂಜ್ಯರಾದ ನೀವಿಲ್ಲಿಗೆ ಬಂದ ಕಾರಣವೇನು?

ರಿಸಿ : ಎಲ್ಲ ಧಾರ್ಮಿಕ ಕರ್ಮಗಳನ್ನು ಮುಗಿಸಿಕೊಂಡು ಪೂಜ್ಯ ವಾಲ್ಮೀಕಿಗಳು ತಮ್ಮ ಬರವನ್ನೇ ನಿರೀಕ್ಷಿಸುತ್ತಿದ್ದಾರೆ.

**ರಾಮ** : (ನೋಡಿ) ಅರೆ, ಮಧ್ಯಾಹ್ನ ಮೀರಿಹೋಯಿತು. ಅದರಿಂದಲೇ

**ನಡುಹಗಲಲಿ ಗಿಡ**
**ದಡಿಯನು ಸೇರಿದ ನೆರಳು ॥**
**ಜಡಗತಿಯಲು ಹೊರ**
**ಹೊರಟಿದೆ ಪಯಣಿಗನವೊಲು ॥೧೬॥**

ಅಲ್ಲದೆ,

**ಮಧ್ಯಾಹ್ನದ ಬಿರು ಬಿಸಿಲಿನ ಉರಿಯಲು ಬೆಂದು ।**
**ಬಿದ್ದೀ ಹೊಳೆಯಲು ಮುಳುಗಿ ಸಲಗ ಸಲೆ ಮಿಂದು ॥**
**ಹನಿ ಹಿಡಿದಿಹ ಕಿವಿಗಳ ಕೊಡಹುತ ಮುದದಿಂದ ।**
**ಜನಿಸಿದ ನೀರ್ಸುಳಿ ಸದ್ದಿನ ಹೆಬ್ಬೊನಲಿಂದ ॥**
**ಸೊಂಡಿಲ ಹೊಡೆದಲೆಯೆಬ್ಬಿಸಿ ಮೇಲ್ದೊರೆಯಂತೆ ।**
**ದಂಡೆಗೆ ಬರುತಿದೆ (ಮೈದಾಳಿದ ನಿಶ್ಚಿಂತೆ) ॥೧೭॥**

(ಎಲ್ಲರೂ ತೆರಳುತ್ತಾರೆ)

ಮೂರನೆಯಂಕ ಮುಗಿದುದು

# ೭. ನಾಲ್ಕನೆಯಂಕ

**(ಇಬ್ಬರು ತಪಸ್ವಿಯರು ಬರುತ್ತಾರೆ.)**

**ವೇದವತಿ:** ಲೇ ಯಜ್ಞವತಿ! ರಾಮಾಯಣದ ಸಂಗೀತವನ್ನು ಕೇಳಲು ದೇವಲೋಕದಿಂದ ತಿಲೋತ್ತಮೆ ಇಲ್ಲಿಗೆ ಬಂದಿದ್ದಾಳೆ. ಅವಳೇನೆಂದಳು ಗೊತ್ತೇ? ನಾನು ನನ್ನ ದಿವ್ಯಶಕ್ತಿಯಿಂದ ಸೀತಾರೂಪವನ್ನು ತಾಳಿ ರಾಮನ ಕಣ್ಣೆದುರು ಸುಳಿದಾಡಿ ಸೀತೆಯ ಮೇಲೆ ರಾಮನಿಗೆ ದಯೆ ಇದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸುತ್ತೇನೆ; ನೀನು ರಾಮನನ್ನು ಹುಡುಕು ಎಂದು, ಆದುದರಿಂದ, ಪ್ರಿಯಸಖಿ! ರಾಮನಿರುವ ಸ್ಥಳವನ್ನು ನನಗೆ ತೋರಿಸು.

**ಯಜ್ಞವತಿ:** ಲೇ ವೇದವತಿ! ನೀನೀಗ ತಿಲೋತ್ತಮೆ ಹೇಳಿದಳು ಎಂದು ಹೇಳಿದೆಯಲ್ಲಾ–ಅದೆಲ್ಲವನ್ನೂ ಹತ್ತಿರದ ಬಳ್ಳಿಮಟ್ಟಿಯಲ್ಲಿ ಅವಿತುಕೊಂಡಿದ್ದ ಕೌಶಿಕನೆಂಬ ರಾಮನ ಸ್ನೇಹಿತನು ಕೇಳಿಬಿಟ್ಟಿದ್ದಾನೆ!

**ವೇದವತಿ:** ಎಂಥ ಕಳ್ಳ ಕೆಲಸ ಮಾಡಿದನಲ್ಲಾ ಇವನು ! ಇದರ ಸುಳಿವನ್ನು ತಿಳಿದಿರುವ ರಾಮನೆದುರು ತಿಲೋತ್ತಮೆಗೆ ಈ ಕೆಲಸ ಬೇಡ ಎಂದು ಹೇಳುತ್ತೇನೆ.[8]

**ಯಜ್ಞವತಿ:** ಸಖಿ ವೇದವತಿ! ಈಗ ಸೀತೆಯೆಲ್ಲಿದ್ದಾಳೆ?

---

8. ಶಾಕುಂತಲದಲ್ಲಿ ಕಾಳಿದಾಸನು ಸಾನುಮತಿಯನ್ನು ಉದ್ದೇಶಪೂರ್ವಕವಾಗಿ ದುಷ್ಯಂತನ ಹೃದಯ ಪರೀಕ್ಷೆಗೆ ಕಳಿಸಿದ್ದು ಅಷ್ಟು ಉಚಿತವಲ್ಲ–ಎಂಬುದನ್ನಿಲ್ಲಿ ಕವಿ ಧ್ವನಿಸಿದ್ದಾನೆ; ಪರಾರ್ಥಾನುಮಾನದಿಂದ ಸಮಾಧಾನ ಹೊಂದುವ ಶಕುಂತಲೆಗಿಂತ ಸ್ವಾರ್ಥಾನುಮಾನದಿಂದ ಸಮಾಧಾನವನ್ನು ಪಟ್ಟ ಮತ್ತು ಪಡುವ ಸೀತೆ ಹೆಚ್ಚು ಪ್ರಗಲ್ಭೆ ಎಂಬುದಿಲ್ಲಿ ಸ್ಪಷ್ಟ. ಇಲ್ಲವಾದರೆ ಅನವಶ್ಯಕವಾಗಿ ಕವಿ ಇಲ್ಲಿ ತಿಲೋತ್ತಮೆಯ ವೃತ್ತಾಂತವನ್ನು ಹೇಳಿ ಅವಳನ್ನು ನಿವಾಳಿಸುತ್ತಿದ್ದಿಲ್ಲ. ಆದರೆ ಮುಂದೆ ಕೌಶಿಕನಿಂದ ತಿಲೋತ್ತಮೆ ಸೀತೆಯಂತೆ ನಟಿಸಲಿದ್ದಾಳೆಂಬುದನ್ನು ತಿಳಿದ ರಾಮನು ಸೀತೆ ಅದೃಶ್ಯಳಾಗಿ ಉತ್ತರೀಯವನ್ನು ಕೊಂಡೊಯ್ಯುವಾಗ ಅದೆಲ್ಲಾ ತಿಲೋತ್ತಮೆಯ ಮಾಯೆಯೆಂದು ಅರ್ಧಮರ್ಧ ನಂಬುವುದು ಸೀತಾಗೌಪ್ಯವು ಅಗತ್ಯವಿದ್ದಷ್ಟು ಕಾಲ ಬಯಲಾಗದೆ ಇರಲು ಸಹಕಾರಿಯಾಗುತ್ತದೆ. ಅನವಶ್ಯಕ ವೃತ್ತಾಂತವನ್ನು ಹೀಗೆ ಅವಶ್ಯಕವನ್ನಾಗಿ ತಿದ್ದಿಕೊಂಡು ಹೋದ ಜಾಣ್ಮೆ ಕವಿಪ್ರತಿಭಾದ್ಯೋತಕ. ದೃಶ್ಯ ಸೀತೆಯನ್ನು ಸೀತೆಯಲ್ಲವೆಂದು ತೋರಿಸುವ ಪ್ರಯತ್ನಕ್ಕೆ ಇದೊಂದೇ ಸಾಧನವಲ್ಲ; ಬೇಕಾದರೆ ಇತರ ಸಾಧನಗಳಿಂದ ಕವಿ ಸಾಧಿಸಬಹುದಾಗಿತ್ತು.

**ವೇದವತಿ:** ಕೇಳು ಈಗ ರಾಮನೂ ಅವನ ಪರಿವಾರದವರೂ ಇಲ್ಲಿಗೆ ಬಂದು ಇಂದಿಗೆ ಏಳು ದಿನಗಳಾದವು. ಮೊದಲನೆಯ ದಿನವೇ ನಮ್ಮ ಮುನಿಸ್ತ್ರೀಯರು– ಮಹಾರಾಜನೂ ಅವನ ಜನರೂ ಬಂದಿರುವುದರಿಂದ ತಾವರೆಗೀವರೆ ಕೊಯ್ಯುವ ಮುಂತಾದ ಕೆಲಸವನ್ನು ಮಾಡಲೆಂದು ಆಶ್ರಮದ ಕೆರೆಯಲ್ಲಿ ನಾವು ಇಳಿಯಲಾರೆವು; ಏಕೆಂದರೆ ಇದರ ಸುತ್ತಮುತ್ತ ಪರಪುರುಷರೀಗ ತುಂಬಿ ಹೋಗಿದ್ದಾರೆ– ಎಂದು ಬಿನ್ನವಿಸಿಕೊಳ್ಳಲು, ವಾಲ್ಮೀಕಿಗಳು ಅವರೆಲ್ಲರಿಗೂ ಅದೃಶ್ಯತ್ವವನ್ನು ದಯಪಾಲಿಸಿದರು. ಆದ್ದರಿಂದ ಅದೃಶ್ಯೆಯಾಗಿ ಸೀತೆ ದಿನವಿಡೀ ಕೆರೆದಂಡೆಯಲ್ಲಿಯೇ ಕಾಲಕಳೆಯುತ್ತಿದ್ದಾಳೆ.[9]

**ಯಜ್ಞವತಿ:** ಕುಶಲವರಿಗೆ ರಾಮನಿಗೂ ತಮಗೂ ಇರುವ ಸಂಬಂಧ ಗೊತ್ತಿದೆಯೇ?

**ವೇದವತಿ:** ತಮ್ಮ ಬಾಲಭಾವದ ದೆಸೆಯಿಂದಲೂ ಮುನಿಜನರ ಸಂಸರ್ಗದಿಂದಲೂ ಅವರಿಗೆ ಸ್ವಂತ ತಾಯಿಯ ಹೆಸರು ಕೂಡ ತಿಳಿಯದು; ಎಂದ ಮೇಲೆ ದೀರ್ಘ ವಿಯೋಗ ಹೊಂದಿರುವ ರಾಮನ ವಿಷಯವೇನು ಗೊತ್ತು ಪಾಪ!

**ಯಜ್ಞವತಿ:** ಈ ಆಶ್ರಮಕ್ಕೆ ರಾಮ ಬರುವುದು ನಿನಗೆ ಗೊತ್ತೇ?

**ವೇದವತಿ:** ಅವನೆಲ್ಲಿಂದ ಬರುತ್ತಾನೆ?

**ಯಜ್ಞವತಿ:** ನೀನು ತಿಲೋತ್ತಮೆಯಿದ್ದಲ್ಲಿಗೆ ಹೋಗು. ನಾನು ಸೀತೆಯ ಬಳಿ ಹೋಗುತ್ತೇನೆ. ಆಮೇಲೆ ನಿನಗೆಲ್ಲಾ ಗೊತ್ತಾಗುತ್ತದೆ.

(ಎಂದು ಹೊರಟು ಹೋಗುತ್ತಾರೆ.)

ಇಲ್ಲಿಗೆ ಪ್ರವೇಶಕ ಮುಗಿದುದು

**ಸೀತೆ :** (ಕೆರೆಯನ್ನು ನೋಡಿ)

(ಈಗ ಉತ್ತರೀಯವನ್ನು ಹೊದೆದುಕೊಂಡ ಸೀತೆಯೂ ಯಜ್ಞವತಿಯೂ ಬರುತ್ತಾರೆ).

---

9. ತಪಸ್ವಿನಿಯರನ್ನು ಯಾರು ಬೇಕಾದರೂ ನೋಡಬಹುದೆಂಬುದು ಭಾಸನ ನಾಟಕಗಳಲ್ಲಿ ಸ್ಪಷ್ಟವಾಗುತ್ತದೆ. ಇಲ್ಲಿ ಅವರು ಪರಪುರುಷದರ್ಶನದಿಂದ ಭೀತರು. ಈ ವ್ಯತ್ಯಾಸಕ್ಕೆ ಕವಿಯ ಕಾಲದಲ್ಲಿ ತಪಸ್ವಿನಿಯರ ಬಗ್ಗೆ ಉಂಟಾದ ಹೊಸ ಕಲ್ಪನೆಯೇ ಕಾರಣ; ಅಥವಾ ಇಲ್ಲಿ ಬರುವ ತಪಸ್ವಿನಿಯರು ತಪಸ್ವಿಗಳ ಹೆಂಡತಿಯರಷ್ಟೇ ಆಗಿದ್ದಾರೆಂದೂ ಸ್ವತಃ ತಪೋನಿರತಲ್ಲವೆಂದೂ ತಿಳಿಯಬಹುದು. ಆದುದರಿಂದ ಇವರದ್ದು ಸಾಮಾನ್ಯ ಔತ್ತರೇಯ ರಾಜಪುತ್ರ ಗೃಹಿಣಿಯರ ನೀತಿಯಾಗಿತ್ತು ಎಂದುಕೊಳ್ಳಬಹುದು. ಪರಪುರುಷರಲ್ಲಿ ಸಮಾನ ಸ್ಥಾನ–ವಯೋಮಾನ ಉಳ್ಳವರಷ್ಟೇ ಅದರ್ಶನೀಯರಾಗಿರುತ್ತಿದ್ದುದು ಸುಲಭೋಹ್ಯ.

**ಯಜ್ಞವತಿ:** ಸಖಿ, ವೈದೇಹಿ ! ಎರಡು ಶಾಲುಗಳನ್ನು ಹೊದೆದುಕೊಳ್ಳಬೇಕೆಂದು ನಿನಗೆ ಯಾರು ಉಪದೇಶ ಮಾಡಿದರು?

**ಸೀತೆ :** ಕೆರೆಯ ಮೇಲಿನಿಂದ ಅಲೆ ಅಲೆಯಾಗಿ ಬೀಸುತ್ತಿರುವ ಶೀತವಾದ ನಿಡುಗಾಳಿ ಉಪದೇಶಿಸಿತು.

**ಯಜ್ಞವತಿ:** ಈ ಶಾಲು ಶರತ್ಕಾಲದ ಬೆಳುದಿಂಗಳಂತೆ ಬೆಳ್ಳಗಿದೆ; ಇದು ತನ್ನ ಪರಿಮಳದಿಂದ ದುಂಬಿಗಳನ್ನಾಕರ್ಷಿಸಿ ಅವುಗಳಿಂದ ಸಂಗೀತ ಹೇಳಿಸುತ್ತದೆ. ಇಂಥ ಶಾಲು ವಿರಹವ್ರತಸ್ಥರಿಗೆ ತಕ್ಕದ್ದಲ್ಲ.

**ಸೀತೆ :** ಸಖಿ, ನಾನು ಮಹಾರಾಜ ದಶರಥನ ಅಪ್ಪಣೆಯಂತೆ ವನವಾಸಕ್ಕೆಂದು ಹೊರಟ ಆರ್ಯಪುತ್ರನ ಜೊತೆಗೆ ಚಿತ್ರಕೂಟದಲ್ಲಿ ಕೆಲ ತಿಂಗಳಿದ್ದು ಆಮೇಲೆ ಅದನ್ನು ಬಿಟ್ಟು ದಕ್ಷಿಣ ಭಾರತದ ದಿಕ್ಕಿಗೆ ಹೊರಟೆ. ಹಾಗೆ ಹೊರಡುವ ಕಾಲದಲ್ಲಿ ಚಿತ್ರಕೂಟದ ವನದೇವತೆಯಾದ ಮಾಯಾವತಿಯು ನೆನಪಿಗಾಗಿ ಬೆಳದಿಂಗಳಂತೆ ಬೆಳ್ಳಗಿರುವ ಮತ್ತು ಸುವಾಸನೆ ಬೀರುವ ತನ್ನ ದಿವ್ಯವಾದ ಶಾಲನ್ನು ನನಗೆ ಕೊಟ್ಟಳು. ಇದು ಆರ್ಯಪುತ್ರನಿಲ್ಲದ ವಿಷಮ ಏಕಾಂತವಾಸದಲ್ಲಿ ನನ್ನ ನೆಚ್ಚಿನ ಗೆಳತಿಯಾಗಿದೆ, ದುಃಖಕಾಲದ ಸಹವಾಸಿನಿಯಾಗಿದೆ. ಆದ್ದರಿಂದ ಇದನ್ನಿಷ್ಟು ಕಾಲ ಆದರದಿಂದ ತೊಟ್ಟುಕೊಂಡಿದ್ದೇನೆ (ಎಂದು ಹೇಳಿ ಅಳುತ್ತಾಳೆ).

**ಯಜ್ಞವತಿ:** ಸಖಿ, ಅಳಬೇಡ; ಈ ತಪೋವನವಾಸವು ವನವಾಸಕ್ಕೆ ಸಮಾನ ಎಂದು ಭಾವಿಸಿ ನಾನು ನಿನ್ನನ್ನು ಪ್ರಶ್ನಿಸಿದ್ದಲ್ಲ.

**ಸೀತೆ :** ನಾನು ಹೇಗೆ ಅಳದೆ ಇರಲಿ? ಈ ತಪೋವನಕ್ಕೆ ಆರ್ಯಪುತ್ರ ಬಂದಿದ್ದಾನೆ ಎಂದು ನನ್ನ ದರ್ಭೆಯ ಹಾಸಿಗೆಯನ್ನು ಇಮ್ಮಡಿ ಅಗಲ ಮಾಡಲು ಬರುತ್ತದೆಯೇ? ಒಬ್ಬಳೇ ನಾನು ಹಗಲಿರುಳೂ ನಿಟ್ಟುಸಿರು ಬಿಡುತ್ತ ಕಾಲಯಾಪನೆ ಮಾಡುತ್ತಿದ್ದೇನೆ. ಆತ ಬಂದಿರುವುದೀಗ ನನ್ನಲ್ಲಿ ಮತ್ತಷ್ಟು ಉದ್ವೇಗವನ್ನು ಹೆಚ್ಚಿಸಿದೆ.

**ಯಜ್ಞವತಿ:** ಈ ಮಾನಸಿಕ ತುಮುಲಗಳು ಲಕ್ಷಿಸತಕ್ಕಂಥವುಗಳಲ್ಲ. ನೀನು ಈ ಕೆರೆದಂಡೆಯ ಮೇಲಿರುವ ಹಕ್ಕಿಗಳ ಜೊತೆಯ ಚೆಲುವನ್ನು ನೋಡುತ್ತ ಮನಸ್ಸಿನ ಕ್ಷೋಭೆಯನ್ನು ಮರೆತುಬಿಡು, ನಾನು ನನ್ನ ಕರ್ತವ್ಯವನ್ನು ಮಾಡಲು ಹೊರಡುತ್ತೇನೆ.

**ಸೀತೆ :** ಈ ರಾಜಹಂಸಗಳ ಜೋಡಿಯು ನಿಜವಾಗಿ ಬಹಳ ಧನ್ಯ. ಇವುಗಳು ವಿರಹವನ್ನು ತಂದುಕೊಂಡಿಲ್ಲ. ಆದ್ದರಿಂದ ಸಮಾಗಮ ಸುಖವನ್ನು

ಅನುಭವಿಸುತ್ತಿವೆ–ಎಂಬುದನ್ನು ಕಲಿಸಲು ನನ್ನ ದಾಂಪತ್ಯದಲ್ಲಿ ಉಂಟಾದ ವಿರಹಕ್ಕೆ ಸರಿದೊರೆಯಾದ ಉಪದೇಶ ನಿಪುಣನೆನ್ನಿಸುವ ಉಪಾಧ್ಯಾಯ ಇನ್ನೊಬ್ಬನಿಲ್ಲ. ಹಕ್ಕಿಗಳು ಕೂಡ ಪರಸ್ಪರರ ಹೃದಯವನ್ನರಿತುಕೊಳ್ಳಬಲ್ಲ ಸರಸ ಲೀಲೆಯನ್ನು ಹಿಡಿದಿವೆ; ಮನುಷ್ಯರಾದ ನಮ್ಮಲ್ಲಿ ಅನೇಕರಿಗೆ ಇಷ್ಟೂ ಗೊತ್ತಿಲ್ಲವಲ್ಲಾ!

**ಯಜ್ಞವತಿ:** (ಚೆನ್ನಾಗಿ ನೋಡಿ)
ಏನಿದು? ಎಲ್ಲೆಲ್ಲೂ ಸಂಭ್ರಮವೆದ್ದಿದೆ ಈಗ! ಎಲ್ಲ ಮುನಿ ಜನರೂ ಆಸನಗಳನ್ನು ಬಿಟ್ಟೆದ್ದು ಏಕಾಏಕಿ ಉತ್ತರೀಯವನ್ನು ಮೇಲಕ್ಕೆ ಎತ್ತಿ ಹಾರಿಸುತ್ತ ಉಸಿರುಕಟ್ಟಿಕೊಂಡವರಂತೆ ಏಕಮುಖವಾಗಿ ಎದ್ದು ಹೊರಟಿದ್ದಾರೆ! ತಿಳಿಯಿತು, ಈಗ ಮಹಾರಾಜ ಬರುತ್ತಿದ್ದಾನೆ ಇಲ್ಲಿಗೆ.

(ಈಗ ಚಿಂತಾತುರನಾದ ರಾಮನೂ ಕಾಶ್ಯಪನೂ ಪ್ರವೇಶಿಸುತ್ತಾರೆ.)

**ಕಾಶ್ಯಪ :** ಪೂಜ್ಯ ವಾಲ್ಮೀಕಿ ಮುನಿಗಳು ನನಗೆ ಅಪ್ಪಣೆ ಕೊಟ್ಟಿದ್ದಾರೆ– ಕಾಶ್ಯಪ, ಕಾಶ್ಯಪ! ನೈಮಿಶಾರಣ್ಯದ ಸುಂದರ ದೃಶ್ಯಗಳನ್ನು ತೋರಿಸಿ ರಾಮನ ಚಿಂತೆಯನ್ನು ಕಳೆ ಎಂದು. ಈ ರಾಮಚಂದ್ರನೀಗ ಚಿಂತಾವಶನಾಗಿ ಮುಂದೆ ಹೋಗುತ್ತಿರುವ ನನ್ನನ್ನೂ ಗಮನಿಸಿಲ್ಲ. ಆದ್ದರಿಂದಲೇ–

**ಸಮತಟ್ಟಾದ ಸ್ಥಳದಲಿ ಕೂಡ**
**ಎಡಹುವನೀ ರಾಘವ ರಾಮ ॥**
**ಭಾರದ ಹೆಜ್ಜೆಯ ತಡೆತಡೆದಿಡುತಿರೆ**
**ದೂರ ಉಳಿದ (ಚಿಂತಾಧಾಮ)**

(ಹತ್ತಿರ ಹೋಗಿ)
ಎಲೈ ದೊರೆಯೇ !

**ರಾಮ :** ಎಲಾ ಇದೇನು ಗೆಳೆಯ? ನಿನ್ನ ಸಂಬೋಧನ ತಪಸ್ವಿ ಧರ್ಮಕ್ಕೆ ವಿರುದ್ಧವಾಗಿದೆಯಲ್ಲಾ! ಅಥವಾ ವಯಸ್ಸಾದುದರ ಪರಿಣಾಮ ಈ ದೋಷಕ್ಕೆ ಕಾರಣವಲ್ಲದೆ ನೀನಲ್ಲ.

**ಎಳೆತನದಲಿ ನಾನು ರಾಮ ನೀನು ಕಾಶ್ಯಪ ॥**
**ಬೆಳೆದ ನೀನು ಈಗ ಆರ್ಯ ನಾನು ಭೂಮಿಪ ॥೨॥**

ಇದು ವಯಸ್ಸು ಮಾಡಿದ ಮಂತ್ರವೇ ಸರಿ.

**ಕಾಶ್ಯಪ :** ಭೇಷ್, ಈ ಟೀಕೆ ಧೀರೋದಾತ್ತವಾಗಿದೆ !

**ರಾಮ :** ಹೇಳಬೇಕೆಂದಿದ್ದದ್ದನ್ನು ಹೇಳಿಬಿಡು.

**ಕಾಶ್ಯಪ :** **ಕುಸುಮದ ಸುವಾಸನೆಯ ದಿಕ್ಕು ದಿಕ್ಕಿಗೆ ಹರಹಿ**
**ಹೊಸ ಫಲದಸಂಖ್ಯತರುವಿಂದ ಬಾಗಿ ॥**
**ಮಸಿಗೆರೆಯನೆಳೆದಂತೆ ರಚನೆ ಕಾಡಿನ ಗಡಿಯ**
**ಎಸೆವ ವನ ರಂಜಿಸದೆ? ಎದೆಯತಾಗಿ ! ॥೩॥**

**ರಾಮ :** ಈ ವನದ ಬಗ್ಗೆ ಬಹಳ ಗೌರವವನ್ನಿಟ್ಟುಕೊಂಡ ನನಗೆ ಇದು ರಂಜಿಸುತ್ತಿದೆ ಅಥವಾ ಇಲ್ಲ ಎಂದು ಹೇಳಲು ಅವಕಾಶವೇ ಇಲ್ಲ. ನೋಡು–

**ಯಾಗಹೋಮಾಗ್ನಿಯೆಂದರಿದೆ ದಾವಾಗ್ನಿಯನು**
**ಬಾಗಿ ಬೆಳೆದೀ ಮಹಾವೃಕ್ಷಗಳನು ॥**
**ಆಗಿಹವು ಯೂಪಂಗಳೆಂಬೆನಸ್ಪಷ್ಟರವ**
**ಈ ಗಿಳಿಗಳುಲಿಯೆ ಬರಲದನು ನಾವು ॥**
**ತ್ಯಾಗಜ್ಞಮುನಿಗೀತವೆಂದು ಭಾವಿಸಿ ವನ್ಯ**
**ವಾಗಿರುವ ಹರಿಣಗಳೆ ರಿಸಿಗಳೆಂದು ॥**
**ಸಾಗಿರುವ ನಾನು ಈ ನೈಮಿಶಾರಣ್ಯದಲಿ**
**ಹೇಗೆ ಹೇಗೋ ಹೆಜ್ಜೆಯಿಡುತಲಿರುವೆ ॥೪॥**

**ಕಾಶ್ಯಪ :** ನಿರ್ವಿಘ್ನವಾಗಿ ತಪಸ್ಸಿದ್ಧಿಯನ್ನು ದೊರಕಿಸಿ ಕೊಡುವ ಈ ನೈಮಿಶಾರಣ್ಯವು ಹಿಂದಿನ ರಾಜರ್ಷಿಗಳ ವಾನಪ್ರಸ್ಥದ ವಾಸಸ್ಥಳವಾಗಿತ್ತು. ಆದುದರಿಂದ ಧರ್ಮೈಕಪರಾಯಣನೂ ಇಡಿ ಜಗತ್ತಿನ ಭುಕ್ತಿಮುಕ್ತಿಗಳಿಗೆ ಕಾರಣನೂ ಆದ ಮಹಾರಾಜನೆನ್ನಿಸಿದ ನಿನಗೆ ನೈಮಿಶಾರಣ್ಯದ ಮೇಲೆ ಇಷ್ಟು ಗೌರವವಿರುವುದು ನ್ಯಾಯವೇ ಆಗಿದೆ.

**ಒಂದೆ ಬಿಲ್ಲಿಂದ ಸಗ್ಗದ ವರೆಗೆ ಹಬ್ಬಿದ ವ**
**ಸುಂಧರೆಯ ಗೆದ್ದು ಶತಯಾಗ ಮಾಡಿ ॥**
**ನಿಂದು ನಾಕಕೆ ದಾರಿಯನು ರಚಿಸಿ ರಾಜ್ಯವನು**
**ಮುಂದೆ ತನಯರಿಗಿತ್ತು ಮುಕ್ತಿಗಾಗಿ ॥**
**ಬಂದುಳಿದುದಿಲ್ಲಿ ಇಕ್ಷ್ವಾಕು ಕುಲ (ಕಡೆಯಲ್ಲಿ)**
**(ವೃಂದಾರವಂದ್ಯನನು ಧೇನಿಸುತ್ತ) ॥೫॥**

**ರಾಮ :** (ನಮಸ್ಕರಿಸುತ್ತಾನೆ)

**ಕಾಶ್ಯಪ :** ಇತರ ತಪೋವನಗಳಿಗಿಲ್ಲದ ಮಾಹಾತ್ಮ್ಯ ಈ ನೈಮಿಶಕ್ಕಿದೆ. ಇದೋ ನೋಡು; ಇಲ್ಲಿ–

ಹರಜಟಾಜೂಟಸ್ಥ ಶಶಿಯ ಬೆಳರೊಡಗೂಡಿ
ಉರಿಬಿಸಿಲು ಬೇಸಿಗೆಯ ಮಂದವಾಯ್ತು ॥
ತರುಪಲ್ಲವಗಳು ಬಾಡವು ತಂಗೊಳದ ನೀರು
ಅರತು ಹೋಗದು ಯಾವ ಋತುವಿನಲ್ಲೂ ॥
ಯಾರು ಈ ವನವನ್ನು ಕಂಡರೂ ಕಣ್ಣುರಿಯ
ದೇರದಿರದಾನಂದ ನೋಡಿದೊಡನೆ ॥೬॥

ಮತ್ತು ಇದರಲ್ಲಿ–

ಅಧ್ವರವ ನಿತ್ಯ ಬಿತ್ತರಿಸುತಿಹ ಹರಿಯ ಸಾ–
ನ್ನಿಧ್ಯದಿಂದಮರಪುರನಂದನದಲಿ ॥
ಉದ್ದಕ್ಕೆ ಬೆಳೆದ ಚಂದನವೃಕ್ಷಗಳ ಬದಲು
ಬಧ್ಯಂಗಳಾದವೀ ಹೆಮ್ಮರಗಳು ॥
ಮದ್ದಾನೆಗಳ ಕೊರಳ ದಾಬುಗಳ ಗಸಣೆಯಿಂ
ದೆದ್ದು ಕಾಣುವ ಕಂಡರಣೆಗಳುಳ್ಳ ॥
(ಅದ್ಭುತೋನ್ನತ) ವೃಕ್ಷಗಳ ನೋಡುವವ ತನ್ನ
ಹುಬ್ಬ ಮೇಲೇರಿಸಲೆ ಬೇಕು ರಾಮ ॥೭॥

**ರಾಮ :** (ನೋಡಿ) ನಿತ್ಯವೂ ನಡೆಯುತ್ತಿರುವ ಮಹಾಯಜ್ಞಗಳ ಬಲದಿಂದ ಈ ಧರ್ಮಾರಣ್ಯವು ಇಂದ್ರನಿಗೆ ನಂದನವನದ ನೆನಪು ಅಳಿಸಿಹೋಗುವಂತೆ ಮಾಡಿದೆ. ಅಲ್ಲದೆ–

ಸುರಪತಿಯ ಕರೆತರುವ ಮಂತ್ರವಾಣಿಗಳನ್ನು
ಬೆರಗುವಟ್ಟಾಲಿಸುವ ಶಚಿ ನಿತ್ಯವೂ ॥
ವಿರಹದಿಂದೇಕವೇಣಿಯ ಧರಿಸುತಿಹಳಹಹ !
ತೊರೆದು ಸಗ್ಗದ ಪುಷ್ಪಹಾರಗಳನು ॥೮॥

**ಕಾಶ್ಯಪ :** ಈ ತಮಾಷೆ ನೋಡಿದೆಯಾ ರಾಮಚಂದ್ರ?

ಗಂಡಸ್ಥಲದ ಮದಜಲಕ್ಕೆ ಮುಕುರಿದ ಜೇನ
ಬಡಿದು ಹಾರಿಸಲು ಯತ್ನಿಸದೆ ಇರುವ ॥
ಹಿಂಡು ರಿಸಿಗಳು ಹಾಡುತಿಹ ಸಾಮಗಾನಕ್ಕೆ
ಸರಿಯಾಗಿ ಕಿವಿ ಬಡಿವ ಆನೆಗಳಿದೋ ॥೯॥

**ರಾಮ :** (ನಕ್ಕು) ಇದರಲ್ಲೇನಾಶ್ಚರ್ಯ? ರಿಸಿ ಮುನಿಗಳ ಸಾಮಗಾನವು ಪುಣ್ಯಾವಹವೂ ಮಧುರವೂ ಆಗಿದೆ !

**ಮುನಿಜನರ ಸಾಮಗಾಯನ ಹಾದಿಹೋಕರನು**
**ಸೆರೆಹಿಡಿದು ಮೈಮರೆಸಿ ನಿಲಿಸುವಾಗ ॥**
**ಮನವ ಸೆಳೆಯದೆ? ಅದೀ ಆನೆಗಳನಿದರಲ್ಲಿ**
**ಬಹಳ ಆಶ್ಚರ್ಯ ಕಾಣಿಸುವುದಿಲ್ಲ ! ॥೧೦॥**

**ಕಾಶ್ಯಪ :** (ಸ್ವಗತ) ಆಹಾ, ವಿರಹದಲ್ಲಿರುವ ರಾಮಚಂದ್ರನಿಗೆ ಉತ್ಸಾಹವೇ ಇಲ್ಲ! ಏಕೆಂದರೆ ಈತ ತಿರ್ಯಗ್ಜಂತುಗಳು ಕೂಡ ವಿರಹಿಗಳಂತೆಯೇ ನಿರುತ್ಸಾಹದಲ್ಲಿವೆ–ಎಂದು ಭಾವಿಸುವಂತೆ ತೋರುತ್ತದೆ!

**(ಪ್ರಕಾಶ) ಮುನಿಜನರ ದಿವ್ಯ ತೇಜಸ್ಸಿನಿಂದ ।**
**ತೆನೆದುಂಬಿ ಕಳೆದು ಹೋಗಿದ್ದರೂನು ॥**
**ಮಧುಮಾಸ, ಮಾಮರಗಳೆಸೆವುವಹಹ ।**
**ಚೆದುರಿಹವು ಬಿಟ್ಟವುಗಳನ್ನಳಿಗಳು ।**
**ಒದರುತ್ತ ಧಾವಿಸಿವೆ, ಹೋಮಧೂಮ ॥**
**ಕಣ್ಗೆಡಿಯೆ ಹೋಗಿ ಕೆರೆದಾವರೆಗಳ**
**ಹೆಬ್ಬೊಡಲಿನಲ್ಲಿ ಹೊಗುತಿಹವು ಹೆದರಿ ! ॥೧೧॥**

**ರಾಮ :** ಅರೇ, ದುಂಬಿಗಳನ್ನು ದುಃಖಕ್ಕೀಡು ಮಾಡಿದಂತೆ ನಮ್ಮನ್ನೂ ಸತತಾಹುತಿಯಿಂದ ಹೆಚ್ಚುತ್ತಿರುವ ಹೊಗೆಯೊಡನ್ನು ಗಾಸಿಗೊಳಿಸುತ್ತಿದೆಯಲ್ಲಾ! (ಹೊಗೆಯ ಕಾಟದಿಂದ ತೊಂದರೆ ಪಡುತ್ತಾ)

**ಕಾಶ್ಯಪ :** ಅರೇರೇ, ಹೊಗೆ ನಿಜವಾಗಿಯೂ ನಿನ್ನ ಕಣ್ಣನ್ನು ಕಸವಿಸಿಗೊಳಿಸುತ್ತಿರುವಂತೆ ತೋರುವುದಲ್ಲಾ!

**ರಾಮ :** **ಜಾನಕೀವಿಯೋಗದಿಂದ ನಿತ್ಯ ನೀರ ಸುರಿಸಿ ಕಣ್ಣು**
**ಕ್ಷೀಣ ಶಕ್ತಿಯಾಯ್ತು; ಮತ್ತೆ ಇಂದಿನೀ ಹೊಗೆ ॥**
**ತಾನು ಹೊಕ್ಕು ಆಯಸವನು ಉಂಟು ಮಾಡಿ ನನ್ನ ಕಣ್ಗೆ**
**(ಬೇನೆ ಬರಿಸ ತೊಡಗಿರುವುದು ಏನಿದೀ ಬಗೆ?) ॥೧೨॥**

**ಕಾಶ್ಯಪ :** ಹಾಗಾದರೆ ಈ ಆಶ್ರಮದ ಸರೋವರದಲ್ಲಿಳಿದು ತಣ್ಣೀರಿಂದ ತೊಳೆದುಕೋ. ಕಣ್ಣು ನೋವು ಕಡಿಮೆಯಾಗುವವರೆಗೆ ಸ್ವಲ್ಪ ಇಲ್ಲೇ ವಿಶ್ರಮಿಸಿಕೊಳ್ಳಲು ನಿಲ್ಲಬಹುದು. ನಾನೂ ಕುಲಪತಿಗಳಾದ ವಾಲ್ಮೀಕಿಗಳ ಅಗ್ನಿಹೋತ್ರದ ವೇಳೆ ಬಂತೋ ಹೇಗೆ ಎಂಬುದನ್ನು ಹತ್ತಿರ ಹೋಗಿ ನೋಡಿಕೊಂಡು ಬರುತ್ತೇನೆ. (ಎಂದು ಹೋಗುತ್ತಾನೆ)

**ರಾಮ :** (ತಿರುಗುತ್ತಾ) (ಸ್ವಗತ)

ಇದು ಕೆರೆದಂಡೆ; ಇಳಿಯುತ್ತೇನೆ.
(ಇಳಿದು)
ಆಹಾ; ಈ ತಾವರೆಗೆರೆಯ ನೀರು ಎಷ್ಟು ತಿಳಿಯಾಗಿದೆ!
(ನೀರ ನಡುವೆ ಪ್ರತಿಬಿಂಬವನ್ನು[10] ನೋಡಿ ಉತ್ಸಾಹದಿಂದ)
ಇದೇನಿದು? ಸೀತೆಯೂ ಇಲ್ಲೇ ಇದ್ದಾಳೆ!

**ಸೀತೆ** : (ನೋಡಿ) (ಸ್ವಗತ)
ಅಯ್ಯೋ, ಇದೇನಾಗಿ ಹೋಯಿತು! ಹಂಸಪಕ್ಷಿಗಳ ಜೋಡಿಯನ್ನು ನೋಡುತ್ತಾ ನಿಂತ ನಾನು ಅನಿರೀಕ್ಷಿತವಾಗಿ ಆರ್ಯಪುತ್ರ ಇಲ್ಲಿಗೆ ಬಂದದ್ದನ್ನು ನೋಡಲೇ ಇಲ್ಲವಲ್ಲಾ! ಹೊರಡುತ್ತೇನೆ ನಾನಿಲ್ಲಿಂದ. (ಹಾಗೆ ಮಾಡುತ್ತಾಳೆ.)

**ರಾಮ** : (ಸ್ವಗತ) ಏನಿದು? ನನ್ನನ್ನು ಮಾತಾಡಿಸದೆ ಸೀತೆ ಹೊರಟು ಹೋಗುತ್ತಿದ್ದಾಳಲ್ಲಾ!

**ದೀರ್ಘಕಾಲದ ವಿರಹದಿಂದ ಬಿಳಿಚಿರುವ ಸೀತೆ**
**ದೀರ್ಘಾಲಕಗಳ ಬಾಚದೆ (ಅಯೋಧ್ಯಾಪಸೀತೆ) ॥**
**ಸಪ್ಪೆ ಮೊಗದಿಂದಿರುವಳಿವಳನ್ನು ನೋಡಲೆಂದು**
**ಇಪ್ಪತ್ತು ನೂರಸಲ ಬಯಸಿದೆನು–ಕಂಡೆನಿಂದು! ॥೧೩॥**

ಆದರೆ ಈಗಲೇ ಇವಳು ನನ್ನನ್ನು ಬಿಟ್ಟು ಮತ್ತೆ ದೂರ ಹೊರಟಳಲ್ಲಾ! ಇವಳನ್ನೀಗ ಹಿಡಿಯುತ್ತೇನೆ. (ತೋಳುಗಳನ್ನು ಚಾಚುತ್ತಾನೆ) ಅರೆ, ಇವಳು ವೈದೇಹಿಯಲ್ಲ! ಆದರೆ ಇದು–

**ಕೆರೆದಂಡೆಯ ಮೇಲೆತ್ತಲೊ ಹೊರಟಿಹ**
**ಸೀತೆಯ ಪಡಿನೆರಳು ॥**
**ಸರಳಿಸುತಿದೆ ನೀರಲಿ ಅದನವಳೆಂ**
**ದರಿದೆನು–ಇದು ಮರುಳು! ॥೧೪॥**

---

10. ಛಾಯೆಯೆಂದರೆ ನೆರಳು ಅಥವಾ ಪ್ರತಿಬಿಂಬ; ಛಾಯಾಸೀತೆ ನೀರಿನಲ್ಲಿ ಪ್ರತಿಬಿಂಬಗತೆಯಾದ ಸೀತೆ: ಮಾಯಾಸೀತೆಯೂ ಅಲ್ಲ, ನೆರಳಿನ ಸೀತೆಯೂ ಅಲ್ಲ. ಸ್ವಶಕ್ತಿಯಿಂದ ಮನುಷ್ಯಜಾತಿಗೆ ಅದೃಶ್ಯೆಯಾಗಿ ತಿರುಗುತ್ತಿರುವ ಸೀತೆ ಈ ದಂಡೆಯ ಮೇಲಿಲ್ಲ. ವಾಲ್ಮೀಕಿಯ ಪ್ರಭಾವದಿಂದ ಪರಪುರುಷರಿಗೆ ಕಾಣದಂತಾಗಿರುವ ಗೃಹಿಣಿಯರಲ್ಲಿ ಇವಳೂ ಒಬ್ಬಳು. ಕಾಯಿದೆಯ ಪ್ರಕಾರ ರಾಮಪರಿತ್ಯಕ್ತೆಯಾದ ಸೀತೆಗೆ ರಾಮನಿಲ್ಲಿ ಪರಪುರುಷ; ಆದ್ದರಿಂದ ಅವನ ಕಣ್ಣಿಗೆ ಇವಳು ಬೀಳಳು; ಇವಳ ಮಾತೂ ಅವನಿಗೆ ಕೇಳಿಸದು.

ಆದ್ದರಿಂದ ಈಗ ಈ ಪ್ರತಿಬಿಂಬದ ಮೂಲಬಿಂಬವನ್ನು ಹುಡುಕುತ್ತೇನೆ. (ಹುಡುಕಲು ತೊಡಗುತ್ತಾನೆ.) ಈ ಕೆರೆಯ ದಂಡೆ ನಿರ್ಜನವಾಗಿದೆ; ಇದು ಏಕಾಂತ ಸ್ಥಳ. ಆದರೆ ಸೀತೆಯ ಪ್ರತಿಬಿಂಬ ನೀರಿನಲ್ಲಿ ತೋರುತ್ತಿದೆ. ಪ್ರತಿಬಿಂಬಕ್ಕೆ ಬಿಂಬವಿದ್ದೇ ಇರಬೇಕು. ಏನಿದು? ಏಕೆ ಸೀತೆ ಕಾಣಿಸಳು?

**ಸೀತೆ** : (ಸ್ವಗತ) ನನ್ನ ಬಿಂಬವನ್ನೀತ ಕಂಡಿದ್ದಾನೆ. ಆದರೆ ನಾನು ಕಾಣದೆ ಹೋಗಿರುವುದು ಹೇಗೆ? (ಆಲೋಚನೆ ಮಾಡಿ) ಓಹೋ, ತಿಳಿಯಿತು– ಈ ಕೆರೆಯ ದಂಡೆಯ ಮೇಲೆ ತಿರುಗಾಡುವ ನನ್ನಂಥ ತಪೋವನ ವಾಸಿನಿಯರು ಪರಪುರುಷರಿಗೆ ಕಾಣಿಸದಂತಾಗಿರುವುದು ಮುನಿಗಳ ಅನುಗ್ರಹದಿಂದ. ಆದರೆ ಮುನಿಗಳು ನಮ್ಮ ಪ್ರತಿಬಿಂಬಗಳು ಕೂಡ ಪರಪುರುಷರಿಗೆ ಕಾಣಿಸದಂತೆ ಆಜ್ಞೆ ಮಾಡಿದ್ದರೆ ನನ್ನ ಮೇಲೆ ಅವರು ಬಹಳ ಅನುಗ್ರಹ ಮಾಡಿದಂತಾಗುತ್ತಿತ್ತು![11] ಹಾಗೆ ಅವರು ಮಾಡದೆ ಇರುವುದರಿಂದ ನಾನೀಗ ನನ್ನ ಪ್ರತಿಬಿಂಬ ಕಾಣಿಸಬಾರದೆಂದು ಇಲ್ಲಿಂದ ದೂರ ಹೋಗುತ್ತೇನೆ.

**ರಾಮ** : (ಸ್ವಗತ) ತಿಳಿನೀರ ನಡುವೆ ನನಗೆ ಕಾಣಿಸುತ್ತಿರುವುದು ಆ ಸೀತೆಯ ಪಡಿಯಚ್ಚೇ ಸರಿ; ಇದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. (ನೋಡಿ) ಛಾಯಾಸೀತೆಯೂ ಮಾಯವಾಗಿ ಹೋದಳಲ್ಲಾ! ಇದೇನಿದು? (ಮೂರ್ಛೆ ಹೊಂದುತ್ತಾನೆ.)

**ಸೀತೆ** : (ಸ್ವಗತ) ಅಯ್ಯೋ, ಅಯ್ಯೋ, ಆರ್ಯಪುತ್ರ ಮೂರ್ಛಿತನಾದ; ಹತ್ತಿರ ಹೋಗುತ್ತೇನೆ. (ಹತ್ತಿರ ಹೋಗುತ್ತಾಳೆ) ಅಥವಾ ಆರ್ಯಪುತ್ರನನ್ನು ನಾನು ನೋಡಿದರೆ ಅವನು ಪುನಃ ಕೋಪಗೊಂಡಾನು; ಆಗ ಮುನಿಜನರು ನಾನು ಅವಿನೀತೆ ಎಂದು ತಿಳಿದುಕೊಂಡಾರು. ಆದುದರಿಂದ ಹಿಂದಕ್ಕೆ ಹೋಗುತ್ತೇನೆ. (ಹಿಂದಿರುಗುತ್ತಾಳೆ) ಅಥವಾ ಯುಕ್ತಾಯುಕ್ತ ವಿಚಾರಕ್ಕೆ ಇದು ತಕ್ಕ ಸಂದರ್ಭವಲ್ಲ. ಆರ್ಯಪುತ್ರನು ನನ್ನ ಮೇಲೆ ಸಿಟ್ಟುಮಾಡಲಿ,

---

11 ಇಲ್ಲಿ ಸೀತೆಯ ದುಃಖ, ನಿರಾಶೆ, ಸಂತಾಪ, ಸಿಟ್ಟು ಜುಗುಪ್ಸೆಗಳ ಛಾಯೆಗಳು ನಾಟಕೀಯ ಧ್ವನಿಯಿಂದ ಅತ್ಯಂತ ಪರಿಣಾಮಕರವಾಗಿ ವ್ಯಕ್ತವಾಗಿರುವುದು ಗಮನಾರ್ಹ. ತನ್ನ ನೆರಳು ಕೂಡ ರಾಮನ ಕಣ್ಣಿಗೆ ಬೀಳಬಾರದೆನ್ನುವಷ್ಟು ಮಟ್ಟಿಗೆ ಪರಿತ್ಯಾಗ ಕರ್ಮದಿಂದ ವ್ಯಕ್ತವಾದ ರಾಮನ ಹೃದಯಕಾಠಿನ್ಯದ ಬಗ್ಗೆ ಅವಳಿಗೆ ಅತ್ಯಂತ ಜುಗುಪ್ಸೆಯುಂಟಾಗಿರಬೇಕೆಂಬುದನ್ನು ಕವಿ ಇಲ್ಲಿ ಸಹಜವಾದ ಸಾಂದರ್ಭಿಕ ಬಾಹ್ಯಾರ್ಥದ ಮೂಲಕ ಸೂಚಿಸಿದ್ದಾನೆ. ಎಂಥ ಆದರ್ಶ ಸಾತ್ವಿಕ ಸ್ತ್ರೀ ಎನಿಸಿದರೂ ಕ್ಷಣಕಾಲವೂ ಮಾನವಸಹಜ ಪ್ರತಿಕ್ರಿಯೆಯನ್ನು ತೋರಿಸದೆ ಹೋಗಿದ್ದರೆ ಅವಳು ಅತಿಮಾನುಷಿ ಅಥವಾ ಅಮಾನುಷಿ ಎನ್ನಿಸಿ ಮಾನವರ ಸಹಜ ಕನಿಕರಕ್ಕೆ ಅಪಾತ್ರಳಾಗುತ್ತಿದ್ದಳು.

ಇಲ್ಲವೆ ಮುನಿಜನ ನನ್ನನ್ನು ಅವಿನೀತೆ ಎಂದು ಕರೆದರೂ ಕರೆಯಲಿ. ಈ ಅವಸ್ಥೆಯಲ್ಲಿರುವ ಆರ್ಯಪುತ್ರನನ್ನು ತಾನೆಂದೂ ಅಲಕ್ಷಿಸಿ ಬಿಟ್ಟು ಹೋಗಲಾರೆ. (ಸಂಮುಖವಾಗಿ ತಿರುಗಿ) ಅಷ್ಟದಿಕ್ಪಾಲಕರೇ ಕೇಳಿರಿ–ನಾನು ಆರ್ಯಪುತ್ರನಿಂದ ದೂರೀಕೃತೆ, ನಾನೀಗ ಅವಿನಯದಿಂದ ಆರ್ಯಪುತ್ರನ ಆಜ್ಞೆಯನ್ನು ಮೀರುತ್ತಿಲ್ಲ. ಶೋಕಾವೇಗಕ್ಕೆ ವಶಳಾಗಿ, ಸಂಯಮವನ್ನು ತಂದುಕೊಳ್ಳಲಾರದೆ, ಇಂಥ ಅತಿಕ್ರಮಕ್ಕೆ ಇಳಿದಿದ್ದೇನೆ. (ಹತ್ತಿರ ಹೋಗಿ ನೋಡಿ) ಅಯ್ಯೋ, ಅಯ್ಯೋ, ಆರ್ಯಪುತ್ರನ ಪ್ರಾಣ ಹೋಗಿಯೇ ಬಿಟ್ಟಿದೆ!

(ಅಪ್ಪುತ್ತಾಳೆ.)

**ರಾಮ** : (ಚೇತರಿಸಿಕೊಳ್ಳುತ್ತಾನೆ.)

**ಸೀತೆ** : (ದೂರ ಸರಿದುಕೊಳ್ಳುತ್ತಾಳೆ,)

**ರಾಮ** : (ಸ್ವಗತ) ಇದೇನಿದು? ಅಕಸ್ಮಾತ್ತಾಗಿ ನನಗೆ ನವಿರೆದ್ದಿವೆ!

**ಸೀತೆ** : (ಸ್ವಗತ) ಆ ಪರಿಯಿಂದ ದೂರೀಕೃತೆಯಾದ ನಾನು ಹೀಗೆ ಅತಿಕರ್ಮವನ್ನು ಮಾಡಿ ನಿಜವಾಗಿಯೂ ಹೆದರುತ್ತಿದ್ದೇನೆ.

**ರಾಮ** : (ಸ್ವಗತ) ನನ್ನನ್ನು ಅಪ್ಪಿಕೋ, ವೈದೇಹಿ, ಗಟ್ಟಿಯಾಗಿ ।

**ಸೀತೆ** : (ಸ್ವಗತ) ನಾನು ಅಪರಾಧಿನಿಯಲ್ಲ.

**ರಾಮ** : (ಸ್ವಗತ) ನನಗೆ ದರ್ಶನವ ಕೊಡು ಮನದನ್ನೆ (ಮೂರ್ತನಾಗಿ)॥

**ಸೀತೆ** : (ಸ್ವಗತ) ಸಿದ್ಧಜನರ ಆಜ್ಞೆ ಪ್ರಭಾವಿಯಾಗಿದೆ, ಮಂದಭಾಗ್ಯಳಾದ ನಾನೀಗ ಏನು ಮಾಡಲಿ?

**ರಾಮ** : (ಸ್ವಗತ) ಬಹುಕಾಲ ಬೆಳೆಯಿಸದಿರೆಲೆ ಸೀತೆ ಕೋಪವನ್ನು ॥

**ಸೀತೆ** : (ಸ್ವಗತ) ನಾನೂ ಆರ್ಯಪುತ್ರನಲ್ಲಿ ಹೀಗೇ ಅರಿಕೆ ಮಾಡಿಕೊಳ್ಳುತ್ತೇನೆ.

**ರಾಮ** : (ಸ್ವಗತ) ನನ್ನಲ್ಲಿ ನಿಷ್ಕರುಣೆಯಾಗಿರುವೆಯೇನು ನೀನು? ॥೧೫॥

**ಸೀತೆ** : (ಸ್ವಗತ) ಆರ್ಯಪುತ್ರ! ಈ ಟೀಕೆ ವಿಪರೀತ ಸ್ವರೂಪದ್ದಲ್ಲವೇ?

**ರಾಮ** : (ಸ್ವಗತ) ಬಿನ್ನವಿಸಿಕೊಳ್ಳುವೆನು ದೇವಿ ನಿನ್ನಲ್ಲಿ ।

**ಸೀತೆ** : (ಸ್ವಗತ) ಜಾಗ್ರತಳಾಗಿದ್ದೇನೆ, ಅಪ್ಪಣೆಕೊಡು.

**ರಾಮ** : (ಸ್ವಗತ) ಚೆನ್ನಾದ ಚಾರಿತ್ರ ಇದೆಯೆನ್ನುವಲ್ಲಿ ॥೧೬॥

**ಸೀತೆ** : (ಸ್ವಗತ) ಹಾಗಾದರೆ ಪ್ರಾಣತ್ಯಾಗ ಅಕಾರ್ಯವಾಗುತ್ತದೆ.

**ರಾಮ** : (ಸ್ವಗತ) ಶಂಕೆಯಿರದಿದ್ದರೂ ಆದೆ ನೀ ತ್ಯಕ್ತೆ ।

**ಸೀತೆ** : (ಸ್ವಗತ) ಆರ್ಯಪುತ್ರನಾದ ನೀನು ನಿನ್ನ ಪರಿಜನರೆಲ್ಲರ ಮೇಲೂ ಪ್ರಭುತ್ವ ಉಳ್ಳವನು.

**ರಾಮ** : (ಸ್ವಗತ) ಪಂಕಜಾನನೆ ಕ್ಷಮಿಸಲಿದನು ನೀ ಶಕ್ತೆ ॥೧೭॥

**ಸೀತೆ** : (ಸ್ವಗತ) ನಿನ್ನನ್ನು ಯಾವಾಗಲೋ ಕ್ಷಮಿಸಿಬಿಟ್ಟಿದ್ದೇನೆ ನಾನು ನಿತ್ಯ ಪ್ರಸನ್ನೆ; ನೀನೀಗ ನನ್ನನ್ನು ಮನ್ನಿಸಬೇಕು.

**ರಾಮ** : (ಸ್ವಗತ) ನಿನ್ನ ತೋಳದಿಂಬಿನಲ್ಲಿ ನಿನ್ನ ಸೆರಗಿನಡಿಯಲಿ ।
ಚೆನ್ನೆ, ತಿಂಗಳಿರುಳ ಕಳೆವೆ ನಿನ್ನ ಜೊತೆಗದೆಂದು ನಾ! ॥

**ಸೀತೆ** : (ಸ್ವಗತ) ಎಲೆ ಜನಾಪವಾದಭೀರುವೇ, ನಾನು ಇಲ್ಲೇ ಇರುವಾಗ ನೀನು ಪರಿತಾಪಪಡುತ್ತೀಯೆ.[12]

**ರಾಮ** : ಹಾ ಪ್ರಿಯೇ, ಜನಕರಾಯನ ಮಗಳೇ !

(ಮೂರ್ಛಿತನಾಗುತ್ತಾನೆ)

**ಸೀತೆ** : ಏನಿದು? ಮತ್ತೆ ಆರ್ಯಪುತ್ರ ಮೂರ್ಛಿತನಾದನಲ್ಲಾ! ಸಮಾಧಾನ ಮಾಡುತ್ತೇನೆ.

(ಉತ್ತರೀಯದ ಸೆರಗಿನಿಂದ ಗಾಳಿ ಹಾಕುತ್ತಾಳೆ)

**ರಾಮ** : (ಕೈ ನೀಡಿ ಆ ಸೆರಗನ್ನು ಹಿಡಿದುಕೊಳ್ಳುತ್ತಾನೆ) ಇದೇನಿದು–ಸೆರಗಿನಂತೆ ತೋರುವುದಲ್ಲಾ! ಇದು ಯಾರಾಗಿರಬಹುದು?

(ಆಲೋಚಿಸಿ) ಅಥವಾ–

**ಈ ಜಗತ್ತಿನಲಿ ಜನಕಸುತೆಯನುಳಿದಾವಳಿಹಳು ತಾನೆ ।**
**ಸಾಜಮಾಗಿ ಬೀಸುವ ವಿಲಾಸವತಿ ದಿವ್ಯಗುಣನಿಧಾನೆ ॥**
**ಸೆರಗುಗಾಳಿಯನು ಜೀವಮತ್ತೆ ಮೈಗೂಡುವಂತೆ ಒಸೆದು ।**
**(ಸರಳವಾಗಿ) ಸೂಸುವಳ ಕಾಣೆ ಜೀವಕ್ಕೆ ಜೀವ ಬೆಸೆದು ! ॥೧೮॥**

---

೧೨ ಪ್ರೇಕ್ಷಕರಿಗೆ ಇದು ಸಾಕ್ಷಾತ್ ಸಂವಾದ; ಸೀತೆಗೆ ಅರ್ಧ ಹಾಗೆ; ರಾಮನಿಗಾದರೋ ಇದು ಸಂಪೂರ್ಣ ಸ್ವಗತ ವಿಲಾಪ. ರಾಮನ ಹೃದಯದ ಸ್ಪಷ್ಟ ಪರಿಚಯ ಸೀತೆಗೆ ನೇರವಾಗಿ ಆಗುವುದಿಲ್ಲಿ ನಾಟಕದ ಉದ್ದೇಶ. ಜನಶಂಕೆ ರಾಮಶಂಕೆಯಲ್ಲ ಎಂಬುದೀಗ ಸೀತೆಗೆ ಖಚಿತವಾಗುತ್ತದೆ. ಅವಳಿಗೆ ಬೇಕಾದದ್ದು ರಾಮನ ನಿಃಶಂಕೆ; ರಾಮ ಅವಳಿಗೆ ಜನಕ್ಕಿಂತ ಹೆಚ್ಚಿನವನು. ತನ್ನ ಜೀವನದ ಸಾರ್ಥಕತೆ ಇರುವುದು ಅವನು ಕೊಡುವ ಮನ್ನಣೆಯಲ್ಲೇ ಎಂಬುದು ಅವಳ ತಿಳಿವಳಿಕೆ. ಅದೀಗ ಸಿಕ್ಕಿತು. ಅದು ದೊರಕಿದ ಈ ಸಂವಾದ ಸನ್ನಿವೇಶದ ರಚನೆ ಅದ್ವಿತೀಯವಾದುದು.

'ಭರ್ತೃಸ್ನೇಹಾತ್ ಸಾ ಹಿ ದಗ್ಧಾಪ್ಯದಗ್ಧಾ' ಎಂಬುದಿಲ್ಲಿ ಅನ್ವಯಾರ್ಹವಾಗಿದೆ: ಇಲ್ಲಿ ಸೀತೆ 'ಭರ್ತೃಸ್ನೇಹಾತ್ ಸಾ ಹಿ ತ್ಯಕ್ತಾಽಪ್ಯತ್ಯಕ್ತಾ' ಅಲ್ಲವೇ?

ಆದುದರಿಂದ ಇವಳನ್ನೀಗ ನೋಡುತ್ತೇನೆ. (ಕಣ್ಣು ತೆರೆದು) ಯಾವಾಗಲೂ ಕಣ್ಣೀರಿನಿಂದ ಕಣ್ಣು ಕಟ್ಟಿದಂತಾಗಿ ಏನೂ ಕಾಣಿಸುವುದಿಲ್ಲ. ಆದುದರಿಂದ ಈ ಮೇಲುದುವನ್ನು ಎಳೆದುಕೊಂಡು ಕಣ್ಣೀರನ್ನು ಒರಿಸಿ ಒಗೆಯುತ್ತೇನೆ. (ಅದೇ ಉತ್ತರೀಯದಿಂದ ಕಣ್ಣೀರನ್ನು ಒರಿಸಿಕೊಂಡು ತನ್ನತ್ತ ಸೆಳೆದುಕೊಳ್ಳುತ್ತಾನೆ)

**ಸೀತೆ :** (ಶಾಲನ್ನು ಕೈ ಬಿಡುತ್ತಾಳೆ.) ಆರ್ಯಪುತ್ರ, ನೀನು ಪ್ರಣಯ ಕಲಾವಿದನಂತೆ, ಪರಸ್ತ್ರೀಯ ಸೆರಗಿನಿಂದ ಕಣ್ಣೀರೊರಿಸಿಕೊಳ್ಳುವುದು ಸರಿಯಲ್ಲ.

**ರಾಮ :** (ಕೆಳಗೆ ಬಿದ್ದ ಶಾಲನ್ನು ಕಂಡು)

ಇದೇನು? ಬರಿ ಮೇಲುದುವಷ್ಟೇ ಕಾಣಿಸುತ್ತಿದೆಯಲ್ಲಾ! ಇದೆಂಥ ಅಂಗವಸ್ತ್ರದ ತುಂಡು? ಇದನ್ನು ಸೊಂಟದ ಸೀರೆಯ ಸುತ್ತಿನಲ್ಲಿ ಸೆಕ್ಕಿಕೊಂಡಿರಲಿಲ್ಲವೇ? ಹೆಂಗಸಿನ ಮೇಲುದುವೆಲ್ಲಿಯಾದರೂ ಹೀಗೆ ಹರಿದು ಬೀಳುವುದುಂಟೇ?

**ಹಿಂಗದೊಮ್ಮೆಲೆ ಎಳೆದೆನನ್ಯವಸ್ತ್ರವನು ಪರಿ**
**ಕಿಸದೆ ಇದನಾರದೆಂದು ॥**
**ತಿಂಗಳಿನ ಪೊರೆ ಬಿದ್ದರೆಂತೊ ಬಾನಿಂದಂತು**
**ಲಲಿತವಾಗಿದೆ ಶಾಲಿದು ॥೧೯॥**

ಒಮ್ಮೆಲೇ ವಿಚಾರಮಾಡದೆ ಕೆಲಸ ಮಾಡಿದೆನಲ್ಲಾ–ಎಂದು ಭಾವಿಸಲೇ? ಸಾಧ್ಯವಿಲ್ಲ; ಈ ಶಾಲು ಚಿತ್ರಕೂಟವನದೇವತೆಯಾದ ಮಾಯಾದೇವಿ ಅಂದು ನಮಗೆ ತೋರಿಸಿ ಸೀತೆಗೆ ನೆನಪಿಗಾಗಿ ಕೊಟ್ಟದ್ದು.[13] ಇದು–

**ಜೂಜಿನಲ್ಲಿ ಪಣವಾಗಬಲ್ಲ ಅತಿ ಬೆಲೆಯ ರತ್ನಪಟ್ಟ।**
**ಪ್ರಣಯಸಂಕಟದಿ ಕೊರಳಿಗಾಗಬಹುದುರುಳು, ಇದು ಬಲಿಷ್ಠ।**
**ಆಡಿ ದಣಿಯೆ ಬೀಸಣಿಗೆ ಕಳೆಯಲಿದು ರತಿಶ್ರಾಂತಿಯನ್ನ**
**ಇರುಳ ಜಗಳದಲಿ–ಹಾಸಿದಾಯ್ತು ಜಾನಕಿಗೆ ಚಿಗುರೆಗಣ್ಣ ॥೨೦॥**

---

13 ಅಭಿಜ್ಞಾನಶಾಕುಂತಲವನ್ನು ಕಾಳಿದಾಸ ಬರೆದ. ಆಗ ಅದರಲ್ಲಿ ಬರುವ ಸಾನುಮತಿಯ ದುಷ್ಯಂತ ಪರೀಕ್ಷಣೆಯಂತೆಯೇ ದೂರ್ವಾಸನ ಶಾಪಕ್ಕೆ ಅನುಷಂಗಿಯಾದ ಅಭಿಜ್ಞಾನದ ಉಂಗುರವೂ ಅಷ್ಟೇನೂ ರಸ ಚಮತ್ಕಾರ ಸಂಪನ್ನ ಎಂದು ದಿಙ್ನಾಗನಿಗೆ ಎನ್ನಿಸರಲಿಕ್ಕಿಲ್ಲ. 'ಶಾಕುಂತಲ'ದಲ್ಲಿಯ ಸಾಮಾನ್ಯ ರಾಜಮುದ್ರೆಯ ಉಂಗುರ ಕೇವಲ ಶಾಪವಿಮೋಚಕ. ಇಲ್ಲಿ ಈ ಶಾಲು ದಿವ್ಯ ಮತ್ತು ಅಪೂರ್ವ ಮನೋಹರ. ಅಲ್ಲಿ ಪ್ರಣಯಿನಿಯನ್ನು ಮರೆತು ಧಿಕ್ಕರಿಸಿದ ನಾಯಕ ಯಾರೋ ತಂದ ತನ್ನ ಉಂಗುರವನ್ನು ಕಂಡು ಪಶ್ಚಾತ್ತಾಪ ಪಡುತ್ತಾನೆ. ಇಲ್ಲಿ ವಿವೇಕದಿಂದಲೇ ಅನಿವಾರ್ಯವಾಗಿ ಪ್ರಣಯಿನಿಯನ್ನು ತ್ಯಜಿಸಿ ದುಃಖಪಡುತ್ತಲಿರುವ ನಾಯಕನು ಅತ್ಯುತ್ಕಟ ದುಃಖಾವಸ್ಥೆಯಲ್ಲಿ ಅವಳ ಅಭಿಜ್ಞಾನವನ್ನು ಕೊಡುವ ಶಾಲನ್ನು ಅವಳಿಂದಲೇ ಪಡೆದೂ ಅವಳನ್ನು ಕೂಡಲೇ ಪಡೆಯಲಾರದವನಾಗಿದ್ದಾನೆ!

ಪೂರ್ವ ಪುಣ್ಯದಿಂದ ಇದೀಗ ನನಗೆ ಸಿಕ್ಕಿತು.

**ಸೀತೆ** : ಸುದೈವದಿಂದ ಆರ್ಯಪುತ್ರನು ಶಾಲನ್ನು ಈಗ ಗುರುತಿಸಿದ.

**ರಾಮ** : ಪ್ರಿಯೆಗೆ ಸುಪ್ರಿಯವಾದ ಈ ವಸ್ತುವನ್ನೀಗ ಹೇಗೆ ವಿಶೇಷತಃ ಸನ್ಮಾನಿಸಲಿ? (ವಿಚಾರವಮಾಡಿ) ಆಗಲಿ, ಹೀಗೆ ಮಾಡಿದರೆ ಅದಕ್ಕೆ ಅನನ್ಯ ಸಾಧಾರಣವಾದ ಬಹುಮಾನ ಕೊಟ್ಟಂತಾಗುತ್ತದೆ. (ಹೊದೆದುಕೊಳ್ಳುತ್ತಾನೆ. ಆಮೇಲೆ ತನ್ನನ್ನು ನೋಡಿಕೊಂಡು) ಎರಡು ಶಾಲುಗಳನ್ನು ಹೊದೆದ ನನ್ನನ್ನು ನೋಡಿ ಮುನಿಜನರು ಅನ್ಯಥಾ ಭಾವಿಸಬಹುದು. ಆದ್ದರಿಂದ ನನ್ನ ಶಾಲನ್ನು ನಾನು ತೆಗೆದೊಗೆಯುತ್ತೇನೆ. (ಎಂದು ಬೀಸಾಡುತ್ತಾನೆ.)

**ಸೀತೆ** : (ಅದನ್ನು ಹಿಡಿದು ಸಂತೋಷದಿಂದ)

ಅದನ್ನು ಇಷ್ಟುಕಾಲ ಬದುಕಿ ಉಳಿದದ್ದು ಸಫಲವಾಯಿತು. (ಮೂಸಿನೋಡಿ) ನನ್ನ ಸುದೈವ ಇದು, ಮಹಾಭಾಗ್ಯ! ಆರ್ಯಪುತ್ರನ ಈ ಶಾಲಿಗೆ ಯಾವ ಸುಗಂಧವನ್ನೂ ಲೇಪಿಸಿಲ್ಲ; ಇದು ಯಾವ ಅತ್ತರು–ಸೆಂಟುಗಳನ್ನೂ, ಕಂಡಂತಿಲ್ಲ.[14] ರಘುವಂಶದವರು ಸದಾ ಸತ್ಯಸಂಧರು, ಸುಳ್ಳು ಅವರ ಹತ್ತಿರ ಸೋಂಕದು. (ಹೊದೆದುಕೊಂಡು) ಅರೇ, ಇದೇನಾಶ್ಚರ್ಯ! ನನ್ನ ಪ್ರಿಯತಮನ ಸಂಸರ್ಗದ ದೆಸೆಯಿಂದ ನನಗೆ ಸುಖಸ್ಪರ್ಶವನ್ನುಂಟುಮಾಡುವ ಈ ಶಾಲನ್ನು ಹೊದೆದುಕೊಂಡ ಕೂಡಲೇ ಅವನೆದೆಯನ್ನಪ್ಪಿದಾಗ ಆಗುವಂಥ ರೋಮಾಂಚನ ನನ್ನ ಮೈಯಲ್ಲುಂಟಾಗಿದೆ!

**ರಾಮ** : (ಆಶ್ಚರ್ಯದಿಂದ) ನಾನೆಸೆದ ನನ್ನ ಶಾಲನ್ನು ನೆಲಕ್ಕೆ ಬೀಳುವ ಮೊದಲೇ ಯಾರೋ ಎತ್ತಿಕೊಂಡಂತೆ ಕಾಣುವುದಲ್ಲಾ! ಇದು ಬಹುಶಃ ನನ್ನ ಸೀತಾಸಂದರ್ಶನದ ಸಂಕಲ್ಪ ಸದ್ಯದಲ್ಲೇ ಕೈಗೂಡುವುದು ಎಂಬುದರ ಸೂಚನೆ ಎಂದು ಭಾವಿಸುತ್ತೇನೆ. (ವಿಚಾರಮಗ್ನನಾಗಿ) ಅಪಹೃತವಾದ ನನ್ನ ಉತ್ತರೀಯದ ಪ್ರತಿಬಿಂಬವು ನೀರಿನಲ್ಲಿ ನನಗೆ ಕಾಣುತ್ತದೆ; ಆದರೆ ಸೀತೆ ಮಾತ್ರ ಕಾಣಿಸುವುದಿಲ್ಲ. ಇದೇನಿದು? ಆಗಲಿ. ಇದಕ್ಕೆಲ್ಲಾ ಸಿದ್ಧಾಶ್ರಮವಾಸಿಗಳಾದ ಜನಗಳೇ ಕಾರಣರಾಗಿರಬೇಕು. ಆದರೆ ಸದ್ಯದಲ್ಲೇ ನೋಡಬಹುದೆನಿಸಿದ ಇವಳನ್ನು ನೋಡಲು ಯಾವ ಉಪಾಯವನ್ನು ಮಾಡಿದರೆ ಒಳ್ಳೆಯದು? ಲೇ ವೈದೇಹಿ, ಮುಖತೋರಿಸದೆ ಇರಬೇಕಾದಷ್ಟು ಪಾಪಿಷ್ಠನಾಗಿ ಹೋದೆನೇ ನಾನೀಗ ನಿನಗೆ? ಹಿಂದೆ

---

14 ಇದು ರಾಮನ ಶೀಲಕ್ಕೆ ನಿಕಷ. ಅವನು ಸೀತೆಯನ್ನು ಬಿಟ್ಟ ಬಳಿಕ ಬ್ರಹ್ಮಚರ್ಯೆಯನ್ನು ಪಾಲಿಸುತ್ತ ಬಂದದ್ದು ಈ ಮೂಲಕ ಸೀತೆಗೆ ಗೊತ್ತಾಗುತ್ತದೆ.

ನಾನು ನಿನಗೆ ಮಾಡಿದವುಗಳಲ್ಲಿ ಯಾವ ಒಂದು ಸೇವೆಯೂ ಚಿರಸ್ಮರಣೀಯವಾಗಿ ಉಳಿಯಲಾರದೆನ್ನಿಸಿತೇ?

**ಸೀತೆ** : (ಸ್ವಗತ) ಈಗೆಲ್ಲಿಯ ಹಿಂದಿನ ನೆನಪು? ಅದಕ್ಕೀಗ ಎಲ್ಲಿ ಸ್ಥಾನವಿದೆ? ಪೂರ್ವದ ಪ್ರಿಯಸಂಬಂಧವನ್ನೂ ನಿರ್ದಯೆಯಿಂದ ತ್ಯಜಿಸಿಬಿಟ್ಟ ನಿನ್ನೊಡನೆ ನನಗೀಗ ಅಂಥ ಯಾವ ಸಂಬಂಧವುಳಿದಿದೆ?

**ರಾಮ** :
**ಚಿತ್ರಕೂಟದಲಿ ನಿನಗೆ ತಿಳಿಯದಂತೆಯೇ ನೀನು ಮುಂದೆ ।**
**ಅತ್ತ ಹೊರಟೆ ಹೂ ಹೆಕ್ಕಲೆಂದು ಬೆಂಬತ್ತಿ ನಾನು ಬಂದೆ ॥**
**ಕಿತ್ತ ಹೂವುಗಳ ಚೆಲ್ಲಿ ನಿನ್ನ ಸೆರಗೆತ್ತಿ ಹಿಡಿದೆನಲ್ಲೇ!**
**ಮತ್ತಕಾಶಿನಿಯೆ, ರಸಿಕತನದೆ ನೆನಪಿಲ್ಲವೇನು ನಲ್ಲೇ[15] ॥೨೧॥**

**ಸೀತೆ** : (ಸ್ವಗತ) (ನಕ್ಕು) ಆಹಾಹಾ, ಅಕ್ರಮ ವಿಕ್ರಮ! ಅದರಿಂದಲೇ ನಾನೀಗ ನಿನ್ನನ್ನು ದೂರ ಇಟ್ಟಿರುವುದು.

**ರಾಮ** : (ಸ್ವಗತ) ಏನು? ಯಾವ ಉತ್ತರವನ್ನೂ ಕೊಡುವುದಿಲ್ಲವಲ್ಲಾ!

**ಸೀತೆ** : (ಸ್ವಗತ) ಸಂಜೆಯಾಗುತ್ತ ಬಂತು. ಈ ಅವಸ್ಥೆಯಲ್ಲಿ ಆರ್ಯಪುತ್ರನನ್ನು ದೇವರೇ ಗತಿ ಎಂದು ಬಿಟ್ಟು ಹೋಗುವುದು ಸರಿಯಲ್ಲ. ಆದರೆ ಏನನ್ನೋ ಹುಡುಕುವವನಂತೆ ಇತ್ತ ಕಡೆಗೆ ರಾಜಮಿತ್ರನಾದ ಕೌಶಿಕನು ಕುತೂಹಲ ದೃಷ್ಟಿಯಿಂದ ಬರುತ್ತಿದ್ದಾನೆ. ಆದ್ದರಿಂದ ಇಲ್ಲಿಂದ ಹೊರಡುತ್ತೇನೆ.

(ಹೊರಟಳು.)

(ಈಗ ವಿದೂಷಕನು ಹುಡುಕುವವನಂತೆ ಬರುತ್ತಾನೆ.)

**ವಿದೂಷಕ:** ಈ ದೊರೆ ಎಲ್ಲಿಗೆ ಹೋದನಪ್ಪಾ? (ಅತ್ತಿತ್ತ ತಿರುಗಿನೋಡಿ) ಓಹೋ, ಈ ನನ್ನ ಗೆಳೆಯನು ಚಿಂತಾಮಗ್ನನಾದವನಂತೆ ಕೆರೆ ದಂಡೆಯ ಮೇಲೆ ಕುಳಿತಿದ್ದಾನೆ. ಆಹಾಹಾ! ಎಷ್ಟು ಚೆನ್ನಾಗಿದ್ದಾನೆ ಅಂದರೆ! ಹತ್ತಿರ ಹೋಗುತ್ತೇನೆ. (ಹತ್ತಿರ ಹೋಗಿ) ಜಯವಾಗಲಿ ನಿನಗೆ!

**ರಾಮ** : (ನೋಡಿ) ಸುದೈವವಶಾತ್ ಪ್ರಿಯಮಿತ್ರ ಕೌಶಿಕ ಬಂದ. ಗೆಳೆಯ ಕೌಶಿಕ, ನೀನು ಇಷ್ಟು ಹೊತ್ತಿನ ತನಕ ಎಲ್ಲಿಗೆ ಹೋಗಿದ್ದೆ?

---

15 ಶಕುಂತಲೆ ಉಂಗುರ ಕಳೆದದ್ದು ಗೊತ್ತಾದ ಬಳಿಕ ಅಸಹಾಯೆಯಾಗಿ ತಾನೂ ದುಷ್ಯಂತನೂ ಕೂಡಿ ಇದ್ದಾಗ ಬಂದ ಜಿಂಕೆಗೆ ನೀರು ಕುಡಿಸುವ ಪ್ರಕರಣದಲ್ಲಿ ತನ್ನನ್ನು ತಮಾಷೆಗಾಗಿ ನಿಂದಿಸಿದ್ದನ್ನು ರಾಜಾಸ್ಥಾನದಲ್ಲಿ ನೆನಪುಮಾಡಿಕೊಟ್ಟದ್ದು ಅನುಚಿತವೆಂಬುದನ್ನು ಸೂಚಿಸುವಂತೆ ಕವಿ ಇಲ್ಲಿ ನೆನಪು ಮಾಡಿಕೊಡಲು ಉಚಿತನೆನ್ನಿಸುವ ರಸವತ್ತಾದ ಸನ್ನಿವೇಶವನ್ನು ರಾಮನ ಬಾಯಿಂದ ಹೇಳಿಸಿದ್ದಾನೆ.

**ವಿದೂಷಕ:** ಈ ದಿವಸ ಬೆಳಗಿನಿಂದ ಹಿಡಿದು ಇಷ್ಟು ಹೊತ್ತಿನವರೆಗೂ ನಿನ್ನನ್ನು ಹುಡುಕುತ್ತ ತಿರುಗುವುದೇ ಆಗಿಹೋಯ್ತು.

**ರಾಮ :** ಯಾಕಪ್ಪಾ ನನ್ನನ್ನು ಹುಡುಕಲು ಅಷ್ಟು ಪ್ರಯಾಸ ತೆಗೆದುಕೊಂಡೆ ನೀನು?

**ವಿದೂಷಕ:** ಬೆಳಿಗ್ಗೆ ಅತಿಮುಕ್ತಾಲತೆಯ ಪೊದೆಯಲ್ಲಿ ನಾನು ಅವಿತುಕೊಂಡು ಕುಳಿತಿದ್ದಾಗ ಒಂದು ಖಾಸಗಿ ಮಾತುಕತೆ ನಡೆಯಿತು. ಮುನಿಕನ್ನಿಕೆಯರೂ ಅಪ್ಸರೆಯರೂ ಮಾತಾಡುತ್ತಿದ್ದರು. ಅವರು ಆಗ ಈ ತಪೋವನಕ್ಕೆ ಸಂಬಂಧಿಸಿದ ಒಂದು ಗುಟ್ಟಿನ ವಿಷಯವನ್ನು ಹೇಳಿದರು. ಅದು ನಿನಗೆ ಅಪ್ರಿಯವಾದ ವಿಷಯವಾಗಿತ್ತು. ಒಳಗೆ ಕುಳಿತುಕೊಂಡ ಹೆಡ್ಡನಂಥ ನನ್ನನ್ನು ಆ ವಿಷಯವು ಬಹಳವಾಗಿ ಬಾಧಿಸುತ್ತದೆ.

**ರಾಮ :** ಅದೇನಪ್ಪಾ ತಪೋವನದ ರಹಸ್ಯ?

**ವಿದೂಷಕ:** ಗೊತ್ತಿಲ್ಲವೇನಯ್ಯಾ ನಿನಗೆ? ಅವಳು ಯಾವಳೋ ಇದ್ದಾಳಲ್ಲಾ...?

**ರಾಮ :** (ಕಿವಿಗಳನ್ನು ಮುಚ್ಚಿಕೊಂಡು) ಏನೋ ಹೆಂಗಸರ ಸಮಾಚಾರ ಅಂತ ಕಾಣಿಸುತ್ತದೆ. ಆದ್ದರಿಂದ ಅದು ಸಾಕು ಇಲ್ಲಿಗೆ; ನಾನು ಕೇಳಬೇಕಾಗಿಲ್ಲ ಅದನ್ನು.

**ವಿದೂಷಕ:** ಅರೆರೆರೇ, ಹೆದರಿಕೊಳ್ಳಬೇಡವೋ; ರಾಮನ ಗೆಳೆಯನಲ್ಲವೇನಯ್ಯಾ ನಾನು? ಇದನ್ನೆಂದಾದರೂ ಮರೆತಿರುತ್ತೇನೆಯೇ? ಆ ಪುರಾಣಪ್ರಸಿದ್ಧಳಾದ ಸ್ವರ್ಗದ ಸೇವಿಕೆ ಯಾರೆಂಬುದು ಗೊತ್ತಿಲ್ಲವೇ ನಿನಗೆ?

**ರಾಮ :** (ಸ್ವಗತ) ದೇವಗಣಿಕೆಯರಿಗೆ ಸಂಬಂಧಿಸಿದ ಸುದ್ದಿ ಇದು. ಇದನ್ನು ಕೇಳಿದರೆ ಯಾವ ದೋಷವೂ ತಟ್ಟುವುದಿಲ್ಲ.[16] (ಪ್ರಕಾಶ) ಯಾರೋ ಆ ಸ್ವರ್ಗಸೇವಿಕೆ? ಊರ್ವಶಿಯೇನು? ಅಥವಾ ತಿಲೋತ್ತಮೆಯೋ? ಯಾವ 'ರಾಮೆ' ಆಕೆ?

**ವಿದೂಷಕ:** ನನ್ನ ದೊರೆ, ರಾಜ, ಗೆಳೆಯಾ! 'ರಾಮಾ' ಎಂದು ಎಷ್ಟು ಸಂಗೀತಮಯವಾಗಿ ಹೇಳಿಬಿಟ್ಟೆಯಪ್ಪಾ? ಪದೇ ಪದೇ ಇಂಥ ಮಧುರ ಪದಗಳನ್ನು ಬಳಸಿಯೇ ಮಾತಾಡಬಾರದೇ ನೀನು?

---

16 ಬಹುಪತ್ನೀಕನಾದ ದುಷ್ಯಂತನನ್ನು ರಾಮನೊಡನೆ ಹೋಲಿಸಿ ನೋಡಬಹುದು.

**ರಾಮ :** ತಿಲೋತ್ತಮೆಯೇ?

**ವಿದೂಷಕ:** ತಿಲೋತ್ತಮೆಯೋ? ಶಿಲೋತ್ತಮೆಯೋ–ನನಗೆ ಸರಿಯಾಗಿ ತಿಳಿಯದು. ಅವಳು ಬಹಳ ಕಾಲ ನಿನ್ನಿಂದ ದೂರದಲ್ಲಿರುವ ವೈದೇಹಿಯಂತೆ ನಟಿಸಿ ನಿನ್ನನ್ನು ಹಾಸ್ಯಮಾಡಲು ಬಯಸಿದ್ದಳು.

**ರಾಮ :** (ಸ್ವಗತ) ಚೆನ್ನಾಯಿತು. ಕೌಶಿಕ ಸರಿಯಾಗಿ ಸೂಚಿಸಿದ. ಅಲ್ಲವಾದರೆ ಪ್ರಿಯೆಯ ಗುರುತು ಕಾಣಿಸುತ್ತದೆ; ಆದರೆ ಅವಳು ಸ್ವತಃ ಕಾಣಿಸುವುದಿಲ್ಲ– ಎಂಬ ಸನ್ನಿವೇಶ ಈ ಮನುಷ್ಯ ಸ್ತ್ರೀಯರಲ್ಲಿ ಎಂದೂ ಉಂಟಾಗಲಾರದು. ಖಂಡಿತವಾಗಿಯೂ ಮನಸ್ಸಿಗೆ ಬಂದಂಥ ರೂಪವನ್ನು ತಾಳಬಲ್ಲ ತಿಲೋತ್ತಮೆಯಿಂದ ನಾನು ಮೋಸಹೋದೆ!

**ಕಾಡ ಮೃಗತೃಷ್ಣಿಕೆಗೆ ಕೈಯೊಡ್ಡಿದಂತಾಯ್ತು**
**ಓಡಿ ತಿಳಿನೀರೆಂದು ಬಾಯಾರಿರೆ ॥**
**ಮಾಡಿದಳು ಅವಳೆ ಈ ಶಾಲನೂ ಮಾಯೆಯಲಿ**
**ಮೋಡಿ ಪರವಂಚನೆಯ ಅತ್ಯಧಿಕವೋ ॥೨೨॥**

**ವಿದೂಷಕ:** ಏನಯ್ಯಾ, ನಿನ್ನ ಮುಖ ಯಾಕೋ ಬಹಳ ಸಪ್ಪೆಯಾಗಿ ಹೋಯ್ತಲ್ಲೋ? ಅವಳಿಂದ ಪೂರ ಮೋಸಗೊಳಿಸಲ್ಪಟ್ಟೆ ನೀನು ಅಲ್ಲವೇ?

**ರಾಮ :** ಹೌದಯ್ಯಾ, ಸಂಪೂರ್ಣ ವಂಚಿತನಾಗಿ ಬಿಟ್ಟೆ !

**ವಿದೂಷಕ:** ನಾನು ಕೇಳಿದ ಗುಟ್ಟೇನಾದರೂ ಸುಳ್ಳಾಗುವುದುಂಟೇ?[17] ಹಹ್ಹಹ್ಹ! (ತೆರೆಯ ಹಿಂದೆ)

**ಉರಿಸಿ ಮೊದಲು ತನ್ನ ಕಿರಣದಿಂದ ಲೋಕವೆಲ್ಲವ ।**
**ಇರದೆ ಅಂತೆ ದೊರೆಯ ಹಾಗೆ ಕಳೆಯೆ ತೇಜ ಕೊನೆಯಲಿ ॥**
**ವರುಷವಾದ ಮೇಲೆ, ಸಂಜೆ, ಮೆತ್ತಗಾಗುವಂತೆಯೇ ।**
**ಪರುಷಗುಣವನುಳಿದು ಶಾಂತನಾದ ನೇಸರಿಂದಿನ ॥೨೩॥**

**ರಾಮ :** (ನೋಡಿ) ಸೂರ್ಯದೇವ ಅಸ್ತಂಗತನಾಗುತ್ತಿದ್ದಾನೆ!

---

17 "ಸ್ವಪ್ನವಾಸವದತ್ತ"ದ ಸ್ವಪ್ನಾಂತದಲ್ಲಿ ಸಾಕ್ಷಾತ್ ವಾಸವದತ್ತೆಯನ್ನು ಉದಯನ ಕಂಡರೂ ಅದು ಅಲ್ಲಿಯ ಯಾವುದೋ ಒಂದು ಹೆಣ್ಣು ದೆವ್ವವಲ್ಲದೆ ವಾಸವದತ್ತೆಯಲ್ಲವೆಂದು ಬಾಯಿ ಹಾರಿಸಿದ ವಿದೂಷಕನನ್ನು ಈತ ನೆನಪಿಗೆ ತಂದು ಕೊಡುತ್ತಾನೆ. "ಸ್ವಪ್ನೋ ನು ಮಾಯಾ ನು ಮತಿಭ್ರಮೋ ನು" ಎಂಬ ಮನಸ್ಥಿತಿಯು ಅಲ್ಲಿ ಉದಯನನಿಗೆ ಉಂಟಾದಂತೆ ಇಲ್ಲಿ ರಾಮನಿಗೆ ಉಂಟಾಗುತ್ತದೆ. ಕೈಗೆ ಬಂದಂತೆ ತೋರಿದ ತುತ್ತು ಬಾಯಿಗೆ ಬಾರದು ಎಂಬಂತಾಗಿದೆ.

**ವಿರಹಿಣಿಯರು ದಿವಸಗಳನೆಣಿಸೆ ಬೆರಳುಗಳ ಮಡಿಸುವಂತೆ ।**
**ಕರೆದು ಹೇಳಿದವಧಿಯನು ಕಳೆಯುತಿರೆ ಸೂರ್ಯ ಮುಳುಗುವಾಗ॥**
**ಸರಸಿಯಲ್ಲಿ ತಾವರೆಗಳೆಲೆಗಳೊಂದೊಂದೆ ಮಡಿಸುತಿಹವು ।**
**ಸರಿಸುವುದೆನೆ ಸಂದರ್ಭವನ್ನು ಹತ್ತಿರಕೆ ಭೇಟಿ ದೊರೆವ[18] ॥೨೪॥**

ಮತ್ತು

**ಅಸ್ತಾಚಲದ ಶಿಖರದತಿ ವಿಷಮ ತಲದಲ್ಲಿ ।**
**ಶಿಸ್ತಾಗಿ ಕಡಿವಾಣಗಳನು ಬಿಗಿ ಹಿಡಿದು ॥**
**ಒತ್ತಿ ನೂಕಲು ಸೂರ್ಯಸಾರಥಿ ಹಯಂಗಳನು ।**
**ಕುತ್ತುವಂಕುಶದಿಂದ ದೆಸೆಗಾಣದೀಗ ॥**
**ಅಚ್ಚರಿಯೊಳವು ಗೊರಸುಗಳನೆತ್ತಿ ಕಷ್ಟದಿಂ ।**
**ದುಚ್ಚಲಿಸಲೋ ನಿಲಲೊ ಎಂದರಿಯದಾಗಿ ॥**
**ಧುತ್ತೆಂದು ಧುಮುಕುತಿವೆ ಪಡುಗಡಲಿನಾಳದಲಿ**
**ಸತ್ವವಡಗಿರೆ (ಗಗನಯಾತ್ರೆಯಿಂದ) ॥೨೫॥**

(ಎಲ್ಲರೂ ಹೋಗುತ್ತಾರೆ)

(ನಾಲ್ಕನೆಯಂಕ ಮುಗಿದುದು)

---

18 ಸೀತಾಸಂದರ್ಶನದಲ್ಲಿ ರಾಮನಿಗುಂಟಾದ ಪ್ರತ್ಯಾಶೆ ಇಲ್ಲಿ ಧ್ವನಿತ.

# ೮. ಐದನೆಯಂಕ

(ಬೆಳಿಗ್ಗೆ ವಿದೂಷಕ ಬರುತ್ತಾನೆ)

**ವಿದೂಷಕ:** (ತೆರೆಯ ಕಡೆಗೆ ತಿರುಗಿ)

ತಪೋಧನರೆಲ್ಲರೂ ಬರುವ ಹೊತ್ತಾಯ್ತು; ಬೇಗ ಹೊರಡು.

(ರಾಮ ಬರುತ್ತಾನೆ)

**ರಾಮ :** **ಮಿಂದೆ ಮಾಡಿದೆನಗ್ನಿಕಾರ್ಯವ (ನೊಂದೆ ಮನದಿಂ) ದರ್ಕನರ್ಚಿಸಿ**
**ಬಂದೆನೀ ಬೆಳಗಿನಲಿ ವಿಧಿಗಳನಿಂತು ನಾ ಮುಗಿಸಿ॥**
**ನಿಂದಿರುವೆನೀ (ಪುಣ್ಯವನದಲಿ)**
**ಇಂದು ಬರಲಿಹ ನಿಯಮಧನರನು**
**ವಂದಿಸಲು (ಕೌಶಿಕನೆ ಕೇಳ್ ಹಿತಚಿಂತಕಾಗ್ರಣಿಯೇ)** ॥೧॥

**ವಿದೂಷಕ:** ಇದು ಆಸ್ಥಾನಮಂಟಪ; ಒಳಗೆ ನಡೆ.

**ರಾಮ :** (ಹೋಗುತ್ತಲೇ ಚಿಂತಾಕ್ರಾಂತನಾಗಿ)

ನಿನ್ನೆ ದಿನ ಎಂಥ ಆಶ್ಚರ್ಯಕರವಾದ ಘಟನೆ ನಡೆಯಿತು!
**ಬಹಳ ತಿಳಿಯಾಗಿದ್ದ ಆ ನೀರಿನಲ್ಲಿ ॥**
[೧೯] **ಅಸತಿಯಂತೆವೊಲಾಗ ಕಂಡೆನಾನವಳ ॥ಪ॥**

**ಆ ಹಸನ್ಮುಖದವಳ, ಹೊಸತಾವರೆಯ ದಳವ**
**ಮೋಹಿಸುವ ತೆರೆಗಣ್ಣ ಕಾಂತಿಯುಳ್ಳ ।**
**ಜೋಲು ಮುಂಗುರುಳವಳ ಬಳಿಯ ಮೇಲ್ಗೆನ್ನೆಯಿಹ**
**(ಜಾಲಪಾದದ ನನ್ನ ಜೀವಸಖಿಯ)** ॥೨॥

---

19 ಸತೀ=(೧) ಎರಡು ಬಗೆಯ ಛಂದಸ್ಸು, (೨) ಪೂಜ್ಯೆ, (೩) ಒಳ್ಳೆಯ ಹೆಂಡತಿ, (೪) ಸಹಗಮನಕ್ಕೆ ಸದಾ ಸಿದ್ಧಳಾದ ಪತ್ನಿ (೫) ಹೆಂಡತಿ, (೬) ಹೆಣ್ಣು ಪ್ರಾಣಿ, (೭) ತಪಸ್ವಿನಿ, (೮) ಪರಿಮಳಿಸುವ ಮಣ್ಣು, (೯) ವಿಶ್ವಾಮಿತ್ರನ ಪತ್ನಿಯ ಹೆಸರು, (೧೦) ಸಹಗಮನ ಮಾಡಿದ ಅಥವಾ ಯೋಗಬಲದಿಂದ ಮುಕ್ತಳಾದ ಶಿವಪತ್ನಿಯೂ ಸತ್ಯಸ್ವರೂಪಿಣಿಯೂ ಆದ ದುರ್ಗೆ, ದಾಕ್ಷಾಯಣಿ ಅಥವಾ ಉಮೆ, (೧೧) ಅಂಗಿರಸನ ಹೆಂಡತಿಯರಲ್ಲಿ ಒಬ್ಬಳು, (೧೨) ವಿವಿಧ ಹೆಂಗಸರ ಹೆಸರು. 'ಅಸತೀ' ಪದದ ಧ್ವನಿವಿಸ್ತಾರವು ಸೂಕ್ಷ್ಮಜ್ಞರಸಿಕರಿಗೆ ಸುಲಭೋಹ್ಯ.

ಅಥವಾ ಆ ಜಲಾಂತರ್ಗತವಾಗಿದ್ದ ಸೀತೆಯು ತಿಲೋತ್ತಮೆ ನನ್ನನ್ನು ಗೇಲಿಮಾಡಲು ನಿರ್ಮಿಸಿದ್ದ ಕೃತಕ ಪ್ರತಿಮೆಯೋ? ಆದರೆ ಒಂದು ಸಂದೇಹ: ಒಮ್ಮೆ ಆ ದೇವಗಣಿಕೆಯು–

**ಸೀತೆ ತನ್ನ ಕೈಯಿಂದ ಮಾಡಿದಂಥದೇ ಮಾಲೆಯನ್ನು ।**
**ಸೀತೆಯಿಟ್ಟ ಹೆಜ್ಜೆಗಳ ಹೋಲುವಂಥವೇ ಹೆಜ್ಜೆಗಳನು ॥**
**ಸೀತೆಯಂಥದೇ ಜಲಪ್ರತಿಮೆಯನು ಮಾಡಿ ಇಟ್ಟರೂನೂ !**
**(ನೀತಿ ನಿಪುಣೆ) ಎಂತೆನ್ನ ಮುಟ್ಟುವಳು ಸೆರಗುಗಾಳಿಯಿಂದ?** ॥೩॥

(ಚಿಂತಾಮಗ್ನನಾಗಿರುತ್ತಾನೆ)

**ವಿದೂಷಕ:** (ಸ್ವಗತ) ಈ ಇವನು ಚಿಂತೆ ಹಿಡಿದವನಂತೆ ಕಾಣಿಸುತ್ತಾನೆ. ಆದುದರಿಂದ ಕುಳಿತುಕೊಂಡು ಇವನನ್ನು ಹಿಡಿತಕ್ಕೆ ತರುತ್ತೇನೆ. (ಕುಳಿತು) ಗೆಳೆಯ ಮಹಾರಾಜ, ನೀನಿಲ್ಲಿ ಕುಳಿತರೂ ಅಷ್ಟೆ, ಎಲ್ಲಿ ಕುಳಿತರೂ ಅಷ್ಟೆ ಹೊಸ ಮುಗಿಲ ಬಣ್ಣದ ಸೊಂಪಿನಿಂದ ಮತ್ತು ಕೊರಳ ಮುತ್ತಿನಹಾರದ ಪೆಂಪಿನಿಂದ, ನೀಲಖಚಿತವಾದ, ಯಾರೂ ಹತ್ತಲಾರದ ಅತಿ ಎತ್ತರದ ಮನೆಗಂಬ ಒಂದರಂತೆ ನನ್ನ ಮನಸ್ಸನ್ನು ಸೂರೆಗೊಳ್ಳುತ್ತೀಯೆ. ಆದುದರಿಂದ ಈ ಲಕ್ಷ್ಮೀನಿವಾಸವೆಂಬ ಶಿಬಿರದಲ್ಲಿ ಈಗ ಅನೇಕ ಸಾಮಂತರು ನಿನ್ನ ಸೇವೆಗೆಂದು ಅವಧಿಗನುಗುಣವಾಗಿ ಬಂದಿದ್ದಾರೆ. ಈ ಆಸ್ಥಾನವೇ ಒಂದು ಕೆರೆ, ಬಿಳಿಯ ತಾವರೆಗಳ ಪುಂಜದಂತಿದೆ ಇದರ ಮಂಟಪ. ಆ ತಾವರೆಗಳ ಕರ್ಣಿಕೆಗಳ ಮಂಡಲದಂತಿದೆ ಈ ಸಿಂಹಾಸನ, ಇದರ ಮೇಲೆ ಬ್ರಹ್ಮನನ್ನು ಮೀರಿಸುವ ಠೀವಿಯಿಂದ ನೀನು ಕುಳಿತುಕೋ.

**ರಾಮ :** ನೀನು ಹೇಳಿದಂತೆಯೇ ಆಗಲಿ (ಎಂದು ಕುಳಿತು ಚಿಂತಾಕ್ರಾಂತನಾಗುತ್ತಾನೆ). ಈಗ ನಾನು ಹೊಸ ಸುಖದುಃಖಗಳನ್ನು ಅನುಭವಿಸುವಂತಾದೆ. (ಧ್ಯಾನಮಗ್ನನಾಗಿ ಎದೆಯ ಮೇಲೆ ಕೈಯಿಟ್ಟುಕೊಂಡು)

**ಪತ್ನಿಯ ತಿರಸ್ಕರಿಸಿ ಹೃದಯವನು ಕಳೆದುಕೊಂಡಿದ್ದೆ ।**
**ನೈರಾಶ್ಯದಿಂದ ಸುಖದುಃಖಗಳನರಿಯದಾಗಿದ್ದೆ ॥**
**ಅವಳ ಛಾಯಾದಿಗಳ ಕಂಡೀಗ ನನ್ನ ಬಗೆ (ಮುದ್ದೆ)**
**ಮತ್ತೆ ಸುಖದುಃಖಗಳ ಸಹಿತ ಹುಟ್ಟಿದೆ–(ಆದೆನೊದ್ದೆ)** ॥೪॥

(ಚಿಂತಾತುರತೆಯಿಂದ)

**ವಿದೂಷಕ:** (ರಾಮನನ್ನೂ ಚೆನ್ನಾಗಿ ನೋಡಿ) (ತನ್ನಷ್ಟಕ್ಕೇ)
ಆಹಾ, ಈಗ ನಾನು ಈತನ ಇಂಗಿತವನ್ನು ಅರಿತುಕೊಳ್ಳುತ್ತೇನೆ: (ಗಟ್ಟಿಯಾಗಿ) ಎಲೈ ರಾಜನೇ, ಈ ಸಿಂಹಾಸನವನ್ನು ಹೊತ್ತ ಸಿಂಹಗಳು

ಹೆಚ್ಚಿನ ಹೊರೆಯನ್ನು ಹೊತ್ತು ಸುಸ್ತಾಗಿ ಬಾಯಿಯಿಂದ ಹೊರಬಿದ್ದಿರುವ ಮುತ್ತಿನ ಮಣಿಗಳ ಗೊಂಚಲಿನ ರೂಪದಲ್ಲಿ ನೊರೆಯುಗುಳುತ್ತಿರುವಂತೆ ತೋರುತ್ತವೆ. ಬಹುಶಃ ತೋಳುಗಳಿಂದ ಭೂಮಿಯನ್ನೂ ಹೃದಯದಿಂದ ಭೂಮಿಯ ಮಗಳನ್ನೂ ಹೊತ್ತು ನೀನೀಗ ಹೆಚ್ಚು ಭಾರಧಡೆಯ ಮನುಷ್ಯನಾಗಿರುವುದೇ ಇದಕ್ಕೆ ಕಾರಣ ಎಂದು ನನ್ನ ತರ್ಕ. ಏನೆನ್ನುತ್ತೀಯಪ್ಪಾ?

**ರಾಮ :** (ಸ್ವಗತ) ಸೀತೆಯ ಸುದ್ದಿಯನ್ನೆತ್ತಿ ಕೌಶಿಕ ನನ್ನನ್ನೀಗ ಪರೀಕ್ಷಿಸ ಬೇಕೆಂದಿದ್ದಾನೆ. ಇವನು ನನ್ನ ಬಾಲ್ಯದ ಗೆಳೆಯ. ಆದ್ದರಿಂದ ಇವನಿಗೆ ಇದ್ದದ್ದನ್ನು ಇದ್ದ ಹಾಗೆ ತಿಳಿಸಿಬಿಡುತ್ತೇನೆ. (ಪ್ರಕಾಶ) ಗೆಳೆಯ ಮಹಾಶಯ, ನೀನು ಹೇಳಿದ್ದು ನಿಜ. ನಾನು ಸೀತಾಸ್ಮರಣೆಯನ್ನು ಎಡೆಬಿಡದೆ ಮಾಡುತ್ತಿದ್ದೇನೆ.

**ವಿದೂಷಕ:** ಅವಳ ಗುಣಸ್ಮರಣೆಯನ್ನೋ ದೋಷಸ್ಮರಣೆಯನ್ನೋ?

**ರಾಮ :** ಗುಣಸ್ಮರಣೆಯನ್ನೂ ಅಲ್ಲ, ದೋಷಸ್ಮರಣೆಯನ್ನೂ ಅಲ್ಲ.

**ವಿದೂಷಕ:** ಗುಣ–ದೋಷಗಳೆರಡನ್ನೂ ಬಿಟ್ಟು ಯಾರಾದರೂ ಮಹಿಳೆಯರ ಬಗ್ಗೆ ವಿಚಾರಮಾಡುತ್ತಾರೆಯೇ?

**ರಾಮ :** ಪ್ರೇಮಾವೇಶವು ಕಾರ್ಯಕಾರಣಸೂತ್ರವನ್ನು ಅವಲಂಬಿಸಿರುವುದು ಇತರ ದಂಪತಿಗಳಲ್ಲಿ; ರಾಮ ಸೀತೆಯರಲ್ಲಲ್ಲ!

**ಆತ್ಮದಲ್ಲಿ ಹೇಗೋ ಹಾಗೆ ಮುಚ್ಚುಮರೆಯೆ ಇಲ್ಲದಿರಲು ।**
**ದುಃಖ ಸುಖಗಳಸೂಚ್ಯವಾಗಿದ್ದವೆಮ್ಮೊಳು ॥**
**ಬಹಳ ಕಾಲ; ಅವಳೊಳಿರುವ ವ್ಯಾಜರಹಿತವಾದ ನನ್ನ ।**
**ಭಾವಬಂಧಕಿಲ್ಲ ದೋಷಗುಣವಿವೇಚನೆ** ॥೫॥

**ವಿದೂಷಕ:** ಈ ಸಿಹಿಸುಳ್ಳು ಮಾತುಗಳಿಂದ ನನ್ನಂಥ ಜನರನ್ನು ವಂಚಿಸಬೇಡ, ಆ ನೀನು ದೇವಿಯನ್ನು ಬಿಟ್ಟು...

**ರಾಮ :** ರಾಮನು ಸಂಪೂರ್ಣವಾಗಿ ಸೀತೆಯನ್ನು ಬಿಟ್ಟು ಇರಬಲ್ಲನೆಂಬುದು ನಿಶ್ಚಯದ ಮಾತಲ್ಲ.

**ಪದ್ಮನಾಳದ ತಂತುವಿನ ಹಾಗೆ ಮಿದುವಾದ ।**
**ನನ್ನೊಲವನಡಗಿಸಿಟ್ಟಿಹೆ ಗೆಳೆಯನೇ ॥**
**ಬಿರುಸಾದ ಬಾಹ್ಯಭಾವದ ಬಲದೆ (ಅದರಿಂದ**
**ಅರಿಯದಾಗಿಹೆ ನೀನು ಅರೆಮರುಳನೇ)** ॥೬॥

**ವಿದೂಷಕ:** ನೀನೆಂದರೆ ಒಂದು ಹೆಗ್ಗಡಲು, ಆದ್ದರಿಂದ ಹೃದಯಸಂತಾಪ ರೂಪದ ಪ್ರಬಲ ಬಡಬಾನಲ ಪ್ರಜ್ವಲಿಸಿದರೂ ತಾಳಿಕೊಳ್ಳಬಲ್ಲೆ–ನಿನ್ನ ದೊಡ್ಡಸ್ತಿಕೆ ಕಡಿಮೆಯಾಗದು. ನಾನಾದರೆ ಹಾಗಲ್ಲ. ಸ್ವಭಾವತಃ ಚಿಕ್ಕ ಮನುಷ್ಯ; ಆದ್ದರಿಂದ ಸೀತೆಯ ಗತಿಯನ್ನು ನೆನೆದು ಕಾಳ್ಕಿಚ್ಚಿನಿಂದ ನೀರ ಹನಿ ನಿಃಶೇಷವಾಗಿ ಆರಿಹೋಗುವಂತೆ ಉರಿದು ಸುಟ್ಟು ಹೋಗುತ್ತಿದ್ದೇನೆ. ದಯವಿಟ್ಟು ನನ್ನನ್ನು ರಕ್ಷಿಸು, ರಾಮ ರಾಯಾ! (ಎಂದು ಅಳುತ್ತಾನೆ.)

**ರಾಮ :** ಸೀತೆ ಸ್ಮರಣೀಯಳೆಂದು ನೀನು ತಿಳಿಯುತ್ತೀಯೆ; ಹಾಗಿದ್ದರೆ ನಾನು ಅವಳನ್ನು ಬಿಡಲು ಸಿದ್ಧನಾದಾಗ ನೀನು ನನ್ನನ್ನೇಕೆ ತಡೆಯಲಿಲ್ಲ?

**ವಿದೂಷಕ:** ಪ್ರಸನ್ನನಾಗಿದ್ದಾಗ ಕೂಡ ಅರಸನನ್ನು ಆಳು ಮಾತಾಡಿಸುವುದು ಕಷ್ಟ; ಹೀಗಿರುವಾಗ ಅವನು ಸಿಟ್ಟಿನಿಂದ ಭಯಂಕರ ರೂಪ ತಾಳಿದ್ದಾಗ ಹೇಗೆ ಆಳು ಮಾತನಾಡಿಸಬಲ್ಲ?

**ರಾಮ :** ಗೆಳೆಯ, ಗೆಳೆಯರ ಮಾತನ್ನು ಮೀರುವಂಥ ಸಿಟ್ಟು ನನ್ನಂಥವರಿಗೆಂದೂ ಬರಲಾರದು.

**ರಾಜನುಗ್ರನಾದ ಕಾಲದಲ್ಲಿ ।**
**ಸಾಜ ಸುಗುಣಿ ಸಚಿವನವನ ತಡೆವುದು ॥**
**ಜಗವನಾಕ್ರಮಿಸಲು ಸೂರ್ಯ ಹೊರಡಲು**
**ಮಳೆಯ ಮೋಡ ಬಿಡದೆ ಅವನ ತಡೆವುದು** ॥೭॥

ಸ್ನೇಹಿತನೇ, ಸೀತೆಯ ಇಂದಿನ ಪರಿಸ್ಥಿತಿ ನಮಗಿಬ್ಬರಿಗೂ ದುಃಖಕರವಾದದ್ದು. ಆದ್ದರಿಂದ ಬಾಗಿಲ ಬಳಿ ನಡೆ. ಬಾಗಿಲು ಕಾಯುವವರಿಗೆ ಹೇಳು–ತಪಸ್ವಿಗಳು ಬರುವ ಹೊತ್ತಾಯಿತು, ಎಲ್ಲ ಬಾಗಿಲುಗಳಲ್ಲೂ ನಿಮ್ಮ ನಿಮ್ಮ ಅಧಿಕಾರದಂಡಗಳನ್ನು ಹಿಡಿದು ಶಿಸ್ತಿನಿಂದ ನಿಲ್ಲಿರಿ–ಎಂದು.

**ವಿದೂಷಕ:** ದೊರೆಯೇ, ಗಡ್ಡೆ ಗೆಣಸುಗಳನ್ನೂ ಹಣ್ಣು ಹಂಪಲುಗಳನ್ನೂ ತಿಂದು ನಾರುಮಡಿಗಳನ್ನುಟ್ಟು ದಂಟುಕೋಲುಗಳನ್ನು ಎತ್ತಿ ಹಿಡಿದು ಬರುವ ಶ್ರಾದ್ಧ ದೇವರನ್ನು ಸ್ವಾಗತಿಸಲು ಈ ಕ್ರಮವೇ?

**ರಾಮ :** ನಿನ್ನ ಶಂಕೆ ಅಸಾಂದರ್ಭಿಕವಾದದ್ದಯ್ಯಾ! ಅವರ ಯೋಗ್ಯತೆ ಎಷ್ಟು ಹೆಚ್ಚಿನದು ಎಂಬುದು ನಿನಗೇನಾದರೂ ಗೊತ್ತೇ? ಅವರಿಗೆ ಯೋಗವಮೂಲ ಮತ್ತು ಚತುರ್ವಿಧ ಪುರುಷಾರ್ಥಗಳ ಜ್ಞಾನವಿದೆಯಯ್ಯಾ! ನೋಡು–

**ಗಾಳಿಯಿಲ್ಲದುರಿದೀತೆ ನಮ್ಮ ಈ ಬೆಂಕಿ ಲೋಕದಲ್ಲಿ? ।**
**ಪಾದದಲ್ಲಿ ಸದ್ರೂಪದಗ್ನಿ ಹೊಳದೇಳುತಿರುವುದಲ್ಲಿ ॥**
**ಒಳಗಿನಿಂದ ಆ ತಪಸ್ವಿಗಳ; ಅದಕುರುವಲಿಲ್ಲ ಯಾವ ।**
**ವಸ್ತುವಿಲ್ಲವಾಶ್ರಯಕೆ ಉರಿಸುವವರಿಲ್ಲ ಅದರ ಕಾವ ॥೮॥**

**ವಿದೂಷಕ:** ತಪೋಧನರ ಆಗಮನವು ಅಷ್ಟು ಮಹಾರ್ಥಸಂಪನ್ನ ವಾಗಿರುವುದಾದರೆ ನೀನು ಹೇಳಿದಂತೆ ಮಾಡುತ್ತೇನೆ ಹೋಗಿ.

(ಹೋಗಿ ಮತ್ತೆ ಬಂದು)

ಅರೇ, ನೋಡಿದಿರೇನಯ್ಯಾ ! ಎಂಥ ಚಮತ್ಕಾರ ! ರಾಜಾಜ್ಞೆಯಂತೆ ನಾನೀಗ ಬಾಗಿಲ ಕಡೆಗೆ ಹೋದೆ. ಅಲ್ಲಿ ಏನ್ರಯ್ಯಾ ನನಗೆ ಕಾಣಿಸಿದ್ದು– ಅದೆಂಥ ಬಾಲಕರ ಜೋಡಿಯಯ್ಯಾ! ಅವರ ಮೈ ನಸು ನೀಲಿ ಬಣ್ಣದ್ದು, ಇನ್ನೂ ಎಳೆ ಹುಡುಗರಾಗಿದ್ದಾರೆ ಅವರು–ಪ್ರಾಯ ಬಂದಿಲ್ಲ, ಜಟ್ಟಿಗನಂತೆ ಗಟ್ಟಿಮುಟ್ಟಾಗಿದ್ದಾರೆ, ಮಂಗಲದ ಮರಿಗಳೆನ್ನುವ ಹಾಗಿದ್ದಾರೆ! ಅಳತೆಗೆ ಸರಿಯಾಗಿ ಬೆಳೆಯುವ ಅಂಶ ಇನ್ನೂ ಬಾಕಿ ಇರುವಂತಿದೆ, ಆದರೆ ಅವರ ಆಕೃತಿಯಲ್ಲಿ ಎಲ್ಲಿಯೂ ನ್ಯೂನಾಧಿಕ್ಯಗಳಿಲ್ಲ, ರೂಪದಲ್ಲಿ ಮನ್ಮಥನ ಮಕ್ಕಳಂತೆ ತೋರುತ್ತಾರೆ; ಈ ನನ್ನ ಗೆಳೆಯ ರಾಮನ ಅಚ್ಚುಗಳಂತಿದ್ದಾರೆ ಅವರು ಸಾಲವೃಕ್ಷಗಳ ಹಾಗೆ ಅವರ ಎತ್ತರ; ಕಂಪ, ಇಳಿವು, ಕಸುವು, ಧೈರ್ಯ, ಲಾಲಿತ್ಯಗಳಿಂದ ಈತನ ಪುಟ್ಟ ಮಾದರಿಗಳಾಗಿದ್ದಾರೆ ಆ ಮುಗ್ಧಮೂರ್ತಿಗಳಾದ ತಾಪಸಕುಮಾರರಿಬ್ಬರು!

**ರಾಮ :** (ಕುತೂಹಲದಿಂದ) ಅವರೇತಕ್ಕಯ್ಯಾ ನನ್ನ ಮುಂದೆ ಬರಬಾರದು? ಅವರನ್ನು ಯಾರೀಗ ತಡೆದು ನಿಲ್ಲಿಸಿದ್ದಾರೆ?

**ವಿದೂಷಕ:** ಬಾಲಭಾವದ ಲಾಲಿತ್ಯದಿಂದ ಕುತೂಹಲವನ್ನು ಕೆರಳಿಸಿರುವ ಆ ಅವಳಿಮಕ್ಕಳ ಬಗ್ಗೆ ನಾನೀಗ ಕೊಡಲಿರುವ ಉಪನ್ಯಾಸವನ್ನು ಸ್ವಲ್ಪ ಕೇಳು:

**ರಾಮ :** ಹೇಳು, ಹೇಳು.

**ವಿದೂಷಕ:** ಅವರು ಪೂಜ್ಯ ವಾಲ್ಮೀಕಿಗಳ ಶಿಷ್ಯರು, ಶಾಸ್ತ್ರೀಯವಾಗಿ ವೀಣೆ ಬಾರಿಸುವುದರಲ್ಲಿ ಅಪೂರ್ವ ಪ್ರವೀಣರು. ಅವರು ಹೇಳುತ್ತಾರೆ– ತಮ್ಮವರೇ ಆದ ತಪೋಧನರೆಂದು ತಿಳಿದು ನಮ್ಮನ್ನು ರಾಜರ್ಷಿಯ ಪರಿವಾರದವರು ನೆಲದ ಮೇಲಾಗಲಿ, ಆಸನದ ಮೇಲಾಗಲಿ ಕುಳ್ಳಿರಿಸಬೇಕು. ಆ ಮೇಲೆ ನಾವು ಮಂದ್ರಭದ್ರವಾದ ಶ್ರುತಿಯಲ್ಲಿ ಗಂಭೀರವೂ ತಾಲಲಯಗಳ ಜಾಣ್ಮೆಗೆ ನಿಕಷವೂ ಮಹಾಕವಿ ರಚಿತವೂ

ಮಹಾರ್ಥಗಾಂಭೀರ್ಯವುಳ್ಳದ್ದೂ ಯಾರೂ ಈವರೆಗೆ ಕೇಳದಿರುವಂಥದೂ ಮಹಾಪುರುಷರ ಚರಿತ್ರೆಯನ್ನು ಹೇಳುವಂಥದೂ ಸಂಗೀತಶಾಸ್ತ್ರಕ್ಕೆ ಅನುಗುಣವಾಗಿ ಬರೆದಂಥದೂ ರಸವತ್ತಾದುದೂ ಯೋಗದೃಷ್ಟಿಯಿಂದ ಕಂಡು ಕಲ್ಪಿಸಿದ ವರ್ಣಬಂಧವುಳ್ಳದ್ದೂ ವೀಣಾವಾದ್ಯಕ್ಕೆ ಹೊಂದಿಕೊಳ್ಳುವಂಥದೂ ಆದ ಗೀತವನ್ನು ಹಾಡುವೆವು; ಆಗ ನಮ್ಮ ಅಪೂರ್ವ ಕಲೆಯಿಂದ ಸಂತುಷ್ಟನಾದ ದೊರೆ ಏನು ಮಾಡುತ್ತಾನೆ ಎಂಬುದನ್ನು ತಿಳಿದುಕೊಂಡು ಬರಲು ಪೂಜ್ಯ ವಾಲ್ಮೀಕಿಗಳು ಅಪ್ಪಣೆ ಕೊಟ್ಟಿದ್ದಾರೆ ಎಂದು.

**ರಾಮ :** ಓಹೋ ಹೋ ಹೋ, ಕಲೆಯ ಹೆಮ್ಮೆ ಒಂದು ಕಡೆ, ಇನ್ನೊಂದು ಕಡೆ ಸೊಕ್ಕಿನ ಉಪನ್ಯಾಸ ! ಆಗಲಿ–ಗೆಳೆಯ ಮಹೋದಯ, ಅವರು ಹೇಳಿದಂತೆ ವ್ಯವಸ್ಥೆ ಮಾಡುವ ಆಶ್ವಾಸನವನ್ನಿತ್ತು ಅವರನ್ನಿಲ್ಲಿಗೆ ಕರೆದುಕೊಂಡು ಬಾ; ಬಹಳ ಕಾಲ ಕಾದು ಬೇಸತ್ತು ಹಾಡಲೊಲ್ಲೆವೆಂದು ಹೇಳಿಯಾರು–ಹೋಗು, ಹೋಗು.

**ವಿದೂಷಕ:** ಯಾಕಪಾ ಇಷ್ಟು ಬೇಗ ಸಪ್ಪೆಯಾಗಿಬಿಟ್ಟೆ? ಅವರ ಪರಸ್ಪರ ಸ್ನೇಹ, ರೂಪದ ಹೋಲಿಕೆ, ಎತ್ತಿ ಕಟ್ಟಿದ ಜುಟ್ಟುವುಳ್ಳ ಮುಖ–ಇವುಗಳನ್ನೆಲ್ಲಾ ಕಂಡ ರಾಣೀವಾಸದ ಕೆಲಸಗಾರ್ತಿಯರು ಅವರನ್ನು ಮಾತಾಡಿಸಿ ದಶರಥಮಹಾರಾಜ ಸಿಂಹಾಸನದ ಮೇಲೆ ಕುಳಿತಿದ್ದಾಗ ರಾಮಲಕ್ಷ್ಮಣರು ಹೀಗೇ ಅವನ ದರ್ಬಾರಿಗೆ ಶೋಭೆ ತರುತ್ತಿದ್ದರು ಎಂದಾಗ ಕಣ್ಣೀರು ಆ ಸೇವಿಕೆಯರ ಕಣ್ಣನ್ನು ತುಂಬಿತು.

**ರಾಮ :** ಅವರ ಆಕಾರವು ನಮ್ಮ ಬಾಲ್ಯವನ್ನು ನೆನಪಿಗೆ ತಂದುಕೊಡುವಂತಿದೆಯೇ?

**ವಿದೂಷಕ:** ಹೌದು.

**ರಾಮ :** ನನ್ನ ಕುತೂಹಲ ಹೆಚ್ಚುತ್ತಿದೆ; ಬೇಗ ಅವರನ್ನು ಒಳಗೆ ಕಳಿಸು.

**ವಿದೂಷಕ:** ನಿನ್ನ ಅಪ್ಪಣೆಯ ಪ್ರಕಾರ (ಎಂದು ಹೋಗುತ್ತಾನೆ).

(ತಾಪಸವೇಷದ ಕುಶಲವರನ್ನು ವಿದೂಷಕ ಕರೆತರುತ್ತಾನೆ)

ಹೀಗೆ ಬನ್ನಿ ಪೂಜ್ಯರೇ!

(ಹೊರಟು)

**ಕುಶ :** (ಅಪವಾರ್ಯ) ಮಗು, ಲವ! ಈಗ ಪೂಜ್ಯ ವಾಲ್ಮೀಕಿಗಳ ಅಪ್ಪಣೆಯ ಮೇರೆಗೆ ತಾಯಿಯನ್ನು ನಮಿಸಿ ನಾನು ರಾಜಶಿಬಿರದತ್ತ ಹೊರಟಾಗ

ಜುಟ್ಟನ್ನು ಹಿಡಿದು ನೇವರಿಸಿ ಪರ್ಣಕುಟಿಯೊಳಗೆ ಕರೆದೊಯ್ದು ನಿನಗೆ ಅಮ್ಮ ಯಾವ ಗುಟ್ಟನ್ನು ಹೇಳಿದಳು? ಸ್ವಲ್ಪ ಹೇಳುತ್ತೀಯಾ ಚಿನ್ನ!

**ಲವ** : ಯಾವ ದೊಡ್ಡ ಗುಟ್ಟನ್ನೂ ಹೇಳಲಿಲ್ಲ. ಅಲ್ಲಿ ತಪಸ್ವಿ ಜನರು ಹೆಚ್ಚಾಗಿದ್ದದ್ದರಿಂದ ಎಲೆವನೆಯೊಳಗೆ ಕರೆದುಕೊಂಡು ಹೋಗಿ, ತೋಳುಗಳನ್ನು ಹಿಡಿದು ಎದೆಗವಚಿಕೊಂಡು, ನೆತ್ತಿಗೆ ಮುತ್ತಿಟ್ಟು, ಶೀನಿ, ಮುಗುಳುನಗೆ ನಕ್ಕು, ಶಂಕಿತಳಾಗಿ, ಮೆಲ್ಲಮೆಲ್ಲನೆ ನನ್ನ ಕಿವಿಯ ಹಾಲೆಯನ್ನು ಎಳೆದು ತನ್ನ ಮುಖದಿಂದ ನನ್ನ ಮುಖವನ್ನು ಮರೆಮಾಡಿ ಮಗು, ನಿಮಗೆ ಗರ್ವ ಸಹಜ; ಅದನ್ನು ಬಿಟ್ಟು ಮಹಾರಾಜನನ್ನು ಸತ್ಕರಿಸಿ ಕುಶಲವನ್ನು ಕೇಳಬೇಕು ಎಂದಳು.

**ಕುಶ** : ಕುಶಲವನ್ನು ಕೇಳಬಹುದು, ನಮಸ್ಕಾರವನ್ನು ಹೇಗೆ ಮಾಡುವುದು?

**ಲವ** : ಏನು ಅಡ್ಡಿ?

**ಕುಶ** : ನಮ್ಮ ವಂಶದವರು ಇತರ ಕ್ಷತ್ರಿಯರಿಗೆ ನಮಸ್ಕಾರ ಮಾಡುವವರಲ್ಲವಂತೆ ನಿನಗೆ ಗೊತ್ತಿಲ್ಲವೇ?

**ಲವ** : ಯಾರು ಹೇಳಿದರು ನಿನಗಿದನ್ನ?

**ಕುಶ** : ಅಮ್ಮ

**ಲವ** : ನಮಸ್ಕಾರ ಮಾಡಬೇಕೆಂದು ಹೇಳಿದ್ದೂ ಅವಳೇ ಅಲ್ಲವೇ? ಹಿರಿಯರ ಆಜ್ಞೆಯನ್ನು ವಿಮರ್ಶಿಸಬೇಕಾಗಿಲ್ಲ ಇಲ್ಲಿ.

**ಕುಶ** : ಆಗಲಿ, ಹೋಗೋಣ ನಡೆ; ಮುಂದೆ ಸಂದರ್ಭ ಬಂದಂತೆ ನಡೆದುಕೊಳ್ಳೋಣ.

(ಹೋಗುತ್ತಾರೆ)

**ವಿದೂಷಕ:** ಈ ಕಡೆ ಬನ್ನಿ ಮಹನೀಯರೇ !

**ರಾಮ** : (ನೋಡಿ) ಈಗ ಕೌಶಿಕ ಕರೆದುಕೊಂಡು ಬರುತ್ತಿರುವ ಬಾಲಕರು ಅವರೇ ಇರಬೇಕು. ಇದೇನಿದು? ಒಮ್ಮೆಲೇ ಕಣ್ಣಲ್ಲಿ ನೀರು ತುಂಬಿಬಂತು! ಏಕೆ ಹೀಗಾಯಿತು?

**ಅರಿಯೆನು ಇವರನು ಇವರಲ್ಲಾಸ್ಥೆಯು ।**
**ಪರಿವೆಯು ಸಹ ನನಗನಿತಿಲ್ಲ ॥**
**ಅರಿಯೆನಿದೇಕೆಂದೊಮ್ಮೆಲೆ ಕಂಬನಿ ।**
**ಸುರಿಯಿತು (ಏನಿರಬಹುದೆಲ್ಲ !)** ॥೯॥

ಅಥವಾ ಇದರಲ್ಲಿ ಆಶ್ಚರ್ಯವೇನಿದೆ?

**ಕಂಡ ಕೂಡಲೇ ಸ್ವಸಂಬಂಧಿಕರ ಯಾವ ಯುಕ್ತಿಯಿಂದೋ ।**
**ಎದೆಯನಾರ್ದ್ರಗೊಳಿಸುವರು ಅವರು (ಒಳಗಿಂದ ಹರಿದು ಬಂದ) ॥**
**ಪರಾಮರ್ಶೆಯಿಂದೇನು ದೋಷಗುಣಗಳನು ತಿಳಿಯದವರ ।**
**ಚಂದ್ರಕಾಂತ ಶಿಲೆಯೊಸರದಿರುವುದೇ ಮೂಡೆ ತಂಪುಗದಿರ ॥೧೦॥**

ಇವರ ಆಕೃತಿಯನ್ನು ಪರೀಕ್ಷಿಸಿ ನೋಡುತ್ತೇನೆ. ಅರೇ, ನೋಡಲು ಕೂಡ ನನ್ನಲ್ಲಿ ಶಕ್ತಿ ಸಾಲದಾಯ್ತಲ್ಲ! ಈ ಹುಡುಗರನ್ನು ನೋಡ ನೋಡುತ್ತಿದ್ದಂತೆಯೇ ನನ್ನ ಹೃದಯದಲ್ಲಿ ಅಪೂರ್ವವಾದ ಭಯ, ಹರ್ಷ, ಶೋಕ, ದಯೆಗಳು ಮೂಡಿ ವಿಚಿತ್ರವಾದ ಅನುಭವವುಂಟಾಗುತ್ತಿದೆ. ಈ ಅನುಭವವು ನನ್ನನ್ನು ಇಡಿಯಾಗಿ ಆವರಿಸಿ ಮೂರ್ಛೆಯಂತೆ ಶೂನ್ಯಾತ್ಮಕತೆಗೆ ಒಯ್ಯುತ್ತಿದೆ. (ಮೂರ್ಛಿತನಂತಾಗಿ) ಕಣ್ಣೀರು ಹೇಗೆ ಹರಿಯುತ್ತಿದೆ? ಈ ಕಂಬನಿ ಹರಿದ ಮೇಲೆ ನನ್ನ ಸ್ತಂಭಿತವಾದ ಹೃದಯವು ಶಾಂತವಾದಂತೆ ಭಾಸವಾಗುತ್ತದೆ. ಈಗ ಸ್ವಲ್ಪ ಸ್ವಸ್ಥತೆಯುಂಟಾಯಿತು. ಕಂಬನಿಗಳನ್ನೊರಿಸಿಕೊಂಡು ಪುನಃ ಇವರನ್ನು ನೋಡುತ್ತೇನೆ. (ನೋಡಿ) ಇವರ ಮೈಕಟ್ಟು ಗಾಂಭೀರ್ಯ–ಔದಾರ್ಯಗಳನ್ನು ಧ್ವನಿಸುತ್ತಿದೆ; ಇವರ ಉಡುಪು ಶಾಂತಿ–ಸೌಂದರ್ಯಗಳನ್ನು ಹೊರಚೆಲ್ಲುತ್ತಿದೆ; ವಿನಯ–ಸಂಪನ್ನತೆಗಳು ಇವರಲ್ಲಿ ಎದ್ದು ಕಾಣುತ್ತಿವೆ. ಆದುದರಿಂದ ಇವರು ಸುಸಂಸ್ಕೃತ ಮನೆತನದವರೇ ಆಗಿರಬೇಕು.

**ವಿದೂಷಕ:** ಇವನೇ ಮಹಾರಾಜನು; ಈತನ ಇಷ್ಟಾನುಸಾರ ಪೂಜ್ಯರಾದ ತಾವು ಇವನನ್ನು ಸಮೀಪಿಸಿರಿ.

**ಕುಶ** : ಮಗು, ಲವ! ನಾನು ಚರ್ಚಿಸಿದ ಪ್ರಣಾಮ ಸಂದರ್ಭ ಈಗಲೇ ಬಂತೆಂಬುದು ನಿನಗೆ ಗೊತ್ತಾಯಿತೇ?

**ಲವ** : ಈಗಲೇ ಬಂತೇ?

**ಕುಶ** : ದೊರೆಯ ಹತ್ತಿರ ಹೋಗುತ್ತಿರುವಂತೆಯೇ ನನ್ನ ಎದೆ ಅಂಜಿಕೆಯಿಂದ ಝಲ್ಲೆನ್ನುತ್ತಿದೆ, ನನ್ನ ಕೈಕಾಲುಗಳು ನಾನು ಹೇಳಿದಂತೆ ಕೇಳದಾಗಿವೆ. ಕುಲಪ್ರತಿಷ್ಠೆ ನನ್ನನ್ನು ಬಿಟ್ಟು ಹೋಯಿತು; ಇದೇಕೆ? ಇವನೆದುರು ಬಾಗಿದ ನನ್ನ ತಲೆಯನ್ನು ಎತ್ತಲಾರೆನಾದೆ, ಹೆಚ್ಚೇನು? ಇಲ್ಲಿ ನೋಡು– ನಾನು ನಮಸ್ಕಾರ ಹಾಕಿಬಿಟ್ಟೆ!

**ಲವ :** ಇದೇನಾಶ್ಚರ್ಯ? ಅಣ್ಣನೂ ನನ್ನಂತೆಯೇ ಭಕ್ತಿಪರವಶನಾಗಿ ಹೋದನಲ್ಲಾ![20]
(ಇಬ್ಬರೂ ನಮಸ್ಕರಿಸುತ್ತಾರೆ.)

**ರಾಮ :** ದಯವಿಟ್ಟು ತಾವು ಧರ್ಮವಿಧಿಯನ್ನು ಮೀರಬೇಡಿರಿ. ಅರೇರೇ, ನಮಸ್ಕಾರ ಮಾಡಿಯೇಬಿಟ್ಟರಲ್ಲಾ! ಅಯ್ಯೋ, ಬ್ರಾಹ್ಮಣರಿಂದ ನಮಸ್ಕೃತನಾದೆನಲ್ಲಾ!
(ವಿಷಾದಪಡುತ್ತಾನೆ.)

**ವಿದೂಷಕ:** ಅಯ್ಯೋ ಮಹಾರಾಯ, ನೀನೇಕೆ ವಿಷಣ್ಣನಾದೆ? ಇವರು ಮಾಡಿದ ನಮಸ್ಕಾರಕ್ಕೆ ಪ್ರತಿಯಾಗಿ ನೀನು ಏನನ್ನೂ ಮಾಡಲಿಲ್ಲ. ಹೀಗೆ ಸುಮ್ಮನಿದ್ದರೆ ತಪ್ಪಾಗುವುದಿಲ್ಲವೇ? ಇಲ್ಲ. ನೀನು ತಪ್ಪಿತಸ್ಥನಲ್ಲ.

**ರಾಮ :** ಕೌಶಿಕ ಸರಿಯಾಗಿಯೇ ಕಂಡಿದ್ದ; ಇವರು ಗೌರವಾರ್ಹ ನಡತೆಯುಳ್ಳವರೂ ಅತ್ಯಂತ ದಾಕ್ಷಿಣ್ಯಶೀಲರೂ ನಾಜೂಕಿನ ಸ್ವಭಾವದವರೂ ಎಂದಿದ್ದ. ಕೇಳಿರಿ–

**ಅತಿಸಂಭ್ರಮದೆ ನೀವು ನನಗೆ ಮಾಡಿದ ನಮನ ।**
**ನನ್ನಾಜ್ಞೆಯಂತೆ ಈಗ ॥**
**ನಿಮ್ಮ ಗುರುಗಳ ಚರಣಕಮಲದ್ವಯಕೆ ಸಲಲಿ ।**
**(ಅರ್ಹತೆಗೆ ಸಿದ್ಧಿಭೋಗ)** ॥೧೧॥

**ವಿದೂಷಕ:** ನನ್ನ ಪ್ರಿಯ ಸ್ನೇಹಿತನು ಯಾವಾಗಲೂ ಯಾರಿಗೂ ಎದುರಾಡಲು ಅವಕಾಶವಿಲ್ಲದಂಥ ಆಜ್ಞೆಯನ್ನೇ ಕೊಡಬಲ್ಲವ. ಈ ಹುಡುಗರು ಮಾಡಿದ ಪ್ರಣಾಮದ ಪರಿಣಾಮ ಹೀಗೆ ಆಗಲಿ ಎಂದರೆ ಹೀಗೇ ಆಗುತ್ತದೆ.

**ಕುಶಲವರು:** (ಎದ್ದು) ಮಹಾರಾಜರಿಗೆ ಕುಶಲವೇ?

---

20 ರಾಮ ಮಾಡಿದ ಸೀತಾಪರಿತ್ಯಾಗದ ನ್ಯಾಯಬದ್ಧತೆಯು ಚರ್ಚಾಸ್ಪದ ಅಲ್ಲವೇ ಅಲ್ಲ– ಎಂಬುದನ್ನು ಕವಿ ಈ ಮೂಲಕ ಧ್ವನಿಸುತ್ತಾನೆ; ರಾಮರಾಜನು ಧರ್ಮರಾಜನು: ರಾಮನೆಂದರೆ ಆದರ್ಶರಾಜಧರ್ಮ, ಅನಂತರ ಆದರ್ಶ ಪತಿಧರ್ಮ, ಎಂಬ ವ್ಯಾಪಕ–ವ್ಯಾಪ್ಯ ವಿವೇಕವು ಅವನ ಪತ್ನೀ–ಪುತ್ರರ ಅಂತಃಕರಣದಲ್ಲಿ ರೂಢಮೂಲವಾಗಿರುವುದನ್ನು ನಾವೀ ಸನ್ನಿವೇಶದಲ್ಲಿ ಕಾಣಬಹುದು. ವಿಧಿರೂಪದ ರಾಮನಿಗೆ ಸೀತೆಯು ಶ್ರದ್ಧಾರೂಪದ ಪತ್ನಿ, ಕುಶಲವರು ವಿತ್ತ ರೂಪದ ಕ್ರತುಶಕ್ತಿಗಳು–ಎಂಬುದು ದುಷ್ಯಂತಕುಟುಂಬಕ್ಕಿಂತ ರಾಮಕುಟುಂಬಕ್ಕೆ ಸನ್ನಿವೇಶ ಬಲದಿಂದ ಹೆಚ್ಚಾಗಿ ಅನ್ವಯಿಸುತ್ತದೆ. ರಾಮನ ಯಜ್ಞ ಇನ್ನೂ ಸರಿಯಾಗಿ ಆರಂಭವಾಗಲೇ ಇಲ್ಲ; ಆಗಲೇ ಕವಿ ಕುಶ (ದರ್ಭೆ)–ಲವ (ಮುಹೂರ್ತ) ರನ್ನು ಕಳಿಸಿದ್ದಾನೆ; ಅವರ ಆಗಮನವು ವಿತ್ತಸಿದ್ಧಿ; ಸೀತಾಮಿಲನವು ಶ್ರದ್ಧಾಸಿದ್ಧಿ. ಆಮೇಲೆ ರಾಮನ ಯಜ್ಞವಿಧಿ ಸಾಂಗವಾಗಿ ಮುಗಿಯುವುದು.

**ರಾಮ :** ನಿಮ್ಮನ್ನು ನೋಡಿ ಸ್ವಲ್ಪ ಕುಶಲವುಂಟಾದಂತೆ ತೋರುತ್ತದೆ. ನಾವು ಕೇವಲ ಕುಶಲಪ್ರಶ್ನೆಗಷ್ಟೇ ಪಾತ್ರರೇ? ಅತಿಥಿಗಳಿಗೆ ಉಚಿತವಾದ ಆಲಿಂಗನಕ್ಕೆ ಪಾತ್ರರಲ್ಲವೇ? (ಅಪ್ಪುತ್ತಾನೆ) ಆಹಾ, ಇವರ ಸ್ಪರ್ಶ ಎದೆಯಾಳವನ್ನು ಮುಟ್ಟುವಂಥದಾಗಿದೆ ! (ಆಲೋಚಿಸಿ) ಮಕ್ಕಳನ್ನೆತ್ತಿಕೊಳ್ಳುವ ಸುಖ ನನಗರಿಯದು; ಆದರೂ ಮಕ್ಕಳೊಂದಿಗರೊಡನೆ ನನ್ನನ್ನೀಗ ತುಲನೆ ಮಾಡಬಹುದು. ತಪೋವನಕ್ಕೆ ಹೋಗದೆ ಗೃಹಸ್ಥರು ನ್ಯಾಯವಾಗಿಯೇ ಮನೆಯಲ್ಲಿ ಕಾಲ ಕಳೆಯುತ್ತ ಬದುಕುತ್ತಾರೆ–ಎಂಬುದೀಗ ನನಗೆ ಗೊತ್ತಾಯ್ತು. (ಲವಕುಶರನ್ನು ತನ್ನ ಸಿಂಹಾಸನದಲ್ಲಿ ಜೊತೆಗೆ ಕುಳ್ಳಿರಿಸಿಕೊಳ್ಳುತ್ತಾನೆ.)

**ಲವಕುಶರು:** ಇದು ರಾಜನ ಸಿಂಹಾಸನವಲ್ಲವೇ? ನಾವಿದರಲ್ಲಿ ಕುಳಿತುಕೊಳ್ಳುವುದು ಸರಿಯಲ್ಲ.

**ರಾಮ :** ಅಂತರವನ್ನಿಟ್ಟುಕೊಂಡು ಕುಳಿತುಕೊಳ್ಳುವುದು ಶೀಲಭಂಗಕ್ಕೆ ಕಾರಣವಾಗದು. ಆದ್ದರಿಂದ ನನ್ನ ತೊಡೆಯ ಮೇಲೆ ಕುಳಿತು ಕೊಳ್ಳಿರಿ; ಆಗ ನಿಮಗೆ ಸಿಂಹಾಸನದ ನೇರವಾದ ಸ್ಪರ್ಶವಾಗುವುದಿಲ್ಲ. (ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುತ್ತಾನೆ)

**ಲವಕುಶರು:** (ತಮಗಿಚ್ಛೆಯಿಲ್ಲವೆಂಬಂತೆ ನಡೆದುಕೊಂಡು) ರಾಜನೇ, ನಮ್ಮ ಬಗ್ಗೆ ಅತ್ಯೌದಾರ್ಯವನ್ನು ವಹಿಸಬೇಡ.

**ರಾಮ :** ನಿಮಗೆ ಅತಿಸಂಕೋಚ ಬೇಡ.

**ಎಷ್ಟು ದೊಡ್ಡವರಿಂದಲಾದರೂ ಬಾಲಕರು ।**
**ಲಾಲನೀಯರು ವಯೋಧರ್ಮದಿಂದ ॥**
**ತಂಗದಿರ ಬಾಲಭಾವದೆ ಶಿವನ ಮಸ್ತಕದ ।**
**ಕೇದಿಗೆಯ ನೇರನೇ (ಲೀಲೆಯಿಂದ)** ॥೧೨॥

(ನೀರು ತುಂಬಿದ ಕಣ್ಣಿಂದ ನೋಡಿ ಅಪ್ಪುತ್ತಾನೆ)
(ವಿದೂಷಕನನ್ನು ನೋಡಿ)
ಇಂದಿಗೆ ಸೀತೆ ನಿರ್ವಾಸಿತೆಯಾಗಿ ಎಷ್ಟು ವರ್ಷಗಳಾದವು–ನೆನಪಿದೆಯೆ?

**ವಿದೂಷಕ:** ಮಂದಭಾಗ್ಯನಾದ ನನಗೆ ಚೆನ್ನಾಗಿ ನೆನಪಿದೆ. (ಕೈ ಬೆರಳುಗಳನ್ನು ಎಣಿಸಿ ಆಮೇಲೆ ಕಾಲಿನ ಮೂರು ಬೆರಳುಗಳನ್ನೂ ತೋರಿಸಿ)[21] ಹೆಚ್ಚು ಲೆಕ್ಕಾಚಾರವೇಕೆ? ನೀನು ಸ್ವತಃ ಸೀತೆಯನ್ನು ಹೊರಗಟ್ಟಿ ಇಂದಿಗೆ ೧೦ ವರ್ಷಗಳಾದವು.

---

21. ೫+೩=೮ ೧೦+೩=೧೩ ಎಂದಾಗುವುದಲ್ಲದೆ ೧೦ ಆಗುವುದಿಲ್ಲ. ಇದು ವಿದೂಷಕನ ವಿದೂಷಕತ್ವವನ್ನು ಬಿಂಬಿಸಲು ಕವಿ ಹೂಡಿದ ತಂತ್ರ.

**ರಾಮ :** (ಕುಮಾರರನ್ನು ನೋಡಿ) ಹೇಗಾದರೂ ಸೀತೆಗೆ ಸುಖಪ್ರಸವವಾಗಿದ್ದರೆ ಇಷ್ಟು ಕಾಲದಲ್ಲಿ ಅವಳ ಮಕ್ಕಳು ಇಷ್ಟೇ ದೊಡ್ಡವರಾಗುತ್ತಿದ್ದರಲ್ಲವೇ?

**ವಿದೂಷಕ:** ಮಂದಭಾಗ್ಯನಾದ ನಾನು, ಹುಟ್ಟದೆ ಇದ್ದು ವಿಯೋಗ ಹೊಂದಿದ ಮಕ್ಕಳ ಈ ಸುದ್ದಿಯಿಂದ ಸ್ತಂಭಿತನಾಗಿ ಹೋದೆ! (ಅಳುತ್ತಾನೆ.)

**ರಾಮ :** ನಾನು ಕೂಡ ಈ ತಪಸ್ವಿ ಕುಮಾರರನ್ನು ಕಂಡು ದುಃಸಹ ಸಂಕಟವನ್ನು ಅನುಭವಿಸುತ್ತಿದ್ದೇನೆ.

**ನನ್ನ ತನಯರಿಗೆ ಯಾವ ಯಾವವಸ್ಥೆಗಳು ಬಂದವೇನೊ ।**
**ಎಂಬುದನ್ನು ಈ ವಿರಹಿಯಾದ ನಾನೂಹಿಸಿರುವ ಹಾಗೆ ॥**
**ಮುನ್ನ ನೋಡಿ ಆ ಅವಸ್ಥೆಗಳ ದಾಟಿರುವ ಕುವವರನ್ನು ।**
**ತುಂಬಿ ಹೃದಯ ಅನುಕಂಪದಿಂದ ದ್ರವಿಸುತಿದೆ**
**(ಕಾಲಹೋಗೆ) ॥೧೩॥**

**ವಿದೂಷಕ:** (ಗಾಬರಿಯಿಂದ) ಅಯ್ಯಯ್ಯೋ ಬಿಡು, ಬಿಡು ಬೇಗ, ಈ ತಪಸ್ವಿ ಕುಮಾರರು ಬದುಕಲಿ ಸಿಂಹಾಸನದಿಂದ ಕೆಳಗಿಳಿದು![22]

**ರಾಮ :** (ಗಡಿಬಿಡಿಯಿಂದ ಬಾಲಕರನ್ನು ಕೈಬಿಟ್ಟು) ಸ್ನೇಹಿತನೇ, ಇದೇನಿದು?

**ವಿದೂಷಕ:** ಸಾಕೇತಪುರದ ಅಜ್ಜಂದಿರು ಹೇಳುತ್ತಿದ್ದರು ರಘುವಂಶದವರಲ್ಲದ ಯಾರಾದರೂ ಈ ಸಿಂಹಾಸನವನ್ನು ಹತ್ತಿದರೆ ಅವರ ತಲೆಯೊಡೆದು ನೂರು ಹೋಳಾಗುವುದು ಎಂದು.

**ರಾಮ :** (ಉದ್ವೇಗದಿಂದ) ಬೇಗನೆ ಕೆಳಗಿಳಿಯಿರಿ. (ಇಬ್ಬರೂ ಕೆಳಗಿಳಿದು ನೆಲದ ಮೇಲೆ ಕುಳಿತುಕೊಳ್ಳುತ್ತಾರೆ) ಸ್ವಸ್ಥವಾಗಿದ್ದೀರಲ್ಲಾ ನೀವಿಬ್ಬರೂ? ತಲೆಯಲ್ಲಿ ಯಾವ ನೋವೂ ಉಂಟಾಗಲಿಲ್ಲ ತಾನೆ?

**ಲವಕುಶರು:** ನಾವು ಸ್ವಸ್ಥವಾಗಿದ್ದೇವೆ; ನಮಗೆ ಯಾವ ನೋವೂ ಉಂಟಾಗಲಿಲ್ಲ.

**ವಿದೂಷಕ:** ಆಶ್ಚರ್ಯ, ಆಶ್ಚರ್ಯ! ಹೀಗೆ ಯಾವ ನೋವೂ ಉರಿಯೂ ಇಲ್ಲದೆ ಸುಖವಾಗಿ ಕುಳಿತುಬಿಟ್ಟಿದ್ದಾರಲ್ಲಾ ಇವರು!

**ರಾಮ :** ಇದರಲ್ಲೇನಿದೆ ಆಶ್ಚರ್ಯ? (ಮಕ್ಕಳನ್ನು ತೋರಿಸಿ) ತಪಸ್ವಿಗಳ ಶರೀರವು ಸ್ವಸ್ತ್ಯಯನದಿಂದ ರಕ್ಷಿತವಾಗಿರುತ್ತದೆ. ನೋಡು–

---

22. ಮಾರೀಚಾಶ್ರಮದಲ್ಲಿ ಸರ್ವದಮನನಿಗೆ ಕಟ್ಟಿದ ರಕ್ಷಾಯಂತ್ರವನ್ನು ಅದು ಬಿದ್ದೊಡನೆಯೇ ದುಷ್ಯಂತ ಹೆಕ್ಕಲು ಹೋದಾಗ ಅಲ್ಲಿದ್ದ ಹೆಂಗಸು ಮುಟ್ಟಬೇಡ ಎಂದು ಭಯದಿಂದ ಹೇಳಿದ ಸಂದರ್ಭಕ್ಕಿದು ಸಮಾನವಾದುದು.

**ತಪಕೆ ನಿಂದವರೆದುರು ಶರಗಳು**
**ವಿಫಲವಾಗುವುವಯ್ಯ ವಾಸವ**
**(ನಪರಿಮಿತ ಸಾಮರ್ಥ್ಯ ತಳೆದಿಹ) ಕುಲಿಶಕೋಟಿಗಳು ॥**
**ಸಫಲವಾಗುವುವೆಂದು ತಿಳಿದೆಯ?**
**(ಚಪಲವಟು ನಿನಗರಿಯದೆಂದೂ–**
**ತಪದ ಮಹಿಮೆಯಪಾರ, ನಿರುಪಮ ಸತ್ಯಮೂರ್ತಿಗಳು ॥೧೪॥**

(ಬಾಲಕರಿಬ್ಬರನ್ನೂ ಕುರಿತು)

ನೀವು ಬರಿನೆಲದ ಮೇಲೆ ಕುಳಿತುಬಿಟ್ಟಿರಾ?

**ಲವಕುಶರು:** ಮಹಾರಾಜ, ನೆಲವು ಎಲ್ಲಕ್ಕಿಂತಲೂ ಮೊದಲನೆಯ ಆಸನವಲ್ಲವೇ?

**ರಾಮ :** ಹೌದು. (ಸುಮ್ಮನಿರುತ್ತಾನೆ)

**ವಿದೂಷಕ:** ದೊರೆಯೇ, ಅತಿಥಿಗಳಲ್ಲವೇ ಇವರು? ಅವರೊಡನೆ ಮಾತಾಡು; ಸುಮ್ಮನೆ ಕುಳಿತುಬಿಟ್ಟೆಯಲ್ಲಾ?

**ರಾಮ :** ನಿಮ್ಮ ಸೊಬಗಿನಿಂದ ಉಂಟಾದ ಕುತೂಹಲ ನನ್ನನ್ನು ಪ್ರಶ್ನಿಸುವಂತೆ ಮಾಡಿದೆ: ನೀವು ಯಾವ ವರ್ಣದವರ ಮಕ್ಕಳು? ನೀವು ಯಾವ ಆಶ್ರಮದ ದೀಕ್ಷೆಯನ್ನು ಪಡೆದಿದ್ದೀರಿ?

**ಕುಶ :** (ಲವನಿಗೆ ಉತ್ತರಕೊಡಲು ಸನ್ನೆ ಮಾಡುತ್ತಾನೆ.)

**ಲವ :** ನಮ್ಮದು ೨ನೆಯ ವರ್ಣ, ಮೊದಲನೆಯ ಆಶ್ರಮ.

**ರಾಮ :** ಮೊದಲನೆಯ ವರ್ಣದವರಲ್ಲ ಇವರು! ಆದುದರಿಂದ ಇವರು ನಮಸ್ಕಾರ ಮಾಡಿದ್ದೂ ಕೆಳಗೆ ಕುಳಿತದ್ದೂ ಬಹಳ ತಪ್ಪಾಗಲಿಲ್ಲ; ಆಗಲಿ: ನೀವು ಸೂರ್ಯವಂಶದವರೋ ಚಂದ್ರವಂಶದವರೋ?

**ಲವ :** ಸೂರ್ಯವಂಶದವರು.

**ರಾಮ :** ಅರೇ, ಇವರು ನಮ್ಮ ವಂಶದವರೇ ಆಗಿಬಿಟ್ಟರಲ್ಲಾ !

**ವಿದೂಷಕ:** ಏನು ಇಬ್ಬರೂ ಒಂದೇ ಉತ್ತರ ಕೊಡುತ್ತಾರಲ್ಲಾ !

**ರಾಮ :** ನೀವು ಒಬ್ಬ ತಾಯಿಯ ಮಕ್ಕಳೇನು?

**ಲವಕುಶರು:** ಹೌದು.

**ರಾಮ :** ನೀವು ಅವಳಿಗಳೇನು?

**ಲವಕುಶರು:** ನಿಜ.

**ರಾಮ :** ಈಗ ಸರಿಹೋಯ್ತು. ನಿಮ್ಮಲ್ಲಿ ಹಿರಿಯನಾರು? ಅವನ ಹೆಸರೇನು?

**ಲವ** : (ಕೈಯಿಂದ ತೋರಿಸಿ) ಅಣ್ಣನಿಗೆ ನಮಸ್ಕಾರ ಮಾಡುವಾಗ ನಾನು ಲವನೆಂದು ನನ್ನನ್ನು ಕರೆದುಕೊಳ್ಳುತ್ತೇನೆ; ಅವನು ಹಿರಿಯರಿಗೆ ನಮಸ್ಕಾರ ಮಾಡುವಾಗ... (ಅರಿಯದವನಂತೆ ಅಷ್ಟಕ್ಕೇ ನಿಲ್ಲಿಸುತ್ತಾನೆ)

**ಕುಶ** : ಕುಶನೆಂದು ನನ್ನನ್ನು ಕರೆದುಕೊಳ್ಳುತ್ತೇನೆ.

**ರಾಮ** : ಎಷ್ಟು ಸುಸಂಸ್ಕೃತವಾಗಿ ಮಾತಾಡುತ್ತಿದ್ದಾರೆ ಇವರು!

**ವಿದೂಷಕ:** ಹೆಸರೇನೋ ಗೊತ್ತಾಯಿತು; ಹಿರಿಯ ಯಾರು ಎಂಬ ಪ್ರಶ್ನೆಗೆ ಉತ್ತರ ಕೊಡಲಿಲ್ಲ.

**ರಾಮ** : ಕೈಯಿಂದ ತೋರಿಸುವುದರಿಂದಲೂ ಹೆಸರನ್ನು ಹೇಳದುದರಿಂದಲೂ ಆಗಲೇ ಕುಶ ಹಿರಿಯನೆಂದು ಉತ್ತರ ಕೊಟ್ಟಾಗಿದೆಯಲ್ಲಾ!

**ವಿದೂಷಕ:** ಹೌದು ಹೌದು; ಈಗ ಚೆನ್ನಾಗಿ ನೆನಪಾಯ್ತು.

**ರಾಮ** : ನಿಮ್ಮ ಗುರುಗಳ ಹೆಸರೇನಪ್ಪಾ?

**ಲವ** : ಪೂಜ್ಯ ವಾಲ್ಮೀಕಿಗಳು.

**ರಾಮ** : ಯಾವ ಸಂಬಂಧದಿಂದ?

**ಲವ** : ಉಪನಯನದಲ್ಲಿ ಮಾಡಿದ ಉಪದೇಶದಿಂದ.

**ರಾಮ** : ನಿಮ್ಮ ತಂದೆ ಯಾರು?

**ಲವ** : ನನಗವನ ಹೆಸರು ಗೊತ್ತಿಲ್ಲ; ಈ ತಪೋವನದಲ್ಲಿ ಯಾರೂ ಅವನ ಹೆಸರನ್ನು ಹೇಳುವುದಿಲ್ಲ.

**ರಾಮ** : ಎಲಾ ದೊಡ್ಡಸ್ತಿಕೆಯೇ?

**ಕುಶ** : ಅವನ ಹೆಸರು ನನಗೆ ಗೊತ್ತು.

**ರಾಮ** : ಹೇಳು

**ಕುಶ** : 'ನಿರ್ದಯ' ಎಂದು.

**ರಾಮ** : (ವಿದೂಷಕನನ್ನು ನೋಡಿ) ಗೆಳೆಯ, ಈ ಹೆಸರು ಬಹಳ ಅಪರೂಪವಾಗಿದೆಯಲ್ಲಾ?

**ವಿದೂಷಕ:** (ಯೋಚಿಸಿ) 'ನಿರ್ದಯ' ಎಂದು ಹೇಳುವವರಾರು?

**ಕುಶ** : ಅಮ್ಮ.

**ವಿದೂಷಕ:** ಸಿಟ್ಟಿನಿಂದ ಹಾಗೆ ಹೇಳುತ್ತಾಳೋ ಸಹಜವಾಗಿಯೋ?

**ಕುಶ** : ನಾವೇನಾದರೂ ತಪ್ಪನ್ನು ಮಾಡಿದಾಗ ಅವಳು 'ನಿರ್ದಯನ ಮಕ್ಕಳೇ, ಚೇಷ್ಟೆ ಮಾಡಬೇಡಿರಿ' ಎಂದು ನಮ್ಮನ್ನು ಬಯ್ಯುತ್ತಾಳೆ.

**ವಿದೂಷಕ:** ಇವರಪ್ಪನ ಹೆಸರು 'ನಿರ್ದಯ' ಎಂದಾದರೆ ಇವರ ಅಮ್ಮ ಅವನಿಂದ ಅವಮಾನಿತೆಯೂ ನಿರ್ವಾಸಿತೆಯೂ ಆಗಿರಬೇಕು. ಆದುದರಿಂದ ಅವನಿಗೇನನ್ನೂ ಮಾಡಲಾರದೆ ಮಕ್ಕಳನ್ನು ಹೀಗೆ ಬಯ್ಯುತ್ತಾಳೆ ಎಂದು ತೋರುತ್ತದೆ.

**ರಾಮ :** (ಸ್ವಗತ) ಕೌಶಿಕ ಸರಿಯಾಗಿಯೇ ಹೇಳಿದ್ದ. (ನಿಟ್ಟುಸಿರಿಟ್ಟು) ಹೀಗಾಗಿ ಹೋದ ನನಗೆ ಧಿಕ್ಕಾರ! ಆ ಬಡವೆ ನನ್ನ ತಪ್ಪಿಗಾಗಿ ತನ್ನ ಮಕ್ಕಳನ್ನು ಸಿಟ್ಟಿನಿಂದ ಹೀಗೆ ಬಯ್ಯುತ್ತಾಳೆ (ಕಂಬನಿದುಂಬಿ ನೋಡುತಾನೆ.) ನಿಮ್ಮ ಆಶ್ರಮದಲ್ಲಿ ಆ 'ನಿರ್ದಯ' ಇದ್ದಾನೆಯೇ?

**ಲವ :** ಇಲ್ಲ.

**ರಾಮ :** ಎಲ್ಲಿದ್ದಾನೆ ಎಂದು ಕೇಳಿ ತಿಳಿದಿದ್ದೀರಾ?

**ಲವ :** (ಕುಶನನ್ನು ನೋಡುತ್ತಾನೆ)

**ಕುಶ :** ನಾವಿನ್ನೂ ಅವನ ಕಾಲಿಗೆರಗಿಲ್ಲ. ಅಮ್ಮ ವಿರಹವ್ರತ ಹಿಡಿದು ನಿಟ್ಟುಸಿರು ಬಿಡುವುದಷ್ಟೇ ನಮಗೆ ಗೊತ್ತು.

**ರಾಮ :** ಅವನೇನಾದರೂ ನಿಮ್ಮ ನೆತ್ತಿಗೆ ಮುತ್ತಿಟ್ಟದ್ದುಂಟೇ?

**ಕುಶ :** ಅದೂ ಇಲ್ಲ.

**ರಾಮ :** ಈ ನಿರ್ವಾಸನವು ಬಹಳ ದೀರ್ಘಕಾಲದ್ದೂ ಹೃದಯ ವಿದ್ರಾವಕವಾದದ್ದೂ ಆಗಿದೆ ಎಂಬುದು ಸ್ಪಷ್ಟ: ಏಕೆಂದರೆ, ಅವನೂ ನೀವೂ ಈವರೆಗೆ ಭೇಟಿ ಮಾಡಿದ್ದೇ ಇಲ್ಲ! (ವಿದೂಷಕನನ್ನು ನೋಡಿ) (ಜನಾಂತಿಕ) ಇವರ ತಾಯಿಯ ಹೆಸರನ್ನು ಕೇಳಬೇಕೆಂದು ನನಗೆ ಕುತೂಹಲ ಉಂಟಾಗಿದೆ. ಹೆಂಗಸರ ಬಗ್ಗೆ ಪ್ರಶ್ನೆ ಕೇಳುವುದು ಉಚಿತವಲ್ಲ–ಅದರಲ್ಲೂ ತಪೋವನದಲ್ಲಿ. ಇದಕ್ಕೇನು ಮಾಡಬಹುದು? ಯಾವ ಉಪಾಯವಿದೆ?

**ವಿದೂಷಕ:** (ಜನಾಂತಿಕ) ಬ್ರಾಹ್ಮಣಜಾತಿಯ ಮಾತಿಗೆ ಎದುರಿಲ್ಲ. ಆದುದರಿಂದ ನಾನು ಕೇಳುತ್ತೇನೆ. (ಪ್ರಕಾಶ) ನಿಮ್ಮ ತಾಯಿಯ ಹೆಸರೇನಪ್ಪಾ?

**ಲವ :** ಅವಳಿಗೆ ಎರಡು ಹೆಸರುಗಳಿವೆ.

**ವಿದೂಷಕ:** ಅದು ಹೇಗೆ?

**ಲವ :** ತಪೋವನವಾಸಿಗಳು ಅವಳನ್ನು ದೇವಿಯೆಂದು ಕರೆದರೆ ವಾಲ್ಮೀಕಿಗಳು ಸೊಸೆಯೆಂದು ಕರೆಯುತ್ತಾರೆ.

**ರಾಮ :** ವಾಲ್ಮೀಕಿ ಋಷಿಗಳ ಸೊಸೆ ಯಾವ ಕ್ಷತ್ರಿಯ ಮನೆತನದವಳಪ್ಪಾ?

**ವಿದೂಷಕ:** ಕ್ಷತ್ರಿಯ ಮನೆತನಗಳು ಅನೇಕ ಇರುವುದರಿಂದ ಯಾವುದೆಂದು ಊಹಿಸುವುದು ಕಷ್ಟ.

**ರಾಮ :** ಸ್ವಲ್ಪ ಇತ್ತ ಬಾ ಗೆಳೆಯ !

**ವಿದೂಷಕ:** (ಹತ್ತಿರಹೋಗಿ) ಅಪ್ಪಣೆಕೊಡಯ್ಯಾ ದೊರೆ!

**ರಾಮ :** ಈ ಬಾಲಕರ ಕುಟುಂಬ ವೃತ್ತಾಂತವು ಎಲ್ಲ ಅಂಶಗಳಲ್ಲಿಯೂ ನಮ್ಮ ಕುಟುಂಬದ ವೃತ್ತಾಂತವನ್ನೇ ಹೋಲುತ್ತದೆ!

**ವಿದೂಷಕ:** ಹೇಗೆ?

**ರಾಮ :** ಇವರಿಗೂ ಸೀತಾಗರ್ಭಕ್ಕೂ ಕಳೆದ ಕಾಲಾವಧಿ ಒಂದೇ; ಇವರೂ ನಮ್ಮಂತೆಯೇ ಸೂರ್ಯವಂಶದವರು. ಇವರು ಹುಟ್ಟುವ ಮೊದಲೇ ಇವರ ತಾಯಿಯು ಪ್ರೋಷಿತೆಯಾಗಿದ್ದವಳು; ಮತ್ತು ಸಿಂಹಾಸನ ಏರಿದಾಗ ಇವರಿಗೆ ಏನೂ ಆಗಲಿಲ್ಲ; ಅಲ್ಲದೆ ಇವರ ಅಪ್ಪನ ಹೆಸರು ನಿರ್ದಯನೆಂದದ್ದು ನನ್ನಂಥವನ ಕ್ರೂರತನವನ್ನು ಸೂಚಿಸುತ್ತದೆ: ಅಲ್ಲದೆ, ಇವರಮ್ಮನ 'ದೇವಿ' ಎಂಬ ಹೆಸರು ಅವಳ ಮಹಾತ್ಮ್ಯವನ್ನು ಧ್ವನಿಸುತ್ತದೆ. ಈ ಅತಿ ಹೆಚ್ಚಾದ ಸಾದೃಶ್ಯದಿಂದ ಬಹಳ ದುಃಖಕ್ಕೀಡಾಗಿದ್ದೇನೆ. (ದುಃಖಿಸುತ್ತಾನೆ)

**ವಿದೂಷಕ:** ಇವರು ಸೀತೆ ಹಡೆದ ಮಕ್ಕಳೆಂದು ನಿನ್ನ ಅಭಿಪ್ರಾಯವೇನು?

**ರಾಮ :** ಅಲ್ಲ, ಅಲ್ಲ: ಅದು ಹೇಗಾದೀತು? ತಪೋವನವಾಸಿಗಳ ಮೇಲೆ ಇಂಥ ಸಂಬಂಧವನ್ನು ನಾನು ಹೊರಿಸುತ್ತಿದ್ದೇನೆ. ಆದರೆ –

**ಇವರ ಕಾಯದೆತ್ತರವನು**
**ಇವರ ಶ್ಯಾಮವರ್ಣವನ್ನು**
**ಇವರ ವಂಶವಯಗಳನ್ನು ಬಗೆಯೆ ಕಷ್ಟವ ।**
**ತಿವಿವುದೆದೆಯ ಜನಕಜೆಯನು**
**ಭವಿಸಿದತಿ ದುರಂತಗತಿಯು**
**(ಸವನಿರಲು ವಿಪ್ರವಾಸ) ಬಸಿರಿಯಾಗಿರೆ** ॥೧೫॥

(ಚಿಂತೆ–ಶೋಕಗಳನ್ನು ಅನುಭವಿಸುತ್ತ)

(ತೆರೆಯಲ್ಲಿ)

ಹೋ ಹೋ–ಇಕ್ಷ್ವಾಕು ಮನೆತನದ ರಾಜಕುಮಾರರಾದ ಲವಕುಶರಲ್ಲಿ ಯಾರಿದ್ದಾರೆ ಇಲ್ಲಿ?

**ಲವಕುಶರು:** (ಕೇಳಿ) ನಾವಿಬ್ಬರೂ ಇಲ್ಲಿದ್ದೇವೆ.
(ಮತ್ತೆ ತೆರೆಯಲ್ಲಿ)

ಇಷ್ಟು ಕಾಲ ಕಳೆದರೂ ಹೇಳಿಕಳಿಸಿದ್ದನ್ನು ಮಾಡಲಿಲ್ಲವೇ?

**ಮೌನೀಂದ್ರವಾಲ್ಮೀಕಿ ರಚಿಸಿದ ಮಹಾರಥವು**
**ರಾಣ ಪುರುಷೋತ್ತಮ ಚರಿತ್ರೆಯನು ರಘುಕುಲ**
**ತ್ರಾಣ ದಶರಥನಗ್ರಸೂನುವಿನ ಸಭೆಯಲ್ಲಿ**
**ಹಾಡಿ ಮಧ್ಯಾಹ್ನದೊಳಗೆ ॥**
**ಮಾಣದಾಶ್ರಮಕೆ ಬನ್ನಿರಿ ಮತ್ತೆ ಎಂದ ಗುರು**
**ವಾಣಿಯನು ಮರೆತಿರೇನಿಷ್ಟು ಹೊತ್ತಿನ ತನಕ**
**ಏನು ಮಾಡಿದಿರಿ? ಮಾಧ್ಯಾಹ್ನಿಕದ ಕಾಲ ಬಂತೀಗ**
**ರಾಜಕುಮಾರರೇ ॥೧೬॥**

**ಲವಕುಶರು:** ದೊರೆಯೇ, ಗುರುಗಳು ಹೇಳಿಕಳಿಸಿದ್ದಾರೆ; ನಾವಿನ್ನು ಹೊರಡುತ್ತೇವೆ.

**ರಾಮ :** ಮುನಿಗಳು ಹೇಳಿಕಳಿಸಿದ ಮಹತ್ವದ ಕಾರ್ಯವನ್ನು ನಾನೂ ಗೌರವಿಸುತ್ತೇನೆ. ಅದರಿಂದಲೇ–

**ಗಾನಕೋವಿದರಯ್ಯ ನೀವು ಪು–**
**ರಾಣಕವಿ ವಾಲ್ಮೀಕಿ ವ್ರತನಿಧಿ**
**ತಾನೆ ಬಂತೀ ಬುವಿಗೆ ಮೊದಲೀ ಬಗೆಯ ಕಾವ್ಯಕೃತಿ ॥**
**ಶ್ರೀನಿದಾನನ ಶ್ಲಾಘ್ಯಕಥೆಯೆನ**
**(ಲೇನ ಹೇಳಲಿ) ಇದನು ಕೇಳುವ**
**ಮಾನಿಸರು ಮಡಿಯಾಗುವರು, ಪರಿವಾರ ಮೆಚ್ಚುವುದು ॥೧೭॥**

ಗೆಳೆಯ, ಮನುಷ್ಯ ಸಮಾಜದಲ್ಲಿ ಈ ಬಗೆಯ ಛಂದೋಮಯ ವಾಣಿ ಉದಯಿಸಿದ್ದು ಇದೇ ಮೊದಲು ಎಂದು ನಾನು ಕೇಳಿಬಲ್ಲೆ. ಆದುದರಿಂದ ನಾನು ನನ್ನ ಇಷ್ಟಮಿತ್ರ ಬಂಧುಬಾಂಧವರೊಡನೆ ಇವರ ಕಾವ್ಯಗಾಯನವನ್ನು ಕೇಳಬೇಕೆಂದಿದ್ದೇನೆ. ಸಭಾಸದರನ್ನು ಬರಹೇಳು. ಲಕ್ಷ್ಮಣನಿಗೆ ಹೇಳಿಕಳಿಸು. ಈ ಸಿದ್ಧತೆ ನಡೆಯುವಷ್ಟರಲ್ಲಿ ನಾನು ಸ್ವಲ್ಪ ಸಿಂಹಾಸನದಿಂದೆದ್ದು ಬಹಳ ಹೊತ್ತು ಕುಳಿತು ಸೆಟೆದಂತಾದ ಕಾಲುಗಳನ್ನು ನೆಟ್ಟಗೆ ಮಾಡಿಕೊಳ್ಳುತ್ತೇನೆ.
(ಎಲ್ಲರೂ ಹೋಗುತ್ತಾರೆ)
(ಐದನೆಯಂಕ ಮುಗಿದುದು)

# ೬. ಆರನೆಯಂಕ

(ರಾಜಗೃಹಸಚಿವನಾದ ದರ್ಬಾರುಭಕ್ಷಿ ಬರುತ್ತಾನೆ) (ನೋಡಿ)

**ಸಚಿವ :** ಅರೇ, ದೊರೆ ಬಂದೇ ಬಿಟ್ಟನಲ್ಲಾ!

**ಮೂರು ವೇದಗಳಿಂದ ಸಲೆ ಪರಿಷ್ಕೃತವಾದ**
**ಅಶ್ವಮೇಧದ ಹಾಗೆ ರೂಹುದಳೆದ ॥**
**ಶ್ರೀರಾಮ ಬರುತಲಿಹ ಮೂವರು ಮಹಾಶೀಲ**
**ಸಂಪನ್ನರೊಡನೀಗ ಬೆಂಬತ್ತಿದ ॥೧॥**

(ಈಗ ಕುಶ, ಲವ, ಲಕ್ಷ್ಮಣರೊಡನೆ ರಾಮ ಪ್ರವೇಶಿಸುತ್ತಾನೆ)

**ಎಲ್ಲರು :** (ಸರಿದು ನಿಲ್ಲುತ್ತಾರೆ)

**ಸಚಿವ :** (ಹತ್ತಿರ ಹೋಗಿ) ಪೂಜ್ಯನಿಗೆ ಜಯವಾಗಲಿ. ಇದೋ ದರ್ಬಾರಿನ ವ್ಯವಸ್ಥೆಯನ್ನು ಮಾಡಿದ್ದೇನೆ: ಇದು ಆಸನಗಳ ಸಾಲು.
(ಎಲ್ಲರೂ ಕುಳಿತುಕೊಳ್ಳುತ್ತಾರೆ)

**ಸಚಿವ :** ದೊರೆ, ಇತ್ತನೋಡು: ನಿನ್ನ ವಂಶದ ಬಂಧು ಬಾಂಧವರು, ಇತ್ತ ಕುಳಿತವರು ನಗರ–ಪಟ್ಟಣಗಳ ಶ್ರೇಷ್ಠಿಗಳು; ಈ ಕಡೆ ಮಹಾಗ್ರಾಮಗಳ ಧುರೀಣರು ಕುಳಿತಿದ್ದಾರೆ–ಪ್ರಜಾಪ್ರಮುಖರಾದ ಇವರೆಲ್ಲರೂ ನಿನಗೆ ಗೌರವವನ್ನು ಸಮರ್ಪಿಸುತ್ತಿದ್ದಾರೆ.

**ರಾಮ :** (ನೋಡಿ) ಇದೇನೀಕಡೆ ನಮ್ಮ ಸಮೀಪದಲ್ಲಿಯೇ ಪರದೆಯ ಮರೆ?

**ಸಚಿವ :** **ನಿನ್ನ ತಾಯಿಯರಾದ ಕೌಸಲ್ಯೆ ಮೊದಲಾದ**
**ದೇವಿಯರು ನಿನ್ನನುಜ ಭರತಾದ್ಯರ ॥**
**(ಮನ್ನೆಯರು) ಸೊಸೆಯರಾ ದಶರಥ ಮಹೀಶ್ವರನ**
**(ಕಣ್ಣಬೊಂಬೆಗಳಲ್ಲಿ) ಕುಳಿತಿರುವರು ॥೨॥**

**ಲಕ್ಷ್ಮಣ :** (ದರ್ಬಾರು ಸಚಿವನನ್ನು ಕುರಿತು)
ಪೂಜ್ಯನೇ, ಅತ್ತಿಗೆಯಾದ ವೈದೇಹಿಯನ್ನು ನೀನು ದೇವಿಯರಲ್ಲೂ ಗಣಿಸಲಿಲ್ಲ, ಸೊಸೆಯಂದಿರಲ್ಲೂ ಗಣಿಸಲಿಲ್ಲ–ಇದೇನು?

ರಾಮ : (ನಿಟ್ಟುಸಿರಿಟ್ಟು) ಸಚಿವ, ನೀನು ಹೋಗಿ ನಿನ್ನ ಆಸನದಲ್ಲಿ ಕುಳಿತುಕೋ.

ಸಚಿವ : ನೀನು ಹೇಳಿದ ಹಾಗೆ ಆಗಲಿ. (ಎಂದು ಹೊರಡುತ್ತಾನೆ)

ರಾಮ : ಪೂಜ್ಯ ತಪಸ್ವಿಕುಮಾರರೇ, ಹಾಡಿರಿ.

(ರಾಗ: ಕಲ್ಯಾಣಿ; ತಾಳ:ಆದಿ)

ಕುಶಲವರು: ಆಽಸುರೇಂದ್ರ ಸನ್ನಿಭ ಭೂಪ ॥ ಶರವಿದ್ಯಾರೂಪ ।
ಕೋಽಸಲಾಧಿನಾಥನಾದ ॥ಪ॥

ರಾಮ : ಏನಿದು? ನಮ್ಮ ತಂದೆಯ ಹೆಸರಿನವನನ್ನೇ ಎತ್ತಿಕೊಂಡರಲ್ಲಾ ಇವರು ಮೊದಲು?

ಕುಶಲವರು: (ಶ್ರೀಶ) ಕೈಹಿಡಿದ ಮೂವರರಸಿಯರ ।
ಕೋಸಲಕೇಕಯಭವೆಯರನಾಮೇ
ಲಾಸುಮಿತ್ರೆಯನು (ವೈಭವದಿಂದ) ವಿ
ಲಾಸದೆ ಮೆರೆದನು ದೋಷವಿದೂರನು ॥ಅ.ಪ॥

ರಾಮ
ಲಕ್ಷ್ಮಣರು: (ಹರ್ಷದಿಂದ) ಕವಿಯು ನಮ್ಮ ತಂದೆಯನ್ನೇ ಕಥಾನಾಯಕನನ್ನಾಗಿ ಮಾಡಿದಂತೆ ತೋರುವುದಲ್ಲಾ!

ಕುಶಲವರು: ಕೌಸಲ್ಯೆಯು ರಾಮನನ್ನು ಪ್ರಸವಿಸಲು ॥

ಲಕ್ಷ್ಮಣ : (ನಮಸ್ಕರಿಸುತ್ತಾನೆ)

ಕುಶಲವರು: ಕೈಕೇಯಿಯು ಮತ್ತಾ ।
ದೋಷದೂರನಾದಂಥ ಭರತನನ್ನು ॥
ಆ ಸುಮಿತ್ರೆ ಲಕ್ಷ್ಮಣ ಶತ್ರುಘ್ನರ
ಲೇಸುಗಳಿಗೆಯಲಿ ಹಡೆದಳು (ಮಂಗಲೆ)
(ದೇಶಮೆಚ್ಚುವಂತವರು ಬೆಳೆದು ಸಂ–
ತೋಷಗೊಳಿಸಿದರು ಸಜ್ಜನರೆಲ್ಲರ) ॥೧॥

ರಾಮ : (ಲಕ್ಷ್ಮಣನನ್ನು ಆಲಂಗಿಸುತ್ತಾನೆ)

ಕುಶಲವರು: ಸೀತೆಯನ್ನು ರಘುರಾಮ ಮದುವೆಯಾದ ॥
ಆ ಬಳಿಕ ಊರ್ಮಿಳೆಯ ।
(ಪೂತ) ಲಕ್ಷ್ಮಣನು ಕೈಹಿಡಿದನು; ಜನಕ ॥
ಓತು ಭರತ ಶತ್ರುಘ್ನರಿಗಾಗಳೆ

ಪ್ರೀತಿಯ ತಮ್ಮನ ಕುವರಿಯರಿಬ್ಬರ
ನೀತಿಯಂತೆ ಧಾರೆಯನೆರೆದನು; (ವಿ
ಖ್ಯಾತರಾದರಾ ನಾಲ್ವರು ಧರೆಯಲಿ) ॥೨॥
ಆಗ ತಾನೆ ಯೌವನದಲಿ ಕಾಲಿಟ್ಟ ॥ ರಾಜನ್ಯ ಕುಮಾರರು ।
ಭೋಗಕಾಮರಾಗಿರೆ ನವಪತ್ನಿಯರು ॥
ತಾಗಿದಂತೆ ಶನಿ ದುಃಸ್ಥಿತಿಗಿಳಿದರು ।

**ಲಕ್ಷ್ಮಣ :** ಚೆನ್ನಾಗಿದೆ ಕಥೆ.

**ಲವಕುಶರು:** (ಸ್ವಲ್ಪ ವಿರಾಮ ತೆಗೆದುಕೊಂಡಾಗ)

**ರಾಮ :** ತಡಮಾಡಬೇಡಿರಿ; ಬೇಗನೆ ಹಾಡಿರಿ.
ಆಗ ತಂದೆ ಮುಪ್ಪಾಗಿದ್ದನು ತಲೆ
ಗಾಗ ಕಾಕಪಕ್ಷಗಳು ನಮಗೆ ಮ–
ತ್ತಾಗ ತೋಟದಲಿ ಗಿಡಮರ ಚಿಕ್ಕವು ॥೩॥

**ಕುಶಲವರು:** ರಾಮಚಂದ್ರನಿಗೆ ಕಟ್ಟಲು ಪಟ್ಟವನು ॥
ಸಿದ್ಧತೆಯನು ಮಾಡಿರೆ ।
ಧಾಮಕೆಯ್ದೆ ಮಾತಾಮಹನಾ ಭರತ ॥

**ರಾಮ :** (ಸ್ವಗತ) ಖಂಡಿತವಾಗಿ ನಮ್ಮ ನಡುವಿನ ತಾಯಿಯನ್ನು ಇವರು ದೂರುತ್ತಾರೆ. (ಪ್ರಕಾಶ) ಅದನ್ನು ಬಿಟ್ಟು ಸೀತಾಪಹರಣದ ಅನಂತರದ ವೃತ್ತಾಂತವನ್ನು ಹಾಡಿರಿ.

**ಲವಕುಶರು:** ಕಾಲ ಕಳೆಯೆ ಶೂರ್ಪಣಖೆಯ ಮುಖದಿಂ।
ಕೇಳಿ ರೂಪ ಸೌಂದರ್ಯವ ಸೀತೆಯ ।
ಜಾಲ್ಮ ಲಂಕೆಗವಳಂಗವನೊಯ್ದರು ।
ಕೀಳದಾದ ಚಾರಿತ್ರದ ಮೂಲವ ॥೪॥

**ಲಕ್ಷ್ಮಣ :** (ರಾಮನನ್ನು ನೋಡುತ್ತಾನೆ)

**ಕುಶಲವರು:** ಬಳಿಕ ರಾಮ ಕಪಿಸೈನ್ಯದ ಬಲದಿಂದ ॥
ಕಟ್ಟಿದ ಸೇತುವೆಯನು ।
ಜಲಧಿಗಂತು ಲಂಕೆಗೆ ದಾಳಿಯನಿಟ್ಟ ॥
ಕೊಲಲು ರಾವಣನ ಯತ್ನಿಸಿ ಗೆದ್ದನು ।
ಲಲನೆ ಸೀತೆಯನು ಕೂಡಿ ಪುಷ್ಪಕದಿ
ನಲವಿನಿಂದಯೋಧ್ಯೆಗೆ ಮರಳಿದ (ನಾ
ಗೆಲುವನೆಲ್ಲರೂ ಮೆಚ್ಚಿದರೊಗುಮಿಗೆ) ॥೫॥

**ರಾಮ :** ಎಷ್ಟು ಸಂಕ್ಷೇಪವಾಗಿದೆ ಕಥೆ!

**ಕುಶಲವರು:** **ಪಡೆದು ರಾಜ್ಯವನು ಬಳಿಕಾ ದಾಶರಥಿ ॥**
**ಜನವಾದಕೆ ಹೆದರುತ ।**
**ಬಿಡು ಅರಣ್ಯದಲಿ ಸೀತೆಯ ನೀನೆಂದು ॥**
**ಒಡನೆ ಲಕ್ಷ್ಮಣನಿಗಾಣತಿ ಕೊಡಲವ ।**
**ನಡೆದ ರೋದಿಸುವನಾಥೆಯ ರಾಘವ**
**ನೊಡಲ ಪುಣ್ಯ ಸಂತತಿಯನು ಹೊತ್ತಿಹ**
**ಬಡವೆ ಜಾನಕಿಯನಡವಿಗೆ ಬಿಸುಟು ॥೬॥**

**ಲಕ್ಷ್ಮಣ :** ಅಯ್ಯೋ, ಈ ಲಕ್ಷ್ಮಣ ಅಪಯಶಸ್ಸಿಗೆ ಗುರಿಯಾದ !

**ರಾಮ :** ನಿನ್ನದೇನಿದೆ ಇದರಲ್ಲಿ ತಪ್ಪು? ಇವೆಲ್ಲವೂ ರಾಮಪರಾಕ್ರಮದ ಗೀತಗಳು! ಪೂಜ್ಯ ತಾಪಸಕುಮಾರರೇ, ಮುಂದೆ ಹಾಡಿರಿ.

**ಕುಶಲವರು:** ಇಷ್ಟೇ ನಮಗೆ ಕಲಿಸಿದ ಕಾವ್ಯಗೀತ.

**ರಾಮ :** (ಉದ್ವೇಗದಿಂದ) ಲಕ್ಷ್ಮಣ, ಒಳ್ಳೆಯ ಕಷ್ಟ ಬಂದಿತಲ್ಲ !

**ಕುಶಲವರು:** **ಜನಕಜಾತೆ ನೈರಾಶ್ಯದಿಂದ ನರಳಿ ॥**
**ಮೂರ್ಛಿತೆಯಾದಳು ತಾ ।**
**ಮುನಿಯು ಮುಗಿಸಿದನು ಕಥೆಯನಿಲ್ಲಿಗೇನೇ ॥**
**ಅನುಮಾನಿಸಿ ಅಪ್ರಿಯ ವೆನಿಸೀತೀ**
**ಜನರಿಗೆಂದು ಬಗೆದನುಪಮಚತುರನು**
**ಕೊನೆಯಿದೆಂದು ನಮಗರುಹಿರುವನು ನಮ**
**ಗಿನಿತು ಮಾತ್ರ ಗೊತ್ತರಸನೆ ಮನ್ನಿಸು ॥೭॥**

**ಕುಶ :** (ಅಪವಾರ್ಯ) ಈ ಮಹಾರಾಯರು ಸೀತೆಯ ಕಥೆ ಕೇಳಿ ಬಹಳ ವಿಷಾದ ಪಟ್ಟಿದ್ದಾರೆ. ಆದ್ದರಿಂದ ಇವರಿಗೀಗ ಪ್ರಶ್ನೆ ಹಾಕುತ್ತೇನೆ.

(ಲಕ್ಷ್ಮಣನನ್ನು ಕುರಿತು)

**ರಾಮಾಯಣ ಕಥೆಯ ನಾಯಕರು ನೀವೇನೇ?**

**ಲಕ್ಷ್ಮಣ :** ದುಃಖಭಾಗಿಗಳಾದ ಅವರು ನಾವೇ.

**ಕುಶ :** ಸೀತೆಯನ್ನು ಕಾಡಿಗೆ ನೀನು ಕರೆದೊಯ್ದು ಬಿಟ್ಟೆಯಾ?

**ಲಕ್ಷ್ಮಣ :** (ನಾಚಿಕೆಯಿಂದ) ಹತಭಾಗ್ಯನಾದ ನಾನೇ.

**ಕುಶ :** ಸೀತೆಯು ರಾಮನ ಧರ್ಮಪತ್ನಿಯೇ?

**ಲಕ್ಷ್ಮಣ :** ನಿಜ.

**ಕುಶ :** ಸೀತೆಯ ಅಥವಾ ಅವಳ ಗರ್ಭದ ವೃತ್ತಾಂತವೇನಾದರೂ ನಿನಗೆ ಗೊತ್ತಿದೆಯೇ?

**ಲಕ್ಷ್ಮಣ :** ನೀವು ಹಾಡಿದ್ದರಿಂದಷ್ಟೇ ನಮಗೆ ಗೊತ್ತು.

**ರಾಮ :** ಇನ್ನುಮುಂದೆ ಇವರೇನು ಮಂಗಲವನ್ನು ಹಾಡಿಯಾರು? (ಆಲೋಚಿಸಿ) ಹೀಗೆ ಕೇಳುತ್ತೇನೆ: ಪೂಜ್ಯ ತಪಸ್ವಿಕುಮಾರರೇ, ಇದು ನಿಮ್ಮ ರಾಮಾಯಣಾಭ್ಯಾಸದ ಕೊನೆಯ ಘಟ್ಟವೋ, ಇಲ್ಲವೆ, ಕಾವ್ಯದ ಅಂತ್ಯಘಟ್ಟವೋ?

**ಕುಶ :** ನಮಗೇನೂ ತಿಳಿಯದು.

**ರಾಮ :** ಕಾಶ್ಯಪನನ್ನೇ ಕೇಳಬೇಕಾಯಿತು. ಲಕ್ಷ್ಮಣ, ಕಾಶ್ಯಪನನ್ನು ಕರೆ

**ಲಕ್ಷ್ಮಣ :** (ಹೋಗಿ ಕಾಶ್ಯಪನನ್ನು ಕರೆದುಕೊಂಡು ಬಂದ)

**ಕಾಶ್ಯಪ :** (ನೋಡಿ) (ಸ್ವಗತ)

**ಈ ರಾಮ ನಯನಾಭಿರಾಮನಾಗುವನು ।**
**ಸೀತಾ ಸುತರ್ಕಳಿಂ ಸೇವ್ಯನಾಗುವನು ॥**
**ತಿಷ್ಯ ಮತ್ತಾ ಪುನರ್ವಸುಗಳಿಂದೆಂತು**
**ತಿಂಗಳಾಗುವನೊ ಸಂಸೇವ್ಯತಾನಂತು** ॥೧೬॥

ಹೌದು; ಅಕಸ್ಮಾತ್ತಾಗಿ ಚಂದ್ರನ ಹತ್ತಿರಕ್ಕೆ ಬರುವ ಆ ತಾರೆಗಳಂರೆ ಈ ಕುಶಲವರು ರಾಮಚಂದ್ರನನ್ನು ಸೇರುವ ಕಾಲವೀಗ ಬಂದಿದೆ.

**ಲಕ್ಷ್ಮಣ :** ಅಣ್ಣಾ, ಕಾಶ್ಯಪ ಬಂದ.

**ರಾಮ :** (ನಮಸ್ಕರಿಸಿ) ಈ ಆಸನದಲ್ಲಿ ಕುಳಿತುಕೊಳ್ಳಿರಿ.

**ಕಾಶ್ಯಪ :** (ಕುಳಿತು) ರಾಮಾಯಣದ ವಿಶೇಷ ಭಾಗವನ್ನು ಕೇಳಲು ನಿಮಗೆ ಕುತೂಹಲವಿದ್ದರೆ ಕುಶಲವರು ಎಲ್ಲಿಗೆ ನಿಲ್ಲಿಸಿದರು? ಎಂಬುದನ್ನು ತಿಳಿಸಿರಿ.

**ಲಕ್ಷ್ಮಣ :** 'ಬಡವೆ ಜಾನಕಿಯ ನಡವಿಗೆ ಬಿಸುಟು' ಎಂಬಲ್ಲಿಗೆ ನಿಲ್ಲಿಸಿದರು.

**ಕಾಶ್ಯಪ :** ಹಾಗಾದರೆ ಮುಂದಿನ ಭಾಗವನ್ನು ಕೇಳಿರಿ.

**ರಾಮ :** ಏನು ಮಾಡಬೇಕಾಯಿತು?

**ಕುಶಲವರು:** ಶ್ರೀರಾಮರ ಪತ್ನಿಯ ಕುಶಲವನ್ನು ಹಾಡುತ್ತಾರೇನು?

**ಕಾಶ್ಯಪ :** **ಅಡವಿಯಲ್ಲಿ ಕೇಳಿಸಲು ಆರ್ತನಾದ**
**ವಾಲ್ಮೀಕಿ ಮಹರ್ಷಿಯು ।**
**ಒಡನೆ ಬಂದ ಶಿಷ್ಯರನು ಕರೆದುಕೊಂಡು ॥**
**'ನಡುಗ ಬೇಡ ಎಲೆ ಮಗಳೆ ತಂದೆ ಸಂ ।**
**ಗಡಿಗ ನಿನ್ನ ಆ ಮಾವ ಕೂಟ; ನಿ–।**
**ನ್ನೆಡರು ಕಳೆವುದಿರು ನನ್ನ ಗುಡಿಸಿಲಲಿ ।**
**ನಡೆ' ಎನ್ನುತ್ತ ಕರೆದೊಯ್ದನಾಶ್ರಮಕೆ ॥೮॥**

**ರಾಮ :** ಪೂಜ್ಯ ವಾಲ್ಮೀಕಿಗಳಿಂದ ರಘುಕುಲ ಅನುಗೃಹೀತವಾಯ್ತು; ನಾನು ಉದ್ಧಾರ ಹೊಂದಿದೆ!

**ಕುಶಲವರು:** ಸುದೈವದಿಂದ ಶ್ರೀರಾಮರ ಹೆಂಡತಿ ಕುಶಲದಲ್ಲಿದ್ದಾಳೆ–ಎಂದಾಯ್ತು!

(ಎಲ್ಲರೂ ಸಂತೋಷವನ್ನು ವ್ಯಕ್ತ ಮಾಡುತ್ತಾರೆ)

**ಕುಶ :** (ಅಪವಾರ್ಯ) ಮಗು, ಲವ! ವಾಲ್ಮೀಕಿಗಳ ತಪೋವನದಲ್ಲಿ ಸೀತೆ ಎಂಬವಳು ಯಾರೋ?

**ಲವ :** ಯಾರೂ ಇಲ್ಲ. ಸೀತೆ ಎಂಬ ಹೆಸರು ವಾಲ್ಮೀಕಿಗಳು ಬರೆದ ರಾಮಾಯಣ ಕಾವ್ಯದಲ್ಲಷ್ಟೇ ಬಂದಿದೆ.

**ರಾಮ :** ಆಮೇಲೆ, ಆಮೇಲೆ.

**ಕಾಶ್ಯಪ :** **ಕಾಲ ತುಂಬಲಾ ಸೀತೆ ಆಶ್ರಮದಲಿ ॥**
**ತಾನೊಂದು ಸುದಿನದಲಿ ।**
**ಬಾಲ ಸೂರ್ಯ ಚಂದ್ರಮರ ಬಾನು ಹಡೆದ ॥**
**ಲೀಲೆಯಿಂದ ಯಮಳರನು ಹಡೆದಳೆನೆ ।**

**ಲಕ್ಷ್ಮಣ :** ಅಣ್ಣ ಯಶಸ್ವಿಯಾಗಲಿ, ದೈವಬಲದಿಂದ ರಘುಕುಲ ಬೆಳೆಯಲಿ!

**ಕುಶಲವರು:** ಮಹಾರಾಜನು ಪುತ್ರಜನ್ಮದಿಂದ ಯಶೋಭಾಗಿಯಾಗಲಿ ।

**ರಾಮ :** (ಸ್ವಗತ) ಅವರು ಕುಶಲವರೇ ಆಗಿರಬಹುದೇ?

**ಕಾಶ್ಯಪ :** **(ಶೀಲಶಾಲಿ) ಮುನಿ ನಾಮಕರಣವನು**
**ಬಾಲಕರಿಗೆ ಕುಶಲವರೆಂದೆಸಗಿದ**
**(ತಾಲಗಾನ ಶರ ವಿದ್ಯೆಗಳರುಹಿದ) ॥೯॥**

**ರಾಮ :** ಅರೇ, ಇವರೇ ಸೀತೆಯ ಮಕ್ಕಳೇನು! ಬಾ ಮಗು ಕುಶ, ಬಾ ಮಗು ಲವ !

**ಲಕ್ಷ್ಮಣ :** ಓಹೋ, ಇವರೇ ಅಣ್ಣನ ಆತ್ಮರೂಪರಾದ ದೇವೀಸುತರು!

**ಕುಶಲವರು:** ಅರೆ, ಇವನೇ ಅವನೇ?

ಅಪ್ಪಾ, ನಮ್ಮನ್ನು ಕಾಪಾಡು.

(ಎಲ್ಲರೂ ಪರಸ್ಪರ ಅಪ್ಪಿಕೊಂಡು ಮೂರ್ಛಿತರಾಗುತ್ತಾರೆ.)

**ಕಾಶ್ಯಪ :** (ವಿಷಾದದಿಂದ) ಇದೇನು ಬಂತಪ್ಪಾ ಫಜೀತಿ!

**ಮಂಗಲ ಕಾವ್ಯದ ಹಾಡಲು ನಾನೀ ।**
**ನಾಲ್ವರು ರಘುವರರು ॥**
**ಸಂಗಡಲೇ ಬುವಿಗುರುಳಿದರಲ್ಲಾ**
**ಏಕಹಿತವ ಪಡೆದು ॥೨೦॥**

ಏಕಕಾಲದಲ್ಲಿ ಅನೇಕರ ಏಕಹಿತ ಹೀಗೇ ಅವರಿಗೆ ದುಃಸಹವಾಗುತ್ತದೆ, ಬಹುಶಃ ಮಾನವಜೀವನದಲ್ಲಿ ! ಒಳ್ಳೆಯದನ್ನು ಮಾಡಹೋದ ಮಂದಭಾಗ್ಯನಾದ ನನ್ನಿಂದ ಇಂಥ ಕೇಡು ಸಂಭವಿಸುವಂತಾಯಿತೇ! (ಚೆನ್ನಾಗಿ ನೋಡಿ)

ಸುದೈವದಿಂದ ಉಸಿರಾಡುತ್ತಿದೆ ಇವರ ಒಡಲುಗಳಲ್ಲಿ. ಪೂಜ್ಯರಿಗೂ ದೇವಿಗೂ ಈ ವೃತ್ತಾಂತವನ್ನು ತಿಳಿಸುತ್ತೇನೆ.

(ಎಂದು ಹೊರಟುಹೋಗುತ್ತಾನೆ.)

(ವಾಲ್ಮೀಕಿ-ಸೀತೆಯರು ತ್ವರೆಯಿಂದ ಬರುತ್ತಾರೆ)

ವಾಲ್ಮೀಕಿ: ಮಗಳೇ, ಬೇಗ ಬಾ, ತಡಮಾಡಬೇಡ; ಮೂರ್ಛೆಗೆ ಕೂಡಲೇ ಮದ್ದು ಮಾಡದಿದ್ದರೆ ಪ್ರಾಣವೇ ಹೋಗಿಬಿಡುತ್ತದೆ!

**ಸೀತೆ :** ನಿಜ ಹೇಳಿರಿ–ರಾಘವರು ಇನ್ನೂ ಪ್ರಾಣ ಹಿಡಿದು ಕೊಂಡಿದ್ದಾರೆಯೇ?

**ವಾಲ್ಮೀಕಿ:** ಸಮಾಧಾನ ತಂದುಕೋ; ರಾಘವರು ಬದುಕಿದ್ದಾರೆ. ಇವರು ಉಸಿರಾಡಿಸುತ್ತಿರುವುದು ಕಾಣಿಸುವುದಿಲ್ಲವೇ ನಿನಗೆ?

**ಸೀತೆ :** ಸರಿಯಾದ ಸಾಕ್ಷಿಯನ್ನೇ ಕೊಟ್ಟಿರಿ, ತಂದೆ!

**ವಾಲ್ಮೀಕಿ:** (ಹುಡುಕುತ್ತ) ಮೈಥಿಲಿ!

**ನೋಡು ಮುಂದೆ ಕಣ್ಣು ತೆರದು**
**ಯತ್ನದಿಂದ ಧೈರ್ಯ ತಳೆದು ।**
**ನಿನ್ನ ಕಥೆಯ ಪ್ರಳಯ ಪವನ**
**ತಂದುದಿವರಿಗಿಂದು ಪತನ ॥೨೧॥**

**ಸೀತೆ :** (ನಾಚಿಕೆಯಿಂದ) ಪೂಜ್ಯರೇ, ಆರ್ಯಪುತ್ರನು ನೋಡಲು ನನಗೆ ಅಪ್ಪಣೆಯನ್ನು ಕೊಟ್ಟಿಲ್ಲ.

**ವಾಲ್ಮೀಕಿ:** (ದೃಢಸ್ವರದಿಂದ) ನಾನಿರುವಾಗ ನಿನಗೆ ನೋಡು ಅಥವಾ ನೋಡಬೇಡ ಎಂದು ಅಪ್ಪಣೆಕೊಡುವ ಅಧಿಕಾರ ಯಾರಿಗಿದೆ? ಹೋಗು ವಾಲ್ಮೀಕಿಯಾದ ನಾನು ನಿನಗೆ ನೋಡಲು ಆಜ್ಞೆಮಾಡುತ್ತೇನೆ; ಕೈ ಹಿಡಿದವನ ಕೈಹಿಡಿ.

**ಸೀತೆ :** (ನೋಡಿ) ಏನು! ಎಲ್ಲರೂ ಹೀಗೆ ಅಚೇತನರಾಗಿದ್ದಾರಲ್ಲಾ! ಅಯ್ಯೋ! (ಬಿದ್ದು ಅಳುತ್ತಾಳೆ.)

**ವಾಲ್ಮೀಕಿ:** ಹೋಗು, ಮೂರ್ಛೆಹೋದ ಇವರನ್ನು ಸಮಾಧಾನಮಾಡು.

**ಸೀತೆ :** ಮೊದಲು ಈ ಹತಭಾಗ್ಯಳಾದ ನಾನು ಮಕ್ಕಳನ್ನು ಸಮಾಧಾನಗೊಳಿಸಲೇ?

**ವಾಲ್ಮೀಕಿ:** ರಾಮಲಕ್ಷ್ಮಣರ ದಯಾದೃಷ್ಟಿಗೆ ಕೂಡ ಈ ಮಕ್ಕಳೇ ಹೆಚ್ಚಿನವರು; ಆದ್ದರಿಂದ ನೀನು ಕುಶಲವರನ್ನು ಸಮಾಧಾನಗೊಳಿಸು! ನಾನು ರಾಮಲಕ್ಷ್ಮಣರನ್ನು ಎಬ್ಬಿಸುತ್ತೇನೆ. ಮಗು, ರಾಮ, ಏಳು! ಮಗು, ಲಕ್ಷ್ಮಣ, ಏಳು! ಸಮಾಧಾನವನ್ನು ತಂದುಕೊಳ್ಳಿರಿ.

**ಸೀತೆ :** ಮಗು, ಕುಶ, ಏಳು! ಮಗು, ಲವ, ಏಳು! ಸಮಾಧಾನವನ್ನು ತಾಳಿರಿ. (ಎಂದು ತಲೆಗೆ ನೀರು ಹಾಕಿ ತಟ್ಟುತ್ತಾಳೆ)

**ರಾಮ :** (ಎಚ್ಚತ್ತು) ಪೂಜ್ಯ ಕಾಶ್ಯಪ, ಸೀತೆ ಬದುಕಿದ್ದಾಳೆಯೇ?

**ವಾಲ್ಮೀಕಿ:** ನಿನ್ನ ಎದುರಿಗೇ ಇದ್ದಾಳೆ.

**ರಾಮ :** (ನೋಡಿ) ಏನು, ಪೂಜ್ಯವಾಲ್ಮೀಕಿಗಳು ! ಪೂಜ್ಯರೇ, ಎಲ್ಲಿಂದ ಬಂದಿರಿ, ಹೇಗೆ ಬಂದಿರಿ ಇಲ್ಲಿಗೆ? (ನಾಚುತ್ತಾನೆ).

**ವಾಲ್ಮೀಕಿ:** ಇಲ್ಲಿ ನಾಚಿಕೊಳ್ಳಬೇಕಾದ್ದೇನೂ ಇಲ್ಲ; ಹೆಂಡತಿಯ ಬಗ್ಗೆ ಅಲ್ಲವೇ ಅನುಕಂಪ ತೋರಿದ್ದು?

**ಲಕ್ಷ್ಮಣ :** (ದೀರ್ಘವಾಗಿ ಉಸಿರುಬಿಡುತ್ತ ಎದ್ದು) ಅಣ್ಣ ಎಚ್ಚತ್ತನೇ?

**ರಾಮ :** ಮಂದಭಾಗ್ಯನಾದ ನಾನು ಎಚ್ಚತ್ತಿದ್ದೇನೆ.

**ಕುಶಲವರು:** (ಎಚ್ಚತ್ತು) ಅಪ್ಪಾ, ಕಾಪಾಡು ನಮ್ಮನ್ನು. (ಎಂದು ಪಾದಗಳ ಮೇಲೆ ತಲೆಯಿಟ್ಟು ಅಳುತ್ತಾರೆ)

**ರಾಮಲಕ್ಷ್ಮಣರು:** (ಅಪ್ಪಿ ಸಮಾಧಾನಮಾಡುತ್ತ) ಮಕ್ಕಳೇ, ಗಾಬರಿಯಾಗಬೇಡಿರಿ, ಸಮಾಧಾನ ತಾಳಿರಿ.

**ವಾಲ್ಮೀಕಿ:** (ಜೋರಾಗಿ) ಆ ! ಅಪ್ಪನನ್ನು ಕಂಡು ಹೆಚ್ಚಿಕೊಂಡ ಮಕ್ಕಳೇ ! ಎಲ್ಲಿ ಯಾರ ಎದುರು ನೀವು ಅಳುತ್ತಿದ್ದೀರಿ? ಈಗ ಕಣ್ಣೊರಸಿಕೊಳ್ಳಿರಿ.

**ಕುಶಲವರು:** (ಕಣ್ಣೊರಸಿಕೊಂಡು ರಾಮನನ್ನು ನೋಡುತ್ತ ನಿಲ್ಲುತ್ತಾರೆ)

**ಸೀತೆ :** (ಅಪವಾರ್ಯ) ನೀವು ನೋಡಿದ ಈತ ಯಾರು?

**ರಾಮ :** ಅರೇ! ಸೀತೆ ಇಷ್ಟು ಉದಾಸೀನೆಯಾಗಿದ್ದಾಳೆ! ಇಷ್ಟು ದೀರ್ಘ ಕಾಲವಾದ ಮೇಲೆ ನನ್ನನ್ನು ನೋಡಿದರೂ ಮುಗುಳುನಗೆಯಾಡಿ ಕೂಡ ನನ್ನನ್ನು ಮನ್ನಿಸುವುದಿಲ್ಲವಲ್ಲ!

**ವಾಲ್ಮೀಕಿ:** (ಸಿಟ್ಟಿನಿಂದ) ಎಲೈ ರಾಜನೇ, ನೀನು ಬಹಳ ಸಂಭಾವಿತ, ಸ್ನೇಹಮಯ, ಮಹಾಕುಲೀನ, ವಿವೇಕಸಂಪನ್ನ–ನನಗೆಲ್ಲಾ ಗೊತ್ತಿದೆ! ಜನಕನು ಧಾರೆಯೆರೆದು ಕೊಟ್ಟ, ದಶರಥನು ನಿನಗಾಗಿ ಸ್ವೀಕರಿಸಿದ, ಅರುಂಧತಿಯು ಮಂಗಲೆಯನ್ನಾಗಿ ಮಾಡಿದ, ವಾಲ್ಮೀಕಿಯು ದೆಸೆಯಿಂದ ವಿಶುದ್ಧಚಾರಿತ್ರಳಾದ, ಅಗ್ನಿಯು ಶುದ್ಧಳೆಂದು ಅನುಭವದಿಂದ ಕಂಡಿರುವ, ಕುಶಲವರ ತಾಯಿಯಾಗಿರುವ ಮತ್ತು ಭೂಮಿತಾಯಿಯ ಮಗಳಾದ ಸೀತಾದೇವಿಯನ್ನು ಜನಾಪವಾದ ಕೇಳಿದ ಮಾತ್ರದಿಂದ ಬಿಟ್ಟುಬಿಡುವುದು ಯುಕ್ತವೇನು?

**ರಾಮ :** (ಸಂಕಟಪಡುತ್ತಾನೆ)

**ವಾಲ್ಮೀಕಿ:** ಲಕ್ಷ್ಮಣ, ನ್ಯಾಯವೇನಿದು? ಅಥವಾ ನಿನ್ನನ್ನು ಬೈದು ಏನು ಫಲ? ನೀನು ಎಷ್ಟಾದರೂ ಕಿರಿಯ, ಹೇಳಿದ್ದನ್ನು ಮಾಡುವವ. (ರಾಮನನ್ನು ಕುರಿತು) ರಾವಣನನ್ನು ಕೊಂದ ಬಳಿಕ ಯಾರ ಸಾಕ್ಷಿಯಿಂದ ಸೀತೆಯನ್ನು ನೀನು ಮತ್ತೆ ಕರೆದುಕೊಂಡೆ?

**ರಾಮ :** ಅಗ್ನಿ ಸಾಕ್ಷಿಯಿಂದ.

**ವಾಲ್ಮೀಕಿ:** ಅಗ್ನಿಸಾಕ್ಷಿಯಿಂದ ಉಂಟಾದ ವಿಶ್ವಾಸವು ಸಡಿಲವಾಗಲು ಕಾರಣವೇನು?

**ಸೀತೆ :** ಅಯ್ಯೋ, ಅಧನ್ಯೆಯಾದ ನನಗಾಗಿ ಆರ್ಯಪುತ್ರನು ಹೀಗೆ ಬಯ್ಯಿಸಿಕೊಳ್ಳಬೇಕಾಯಿತಲ್ಲಾ (ಕಿವಿ ಮುಚ್ಚಿಕೊಳ್ಳುತ್ತಾಳೆ).

**ವಾಲ್ಮೀಕಿ:** **ಅಗ್ನಿಪ್ರಮಾಣದಿಂದೀ ಕುಶಲವರ ತಾಯಿ ।**
**ಶುದ್ಧಳೆಂದಾದ ಮೇಲೆ ॥**
**ಮಗ್ನವಾಯ್ತೇಕೆ ಮನ ಹೇಳಕೇಳುವರಿರದ ।**
**ಕ್ಷುದ್ರ ಜನವಾದದಲ್ಲಿ?** ॥೨೨॥

**ರಾಮ :** ರಾಜನಾದವನು ಜನಸೇವಕನೆಂಬ ನಂಬಿಗೆಯಿಂದ.

**ವಾಲ್ಮೀಕಿ:** ಏನು, ಜನಸೇವಾಧಿಕಾರದಿಂದ ನನ್ನನ್ನು ಮೀರಿ ಹೋಗುತ್ತಿದ್ದಾನಲ್ಲ ಇವನು!

**ಕ್ಷುದ್ರ ಜನರೆ ಬೇಕು, ಅವರ ಹೃದಯ ಬಹಳ ಸರಳ ।**
**ಹತ್ತು ಜನರು ಬದುಕುವಂತೆ ಬದುಕದವರು ವಿರಳ ॥**
**ಅವರ ಮನದೊಳಳ್ತಿಯಿಹುದು ಸಹಜ; ಆದರಿಂಥ ।**
**ಮಲಿನ ಹೃದಯದರಸುಮಕ್ಕಳದ್ದೆ ಬೇರೆ ಪಂಥ ॥**
**ಬರಿಯ ಮಳಲ ರಾಶಿಯಲ್ಲಿ ಹುಡುಕಹೋದರೊಬ್ಬ**
**ತಿಲವ ಕಾಣಬಲ್ಲನೆಂತು? (ಮಳಲೊಳೆಣ್ಣೆಯುಂಟೆ?) ॥೨೩॥**

ಮಗಳೇ, ಏನಿವನ ಹತ್ತಿರ ವಾದ–ಪ್ರತಿವಾದ? ಈ ಕುಶಲವರನ್ನು ಕರೆದುಕೋ, ನಡೆ, ಹೋಗೋಣ ನಮ್ಮ ಆಶ್ರಮಕ್ಕೆ (ಎಂದು ಹೊರಡುತ್ತಾನೆ).

**ರಾಮ**
**ಲಕ್ಷ್ಮಣರು:** ಪೂಜ್ಯರೇ, ಕೋಪಿಸಿಕೊಳ್ಳಬೇಡಿರಿ, ಬನ್ನಿರಿ.

**ವಾಲ್ಮೀಕಿ:** (ಹಿಂದಿರುಗಿ) ವೈದೇಹಿ, ಇಂಥ ಜನಸೇವಕ ಮಹಾರಾಜನು ತಪೋವನಕ್ಕೆ ನಾನು ಹಿಂದಿರುಗಿದರೆ ನನ್ನ ಮೇಲೆ ದಂಡವನ್ನು ವಿಧಿಸಿಯಾನು! ಆದುದರಿಂದ ನೀನೀಗ ಆತ್ಮಶೋಧ ಮಾಡಿಕೊಂಡು ಒಂದು ಹೇಳಿಕೆಯನ್ನು ಈ ರಾಜಾಸ್ಥಾನದಲ್ಲೇ ಕೊಟ್ಟುಬಿಡು.

**ಸೀತೆ :** ನಾನು ಹೇಗೆ ಆತ್ಮಶೋಧವನ್ನು ಮಾಡಿಕೊಳ್ಳಲಿ?

**ವಾಲ್ಮೀಕಿ:** ಒಳಗಣ್ಣನ್ನು ತೆರೆದು. ಆತ್ಮಸಾಕ್ಷಿಯ ಹೇಳಿಕೆಯಿಂದ ನೀನು ಪಾಪರಹಿತಳೆಂದು ಜಗತ್ತಿಗೆ ಗೊತ್ತಾಗುತ್ತದೆ.

**ಸೀತೆ :** (ನಾಚಿ) ಜನಮಧ್ಯದಲ್ಲಿ ನಿಂತು ನಾನೀಗ ಈ ಪ್ರಕಾರ ಹೇಳಿಕೆಯನ್ನು ಸಲ್ಲಿಸುತ್ತೇನೆ: ವಿದೇಹರಾಜನ ಮಗಳಾದ ಈ ಮಂದಭಾಗಿನಿಯು ಅಕಳಂಕ ಚಾರಿತ್ರಸಂಪನ್ನೆ.

**ವಾಲ್ಮೀಕಿ:** ಈ ಮಾತನ್ನು ಸಾರಿಹೇಳು, ವಿಕಾರಕ್ಕೆ ತಕ್ಕಂತೆ ಪ್ರತೀಕಾರ ನಡೆಯಲಿ.

**ಸೀತೆ :** ಗುರುಗಳ ಆಜ್ಞೆ ಅನುಲ್ಲಂಘನೀಯ.

(ಕೈ ಮುಗಿದು ಸುತ್ತಲೂ ನೋಡಿ)

ಲೋಕಪಾಲಕರೇ, ಗಗನಮಧ್ಯಸ್ಥರಾದ ದೇವತೆಗಳೇ, ಗಂಧರ್ವ ಸಿದ್ಧ ವಿದ್ಯಾಧರರೇ, ಯೋಗಪ್ರಜ್ಞೆಯಿಂದ ಸರ್ವಲೋಕರಹಸ್ಯಗಳನ್ನು ಅರಿತ ವಾಲ್ಮೀಕಿ–ವಿಶ್ವಾಮಿತ್ರ–ವಸಿಷ್ಠ ಮೊದಲಾದ ಋಷಿಗಳೇ, ರಾಘವಕುಲ ಪಿತಾಮಹನೂ ಸಕಲ ಲೋಕಗಳ ಶುಭಾಶುಭಗಳಿಗೆ ಸಾಕ್ಷಿಯೂ ಆದ ಸೂರ್ಯದೇವನೇ, ಕೇಳಿರಿ: ಸೀತೆಯೀಗ ತನ್ನ ಚಾರಿತ್ರ ಶುದ್ಧಿಯನ್ನು ಉದ್ದೇಶಿಸಿ ಹೀಗೆ ಸತ್ಯವನ್ನು ಸಾರುತ್ತಾಳೆ.

**ವಾಲ್ಮೀಕಿ:** ಮಹಾಪ್ರಭಾವದಿಂದ ಎಳೆತರಲಾದ, ಸೀತೆಯ ಘನತೆಗೆ ಸಂಬಂಧಿಸಿದ ಆಶ್ಚರ್ಯವನ್ನೀಗ ನೀವು ನೋಡಲಿದ್ದೀರಿ.

**ಎಲ್ಲರೂ:** (ಆಶ್ಚರ್ಯದಿಂದ) ಆಶ್ಚರ್ಯ, ಆಶ್ಚರ್ಯ! ಏನಿದು? ಸೀತಾದೇವಿಯ ಮಾತು ಮುಗಿಯುವಷ್ಟರಲ್ಲೇ ಸ್ಥಾವರ–ಜಂಗಮಗಳಿಂದ ತುಂಬಿದ ಇಡೀ ಜಗತ್ತೇ ನಿಃಶಬ್ದವಾಗಿ, ನಿಷ್ಕ್ರಿಯವಾಗಿ ಆಲಿಸಲು ಸಿದ್ಧವಾದಂತೆ ತೋರುತ್ತಿದೆಯಲ್ಲ! ಅದೋ ನೋಡಿರಿ–

**ಅಲೆಗಳನು ಹಿಡಿತದಲಿ ತಂದುಕೊಂಡು ಕಡಲಾಯ್ತು ಶಾಂತವೀಗ।**
**ಈ ಪ್ರಕೃತಿಚಪಲವಾದನಿಲಗಾಗಸದೊಳಿಲ್ಲ ಚಲನವೇಗ ॥**
**ಭೂಮಿಯನು ಹೊತ್ತ ದಿಗ್ಗಜಗಳೆಲ್ಲ ನಿಂತಿಹವು ಕಿವಿಯ ತೆರೆದು।**
**ಏನಿಳೆಯೆ ಕೇಳಲೀ ಸೀತೆಯುಸಿರುವುದ ಬಂತೊ ಮೈಯ ಮರೆದು ॥೨೪॥**

**ಸೀತೆ :** ಸಕಲ ಲೋಕಗಳ ಮಹತ್ವಾಕಾಂಕ್ಷೆಗಳ ಸಿದ್ಧಿಗೆ ಆಧಾರಭೂತನಾಗುವುದರ ಮೂಲಕ ಗುರ್ವಾಜ್ಞೆಯನ್ನು ಪಾಲಿಸಿದ, ಮಹಾಪರ್ವತಗಳನ್ನು ಕಿತ್ತು ತಂದು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿಸಿದ, ಸುರಾಸುರಲೋಕಗಳಲ್ಲಿ ಏಕೈಕ ಧನುರ್ಧರನಾದ ಮತ್ತು ರಘುಕುಲದಲ್ಲಿ ಹುಟ್ಟಿ ರಾಘವರಿಗೆ ಸಂತೋಷವನ್ನು ಉಂಟುಮಾಡಿದ ನಿನ್ನನ್ನು ಬಿಟ್ಟು ಅಪತಿವ್ರತಾಭಾವದಿಂದ ಇನ್ನಾರನ್ನೂ ಕಣ್ಣಿಂದ ನೋಡದ, ಮಾತಾಡಿಸದ, ಮನಸಾ ಚಿಂತಿಸದ ನನ್ನ ಚಿತ್ತದ ಶುದ್ಧಿಯನ್ನು ಈ ಸತ್ಯವಚನದಿಂದ (ಸಾರುತ್ತೇನೆ). ಇದನ್ನು ಎಲ್ಲ ಲೋಕಗಳಿಗೂ ಪ್ರತ್ಯಕ್ಷವಾಗಿ ಕಾಣುವ ದಿವ್ಯರೂಪವನ್ನು ಧರಿಸಿ ಮಹಾ ಪ್ರಭಾವಶಾಲಿನಿಯಾದ ದೇವತೆ ಲೋಕಕ್ಕೆ ಪ್ರಕಟಗೊಳಿಸಲಿ.

(ಎಲ್ಲರೂ ಗಡಬಡಿಸುತ್ತಾರೆ!)

**ವಾಲ್ಮೀಕಿ:** ಇದೇನಿದು? ಲೋಕದಲ್ಲೀಗ ಅವ್ಯಕ್ತಭೀಷಣವಾದ ಸ್ಥಿತ್ಯಂತರ ಉಂಟಾಗಿದೆಯಲ್ಲ!

**ಬಾನ್‌ಬಿಲವ ತುಂಬುತಿದೆ ಪಾತಾಳದಿಂದೆದ್ದ ಸಂಘರ್ಷನಾದ ॥**
**ಕುಂಟರಂದದಿ ಗಿರಿಗಳತ್ತಿತ್ತ ಸರಿಯುತಿವೆ ಮಂದಗತಿಯಿಂದ ॥**
**ಕಡಲು ಕಡೆದಾಗ ನೊರೆಯೆದ್ದು ನಗುವಂತೀಗ ನಗುತಲಿದೆ ನೋಡು ॥**
**ತೀರದಲ್ಲಿಯ ಕಾಡ ಗಿಡಗಳನು ಲವಣಜಲ ಉಲ್ಲಂಘಿಸಿದೆ ಹೋ ! ॥೨೫॥**

(ಸೀತೆಯನ್ನು ಕುರಿತು) ದೇವತೆ ಬರುವ ಎಲ್ಲ ಲಕ್ಷಣಗಳೂ ಕಂಡು ಬರುತ್ತಿವೆ. ಮತ್ತೊಂದು ಸತ್ಯವನ್ನು ಸಾರು.

**ಸೀತೆ :** (ಸಕಲ ಲೋಕಗಳ... ಎಂದು ಮುಂತಾಗಿ ಪುನಃ ಸಾರುತ್ತಾಳೆ)

(ತೆರೆಯಲ್ಲಿ)

ಗೋವುಗಳಿಗೆ ಒಳಿತಾಗಲಿ, ಬ್ರಾಹ್ಮಣರಿಗೆ ಒಳಿತಾಗಲಿ, ರಾಘವರಿಗೆ ಒಳಿತಾಗಲಿ!

**ಮಿಥಿಲೆಯರಸನ ಮಗಳ ಸತ್ಯವು**
**ಗತಿಸಿ ಪಾತಾಳಕ್ಕೆ ಎಳೆಯಲು**
**ಪ್ರಥಿತ ಪೃಥಿವಿಯು ತನ್ನ ನಿಶ್ಚಲ ಭೂಶರೀರವನು ।**
**ಪತಿಸಿ ನೀರಿಂದೆಯ್ದು ಬಂದವೊ–**
**ಲತಿ ಮಹಾ ದಿವ್ಯಾಕೃತಿಯೊಳೀ**
**ವಿತತಮಧ್ಯಮಲೋಕದಲಿ ಜಲರಶನೆ ಮೂಡಿಹಳು ॥೨೬॥**

ಎಲ್ಲರೂ (ಕೇಳಿ ವಿಸ್ಮಯಪಡುತ್ತಾರೆ)

**ವಾಲ್ಮೀಕಿ:** ಇಂಥ ಆಶ್ಚರ್ಯಕಾರಕ ಘಟನೆಗಳು ಒಂದಾದ ಮೇಲೆ ಒಂದರಂತೆ ನಡೆದುದನ್ನು ಈವರೆಗೆ ಯಾರೂ ಕಂಡಿಲ್ಲ, ಕೇಳಿಲ್ಲ !

**ನಾಗಭವನದಿಂದೇಳುತಿರುವುದಗೊ ಬೆಳಕು ದಿಗ್ದೆಸೆಗಳ ।**
**ಸಾಗಿ ತುಂಬುತಿದೆ ಹೊತ್ತ ಕಂಪ ಪದ್ಮಾದಿ ಪುಷ್ಪಿಕೆಗಳ ॥**
**ಮಂದ ಮಂದ ಗತಿಯಿಂದ ಬಂದು ಪಾತಾಳದಿಂದ ಗಾಳಿ ।**
**ವಂದಿಸೆತ್ತಿ ಕೈಗಳನು ದೊರೆಯೆ ಭೂದೇವಿ ರೂಹುದಾಳಿ ॥**
**ಬರುತಲಿಹಳದೋ ಮೆಲ್ಲ ಮೆಲ್ಲನಾ: ಚೆಲ್ಲಿ ಹೂಗಳನ್ನು ।**
**ಕರೆಯಿರವರನಾದರದೆ ಲಕ್ಷ್ಮಣಾ ಕುಶಲವರೇ ಇನ್ನು ॥೨೭॥**

**ಎಲ್ಲರೂ:** (ಹೇಳಿದ ಹಾಗೆ ಮಾಡುತ್ತಾರೆ) (ಕೈ ಜೋಡಿಸಿ)

**ಚರವನೆಲ್ಲ ನೀ ಹೊತ್ತೆ ನಿನ್ನನು ಅನಂತ ।**
**ತಲೆಯ ಮೇಲೆ ತಾ ಹೊತ್ತ ಧೇನುವಾದಂಥ ॥**
**ಚೆಲುವೆ ನಿನ್ನ ಕರೆದಿಷ್ಟವನ್ನು ಸುರವೃಂದ ।**
**ನಲಿಯಿತಿಂದು ಪಡೆದೇನೆಂಬೆವು ಬಿಸವಂದ॥೨೮॥**

**ಬಿಂಜ ಬೆಳ್ಳಿಬೆಟ್ಟಗಳು ನಿನ್ನ ಮೊಲೆ ಕಾಣಾ ।**
**ಗಂಗೆ ಕುತ್ತಿಗೆಯ ಹಾರ ಕಡಲು ಒಡ್ಯಾಣ ॥**
**ಯಾಗವಸ್ತುಗಳಿಗಾಗಿ ಮಳೆಯ ಸುರಿಸ್ಯಾನು ।**
**ಭೋಗರಾಜ ನಿನ್ನಲ್ಲಿ ಭಕ್ತಿ ಹರಿಸ್ಯಾನು ॥೨೯॥**

**ಮುತ್ತು ರತ್ನಗಳ ಗಣಿಯೆ ನೀ ವಸುಂಧರಾ ।**
**ಹೆತ್ತು ಸಾಕಿರುವ ತರುಗಳಿಂದ ನಿರ್ಭರಾ ॥**

(ಉತ್ತಮೋತ್ತಮರ ಕರ್ಮದಾಶ್ರಯಸ್ತರಾ ।
ನಿತ್ಯಮೂರ್ಖರನು ಕ್ಷಮಿಸಿತಿದ್ದುವಧ್ವರಾ। ॥೩೦॥

ಭಗವತಿ ವಿಶ್ವಂಭರೇ, ನಿನಗೆ ನಮಸ್ಕಾರ !

**ಭೂದೇವಿ:** (ಸುತ್ತಲೂ ನೋಡಿ) ಎದುರು ನಿಂತ ಪತಿವ್ರತೆಯರ ಆಜ್ಞೆ ಅನುಲ್ಲಂಘನೀಯವಲ್ಲವೇ?

ಸ್ವರ್ಗ ಮರ್ತ್ಯಗಳನ್ನು ವ್ಯಾಪಿಸಿದ ರವಿಕಿರಣ
ನುಗ್ಗಲಾರದು ನನ್ನ ಮನೆಯ, ಹಕ್ಕಿಗಳೊಡೆಯ
ಬಗ್ಗಿ ಮೆಲ್ಲಗೆ ಬರುವ ವೇಗವಳಿಯದ ಹೊರಲು
ಗಾಂಭೀರ್ಯಕಂಜಿ ಅದರ ॥

ಅಗ್ರಪಂಕ್ತಿಗೆ ಸೇರದಲ್ಪ ತಾಪಸರಲ್ಲಿ
ವ್ಯಗ್ರಪ್ರಯತ್ನಗಳ ಮಾಡಿಯೂ ಸೇರದಾ
ದುರ್ಗಮಸ್ಥಳವಾದ ಪಾತಾಳದಿಂದೆನ್ನ ತಂದಳಿವಳಿಷ್ಟು ದೂರ ॥೩೧॥

ಆದುದರಿಂದ ಇವಳನ್ನೇ ಮಾತಾಡಿಸುತ್ತೇನೆ: ಮಗಳೇ, ಮೈಥಿಲಿ, ನಾನೀಗ ಏನು ಮಾಡಿಕೊಡಲಿ?

**ಸೀತೆ :** (ಆಶ್ಚರ್ಯದಿಂದ ನೋಡಿ) ಭಗವತಿ, ನೀನು ಯಾರು?

**ಭೂದೇವಿ:** ನಾನು ಯಾರೆಂದು ನಿನಗೆ ಗೊತ್ತಾಗಲಿಲ್ಲವೇ?

ಮುನಿಯೆಂಬನೆನ್ನನೋಂಕಾರಕೆರಡನೆಯವಳು
ಜನನಿ ನಾನೀಯೆಲ್ಲ ಜಂಗಮಸ್ಥಾವರಕೆ ।
ನನ್ನಲ್ಲಿಯೇ ತಪಸ್ಸಿದ್ಧಿ ಮಾನವಕುಲದ
ನಿನ್ನೆಡೆಗೆ ಬಂದಿರುವ ನಾನು ಭೂದೇವಿ ಕೇಳ್ ॥೩೨॥

ಬಹಳ ಹಿಂದೆ ವರಾಹನೊಬ್ಬನೆತ್ತಿದ್ದ ।
ಮಹಿಮೆ ನಿನ್ನದು ನನ್ನನೀಗ ಎತ್ತಿಹುದು ॥
ಮಗಳೆ, ಬೇಕೇನು (ಹೇಳಭಿಜಾತಚರಿತೆ
ವಿಗಡಿಸಿದುದೇನಿಲ್ಲಿ ದಿವ್ಯಗುಣಭರಿತೆ?) ॥೩೩॥

**ಸೀತೆ :** (ಕೈಮುಗಿದು) ಭಗವತಿ, ಅನುಕಂಪವನ್ನು ತಾಳಿ ನಿನಗೆ ಕಂಡಂತೆ ನನ್ನ ಆಕಳಂಕಚಾರಿತ್ರವನ್ನು ಲೋಕದಲ್ಲಿ ಪ್ರಕಟಿಸು.

**ಭೂದೇವಿ:** ಹಾಗೇ ಆಗಲಿ. (ಸುತ್ತಲೂ ನೋಡಿ)

ಋಷಿಗಳೇ, ದಾನವರೇ, ಸಿದ್ಧರೇ, ಯಕ್ಷರೇ ।
ಗಂಧರ್ವ ಕಿನ್ನರ ಪ್ರಭೃತಿ ಸುರರೇ ॥
ದೆಸೆಗಳೊಡೆಯರೆ, ದಿವ್ಯರೇ ಕೇಳಿರೀ ಸೀತೆ ।

**ದಶರಥಾತ್ಮಜರಾಮನಿಷ್ಠೆ ನರರೇ ॥೩೪॥**
**ಕನಸುಮನಸುಗಳಲ್ಲಿ ಕೂಡ ಆತನನುಳಿದು ।**
**ನೆನೆಯಲಿಲ್ಲನ್ಯನನು ತಿಳಿಯಿರಿದನು ॥೩೫॥**

(ಆಕಾಶದಿಂದ ಹೂಮಳೆ ಸುರಿಯುತ್ತದೆ, ದೇವದುಂದುಭಿ ಮೊಳಗುತ್ತದೆ)

ಎಲ್ಲರೂ (ಹರ್ಷದಿಂದ) ಆಹಾ ! ಆಶ್ಚರ್ಯ, ಆಶ್ಚರ್ಯ ! ಭೂದೇವಿ ಸಾರಿದ ಸೀತಾಚಾರಿತ್ರದ ಶುದ್ಧಿಯನ್ನು ಅನುಸರಿಸಿ ಈ ವಿವಿಧ ಆಕಸ್ಮಿಕ ಆವಿರ್ಭೂತಿಗಳು ಸಮರ್ಥಿಸುತ್ತಿವೆ!

**ದಿಕ್ಕುದಿಕ್ಕಿನಲಿ ಮೊಳಗುತಿರುವುವೋ ದೇವದುಂದುಭಿಗಳು ।**
**(ಹೆಕ್ಕಲಾರದಷ್ಟೀಗ) ಬೀಳುತಿವೆ ಕುಂದಕುಡ್ಮಲಗಳು ॥**
**(ರೆಕ್ಕೆದಳೆದೊ ಎನೆ) ಬಾಗಿನಿಂದ ನೆಲದಾಯತತೆಯ ಸುತ್ತ ।**
**(ನಕ್ಕಹಾಗೆ ದಿವ) ಕಾಂತಿವಲಯ ಮೂಡಿರುವುದೇನಿದಿತ್ತ ॥೩೬॥**

(ತೆರೆಯಲ್ಲಿ)

**ಜಯ ಜಯ ದಶರಥ ಸತ್ಯಪಥ ।**
**ಏಕಧನುರ್ಧರ ರಾಜ್ಯಧೃತ ॥**
**ಜಯಜಯ ರಘುಕುಲ ನಷ್ಟಮಲ ।**
**ಜಯ ವೈದೇಹಿ ಚರಿತ್ರಬಲ ॥೩೭॥**

**ಭೂದೇವಿ:** ವೈದೇಹಿ ಶುದ್ಧಳೆಂದು ಒಪ್ಪುವಿರಾ?

**ಎಲ್ಲರೂ :** (ಕೈಜೋಡಿಸಿ)

**ನರವಾದವಾರಿದವು ಸೀತಾಚರಿತ್ರ ಚಂದ್ರಿಕೆಯನ್ನು ಮುಚ್ಚಿದಾಗ ॥**
**ಶರದದೊಲು ಭೂದೇವಿ ತೆರೆದು ತೋರಿದೆ; ಅದರ ಬೆಳ್ವೆಳರು**
**(ಕುಂದದೀಗ) ॥೩೮॥**

(ತಲೆಬಾಗುತ್ತಾರೆ.)

ಈ ಅದ್ಭುತ ದಂಪತಿಗಳು ಮತ್ತೆ ಕೂಡುತ್ತಾರೆಯೇ?

**ವಾಲ್ಮೀಕಿ:** ರಾಮಚಂದ್ರ, ಪರಿಶುದ್ಧಿಯನ್ನೊಪ್ಪಿ ಸೀತೆಯನ್ನು ಗೌರವದಿಂದ ಪರಿಗ್ರಹಿಸು.

**ರಾಮ :** ಗುರುಗಳು ಹೇಳಿದಂತಾಗಲಿ. ಮಗು, ಲಕ್ಷ್ಮಣ ! ಸೀತೆಯ ಕಾಲಿಗೆ ಬೀಳು.

**ಸೀತೆ :** (ಕೈಮುಗಿದು ಹರ್ಷದಿಂದ) ಆರ್ಯಪುತ್ರನಿಗೆ ಜಯವಾಗಲಿ.

**ವಾಲ್ಮೀಕಿ:** ಆಹಾ! ಈ ಸ್ವೀಕಾರಕ್ರಮವು ಉದಾತ್ತವೂ ಸುಸಂಸ್ಕೃತವೂ ಆಗಿದೆ!

**ಲಕ್ಷ್ಮಣ :** (ಹರ್ಷಲಜ್ಜೆಗಳಿಂದ) ವಧಾರ್ಹ ಪಾತಕಿಯಾದ ಲಕ್ಷ್ಮಣನು ನಿನಗೆ ಎರಗುತ್ತಿದ್ದಾನೆ.

**ಸೀತೆ :** ನೀನೇಕೆ ಆತ್ಮನಿಂದೆ ಮಾಡಿಕೊಳ್ಳುತ್ತೀಯೆ? ಹಿರಿಯನಿಗೆ ವಿಧೇಯನಾಗಿರುವ ನೀನು ಬಹುಕಾಲ ಬದುಕು.

**ವಾಲ್ಮೀಕಿ:** ಮಗು, ರಾಮ? ಈ ಮೂಲಕ ಜಾನಕಿಯ ಸ್ವೀಕಾರ ನೆರವೇರಿದಂತಾಯ್ತು. ಸ್ವತಃ ಇವಳನ್ನು ಮಾತಾಡಿಸಿ ಕೈಹಿಡಿದು ಯಜ್ಞಾಧಿಕಾರದಲ್ಲಿ ನಿಯೋಜಿಸು.

**ರಾಮ :** (ನಾಚಿಕೆಯನ್ನು ವ್ಯಕ್ತಪಡಿಸುತ್ತಾನೆ.)

**ವಾಲ್ಮೀಕಿ:** ನಾಚಿಕೆ ಸಾಕು. ಯಜ್ಞಾಂಗವಿಲ್ಲದೆ ದಾಶರಥಿಯ ಅಪೂರ್ವವಾದ ಸೀತಾಪಾಣಿಗ್ರಹಣವು ಸರ್ವಸಾಕ್ಷಿಕವಾಗುವುದು ಹೇಗೆ?

**ರಾಮ :** ಇದು ಸದಾಚಾರ ಹಾಗೂ ಗುರುವಿನಾಜ್ಞೆ,

(ಸೀತೆಯ ಕೈ ಹಿಡಿದು)

**ಮಂಗಳೆಯಾದ ವೈದೇಹಿಯೇ,**
**ಪುತ್ರಫಲ ಯಜ್ಞಫಲ ದೊರಕುವುದು ಮದುವೆಯಿಂ**
**ದೆಂಬರಮರ ಪ್ರಮುಖರು ॥**
**ಇತ್ತೆ ಮೊದಲಿನ ಫಲವನಾಗಲೇ ಮನೆಯನ್ನು**
**ಮತ್ತೆ ತುಂಬಿಸು, ಬಂದಿರು ॥೩೯॥**

**ಸೀತೆ :** ಆರ್ಯಪುತ್ರ ಆಜ್ಞೆಮಾಡಿದಂತಾಗಲಿ. ಅಬ್ಬಾ, ಈಗ ಎದೆ ಹಗುರವಾಯ್ತು, ಹೋದ ಪ್ರಾಣ ಬಂತು ।

**ಭೂದೇವಿ:** **ಯಜ್ಞಗಳೆಡರಿಲ್ಲದೆ ನಡೆಯಲಿ ದೈ**
**ವಜ್ಞರ ಪೌರೋಹಿತ್ಯದಲಿ ॥**
**ಪರ್ಜನ್ಯನ ಸುರಿಸಲಿ (ಸಮದೃಷ್ಟಿಯ)**
**ನಿರ್ಜಿತಶಂಬರ ಕಾಲದಲಿ ॥**
**ನಿರುಪದ್ರವ ಜೀವನವನು ನಡೆಸಲಿ**
**ಸರುವ ಪ್ರಜೆಗಳು (ಭಾರತದ)**
**ಇರಲು ಪತಿವ್ರತೆ ಸೀತೆ (ಅಯೋಧ್ಯಾ**
**ಪುರಪತಿ) ರಾಮನ ಅಂಕದಲಿ ॥೪೦॥**

(ಅಂತರ್ಧಾನ ಹೊಂದುತ್ತಾಳೆ)

**ರಾಮ :** ಭೂಮಿದೇವಿ ಮಾಯವಾಗಿ ಹೋದಳೇನು?

**ವಾಲ್ಮೀಕಿ:** ದೇವತೆಗಳು ಬಹಳ ಹೊತ್ತು ಮನುಷ್ಯ ಲೋಕದಲ್ಲಿ ಉಳಿಯದಿರುವುದು ಸ್ವಾಭಾವಿಕವಲ್ಲವೇ?

**ರಾಮ :** ಪೂಜ್ಯರ ಅನುಜ್ಞೆಯನ್ನು ಪಡೆದು ನಾನು ಲಕ್ಷ್ಮಣನಿಗೆ ರಾಜ್ಯಾಭಿಷೇಕವನ್ನು ಮಾಡಲು ಬಯಸುತ್ತೇನೆ.

**ಲಕ್ಷ್ಮಣ :** (ಕೈ ಮುಗಿದು) ಪೂಜ್ಯನಾದ ಅಣ್ಣನೇ, ನೀನು ಪ್ರಸನ್ನನಾಗಿದ್ದರೆ ನಿನ್ನ ಮಕ್ಕಳಿಗೆ ಸೇರತಕ್ಕ ರಾಜ–ಯುವರಾಜ ಪದವಿಗಳನ್ನು ಅವರಿಬ್ಬರಲ್ಲಿ ಪಾಲುಮಾಡಿಬಿಡು; ಈ ಲಕ್ಷ್ಮಣನು ಎಂದಿನಿಂದಲೂ ನಿನ್ನ ಅನುಚರನಾಗಿಯೇ ಉಳಿದ ಮತ್ತು ಯಾವಾಗಲೂ ಹಾಗೇ ಉಳಿಯುವ ಬಯಕೆಯುಳ್ಳವನು.

**ವಾಲ್ಮೀಕಿ:** ಇಕ್ಷ್ವಾಕುಕುಲಕ್ಕೆ ತಕ್ಕ ಮಾತನ್ನಾಡಿದೆ ಲಕ್ಷ್ಮಣಾ!

**ರಾಮ :** ಏನು ಮಾಡಲಿ? ಲಕ್ಷ್ಮಣನ ಬೇಡಿಕೆಯನ್ನು ಈ ರಾಮನೆಂದೂ ಬದಿಗಿಡಲಾರನು. ತಮ್ಮನಿಗೀ ಕಾರ್ಯ ಅವಶ್ಯವೆನಿಸಿರುವಾಗ ಇದನ್ನು ನಾನೇ ನೆರವೇರಿಸುತ್ತೇನೆ. ಲಕ್ಷ್ಮಣಾ, ಅಭಿಷೇಕ ಸಾಮಗ್ರಿಗಳನ್ನು ಸಿದ್ಧಮಾಡು.

**ಲಕ್ಷ್ಮಣ :** ಅಣ್ಣಾ, ಏಕನಿಷ್ಠೆಯಿಂದ ದೇವತೆಗಳೀಗ ಅಭಿಷೇಕದ ಸಾಮಗ್ರಿಗಳೆಲ್ಲವನ್ನೂ ತಂದಿಟ್ಟು ಬಿಟ್ಟಿದ್ದಾರೆ! ನೋಡು

**ಬಿಳಿಗೊಡೆಯನು ವಾಸವ ಹಿಡಿದಿರುವನು**
**ಎಳೆಗೂದಲ ಚಾಮರವನು ಜಾಹ್ನವಿ**
**(ಕೆಳೆಮೊಗ) ದಿಂದ್ರಾಣಿಯರಿಕೊ ಹಿಡಿದಿಹರುತ್ಸಾಹದೊಳೀಗ ॥**
**ತಿಳಿನೀರಿನ ಹೊಂಗಳಸಗಳನು ಪ್ರಜೆ**
**ಗಳು ಹಿಡಿದಿಹರಿಂಥವರೀವೈಭವ**
**ಘಳಿಲನೆ ಬಯಸಿದ ಕೂಡಲೆ ದೊರೆಯದು**
**ಸಾಮಾನ್ಯರಿಗೆಂದೂ ॥೪೧॥**

**ರಾಮ :** ಅಭಿಷೇಕದ ಅಧಿಕಾರದಂಡಗಳನ್ನು ಹಿಡಿಯುವವರೀಗ ನಾವಿಬ್ಬರೂ!

**ಲಕ್ಷ್ಮಣ :** ಈ ಅಧಿಕಾರದ ಪಾಲು ನನ್ನ ಮೇಲಿನ ಅನುಗ್ರಹ ಎಂದು ಭಾವಿಸದಿರಲಾದೀತೇ?

**ರಾಮ :** ಲಕ್ಷ್ಮಣಾ, ಹಿಡಿ ಅಧಿಕಾರದಂಡವನ್ನು.
(ವಾಲ್ಮೀಕಿಯನ್ನು ಕುರಿತು)
ಪೂಜ್ಯರೇ, ತಮ್ಮ ಮೊಮ್ಮಗನಿಗೆ ಅಭಿಷೇಕ ಮಾಡಿರಿ.

**ವಾಲ್ಮೀಕಿ:** (ಕಲಶವನ್ನು ಹಿಡಿದು ಹತ್ತಿರ ಹೋಗಿ)

ಎಲೈ ಸಾಕೇತನಗರನಿವಾಸಿಗಳಾದ ಪುರಜನರೇ, ನಾನಾ ದಿಗ್ದೇಶಗಳಿಂದ ಬಂದ ಅರಸುಮಕ್ಕಳೇ, ವಿಭೀಷಣ–ಸುಗ್ರೀವ–ಹನುಮಂತ ಮುಂತಾದ ಮಹಾರಥರೇ, ನೀವೆಲ್ಲರೂ ಕೇಳಿರಿ:

**ಶ್ರೀ ಜನಕಜಾ ಜ್ಯೇಷ್ಠ ಪುತ್ರ (ಶ್ರದ್ಧೇಯ) ।**
**ಮೂಜಗದೊಳಧಿಕಬಲ ಕುಶನಾಮಧೇಯ ॥**
**ರಾಜಿಸುವನೀಗ ಸಾಮ್ರಾಜ್ಯಪಟ್ಟದಲಿ ।**
**ಈ ಜಲವ ಸುರಿವೆ ನೀವಿವನಂಕೆಯಲ್ಲಿ ॥೪೨॥**

**ಬಾಳಲೊಪ್ಪಿಗೆ ಕೊಡಿರಿ, ಆಗು ಕುಶ ಮುಂತೆ**
**ಮೇಲೆ ಸಗ್ಗದೊಳಿರುವ ಮಘವಂತನಂತೆ ॥**
**ಈ ಲೋಕವನ್ನಾಳ್ದ ಮಾಂಧಾತನಂತೆ**
**ಕೇಳು, ಪಾತಾಳವಾಳುವನಂತನಂತೆ ॥೪೩॥**

(ಅಭಿಷೇಕ ಮಾಡುತ್ತಾನೆ)

(ತೆರೆಯಲ್ಲಿ ಕಲಕಲನಾದ)

**ಸೀತೆ :** ಸುದೈವವಶಾತ್ ನನಗೆ ಪ್ರಿಯವಾದುದೇ ಆಯಿತು.

**ರಾಮ :** ಲಕ್ಷ್ಮಣಾ, ನಿನ್ನಿಷ್ಟವನ್ನು ಸಲ್ಲಿಸಿದಂತಾಯ್ತು

**ಎಲ್ಲರೂ:** (ಹರ್ಷವನ್ನು ಹೊಂದುತ್ತಾರೆ.)

**ರಾಮ :** (ಕುಶನನ್ನು ಕುರಿತು) ರಾಜನೇ, ನಿನ್ನ ಅನುಜ್ಞೆಯನ್ನು ಪಡೆದು ನಾನೀಗ ಲವನಿಗೆ ಯೌವರಾಜ್ಯಾಭಿಷೇಕವನ್ನು ಮಾಡಲು ಬಯಸುತ್ತೇನೆ.

**ಕುಶ :** ತಂದೆಯವರು ಅಪ್ಪಣೆ ಮಾಡಿದ ಹಾಗೆ ಆಗಲಿ.

**ರಾಮ :** ತೆಗೆದುಕೊಂಡು ಬನ್ನಿರಿ ಕಲಶವನ್ನು ಬೇಕಾದ ಹಾಗೆ

**ಶ್ರೀಮನ್ಮಹಾರಾಜ ಕುಶಗೆ ಸುಪ್ರಿಯನಾದ ತಮ್ಮ ಲವನೆಂಬ ವೀರ ॥**
**ನಾ ಮಾಳ್ಪೆ ಯೌವರಾಜ್ಯಾಭಿಷೇಕವನಿವಗೆ ಪಡೆದನುಜ್ಞಾಧಿಕಾರ ॥೪೪॥**

**ಎಲ್ಲರೂ:** (ಸಂತೋಷಭರಿತರಾಗುತ್ತಾರೆ.)

**ವಾಲ್ಮೀಕಿ:** ಮತ್ತೇನಿದೆಯಯ್ಯಾ ನಿನಗೆ ನಾನು ಮಾಡಿಕೊಡಬೇಕಾದ ಸಂತೋಷದ ಕೆಲಸ?

**ರಾಮ :** **ನಿಮ್ಮ ನೋಟದಿಂದ ನನ್ನ ಯಜ್ಞಧರ್ಮಚಾರಿಣಿ ।**
**(ಬನ್ನವಳಿದು) ಶುದ್ಧಳಾದ (ಅಮಲಶೀಲಧಾರಿಣಿ) ॥**

ನನ್ನ ತನಯರಲ್ಲಿ ಹಂಚಿಯಾಯ್ತು ರಾಜ್ಯಭಾರವ ।
ಇನ್ನು ಮಾಡಲುಳಿದುದೇನು ಗುರುಗಳಿಗೆ ವಿಚಾರವ ॥೪೫॥

**ವಾಲ್ಮೀಕಿ:** ಆದರೂ ಈಡೇರಲಿ ಈ ಹಾರೈಕೆ.

ಹರಿ ಹರ ಬ್ರಹ್ಮ ಜಲನಿಧಿಗಳಗ್ನಿ ಸುರಪುಷ್ಪ ಗಂಧವಾಹ ।
ಪರಿಕಿಸಲು ಕಾಂಬ ಪಾತಾಳ ಭೂರ್ಭುವಃ ಸುವಗಳಬ್ಧಿಗಾಹ ॥
ವರವೇದ ಮಂತ್ರಗಳು ತಪಸ್ವಿಗಳು ದನಿಗೊಡಲಿ ಶುಭದ ಸೊಲ್ಲ ।
ಕರುಣಿಸಲು ಒಳಿತನೀ ನೃಪಗೆ, ವರ್ಧಿಸಲಿ ಗೋಕುಲಂಗಳೆಲ್ಲ ॥೪೬॥

(ಎಲ್ಲರೂ ಹೋಗುತ್ತಾರೆ)

(ಆರನೆಯಂಕ ಮುಗಿಯಿತು)

**ಕುಂದಕುಸುಮಮಾಲೆ ಸೀತೆ**
**ಗಂಧಸಾರದಿಂದ ಪೂತೆ!**
**ಶೀಲಗಂಧ, ಧರ್ಮರೂಪ–**
**ರಾಮರಾಜ್ಯ ಸುಪ್ರದೀಪ!**

# ಮೊದಲ ಮಾತು

"Readers' Digest'' ನಲ್ಲಿ "ಸುಭಾಷಿತ"ಗಳನ್ನು ಕಂಡವರು ಸಂಸ್ಕೃತ ಸಾಹಿತ್ಯದಲ್ಲಿ ಪ್ರತ್ಯೇಕವಾದ ವಿಭಾಗವೆಂಬಷ್ಟು ದೊಡ್ಡದಾಗಿ ಬೆಳೆದುಬಂದ "ಸುಭಾಷಿತ"ಗಳನ್ನು ನೆನೆದರೆ ಹೋಲಿಕೆ ಸ್ಪಷ್ಟವಾಗುವುದು. ಛಂದೋಬದ್ಧತೆಯು ಸುಭಾಷಿತಕ್ಕೆ ಅನಿವಾರ್ಯವಲ್ಲವಾದರೂ ಸಂಸ್ಕೃತದಲ್ಲಿ ಅದು ಅರ್ಥದ ದೃಷ್ಟಿಯಲ್ಲಿ ಸ್ವಯಂಪೂರ್ಣವಾಗಿರುವ, ನಾಲ್ಕು ಸಾಲುಗಳನ್ನುಳ್ಳ ಮತ್ತು ಸಂಕ್ಷಿಪ್ತತೆಯನ್ನು ಗಣ್ಯ ಗುಣವನ್ನಾಗಿ ಇಟ್ಟುಕೊಂಡ ಒಂದು ಪದ್ಯ, ನುಡಿ ಅಥವಾ ಸೊಲ್ಲು ಎಂಬಂತಿರುವುದೇ ಹೆಚ್ಚು; ಗಾದೆಗಿರುವ ಅರ್ಥಶ್ಲಿಷ್ಟತೆ, ಸರಳತೆ, ಶಬ್ದಾದ್ಯಲಂಕಾರಗಳ ಸೌಂದರ್ಯ ಅಥವಾ ಅನೇಕ ಸಂದರ್ಭಾನ್ವಯ ಶಕ್ತಿ ಅದಕ್ಕಿದೆ. ಹಸಿ ಗೋಡೆಗೆ ಹರಳನ್ನಿಟ್ಟಂತೆ ಸಂದರ್ಭಕ್ಕೆ ಅನ್ವಿತವಾಗಿ ಅರ್ಥಸ್ಪಷ್ಟತೆಗೆ ಕಾರಣವಾಗುವುದು ಅದರ ಸ್ವಭಾವ. ಋಗ್ವೇದದ ಸೂಕ್ತಗಳಲ್ಲಿಯ ಕೆಲವು ಋಕ್ಕುಗಳ ಕೆಲವು ಸಾಲುಗಳು ಸುಭಾಷಿತ ಶೈಲಿಯ ಒಂದಲ್ಲ ಒಂದು ಗುಣವನ್ನು ವ್ಯಂಜಿಸಬಹುದು. ಆದರೆ "ಸುಭಾಷಿತ ಶ್ಲೋಕಗಳು" ಎಂದು ಕಾವ್ಯಸಂಗ್ರಹರೂಪದಲ್ಲಿ ಪ್ರಸಿದ್ಧಿಗೆ ಬಂದವುಗಳಲ್ಲಿ ಕ್ರಿ.ಶ ೧೪೦೦ ರ "ಶಾರ್ಙ್ಗಧರ ಪದ್ಧತಿ" ಮತ್ತು ಕ್ರಿ.ಶ ೧೨೦೫ರ "ಸದುಕ್ತಿಕರ್ಣಾಮೃತ"ಗಳು ಸಂಸ್ಕೃತ ಸಾಹಿತ್ಯದಲ್ಲಿ ಗಣ್ಯ; ಹಾಗೇ ಡಾಕ್ಟರ್ ಕೆ. ಕೃಷ್ಣಮೂರ್ತಿಗಳು ಸಂಪಾದಿಸಿರುವ ಸಾಯಣಾಚಾರ್ಯರ "ಸುಭಾಷಿತ ಸುಧಾನಿಧಿ" ಮತ್ತು ನಿರ್ಣಯಸಾಗರ ಮುದ್ರಣಾಲಯದ "ಸುಭಾಷಿತ ರತ್ನಭಾಂಡಾಗಾರ"ಗಳೂ ಜನಪ್ರಿಯವಾಗಿವೆ. ಇಂಥ ಸಂಗ್ರಹಗಳಲ್ಲಿರುವ ಪದ್ಯಗಳು ಅನ್ಯಕರ್ತೃಕವಾದರೆ, ಸಂಸ್ಕೃತದ "ಶತಕ" ಸಾಹಿತ್ಯದಲ್ಲಿ ಅನ್ಯ ಗ್ರಂಥಗಳಿಂದ ಆಯ್ದು ಸಂಗ್ರಹಿಸದೆ– ಸ್ವತಃ ಕವಿಗಳು ಸ್ವತಂತ್ರವಾದ ಬಿಡಿ ಪದ್ಯಗಳನ್ನು ಬರೆದು ಸಂಗ್ರಹಿಸಿ ಪ್ರಸಿದ್ಧರಾದರು. ಅಂಥ ಬಿಡಿ ಪದ್ಯಗಳ ಸ್ವರೂಪದ ಸುಭಾಷಿತ ಶತಕಗಳಲ್ಲಿ ಭರ್ತೃಹರಿಯ ಶತಕತ್ರಯವು ಅತಿ ಶ್ರೇಷ್ಠವಾಗಿದೆ.

ಕಿರಿದರಲ್ಲಿ ಪಿರಿಯ ಅರ್ಥವನ್ನು ಸ್ವಾರಸ್ಯಕರವಾಗಿ ಹೇಳಬಲ್ಲ ಸುಭಾಷಿತ ಶ್ಲೋಕಗಳನ್ನು ದಿವಂಗತ ರವೀಂದ್ರನಾಥ ಠಾಕೂರರು ಪ್ರೀತಿಯಿಂದಲೂ, ಅಭಿಮಾನದಿಂದಲೂ "Wisdom Pills'' "ವಿವೇಕ ಘುಟಿಕೆಗಳು" ಎಂದು ಕರೆದರು. ಅಜ್ಞಾನದಿಂದ ಮಗನನ್ನು ಕೊಲ್ಲಲುಹೋದ ವ್ಯಾಪಾರಿಯು ಭಾರವಿಯ ಸುಭಾಷಿತವನ್ನು ಓದಿ, ರೋಷಾವೇಶದಿಂದ ಮುಕ್ತನಾಗಿ ತನ್ನ ಮಗನನ್ನು ಕಡಿಯದೆ ಸುಖವಾಗಿ

ಬದುಕಿದ ಕಥೆಯು ಸುಪ್ರಸಿದ್ಧ. ಸುಭಾಷಿತದಲ್ಲಿ ವ್ಯಾವಹಾರಿಕ ನೀತಿಸ್ಫೂರ್ತಿಯನ್ನು ಭಾರತೀಯರು ಸಾವಿರಾರು ವರ್ಷಗಳಿಂದ ಪಡೆಯುತ್ತ ಬಾಳಿಕೊಂಡು ಬಂದುದನ್ನು ಇಲ್ಲಿ ಇದು ಉದಾಹರಿಸುತ್ತದೆ. ದೈನಂದಿನ ಜೀವನದ ಸಾಮಾಜಿಕ ವರ್ತನೆಯ ನಿಯಮಗಳನ್ನು ಸುಭಾಷಿತಗಳು ಅನೇಕ ವೇಳೆ ತ್ರಿಕಾರಾಬಾಧಿತವಾಗಿ ಹೇಳುವುದಲ್ಲದೆ, ವಿವಿಧ ಮಾದರಿಗಳ ಮನುಷ್ಯರ ಮನೋಧರ್ಮಗಳ ಪ್ರಕಾರಗಳನ್ನೂ ಅನೇಕ ಕಡೆಗಳಲ್ಲಿ ತ್ರಿಕಾಲಾಬಾಧಿತವೆನಿಸುವಂತೆಯೇ ಹೇಳುತ್ತವೆ. ಆದುದರಿಂದ ಅವು ಹೆಚ್ಚಾಗಿ ವಿಚಾರಪ್ರಚೋದಕವೆಂದು ಭಾವಿಸುವುದು ಜನರೂಢಿಯಾಯಿತು. ಚಾಣಕ್ಯ, ಭರ್ತೃಹರಿ ಮುಂತಾದವರ ನೀತಿಶತಕಗಳೇ ಬಹುಶಃ ಈ ಬಗೆಯ ರೂಢಿಯನ್ನು ರೂಪಿಸಿರಬೇಕು. ಆದರೆ "ಸುಭಾಷಿತ ರತ್ನಭಾಂಡಾಗಾರ" ಮುಂತಾದ ಕಾವ್ಯ ಸಂಗ್ರಹಗಳು ರೂಢಿಯ ಈ ಅರ್ಥವು ತಪ್ಪೆಂಬುದನ್ನು ತಮ್ಮಲ್ಲಿರುವ ಸುಭಾಷಿತ ಶ್ಲೋಕ ಸಂಗ್ರಹಗಳ ನೀತಿಪರವಷ್ಟೇ ಅಲ್ಲದ ವಸ್ತು–ಪಾತ್ರ–ರಸಗಳನ್ನು ವರ್ಣಿಸುವ ಅನೇಕ ಶ್ಲೋಕಗಳ ಮೂಲಕ ಸಾರುತ್ತವೆ.

## ಪ್ರಸ್ತುತ ಸಂಗ್ರಹ

ಸುಭಾಷಿತ ಶ್ಲೋಕಗಳ ಪ್ರಸ್ತುತ ಸಂಗ್ರಹವು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹೊಸಹೆಜ್ಜೆಯಲ್ಲ. 'ಸೂಕ್ತಿ ಸುಧಾರ್ಣವ'ವೆಂಬ ಮೊದಲ ಸಂಕಲನ ೧೩ನೆಯ ಶತಮಾನದಷ್ಟು ಪ್ರಾಚೀನ. ಇದೇ ಮೊದಲನೆಯದಲ್ಲ. ಏಕೆಂದರೆ ಮಲ್ಲಿಕಾರ್ಜುನನ ಕನ್ನಡಾನುವಾದಗಳು ಕನ್ನಡ ಗದ್ಯದಲ್ಲಿವೆ; ಮೂಲ ಸಂಸ್ಕೃತ ಶ್ಲೋಕಗಳನ್ನು ಜೊತೆ ಜೊತೆಗೇ ಕೊಡಲಾಗಿದೆ. ಇದು ಸಂಸ್ಕೃತ ಗ್ರಂಥಗಳಿಂದ ಆಯ್ದು ಸಂಗ್ರಹಿಸಿದ ಸುಭಾಷಿತ ತರಂಗವಾಲೆ. ಈ ಸಂಗ್ರಹದಲ್ಲಿ ಸಂಸ್ಕೃತ ಸಾಹಿತ್ಯದಲ್ಲಿಯ ಆದಿಕಾವ್ಯ (ರಾಮಾಯಣ)ದಿಂದ ಹಿಡಿದು ಪಂಡಿತರಾಜನ ಕಾಲದವರೆಗಿನ (ಕ್ರಿ.ಪೂ. ೪೦೦ ರಿಂದ ಕ್ರಿ.ಶ ೧೬೩೦) ವಿವಿಧ ಸಂಸ್ಕೃತ ಸಾಹಿತ್ಯ ಗ್ರಂಥಗಳಿಂದ ಆಯ್ದ ಮುಕ್ತಕಗಳನ್ನು ಮೂರು ವಿಭಾಗಗಳಿರುವ ೨ ಭಾಗಗಳಲ್ಲಿ ವಿಂಗಡಿಸಿ ಅನುವಾದಿಸಲಾಗಿದೆ; ಕೆಲವು ಪುರಾಣ–ಶಾಸ್ತ್ರಗ್ರಂಥಗಳಿಂದಲೂ ವಸ್ತು ವೈವಿಧ್ಯಕ್ಕಾಗಿ ಸ್ವಯಂಪೂರ್ಣ ಶ್ಲೋಕಗಳನ್ನು ಆರಿಸಿ, ಭಾಷಾಂತರಿಸಲಾಗಿದೆ. ಅಲಂಕಾರ ಗ್ರಂಥಗಳೂ, ಸುಭಾಷಿತ ಸಂಗ್ರಹಗಳೂ, ಶತಕಗಳೂ, ಖಂಡಕಾವ್ಯಗಳೂ ಈ ಸಂಗ್ರಹದ ವಿವಿಧ ಅನುವಾದಗಳಿಗೆ ಆಕರಗಳಾಗಿವೆ. ಆದಷ್ಟು ಹೆಚ್ಚು ಸಂಸ್ಕೃತ ಗ್ರಂಥಗಳಿಂದ ಶ್ಲೋಕಗಳನ್ನು ಆಯ್ದುಕೊಳ್ಳುವುದರಿಂದ ಸಂಸ್ಕೃತ ಸಾಹಿತ್ಯದ ವ್ಯಾಪ್ತಿಯ ಸ್ಥೂಲ ಪರಿಚಯವು ಸಾಮಾನ್ಯ ಓದುಗನಿಗೆ ಆಗಬಹುದೆಂಬುದು ಒಂದು ಉದ್ದೇಶ. ಅತಿ ಗಣ್ಯವಾದ ಸಂಸ್ಕೃತಗ್ರಂಥಗಳಿಂದ ಒಂದೆರಡು ಸುಭಾಷಿತಗಳನ್ನಾದರೂ ಆಯ್ದುಕೊಳ್ಳದೆ ಉಳಿಯಬಾರದೆಂಬುದು ಇನ್ನೊಂದು ಉದ್ದೇಶ. ಆಮೇಲೆ "ಸಂಸ್ಕೃತ ಸಾಹಿತ್ಯ" ಎಂಬ "ಹಳೆಯ ಭಂಡಾರ"ದಲ್ಲಿ

ನಿತ್ಯನೂತನವಾದ ಸೌಂದರ್ಯ ಮತ್ತು ವರ್ತಮಾನ ಭಾರತವು ಕಲಿಯಲೇಬೇಕಾಗಿ ಬಂದಿರುವ ಸದುಪದೇಶಗಳೇನಾದರೂ ಇವೆಯೇ ಎಂಬ ಕುತೂಹಲಕ್ಕೆ ಸಮಾಧಾನಕರವಾದ ಉತ್ತರವನ್ನು ಯಥಾಶಕ್ತಿ ಕೊಡಬೇಕೆಂಬುದು ಮೂರನೆಯ ಉದ್ದೇಶ. ಇಂದಿನ ಭಾರತೀಯ ಹಾಗೂ ಕರ್ನಾಟಕೀಯ ಸಾಮಾಜಿಕ ಮನೋಧರ್ಮ ವಿವಿಧ ಮಾದರಿಗಳಲ್ಲಿ (ನೂರಕ್ಕೆ ೮೦ರಷ್ಟು ಜನರಲ್ಲಿ) ಮನಃಶಾಸ್ತ್ರ ಶುದ್ಧವಾಗಿ ಮೂಲಭೂತ ಬದಲಾವಣೆಗಳು ಜೀವನದ ರಸ, ರುಚಿ, ದೃಷ್ಟಿಕೋನ, ಮನಃಪ್ರಣಾಳಿಗಳಲ್ಲಿ ಅವಿಜ್ಞಾತ ಪ್ರಜ್ಞೆ (The Collective Unconscious)ಯ ಸ್ತರದಲ್ಲಿ ಆಗಿದೆಯೇ ಎಂಬುದನ್ನು ಸಮಾಜವಿಜ್ಞಾನಿಯು (Social Scientist) ಇಲ್ಲಿ ಎಲ್ಲಾದರೂ ಪ್ರಯೋಗವಿಜ್ಞಾನರೀತ್ಯಾ ತತ್ತ್ವಜ್ಞಾನಾನುಮಾನದ ಪ್ರಕಾರ ಪರೀಕ್ಷಿಸಿದರೆ ನಿಜಸಂಗತಿ ಗೊತ್ತಾದೀತು. ಅಂಥ ಸಂಗತಿಯನ್ನು ಹೊರಗೆಡಹಲು ಈ ಸುಭಾಷಿತ ಸಂಗ್ರಹವು ಒಂದು ಸಾಧನವಾಗಬಲ್ಲದೆಂಬುದು ನಾಲ್ಕನೆಯ ಉದ್ದೇಶ: ಶೈಲಿಯ ಸೌಂದರ್ಯವಷ್ಟನ್ನಲ್ಲದೆ, ಈ ಸುಭಾಷಿತಗಳ ಅರ್ಥದ ಸತ್ಯ, ಸೌಂದರ್ಯ, ಸೌಜನ್ಯ, ಸದುಪಯೋಗವೆಂಬ ಮೌಲ್ಯಗಳನ್ನೂ ಬಹಳ ಜನ ಓದುಗರು ಮೆಚ್ಚಿದರೆ ಮತ್ತು ಅನುಸರಣೀಯ ಎಂದು ತಿಳಿದರೆ ಭಾರತೀಯ (ಕರ್ಣಾಟಕೀಯ) ಸಂಸ್ಕೃತಿಯ ಜೀವನಾಡಿಯು ಧಾರಾವಾಹಿಯಾಗಿ ತನ್ನ ಸಾರವನ್ನು ಇಂದಿನ ತಲೆಮಾರಿನ ಹೃದಯದಲ್ಲಿಯೂ ಸುಸ್ಪಷ್ಟವಾಗಿಯೋ, ಅಸ್ಪಷ್ಟವಾಗಿಯೋ ಹರಿಯಿಸುತ್ತಿದೆ ಎಂಬುದು ದೃಢಪಟ್ಟಂತಾಗುತ್ತದೆ. "ಸಂತರು (ವಿವೇಕಿಗಳು) ಪರೀಕ್ಷಿಸಿ, ದ್ವಂದ್ವಗಳೆರಡರಲ್ಲಿ ಯೋಗ್ಯವಾದುದನ್ನು ಆಯ್ದುಕೊಂಡು ಅನುಸರಿಸುತ್ತಾರೆ. ಮೂಢರು (ಅವಿವೇಕಿಗಳು) ಪರಾಭಿಪ್ರಾಯದಾಸರಾಗಿ ಬದುಕುತ್ತಾರೆ" ಎಂಬ ಕಾಳಿದಾಸನ ಸೂತ್ರದ ವೈಜ್ಞಾನಿಕತೆಯನ್ನು ಯಾವ ಸಮಾಜಮನಃಶಾಸ್ತ್ರಜ್ಞನೂ ಈಗ ಅಲ್ಲಗಳೆಯಲಾರನು. ಸುಭಾಷಿತಗಳ ಸತ್ಯವನ್ನು ಪ್ರತಿಯೊಬ್ಬ ಕನ್ನಡಿಗನೂ ಅಂತಃಕರಣದ ಒರೆಗಲ್ಲಿಗೆ ತಿಕ್ಕಿ ನೋಡಲು ಈ ಸಂಗ್ರಹವು ಅವಕಾಶವನ್ನು ಒದಗಿಸಿದರೆ ಇದರ ಸಮಾಜಶಿಕ್ಷಣ ಸಾಮರ್ಥ್ಯಕ್ಕೆ ಬೇರೆ ಯಾವ ಶಿಫಾರಸುಪತ್ರವೂ ಬೇಡ.

## ವಿಭಾಗಗಳು

೧೦೦ ನುಡಿಗಳು ದಾಂಪತ್ಯ ಪ್ರೇಮ ಮತ್ತು ಗೃಹಸ್ಥ ಜೀವನಗಳನ್ನು ವಿವರಿಸುತ್ತದೆ. ಗೃಹಸ್ಥರು "ಗ್ರಹಾವಿಷ್ಟ"ರಾದ ಮತ್ತು ಗೃಹಿಣಿಯರು "ಗ್ರಹಣಶೀಲೆ"ಯರಾದ ಸಂದರ್ಭಗಳನ್ನು ಅಲ್ಲಿ ಇಲ್ಲಿ ತೋರಿಸುವ ವರ್ತಮಾನ ಜೀವನದಲ್ಲಿಯೂ ಪ್ರತಿಯೊಬ್ಬನಿಗೂ ಒಂದೊಂದು (Ideal Self) ತನ್ನದೇ ಆದ ಆದರ್ಶ (ತನ್ನತನ) ಆತ್ಮದ ಚಿತ್ರವು ಮನಸ್ಸಿನ ಕಣ್ಣಿನೆದುರು ಇರುವುದರಿಂದ ಮತ್ತು ಅದರಲ್ಲಿ ಸಾಮಾಜಿಕ ಆತ್ಮದ ಸಾಧಾರಣ ಧರ್ಮಗಳಿರುವುದರಿಂದ ಅವನ ವಾಸ್ತವಿಕ (ವಿಜ್ಞಾತ ಪ್ರಜ್ಞೆಯ)

ಜಾಗರಿತ ಪ್ರಜ್ಞೆಯ ಪ್ರಕಾರ ಅವನೆಂತಿದ್ದರೂ ಉಕ್ತ ಶ್ಲೋಕಗಳಲ್ಲಿರುವ ಅಭಿಪ್ರಾಯಗಳಲ್ಲಿ ತಲ್ಲೀನನಾಗಿ ರಸಾಸ್ವಾದವನ್ನೂ ಅದರ ಉತ್ತರಕಾಲದಲ್ಲಿ ಉಂಟಾಗುವ ಚಿಂತನ ಬುದ್ಧಿಯಿಂದ ತದ್ಗತ ತತ್ವವನ್ನೂ ಗ್ರಹಿಸಲು ಶಕ್ತನಾಗುತ್ತಾನೆ. ರೂಪಾಂತರ ಹೊಂದಿದ ಆಲಂಬನ ಉದ್ದೀಪನ ವಿಭಾವಗಳಲ್ಲೂ ಇಂದಿನ ನಮ್ಮ ಜೀವನದಲ್ಲಿ ಅರ್ಥಾಂತರ (ಭಾವಾಂತರ) ಹೊಂದದಿರುವ ಸ್ಥಿತಿಯಿರುವುದನ್ನು ಉಕ್ತ ನುಡಿಗಳಿಂದ ಕಂಡುಕೊಳ್ಳಬಹುದು; ಪತ್ನಿ ಎಂದರೆ ಏನೆಂಬುದು ಪತಿಗೂ, ಪತಿ ಎಂದರೆ ಏನೆಂಬುದು ಪತ್ನಿಗೂ ಇಂದಿನ ಸುಸಂಸ್ಕೃತ ಕುಟುಂಬಗಳಲ್ಲಿ ಅಂದಿನವುಗಳಲ್ಲಿ ಹೇಗೋ ಹಾಗೇ ಅರ್ಥವಾಗುವ ಅಂಶವು ಮನನೀಯವಾಗಿದೆ: ಮಕ್ಕಳ ಬಗೆಗಿನ ದೃಷ್ಟಿಕೋನವೂ ಹಾಗೆಯೇ ತತ್ವಶಃ ಅಭಿನ್ನವಾಗಿದೆ; ಭಿನ್ನವಾದಲ್ಲಿ ಕುಟುಂಬವು ಕೊನೆಗಳಿಗೆಯಲ್ಲಿ ಕಹಿ ಗುಳಿಗೆಯನ್ನು ಒತ್ತಾಯದಿಂದ ಸವಿಯುವಂತಾದದ್ದು ಮನಃಶಾಸ್ತ್ರಜ್ಞರ ಪ್ರಯೋಗಕ್ಕೆ ಲಭ್ಯವಾಗದಿರದು. ಅಪವಾದಗಳನ್ನು ಅಂದಿನ ನಿಯಮವೆಂದರೂ ತಪ್ಪು. ಇಂದಿನ ನಿಯಮ (ವಾಸ್ತವಿಕ ಅಂಶ) ಎಂದರೂ ತಪ್ಪು.

೨ನೆಯ ವಿಭಾಗವು ಭಾರತದಲ್ಲಿಯ ಚಿಂತಕರು ಜೀವನದ ಆದಿ ಬುನಾದಿಯ ಸತ್ಯವನ್ನು ಶೋಧಿಸಲು ಪ್ರಯತ್ನಿಸಿ ತಮ್ಮ ಸ್ತೋತ್ರಕಾವ್ಯ, ತತ್ವಕಾವ್ಯ, ಮಹಾಕಾವ್ಯ ಮುಂತಾದವುಗಳಲ್ಲಿಯೂ ಶತಕಗಳಲ್ಲಿಯೂ ನಿರೂಪಿಸಿದ ಅಂಶಗಳನ್ನು ೧೦೦ ಸೊಲ್ಲುಗಳಲ್ಲಿ ವಿವರಿಸುತ್ತದೆ. ಓಂ, ತತ್, ಸತ್, ಸತ್ಯ ಜ್ಞಾನ, ಅನಂತ; ಅಥವಾ ಸತ್, ಚಿತ್, ಆನಂದ–ಎಂಬಂಥ ಪದಗಳಿಂದ "ಸತ್ಯ"ಗಳೆಲ್ಲವುಗಳಿಗೂ ಮೂಲಭೂತ ಆಧಾರವಾದ ಒಂದೇ ಒಂದು ನಿತ್ಯ ಸತ್ಯವನ್ನು ಸರ್ವ ಗ್ರಾಹ್ಯವೆಂದು ವಿವಿಧ ಸಾಧಕರೂ ಸಿದ್ದರೂ ಸಂತರೂ ಆಚಾರ್ಯರೂ ಕವಿಗಳೂ ಭಾರತದ ಬಹುಸಂಖ್ಯಾತರ ಶ್ರದ್ಧಾಧಾರವೆಂದು ತಮ್ಮ ತಮ್ಮ ಭಿನ್ನ ಶೈಲಿ ಬಂಧಗಳಿಂದ ಹೃತ್‌ಪೂರ್ವಕವಾಗಿ ಮತ್ತು ಬುದ್ಧಿಪೂರ್ವಕವಾಗಿ ವರ್ಣಿಸುತ್ತ ಬಂದುದನ್ನು ಓದುಗರು ಗಮನಿಸಬಹುದು. ವೈದಿಕ ನಾಗರಿಕತೆಯೆಂಬ ಸಮುದ್ರವನ್ನು ಕಡೆದು ತೆಗೆದ ಈ ಅಮೃತವನ್ನು ತಿರಸ್ಕರಿಸಿ ಬಾಳುವದು ಆಧುನಿಕ ಭಾರತೀಯತೆಗೆ ಶಕ್ಯವಿಲ್ಲವೆಂಬುದನ್ನು ರಾಷ್ಟ್ರಕ್ಕೋ ರಾಜ್ಯಕ್ಕೋ ಕುಟುಂಬಕ್ಕೋ ದುರ್ನಿವಾರ್ಯವಾದ ದೊಡ್ಡ ಸಂಕಟ ಬಂದಾಗ ಒರೆಗೆ ಹಚ್ಚಿ ನೋಡಬಹುದು. ಕಾರ್ಲ್ ಜಿ. ಯುಂಗ್ ಮಹಾಶಯನು ಅತಿ ದೊಡ್ಡ ಮನಃಶಾಸ್ತ್ರಜ್ಞ. ಅವನ ಪ್ರಕಾರ ದೇವ (ನಿತ್ಯಸತ್ಯ) ಪ್ರೇರಿತರು, ಅಹಂ (ಮನೋಮಧ್ಯ ಬಿಂದು) ಪ್ರೇರಿತರು ಮತ್ತು ದೇಹಾತ್ಮಭಾವ ಪ್ರೇರಿತರು (God-centered, Soul-centred, Ego-centered ಮತ್ತು Persona-Centered) ಎಂಬ ನಾಲ್ಕು ವರ್ಗಗಳ ಜನರು ಈಗ ಜಗತ್ತಿನಲ್ಲಿದ್ದಾರೆ ಎಂಬುದೂ ಈ ವರ್ಗಗಳಲ್ಲಿ ಅನುಕ್ರಮವಾದ ಅಪದೆಶೆ ಇದೆ ಎಂಬುದೂ ಗೊತ್ತಾಗುತ್ತದೆ. ಆದುದರಿಂದ ನಿತ್ಯಸತ್ಯದ ಅನುಸಂಧಾನ, ಸತತ ಸಂಶೋಧನ ಅಥವಾ ಶ್ರವಣ, ಮನನ, ನಿದಿಧ್ಯಾಸನ ಇಲ್ಲವೆ ತಪಸ್ಸು (ಆತ್ಮ ವಿಶ್ಲೇಷಣೆಯನ್ನಾಧರಿಸಿದ ಅಂತರ್ಮುಖ ಸಂಶೋಧನ) ಎಂಬ ಮಾನಸಶಾಸ್ತ್ರೀಯ

ಯೋಗ (ಅನುಭಾವ) ಮಾರ್ಗಗಳಿಂದ ನಮ್ಮ ಗೌರವಕ್ಕೆ ಪಾತ್ರರಾದ ಹಿರಿಯರು ಮಾಡಿಕೊಂಡ ಮಾನವ ಜೀವನದ ಪೂರ್ಣತೆಯ ಕಲ್ಪನೆ (ಮೋಕ್ಷ, ಪರಮಸತ್ಯ, ಅಮೃತತ್ವ, ಬ್ರಹ್ಮ ಸಾಯುಜ್ಯ, ನಿತ್ಯಾನಂದಸ್ಥಿತಿ ಇತ್ಯಾದಿ)ಯನ್ನು ವಿವಿಧ ಕವಿಕಂಠಗಳು ವರ್ಣಿಸಿದ್ದನ್ನು ತಲ್ಲೀನತೆಯಿಂದ ಗ್ರಹಿಸಿ, ಇಂದಿನ ಸಾಮಾಜಿಕರು ತಮ್ಮ ಅನುಭವದ ಒಳಗಿನ ಒಳ ದನಿಯ ಒರೆಗೆ ತಿಕ್ಕಿ ಪರೀಕ್ಷಿಸಬಹುದು. ಧ್ಯೇಯವಾದೀಯ ಚಾರಿತ್ರ ನಿರ್ಮಾಣಕ್ಕೆ ಇದು ಭಾರತವು ಕೊಟ್ಟ ಮಹಾಧಾರ.

೩ನೆಯ ವಿಭಾಗದ ೧೦೦ ಪದ್ಯಗಳು ಭಾರತೀಯ ಲೌಕಿಕ ಜೀವನದ ಸಾಮಾನ್ಯಾನುಭವವು ಕಲಿಸುವ ಪಾಠಗಳನ್ನು ಒಳಗೊಂಡಿವೆ. "ಅನುಭವವು ಸವಿಯಲ್ಲ, ಅದರ ನೆನಪೇ ಸವಿಯು, ಅದ ಕದ್ದು ಮೇಯದೇ ಮನವು?" ಎಂದು ಕೇಳಿದ ಕಡೆಂಗೋಡ್ಲು ಶಂಕರಭಟ್ಟರ ಸವಾಲಿಗೆ ಈ ವಿಭಾಗವು ಉತ್ತರ ಕೊಡಬಲ್ಲ ಅಂಶಗಳಿಂದ ಕೂಡಿದೆ. ವರ್ತಮಾನ ಕ್ಷಣಕ್ಕಿಂತ ಹಿಂದಿನದೆಲ್ಲವೂ ಭೂತಕಾಲಿಕ; ಅದನ್ನು ಬಿಟ್ಟರೆ ಮನುಷ್ಯನ ಚಿಂತನ ಬುದ್ಧಿಗೆ ಆಧಾರ ವಿಷಯವೇ ಇಲ್ಲ. ಸುಖ–ದುಃಖಗಳೆಂಬ ಎರಡು ಆತ್ಯಂತಿಕ ಅನುಭವ ಭೇದಗಳಲ್ಲಿ ಲೋಕ ಜೀವನದ ಎಲ್ಲ ಅನುಭವಗಳೂ ಪರ್ಯವಸಾನ ಹೊಂದುತ್ತವೆ. ಹಾಗೇ ತಾತ್ಕಾಲಿಕ ದುಃಖವನ್ನು ಅಥವಾ ಸುಖವನ್ನು ಲೆಕ್ಕಿಸದೆ ಚಿರಕಾಲಿಕ, ಆತ್ಯಂತಿಕ, ದೀರ್ಘಕಾಲಿಕ ಸುಖ ಅಥವಾ ಹೆಚ್ಚಿನ ಮನಃಶಾಂತಿ ಮನಃಸಮಾಧಾನವು ಫಲಿಸುವಂತೆ ತನ್ನ ಜೀವನದ ಯೋಜನೆಯನ್ನು ನಿರಪರಾಧಿ ಸಾಮಾಜಿಕರಿಗೆ ನಿಷ್ಕಂಟಕವಾಗುವಂತೆ ಮತ್ತು ತನ್ನ ಬೇರಾದ ಸಮಾಜಕ್ಕೆ ಹಿತವಾಗುವ ಪ್ರಧಾನ ದೃಷ್ಟಿಗೆ ವ್ಯತ್ಯಯ ಉಂಟಾಗದಂತೆ ರಚಿಸಿಕೊಳ್ಳುವ ಪ್ರಾಮಾಣಿಕ ಪ್ರಜ್ಞೆ ಅಂದಿನಂತೆ ಇಂದೂ ತತ್ವಶಃ ಭಿನ್ನವಲ್ಲದ ಸಾಮಾನ್ಯ ನ್ಯಾಯ, ನೀತಿ, ನಿಯಮ, ಶಿಸ್ತು, ಕ್ರಮ ಮತ್ತು ಮೌಲ್ಯಾಭಿಜ್ಞಾನಗಳು ಈ ಸಂಗ್ರಹದಲ್ಲಿರುವುದು ತುಲನಾತ್ಮಕ ದೃಷ್ಟಿಗೆ ಹೊಳೆಯದಿರದು.

೪ನೆಯ ವಿಭಾಗದ ೧೦೦ ನುಡಿಗಳು ಮಹಾನಾಯಕರನ್ನು ವರ್ಣಿಸುತ್ತವೆ. ಮಹಾಕಾವ್ಯದ ಲಕ್ಷಣಗಳನ್ನು ಹೇಳುವಾಗ, ದಂಡಿಯು ಅದರಲ್ಲಿ ಚತುರನೂ, ಉದಾತ್ತನೂ ಆದ ನಾಯಕ ಇರಬೇಕು ಎಂದಿದ್ದಾನೆ. ನಾಟಕದ ಲಕ್ಷಣಗ್ರಂಥಗಳಲ್ಲಿ ಧೀರೋದಾತ್ತ, ಧೀರಲಲಿತ, ಧೀರೋದ್ಧತರೆಂಬ ನಾಲ್ಕು ವರ್ಗಗಳ ಹೆಸರುಗಳನ್ನು ಹೇಳಲಾಗಿದೆ. "ಶೂರಃ ಸರ್ವಂ ಪಾಲಯತಿ" ಎಂದಿದೆ ಮಹಾಭಾರತ. ಶೌರ್ಯ–ಔದಾರ್ಯಗಳಿಲ್ಲದ ನಾಯಕನು ನಾಯಕನೇ ಅಲ್ಲ. ಇದು ಅಂದೂ ಸತ್ಯ, ಇಂದೂ ಸತ್ಯ. ನಮ್ಮ ಪ್ರಜಾಪ್ರಭುತ್ವದ ನಾಯಕರನ್ನು ಅಳತೆ ಮಾಡಲು ಮಹಾಕಾವ್ಯಗಳ ನಾಯಕರು ಇಂದೂ ಮಾನದಂಡವಾಗಬಲ್ಲರೆಂಬುದನ್ನು ಓದುಗ ಇಲ್ಲಿ ನೋಡಬಲ್ಲ. ಹರಿ–ಹರ–ಬ್ರಹ್ಮರೂ ದೇವತೆಗಳೂ ದೇವತೆಗಳಂಥ ಮಾನವರೂ, ಮಾನವಪುಂಗವರೂ ಹೇಗಿರುತ್ತಾರೆ ಎಂಬುದನ್ನು ಕವಿಗಳು ತಮ್ಮ ಪ್ರತಿಭೆಯಿಂದ ಕಂಡದ್ದರ ಅಲ್ಪ ಪರಿಚಯ

ಈ ವಿಭಾಗದಿಂದಾಗುತ್ತದೆ. ಈ ನೇತೃದರ್ಶನವು ನಮ್ಮ ಮತದಾರರ ನೇತ್ರೋನ್ಮಿಲನ ಮಾಡಿದಾಗ, "ಪೂಜ್ಯ ಪೂಜಾ ವ್ಯತಿಕ್ರಮ" ತಪ್ಪಿ, ನಮ್ಮ ಸಾರ್ವಜನಿಕ ಸಂಸ್ಥೆಗಳೆಲ್ಲವೂ ಸರ್ವೋದಯವನ್ನು ಸಮರ್ಥವಾಗಿ ಸಾಧಿಸಬಲ್ಲವು.

೫ನೆಯ ವಿಭಾಗದ ೧೦೦ ಸೊಲ್ಲುಗಳು ಸಂಸ್ಕೃತದ ಕವಿಗಳು ಪ್ರಕೃತಿ ಸೌಂದರ್ಯವನ್ನು ಕಂಡುಂಡು ಹೇಗೆ ವರ್ಣಿಸಿದ್ದಾರೆ ಎಂಬುದಕ್ಕೆ ಕೆಲವು ಉತ್ತಮ ಉದಾಹರಣೆಗಳನ್ನು ಒದಗಿಸುತ್ತವೆ. ಪ್ರಕೃತಿಯು ದೇವರ ಸ್ವಭಾವ, ಶಕ್ತಿ. ಅದರಿಂದ ಈ ವಿಶ್ವವು ವ್ಯಕ್ತವಾಗಿದೆ ಎಂಬುದು ಭಾರತೀಯ ನಂಬಿಕೆ. ವಿಶ್ವದ ರೂಪವು "ವಿಶ್ವರೂಪ"ವಾಗಿದೆ. ಅದರ ಅನೇಕ ಸಂದರ್ಭಗಳಲ್ಲಿ ವಿವಿಧ ಮನುಷ್ಯರಿಗೆ ವಿವಿಧ ಅನುಭವಗಳಾಗುತ್ತವೆ. ಒಂದೇ ತರಹದ ಸಂದರ್ಭದಲ್ಲಿ ಒಬ್ಬರಿಗೆ ಒಂದು ಅನುಭವವಾದರೆ, ಇನ್ನೊಬ್ಬರಿಗೆ ಇನ್ನೊಂದು ಬಗೆಯ ಅನುಭವ ಉಂಟಾಗಬಹುದು. ಸಂಸ್ಕೃತದ ಮಹಾನಾಟಕಕಾರರೂ, ಕವಿಗಳೂ, ಭಾರತೀಯ ಪ್ರಕೃತಿ ಸೌಂದರ್ಯದ ಕಾಲಿಕ ಹಾಗೂ ದೇಶಿಕ ಸನ್ನಿವೇಶಗಳನ್ನು ಬಣ್ಣಿಸಿದ ಅಂದವು ಇತರ ದೇಶಗಳ ಮಹಾಕವಿಗಳ ಅಂಥ ವರ್ಣನೆಗಳ ಅಂದಕ್ಕೆ ಸೌಂದರ್ಯ ದೃಷ್ಟಿಯಿಂದ ಎಂದೂ ನ್ಯೂನವೆನ್ನಿಸದೆಂಬುದು ರಸಿಕರಿಗೆ ಇಲ್ಲಿ ಗೊತ್ತಾಗದಿರದು. ಸಂಸ್ಕೃತ ಕವಿಗಳು ಭಾರತದ ವಿವಿಧ ಪ್ರದೇಶಗಳಲ್ಲಿದ್ದವರು ಮತ್ತು ಅಲ್ಲಿಂದ ಹೊರಟು ಇತರ ಪ್ರದೇಶಗಳಲ್ಲಿ ಹೋಗಿ ಕೀರ್ತಿಯನ್ನು ಗಳಿಸಿಕೊಂಡು ಬಂದವರು. ಕರ್ನಾಟಕದ ಸಂಸ್ಕೃತ ಕವಿಗಳೂ ಕರ್ನಾಟಕೇತರ ಪ್ರದೇಶಗಳಲ್ಲಿ ಯಶಸ್ಸನ್ನು ಪಡೆದವರು. ಆದುದರಿಂದಲೇ ಸಂಸ್ಕೃತ ಸಾಹಿತ್ಯವೊಂದೇ ಇಂದಿಗೂ ಅಖಿಲ ಭಾರತೀಯ ಸಾಹಿತ್ಯವೆನ್ನಿಸಿದೆ. ಇಂದಿನ ಪ್ರಚಲಿತ ಭಾರತೀಯ ಭಾಷೆಗಳಲ್ಲಿರುವ ಸಾಹಿತ್ಯ ಕೃತಿಗಳಲ್ಲಿ ಬಂದಿರುವ ಪ್ರಕೃತಿ ಸೌಂದರ್ಯ ವರ್ಣನೆಗಳೊಡನೆ ಸುಭಾಷಿತಗಳ ರೂಪದಲ್ಲಿರುವ ಅಂಥ ವರ್ಣನೆಗಳನ್ನು ಹೋಲಿಸಿ ಓದುಗರು ಸಂತೋಷಪಡಬಹುದು.

೬ನೆಯ ವಿಭಾಗದ ೧೦೦ ಶ್ಲೋಕಗಳು ಸಂಸ್ಕೃತ ಕವಿಗಳ ಹಾಸ್ಯೋಕ್ತಿ ಚತುರೋಕ್ತಿಗಳ ಕೆಲವು ಮಾದರಿಗಳನ್ನು ತೋರಿಸುತ್ತವೆ. ಅವುಗಳಲ್ಲಿ ಅಲಂಕಾರದ ಚಮತ್ಕಾರ, ವಿಡಂಬನ, ಅನ್ಯೋಕ್ತಿ, ನಿಂದೆ (Invective) ಮುಂತಾದ ವಿವಿಧ ತಿರುಹುಗಳ ಕಾವ್ಯವಾಣಿಗಳಿವೆ. ಪ್ರೊ. ಎಸ್.ವಿ. ರಂಗಣ್ಣನವರು ಕೊಟ್ಟ ವಿಡಂಬನ ಚಕ್ರದ ದಶವಿಧ ವಿಡಂಬನಗಳ ಎಲ್ಲ ಬಗೆಗಳೂ ಇಲ್ಲಿ ನಿದರ್ಶಿತವಾಗಿವೆ ಎಂದು ಹೇಳಲು ಬಾರದಿದ್ದರೂ "Wit and humour-ಚತುರೋಕ್ತಿ ಹಾಸ್ಯ" ಎಂಬ ಸಾಮಾನ್ಯ ವರ್ಗದಲ್ಲಿ ಸೇರಬಹುದಾದ ಹಲವಾರು ವಿಧದ ಕಾವ್ಯೋಕ್ತಿಗಳನ್ನಿಲ್ಲಿ ಸಂಗ್ರಹಿಸಲಾಗಿದೆ. ಈ ಮಾದರಿಗಳ ಅವಲೋಕನದಿಂದ ಓದುಗರು ಸಂಸ್ಕೃತ ಸಾಹಿತ್ಯದ ಹಾಸ್ಯೋಕ್ತಿಗಳ (ವಿಡಂಬನಾದಿಗಳ) ಸ್ಥೂಲ ಚಿತ್ರವನ್ನಾದರೂ ಊಹಿಸಿಕೊಳ್ಳಬಹುದಾಗಿದೆ. ಇವುಗಳಲ್ಲೂ ವಿವೇಕಬೋಧ (ನೀತಿಬೋಧ) ಇರುವುದು ಹಿಂದೆ ಹೇಳಿದಂತೆ ಮಿತ್ರಸಂಮಿತಿಯ

ಹಾದಿಯನ್ನು (ಅನೇಕ ವೇಳೆ) ಹಿಡಿದ "ನೀತಿಸಾಹಿತ್ಯ" ವೆನಿಸಬಹುದಾದ ಶತಕಸಾಹಿತ್ಯ ಮತ್ತು ಪಂಚತಂತ್ರ–ಹಿತೋಪದೇಶಗಳ ಜನಪ್ರಿಯತೆ ಅತಿಯಾದುದರಿಂದ; ಎರಡನೆಯದಾಗಿ–ಪಂಡಿತ, ಕವಿ, ಶಿಕ್ಷಕ ಎಂಬ ಮೂರು ಪಾತ್ರಗಳನ್ನೂ ಒಬ್ಬ ಗ್ರಂಥಕರ್ತನು ನಿರ್ವಹಿಸಬೇಕಾಗಿ ಬಂದದ್ದೂ ಕೆಲವೊಮ್ಮೆ ಕಾರಣವಾಗಿರಬಹುದು; ಅಲ್ಲದೆ, ಮಹಾಭಾರತವು ಪ್ರತ್ಯಕ್ಷ ನೀತಿ ಕಥೆಗಳನ್ನೂ ಒಳಗೊಂಡು ತನ್ನ ಇಡಿ ಸ್ವರೂಪದಲ್ಲಿ ಕಾವ್ಯವೆನ್ನಿಸಿ ಉಳಿದಿರುವುದೂ, ಧಾರ್ಮಿಕ–ಲೌಕಿಕ ಕಾವ್ಯಗಳ ಭೇದವನ್ನು ಮರೆತು ಶುದ್ಧ ಧರ್ಮ (ನೀತಿ) ಬೋಧೆ (ದಾಸ್ಯಸಾಹಿತ್ಯ ಮತ್ತು ಶರಣ ಸಾಹಿತ್ಯ) ಸಾಹಿತ್ಯವೆನ್ನಿಸಲಾರಂಭಿಸಿ ಈಗಲೂ ಕರ್ನಾಟಕದಲ್ಲಿ ಹಾಗೇ ಇರುವುದೂ ಉಕ್ತಪ್ರವೃತ್ತಿಗೆ ಸಾಕ್ಷಿ.

ಬಾಣನ ಕಾದಂಬರಿಯ ಚಿಕ್ಕ ಗದ್ಯಾಂಶವನ್ನು ಬಿಟ್ಟರೆ ಈ ಇಡಿ ಸಂಗ್ರಹದಲ್ಲಿ ಗದ್ಯ ಸಾಹಿತ್ಯ ಹೆಚ್ಚಾಗಿ ಇಲ್ಲದುದರಿಂದ ಅದರಲ್ಲಿರುವ ಎಷ್ಟೋ ಸರಸೋಕ್ತಿಗಳು ಬಿಟ್ಟು ಹೋಗುವಂತಾಗಿದೆ. ಭಾಸ–ಕಾಳಿದಾಸ–ಶೂದ್ರಕ–ವಿದೂಷಕ–ವಿಟಾದಿಗಳ ಗದ್ಯೋಕ್ತಿಗಳಲ್ಲಿ ಬಂದಿರುವ ಅರ್ಥಾಂತರನ್ಯಾಸ ಸ್ವರೂಪದ ಸುಭಾಷಿತಗಳು ಇಲ್ಲಿಲ್ಲ. ಏಕೆಂದರೆ ಛಂದೋಬದ್ಧ ಸುಭಾಷಿತಗಳನ್ನು ನೆನಪಿನಲ್ಲಿಟ್ಟುಕೊಳ್ಳುವದು ಮತ್ತು ಸಂದರ್ಭೋಚಿತವಾಗಿ ವಾಗ್ಮಿಗಳು ಬಳಸುವುದು ಹೆಚ್ಚು ಸುಲಭ ಎಂಬ ವ್ಯಾವಹಾರಿಕ ದೃಷ್ಟಿ ಪ್ರಸ್ತುತ ಸಂಗ್ರಹಕಾರನಿಗೆ ಪ್ರಧಾನವೆನ್ನಿಸಿತು. ಉದ್ಧೃತ ವಾಕ್ಯಗಳಿಂದಲೇ ಒಬ್ಬನು ಒಳ್ಳೆಯ ಭಾಷಣಕಾರನೆನ್ನಿಸನೆಂಬುದು ನಿಜವಾದರೂ ಎಲ್ಲ ದೇಶ–ಕಾಲಗಳಲ್ಲೂ ಸಮಯೋಚಿತ ಆಧಾರಗಳನ್ನು ಮಿತವಾಗಿ ಕೊಡುವ ಮಾತುಗಾರಿಕೆ ಸರ್ವಾಹ್ಲಾದಕರವೆನ್ನಿಸಿರುವುದು ಅನುಭವಸಿದ್ಧವಾಗಿದೆ. "Best words in the best order-ಅತ್ಯುತಮ ಪದಗಳನ್ನು ಅತ್ಯುತ್ತಮ ಕ್ರಮದಿಂದ ಜೋಡಿಸುವುದು" ಪದ್ಯದ ವೈಶಿಷ್ಟ್ಯವೆಂದ ಮ್ಯಾಥ್ಯೂ ಅರ್ನಾಲ್ಡನ ವ್ಯಾವಹಾರಿಕ ಸೂಚನೆಯನ್ನು "Classical-ಅಭಿಜಾತ" ವರ್ಗಕ್ಕೆ ಸೇರಿದ ಸರ್ವ ಭಾಷಾ ಸಾಹಿತ್ಯಗಳೂ ಪಾಲಿಸುತ್ತ ಬಂದಿರುವುದರಿಂದ, "ಮುಕ್ತಕ" ಸ್ವರೂಪದ ಸುಭಾಷಿತಗಳಲ್ಲಿ ಛಂದೋಬಂಧದ ಸೌಂದರ್ಯವು ಕಿರಿದರಲ್ಲಿ ಪಿರಿಯ ಅರ್ಥವನ್ನು ಹೇಳುವ ಕವಿಪ್ರತಿಭೆಯ ಸೌಂದರ್ಯದೊಡನೆ ಕೂಡಿರುವುದರಿಂದ ಶ್ಲೋಕಗಳೇ ಇಲ್ಲಿ ಹೆಚ್ಚಾಗಿ ಆಯ್ಕೆಯಾದವು. "ಶೋಕಃ ಶ್ಲೋಕತ್ವಮಾಗತಃ" ಎಂಬ ವಾಲ್ಮೀಕಿ ಸೂತ್ರವಂತೂ ಸುಪ್ರಸಿದ್ಧ. ಸ್ವಚ್ಛಂದವು ಛಂದವಲ್ಲ, ಮುಕ್ತಚ್ಛಂದವು ಛಂದೋಬಂಧವಲ್ಲ.

## ಸುಭಾಷಿತ ಸಂಗ್ರಾಹಕರ ನೈಪುಣ್ಯ

ಇಡಿ ಕೃತಿಗಳನ್ನು ಸೊಗಸಾಗಿ ಬರೆದು ಮಹಾಕವಿಗಳೆನ್ನಿಸಿದವರ ಕೃತಿಗಳಲ್ಲಿ ಸಿಗುವ ಸುಭಾಷಿತಗಳಂತೆಯೇ ಸಂಸ್ಕೃತ ಸಾಹಿತ್ಯದಲ್ಲಿ ಆ ಈ ಸಾಮಾನ್ಯ ಕವಿಯ

ಯಾವ ಕೃತಿಯೂ ಉಪಲಬ್ಧವಿಲ್ಲದಿದ್ದರೂ ಕಾವ್ಯ ಸಂಗ್ರಹ (ಸಂಕಲನ)ಕಾರರು ತಮ್ಮ ಸುಭಾಷಿತ ಗ್ರಂಥಗಳಲ್ಲಿ ಅಂಥವನ ಒಂದೇ ಒಂದು ಪದ್ಯ ಚೆನ್ನಾಗಿದ್ದರೂ, ಅದನ್ನು ಆಯ್ದು ಸಂಗ್ರಹಿಸಿಡುವ ವಿಮರ್ಶನ ನೈಪುಣ್ಯವನ್ನು ಮೆರೆಸಿದ್ದಾರೆ. ಈ ಸಂಗ್ರಹದಲ್ಲಿ ಒಂದೆರಡು ಶಿಲಾಶಾಸನ ಮತ್ತು ಸುಭಾಷಿತಸುಧಾನಿಧಿ ಹಾಗೂ ಶಾರ್ಙ್ಗಧರ ಪದ್ಧತಿಗಳಿಂದ ಆಯ್ದ ಶ್ಲೋಕಗಳು ಆ ಪ್ರಕಾರದವುಗಳಾಗಿವೆ. ಚೆನ್ನಾಗಿರುವುದು ಎಲ್ಲಿದ್ದರೂ, ಅದನ್ನು ಸಂಗ್ರಹಿಸುವ (ಅದು ಶಾಸ್ತ್ರಾರ್ಥವನ್ನೊಳಗೊಂಡಿರಲಿ ಅಥವಾ ಕಾವ್ಯ ಸೌಂದರ್ಯವನ್ನು ಪ್ರಧಾನ ಉಳ್ಳದ್ದಾಗಿರಲಿ) ಸುಭಾಷಿತ ಸಂಗ್ರಾಹಕರ ನೀತಿಯನ್ನು ಪ್ರಸ್ತುತ ಸಂಗ್ರಹ ಅನುಸರಿಸಿದೆ. ಒಂದು ಮಹಾನಾಗರಿಕತೆಯ ಮಹಾವೀಚಿಗಳೆನ್ನಿಸುವ ಗ್ರಂಥಗಳ ಅತಿಸಂಖ್ಯೆಯಿಂದ ತುಂಬಿರುವ ಸಂಸ್ಕೃತ ಸಾಹಿತ್ಯ ಸಾಗರದಿಂದ ಈ ಸುಭಾಷಿತಗಳನ್ನು ನಾನಾ ವಿಧದ ವ್ಯಾವಹಾರಿಕ ತೊಂದರೆಗಳ ನಡುವೆ ಆಯ್ದು ಅನುವಾದಿಸುತ್ತ ಹೋದ ಪ್ರಸ್ತುತ ಭಾಷಾಂತರಕಾರನ ಲೋಪದೋಷಗಳನ್ನು ವಿದ್ವಾಂಸರು ಕ್ಷಮಿಸಬೇಕೆಂದು ನಮ್ರ ಪ್ರಾರ್ಥನೆ.

## ನಿಯಾಮಕ ಸೂತ್ರ

ವಸ್ತು, ಪಾತ್ರ, ರಸಗಳನ್ನು ನಿಯಾಮಕ ಸೂತ್ರಗಳನ್ನಾಗಿ ತೆಗೆದುಕೊಂಡು ಮಾಡಿದ ಈ ಸುಭಾಷಿತ ಸಂಗ್ರಹವು ಭಾಷಾಂತರದಲ್ಲಿ ಮೂಲಕ್ಕೆ ಅತ್ಯಂತ ನಿಕಟವರ್ತಿಯಾಗಿರುವುದರ ಜೊತೆಗೆ, ಶತಮಾನಗಳಿಂದ ಸುಪ್ರಸಿದ್ಧವಾದ ಕನ್ನಡ ವಾಕ್ಯ ರಚನಾ ಪದ್ಧತಿಯ ಮೂಲಭೂತ ನಿಯಮಗಳನ್ನೂ ಭಾಷಾವಿಶಿಷ್ಟ ರೀತಿ ಶುಚಿಯನ್ನೂ ಆದಷ್ಟು ಮಟ್ಟಿಗೆ ಕಾಯ್ದುಕೊಂಡು ಬರಲಾಗಿದೆ. ತತ್ಸಮ, ತದ್ಭವ, ದೇಶ್ಯಗಳೆಲ್ಲವೂ ಕನ್ನಡ ಪದಗಳೇ ಎಂಬುದನ್ನು ಭಾಷಾಂತರಕಾರ ಇಲ್ಲಿ ಮರೆತಿಲ್ಲ. ಸಂದರ್ಭಗಳು ಅಸ್ಪಷ್ಟವಾಗಬಹುದಾದ ಸನ್ನಿವೇಶಗಳಲ್ಲಿ ಅವುಗಳ ಸೂಕ್ಷ್ಮ ಪರಿಚಯ ಆಗಿಂದಾಗ ಓದುಗನಿಗಾಗುವಂತೆ ತಕ್ಕ ಪದಗಳಿಂದ ಅವುಗಳನ್ನು ಭಾಷಾಂತರದಲ್ಲಿ ಸೂಚಿಸಲಾಗಿದೆ; ಕೆಲವೆಡೆ ಆವರಣ ಚಿಹ್ನಗಳಿಂದ ಅಂಥ ಪದಗಳನ್ನು ಪ್ರತ್ಯೇಕಿಸಿ ತೋರಿಸಲಾಗಿದೆ. ಕರ್ನಾಟಕ ವಿಶ್ವವಿದ್ಯಾನಿಲಯದ ಪಠ್ಯಪುಸ್ತಕ ನಿರ್ದೇಶನ ಸಮಿತಿಯವರು ತಮ್ಮ ಸಂಸ್ಕೃತ ಶಾಖೆಯ ಮುಖ್ಯ ಆಚಾರ್ಯರ ಮೂಲಕ ಈ ಕಾರ್ಯವನ್ನು ಮಾಡಲು ಪ್ರಸ್ತುತ ಲೇಖಕನಿಗೆ ಅವಕಾಶ ಮಾಡಿಕೊಟ್ಟದ್ದು ಸಮಿತಿಯ ಹಾಗೂ ಆಚಾರ್ಯರ ಸಮಾಜ ಶಿಕ್ಷಣ ದೃಷ್ಟಿಗೆ ನಿದರ್ಶನವಾಗಿದೆ.

ಕನ್ನಡತಾಯ ಸಂಸ್ಕೃತಿಯ ಸಂಸ್ಕೃತ ಸೆಲೆಗೆ

ಜಯವಾಗಲಿ!

೮–೧೦–೧೯೭೦ **–ಬಿ.ಎಚ್.ಶ್ರೀಧರ**

# ಪರಿವಿಡಿ

## ಅಧ್ಯಾಯ ೧

# ಪ್ರೇಮ ಮತ್ತು ಗೃಹಸ್ಥಜೀವನ

### 1. ನಗರ ಮತ್ತು ಮನೆಗಳು

समुद्रवेला रतिरत्नसम्पदा
वधू तडित्ताण्डवमेघमण्डली ।
नभःस्थली विभ्रमतारकस्रजा
विभाति यत्र स्मरतल्पकल्पना ॥१॥

यदीय सौधध्वजपट्टपट्टिकाः
समुच्चलन्मौक्तिककान्तिनिर्झरैः ।
नभस्तलान्दोलन विभ्रमाहृतं
विनिक्षिपन्तीव सुरापगापयः ॥२॥

प्रकर्षवत्या कपिशीर्षमालया
यदुद्भटस्फाटिक वप्रसंहतिः ।
विलोकयत्यम्बरकेलिदर्पणे
विलासधौतामिव दन्तमण्डलीम् ॥३॥

समुच्छलन्मौक्तिक कान्तिवारिभिः
सुवर्णकुम्भैःसुरसद्ममूर्धगैः ।
प्रपापिपासा परितापशान्तये
नभश्चरीणामिव येन निर्मिता ॥४॥

## ಅಧ್ಯಾಯ ೧

# ಪ್ರೇಮ ಮತ್ತು ಗೃಹಸ್ಥಜೀವನ

### ೧. ನಗರ ಮತ್ತು ಮನೆಗಳು

೧. ಅಲ್ಲಿ ತನ್ನ ರತಿ-ರತ್ನ ಸಂಪತ್ತಿನಿಂದ ಕಡಲ ಬೇಲೆಯೂ, ತನ್ನ ಪ್ರೇಯಸಿಯಾದ ಮಿಂಚಿನ ಕುಣಿತದಿಂದ ಮುಗಿಲೊಡ್ಡೂ, ವಿಲಾಸಪೂರ್ಣವಾದ ತಾರಾಹಾರದಿಂದ ಬಾಂದಳವೂ ಮನ್ಮಥನ ಹಾಸಿಗೆಯ ಸ್ವರೂಪದಲ್ಲಿ ರಾರಾಜಿಸುತ್ತವೆ.

೨. ಆ ನಗರದ ಸೌಧಗಳ ಧ್ವಜಗಳ ರೇಶಿಮೆಯ ಪಟ್ಟಿಗಳು ತಮ್ಮ ಮುತ್ತಿನ ಕಾಂತಿಯೆಂಬ ನೀರಿನ ಬೆಟ್ಟದೊರೆಗಳಿಂದ, ಆಕಾಶದಲ್ಲಿ ಅತ್ತಿತ್ತ ಚಲಿಸುವ ವಿಲಾಸದೊಡನೆ, ದೇವಗಂಗೆಯ ನೀರನ್ನು ತಂದು ಚಿಮುಕಿಸುತ್ತಿರುವಂತೆ ತೋರುತ್ತದೆ.

೩. ಅಲ್ಲಿ ದೊಡ್ಡ ಸ್ಫಟಿಕಶಿಲೆಯಿಂದ ನಿರ್ಮಿತವಾದ ನಗರಪ್ರಾಕಾರಗಳ ಸಮೂಹಕ್ಕೆ ದೊಡ್ಡ-ದೊಡ್ಡ ಕೊತ್ತಳಗಳಿವೆ. ಆಗಸವೆಂಬ ಆಡುಗನ್ನಡಿಯಲ್ಲಿ ಆ ನಗರಿಯು, ವಿಲಾಸದಿಂದ ತೊಳೆದು ಚೊಕ್ಕವಾಡಿದಂಥ ಹಲ್ಲುಗಳಂತಿರುವ ಆ ಕೊತ್ತಳಗಳನ್ನು ನೋಡಿಕೊಳ್ಳುತ್ತಿರುವಂತೆ ತೋರುತ್ತದೆ.

೪. ದೇವಾಲಯಗಳ ಮೇಲಿರುವ ಚಿನ್ನದ ಕಲಶಗಳಿಂದ ಮುತ್ತಿನ ಕಾಂತಿಯ ನೀರು ಸಿಡಿದು ಹಾರುತ್ತಿರುವುದು, ಆಗಸದಲ್ಲಿ ಸಂಚರಿಸುವ ಅಪ್ಸರೆಯರಿಗೆ ಬಾಯಾರಿಕೆಯನ್ನು ಪರಿಹರಿಸಿಕೊಳ್ಳಲು ನಲ್ಲಿಗಳನ್ನು ನಿರ್ಮಿಸಿರುವ ಹಾಗೆ ತೋರುತ್ತದೆ.



जलाशया यत्र हसन्ति सन्ततं
नवेन्द्रनीलद्रवनिर्मलोदराः ।
शरत्समुत्सारितमेघकर्दमं
कलिन्दकन्या ह्रदमेचकं नभः ॥५॥

नृत्यन्मुग्धमयूरा मरकत धारा–
गृहावली सततम् ।
सेन्द्रायुध घननिवहा
प्रावृण्मूर्तेव यत्रास्ते ॥६॥

तनोति सा कोपिनि शान्तभावं
मनःसु यः कोऽपि निशान्तभावम् ।
खगाश्च यस्यां कलशालिकण्ठा
गृहाश्च भास्वत्कलशालिकण्ठाः ॥७॥

यत्सौधचन्द्रशालासु विहरन्त्यो मृगेक्षणाः ।
शशाङ्क.मवलम्बन्ते मुक्ताकन्दुकशङ्कया ॥८॥

यद्दीर्घिकासु माणिक्यामयसोपानचारिभिः
क्षणदास्वपि चक्राह्वैर्विरहो नानुभूयते ॥९॥

मारप्रशस्ति कृतपुस्तकमेव चूतः
षट्पादपङ्क्ति लिपिराजिविराजितानि ।
पत्राणि तत्र हि पठन्ति शुका : शृणोति
चैत्र : समं द्विजवरैर्मुदितान्तरङ्गैः ॥१०॥

हस्ते लीलाकमलमलके बालकुन्दानुविद्धं
नीता लोध्रप्रसवरजसा पांडुतामानन श्री : ।
चूडापाशे नवकुरबकं चारुकर्णे शिरीषं
सीमन्ते च त्वदुपगमजं यत्र नीपं वधूनाम् ॥११॥

೫. ಅಲ್ಲಿ ಜಲಾಶಯಗಳು ನಿತ್ಯವೂ ನಗುತ್ತಿರುತ್ತವೆ; ಅವುಗಳಲ್ಲಿ ಹೊಸ ನೀಲಮಣಿಯ ರಸದಂಥ ನಿರ್ಮಲವಾದ ನೀರಿರುತ್ತದೆ. ಶರದ್‌ಋತು ಬಂದ ಮೇಲೆ, ಮೋಡಗೆಸರನ್ನು ತೆಗೆದು ಸ್ವಚ್ಛಮಾಡಿದ ಮತ್ತು ಯಮುನಾನದಿಯ ಗುಂಡಿಯಷ್ಟು ನೀಲವಾಗಿರುವ ಆಗಸವೂ ಹಾಗೇ ನಗುಮೊಗವುಳ್ಳದ್ದಾಗಿದೆ.

೬. ಅಲ್ಲಿ ಪಚ್ಚೆಯ ಕಾರಂಜಿಗಳು ಪುಟಿಯುತ್ತಿವೆ; ಯಾವಾಗಲೂ ಮುದ್ದಾದ ನವಿಲುಗಳು ಕುಣಿಯುತ್ತಿರುತ್ತವೆ; ಮೋಡದೊಡ್ಡುಗಳು ಕಾಮನ ಬಿಲ್ಲುಗಳಿಂದ ಕೂಡಿರುತ್ತವೆ; ಮಳೆಗಾಲವು ಮೈದಳೆದಂತಿರುತ್ತದೆ.

೭. ಆ ನಗರಿಯು ಸಿಟ್ಟಿನ ಮನುಷ್ಯನಲ್ಲಿ ಶಾಂತಭಾವವನ್ನು ಹಸರಿಸುತ್ತದೆ, ಮನದಲ್ಲಿ ಯಾವುದೋ ಒಂದು ವಿಧದ ತಂಬೆಳರನ್ನು ತುಂಬುತ್ತದೆ. ಅಲ್ಲಿಯ ಹಕ್ಕಿಗಳು ಇನಿಗೊರಲಿನವು, ಮನೆಗಳು ಹೊಳೆವ ಕಲಕಂಠದ ಕೊಡಗಳಿಂದ ತುಂಬಿರುತ್ತವೆ.

೮. ಅದರ ಮಹಡಿಮನೆಗಳ ಚಂದ್ರಶಾಲೆಗಳಲ್ಲಿ ಚಿಗುರೆಗಣ್ಣಿನ ಚೆಲುವೆಯರು ತಿರುಗಾಡುತ್ತಿರುತ್ತಾರೆ; ಅವರು ಮುತ್ತಿನ ಚೆಂಡೆಂಬ ಭ್ರಾಂತಿಯಿಂದ ಚಂದ್ರನನ್ನು ಹಿಡಿಯುತ್ತಿರುತ್ತಾರೆ.

೯. ಅಲ್ಲಿ ಮಾಣಿಕ್ಯದಿಂದ ಮಾಡಿರುವ ಮೆಟ್ಟಿಲಿನ ಕೆರೆಗಳಿವೆ; ಅವುಗಳ ಮೆಟ್ಟಿಲುಗಳ ಮೇಲೆ ತಿರುಗಾಡುವ ಜಕ್ಕವಕ್ಕಿಗಳು ಇರುಳಲ್ಲಿ ಕೂಡ ವಿರಹವನ್ನು ಅನುಭವಿಸವು.

೧೦. ಅಲ್ಲಿಯ ಮಾಮರವು ಮನ್ಮಥನ ಪ್ರಶಸ್ತಿಗಾಗಿಯೇ ರಚಿಸಿದ ಒಂದು ಹೊತ್ತಗೆ. ಆ ಹೊತ್ತಗೆಯು ತುಂಬಿಸಾಲುಗಳೆಂಬ ಅಕ್ಷರಪಂಕ್ತಿಗಳಿಂದ ವಿರಾಜಿಸುತ್ತದೆ. ಅದರ ಎಲೆಗಳೆಂಬ ಹಾಳೆಗಳಲ್ಲಿ ಬರೆದುದನ್ನು ಗಿಳಿಗಳು ಓದುತ್ತವೆ; ಅದನ್ನು ಪ್ರಸನ್ನಚಿತ್ತದ ಶ್ರೇಷ್ಠ ಹಕ್ಕಿಗಳೊಡನೆ ಚೈತ್ರಮಾಸವು ಕೇಳುತ್ತದೆ.

೧೧. ಅಲ್ಲಿಯ ತರುಣಿಯರ ಕೈಯಲ್ಲಿ ಲೀಲಾಕಮಲ; ಮುಂಗುರುಳಿನಲ್ಲಿ ಎಳೆಮಲ್ಲಿಗೆ ಸರ. ತಮ್ಮ ಮೊಗದ ಕಳೆಯನ್ನವರು ಲೋಧ್ರಪರಾಗದಿಂದ ಬೆಳ್ಳಗೆ ಮಾಡಿಕೊಳ್ಳುತ್ತಾರೆ; ಹಿಂದಲೆಯಲ್ಲಿ ಹೊಸ ಗೋರಟೆಯನ್ನು ಮುಡಿದಿರುವ ಅವರ ಚೆಲುವಾದ ಕಿವಿಯಲ್ಲಿ ರಂಜಲ ಹೂವಿರುತ್ತದೆ; ಬೈತಲೆಯಲ್ಲಿ ನಿನ್ನ (ಮೋಡದ) ಬರವಿನಿಂದ ಅರಳಿದ ಈಚಲ ಹೂ!

विद्युत्वन्तं ललितवनिताः सेन्द्रचापं सचित्राः
सङ्गीताय प्रहतमुरजाः स्निग्धपर्जन्यघोषम् ।
अन्तस्तोयं मणिमयभुवस्तुङ्गमभ्रंलिहाग्रा :
प्रासादास्त्वां तुलयितुमलं यत्र तैस्तैर्विशेषै : ॥१२॥

प्रतिनगरमिहारामाः प्रत्यारामं पचेलिमाः क्रमुकाः ।
प्रसवाः प्रतिक्रमकमप्युपसर्पति मधुपतिः प्रतिप्रसवम् ॥१३॥

प्रतिमधु बिन्दु मिलिन्दाः प्रेङ्खन्ति प्रतिमिलिन्दमारावा :।
प्रत्यारावं सुदृशां मदा उदाराः प्रतिमदं मदनः ॥१४॥

## ೨. ಪ್ರೇಮಾಲಾಪಗಳು

त्वन्मुखं पुण्डरीकं च फुल्ले सुरभिगन्धिनी ।
भ्रमद्भ्रमरमम्भोजं लोलनेत्रं मुखं तु ते ॥१५॥

नैतन्मुखमिदं पद्मं न नेत्रे भ्रमराविमौ
एतानि केसराण्येव नैता दन्तार्चिषस्तव ॥१६॥

मदरक्तकपोलेन मन्मथस्त्वन्मुखेन्दुना ।
नर्तितभ्रूलतेनालं मर्दितुं भुवनत्रयम् ॥१७॥

अङ्गुल्यः पल्लवान्यासन् कुसुमानि नखार्चिषः ।
बाहूलते वसन्तश्रीस्त्वं नः प्रत्यक्षचारिणी ॥१८॥

व्यूढोरस्को वृषस्कन्धः सालप्रांशुर्महाभुजः ।
आत्मकर्मक्षमं देहं क्षात्रो धर्म इवाश्रितः ॥१९॥

೧೨. ಸುಂದರಿಯರಿಂದ, ಚಿತ್ರಗಳಿಂದ, ಸಂಗೀತಕ್ಕಾಗಿ ಬಡಿಯಲಾಗುವ ಮದ್ದಲೆಗಳಿಂದ, ರತ್ನಖಚಿತವಾದ ನೆಲಗಳಿಂದ ಮತ್ತು ಮುಗಿಲು ಮುಟ್ಟುವ ಮಾಡಿನ ತುದಿಗಳಿಂದ ಕೂಡಿದ ಅಲ್ಲಿಯ ಅರಮನೆಗಳು ಮಿಂಚಿನಿಂದ, ಕಾಮನಬಿಲ್ಲಿನಿಂದ, ಆಹ್ಲಾದಕರವಾದ ಗುಡುಗಿನಿಂದ ಮತ್ತು ಒಳಗೆ ತುಂಬಿಕೊಂಡ ನೀರಿನಿಂದ ಉನ್ನತವಾದ ನಿನ್ನನ್ನು (ಮೋಡವನ್ನು) ತಮ್ಮ ವಿಶೇಷಗಳಿಂದ ಹೋಲುತ್ತದೆ.

೧೩. ಕರ್ನಾಟಕದ ನಗರ–ನಗರಗಳಲ್ಲಿ ತೋಟ, ತೋಟ–ತೋಟಗಳಲ್ಲಿ ಬೆಳೆದ ಅಡಿಕೆಮರ, ಮರ–ಮರಗಳಲ್ಲಿ ಸಿಂಗಾರ ಹೂ, ಹೂ–ಹೂಗಳಲ್ಲಿ ತುಂಬಿ ಸೊಗಯಿಸುತ್ತವೆ.

೧೪. ಮಕರದಂದದ ಆ ಹನಿ–ಹನಿಗಳಲ್ಲಿ ಒಂದೊಂದು ತುಂಬಿ ಆಡುತ್ತದೆ; ಆ ತುಂಬಿ–ತುಂಬಿಗಳಲ್ಲಿ ಗುಂಜಾರವದ ಉದಯ; ಅಂಥ ರವ–ರವಗಳಿಗೆ ಚೆಲುವು ಗಣ್ಣಿನ ನಾರಿಯರ ಮದೋಲ್ಲಾಸ ಮತ್ತು ಆ ಮದೋಲ್ಲಾಸಗಳಿಂದ ಪ್ರೇಮೋತ್ಪತ್ತಿ!

## ೨. ಪ್ರೇಮಾಲಾಪಗಳು

೧೫. ನಿನ್ನ ಮೊಗವೂ ಬೆಳ್ದಾವರೆಯೂ ಅರಳಿವೆ; ಮತ್ತು ಪರಿಮಳಿಸುತ್ತಿವೆ. ಆದರೆ ತಾವರೆಯ ಸುತ್ತಲೂ ತುಂಬಿ ತಿರುಗುತ್ತಿದೆ. ನಿನ್ನ ಮೊಗದಲ್ಲಿ ಕಣ್ಣುಗಳು ಚಲಿಸುತ್ತಿವೆ.

೧೬. ಇದು ಮೊಗವಲ್ಲ, ತಾವರೆ; ಇವು ಕಣ್ಣುಗಳಲ್ಲ, ತುಂಬಿಗಳು; ಇವು ಕೇಸರಗಳೇ ಸರಿ, ನಿನ್ನ ದಂತಕಿರಣಗಳಲ್ಲ.

೧೭. ನಿನ್ನ ಮುಖಚಂದ್ರನಲ್ಲಿ ಮದದಿಂದ ಕೆಂಪಾದ ಕೆನ್ನೆಯಿದೆ, ಕುಣಿಯುವ ಹುಬ್ಬುಗಳಿವೆ; ಮನ್ಮಥನಿಗಿದು ಮೂರು ಲೋಕಗಳನ್ನು ಮರ್ದಿಸಲು ಸಾಕು.

೧೮. ನಮ್ಮೆದುರು ತಿರುಗುತ್ತಿರುವ ನೀನು ವಸಂತ ಋತುವಿನ ಸಿರಿಯೇ ಸರಿ; ನಿನ್ನ ಬೆರಳುಗಳೇ ಚಿಗುರುಗಳು, ಉಗುರು ಮಿಂಚುಗಳೇ ಹೂವುಗಳು, ತೋಳುಗಳೇ ಬಳ್ಳಿಗಳು!

೧೯. ಇವನ ಎದೆ ಅಗಲವಾಗಿದೆ; ಇವನಿಗೆ ಎತ್ತಿನಂಥ ಹೆಗಲುಗಳಿವೆ; ಇವನು ಸಾಲ ವೃಕ್ಷದಷ್ಟು ಎತ್ತರವಾಗಿದ್ದಾನೆ; ಇವನೊಬ್ಬ ನೀಳ್ದೋಳಿನವ; ಇವನನ್ನು ಕಂಡರೆ ಕ್ಷಾತ್ರಧರ್ಮವು ತನ್ನ ಕರ್ತವ್ಯ ನಿರ್ವಹಣಕ್ಕಾಗಿ ತಕ್ಕ ದೇಹವನ್ನು ತಾಳಿ ನಿಂತಂತೆ ತೋರುತ್ತದೆ.

आकारसदृशप्रज्ञः प्रज्ञया सदृशागमः ।
आगमैः सदृशारम्भ आरम्भसदृशोदयः ॥२०॥

तव न जाने हृदयं मम पुनः कामो दिवापि रात्रावपि ।
निघृण तपति बलीयस्त्वयि वृत्तमनोरथाया अङ्गानि ॥२१॥

मयि मलयसमीरो वर्षतीव स्फुलिङ्गान्
अहह हिमकरो मामग्निना सिञ्चतीव ।
किमिति मकरकेतोः किं नु वक्ष्ये कठोरे
कथमपि तदहं ते नाथ नोपेक्षणीया ॥२२॥

यदुच्यते पार्वति पापवृत्तये
न रूपमित्यव्यभिचारि तद्वचः ।
तथा हि ते शीलमुदारदर्शने
तपस्विनामप्युपदेशतां गतम् ॥२३॥

तपति तनुगात्रि मदनस्त्वामनिशं मां पुनर्दहत्येव
ग्लपयति यथा शशाङ्कं न तथाहि कुमुद्वतीं दिवसः ॥२४॥

अनातुरोत्कण्ठितयोः प्रसिध्यता ।
समागमेनापि रतिर्न मां प्रति ।
परस्पर प्रीति निराशयोर्वरं
शरीरनाशोऽपि समानुरागयोः ॥२५॥

विरहेऽपि सङ्गमः खलु परस्परं सङ्गतं मनो येषाम् ।
हृदयं विघट्टितं चेत् सङ्गो विरहं विशेषयति ॥२६॥

೨೦. ಇವನಲ್ಲಿ ಆಕೃತಿಗೆ ಸದೃಶವಾದ ಪ್ರಜ್ಞೆಯಿದೆ, ಪ್ರಜ್ಞೆಗೆ ತಕ್ಕ ಪಾಂಡಿತ್ಯವಿದೆ; ಇವನ ಕಾರ್ಯಾರಂಭಗಳು ಇವನ ಪಾಂಡಿತ್ಯಕ್ಕೆ ತಕ್ಕಂಥವುಗಳಾಗಿವೆ; ಅವುಗಳಿಗೆ ಸರಿಯಾದ ಸಮೃದ್ಧಿಯನ್ನು ಇವನು ಪಡೆದಿದ್ದಾನೆ.

೨೧. ಎಲೈ ನಿರ್ದಯನೇ, ನಿನ್ನ ಹೃದಯ ನನಗರಿಯದು. ನನ್ನನ್ನಾದರೋ ಹಗಲಿರುಳೂ ಬಲಿಷ್ಠನಾದ ಮನ್ಮಥನು ಕಾಯಿಸುತ್ತಿದ್ದಾನೆ; ಏಕೆಂದರೆ, ನನ್ನ ಅಂಗಾಂಗಗಳೆಲ್ಲವೂ ನಿನ್ನಲ್ಲಿ ಮಗ್ನವಾಗಿವೆ.

೨೨. ಎಲೈ ಮಾರುತನೇ, ಮಲಯಮಾರುತನು ನನ್ನ ಮೇಲೆ ಕಿಡಿಗಳನ್ನು ಸುರಿಸುತ್ತಿರುವಂತೆ ತೋರುತ್ತದೆ; ಅಹಹಾ, ತಂಗದಿರನು ನನ್ನ ಮೇಲೆ ಬೆಂಕಿಯನ್ನು ಚಿಮುಕಿಸುತ್ತಿರುವ ಹಾಗೆ ಭಾಸವಾಗುತ್ತದೆ. ಉಗ್ರನಾದ ಮನ್ಮಥನ ವಿಷಯವಾಗಿ ಏನು ಹೇಳಲಿ? ನಾನು ನಿನ್ನವಳು; ಏನೇ ಆದರೂ ನೀನು ನನ್ನನ್ನು ಉಪೇಕ್ಷಿಸದಿರು.

೨೩. ಎಲೈ ಪರ್ವತರಾಯನ ಮಗಳೇ, ರೂಪವಿರುವುದು ಪಾಪಾಚಾರಕ್ಕಲ್ಲ ಎಂಬ ಮಾತಿಗೆ ವ್ಯತ್ಯಯವಿಲ್ಲ; ಎಲೈ ಉದಾರಸ್ವರೂಪಿಣಿಯೇ, ಆದ್ದರಿಂದಲೇ ನಿನ್ನ ಶೀಲವು ತಪಸ್ವಿಗಳಿಗೆ ಕೂಡ ಒಂದು ಉಪದೇಶವಾಗಿ ಕಾಣುವಂತಾಯ್ತು!

೨೪. ಎಲೈ ತೆಳುಮೈಯವಳೇ, ಮನ್ಮಥನು ನಿನ್ನನ್ನು ಕಾಯಿಸುತ್ತಿದ್ದಾನೆ; ನನ್ನನ್ನಾದರೋ ಯಾವಾಗಲೂ ಸುಡುತ್ತಲೇ ಇದ್ದಾನೆ. ಹಗಲು ಚಂದ್ರನನ್ನು ಗ್ಲಾನಿಗೀಡುಮಾಡುವಂತೆ, ತಾವರೆಬಳ್ಳಿಯನ್ನು ಈಡು ಮಾಡುವುದಿಲ್ಲ.

೨೫. ಪ್ರೇಮಿಗಳಲ್ಲಿ ಒಬ್ಬರು ಉದಾಸೀನರಾಗಿಯೂ, ಇನ್ನೊಬ್ಬರು ಉತ್ಕಂಠಿತರಾಗಿಯೂ ಇದ್ದಾಗ, ಅವರ ಮಿಲನವು ಯಶಸ್ವಿಯಾಗಿ ನೆರವೇರಿದರೂ ಅದು ನನಗೆ ಸೇರದು; ಅದಕ್ಕಿಂತ, ಪರಸ್ಪರ ಸಮಾನ ಪ್ರೀತಿಯುಳ್ಳ ಪ್ರಿಯ ಪ್ರೇಯಸಿಯರು ಕೂಡಲಾರದೆ ನಿರಾಶೆಯಿಂದ ಸೊರಗಿ ಹೋಗುವುದೇ ಲೇಸು!

೨೬. ಮನಗಳು ಪರಸ್ಪರ ಸಂಗತವಾಗಿರುವವರಲ್ಲಿ ವಿರಹದಲ್ಲೂ ಮಿಲನವಿದೆ; ಹೃದಯಗಳು ಪರಸ್ಪರ ಹೊಂದಿಕೊಳ್ಳದಿರುವವರಲ್ಲಿ ಮಿಲನವು ವಿರಹವನ್ನು ಮೀರಿಸುವ ಯಾತನೆಯನ್ನುಂಟು ಮಾಡುತ್ತದೆ!

दुर्लभः प्रियो मे तस्मिन् भव हृदय निराशं
अहो अपाङ्गको मे प्रस्फुरति किमपि वामकः ।
एष स चिरदृष्टः कथमुपनेतव्यो
नाथ मां पराधीनां त्वयि गणय सतृष्णाम् ॥२७॥

शशधर इव लोचनाभिरामैर्
गगनविसारिभिरंशुभिः परीतः ।
शिखरनिचयमेकसानुसद्मा
सकलमिवापि दधन्महीधरस्य ॥२८॥

ऋतुर्व्यतीतः परिवर्तते पुनः
क्षयं प्रयातः पुनरेति चन्द्रमाः ।
गतं गतं नैव तु सन्निवर्तते
जलं नदीनां च नृणां च यौवनम् ॥२९॥

सा मां द्रक्ष्यति वक्षति प्रियकथां प्रत्यिङ्गमालिङ्गनै :
प्रीतिं यास्यति रंस्यते सखि समागत्येति चिन्ताकुलः ।
सत्वां पश्यति कम्पते पुलकयत्यानन्दति स्विद्यति
प्रत्युद्गच्छति मूर्च्छति स्थिरतमः पुञ्जे निकुञ्जे प्रियः ॥३०॥

प्रयान्तीव प्राणाः सुतनु हृदयं ध्वंसत इव
ज्वलन्तीवाङ्गानि प्रसरति समन्तादिव तमः
त्वराप्रस्तावोऽयं न खलु परिहासस्य विषयम्
तदक्ष्णोरानन्दं वितर मयि मभूरकरुणा ॥३१॥

गूढा नूपुरशब्दमात्रमपि मे कान्ता श्रुतौ पातयेत्
पश्चादेत्य शनैः कराम्बुजवृते कुर्वीत वा लोचने।
हर्म्यैऽस्मिन्नवतीर्य साध्वसवशान्मन्दायमाना बलाद्
आनीयेत पदात् पदं चतुरया सख्या ममोपान्तिकम् ॥३२॥

೨೭. ನನಗೆ ಪ್ರಿಯನು ದುರ್ಲಭನಾಗಿದ್ದಾನೆ. ಎಲೈ ಹೃದಯವೇ, ಆಶೆಯನ್ನು ಬಿಡು. ಆದರಿದೇನು? ನನ್ನ ಎಡಗಣ್ಣು ಹಾರುತ್ತಿದೆ! ಯಾವಾಗಲೂ ಕಂಡ ಈತನನ್ನು ಹತ್ತಿರಕ್ಕೆ ಕರೆತರುವುದು ಹೇಗೆ? ಎಲೈ ನಲ್ಲನೇ, ಪರಾಧೀನೆಯಾದ ನನ್ನನ್ನು ನಿನ್ನಲ್ಲಿ ಪ್ರೀತಿಯನ್ನಿಟ್ಟುಕೊಂಡಿರುವವಳೆಂದು ತಿಳಿ.

೨೮. ಚಂದ್ರನಂತೆ ಕಣ್ಣಿಗೆ ಚೆಂದವಾಗಿ ಕಾಣುವ, ಬಾನಲ್ಲಿ ಪಸರಿಸಿರುವ ಕಿರಣಗಳಿಂದ ಸುತ್ತುವರಿಯಲ್ಪಟ್ಟು, ಪರ್ವತದ ಒಂದು ತಪ್ಪಲಿನಲ್ಲಿ ಕುಳಿತ ಈತನು ಇಡಿ ಬೆಟ್ಟವನ್ನು ಆವರಿಸಿರುವಂತೆ ತೋರುತ್ತಾನೆ.

೨೯. ಕಳೆದ ಋತುವು ಪುನಃ ಬರುತ್ತದೆ. ಕ್ಷಯಿಸಿದ ಚಂದ್ರನು ಮತ್ತೆ ಬರುತ್ತಾನೆ. ಆದರೆ, ಹೊಳೆಗಳ ನೀರೂ, ಮಾನವರ ಯೌವನವೂ ಹೋದರೆ ಹೋಗಿಯೇ ಬಿಡುತ್ತವೆ. ಪುನಃ ತಿರುಗಿ ಬರುವುದಿಲ್ಲ.

೩೦. ಎಲೈ ಗೆಳತಿಯೇ, 'ಅವಳು ನನ್ನನ್ನು ನೋಡುವಳು, ಅಂಗಾಂಗಗಳನ್ನಪ್ಪಿ ಪ್ರಿಯವಾದ ಸುದ್ದಿಯನ್ನು ಹೇಳುವಳು. ಪ್ರೀತಳಾಗುವಳು, ಬಂದು ರಮಿಸುವಳು,' ಎಂಬ ಆಲೋಚನೆಯಿಂದ ಕೂಡಿದ, ನಿನ್ನಲ್ಲಿ ದೃಢ ಪ್ರೀತಿಯನ್ನಿಟ್ಟ ಪ್ರಿಯನು ದಟ್ಟವಾದ ಎಲೆವನೆಯಲ್ಲಿ ನಿನ್ನನ್ನು ನೋಡುವನು, ನಡುಗುವನು, ರೋಮಾಂಚನಹೊಂದುವನು, ಆನಂದಪಡುವನು, ಬೆವರುವನು, ಎದುರುಗೊಳ್ಳಬರುವನು ಹಾಗೂ ಮೈಮರೆಯುವನು!

೩೧. ಸುಂದರಿ, ಉಸಿರು ಹಾರಿಹೋಗುವ ಹಾಗಿದೆ, ಹೃದಯ ನಷ್ಟವಾಗಿ ಹೋಗುವಂತೆ ತೋರುತ್ತಿದೆ, ಕೈ–ಕಾಲು–ತಲೆಗಳು ಉರಿದು ಹೋಗುವ ಹಾಗೆನ್ನಿಸುತ್ತದೆ. ಹತ್ತಿರದಲ್ಲಿ ಕತ್ತಲು ಕವಿದುಕೊಂಡು ಬರುವಂತೆ ಕಾಣುತ್ತದೆ. ಇದು ಅವಸರದ ಮಾತು, ಪರಿಹಾಸದ ವಿಷಯವಲ್ಲ. ಆದುದರಿಂದ ಕಣ್ಣಿಗೆ ಆನಂದ ಕೊಡು, ನನ್ನಲ್ಲಿ ನಿಷ್ಕರುಣಿಯಾಗಬೇಡ!

೩೨. ನನ್ನ ನಲ್ಲೆಯು ಕಾಣಿಸಿಕೊಳ್ಳದೆ ತನ್ನ ಕಾಲಂದುಗೆಯ ಸದ್ದನ್ನು ಮಾತ್ರ ನನ್ನ ಕಿವಿಗೆ ಬೀಳಿಸಲಿ; ಆ ಮೇಲೆ ಮೆಲ್ಲನೆ ಬಂದು, ನನ್ನ ಕಣ್ಣುಗಳನ್ನು ತನ್ನ ಕರಕಮಲಗಳಿಂದ ಮುಚ್ಚಿದರೂ ಸರಿಯೆ. ಈ ಅರಮನೆಯಲ್ಲಿಳಿದು ಗಾಬರಿಯಿಂದ ನಡೆಯಲಾರಂಭಿಸಿದ ಅವಳನ್ನು ಒಂದೊಂದೇ ಹೆಜ್ಜೆಯನ್ನು ಒತ್ತಾಯದಿಂದ ಇಡಿಸುತ್ತ, ಅವಳ ಜಾಣ ಗೆಳತಿಯು ಅವಳನ್ನು ನನ್ನ ಹತ್ತಿರ ಕರೆತರಲಿ.

प्रेमार्द्राः प्रणयस्पृशः परिचयादुद्गाढ रागोदयास्
तास्ता मुग्धदृशो निसर्गमधुराश्चेष्टा भवेयुर्मयि ।
यास्वन्तः करणस्य बाह्यकरण व्यापार रोधीक्षणाद्
आशंसा परिकल्पितास्वपि भवत्यानन्दसान्द्रो लयः ॥३३॥

सानुरागाः सानुकम्पाश्चतुराः शीलशीतलाः ।
हरन्ति हृदयं हन्त कान्तायाः स्वान्तवृत्तयः ॥३४॥

सहिष्ये विरहं नाथ देह्यदृश्याञ्जनं मम ।
यदक्तनेत्रां कन्दर्पः प्रहर्ता मां न पश्यति ॥३५॥

गच्छ गच्छसि चेत् कान्त पन्थानः सन्तु ते शिवाः ।
ममापि जन्म तत्रैव भूयाद्यत्र गतो भवान् ॥३६॥

दलति हृदयं गाढोद्वेगं द्विधा तु न भिद्यते
वहति विकलः कायो मोहं न मुञ्चति चेतनम् ।
ज्वलयति तनूमन्तर्दाहः करोति न भस्मसात्
प्रहरति विधिर्मर्मच्छेदी न कृन्तति जीवीतम् ॥३७॥

लोलोल्लोलक्षुभितकरुणोज्जृम्भणस्तम्भनार्थं
यो यो यत्नः कथमपि समाधीयते तं तमन्तः ।
भित्वा भित्वा प्रसरति बलात् कोऽपि चेतोविकारस्
तोयस्येवाप्रतिहतरयः सैकतं सेतुमोघः ॥३८॥

हाहा देवि स्फुटति हृदयं ध्वंसते देहबन्धः
शून्यं मन्ये जगदविरतज्वालमन्तर्ज्वलामि ।
सीदन्नन्धे तमसि विधुरो मज्जतीवान्तरात्मा
विष्वङ्मोहः स्थगयति कथं मन्दभाग्यः करोमि ॥३९॥

೩೩. ಆ ಮುದ್ದುನೋಟಗಳ ಪ್ರೇಮಾರ್ದ್ರವೂ, ಪ್ರಣಯಸ್ಪರ್ಶಿಯೂ, ಸ್ವಭಾವತಃ ಮಧುರವೂ ಆದ ವಿವಿಧ ವರ್ತನೆಯು, ನನ್ನಲ್ಲಿಯ ಪರಿಚಯದ ಬಲದಿಂದ, ಗಾಢವಾದ ಭಾವೋದ್ರೇಕವನ್ನು ಪ್ರಕಟಿಸಲಿ. ಹಾಗೆ ಪ್ರಕಟಿಸುವುದನ್ನು ಕ್ಷಣಮಾತ್ರ ಮನಸ್ಸಿನಲ್ಲಿ ಊಹಿಸಿಕೊಂಡರೂ ಆ ಊಹೆ. ನನ್ನೆದೆಯಲ್ಲಿ ನನ್ನ ಬಾಹ್ಯ ಅವಯವಗಳ ಚಲನವಲನಗಳೆಲ್ಲವನ್ನೂ ಸ್ಥಗಿತಗೊಳಿಸುವಷ್ಟರಮಟ್ಟಿನ ಆಳವಾದ ಆನಂದ ಸಮಾಧಿಯನ್ನು ಸ್ಫುರಿಸುವಂತೆ ಮಾಡುವುದು!

೩೪. ಅಹಹಾ, ಅನುರಾಗ–ಅನುಕಂಪನಗಳಿಂದ ಕೂಡಿದ, ಚಾತುರ್ಯವುಳ್ಳ ಶೀಲದ ತಣ್ಪಿನಿಂದ ತುಂಬಿದ ನನ್ನವಳ ಹೃತ್ಪೂರ್ವಕವೂ, ವೈವಿಧ್ಯಪೂರ್ಣವೂ ಆದ ನಡತೆಯು ನನ್ನ ಮನಸ್ಸನ್ನು ಮಾರುಹೋಗುವಂತೆ ಮಾಡುವುದು!

೩೫. ನಲ್ಲ, ವಿರಹವನ್ನು ಸಹಿಸಿಕೊಳ್ಳುವೆನು; ನನಗೆ ಅದೃಶ್ಯವಾಗಲು ಬರುವಂಥ ಅಂಜನವನ್ನು ಕೊಡು. ಅಂಥ ಅಂಜನವನ್ನು ಕಣ್ಣಿಗೆ ಹಚ್ಚಿಕೊಂಡಾಗ ಹೊಡೆಯಲು ಬರುವ ಮನ್ಮಥನು ನನ್ನನ್ನು ಕಾಣನು.

೩೬. ಇನಿಯ, ಹೋಗುವುದಾದರೆ ಹೋಗು; ನಿನ್ನ ದಾರಿ ಶುಭವಾಗಲಿ. ನನ್ನ ಮರುಹುಟ್ಟು, ನೀನು ಹೋದಲ್ಲೇ ಉಂಟಾಗಲಿ,

೩೭. ಗಾಢವಾದ ಉದ್ವೇಗದಿಂದ ಕೂಡಿದ ಹೃದಯವು ಬಿರಿಯುತ್ತಿದೆ, ಆದರೆ ಒಡೆದು ಎರಡು ಹೋಳಾಗಲಿಲ್ಲ. ಗಾಬರಿಗೆಟ್ಟ ಈ ಮೈ ಮರವಟ್ಟು ಹೋಗಿದೆ; ಆದರಿದು ಜೀವವನ್ನು ಬಿಡಲಿಲ್ಲ. ಒಳಗಿನ ಉರಿಯು ಮೈಯನ್ನು ಸುಡುತ್ತಿದೆ, ಆದರೆ ಅದನ್ನು ಬೂದಿ ಮಾಡದಾಗಿದೆ. ಮರ್ಮಭೇದಕವಾದ ಅದೃಷ್ಟವು ಹೊಡೆಯುತ್ತಿದೆ, ಆದರದು ಜೀವಿತವನ್ನು ಕಡಿದು ತುಂಡು ಮಾಡದಾಗಿದೆ!

೩೮. ಅಲೆಯಲೆಯಾಗಿ ಏರಿಬರುವ ಕರುಣತರಂಗಗಳನ್ನು ತಡೆಯಲು ಬಹಳ ಕಷ್ಟದಿಂದ ಮಾಡಿದ ಪ್ರತಿಯೊಂದು ಪ್ರಯತ್ನವನ್ನೂ, ಯಾವುದೋ ಒಂದು ಮನೋವಿಕಾರವು–ಮಳಲಿನ ಸೇತುವನ್ನು ತಡೆಯಲಸಾಧ್ಯವಾದ ವೇಗವುಳ್ಳ ನೀರಿನ ಹೊನಲು ಒಡೆದು ಹರಡುವಂತೆ–ಬಲಾತ್ಕಾರದಿಂದ ಒಳಗೇ ಒಡೆದೊಡೆದು ಚೆಲ್ಲುತ್ತದೆ.

೩೯. ಅಯ್ಯೋ ದೇವಿ, ಹೃದಯ ಬಿರಿಯುತ್ತಿದೆ, ದೇಹದ ಸಂದುಗಳು ಕಳಚಿಹೋಗುತ್ತಿವೆ, ಜಗತ್ತು ಶೂನ್ಯವಾಗಿ ತೋರುತ್ತಿದೆ; ಎಡೆಬಿಡದೆ ಏಳುವ ಒಳವುರಿಯಿಂದ ಉರಿದುಹೋಗುತ್ತಿದ್ದೇನೆ; ವಿಧುರವಾದ ನನ್ನ ಈ ಅಂತರಾತ್ಮವು ಕುರುಡುಗತ್ತಲಲ್ಲಿ ಮುಳುಗುವಂತಿದೆ; ಸುತ್ತಲೂ ಜಡತೆ ನನ್ನನ್ನು ಸ್ಥಗಿತಗೊಳಿಸುತ್ತಿದೆ. ದುರ್ದೈವಿಯಾದ ನಾನು ಏನು ಮಾಡಲಿ?

पाटीरद्रुभुजङ्गपुङ्गव मुखोद्भूता वपुस्तापिनो
वाता वान्ति दहन्ति लोचनममी ताम्रा रसालद्रुमाः ।
श्रोत्रे हन्त किरन्ति कूजितमिमे हालाहलं कोकिला
बाला बालमृणालकोमलतनुः प्राणान् कथं रक्षतु ॥४०॥

याताः किं न मिलन्ति सुन्दरि पुनश्चिन्ता त्वया मत्कृते
नो कार्या नितरां कृशासि कथयत्योवं सबाष्पे मयि ।
लज्जामन्थरतारकेण निपतत्पीताश्रुणा चक्षुषा
दृष्ट्वा मां हसितेन भावि मरणोत्साहस्तयासूचितः ॥४१॥

प्रहर विरतौ मध्येवाह् नस्ततोऽपि परेण वा
किमुत सकले याते वाह् नि प्रिय त्वमिहैष्यसि ।
इति दिनशतप्राप्यं देशं प्रियस्य यियासतो
हरति गमनं बालालापैः सबाष्पगलज्जलैः ॥४२॥

अलमलमतिमात्रं साहसेनामुना ते
त्वरितमयि विमुञ्च त्वं लतापाशमेतम् ।
चलितमपि निरोद्धुं जीवितं जीवितेशे
क्षणमिह मम कण्टे बाहुपाशं निधेहि ॥४३॥

प्राणेशेन प्रहितनखरेष्वङ्गकेषु क्षपान्ते
जातातङ्का रचयति चिरं चन्दनालेपनानि ।
धत्ते लाक्षामसकृदधरे दन्त दन्तावघाते
क्षामाङ्गीयं चकितमभितश्चक्षुषी विक्षिपन्ति ॥४४॥

मयि सकपटं किञ्चित् क्वापि प्रणीतविलोचने
किमपि नयनं प्राप्ते तिर्यग्विजृम्भित तारकम् ।
स्मितमुपगतामालीं दृष्ट्वा सलज्जमवाञ्चितं
कुवलयदृशः स्मेरं स्मेरं स्मरामि तदाननम् ॥४५॥

೪೦. ಅಯ್ಯೋ, ಗಂಧದಮರಗಳಲ್ಲಿರುವ ಮಹಾಸರ್ಪಗಳ ಬಾಯಿಂದ ಹೊರಟ ಮೈಯುರಿಸುವ ಗಾಳಿ ಬೀಸುತ್ತಿದೆ. ಈ ಕೆಂಪಾದ ಮಾಮರಗಳು ಕಣ್ಣನ್ನು ಸುಡುತ್ತವೆ. ಈ ಕೋಗಿಲೆಗಳ ಕುಕಿಲು ಕಿವಿಯಲ್ಲಿ ಹಾಲಾಹಲವನ್ನು ಚೆಲ್ಲುತ್ತವೆ. ಹೀಗಿರುವಾಗ, ತಾವರೆ ದಂಟಿನಷ್ಟು ಮೃದುವಾದ ಮೈಯ ಈ ಬಾಲೆ ಹೇಗೆ ಪ್ರಾಣವನ್ನು ಕಾಪಾಡಿಕೊಂಡಿರಬಲ್ಲಳು?

೪೧. "ಎಲ್ಲೈ ಚೆಲುವೆ, ಹೋದವರು ಮತ್ತೆ ಬಂದು ಭೇಟಿಯಾಗುವುದಿಲ್ಲವೇನು? ಆದುದರಿಂದ ನನಗಾಗಿ ನೀನು ಚಿಂತೆ ಮಾಡಬಾರದು. ನೀನು ತುಂಬ ಸೊರಗಿದ್ದೀಯೆ"–ಎಂದು ನಾನು ಕಣ್ಣೀರುಬಿಡುತ್ತ ಹೇಳುತ್ತಿದ್ದಾಗ, ಅವಳು ನಾಚಿಕೆಯಿಂದ ಮಂದವಾದ ಗುಡ್ಡೆಗಳಿಂದ ಕೂಡಿದ ಮತ್ತು ಸುರಿವ ಕಣ್ಣೀರನ್ನು ಅಡಗಿಸಿಕೊಂಡು ಕಣ್ಣಿಂದ ನನ್ನನ್ನು ನೋಡಿ ಮುಗುಳುನಗೆಯ ಮೂಲಕ ಖಂಡಿತವಾಗಿ ತಾನು ಸಾಯುವೆನೆಂಬುದನ್ನು ಸೂಚಿಸಿದಳು.

೪೨. "ಕಾದಲನೇ, ಮೊದಲಜಾವ ಕಳೆದಮೇಲೆ ಮಧ್ಯಾಹ್ನದಲ್ಲಿ ಅಥವಾ ಮಧ್ಯಾಹ್ನದ ಮೇಲೆ ಇಲ್ಲವೆ ಇಡಿ ಹಗಲು ಮುಗಿದ ಮೇಲಾದರೂ ನೀನು ಬರುವೆ" ಎಂದು ಮುಂತಾಗಿ ಉರುಳುತ್ತಿರುವ ಕಂಬನಿಗಳೊಡನೆ ಆಡಿದ ಮಾತುಗಳ ಮೂಲಕ ಪ್ರೇಯಸಿಯೊಬ್ಬಳು, ಹೋಗಿ ಬರಲು ನೂರು ದಿನಗಳು ಬೇಕಾದಂಥ ಊರಿಗೆ ಹೋಗಲೆಳಸಿದ ತನ್ನ ಪ್ರಿಯತಮನ ಲಕ್ಷ್ಯವನ್ನು ಸೆಳೆಯುತ್ತಾಳೆ.

೪೩. ಎಲೆಲೇ ಸಾಕು ಸಾಕು; ಈ ಅತಿ ಸಾಹಸ ನಿನಗೆ ಬೇಡ; ಬೇಗ ಈ ಲತಾಪಾಶವನ್ನು ಬಿಟ್ಟುಬಿಡು. ಎಲ್ಲೈ ಪ್ರಾಣಕಾಂತೇ, ನನ್ನ ನಶ್ವರ ಜೀವವನ್ನು ಹೋಗದಂತೆ ತಡೆಯುವುದಕ್ಕಾಗಿ ನೀನು ಒಂದು ಕ್ಷಣ ನಿನ್ನ ಬಾಹುಪಾಶವನ್ನು ನನ್ನ ಕೊರಳ ಸುತ್ತ ಇಡು!

೪೪. ಇರುಳು ಕಳೆದ ಬಳಿಕ ಈ ತೆಳುಮೈಯವಳು ತನ್ನ ಅಂಗಾಂಗಗಳಲ್ಲಿ ಪ್ರಾಣಪ್ರಿಯನು ಮಾಡಿದ ನಖಕ್ಷತಗಳಿಂದ ತೊಂದರೆಪಟ್ಟುಕೊಂಡು, ಬಹಳ ಹೊತ್ತಿನವರೆಗೆ ಗಂಧ ಹಚ್ಚಿಕೊಳ್ಳುತ್ತಿದ್ದಾಳೆ. ಹಲ್ಲಿಗೆ ಹಲ್ಲು ತಾಗಿದ್ದಕ್ಕಾಗಿ ಕೆಳದುಟಿಗೆ ಮತ್ತೆ ಮತ್ತೆ ಅರಗನ್ನು ಬಳಿದುಕೊಳ್ಳುತ್ತಿದ್ದಾಳೆ. ಅಲ್ಲದೆ, ಚಕಿತಳಾಗಿ ನೆಟ್ಟಗೆ ನೋಡುತ್ತಿದ್ದಾಳೆ.

೪೫. ಒಮ್ಮೆ ಕದ್ದು ನೋಡುತ್ತಿದ್ದ ನನ್ನ ಕಣ್ಣು, ಅಡ್ಡ ತಿರುಗಿದ್ದ ಗುಡ್ಡೆಯ ಅವಳ ಕಣ್ಣನ್ನು ಸಂಧಿಸುತ್ತಲೇ, ಮುಗುಳ್ನಗೆ ತಾಳಿದ ತನ್ನ ಗೆಳತಿಯನ್ನು ಕಂಡು, ನಾಚಿಕೆಯಿಂದ ಕೆಳಗೆ ನೋಡತೊಡಗಿದ ತಾವರೆಗಣ್ಣಿನವಳ, ಹೆಮ್ಮೆಯಿಂದ ಅರಳಿದ ಆ ಮೊಗವನ್ನು ನೆನೆದುಕೊಳ್ಳುತ್ತೇನೆ.

जातप्रीतिर्या मधुरेणानु वनान्तं
कामे कान्ते सा रसिका का कुरुते न
तत्सम्पर्कं प्राप्य पुरा मोहनलीलां
कामेकान्ते सारसिकाकाकुरुतेन ॥४६॥

विलसितमनुकुर्वतीपुरस्तुद्
धरणिरुहाधिरुहो वधूर्लतायाः ।
रमणमृजुतया पुरः सखीनां
अकलितचापल दोषमालि लिङ्ग ॥४७॥

यद्यदेव रुरुचे रुचिरेभ्यः
सुभ्रुवो रहसि तत्तदकुर्वन्
आनुकूलिकतया हि नराणां
आक्षपन्ति हृदयानि तरुण्यः ॥४८॥

मनोरथैर्यदभ्यस्तं हृदयेन यदर्थितम् ।
मन्मथेन यदादिष्टं तयोस्तदभवद्गतम् ॥४९॥

विनिश्चेतुं शक्यो न सुखमिति वा दुःखमिति वा
प्रमोहो निद्रा वा किमु विषविसर्पः किमु मदः ।
तव स्पर्शे स्पर्शे मम हि परिमूढेन्द्रियगणो
विकारः कोप्यन्तर्जडयति च तापं च कुरुते ॥५०॥

किमपि किमपि मन्दं मन्दमासत्तियोगाद्
अविरलितकपोलं जल्पतोरक्रमेण ।
सपुलक परिरम्भ व्यापृतैकैक दो ष्णोर्
अविदितगतयामा रात्रिरेवं व्यरंसीत् ॥५१॥

೪೬. ಮನ್ಮಥನಂಥ ನಲ್ಲನಲ್ಲಿ ಒಲವು ಉಂಟಾದ ಯಾವಳು ಬನದ ನೆರೆಯಲ್ಲಿ ಸಾರಸ ಪಕ್ಷಿಗಳಿಗೆ ಸಹಜವಾದ ಬೆದರುದನಿಯಿಂದ ಕೂಗಿ, ಅವನ ಸಂಪರ್ಕವನ್ನು ಏಕಾಂತದಲ್ಲಿ ಪಡೆದಾಗ, ಅನುರಾಗ ತೋರಿ, ಅವನಿಗಿಂತ ಮೊದಲು ತಾನೇ ಯಾವ ಮೋಹನಲೀಲೆಯನ್ನು ಮಧುರವಾಗಿ ತೋರುವುದಿಲ್ಲ?

೪೭. ಎದುರಿಗೇ ಬೆಳೆದ ಮರವನ್ನು ಆಶ್ರಯಿಸಿದ ಬಳ್ಳಿಯ ವಿಲಾಸವನ್ನು ಅನುಕರಿಸಿ, ಸತಿಯು ಗೆಳತಿಯರೆದುರು ನೇರವಾಗಿ, ಅಲಕ್ಷ್ಯದಿಂದ ಮಾಡುವ ತಪ್ಪಿನಂತೆ, ಪತಿಯನ್ನು ಅಪ್ಪಿದಳು.

೪೮. ಏಕಾಂತದಲ್ಲಿ ಪ್ರಿಯತಮರಿಗೆ ಸೇರುವಂತಹ ಎಲ್ಲವನ್ನೂ ಚೆಲುಹುಬ್ಬಿನ ತರುಣಿಯರು ಮಾಡಿದರು; ತರುಣರಿಗೆ ಅನುಕೂಲವಾಗಿ ನಡೆದುಕೊಳ್ಳುವುದರಿಂದ ತರುಣಿಯರು ಅವರ ಹೃದಯಗಳನ್ನು ಆಕರ್ಷಿಸುತ್ತಾರೆ!

೪೯. ಅಭಿಲಾಷೆಗಳಿಗೆ ರೂಢವಾದದ್ದು, ಹೃದಯವು ಬಯಸಿದ್ದು ಮತ್ತು ಮನ್ಮಥನು ಅಪ್ಪಣೆ ಕೊಡಿಸಿದ್ದು ಅವರಿಬ್ಬರ ರತಿಸುಖವೆನ್ನಿಸಿತು!

೫೦. ಸುಖವೋ, ದುಃಖವೋ ಎಂದು ನಿಶ್ಚಯಿಸಿ ಹೇಳಲು ಬಾರದು; ಗಾಢವಾದ ಮೋಹವೋ, ನಿದ್ರೆಯೋ, ವಿಷವೇರಿ ಬರುವ ಅನುಭವವೋ, ಮದವೋ ಹೇಳಲು ಬರುವುದಿಲ್ಲ; ಪ್ರಿಯೇ, ನಿನ್ನ ಸ್ಪರ್ಶ–ಸ್ಪರ್ಶದಲ್ಲೂ ನನ್ನ ಪಂಚೇಂದ್ರಿಯಗಳು ವಿಮೂಢವಾದವು; ಒಳಗೆ ಯಾವುದೋ ಒಂದು ವಿಧವಾದ ವಿಕಾರವು ನನ್ನನ್ನು ಮರವಟ್ಟು ಹೋಗುವಂತೆಯೂ ತಾಪ ಹೊಂದುವಂತೆಯೂ ಮಾಡಿದೆ!

೫೧. ಕೆನ್ನೆಗೆ ಕೆನ್ನೆಯನ್ನಾಂತು, ತೋಳಲ್ಲಿ ತೋಳಿಟ್ಟು ಅಪ್ಪಿ, ನವಿರಿಂದ, ಒಟ್ಟಿಗಿದ್ದುದರಿಂದ ಏನೇನನ್ನೋ ಮೆಲ್ಲಮೆಲ್ಲನೆ ಹೇಳುತ್ತ ಇರುವಾಗ ಜಾವಗಳು ಕಳೆದದ್ದೇ ನಮಗೆ ಗೊತ್ತಾಗದಾಯ್ತು; ನಮ್ಮ ಇರುಳು ಹೀಗೇ ಹೋಯ್ತು!

अद्वैतं सुखदुःखयोरनुगुणं सर्वास्ववस्थासु यद्
विश्रामो हृदयस्य यत्र जरसा यस्मिन् न हार्यो रसः ।
कालेनावरणात्ययात् परिणते यत् स्नेहसारे स्थितं
भद्रं प्रेम सुमानुषस्य कथमप्ये कं हि तत् प्राप्यते ॥५२॥

रहसि संविदं हृच्छयोदयं
प्रहसिताननं प्रेमवीक्षणम्।
बृहदुरः श्रियो वीक्ष्य धाम ते
मुहुरतिस्पृहा मुह्यते मनः ॥५३॥

शून्यं वासगृहं विलोक्य शयनादुत्थाय किञ्चिच्छनैर्
निद्राव्याजमुपागतस्य सुचिरं निर्वर्ण्य पत्युर्मुखम् ।
विश्रब्धं परिचुम्ब्य जातपुलकामालोक्य गण्डस्थलीं
लज्जानम्रमुखी प्रियेण हसता बाला चिरं चुम्बिता ॥५४॥

## ೩. ಗೃಹಸ್ಥ ಜೀವನ

अर्थागमो नित्यमरोगिता च
प्रिया च भार्या प्रियवादिनी च
वश्यश्च पुत्रोऽर्थकरी च विद्या
षड् जीवलोकस्य सुखानि तात ॥५५॥

मातृतुल्यगुणो जातत्वनुजातः पितुः समः
अभिजातोऽधिकस्तस्मादपजातोऽधमाधमः ॥५६॥

किं कलत्रं प्रधानं स्यादुत मित्रं गुणाधिकम्
कलत्र मित्रयोर्नूनं कलत्रमतिरिच्यते ॥५७॥

೫೨. ಸುಖ–ದುಃಖಗಳಲ್ಲಿ ನಾವಿಬ್ಬರೂ ಒಂದೇ ಆದೆವು; ಎಲ್ಲ ಅವಸ್ಥೆಗಳಲ್ಲೂ ಅನುಗುಣ ಅನುಭವವನ್ನು ಪಡೆದೆವು; ನಮ್ಮಿಬ್ಬರ ಹೃದಯಕ್ಕೂ ವಿಶ್ರಾಂತಿ ಸಿಕ್ಕಿತು. ಇಂಥ ಪ್ರೇಮದ ಸವಿಯನ್ನು ಮುಪ್ಪು ಅಪಹರಿಸಲಾರದು. ಕಾಲಕ್ರಮೇಣ ಆವರಣದ ಬದಲಾವಣೆಯ ಮೂಲಕ ಪಕ್ವಗೊಂಡ ಸ್ನೇಹಸಾರವನ್ನು ಪಡೆದಂಥ, ಸಫಲ ಮಾನವಜೀವನದ ಮಂಗಲರೂಪದ ನಮ್ಮ ಈ ಪ್ರೇಮವು ಅನನ್ಯಸಾಧಾರಣವಾದುದು; ಬಹಳ ಶ್ರಮದಿಂದ ನಾವಿದನ್ನು ಪಡೆದೆವು!

೫೩. ಇನಿಯನೇ, ಗುಟ್ಟಿನಲ್ಲಿ ಸಂತಸ ಉಂಟುಮಾಡುವ ಮನ್ಮಥೋದಯದಿಂದ ಕೂಡಿದ ಹಾಗೂ ಪ್ರೇಮದೃಷ್ಟಿ ಪೂರ್ಣವಾದ ನಿನ್ನ ನಗುಮೊಗವನ್ನೂ, ನಿನ್ನ ಅಗಲ ಎದೆಯ ಚೆಂದದ ನೆಲೆಯನ್ನೂ ಕಂಡು ನಿನ್ನ ಮೇಲೆ ಹೆಚ್ಚಿನ ಆಸೆ ನನಗೆ ಪದೇ ಪದೇ ಉಂಟಾಗುತ್ತದೆ; ನಿನ್ನನ್ನು ಕಂಡು ನನ್ನೆದೆ ಮುಗ್ಧವಾಗಿ ಹೋಗಿಬಿಡುತ್ತದೆ!

೫೪. ಸೆಜ್ಜೆವನೆಯಲ್ಲಿ ಇತರ ಯಾರೂ ಇಲ್ಲದುದನು ಕಂಡು, ಮೆಲ್ಲನೆ ಹಾಸಿಗೆಯಿಂದೆದ್ದು ನಿದ್ರೆಯ ನೆವದಿಂದ ಮಲಗಿದ್ದ ಪತಿಯ ಮೊಗವನ್ನು ಬಹಳ ಹೊತ್ತು ಚೆನ್ನಾಗಿ ನೋಡಿದ ಬಳಿಕ ನಿರ್ಭಯವಾಗಿ ಚುಂಬಿಸಿದ ತರುಣಿಯೊಬ್ಬಳು ಅವನ ಗಂಡಸ್ಥಲಗಳಲ್ಲಿ ನವಿರೆದ್ದುದನ್ನು ಕಂಡು ನಾಚಿಕೆಯಿಂದ ತಲೆತಗ್ಗಿಸಿದಳು; ಆಗ ಪತಿಯು ಮುಗುಳುನಗೆ ಬೀರುತ್ತ ಬಹಳ ಹೊತ್ತು ಅವಳನ್ನು ಚುಂಬಿಸಿದನು.

## ೩. ಗೃಹಸ್ಥ ಜೀವನ

೫೫. ದುಡ್ಡು ಬರುವುದು, ನಿತ್ಯವೂ ಆರೋಗ್ಯದಲ್ಲಿರುವುದು, ಹೆಂಡತಿಯು ಪ್ರೀತಿಪಾತ್ರಳಾಗಿಯೂ ಪ್ರಿಯಂವದೆಯಾಗಿಯೂ ಇರುವುದು, ಮಗನು ವಿಧೇಯನಾಗಿರುವುದು ಮತ್ತು ಕಲಿತ ವಿದ್ಯೆಯು ಸಂಪಾದನೆಗೆ ಕಾರಣವಾಗುವಂತಿರುವುದು ಎಂಬ ಆರು–ಜನರಿಗೆ ಸುಖಗಳೆನ್ನಿಸುತ್ತವೆ.

೫೬. ತಾಯಿಯಂಥ ಗುಣವುಳ್ಳ ಮಗ 'ಜಾತ': ತಂದೆಯಂಥವನು 'ಅನುಜಾತ'; ತಂದೆಗಿಂತ ಅಧಿಕ ಗುಣವುಳ್ಳವನು 'ಅಭಿಜಾತ'; ಅಧಮಾಧಮನಾದ ಮಗನು 'ಅಪಜಾತ.'

೫೭. ಹೆಂಡತಿಯು ಹೆಚ್ಚಿನವಳೋ, ಬಹುಗುಣಸಂಪನ್ನನಾದ ಗೆಳೆಯನು ಹೆಚ್ಚಿನವನೋ? ನಿಜವಾಗಿ ನೋಡಿದರೆ, ಹೆಂಡತಿ ಮತ್ತು ಗೆಳೆಯರಲ್ಲಿ ಹೆಂಡತಿಯೇ ಹೆಚ್ಚಿನವಳು!

पतिप्रियहिते युक्ता स्वाचारा विजितेन्द्रिया ।
सेहकीर्तिमवाप्नोति प्रेत्य चानुत्तमां गातिम् ॥५८॥

पतिं या नाभिचरति मनोवाग्देह संयता।
सा भर्तृलोकमाप्नोति सद्भिः साध्वीति चोच्यते ॥५९॥

आनन्दोत्थं नयनसलिलं यत्र नोन्यैर्निमित्तैर्
नान्यस्तापः कुसुमशरजादिष्टसंयोगसाध्यात् ।
नाप्यन्यत्र प्रणयकलहाद्विप्रयोगोपपत्तिर्
वित्तेशानां न खलु च वयो यौवनादन्यदस्ति ॥६०॥

वनेऽपि दोषाः प्रभवन्ति रागिणां
गृहेऽपि पञ्चेन्द्रियनिग्रहस्तपः ।
अकुत्सिते कर्मणि यः प्रवर्तते
निवृत्तरागस्य गृहं तपोवनम् ॥६१॥

पुत्रो मित्रं तथा भ्राता अन्ये स्वजनबान्धवाः
पञचभेदास्तु सम्बन्धाः पुरुषस्य भवन्ति ने ॥६२॥

यस्मिन्निदं प्रोतमशेषमोतं
पटो यथा तन्तुवितानसंस्थः ।
य एष संसारतरुः पुराणः
कर्मात्मकः पुष्पफले प्रसूते ॥६३॥

न स्त्री दुष्यति जारेण न विप्रोऽवेदकर्मणा
बलात्कारोपभुक्ता चेद्वैरिहस्तगतापि वा ॥६४॥

स्वकर्मधर्मार्जितजीवितानां
स्वेष्वेव दारेषु सदा रतानाम् ।
जितेन्द्रियाणामतिथिप्रियाणां
गृहेऽपि मोक्षाः पुरुषोत्तमानाम् ॥६५॥

೫೮. ಪತಿಗೆ ಪ್ರಿಯವೂ, ಹಿತವೂ ಆದುದನ್ನು ಮಾಡುವುದರಲ್ಲಿ ಮಗ್ನಳಾಗಿ, ತನ್ನ ಸದಾಚಾರವನ್ನು ಬಿಡದೆ, ಜಿತೇಂದ್ರಿಯಳಾಗಿರುವವಳು ಇಹದಲ್ಲಿ ಕೀರ್ತಿಮತಿಯೂ, ಪರದಲ್ಲಿ ಉತ್ತಮ ಗತಿಯನ್ನು ಹೊಂದುವವಳೂ ಆಗುತ್ತಾಳೆ.

೫೯. ಪತಿಯನ್ನುಳಿದು ಅನ್ಯರಲ್ಲಿ ಮನಸ್ಸು ಹಾಕದೆ, ಮನ, ಮಾತು, ಮೈಗಳನ್ನು ಸಂಯಮದಲ್ಲಿಟ್ಟುಕೊಂಡಾಕೆ ಪತಿಲೋಕವನ್ನು ಹೊಂದುವಳು; ಶಿಷ್ಟರು ಅವಳನ್ನು "ಸಾಧ್ವೀ" ಎಂದು ಕರೆಯುತ್ತಾರೆ.

೬೦. ಧನಿಕರೆನ್ನಿಸಿದ ಯಕ್ಷರಿಗೆ ಆನಂದದಿಂದಲ್ಲದೆ, ಬೇರೆ ಕಾರಣದಿಂದ ಕಂಬನಿದುಂಬದು: ಮನ್ಮಥನ ಹೂಬಾಣಗಳಿಂದಲ್ಲದೆ, ಇನ್ನಾವುದರಿಂದಲೂ ಉರಿ ಉಂಟಾಗದು; (ಹಾಗೆ ಮನ್ಮಥ ಬಾಣದಿಂದ ಉರಿ ಒಮ್ಮೆ ಉಂಟಾದರೆ) ಅದು ನಚ್ಚಿನ ಯುವತಿಯರ ಸಮಾಗಮದಿಂದ ಪರಿಹಾರವಾಗಬಲ್ಲದು. ಪ್ರಣಯ ಕಲಹದಿಂದಲ್ಲದೆ, ಬೇರೆ ಯಾವ ಕಾರಣದಿಂದಲೂ ಅವರಿಗೆ ವಿರಹ ಉಂಟಾಗದು; ಹಾಗೆಯೇ ಯೌವನವನ್ನು ಬಿಟ್ಟರೆ, ಇನ್ನಾವ ಅವಸ್ಥೆಯ ವಯಸ್ಸೂ ಅವರಿಗಿಲ್ಲ!

೬೧. ಭೋಗಾಸಕ್ತಿಯುಳ್ಳವರಿಂದ ಕಾಡಿನಲ್ಲಿ ಕೂಡ ತಪ್ಪು ತಡೆಗಳಾಗುವವು. ಮನೆಯಲ್ಲೇ ಇದ್ದರೂ ಮಾನವರಿಗೆ ಇಂದ್ರಿಯ ನಿಗ್ರಹವೇ ತಪಸ್ಸು; ಯೋಗ್ಯವಾದ ಕೆಲಸದಲ್ಲಿ ಪ್ರವೃತ್ತನಾಗುವ ವಿರಾಗಿಗೆ ಮನೆಯೇ ತಪೋವನ!

೬೨. ಮಗ, ಗೆಳೆಯ, ಸಹೋದರ, ಇಷ್ಟರು, ನೆಂಟರು ಎಂಬುದಾಗಿ ಮನುಷ್ಯನ ಸಂಬಂಧಿಕರಲ್ಲಿ ಐದು ವರ್ಗದವರಿರುತ್ತಾರೆ.

೬೩. ಬಟ್ಟೆಯ ದಾರಗಳ ಹರಹಿನಲ್ಲಿ ಸಂಪೂರ್ಣ ಓತಪ್ರೋತವಾಗಿರುವಂತೆ, ಜನನ–ಮರಣರೂಪದ ಸಂಸಾರವೆಂಬ ಹಳೆಯ ಮರವು ಕರ್ಮಾತ್ಮಕವಾಗಿದ್ದುಕೊಂಡು, ಹೂ–ಹಣ್ಣುಗಳನ್ನು ಬಿಡುತ್ತದೆ.

೬೪. ಬಲವಂತವಾಗಿ ಜಾರನಿಂದ ಭೋಗಿಸಲ್ಪಟ್ಟ ಹೆಂಗಸೂ, ಹಗೆಗಳ ಕೈಯಲ್ಲಿ ಸಿಕ್ಕು ವೇದೋಕ್ತ ಕರ್ಮಗಳನ್ನು ಮಾಡದ ಬ್ರಾಹ್ಮಣನೂ ದೋಷಪಾತ್ರರಾಗರು.

೬೫. ತಮ್ಮ ಕರ್ಮದ ಪುಣ್ಯದಿಂದ ಸಂಪಾದಿಸಿದ ಜೀವನವನ್ನುಳ್ಳ, ತಮ್ಮ ಹೆಂಡಿರಲ್ಲಿಯೇ ನಿತ್ಯವೂ ಪ್ರೀತಿಯನ್ನಿಟ್ಟಿರುವ ಮತ್ತು ಜಿತೇಂದ್ರಿಯರೂ, ಅತಿಥಿ ಪ್ರಿಯರೂ ಆದ ಶ್ರೇಷ್ಠರಿಗೆ ಮನೆಯಲ್ಲೇ ಕೈವಲ್ಯ ಕೈವಶವಾಗುವುದು.

नैवेदानीं तादृशाश्चक्रवाका
नैवाप्यन्ये स्त्रीविशेषैर्वियुक्ताः ।
धन्या सा स्त्री यां तथा वेत्ति भर्ता
भर्तृस्नेहात् सा हि दग्धाप्यदग्धा ॥६६॥

शशिना सह याति कौमुदी
सह मेघेन तडित् प्रलीयते ।
प्रमदाः पतिवर्त्मगा इति
प्रतिपन्नं हि विचेतनैरपि ॥६७॥

शुश्रूषस्व गुरुन् कुरु प्रियसखी वृत्तिंसपत्नीजने
भर्तुर्विप्रकृतापि रोषणतया मा स्म प्रतीपं गमः ।
भूयिष्ठं भव दक्षिणा परिजने भाग्येष्वनुत्सेकिनी
यान्त्येवं गृहिणीपदं युवतयो वामाः कुलस्याधयः ॥६८॥

दृष्टिर्न तृप्यति परिष्वजतीव साङ्गं
बुद्धिस्त्वरां व्रजति बोधयतीव सुप्ताम् ।
रागोऽभिचोदयति सादयतीव चाङ्गं
हर्षात् प्रसीदति विमुह्यति चान्तरात्मा ॥६९॥

इयं गेहे लक्ष्मी रियममृतवर्तिर्नयनयोर्
असावस्याः स्पर्शो वपुषि बहलश्चन्दनरसः ।
अयं कण्टे बाहुः शिशिरमसृणो मौक्तिकसरः
किमस्या न प्रेयो यदि परमसह्यस्तु विरहः ॥७०॥

दिशः प्रसेदुर्मरुतो ववुः सुखाः
प्रदक्षिणार्चिर्हविरग्निराददे।
बभूव सर्वं शुभशंसि तत्क्षणं
भवो हि लोकाभ्युदयाय तादृशाम् ॥७१॥

೬೬. ಈಗ ಅಂಥ ಜಕ್ಕವಕ್ಕಿಗಳಿಲ್ಲ; ಮಹಾಸತಿಯರ ವಿರಹದಿಂದ ಬಳಲುವ ಅಂಥ ಇತರ ವ್ಯಕ್ತಿಗಳೂ ಇಲ್ಲ; ಪತಿಯು ಅಂಥವಳೆಂದು ತಿಳಿದುಕೊಂಡಿರುವ ಸತಿಯು ಧನ್ಯೆ; ಪತಿಯ ಅಂಥ ಸ್ನೇಹದ ದೆಸೆಯಿಂದ ಅವಳು ಸುಟ್ಟುಹೋದರೂ ಸುಟ್ಟುಹೋಗಿಲ್ಲ!

೬೭. ಬೆಳುದಿಂಗಳು ಚಂದ್ರನೊಡನೆ ಹೋಗುತ್ತದೆ; ಮೋಡದೊಡನೆ ಮಿಂಚು ಲೀನವಾಗಿ ಹೋಗುತ್ತದೆ; ಸತಿಯರದು ಪತಿಮಾರ್ಗ ಎಂಬುದನ್ನು ಅಚೇತನ ಪದಾರ್ಥಗಳೂ ಅರಿತಿವೆ.

೬೮. ಹಿರಿಯರ ಶುಶ್ರೂಷೆಯನ್ನು ಮಾಡು; ಸವತಿಯರಲ್ಲಿ ಪ್ರಿಯ ಸ್ನೇಹಿತೆಯಂತೆ ನಡೆದುಕೋ; ಗಂಡ ಬೈದರೂ ಸಿಟ್ಟಿನಿಂದ ಅವನನ್ನು ವಿರೋಧಿಸಬೇಡ; ಸೇವಕರಲ್ಲಿ ಬಹಳ ಔದಾರ್ಯದಿಂದ ವರ್ತಿಸು ಈ ಪ್ರಕಾರ ಇದ್ದರೆ, ಮಾತ್ರ ತರುಣಿಯರು ಗೃಹಿಣಿಯ ಸ್ಥಾನವನ್ನು ಹೊಂದುತ್ತಾರೆ; ಇದಕ್ಕೆ ವಿರುದ್ಧವಾಗಿ ನಡೆದುಕೊಳ್ಳುವವರು ಕುಲಕ್ಕೆ ವ್ಯಥೆಯನ್ನುಂಟುಮಾಡುತ್ತಾರೆ.

೬೯. ಕಣ್ಣು ತೃಪ್ತವಾಗದು; ಅದು ಅವಳ ಮೈಯನ್ನು ತಬ್ಬಿಕೊಳ್ಳುವಂತೆ ತೋರುತ್ತದೆ; ಬುದ್ಧಿಯು ತ್ವರೆ ಮಾಡುತ್ತದೆ; ನಿದ್ರಿಸಿರುವ ಅವಳನ್ನು ಎಬ್ಬಿಸುವಂತೆ ಕಾಣುತ್ತದೆ; ಅನುರಾಗವು ನನ್ನನ್ನು ಪ್ರಚೋದಿಸುತ್ತಿದೆ ಮತ್ತು ನನ್ನ ಮೈಯನ್ನು ಮರವಟ್ಟು ಹೋಗುವಂತೆ ಮಾಡುತ್ತಿದೆ; ಅಲ್ಲದೆ, ಸಂತೋಷದಿಂದ ನನ್ನ ಅಂತರಾತ್ಮವು ಮುಗ್ಧವಾಗಿ ಹೋಗಿದೆ!

೭೦. ಇವಳು ಮನೆಯಲ್ಲಿ ಲಕ್ಷ್ಮಿ, ಕಣ್ಣಿಗೆ ಅಮೃತವಾಗಿದ್ದಾಳೆ, ಇವಳ ಸ್ಪರ್ಶವು ಮೈಗೆ ಗಂಧದ ತಂಪನ್ನುಂಟುಮಾಡುತ್ತದೆ; ಕೊರಳಲ್ಲಿಟ್ಟ ಇವಳ ತೋಳು ಶಿಶಿರದಷ್ಟು ತಣ್ಣಗಿರುವ ಮುತ್ತಿನ ಸರ! ಇವಳ ವಿರಹವು ಅಸಹನೀಯ; ಆದುದರಿಂದ ಇವಳ ಇನ್ನಾವುದು ಪ್ರಿಯವಾಗದೆ ಉಳಿದೀತು?

೭೧. ದಿಕ್ಕುಗಳು ಪ್ರಸನ್ನವಾದವು; ಸುಖಕರವಾದ ಗಾಳಿ ಬೀಸಿತು; ಪ್ರದಕ್ಷಿಣಾಕಾರದ ಉರಿಯುಳ್ಳ ಅಗ್ನಿಯು ಹವಿಸ್ಸನ್ನು ಸ್ವೀಕರಿಸಿತು; ಆ ಕೂಡಲೇ ಎಲ್ಲವೂ ಶುಭಸೂಚಕವಾಯಿತು. ಅಂಥವರ ಹುಟ್ಟು ಲೋಕದ ಅಭ್ಯುದಯಕ್ಕಾಗಿಯೇ ಅಲ್ಲವೆ?

निवातपद्मस्तिमितेन चक्षुषा
नृपस्य कान्तं पिबतः सुताननम् ।
महोदधेः पूरमिवेन्दुदर्शनाद्
गुरुः प्रहर्षः प्रबभूव नात्मनि ॥७२॥

आलक्ष्य दन्तमुकुलाननिमित्तहासैर्
अव्यक्तवर्णरमणीय वचः प्रवृत्तीन् ।
अङ्काश्रयप्रणयिनस्तनयान् वहन्तो
धन्यास्तदङ्गरजसा मलिनीभवन्ति ॥७३॥

व्यतिषजति पदार्थनान्तरः कोऽपि हेतुर्
न खलु बहिरुपाधीन् प्रीतयः संश्रयन्ते ।
विकसति हि पतङ्गस्योदये पुण्डरीकं
द्रवति च हिमरश्मावुद्गते चन्द्रकान्तः ॥७४॥

परिणतकठोरपुष्करगर्भच्छदपीनमसृणसुकुमारः ।
नन्दयति चन्द्रचन्दननिस्यन्दजडस्तवस्पर्शः ॥७५॥

माता शत्रुः पिता वैरी येन बालो न पाठितः ।
न शोभते सभामध्ये हंसमध्ये बको यथा ॥७६॥

रूपयौवनसम्पन्ना विशालकुलसम्भवाः ।
विद्याहीना न शोभन्ते निर्गन्धा इव किंशुकाः ॥७७॥

स जातो येन जातेन याति वंशः समुन्नतिम् ।
परिवर्तिनि संसारे मृतः को वा न जायते ॥७८॥

अजातमृतमूर्खाणां वरमाद्यौ न चान्तिमं
सकृद्दुःखकरावाद्यावन्तिमस्तु पदे पदे ॥७९॥

ययोरेव समं वित्तं ययोरेव समं कुलम्
तयोर्विवाहः सख्यं च न तु पुष्टविपुष्टयोः ॥८०॥

೭೨. ತನ್ನ ಮಗನ ಚೆಲುಮೊಗವನ್ನು ಗಾಳಿಯಿಲ್ಲದ ಸ್ಥಳದಲ್ಲಿರುವ ತಾವರೆಗಳಂತಹ ತನ್ನ ಕಣ್ಣುಗಳಿಂದ ನೋಡಿದಾಗ, ಅರಸನ ಮಹಾನಂದವು ಚಂದ್ರನನ್ನು ಕಂಡ ಹೆಗ್ಗಡಲ ಹೊನಲಿನಂತೆ ಉಕ್ಕಿ ಹರಿಯಿತು.

೭೩. ಅನಿಮಿತ್ತಹಾಸದಿಂದ ಕೂಡಿದ, ಸ್ವಲ್ಪ ಮಾತ್ರ ತೋರುವ ಹಲ್ಲುಮೊಗ್ಗೆಗಳನ್ನುಳ್ಳ, ಸೊಗಸಾದ ತೊದಲ್ನುಡಿಯನ್ನಾಡುವ ಸ್ವಭಾವವುಳ್ಳ ಮತ್ತು ತೊಡೆಯ ಮೇಲೆ ಕುಳಿತುಕೊಳ್ಳಲು ಬಯಸುವ ಮಕ್ಕಳನ್ನು ಎತ್ತಿಕೊಂಡು ಅವುಗಳ ಮೈಧೂಳಿಯಿಂದ ಮಲಿನರಾಗುವವರು ಧನ್ಯರು!

೭೪. ವಾತ್ಸಲ್ಯವು ನಿಜವಾಗಿಯೂ ಹೊರ ಉಪಾಧಿಗಳನ್ನಾಧರಿಸದು; ಒಳಗಿನ ಯಾವುದೋ ಒಂದು ಕಾರಣವು ಪದಾರ್ಥಗಳನ್ನು ಕೂಡಿಸುತ್ತದೆ; ಸೂರ್ಯ ಮೂಡಿದ ಕೂಡಲೇ ಬೆಳ್ದಾವರೆ ಅರಳುತ್ತದೆ; ಚಂದ್ರ ಉದಯಿಸಿದ ಕೂಡಲೇ ಚಂದ್ರಕಾಂತ ಶಿಲೆ ದ್ರವಿಸುತ್ತದೆ!

೭೫. ಚೆನ್ನಾಗಿ ಬೆಳೆದು ಅರಳಿದ ತಾವರೆಯೊಳಗಿನ ಎಸಳಿನಂತೆ ಕೈತುಂಬ ನಯವೂ ಮೃದುವೂ ಆದ ಮತ್ತು ಚಂದ್ರಕಿರಣ ಗಂಧಲೇಪಗಳಂತೆ ಶೀತಲವೂ ಆದ ನಿನ್ನ ಸ್ಪರ್ಶವು ನನ್ನನ್ನು ಆನಂದಗೊಳಿಸುತ್ತದೆ!

೭೬. ಮಗನನ್ನು ಓದಿಸದ ತಾಯ್ತಂದೆಗಳು ವೈರಿಗಳು; ಓದದವನು ಹಂಸಗಳ ನಡುವಿನ ಕೊಕ್ಕರೆಯಂತೆ ಸಭೆಯಲ್ಲಿ ಶೋಭಿಸುವುದಿಲ್ಲ.

೭೭. ಉಚ್ಚ ಕುಲದಲ್ಲಿ ಹುಟ್ಟಿದ ರೂಪಯೌವನವಂತರು ವಿದ್ಯಾವಿಹೀನರಾದರೆ, ಪರಿಮಳವಿಲ್ಲದ ಮುತ್ತುಗದ ಹೂಗಳಂತೆ ಶೋಭಾಹೀನರಾಗುವರು.

೭೮. ತನ್ನ ಹುಟ್ಟಿನಿಂದ ತನ್ನ ವಂಶವು ಉನ್ನತಿ ಹೊಂದುವಂತೆ ಮಾಡುವವನೇ ನಿಜವಾಗಿ ಹುಟ್ಟಿದವನು; ಪರಿವರ್ತನಶೀಲದ ಈ ಜನನ–ಮರಣಚಕ್ರದಲ್ಲಿ ಸತ್ತ ಯಾವನು ತಾನೇ ಮತ್ತೆ ಹುಟ್ಟುವುದಿಲ್ಲ?

೭೯. ಹುಟ್ಟದ, ಹುಟ್ಟಿ ಸತ್ತ ಮತ್ತು ಹುಟ್ಟಿ ಮೂರ್ಖನಾಗಿ ಬದುಕಿರುವ ಮಕ್ಕಳಲ್ಲಿ ಮೊದಲಿನ ಎರಡು, ಮೂರನೆಯದಕ್ಕಿಂತ ಲೇಸು; ಏಕೆಂದರೆ, ಅವು ಒಮ್ಮೆ ಮಾತ್ರ ದುಃಖ ಉಂಟುಮಾಡುತ್ತವೆ; ಕೊನೆಯದು ಪದೇ ಪದೇ ದುಃಖ ತಂದೊಡ್ಡುತ್ತವೆ.

೮೦. ಧನ, ಕುಲಗಳಲ್ಲಿ ಸಮಾನರಾದವರ ನಡುವೆ, ಮದುವೆ ಗೆಳೆತನಗಳು ಉಚಿತ; ಮೇಲು–ಕೀಳು ಎನ್ನಿಸಿದವರಲ್ಲಿ ಅವು ನಡೆಯುವುದು ಅನುಚಿತ.

जीविते यस्य जीवन्ति विप्रा मित्राणि बान्धवाः।
सफलं जीवितं तस्य आत्मार्थे को न जीवति ॥८१॥

स स्निग्धोऽकुशलान्निवारयति यस्तत्कर्म यन्निर्मलं
सा स्त्री याऽनुविधायिनी स मतिमान् यः सद्भिरभ्यर्च्यते ।
सा श्रीर्या न मदं करोति स सुखी यस्तृष्णया मुच्यते
तन्मित्रं यदकृत्रिमं स पुरुषो यः खिद्यते नेन्द्रियैः ॥८२॥

द्वाविन्द्राग्नी चरतो वै सखायौ
द्वौ देवर्षी नारदर्वतौ च ।
द्वावश्विनौ द्वे रथस्यापि चक्रे
भार्यापती द्वौ विहितौ विधात्रा ॥८३॥

पिता–मातातथैवाग्निगुरुरात्मा च पञ्चमः ।
यस्मै ते पूजिताः पार्थ तस्य लोकावुभौ जितौ ॥८४॥

तृणानि भूमिरुद्कं वाक् चतुर्थी च सूनृता ।
एतान्यपि सतां गेहे नोच्छिद्यन्ते कदाचन ॥८५॥

न वै स्वयं तदश्नीयादतिथिं यन्न भोजयेत् ।
धन्यं यशस्यमायुष्यं स्वर्ग्यं वातिथिपूजनम् ॥८३॥

सुवासिनीः कुमारीश्च रोगिणो गर्भिणीः स्त्रियं ।
अतिथिभ्योऽग्र एवैतान् भोजयेदविचारयन् ॥८७॥

आशंसते हि पुत्रेषु पिता माता च भारत ।
यशः कीर्तिमयैश्वर्य प्रजा धर्मं तथैव च ॥८८॥

तयोराशां तु सफलं यः करोति स धर्मवित्
पिता माता च राजेन्द्र तुष्यतो यस्य नित्यशः ॥८९॥

೮೧. ಬ್ರಾಹ್ಮಣರನ್ನೂ, ಗೆಳೆಯರನ್ನೂ, ಬಂಧುಗಳನ್ನೂ ಹೊರೆಯುವವನ ಬಾಳು ಸಾರ್ಥಕ; ತನ್ನ ಹೊಟ್ಟೆಯ ಪಾಡಿಗಾಗಿ ಯಾರು ತಾನೇ ಬದುಕುವುದಿಲ್ಲ?

೮೨. ನಮ್ಮನ್ನು ಕಷ್ಟದಿಂದ ಪಾರುಮಾಡುವವನೇ ನಿಜವಾಗಿ ಪ್ರೀತಿಯುಳ್ಳವನು; ನಿರ್ಮಲವಾದ ಕಾರ್ಯವೇ ನಿಜವಾದ ಕಾರ್ಯ: ಅನುಕೂಲೆಯೇ ನಿಜವಾದ ಸತಿ; ಸಜ್ಜನಗೌರವಕ್ಕೆ ಪಾತ್ರನಾದವನೇ ನಿಜವಾದ ಬುದ್ಧಿವಂತ; ಸೊಕ್ಕನ್ನುಂಟು ಮಾಡದ ಸಿರಿಯೇ ನಿಜವಾದ ಸಿರಿ; ಲೋಭವಿಲ್ಲದವನೇ ನಿಜವಾಗಿ ಸುಖಿ; ಕೃತ್ರಿಮತೆ ಇರದವನೇ ನಿಜವಾದ ಗೆಳೆಯ; ಇಂದ್ರಿಯಗಳ ದೆಸೆಯಿಂದ ಖೇದ ಪಡದಿರುವವನೇ ನಿಜವಾದ ಗಂಡಸು!

೮೩. ಗೆಳೆಯರಾಗಿ ತಿರುಗುವ ಇಂದ್ರಾಗ್ನಿಗಳು ಇಬ್ಬರು; ದೇವರ್ಷಿಗಳಾದ ನಾರದಪರ್ವತರಿಬ್ಬರು; ಅಶ್ವಿನೀಕುಮಾರರು ಇಬ್ಬರು; ತೇರಿನ ಗಾಲಿಗಳು ಎರಡು; ಆ ಪ್ರಕಾರ ಗಂಡ–ಹೆಂಡಿರಿಬ್ಬರೆಂಬುದು ಬ್ರಹ್ಮ ಮಾಡಿದ ವ್ಯವಸ್ಥೆ.

೮೪. ತಂದೆ, ತಾಯಿ, ಅಗ್ನಿ, ಗುರು, ಮತ್ತು ಆತ್ಮಗಳನ್ನು ಪೂಜಿಸುವವನು ಇಹ–ಪರಗಳೆರಡನ್ನೂ ಗೆಲ್ಲುತ್ತಾನೆ.

೮೫. ಹುಲ್ಲು, ನೆಲ, ನೀರು, ಒಳ್ಳೆಯ ಮಾತುಗಳು, ಸಜ್ಜನರ ಮನೆಯಲ್ಲಿ ಎಂದೂ ಇಲ್ಲವೆನಿಸವು.

೮೬. ಅತಿಥಿಗೆ ಬಡಿಸದ್ದನ್ನು ತಾನು ಉಣ್ಣಬಾರದು; ಅತಿಥಿ ಸತ್ಕಾರದಿಂದ ಧನ, ಯಶ, ಆಯುಷ್ಯ ಇಲ್ಲವೆ ಸ್ವರ್ಗ ದೊರಕುವುದು.

೮೭. ಸುವಾಸಿನಿ, ಕುಮಾರಿ, ರೋಗಿ ಮತ್ತು ಗರ್ಭಿಣಿಯರಿಗೆ ಅತಿಥಿಗಳಿಗಿಂತ ಮೊದಲು ನಿಃಶಂಕೆಯಿಂದ ಉಣಬಡಿಸಬೇಕು.

೮೮. ೮೯. ತಮ್ಮ ಮಕ್ಕಳು–ಯಶ, ಕೀರ್ತಿ, ಐಶ್ವರ್ಯ, ಮಕ್ಕಳು, ಧರ್ಮಗಳನ್ನು ಹೊಂದಿರಬೇಕೆಂದು ತಾಯ್ತಂದೆಗಳು ಬಯಸುತ್ತಾರೆ; ಅವರ ಆಶೆಯನ್ನು ಸಫಲಗೊಳಿಸಿ ಅವರನ್ನು ನಿತ್ಯವೂ ಸಂತೋಷಪಡಿಸುವವನೇ ಧರ್ಮಜ್ಞನು.

धर्मागतं प्राप्य धनं यजेत
दद्यात् सदैवातिथीन् भोजयेच्च ।
अनाददानश्च परैरदत्तं
सैषा गृहस्थोपनिषत् पुराणी ॥९०॥

अग्निहोत्रफला वेदा दत्तभुक्तफलं धनम् ।
रतिपुत्रफला दाराः शीलवृत्तफलं श्रुतम् ॥९१॥

यथा मातरमाश्रित्य सर्वे जीवन्ति जन्तवः ।
एवं गार्हस्थ्यमाश्रित्य वर्तन्त इतराश्रमाः ॥९२॥

लक्ष्मीर्दानफला श्रुतं शमफलं पाणिः सुगर्चाफलश्
चेष्ठा धर्मफला परार्तिहरणक्रीडाफलं जीवितम् ।
वाणी सत्यफला जगत्सुखफलस्फीता प्रभावोन्नतिर्
भव्यानां भवशान्तिचिन्तनफला भूत्यै भवत्येव धीः ॥९३॥

स्वकुलान्न्यूनता नेच्छेत् तुल्यः स्यादथवाधिकः ।
स्वोत्कर्षेऽपि रघोर्वंशे रामोऽभूत् स्वकुलाधिकः ॥९४॥

अन्योन्यस्याव्यभीचारो भवेदामरणान्तिकः ।
एष धर्मः समासेन ज्ञेयः स्त्रीपुंसयोः परः ॥९५॥

न संवसेच्च पतितैर्न चाण्डालैर्न पुल्कसैः ।
न मूर्खेर्नावलिप्तैश्च नान्त्यैर्नान्त्यावसायिभिः ॥९६॥

शुनां च पतितानां च श्वपचां पापरोगिणाम्
वायसानां कृमीणां च शनकैर्निवपेद्भुवि ॥९७॥

लोभान्नाभूद्गृहे यस्य कदाचित् कश्चिदुत्सवः
नृत्यन्ति पटहैस्तस्य निधने धनभागिनः । ।९८॥

೯೦. ಧರ್ಮಮಾರ್ಗದಿಂದ ಬಂದ ಧನವನ್ನು ಪಡೆದು, ಅದನ್ನು ಯಜ್ಞಕ್ಕಾಗಿ ವಿನಿಯೋಗಿಸಬೇಕು; ಅದನ್ನು ನಿತ್ಯವೂ ದಾನಮಾಡಬೇಕು; ಅದರಿಂದ ಅತಿಥಿಗಳಿಗೆ ಊಣಬಡಿಸಬೇಕು; ಇನ್ನೊಬ್ಬರು ಕೈಯೆತ್ತಿ ಕೊಡದುದನ್ನು ಸ್ವೀಕರಿಸಬಾರದು– ಎಂಬುದು ಪ್ರಾಚೀನ ಕಾಲದಿಂದ ನಡೆದುಬಂದ ಗೃಹಸ್ಥಧರ್ಮದ ಉಪನಿಷತ್ತು.

೯೧. ವೇದಾಭ್ಯಾಸಕ್ಕೆ ಅಗ್ನಿಹೋತ್ರ ಮಾಡುವುದೇ ಫಲ; ಗಳಿಸಿದ ಧನಕ್ಕೆ ದಾನ–ಭೋಗಗಳೇ ಫಲ; ಮದುವೆಗೆ ಪತ್ನಿಪ್ರೇಮ–ಪುತ್ರಲಾಭಗಳೇ ಫಲ, ವಿವಿಧ ಶಾಸ್ತ್ರಗಳ ಓದಿಗೆ ಒಳ್ಳೆಯ ಗುಣ–ನಡತೆಗಳೇ ಫಲ.

೯೨. ಎಲ್ಲ ಜೀವಿಗಳೂ ತಾಯಿಯನ್ನು ಆಶ್ರಯಿಸಿ ಬದುಕುವಂತೆ, ಇತರ ಆಶ್ರಮಗಳೆಲ್ಲವೂ ಗೃಹಸ್ಥಾಶ್ರಮವನ್ನು ಆಶ್ರಯಿಸಿ ಇರುತ್ತವೆ.

೯೩. ಸಿರಿಗೆ ದಾನವು ಫಲ; ಓದಿಗೆ ಶಾಂತಿಯು ಫಲ; ಕೈಗೆ ದೇವರ ಪೂಜೆ ಫಲ; ಕರ್ಮಕ್ಕೆ ಪುಣ್ಯವು ಫಲ; ಜೀವನಕ್ಕೆ ಪರರ ದುಃಖವನ್ನು ಪರಿಹರಿಸುವ ಕ್ರೀಡೆಯೇ ಫಲ; ಮಾತಿಗೆ ಸತ್ಯವು ಫಲ; ಉನ್ನತಪ್ರಭಾವಕ್ಕೆ ಜಗತ್ತಿಗೆ ಹೆಚ್ಚಿನ ಸುಖ ಕೊಡುವುದೇ ಫಲ ಮತ್ತು ಬುದ್ಧಿಗೆ ಪುನರ್ಜನ್ಮ ಬಾರದಿರಲು ಏನು ಮಾಡಬೇಕೆಂದು ಆಲೋಚಿಸುತ್ತಿರುವುದೇ ಫಲ; ಅದು ಹಿತಕ್ಕಾಗಿಯೇ.

೯೪. ತನ್ನ ಹಿರಿಯರಿಗಿಂತ ಕಡಿಮೆಯವನಾಗುವುದನ್ನು ಬಯಸಬಾರದು; ಅವರಿಗೆ ಸಮನಾಗುವುದನ್ನು ಇಲ್ಲವೆ ಹೆಚ್ಚಿನವನಾಗುವುದನ್ನು ಬಯಸಬೇಕು; ಉತ್ಕೃಷ್ಟವಾದ ರಘುವಂಶದಲ್ಲಿ ಸಹ ರಾಮನು ತನ್ನ ಹಿರಿಯರಿಗಿಂತ ಹೆಚ್ಚಿನವನೆನ್ನಿಸಿದನು.

೯೫. ಸಾಯುವವರೆಗೂ ಪತಿ–ಪತ್ನಿಯರು ಪರಸ್ಪರ ವ್ಯಭಿಚಾರಿಗಳಾಗಬಾರದು. ಸ್ತ್ರೀ–ಪುರುಷರಿಗೆ ಸಂಕ್ಷಿಪ್ತವಾಗಿ ಹೇಳಬಹುದಾದ ಧರ್ಮ ಇದು.

೯೬. ಪತಿತರ, ಬಹಿಷ್ಕೃತ ಜಾತಿಯವರ, ನಿಂದ್ಯರಾದ ಸಂಮಿಶ್ರ ಕುಲದವರ, ಮೂರ್ಖರ, ಸೊಕ್ಕಿನವರ, ಗಡಿನಿವಾಸಿಗಳ ಮತ್ತು ಕ್ಷೌರಿಕರ ಸಂಗಡ ವಾಸಮಾಡಬಾರದು.

೯೭. ನಾಯಿಗಳಿಗೂ, ಪತಿತರಿಗೂ, ಹೀನ ಜಾತಿಯವರಿಗೂ, ಕುಷ್ಠರೋಗಿಗಳಿಗೂ, ಕಾಗೆಗಳಿಗೂ, ಹುಳುಗಳಿಗೂ, ಮೆಲ್ಲಗೆ ನೆಲದಮೇಲೆ ಊಣಬಡಿಸಬೇಕು.

೯೮. ಯಾವ ಉತ್ಸವವನ್ನೂ ಯಾವಾಗಲೂ ಮನೆಯಲ್ಲಿ ಮಾಡಿಸದ ಲೋಭಿಯು ಸತ್ತಾಗ, ಅವನ ವಾರಸುದಾರರು ತಂಬಟೆ ಬಡಿದು ಕುಣಿಯುತ್ತಾರೆ!

विद्वज्जनसम्पर्को नष्टेष्टज्ञातिदर्शनाभ्युदयः ।
कस्य न सुखाय भवने भवति महारत्नलाभश्च । ।९९॥

प्रातःशीतजले निमज्ज्य विबुधानभ्यर्चयत्युच्चकै–
रार्यः पर्युषितं तु नाभ्यवहरत्यन्धः क्षुधान्धोऽप्यसौ ।
भागे गोमयलिप्त एव पचते भुक्ते ततोऽन्यत्र यन्–
नीतं तद् विजहाति भुक्तिनियमो दृष्टः क्व भूयानियान् ॥१००॥

माता न यस्यास्त्यविवेकराशिः
पुनर्भवाब्धिर्जनको न यस्य ।
यस्य प्रसक्ता दयिता न तृष्णा
स एव लोके कुशली कुलीनः ॥१०१॥

नास्ति स्वस्तिकरः परः परिभवो धर्मात्मनां प्राणिनः
आपत्तापशमक्षमं धनसमं नान्यत् क्रियाजीविनाम् ।
संसारे परमस्ति नोऽत्र सुखदं रम्यं न रामाननात्
सर्वक्लेशविनाशनिर्वृतिरस : को नाम मोक्षात् परः ॥१०२॥

೯೯. ವಿದ್ವಜ್ಜನರ ಸಂಪರ್ಕ, ಕಳೆದುಹೋದ ಪ್ರಿಯಬಂಧುಗಳ ದರ್ಶನ ಲಾಭ ಮತ್ತು ದೊಡ್ಡ ರತ್ನವೊಂದು ದೊರಕುವುದು, ಯಾವನ ಮನೆಯಲ್ಲಿ ಸುಖದಾಯಕವಾಗದೆ ಉಳಿದಾವು?

೧೦೦. ಆರ್ಯನು ಬೆಳಿಗ್ಗೆ ತಣ್ಣೀರುಸ್ನಾನ ಮಾಡಿ, ದೇವರ ಪೂಜೆಯನ್ನು ದೊಡ್ಡದಾಗಿ ಮಾಡಿ, ಕುರುಡನಾಗಿದ್ದರೂ, ಎಷ್ಟು ಹಸಿದಿದ್ದರೂ ತಂಗೂಳನ್ನ ಉಣ್ಣದೆ, ಗೋಮಯದಿಂದ ಸಾರಿಸಿದ ನೆಲದ ಮೇಲೆಯೇ ಅಡಿಗೆ ಮಾಡಿ ಉಣ್ಣುತ್ತಾನೆ, ಬೇರೆ ಕಡೆಯಿಂದ ತಂದದ್ದನ್ನು ಬಿಡುತ್ತಾನೆ– ಊಟದ ಇಷ್ಟು ದೊಡ್ಡ ನಿಯಮವನ್ನು ಇನ್ನೆಲ್ಲಾದರೂ ನೋಡಲು ಸಾಧ್ಯವೇ?

೧೦೧. ಅವಿವೇಕರಾಶಿಯು ಅವನಿಗೆ ತಾಯಿಯಾಗಿಲ್ಲ; ಪುನರ್ಜನ್ಮ ಸಮುದ್ರವು ಅವನ ತಂದೆಯಾಗಿಲ್ಲ; ಆಸೆಯು ಹೆಂಡತಿಯಾಗಿ ಅವನನ್ನು ಅಂಟಿಕೊಂಡಿಲ್ಲ; ಆದುದರಿಂದ ಅವನೇ ಜಗತ್ತಿನಲ್ಲಿ ಕುಶಲಿಯೂ, ಕುಲೀನನೂ ಆಗಿದ್ದಾನೆ!

೧೦೨. ಧರ್ಮಾತ್ಮರಿಗೆ ಅನಾದರಕ್ಕಿಂತ ಲೇಸು ಇನ್ನೊಂದಿಲ್ಲ; ಕರ್ಮಜೀವಿಗಳಿಗೆ ಆಪತ್ತಿನ ಉರಿಯನ್ನು ಆರಿಸಲು ದುಡ್ಡಿಗಿಂತ ಹೆಚ್ಚಿನ ಬೇರೆ ವಸ್ತುವಿಲ್ಲ; ಸಂಸಾರದಲ್ಲಿ ಚೆಲುವೆಯ ಮೊಗಕ್ಕಿಂತ ರಮ್ಯವೂ, ಸುಖದಾಯಕವೂ ಆದ ಪದಾರ್ಥ ಇನ್ನೊಂದಿಲ್ಲ; ಎಲ್ಲ ದುಃಖಗಳೂ ನಾಶವಾಗುವುದರಿಂದುಂಟಾಗುವ ಪರಮಾನಂದದ ಸವಿಯುಳ್ಳ ವಸ್ತುವು ಮುಕ್ತಿಯನ್ನು ಬಿಟ್ಟರೆ ಇನ್ನಾವುದಿದೆ?

## ಅಧ್ಯಾಯ ೨

# ಮಾನವನ ತತ್ತ್ವಾನುಸಂಧಾನ

### ೧. ತತ್ತ್ವ

प्राणता श्वसितमेव विचार्यं
कुर्वता करणमेव निभाल्यम् ।
गच्छता गमनमेव विशोध्यं
तत्तनौ मथनमागमबोध्यम् ॥१॥

नादौ किञ्चिद्भवति नियतं यश्च पश्चान्न किञ्चित्
मध्येऽकस्मात् सपदि घटयन् सौस्थ्यदौस्थ्यानुरोधम् ।
निःशीर्षांघ्रिर्नट इव मुहः कोऽपि जन्तुर्नटित्वा
नो जानीमो भवजवनिकान्तर्हितः क्व प्रयाति ॥२॥

यः सहस्रं सहस्त्रांणं पक्षानाहृत्य सम्पतेत् ।
नान्तं गच्छेत् कारणस्य यद्यपि स्यान्मनोजवः ॥३॥

आत्मारामा विहितरतयो निर्विकल्पे समाधौ
ज्ञानोत्सेकाद्विघटित तमोग्रन्थयः सत्वनिष्ठाः ।
यं वीक्षन्ते कमपि तमसां ज्योतिषां वा परस्तात्
तं मोहान्धः कथमयममुं वेत्तु देवं पुराणम् ॥४॥

प्रशासितारं सर्वेषामणीयांसमणोरपि ।
रूक्माभं स्वप्नधीगम्यं विद्यात्तं पुरुषं परम् ॥५॥

यदुपादाय पूर्वस्तु भावो विकुरूतेऽपरम्
आदिरन्तो यदा यस्य तत् सत्यमभिधीयते ॥६॥

## ಅಧ್ಯಾಯ ೨

# ಮಾನವನ ತತ್ತ್ವಾನುಸಂಧಾನ

### ೧. ತತ್ತ್ವ

೧. ಬದುಕಿರುವವನು ಉಸಿರನ್ನು ವಿವೇಚಿಸಬೇಕು; ಕೆಲಸಗಾರನು ತನ್ನ ಉಪಕರಣವನ್ನು ಪರಾಂಬರಿಸಬೇಕು; ನಡೆಯುವಾತನು ನಡೆದಾಟವನ್ನು ಶೋಧಿಸಬೇಕು–ಹೀಗೆ ದೇಹದೊಳಗಿನ ಎಲ್ಲವನ್ನೂ ಶೋಧಿಸಿ ತಿಳಿದುಕೊಳ್ಳಬೇಕೆಂಬುದು ಆಗಮೋಪದೇಶ.

೨. ಮಾನವಜೀವನದಲ್ಲಿ ಮೊದಲು ಖಂಡಿತವಾಗಿ ಏನೂ ಇಲ್ಲ; ಆ ಮೇಲೂ ಏನೂ ಇಲ್ಲ; ನಡುವೆ ಮಾತ್ರ ಕೂಡಲೆ ಹೇಗೋ ಏನೋ ಸುಖ–ದುಃಖಗಳ ಅನುಭವ ಕಾಣುತ್ತದೆ. ತಲೆ, ಕಾಲು, ಎರಡೂ ಇಲ್ಲದ ನಟನಂತೆ ಮಾನವನು ಪದೇ ಪದೇ ನಟನೆ ಮಾಡುತ್ತಾನೆ. ಆ ನಟನೆ ಮುಗಿದೊಡನೆ ಭವದ ಪರದೆ ಬೀಳುತ್ತದೆ; ಅದರ ಹಿಂದೆ ಅವನೆಲ್ಲಿ ಮರೆಯಾಗಿ ಹೋಗುವನೋ ನಮಗರಿಯದು.

೩. ಹತ್ತು ಲಕ್ಷ ರೆಕ್ಕೆಗಳನ್ನು ಕಟ್ಟಿಕೊಂಡು ಮನೋಜವದಿಂದ ಹಾರಿದರೂ ಈ ಜಗತ್ತಿನ ಕಾರಣದ ತುದಿಯನ್ನು ಯಾರೂ ಮುಟ್ಟಲಾರರು.

೪. ಆತ್ಮವನ್ನು ಉದ್ಯಾನವನ್ನಾಗಿ ಉಳ್ಳ ಸತ್ವನಿಷ್ಠರು, ಜ್ಞಾನದ ಕಾರಂಜಿಯಿಂದ ಅಜ್ಞಾನದ ಹೆಂಟೆಗಳನ್ನು ಬಿಡಿಸಿಕೊಂಡು ನಿರ್ವಿಕಲ್ಪ ಸಮಾಧಿಯಲ್ಲಿ ಸಂತೋಷಪಡುತ್ತಾರೆ; ಅಂಥವರು ಕಾಣುವ ಬೆಳಕು ಕತ್ತಲುಗಳಾಚೆಗಿರುವ ಪ್ರಾಚೀನನಾದ ಆ ಅವರ್ಣನೀಯ ದೇವನನ್ನು ಮೋಹಾಂಧನೆಂತು ತಿಳಿದಾನು?

೫. ಅಣುವಿಗಿಂತ ಅಣುವೂ, ಸರ್ವಪ್ರಶಾಸಕನೂ, ಬಂಗಾರದ ಬಣ್ಣದವನೂ ನಿದ್ರಾಸದೃಶಪ್ರಜ್ಞೆಗೆ ಗಮ್ಯನೂ ಆದವನನ್ನು ಪರಮ ಪುರುಷನೆಂದು ತಿಳಿಯತಕ್ಕದ್ದು.

೬. ಭಾವಪದಾರ್ಥವು ಒಂದನ್ನು ತೆಗೆದುಕೊಂಡು ಇನ್ನೊಂದು ಪದಾರ್ಥವಾಗಿ ಮಾರ್ಪಡುತ್ತದೆ; ಆ ಒಂದು ವಸ್ತುವು ಆ ಪದಾರ್ಥದ ಆದಿಯೂ ಅಂತ್ಯವೂ ಆಗಿದ್ದರೆ ಅದೇ ಸತ್ಯ.

अदृश्यमव्यक्तमचिन्त्यमव्ययं
ब्रह्मर्षयो ब्रह्ममयं सनातनम् ।
वदन्ति यं वै पुरुषं सनातनं
तं देवगुह्यं शरणं प्रपद्ये ॥७॥

दिक्कालाद्यनवच्छिन्नानन्तचिन्मात्रमूर्तये ।
स्वानुभूत्येप्रमाणाय नमः शान्ताय तेजसे ॥८॥

अनन्तनामधेयाय सर्वाकारविधायिने ।
समस्तमन्त्रवाच्याय विश्वैकपतये नमः ॥९॥

नमो वाङ्मनसातीतमहिम्ने परमेष्ठिने
त्रिगुणाष्टगुणानन्तगुणनिर्गुणमूर्तये ॥१०॥

भवबीजाङ्कुरजलदा रागाद्याः
क्षयमुपागता यस्य ।
ब्रह्मा वा विष्णुर्वा हरो जिनो वा
नमस्तास्मै ॥११॥

यस्मिन् सर्वं यतः सर्वं सर्वतश्च यः ।
यश्च सर्वमयो नित्यं तस्मै सर्वात्मने नमः ॥१२॥

ब्रह्मादिषु प्रलीनेषु नष्टे लोके चराचरे ।
एकस्तिष्ठति विश्वात्मा स मे विष्णुः प्रसीदतु । ।१३॥

एकं ब्रह्मैवाद्वितीयं समस्तं
सत्यं सत्यं नेह नानास्ति किञ्चित् ।
एको रुद्रो न द्वितीयोऽवतस्थे
तस्मादेकं त्वां प्रपद्ये महेशम् ॥१४॥

आत्मस्वरूप तवरूपपरम्पराभि–
राभिस्ततं हर चराचररूपमेतत् ।
सर्वान्तरात्मनिलयप्रतिरूपरूप
नित्यं नतोऽस्मि परमात्मजनोऽष्टमूर्ते ॥१५॥

೭. ಬ್ರಹ್ಮರ್ಷಿಗಳು ಒಬ್ಬನನ್ನು ಅದೃಶ್ಯ, ಅವ್ಯಕ್ತ, ಅಚಿಂತ್ಯ, ಅವ್ಯಯ, ಸನಾತನ ಮತ್ತು ಬ್ರಹ್ಮಮಯ ಎಂದು ಕರೆಯುತ್ತಾರೆ; ದೇವತೆಗಳ ರಹಸ್ಯ ಸ್ವರೂಪವೆನ್ನಿಸಿದ ಆ ಸನಾತನಪುರುಷನನ್ನು ಶರಣು ಹೊಗುತ್ತೇನೆ.

೮. ಕಾಲದೇಶಗಳ ಗಡಿಯ ಹೊರಗಿನ, ಅಂತ್ಯವಿಲ್ಲದ, ಶುದ್ಧಜ್ಞಾನಾಕಾರದ ಸ್ವಾನುಭೂತಿಯನ್ನು ಮಾತ್ರ ಪ್ರಮಾಣವನ್ನಾಗಿ ಉಳ್ಳ ಶಾಂತಸ್ವರೂಪದ ತೇಜಸ್ವಿಗೆ ನಮಸ್ಕಾರ.

೯. ಅಗಣಿತ ನಾಮಗಳುಳ್ಳ ಸರ್ವಾಕಾರನಿರ್ವಾಪಕನಾದ, ಸಮಸ್ತ ಮಂತ್ರಗಳಿಂದ ಉಕ್ತನಾದ, ಒಬ್ಬನೇ ಆಗಿರುವ ವಿಶ್ವದ ಒಡೆಯನಿಗೆ ನಮಸ್ಕಾರ.

೧೦. ಮಾತಿಗೂ ಮನಸ್ಸಿಗೂ ನಿಲುಕದ ಮಹಿಮೆಯುಳ್ಳವನೂ, ತ್ರಿಗುಣ, ಅಷ್ಟಗುಣ, ಅನಂತಗುಣವಂತನೂ ಹಾಗೆಯೇ ನಿರ್ಗುಣಮೂರ್ತಿಯೂ ಆದ ಪರಮೇಷ್ಠಿಗೆ ನಮಸ್ಕಾರ.

೧೧. ಭವಬೀಜದ ಅಂಕುರಕ್ಕೆ ಮೋಡಗಳಾದ ರಾಗದ್ವೇಷಗಳು ಒಬ್ಬನಲ್ಲಿ ನಷ್ಟಹೊಂದಿರುತ್ತವೆ. ಆತನು ಬ್ರಹ್ಮನಾಗಿರಲಿ, ವಿಷ್ಣುವಾಗಿರಲಿ, ಮಹೇಶ್ವರನಾಗಿರಲಿ ಅಥವಾ ಜಿನನಾಗಿದ್ದರೂ ಸರಿ–ಅವನಿಗೆ ನಮಸ್ಕಾರ.

೧೨. ಅವನಲ್ಲಿ ಎಲ್ಲವೂ; ಅವನ ದೆಸೆಯಿಂದಲೇ ಎಲ್ಲವೂ; ಅವನೇ ಎಲ್ಲವೂ; ಎಲ್ಲ ಕಡೆಗಳಲ್ಲೂ ಅವನೇ; ಯಾವಾಗಲೂ ಅವನು ಸರ್ವವ್ಯಾಪಿ; ಆ ಸರ್ವಸಾರ ಸ್ವರೂಪನಿಗೆ ನಮಸ್ಕಾರ.

೧೩. ಬ್ರಹ್ಮ–ವಿಷ್ಣು–ಮಹೇಶ್ವರರು ಲಯವಾಗಿ ಹೋದಮೇಲೆ, ಚರಾಚರ ಜಗತ್ತು ನಾಶಹೊಂದಿದ ಮೇಲೆ, ಒಬ್ಬನೇ ಒಬ್ಬನಾಗಿ ಉಳಿಯುವ ವಿಶ್ವಾತ್ಮನಾದ 'ವಿಷ್ಣು'ವು ನನಗೆ ಪ್ರಸನ್ನನಾಗಲಿ.

೧೪. "ಬ್ರಹ್ಮನು" ಒಬ್ಬನೇ; ಅವನು ಸಮಸ್ತನು, ಅದ್ವಿತೀಯನು; ಸತ್ಯ, ಸತ್ಯ ಇಲ್ಲಿ ಯಾವುದೂ ಅನೇಕವಾಗಿಲ್ಲ; "ರುದ್ರನು" ಒಬ್ಬನೇ; ಎರಡನೆಯವನಿಲ್ಲ; ಆದುದರಿಂದ ಮಹೇಶವೆನ್ನಿಸಿರುವ ಒಬ್ಬನಾದ ನಿನ್ನನ್ನು ಸೇರುತ್ತೇನೆ.

೧೫. ಎಲೈ ಆತ್ಮಸ್ವರೂಪನೇ, ಹರನೇ, ಎಲ್ಲರ ಅಂತರಾತ್ಮನಿಲಯದ ಪ್ರತಿ ರೂಪಕ್ಕೆ ಮೂಲನಾಗಿರುವವನೇ, ಅಷ್ಟಮೂರ್ತಿಯೇ, ನಿನ್ನ ಈ ರೂಪಪರಂಪರೆಗಳಿಂದ ಚರಾಚರ ರೂಪದ ಈ ಜಗತ್ತು ವ್ಯಾಪ್ತವಾಗಿದೆ. ಆದುದರಿಂದ ಪರಮಾತ್ಮನಾದ ನಿನಗೆ ಸೇರಿದವನಾದ ನಾನು ನಿತ್ಯವೂ ನಿನ್ನನ್ನು ನಮಸ್ಕರಿಸುತ್ತೇನೆ.

मायाकारः कारणं त्वं प्रसिद्धो
वेदैः शान्तो ज्योतिर र्कस्त्वमुक्तः ।
वेदार्थेन त्वां विवृण्वन्ति बुद्ध्या
हृत्पद्मान्तः सन्निविष्टं पुराणम् ॥१६॥

स्वप्रकाशं निराकारं सदानन्दमनादि यत् ।
नित्यं शुद्धं बुद्धमृद्धं सत्यमानन्दमद्वयम् ॥१७॥

तस्मादनन्तमजरं परमं विकासि
तद्ब्रह्म चिन्तय किमेभिरसद्विकल्पैः ।
यस्यानुषंगिण इमे भुवनाधिपत्य–
भोगादयः कृपणलोकमता भवन्ति ॥१८॥

सत्यस्य वचनं साधु न सत्याद्विद्यते परम्
सत्येन विधृतं सर्वं सर्वंसत्ये प्रतिष्ठितम् ॥१९॥

नैर्गुण्याद् ब्रह्म चाप्नोति सगुणत्वान्निवर्तते ।
गुणप्रचारिणी बुद्धिर्हुताशन इवेन्धने ॥२०॥

सत्यमेवेश्वरो लोके सत्ये पद्मा प्रतिष्ठिता ।
सत्यमूलानि सर्वाणि सत्यान्नास्ति परं पदम् ॥२१॥

यो ब्रह्माणं विदधाति पूर्वं
यो वै वेदांश्च प्रहिणोति तस्मै ।
तं ह देवमात्मबुद्धिप्रकाशं
मुमुक्षुर्वै शरणमहं प्रपद्ये ॥२२॥

पश्यामि देवांस्तव देव देहे
सर्वांस्तथा भूतविशेषसंघान् ।
ब्रह्माणमीशं कमलासनस्थं
ऋषींश्च सर्वानुरगांश्च दिव्यान् ॥२३॥

೧೬. ನೀನು ಮಾಯಾಕಾರದಿಂದ ಜಗತ್ಕಾರಣನಾಗಿರುವುದು ಪ್ರಸಿದ್ಧ; ಮತ್ತು ಶಾಂತನೂ, ಜ್ಯೋತಿಃಸ್ವರೂಪನೂ, ಸೂರ್ಯನೂ ಆಗಿರುವೆ ಎಂದು ವೇದಗಳಲ್ಲಿ ಹೇಳಿದೆ; ಹೃದಯಕಮಲದಲ್ಲಿರುವ ಪ್ರಾಚೀನನಾದ ನಿನ್ನನ್ನು ಬುದ್ಧಿಯ ಮೂಲಕ ವಿದ್ವಾಂಸರು ವೇದಾರ್ಥದಿಂದ ವಿವರಿಸುತ್ತಾರೆ.

೧೭. ಸ್ವಪ್ರಕಾಶವುಳ್ಳದ್ದೂ, ನಿರಾಕಾರವಾದುದೂ, ಸದಾನಂದಸ್ವರೂಪದ್ದೂ ಅನಾದಿಯೂ ಆದ ಪದಾರ್ಥವು ನಿತ್ಯವೂ, ಶುದ್ಧವೂ, ಬುದ್ಧವೂ, ಸಮೃದ್ಧವೂ, ಸತ್ಯವೂ, ಆನಂದವೂ, ಅದ್ವಿತೀಯವೂ ಆಗಿದೆ.

೧೮. ಆದುದರಿಂದ ಅನಂತವೂ, ನಿರ್ಜರವೂ, ಶ್ರೇಷ್ಠವೂ ವಿಕಾಸಶೀಲವುಳ್ಳದ್ದೂ ಆದ ಬ್ರಹ್ಮವನ್ನು ಧ್ಯಾನಿಸು; ಅಸತ್‌ಸ್ವರೂಪದ ಈ ವಿಕಲ್ಪಗಳಿಂದ ಏನು ಪ್ರಯೋಜನ? ಈ ಜಗತ್ತಿನ ಒಡೆತನ ಮುಂತಾದ ಅಕಸ್ಮಾತ್ತಾಗಿ ಸಿಕ್ಕಿದ ಭೋಗಗಳೆಲ್ಲವೂ ಹೀನಮನರಿಗಷ್ಟೇ ಅಪೇಕ್ಷಣೀಯ.

೧೯. ಸತ್ಯ ಹೇಳುವುದು ಲೇಸು; ಸತ್ಯಕ್ಕಿಂತ ಹೆಚ್ಚಿನದಿನ್ನೊಂದಿಲ್ಲ; ಎಲ್ಲವೂ ಸತ್ಯವನ್ನಾಧರಿಸಿದೆ, ಎಲ್ಲವೂ ಸತ್ಯದಲ್ಲಿ ಪ್ರತಿಷ್ಠಿತವಾಗಿದೆ.

೨೦. ಮಾನವನು ನಿರ್ಗುಣತ್ವದಿಂದ ಬ್ರಹ್ಮವನ್ನು ಹೊಂದುತ್ತಾನೆ; ಮತ್ತು ಸಗುಣತ್ವದಿಂದ ಹಿಂದಿರುಗುತ್ತಾನೆ. ಕಟ್ಟಿಗೆಯಲ್ಲಿ ಬೆಂಕಿಯು ಸಂಚರಿಸಿದಂತೆ ಬುದ್ಧಿಯು ಗುಣದಲ್ಲಿ ಸಂಚರಿಸುತ್ತದೆ.

೨೧. ಲೋಕದಲ್ಲಿ ಈಶ್ವರನು ಸತ್ಯ; ಲಕ್ಷ್ಮಿಯು ಸತ್ಯದಲ್ಲಿ ಪ್ರತಿಷ್ಠಿತೆಯಾಗಿದ್ದಾಳೆ. ಎಲ್ಲದಕ್ಕೂ ಸತ್ಯವೇ ಮೂಲ; ಸತ್ಯಕ್ಕಿಂತ ಹೆಚ್ಚಿನ ಸ್ಥಾನವಿಲ್ಲ.

೨೨. ದೇವನು ಮೊದಲು ಬ್ರಹ್ಮನನ್ನು ಸೃಜಿಸಿದನು; ಅವನಿಗೆ ಆ ದೇವನು ವೇದಗಳನ್ನು ಕಳಿಸಿಕೊಟ್ಟನು; ಅವನು (ದೇವನು) ಆತ್ಮಬುದ್ಧಿಗೆ ಹೊಳೆಯುವವನು. ಮೋಕ್ಷವನ್ನು ಬಯಸುವ ನಾನು ಅವನನ್ನು ಮೊರೆಹೊಗುತ್ತೇನೆ.

೨೩. ದೇವರೇ, ನಿನ್ನ ದೇಹದಲ್ಲಿ ನಾನು ದೇವತೆಗಳನ್ನೂ, ಎಲ್ಲ ಭೂತ ಸಂಘಾತಗಳನ್ನೂ, ಕಮಲಾಸನನಾದ ಬ್ರಹ್ಮನನ್ನೂ, ಈಶ್ವರನನ್ನೂ, ಸರ್ವಋಷಿಗಳನ್ನೂ, ದಿವ್ಯಸರ್ಪಗಳನ್ನೂ ನೋಡುತ್ತಿದ್ದೇನೆ.

उपद्रष्टानुमन्ता च भर्ता भोक्ता महेश्वरः
परमात्मेति चाप्युक्तो देहेऽस्मिन् पुरुषः परः ॥२४॥

अनण्वस्थूलमह्रस्वमदीर्घमजमव्ययम् ।
अरूपगुणवर्णख्यं तद्ब्रह्मेत्यवधारयेत् ॥२५॥

निष्कलं सकलं ब्रह्म निर्गुणं गुणगोचरम् ।
योगिनां परमानन्दमक्षरं मोक्षसंज्ञितम् ॥२६॥

न सादृश्ये तिष्ठति रूपमस्य
न चक्षुषा पश्यति कश्चिदेनम् ।
मनीषयाऽथो मनसा हृदा च
य एनं विदुरमृतास्ते भवन्ति ॥२७॥

जगद्योनिरयोनिस्त्वं जगदन्तोऽप्यनन्तकः
जगदादिरनादिस्त्वं जगदीशोऽप्यनीश्वरः ॥२८॥

आत्मानमात्मना वेत्सि सृजस्यात्मानमात्मना
आत्मना कृतिना च त्वमात्मन्येव प्रलीयसे ॥२९॥

स्वकालपरिमाणेन व्यस्तरात्रिं दिवस्य ते
यौ तु स्वप्नावबोधौ तौ भूतानां प्रलयोदयौ ॥३०॥

त्वामामनन्ति प्रकृतिं पुरुषार्थप्रवर्तिनीम् ।
तद्दर्शनमुदासीनं त्वामेव पुरुषं विदुः ॥३१॥

त्वमेव हव्यं होता च भोज्यं भोक्ता च शाश्वतः
वेद्यं च वेदिता चासि ध्याता ध्येयं च यत्परम् ॥३२॥

यदा न कुरुते भावं सर्वभूतेष्वमङ्गलम्।
कर्मणा मनसा वाचा ब्रह्म सम्पद्यते तदा ॥३३॥

೨೪. ಈ ದೇಹದಲ್ಲಿರುವ ಪರಮಪುರುಷನು (ಗುಣಗಳ ಚಲನವನ್ನು ನೋಡುವ)ಸಾಕ್ಷಿಯೂ, ಒಪ್ಪಿಗೆ ಕೊಡುವವನೂ, ಹೊರೆಯುವವನೂ, ಭೋಗಿಸುವವನೂ, ಮಹೇಶ್ವರನೂ, ಪರಮಾತ್ಮನೆನ್ನಿಸಿದವನೂ ಆಗಿದ್ದಾನೆ.

೨೫. ಸೂಕ್ಷ್ಮವಲ್ಲದ, ಸ್ಥೂಲವಲ್ಲದ, ಹ್ರಸ್ವವಲ್ಲದ, ದೀರ್ಘವಲ್ಲದ, ಹುಟ್ಟಿಲ್ಲದ, ನಾಶವಿಲ್ಲದ, ರೂಪ–ಗುಣ–ವರ್ಣಗಳಿಲ್ಲದ ಪದಾರ್ಥವನ್ನು ಬ್ರಹ್ಮವೆಂದು ತಿಳಿಯಬೇಕು.

೨೬. ಬ್ರಹ್ಮವು ನಿಷ್ಕಲ ಹಾಗೂ ಸಕಲ, ನಿರ್ಗುಣ ಹಾಗೂ ಸಗುಣ; ಅದು ಯೋಗಿಗಳ ಪರಮಾನಂದದ ಸ್ವರೂಪವುಳ್ಳ ಅವಿನಾಶಿಯಾದ ಮೋಕ್ಷ.

೨೭. ಇವನ ರೂಪಕ್ಕೆ ಹೋಲಿಕೆಯಿಲ್ಲ. ಯಾವನೂ ಇವನನ್ನು ಕಣ್ಣಿಂದ ನೋಡಲಾರನು; ಬುದ್ಧಿ, ಮನಸ್ಸು, ಹೃದಯಗಳಿಂದ ಇವನನ್ನು ತಿಳಿದವರು ಅಮರರಾಗುವರು.

೨೮.೨೯. ನೀನು ಜಗದ ಜನಕ, ನಿನಗೆ ಯಾವ ಜನಕನೂ ಇಲ್ಲ; ನೀನು ಜಗವನ್ನು ಕೊನೆಗೊಳಿಸುವವನು, ನಿನ್ನನ್ನು ಯಾವನೂ ಕೊನೆಗೊಳಿಸಲಾರನು; ನೀನು ಜಗದ ಆದಿ, ನಿನಗೆ ಆದಿಯಿಲ್ಲ! ಜಗಕ್ಕೆ ನೀನು ಒಡೆಯ, ಆದರೆ ನಿನಗೆ ಯಾವನೂ ಒಡೆಯನಿಲ್ಲ! ನೀನು ನಿನ್ನ ಮೂಲಕ ನಿನ್ನನ್ನರಿತಿರುವೆ; ನೀನು ಸ್ವಯಂಭು; ನಿನ್ನಿಂದ ಮತ್ತು ನಿನ್ನ ಕೃತಿಯಿಂದ, ನೀನು ನಿನ್ನಲ್ಲಿ ಲೀನನಾಗುವೆ!

೩೦. ನಿನ್ನ ಕಾಲದ ಅಳತೆಯ ಪ್ರಕಾರ ಇರುಳು ಹಗಲುಗಳನ್ನು ನೀನು ವಿಭಜಿಸಿಕೊಂಡಿರುವೆ; ನಿನ್ನ ನಿದ್ರೆ–ಎಚ್ಚರಗಳ ಅವಧಿಗಳಲ್ಲಿ ಭೌತಿಕ ಪದಾರ್ಥಗಳ ಲಯ ಮತ್ತು ಸೃಷ್ಟಿ ಆಗುತ್ತವೆ.

೩೧. (ಔಪನಿಷದಿಕರು) ನಿನ್ನನ್ನು ಪುರುಷನ ಅರ್ಥದಲ್ಲಿ ಪ್ರವರ್ತಿಸುವ ಪ್ರಕೃತಿಯೆನ್ನುತ್ತಾರೆ; ಹಾಗೆಯೇ ನಿನ್ನನ್ನು, ಆ ಪ್ರಕೃತಿಯನ್ನು ನೋಡುತ್ತ ಉದಾಸೀನನಾಗಿ ಕುಳಿತುಕೊಳ್ಳುವ ಪುರುಷನೆಂದೂ ತಿಳಿದಿದ್ದಾರೆ.!

೩೨. ನೀನೇ ಹವಿಸ್ಸು, ಹೋತೃ, ಭೋಜ್ಯವಸ್ತು ಮತ್ತು ಭೋಗಿಸುವಾತನು; ಶ್ರೇಷ್ಠವಾದ ತಿಳಿವಳಿಕೆ, ತಿಳಿದುಕೊಳ್ಳುವವ, ಧ್ಯೇಯ ಮತ್ತು ಧ್ಯಾನ ಮಾಡುವವ ನೀನೇ!

೩೩. ಮನಸ್ಸು, ಮಾತು ಮತ್ತು ಕೃತಿಗಳಿಂದ ಯಾವ ಜೀವಿಗೂ ಅಮಂಗಲವನ್ನು ಮಾಡದಿದ್ದರೆ, ಬ್ರಹ್ಮವು ಸಿದ್ಧಿಸುವುದು.

सत्वं ज्ञानं तमोऽज्ञानं रागद्वेषौ रजः स्मृतम् ।
एतद्व्याप्तिमदेतेषां सर्वभूताश्रितं वपुः ॥३४॥

नित्यं द्वन्द्वसमायुक्तं सत्वमाहुर्मनीषिणः
निर्द्वंद्वो निष्कलो नित्यः क्षेत्रज्ञो निर्गुणात्मकः ॥३५॥

नं सत्यं विन्दते कश्चित् क्षेत्रज्ञस्त्वेव विन्दति ।
गुणानां गुणभूतानां यत् परं परमं महत् ॥३६॥

संन्यासी ज्ञानसंयुक्तः प्राप्नोति परमां गतिम् ।
अतीतो द्वन्द्वमभ्येति तमोमृत्युजरातिगः ॥३७॥

आश्चर्यवत् पश्यति कश्चिदेनं
आश्चर्यवद् वदति तथैव चान्यः ।
आश्चर्यवत् चैनमन्यः श्रृणोति
श्रुत्वाप्येनं वेद न चैव कश्चित् ॥३८॥

न जायते म्रियते वा कदाचिन्
नायं भूत्वा भविता वा न भूयः ।
अजो नित्यः शाश्वतोऽयं पुराणो
न हन्यते हन्यमाने शरीरे ॥३९॥

आत्मा मनश्च तद्विद्यैरन्तःकरणमुच्यते ।
ताभ्यां तु सप्रयत्नाभ्यां सङ्कल्प उपजायते ॥४०॥

आत्मा बुद्धीन्द्रियाण्यर्था बहिष्करणमुच्यते ।
सङ्कल्पाध्यवसायाभ्यां सिद्धिरस्य प्रकीर्तिता ॥४१॥

उभे एते हि करणे यत्नानन्तर्यके स्मृते ।
तस्मात् प्रयत्न संरोधाद् भावयेन्निर्मनस्कता ॥४२॥

೩೪. ಸತ್ವವು ಜ್ಞಾನ, ತಮಸ್ಸು, ಅಜ್ಞಾನ, ರಜಸ್ಸು ರಾಗ–ದ್ವೇಷಗಳ ಸ್ವರೂಪದ್ದು; ಎಲ್ಲ ಪ್ರಾಣಿಗಳ ಶರೀರವೂ ಈ ವ್ಯಾಪಕ ಲಕ್ಷಣವುಳ್ಳದ್ದು.

೩೫. ತಿಳಿದವರು ಯಾವಾಗಲೂ ದ್ವಂದ್ವಗಳಿಂದ ಕೂಡಿರುವ ಪದಾರ್ಥವನ್ನು ಸತ್ವವೆಂದು ಹೇಳುತ್ತಾರೆ; ಅವರ ಪ್ರಕಾರ ಆತ್ಮನು ನಿತ್ಯನೂ, ದ್ವಂದ್ವ ರಹಿತನೂ, ನಿಷ್ಕಲನೂ, ನಿರ್ಗುಣನೂ ಆಗಿದ್ದಾನೆ.

೩೬. ಇತರ ಯಾರೂ ಸತ್ಯವನ್ನು ಪಡೆಯರು, ಆತ್ಮ ಮಾತ್ರ ಪಡೆಯಬಲ್ಲ; ಆತನು ಗುಣಗಳನ್ನು ಹಾಗೂ ಗುಣವುಳ್ಳ ಭೂತವಸ್ತುಗಳನ್ನು ಮೀರಿದವನು ಮತ್ತು ವಿಶ್ವವ್ಯಾಪಕನು.

೩೭. ಜ್ಞಾನಸಂಪನ್ನನೇ ಸಂನ್ಯಾಸಿ; ಅವನಿಗೆ ಅತಿಶ್ರೇಷ್ಠವಾದ ಸ್ಥಾನವು ಸಿಗುವುದು; ಅವನು ದ್ವಂದ್ವಾತೀತನಾಗಿ ದ್ವಂದ್ವಗಳನ್ನು ಎದುರಿಸುತ್ತಾನೆ, ಮತ್ತು ಅಜ್ಞಾನ–ಜರಾ–ಮರಣಗಳನ್ನು ಮೀರಿದವನಾಗಿರುತ್ತಾನೆ!

೩೮. ಈತನನ್ನು ಒಬ್ಬ ಒಂದು ಆಶ್ಚರ್ಯದ ವಸ್ತುವನ್ನು ನೋಡುವಂತೆ ನೋಡುತ್ತಾನೆ, ಇನ್ನೊಬ್ಬನು ಇವನನ್ನು ಒಂದು ಆಶ್ಚರ್ಯದ ವಸ್ತುವನ್ನು ಬಣ್ಣಿಸುವಂತೆ ಬಣ್ಣಿಸುತ್ತಾನೆ; ಮತ್ತೊಬ್ಬನು ಇವನ ವರ್ಣನೆಯನ್ನು ಒಂದು ಆಶ್ಚರ್ಯದ ಸುದ್ದಿಯನ್ನು ಕೇಳುವಂತೆ ಕೇಳುತ್ತಾನೆ. ಆದರೆ, ಹಾಗೆ ಕೇಳಿದರೂ ಯಾವನೂ ಈತನನ್ನು ಅರಿಯನು!

೩೯. ಈತನು ಎಂದೂ ಹುಟ್ಟನು, ಎಂದೂ ಸಾಯನು; ಇವನು ಆದವನಲ್ಲ, ಆಗುವವನಲ್ಲ ಅಥವಾ ಪುನರ್ಜನ್ಮ ಹೊಂದುವವನಲ್ಲ; ಇವನು ಜನ್ಮರಹಿತ, ನಿತ್ಯ, ಶಾಶ್ವತ ಮತ್ತು ಪ್ರಾಚೀನ (ಯಾವಾಗಲೂ ಹೆಚ್ಚು–ಕಡಿಮೆ ಆಗದೆ, ಹಿಂದಿನಿಂದ ಇದ್ದಂತೆ, ಒಂದೇ ವಿಧವಾಗಿ ಇರುವವನು): ಹಿಂಸೆಗೊಳಗಾಗುವ (ಬದಲಾಗುವ) ಶರೀರದಲ್ಲಿವನು (ಬದಲಾಗದೆ) ಹಿಂಸೆಗೊಳಗಾಗದೆ ಇರುತ್ತಾನೆ!

೪೦–೪೧–೪೨. ವೇದವನ್ನು ಬಲ್ಲವರು ಆತ್ಮ–ಮನಗಳನ್ನು ಅಂತಃಕರಣವೆನ್ನುತ್ತಾರೆ: ಅವುಗಳ ಪ್ರಯತ್ನದಿಂದ ಮನುಷ್ಯನಲ್ಲಿ ಸಂಕಲ್ಪ ಹುಟ್ಟುತ್ತದೆ. ಅವರು ದೇಹ, ಬುದ್ಧಿ, ಇಂದ್ರಿಯ ಮತ್ತು ಬಾಹ್ಯಪದಾರ್ಥಗಳನ್ನು ಬಹಿಷ್ಕರಣವೆಂದು ಹೇಳುತ್ತಾರೆ. ಸಂಕಲ್ಪ ನಿಶ್ಚಯಗಳಿಂದ ಕಾರ್ಯವೊಂದು ಸಿದ್ಧಿಸುತ್ತದೆ. ಒಳ ಹೊರಗಿನವುಗಳೆರಡೂ ಕರಣಗಳು (ಅಥವಾ ಅಸಾಧಾರಣ ಕಾರಣಗಳು); ಇವೆರಡೂ ಪ್ರಯತ್ನದ (ಅಥವಾ ಇಚ್ಛಾಶಕ್ತಿಯ ಉದಯದ) ಅನಂತರವೇ ಕಾರ್ಯೋನ್ಮುಖವಾಗುವಂಥವು. ಆದುದರಿಂದ ಪ್ರಯತ್ನವನ್ನು ತಡೆಹಿಡಿದು ನಿರ್ಮನಸ್ಕಭಾವವನ್ನು ಹೊಂದಬೇಕು.

प्राप्यते च यथा सत्यं तच्च श्रोतुमिहार्हसि ।
सत्यं त्रयोदशविधं सर्वलोकेषु भारत ॥४३॥

सत्यं च समता चैव दमश्चैव न संशयः ।
अमात्सर्यं क्षमा चैव ह्रीस्तितिक्षानसूयता ॥४४॥

त्यागो ध्यानमथार्यत्वं धृतिश्च सततं दया
अहिंसा चैव राजेन्द्र सत्याकारास्त्रयोदश ॥४५॥

अर्थकामेष्वसक्तानां धर्मज्ञानं विधीयते ।
धर्मं जिज्ञासमानानां प्रमाणं परमंश्रुतिः ॥४६॥

ममेति परमं दुःखं न ममेति परं सुखम् ।
द्वे हि बन्धस्य मोक्षस्य ममेति न ममेति च ॥४७॥

यच्च कामसुखं लोके यच्च दिव्यं महत्सुखम् ।
तृष्णाक्षयसुखस्यैतत्कलां नार्हन्ति षोडशीम् ॥४८॥

सुवर्णाज्जायमानस्य सुवर्णत्वं च शाश्वतम् ।
ब्रह्मणो जायमानस्य ब्रह्मात्वं च तथा भवेत् ॥४९॥

आत्मैव देवताः सर्वाः सर्वमात्मन्यवस्थितम् ।
आत्मा हि जनयत्येषां कर्मयोगं शरीरिणाम् ॥५०॥

एतमेके वदन्त्यग्निं मनुमन्ये प्रजापतिम् ।
इन्द्रलोके परे प्राणमपरे ब्रह्म शाश्वतम् ॥५१॥

एवं यः सर्वभूतेषु पश्यत्यात्मानमात्मना ।
स सर्वसमतामेत्य ब्रह्माभ्येति परं पदम् । ।५२॥

೪೩-೪೪-೪೫. ಎಲೈ ದೊರೆಯಾದ ಭಾರತವಂಶೀಯನೇ, "ಸತ್ಯವು" ಲಭಿಸುವುದು ಹೇಗೆಂಬುದನ್ನು ಹೇಳುತ್ತೇನೆ; ಅದನ್ನು ಕೇಳು; ಸರ್ವಲೋಕಗಳಲ್ಲೂ ಸತ್ಯ ಅಥವಾ ಧರ್ಮವು ಹದಿಮೂರು ವಿಧವಾದದ್ದು (ಹದಿಮೂರು ಗುಣಗಳಿಂದ ಕೂಡಿದ್ದು.) (೧) ಯೋಗದಿಂದ ಪಡೆವ ಸತ್ಯ, ಅಥವಾ ಅವ್ಯಯಭಾವ, (೨) ಶತ್ರು-ಮಿತ್ರರಿಬ್ಬರಲ್ಲೂ ತಾಳುವ ಸಮತ್ವದ ಭಾವ, (೩) ದಮ, (೪) ದಾನ-ಧರ್ಮಗಳಲ್ಲಿ ವಿವೇಕ, (೫) ಕ್ಷಮೆ, (೬) ನಾಚಿಕೆ, (೭) ಸಹನೆ, (೮) ಅನಸೂಯೆ, (೯) ಧೇನಿಸಿ, ಧೇನಿಸಿ ರಾಗ-ದ್ವೇಷಗಳನ್ನು ಬಿಡುವುದು (೧೦) ಪರೋಪಕಾರ ಶೀಲ. (೧೧) ಧೃತಿ (೧೨) ದಯೆ ಮತ್ತು (೧೩) ಅಹಿಂಸೆ.

೪೬. ಅರ್ಥ-ಕಾಮಗಳಲ್ಲಿ ಆಸಕ್ತಿ ಇಲ್ಲದವರಿಗೆ ಮಾತ್ರ ಧರ್ಮದ ಜ್ಞಾನವು ಶಕ್ಯ; ಧರ್ಮವನ್ನು ತಿಳಿದುಕೊಳ್ಳಬೇಕೆಂಬವರಿಗೆ ವೇದವಾಙ್ಮಯವೇ ಪರಮ ಪ್ರಮಾಣ.

೪೭. ನನ್ನದೆಂಬುದು ಪರಮದುಃಖಕರ, ನನ್ನದಲ್ಲವೆಂಬುದು ಪರಮ ಸುಖಕರ; ಮಮ, ನ ಮಮ-ಎಂಬೀ ಎರಡು, ಬಂಧ ಮೋಕ್ಷಗಳಿಗೆ ಕಾರಣಗಳು.

೪೮. ಇಹದ ಕಾಮಸುಖವೂ, ಪರದ ದಿವ್ಯಸುಖವೂ ಆಶಾತ್ಯಾಗದಿಂದ ದೊರಕುವ ಸುಖದ ಹದಿನಾರನೆಯ ಒಂದಂಶದಷ್ಟೂ ಆಗಲಾರವು.

೪೯. ಬಂಗಾರದಿಂದ ಹುಟ್ಟಿದ ಪದಾರ್ಥಕ್ಕೆ ಬಂಗಾರದ ಗುಣವು ಶಾಶ್ವತ; ಬ್ರಹ್ಮನಿಂದ ಹುಟ್ಟಿದ ಪದಾರ್ಥಕ್ಕೆ ಬ್ರಹ್ಮತ್ವವೂ ಹಾಗೆಯೇ ಶಾಶ್ವತ.

೫೦. ಎಲ್ಲ ದೇವತೆಗಳೂ ಆತ್ಮನೇ; ಎಲ್ಲವೂ ಆತ್ಮನಲ್ಲಿವೆ; ಆತ್ಮನೇ ಈ ಎಲ್ಲ ದೇಹಿಗಳ ಕರ್ಮಯೋಗವನ್ನು ನಿರ್ಮಿಸುತ್ತಾನೆ.

೫೧. ಕೆಲವರಿವನನ್ನು ಅಗ್ನಿಯೆಂದೂ ಕೆಲವರು ಮನುವೆಂದೂ ಇತರರು ಪ್ರಜಾಪತಿಯೆಂದೂ ಇನ್ನೂ ಕೆಲವರು ಇಂದ್ರನೆಂದೂ ಮತ್ತಷ್ಟು ಜನರು ಪ್ರಾಣವೆಂದೂ ಮಿಕ್ಕವರು ಶಾಶ್ವತಬ್ರಹ್ಮವೆಂದೂ ಹೇಳುತ್ತಾರೆ.

೫೨. ಹೀಗೆ ಸರ್ವಸೃಷ್ಟಿಯಲ್ಲಿಯೂ ಆತ್ಮನ ಮೂಲಕ ಆತ್ಮನನ್ನು ನೋಡುವಾತನು, ಸರ್ವಸಾಮ್ಯವನ್ನು ಹೊಂದಿ, ಶ್ರೇಷ್ಠವಾದ ಬ್ರಹ್ಮಸ್ಥಾನವನ್ನು ಸೇರುತ್ತಾನೆ.

## ೨. ಸ್ತುತಿ

उदासितारं निगृहीतमानसैर्
गृहीतमध्यात्मदृशा कथञ्चन ।
बहिर्विकारं प्रकृतेः पृथग्विदुः
पुरातनं त्वां पुरुषं पुराविदः ॥५३॥

सत्यवृत्तमपि मायिनं जगद्–
वृद्धमप्युचितनिद्रमर्भकम् ।
जन्म बिभ्रतमजं नवं बुधा
यं पुराणपुरुषं प्रचक्षते ॥५४॥

एतत् तत् परमं ब्रह्म निर्लिङ्गं ध्रुवमक्षरम् ।
यन्मोक्ष इति तत्वज्ञाः कथयन्ति मनीषिणः ॥५५॥

आत्मानन्दः परमानन्दो निर्वाणं परमं सुखम् ।
ऐश्वर्यस्य सुखं लोके ससर्पगृहवासवत् ॥५६॥

समः शत्रौ च मित्रे च सर्वभूतहिते रतः
मुक्तमानसरोगोऽसावात्मारामो बभूव ह ॥५७॥

मृद्वीका रसिता सिता समशिता स्फीतं निपीतं पयः
स्वर्यातेन सुधाप्यधायि कतिधा रम्भाधरः खण्डितः ।
सत्यं ब्रूहि मदीयजीव भवता भूयो भवे भ्राम्यता
कृष्णेत्यक्षरयोरयं मधुरिमोद्गारः क्वचिल्लक्षितः ॥५८॥

रजोजुषे जन्मनि सत्ववृत्तये
स्थितौ प्रजानां प्रलये तमः स्पृशे ।
अजाय सर्गस्थितिनाशहेतवे
त्रयीमयाय त्रिगुणात्मने नमः ॥५९॥

## ೨. ಸ್ತುತಿ

೫೩. ಮನಸ್ಸನ್ನು ಬಿಗಿಹಿಡಿದ ಸನಾತನ ತತ್ತ್ವಜ್ಞರು ಬಹಳ ಪ್ರಯಾಸದಿಂದ, ಆಧ್ಯಾತ್ಮಿಕ ಕಣ್ಣಿನ ಮೂಲಕ, ಸಾಕ್ಷಾತ್ಕರಿಸಿಕೊಂಡು, ಉದಾಸೀನನಾದ ನಿನ್ನನ್ನು ಪ್ರಾಕೃತಿಕ ವಿಕಾರದ ಕಕ್ಷೆಯ ಹೊರಗಿನವನೆಂದೂ, ಪುರಾತನನಾದ ಪುರುಷನೆಂದೂ ಬಗೆಯುತ್ತಾರೆ.

೫೪. ನೀನು ನಿಷ್ಕಪಟಚರಿತನಾದರೂ ತಿಳಿದವರು ನಿನ್ನನ್ನು ಕಾಪಟ್ಯಸದೃಶವಾದ ಮಾಯಾಶಕ್ತಿಯುಳ್ಳವನೆನ್ನುತ್ತಾರೆ; ಎಲ್ಲ ಲೋಕಗಳಿಗೂ ನೀನು ಅಜ್ಞನಾದರೂ ನಿನ್ನನ್ನು ಯೋಗನಿದ್ರಾಮಗ್ನನಾದ ಶಿಶುವೆನ್ನುತ್ತಾರೆ; ನೀನು ಜನ್ಮರಹಿತನಾದರೂ ನಿನ್ನನ್ನು ಅವತಾರಪುರುಷನೆನ್ನುತ್ತಾರೆ; ಹಾಗೆಯೇ ಎಂದಿನಿಂದಲೂ ಇದ್ದಿರುವಂಥ) ಹಳಬನಾದ ನಿನ್ನನ್ನು (ಅವತಾರದ ದೆಸೆಯಿಂದ) ಅವರು ಹೊಸಬನೆಂದು ಹೇಳುತ್ತಾರೆ!

೫೫–೫೬–೫೭. ಪರಬ್ರಹ್ಮಕ್ಕೆ ಲಿಂಗವಿಲ್ಲ; ಅದು ಶಾಶ್ವತ ಹಾಗೂ ದೃಢ; ತತ್ವಜ್ಞರಾದ ಮೇಧಾವಿಗಳು ಅದನ್ನು ಮೋಕ್ಷವೆಂದು ಕರೆಯುತ್ತಾರೆ. ಆತ್ಮಾನಂದವು ಅತ್ಯಂತ ಶ್ರೇಷ್ಠವಾದುದು; ಅದೇ ಪರಮಸುಖವೆಂಬ ನಿರ್ವಾಣ; ಲೋಕದ ಐಶ್ವರ್ಯ ಕೊಡುವ ಸುಖವು ಸರ್ಪ ಹೊಕ್ಕ ಮನೆಯಲ್ಲಿ ವಾಸಿಸುವ ಸುಖಕ್ಕೆ ಸಮ. ಶತ್ರು–ಮಿತ್ರರಲ್ಲಿ ಸಮನಾಗಿ, ಸರ್ವಪ್ರಾಣಿಗಳ ಹಿತವನ್ನು ಸಾಧಿಸುವುದರಲ್ಲಿ ಆಸಕ್ತವಾಗಿ ಆತ್ಮಸ್ಥನಾದ ಆತನು ಮಾನಸಿಕ ರೋಗದಿಂದ ಮುಕ್ತನಾದನು.

೫೮. ದ್ರಾಕ್ಷೆಯನ್ನು ರುಚಿ ನೋಡಿದ್ದಾಯ್ತು; ಕಲ್ಲುಸಕ್ಕರೆಯನ್ನು ಚೆನ್ನಾಗಿ ತಿಂದದ್ದಾಯ್ತು; ಯಥೇಷ್ಟ ನೀರು ಕುಡಿದಾಯ್ತು. ಸ್ವರ್ಗಕ್ಕೆ ಹೋಗಿ ನೀನು ಎಷ್ಟು ಸಲ ಅಮೃತವನ್ನು ಕುಡಿದೆ ಮತ್ತು ರಂಭೆಯನ್ನು ಚುಂಬಿಸಿದೆ! ನಿಜ ಹೇಳು; ನನ್ನ ಜೀವವೇ, ಮತ್ತೆ ಮತ್ತೆ ಹುಟ್ಟು–ಸಾವುಗಳ ಚಕ್ರದಲ್ಲಿ ತಿರುಗುವ ನೀನು ಎಲ್ಲಾದರೂ 'ಕೃಷ್ಣ' ಎಂಬ ಅಕ್ಷರಗಳ ಇಂಥ ಮಾಧುರ್ಯಧಾರೆಯನ್ನು ಕಂಡದ್ದುಂಟೇ?

೫೯. ಪ್ರಜೆಗಳ ಸೃಷ್ಟಿಯಲ್ಲಿ ರಜಸ್ಸನ್ನು ಹೊಂದುವ, ಸ್ಥಿತಿಯಲ್ಲಿ ಸತ್ವವನ್ನು ತಾಳುವ ಮತ್ತು ಲಯದಲ್ಲಿ ತಮಸ್ಸನ್ನು ಹಿಡಿಯುವ, ವೇದತ್ರಯಸ್ವರೂಪದ ತ್ರಿಗುಣಾತ್ಮಕನೂ, ಸೃಷ್ಟಿ–ಸ್ಥಿತಿ–ಪ್ರಲಯಕಾರಣನೂ ಆದ ಬ್ರಹ್ಮನಿಗೆ ನಮಸ್ಕಾರ!

एणाक्षी स्पृहयालुता न कथमप्यास्ते विवेकोदयान् –
नित्यं प्रच्युतिशङ्कया क्षणमपि स्वर्गे न मोदामहे ।
अप्यन्येषु विनाशिवस्तु विषयाभोगेषु तृष्णा न मे
स्वर्णद्याः पुलिने परं हरिपदध्यानं मनोवाञ्छति ॥६०॥

सत्यं वक्तुमशेषमस्तिसुलभा वाणी मनोहारिणी
दातुं दानवरं शरण्यमभयं स्वच्छं पितृभ्यो जलम् ।
पूजार्थं परमेश्वरस्य विमलः स्वाध्याययज्ञः परं
क्षुद्व्याधेः फलमूलमस्ति शमनं क्लेशात्मकं किं धनैः ॥६१॥

गङ्गातीरे हिमगिरिशिलाबद्धपद्मासनस्य
ब्रह्मध्यानाभ्यसनविधिना योगनिद्रांगतस्य ।
किं तैर्भाव्यं मम सुदिवसैर्यत्र ते निर्विशङ्काः
कण्डूयन्ते जरठहरिणाः स्वाङ्गमङ्गे मदिये ॥६२॥

वेदानुद्धरते जगन्निवहते भूगोलमुद्बिभ्रते
दैत्यान् दारयते बलिं छलयते क्षत्रक्षयं कुर्वते ।
पौलस्त्यं जयते हलं कलयते कारुण्यमातन्वते
म्लेच्छान् मूर्छयते दशाकृतिधृते कृष्णाय तुभ्यं नमः ॥६६॥

नभोऽन्तरे हिरण्मयं विभुं प्रचक्षते हरं
दिनेशबिम्बबिम्बितं भणन्ति पङ्कजासनम् ।
इहास्मदन्तरालयं वदन्ति विष्णुमच्युतं
सवित्रि जन्मिनामियं त्रिमूर्तिवादिधोरणी ॥६४॥

स्वरूपं ते वज्रं वियति रजसां सूक्ष्ममहसा–
मुपाधिस्ते स्तोमो भवति चपला काऽपि तनुभा ।
अरुद्धा ते व्याप्तिर्बलमखिलदत्तं बलनिधेः
सहस्रांशः स्वस्य प्रभवसि समस्तस्य च शिवे ॥६५॥

೬೦. ವಿವೇಕ ಉಂಟಾದುದರಿಂದ ಹರಿಣಾಕ್ಷಿಯ ಹಂಬಲು ಹೇಗೂ ಇಲ್ಲ; ಪ್ರತಿದಿನವೂ ಸ್ಥಾನಭಂಗದ ಭಯವಿರುವುದರಿಂದ ಕ್ಷಣಮಾತ್ರವೂ ಸ್ವರ್ಗದಲ್ಲಿ ಸಂತೋಷಪಡಲಾರೆ; ಇತರ ನಶ್ವರವಸ್ತುಗಳ ಭೋಗ್ಯತೆಯ ಹರಹಿನಲ್ಲಿ ನನಗಾಸೆ ಇಲ್ಲ; ಗಂಗೆಯ ಮಳಲು ದಿಣ್ಣೆಯಮೇಲೆ (ಕುಳಿತು) ಹರಿಪಾದಗಳನ್ನು ನೆನೆಯಲು ನನ್ನ ಮನಸ್ಸು ಬಯಸುತ್ತದೆ.

೬೧. ಸತ್ಯವೆಲ್ಲವನ್ನು ನಿಃಶೇಷವಾಗಿ ಹೇಳಲು ಸುಲಭವಾಗಿ ಸಿಗುವ ಸೊಗಸಾದ ಮಾತಿದೆ; ಇತರರಿಗೆ ಕೊಡಲು ಕೊಡತಕ್ಕ ವಸ್ತುಗಳಲ್ಲೆಲ್ಲಾ ಶ್ರೇಷ್ಠವಾದ ನಿರ್ಭಯದ ಆಶ್ರಯವಿದೆ; ಪಿತೃತರ್ಪಣಕ್ಕೆ ನಿರ್ಮಲವಾದ ನೀರಿದೆ; ಪರಮೇಶ್ವರನ ಪೂಜೆಗೆ ವಿಮಲವಾದ ವೇದಪಾರಾಯಣರೂಪದ ಯಜ್ಞವಿದೆ; ಹಸಿವಿನ ರೋಗವನ್ನು ವಾಸಿಮಾಡಲು ಉತ್ಕೃಷ್ಟವಾದ ಗಡ್ಡೆ-ಗೆಣಸು, ಹಣ್ಣು-ಹಂಪಲುಗಳಿವೆ. ಹೀಗಿರುವಾಗ ಕಷ್ಟಕರವಾದ ಧನಾರ್ಜನೆಯಿಂದ ನನಗೇನಾಗಬೇಕು?

೬೨. ಗಂಗಾತೀರದಲ್ಲಿ ಹಿಮಗಿರಿಯ ಕಲ್ಲಿನಮೇಲೆ ಪದ್ಮಾಸನ ಹಾಕಿ ಕುಳಿತು, ಬ್ರಹ್ಮಧ್ಯಾನವನ್ನು ಅಭ್ಯಾಸಮಾಡುವ ಕ್ರಮವನ್ನು ಹಿಡಿದು, ಯೋಗನಿದ್ರೆಯನ್ನು ಹೊಂದಿದಾಗ, ನಿರ್ಭಯವಾಗಿ ಅಲ್ಲಿಯ ಮುದಿಜಿಗರೆಗಳು, ತಮ್ಮ ಮೈಯನ್ನು ನನ್ನ ಮೈಗೆ ತಿಕ್ಕಿ ತುರಿಸಿಕೊಳ್ಳುವಂಥ ಸುದಿನಗಳು ನನಗೆ ಪ್ರಾಪ್ತವಾಗುವವೇ?

೬೩. ವೇದಗಳನ್ನು ಉದ್ಧರಿಸಿದ, ಜಗತ್ತನ್ನು ಹೊತ್ತ, ಭೂ ಗೋಲವನ್ನು ಎತ್ತಿ ಹಿಡಿದ, ದಾನವರನ್ನು ಅರಿದ, ಬಲಿಯನ್ನು ಛಲಿಸಿದ. ಕ್ಷತ್ರಿಯರನ್ನು ನಾಶಗೊಳಿಸಿದ, ರಾವಣನನ್ನು ಗೆದ್ದ, ನೇಗಿಲನ್ನು ಹಿಡಿದ, ಕಾರುಣ್ಯವನ್ನು ತೋರಿದ, ಮ್ಲೇಚ್ಛರನ್ನು ಸದೆದ-ಹೀಗೆ ಹತ್ತವತಾರ ತಾಳಿದ ಕೃಷ್ಣನಾದ ನಿನಗೆ ನಮಸ್ಕಾರ.

೬೪. ದೇಹಿಗಳ ತಾಯೇ, ಅಂತರಿಕ್ಷದ ನಡುವೆ ವ್ಯಾಪಿಸಿರುವ ಬಂಗಾರದ ಬಣ್ಣದ ಪುರುಷನನ್ನು ಹರನೆಂದೂ, ಸೂರ್ಯಮಂಡಲದೊಳಗಿರುವ ಪುರುಷನನ್ನು ಬ್ರಹ್ಮನೆಂದೂ, ಇಲ್ಲಿ ನಮ್ಮೊಳಗೆ ಅವಿನಾಶಿಯಾಗಿರುವ ಪುರುಷನನ್ನು ವಿಷ್ಣುವೆಂದೂ ಜನರು ಹೇಳುತ್ತಾರೆ; ಇದೇ ತ್ರಿಮೂರ್ತಿವಾದಿಗಳ ಸಂಪ್ರದಾಯ.

೬೫. ಎಲೈ ಪಾರ್ವತಿಯೇ, ಸಿಡಿಲು ನಿನ್ನ ಪ್ರಕೃತಿ; ಆಗಸದಲ್ಲಿಯ ಸೂಕ್ಷ್ಮವಾದ ರಜೋಮಯ ಜ್ಯೋತಿಸ್ಸುಗಳ ಗುಂಪು ನಿನ್ನ ಉಪಾಧಿ; ಚಂಚಲವಾದ ಮಿಂಚು ನಿನ್ನ ಅವರ್ಣನೀಯ ದೇಹಕಾಂತಿ; ನಿನ್ನ ಸರ್ವವ್ಯಾಪ್ತಿಯು ಅಡೆ-ತಡೆಯಿಲ್ಲದ್ದು; ವಿಶ್ವಕ್ಕಾಗಿ ನೀನು ಕೊಟ್ಟ ಶಕ್ತಿಯು ನಿನ್ನ ಬಲದ ಯತ್ಕಿಂಚಿದಂಶ; ನೀನು ಎಲ್ಲವುಗಳಿಗೂ ಒಡತಿ.

यदन्यत्तज्जन्यं न च किल तदाप्तिः प्रियतमा
न यज्जन्यं शम्भो तदिहनिजरूपं ह्यभिलषे ।
अपाकृत्य त्वं मे सकलमिदमज्ञानजनितं
कदाविर्भूतो भो अमृतवचनैर्बोधयसि माम् ॥६६॥

कदा वाराणस्याममरतटिनी रोधसि वसन्
वसानः कौपीनं शिरसि निदधानोऽञ्जलिपुटम् ।
अये गौरीनाथ त्रिपुरहर शम्भो त्रिनयन
प्रसीदेत्याक्रोशन्निमिषमिव नेप्यामि दिवसान् ॥६७॥

एष ब्रह्मा सरोजे रजनिकरकलाशेखरः शङ्करोऽयं
दोर्भिर्दैत्यान्तकोऽसौ सधनुरसिगदाचक्र चिह्नैश्चतुर्भिः ।
एषोऽप्यैरावतास्थस्त्रिदशपतिरमी देविदेवास्तथान्ये
नृत्यन्त्यो व्योम्नि चैताश्चलचरणरणन्नूपुरा दिव्यनार्यः ॥६८॥

समृद्धं सौभाग्यं सकलवसुधायाः किमपि तन्–
महैश्वर्यं लीलाजनितजगतः खण्डपरशोः ।
श्रुतीनां सर्वस्वं सुकृतमथ मूर्तं सुमनसां
सुधासौन्दर्यं ते सलिलमशिवं नः शमयतु ॥६९॥

पायं पायमपायहारि जननि स्वादुत्वदीयं पयो
नायं नायमनायनीमकृतिनां मूर्तिं दृशोः कैशवीम् ।
स्मारं स्मारमपारपुण्यविभवं कृष्णेति वर्णद्वयं
चारं चारमितस्ततस्तवतटे मुक्तो भवेयं कदा ॥७०॥

अहमेव हि दोषदूषितो
भगवंस्त्वां समुपालभे मुधा।
रमणीविरहज्वरज्वल–
न्नमृतांशुं कुमतिर्विनन्दति ॥७१॥

೬೬. ಎಲೈ ಶಂಭುವೇ, ನಿನಗಿಂತ ಬೇರೆಯಾದುದೆಲ್ಲವೂ ಹುಟ್ಟುಳ್ಳದ್ದು (ನಶ್ವರ): ಅದರ ಪ್ರಾಪ್ತಿಯೆಂದೂ ಪರಮಪ್ರಾಯವೆಂದೆನ್ನಿಸದು. ಹುಟ್ಟಿಲ್ಲದ (ಶಾಶ್ವತ) ನಿನ್ನ ನಿಜರೂಪವನ್ನು (ನೋಡಲು) ಬಯಸುತ್ತೇನೆ. ಅಜ್ಞಾನಜನ್ಯವಾದ ಈ ಎಲ್ಲವನ್ನೂ ದೂರಗೊಳಿಸಿ, ನನಗೆ ನೀನೆಂದು ಪ್ರತ್ಯಕ್ಷನಾಗಿ ಅಮೃತವಾಣಿಯಿಂದ ಬೋಧಿಸುವೆ?

೬೭. ಕಾಶಿಯಲ್ಲಿ ಗಂಗೆಯ ದಡದಮೇಲೆ ವಾಸಿಸುತ್ತ, ಕೌಪೀನಧಾರಿಯಾಗಿ ತಲೆಯ ಮೇಲೆ ಮುಗಿದ ಕೈಗಳನ್ನಿಟ್ಟುಕೊಂಡು, "ಎಲೈ ಗೌರೀನಾಥ, ತ್ರಿಪುರಹರ, ಶಂಭೋ, ತ್ರಿನಯನ, ಪ್ರಸನ್ನನಾಗು" ಎಂದು ಗಟ್ಟಿಯಾಗಿ ಕೂಗುತ್ತ, ಎಂದು ದಿನಗಳನ್ನು ನಿಮಿಷದಂತೆ ಕಳೆದೇನು?

೬೮. ಎಲೈ ಪ್ರಿಯತಮೆ, ಇವನು ತಾವರೆಯ ಮೇಲೆ ಕುಳಿತಿರುವ ಬ್ರಹ್ಮ; ಇವನು ಚಂದ್ರಕಲೆಯನ್ನು ತಲೆಯೊಡವೆಯನ್ನಾಗಿಟ್ಟುಕೊಂಡಿರುವ ಶಂಕರ; ಬಿಲ್ಲು, ಕತ್ತಿ, ಗದೆ, ಚಕ್ರಗಳೆಂಬ ನಾಲ್ಕು ಗುರುತುಗಳಿರುವ ತೋಳುಗಳನ್ನುಳ್ಳ ಈತನು ದೈತ್ಯಾಂತಕ (ವಿಷ್ಣು); ಐರಾವತದ ಮೇಲಿರುವ ಈತನು ದೇವತೆಗಳ ದೊರೆ (ಇಂದ್ರ); ಇವರೂ, ಇತರರೂ ದೇವತೆಗಳು; ಚಲಿಸುವ ಕಾಲುಗಳಲ್ಲಿ ದನಿಗೈವ ಗೆಜ್ಜೆಗಳಿಂದೊಡಗೂಡಿ, ಬಾನಿನಲ್ಲಿ ಕುಣಿಯುತ್ತಿರುವ ಇವರು ದಿವ್ಯನಾರಿಯರು.

೬೯. ಇಡೀ ಜಗತ್ತಿಗೇ ನಿನ್ನ ನೀರೆಂಬುದೊಂದು ಸಮೃದ್ಧ ಸೌಭಾಗ್ಯ; ಲೀಲೆಯಿಂದ ಜಗತ್ತನ್ನು ನಿರ್ಮಿಸಿದ ಶಿವನ ಅದ್ಭುತವಾದ ಒಂದು ದೊಡ್ಡ ಸಂಪತ್ತು; ವೇದಗಳ ಸಾರ, ದೇವತೆಗಳ ಪುಣ್ಯದ ಮೂರ್ತರೂಪ; ಅಮೃತದ ಸೌಂದರ್ಯ; ಅದು ನಮ್ಮ ಅಶುಭವನ್ನು ನಿವಾರಿಸಲಿ.

೭೦. ತಾಯೇ, ಅಪಾಯಪರಿಹಾರಕವಾದ ನಿನ್ನ ಸವಿಯಾದ ನೀರನ್ನು ಕುಡಿದು, ಕುಡಿದು, ದುರ್ಗುಣಿಗಳನ್ನು ಕೈಹಿಡಿದು ಕರೆದೊಯ್ಯುದ ನಿನ್ನ ನಾರಾಯಣಾಂಶದ ಮೂರ್ತಿಯನ್ನು ಕಣ್ಣುಗಳೆಡೆ ಒಯ್ದು, ಒಯ್ದು, ಅಪಾರವಾದ ಪುಣ್ಯ ವೈಭವದಿಂದ ಕೂಡಿದ ''ಕೃಷ್ಣೆ''ಯೆಂಬ ಎರಡಕ್ಷರಗಳನ್ನು ನೆನೆದು, ನೆನೆದು, ನಿನ್ನ ದಡದ ಮೇಲೆ ಅತ್ತಿತ್ತ ತಿರುಗಿ ತಿರುಗಿ, ನಾನೆಂದು ಮುಕ್ತಿಯನ್ನು ಹೊಂದಿಯೇನು?

೭೧. ನಾನೇ ದೋಷಗಳಿಂದ ಕೆಟ್ಟು ಹೋದವನು; ಭಗವಂತನೇ ಬರಿದೆ ನಿನ್ನನ್ನು ಬೈಯುತ್ತಿದ್ದೇನೆ. ಇದು ಸತಿಯ ವಿರಹಜ್ವರದಿಂದ ತಪ್ತನಾದ ದುರ್ಮತಿಯು ಚಂದ್ರನನ್ನು ದೂರಿದಂತಾಯ್ತು.

रमे पद्मे लक्ष्मि प्रणतजनकल्पद्रुमलते
सुधाम्भोधेः पुत्रि त्रिदशनिकरोपास्तचरणे ।
परे नित्यं मातर्गुणमयि परब्रह्ममहिले
जगन्नाथस्याकर्णय मृदुलवर्णावलिमिमाम् ॥७२॥

नानारत्नैरुपचितगुणां नित्यसङ्गीतनादां
भूमेर्द्रक्ष्यस्युचितविभवं भूषणं तत्र काञ्चीम् ।
यस्यां नित्यं निहितनयनो हस्तिशैलाधिवासी
द्वन्द्वातीतस्स खलु पुरुषो दृश्यते सत्यकामः ॥७३॥

सत्वे दिव्ये स्वयमुदयतस्तस्य धाम्नः प्रसङ्गात्
मंजूषायां मरकतमिव भ्राजमानं तदन्तः ।
चेतो धावत्युपहितभुजं शेषभोगे शयानं
दीर्घापाङ्गं जलधितनया जीवितं देवमाद्यम् ॥७४॥

या सृष्टिः स्रष्टुराद्या वहति विधिहुतं या हविर्या च होत्री
ये द्वे कालं विधत्तः श्रुतिविषयगुणा या स्थिता व्याप्य विश्वम् ।

यामाहुः सर्वबीजप्रकृतिरिति यया प्राणिनः प्राणवन्तः
प्रत्यक्षाभिः प्रपन्नस्तनुभिरवतुवस्ताभिरष्टाभिरीशः ॥७५॥

अविग्रहस्याप्यतुलेन हेतुना
समेतभिन्नद्वयमूर्ति तिष्ठतः ।
तवैव नान्यस्य जगत्सु दृश्यते
विरुद्धवेषाभरणस्य कान्तता ॥७६॥

चलचित्राश्रयभूतः पट इव सद्
ब्रह्म जीव जगदीशाः ।
चलानि चित्राणीव ब्रह्म विशुद्धं हि
केवलं सत्यम् ॥७७॥

೭೨. ರಮೆಯೇ, ಪದ್ಮೆಯೇ, ಲಕ್ಷ್ಮಿಯೇ, ನಮಸ್ಕರಿಸಿದವರ ಕಲ್ಪವೃಕ್ಷವೇ, ಕ್ಷೀರಸಾಗರದ ಮಗಳೇ, ದೇವತಾಗಣದಿಂದ ಪೂಜಿತವಾದ ಕಾಲುಗಳುಳ್ಳವಳೇ, ಪರಾಶಕ್ತಿಯೇ, ನಿತ್ಯವೂ ಗುಣವತಿಯಾಗಿರುವ ತಾಯೇ, ಪರಬ್ರಹ್ಮಪತ್ನಿಯೇ, ಜಗನ್ನಾಥನ ಈ ಮೃದು ಅಕ್ಷರಸಮೂಹವನ್ನು ಲಾಲಿಸು.

೭೩. ವಿವಿಧ ರತ್ನಗಳಿಂದ ಕೂಡಿ ಸುಂದರವಾದ, ನಿತ್ಯವೂ ಸಂಗೀತದ ನಾದದಿಂದ ತುಂಬಿರುವ ಮತ್ತು ಭೂಮಿಗೆ ತಕ್ಕ ಐಶ್ವರ್ಯಸಂಪನ್ನವಾದ ಆಭರಣವೆನ್ನಿಸಿರುವ ಕಾಂಚಿಯನ್ನು ನೀನು ನೋಡುವೆ; ಅಲ್ಲಿ ದ್ವಂದ್ವಾತೀತನೂ ಸತ್ಯಕಾಮನೂ ಹಸ್ತಿಶೈಲನಿವಾಸಿಯೂ, ನಿತ್ಯವೂ ಕಣ್ತೆರೆದುಕೊಂಡಿರುವವನೂ ಆದ ಪುರುಷನು (ಪರಮಾತ್ಮನು) ಕಾಣಿಸುತ್ತಾನೆ.

೭೪. ದಿವ್ಯಸತ್ತ್ವದಿಂದ ಕೂಡಿದ ಪ್ರದೇಶದಲ್ಲಿ ತಾನೇ ತಾನಾಗಿ ಆವಿರ್ಭವಿಸಿದ ರಂಗಧಾಮದ ವಿಷಯವೀಗ ಪ್ರಸ್ತುತ. ಅಲ್ಲಿ ಪೆಟ್ಟಿಗೆಯೊಳಗಿಟ್ಟ ಹೊಳೆಯುವ ಹಸಿರು ಮಣಿಯಂತಿರುವ, ತೋಳನ್ನು ತಲೆಗಿಂಬಾಗಿ ಮಾಡಿಕೊಂಡು, ಆದಿಶೇಷನ ಹೆಡೆಯಲ್ಲಿ ಮಲಗಿದ, ನೀಳ್ಗಣ್ಣಿನ, ಲಕ್ಷ್ಮಿಗೆ ಪ್ರಾಣನಾದ ಆದಿದೇವನತ್ತ ಮನಸ್ಸು ಓಡುವುದು.

೭೫. ಬ್ರಹ್ಮನ ಮೊದಲ ಸೃಷ್ಟಿಯೆನ್ನಿಸಿದ ನೀರು, ವಿಧಿವತ್ತಾಗಿ ಹಾಕಿದ ಹವಿಸ್ಸನ್ನು ಒಯ್ಯುವ ಬೆಂಕಿ, ಯಜ್ಞಕ್ಕೆ ದೇವತೆಗಳನ್ನು ಕರೆವ ಹೋತೃ, ಕಾಲವನ್ನು ವಿಧಿಸುವ ಇಬ್ಬರಾದ ಸೂರ್ಯ–ಚಂದ್ರರು, ಕಿವಿ ಗ್ರಹಿಸಿಲು ವಿಷಯವಾಗುವ ಗುಣವುಳ್ಳ ಹಾಗೂ ವಿಶ್ವವನ್ನು ವ್ಯಾಪಿಸಿ ನಿಂತ ಆಕಾಶ, ಎಲ್ಲ ಬೀಜಗಳಿಗೂ ಕ್ಷೇತ್ರವೆನ್ನಿಸಿದ ಭೂಮಿ ಮತ್ತು ಪ್ರಾಣಿಗಳನ್ನು ಪ್ರಾಣಯುಕ್ತವಾಗಿ ಇಡುವ ಗಾಳಿ–ಎಂಬ ಪ್ರತ್ಯಕ್ಷವಾದ ಎಂಟು ದೇಹಗಳಿಂದೊಡಗೂಡಿದ ಈಶ್ವರನು ನಿಮ್ಮನ್ನು ಕಾಯಲಿ.

೭೬. ನಿರಾಕಾರನಾದ ನೀನು, ನಿರುಪಮ ಕಾರಣದಿಂದ, ಸಂಯುಕ್ತ ಮತ್ತು ಭಿನ್ನವಾದ ಆಕಾರಗಳನ್ನು ತಾಳಿ ನಿಂತಿರುವೆ; ಈ ವಿರುದ್ಧ ವೇಷ ಮತ್ತು ವಿರುದ್ಧ ಆಭರಣಗಳ ಧಾರಣವು, ಮೂರು ಲೋಕಗಳಲ್ಲಿ ನಿನಗೆ ಮಾತ್ರ ಮನೋಹರವಾಗಿ ತೋರುತ್ತದೆ!

೭೭. ಸದ್ರೂಪದ ಬ್ರಹ್ಮವು ಚಲಚ್ಚಿತ್ರದ ಹಿನ್ನೆಲೆಯಾದ ಬಟ್ಟೆಯಂತಿದೆ; ಜೀವ, ಜಗತ್ತು, ಈಶ್ವರರು ಅದರ ಮೇಲೆ ಚಲಿಸುವ ಚಿತ್ರಗಳಂತಿದ್ದಾರೆ; ಇವುಗಳಲ್ಲಿ ವಿಶುದ್ಧವಾದ ಬ್ರಹ್ಮವೊಂದೇ ಸತ್ಯವಷ್ಟೇ!

विधिरिति कर्मैवोक्तं पूर्वकृतं यत् स्वयं प्रयत्नेन ।
तस्माद् विधिं प्रमार्ष्टुं मनुजः शक्नोति साधु यत्नेन ॥७८॥

जन्तुषु भगवद्भावं भगवति भूतानि पश्यति क्रमशः ।
एतादृशी दशाचेत् तदैव हरिदासवर्यः स्यात् ॥७९॥

अधिपौरुषमध्यात्ममधिभूताधिदैवतम् ।
अधिलोकाधिविज्ञानमधियज्ञस्त्वमेव हि ॥८०॥

चण्डालं किमयं द्विजातिरथवा शूद्रोऽथ किं तापसः
किं वा तत्वविवेकपेशलमतिर्योगीश्वरः कोऽपि किम् ।
इत्युत्पन्नविकल्पजल्पमुखरैराभाष्यमाणा जनैर्
न क्रुद्धाः पथिनैव तुष्टमनसो यान्ति स्वयं योगिनः ॥८१॥

किं कन्दर्प शरं कदर्थयसि रे कोदण्ड टङ्कारितं
रे रे कोकिल कोमलं कलरवं किंवा वृथा जल्पसि ।
मुग्धे स्निग्धविदग्धचारुमधुरैर्लोलैः कटाक्षैरलं
चेतश्चुम्बितचन्द्रचूडचरणध्यानामृतं वर्तते ॥८२॥

यदासीदज्ञानं स्मरतिमिरसञ्चारजनितं
तदा दृष्टं नारीमयमिदमशेषं जगदिति ।
इदानीमस्माकं पटुतरविवेकाञ्जनजुषां
समीभूतादृष्टिस्त्रिभुवनमपि ब्रह्म मनुते ॥८३॥

त्रयी साङ्ख्यं योगः पशुपतिमतं वैष्णवमिति
प्रभिन्ने प्रस्थाने परमिदमदः पथ्यमिति च ।
रुचीनां वैचित्र्यादृजुकुटिलनानापथजुषां
नृणामेको गम्यस्त्वमसि पयसामर्णव इव ॥८४॥

೭೮. ಸ್ವಪ್ರಯತ್ನದಿಂದ ಹಿಂದೆ ಮಾಡಿದ ಕರ್ಮವನ್ನೇ ಜನರು ವಿಧಿ ಎನ್ನುತ್ತಾರೆ; ಆದುದರಿಂದ ಅದನ್ನು ಒಳ್ಳೆಯ ಯತ್ನದಿಂದ ಮನುಷ್ಯನು ತೊಳೆದೊಗೆಯಬಲ್ಲನು.

೭೯. ಪ್ರಾಣಿಗಳಲ್ಲಿ ಭಗವಂತನ ಭಾವವನ್ನೂ ಭಗವಂತನಲ್ಲಿ ಪ್ರಾಣಿಗಳ (ಭಾವವ)ನ್ನೂ ಕ್ರಮವಾಗಿ ನೋಡುತ್ತಾನೆ: ಈ ದಶೆಯುಂಟಾದರೆ ಆಗಲೇ ಆತನು ಹರಿದಾಸಶ್ರೇಷ್ಠನಾದಾನು!

೮೦. ಪರಮಾತ್ಮ ಜ್ಞಾನ, ಆತ್ಮಜ್ಞಾನ, ಭೌತ ಸಾರ ಜ್ಞಾನ, ಅಧಿದೇವತಾಜ್ಞಾನ, ಲೋಕತತ್ವಜ್ಞಾನ, ಪರಮ ತತ್ವಜ್ಞಾನ, ಯಜ್ಞ ತತ್ವಜ್ಞಾನ, ಈ ಎಲ್ಲವೂ ನೀನೇ ಅಲ್ಲವೇ!

೮೧. "ಇವನು ಹೊಲೆಯನೇ? ದ್ವಿಜನೇ? ಶೂದ್ರನೇ? ತಪಸ್ವಿಯೇ? ಅಥವಾ ತತ್ತ್ವವಿವೇಚನೆಯಿಂದ ರಮ್ಯವಾದ ಬುದ್ಧಿಯನ್ನು ತಳೆದ ಯಾವನಾದರೂ ಒಬ್ಬ ಯೋಗೀಶ್ವರನೇ?" ಎಂದು ಮುಂತಾಗಿ, ವಿವಿಧ ವಿಕಲ್ಪಗಳನ್ನು ಗಳಹುತ್ತ ಮತ್ತು (ಪರಸ್ಪರ) ಹರಟುತ್ತ, ಹಾದಿಯಲ್ಲಿ ಹೋಗುವ ಜನರಿಂದ ಹೇಳಿಸಿಕೊಂಡರೂ ಸಿಟ್ಟನ್ನೂ ಮಾಡದೆ, ಸಂತೃಪ್ತಮನಸ್ಕರೂ ಆಗದೆ, ಯೋಗಿವರ್ಯರು ತಮ್ಮಷ್ಟಕ್ಕೆ ತಾವು ಸಾಗುತ್ತಾರೆ!

೮೨. ಎಲೈ ಮನ್ಮಥನೇ, ಬಿಲ್ಲಿನ ಝೇಂಕಾರದಿಂದ ಹೊರಡುವ ನಿನ್ನ ಅಂಬನ್ನೇಕೆ ವ್ಯರ್ಥಗೊಳಿಸುವೆ? ಎಲೈ ಕೋಗಿಲೆಯೇ, ಕೋಮಲವಾದ ಇನಿದನಿಯಿಂದ ಬರಿದೆ ಏಕೆ ಗಳಹುವೆ? ಚೆಲುವೆಂಯೇ, ಕಳೆದುಂಬಿದ, ಚಮತ್ಕಾರಪೂರ್ಣವಾದ, ಚೆಲುವಾದ, ಇಂಪಾದ ಮತ್ತು ಚಂಚಲವಾದ ನಿನ್ನ ಕಡೆಗಣ್ಣೋಟ ಇನ್ನು ಸಾಕು. ಏಕೆಂದರೆ, ನನ್ನ ಬಗೆಯು ಚಂದ್ರಶೇಖರನ ಚರಣಧ್ಯಾನವೆಂಬ ಅಮೃತವನ್ನು ಕುಡಿಯುತ್ತಲಿದೆ!

೮೩. ನಮಗೆ ಕಾಮವೆಂಬ ಕತ್ತಲಲ್ಲಿ ಅಲೆಯುವುದರಿಂದುಂಟಾದ ಅಜ್ಞಾನವಿದ್ದಾಗ ಈ ಜಗತ್ತಿಡೀ ನಾರೀಮಯವೆಂದು ತೋರಿತು. ಆದರೀಗ, ಸಮರ್ಥತರವಾದ ವಿವೇಕವೆಂಬ ಕಾಡಿಗೆ ಹಚ್ಚಿಕೊಂಡು, ಸಮತೋಲವನ್ನು ಪಡೆದ ನಮ್ಮ ಕಣ್ಣು ಮೂರು ಲೋಕಗಳನ್ನೂ ಬ್ರಹ್ಮವೆಂದು ಅರಿತಿದೆ!

೮೪. ವೇದತ್ರಯ, ಸಾಂಖ್ಯ. ಯೋಗ, ಪಾಶುಪತ, ವೈಷ್ಣವ ಎಂಬ ಭಿನ್ನ-ಭಿನ್ನ ಪ್ರಸ್ಥಾನಗಳಲ್ಲಿ ಇದು ಯೋಗ್ಯ, ಅದು ಯೋಗ್ಯ ಎಂದು ನೇರ ಹಾಗೂ ವಕ್ರಮಾರ್ಗಗಳವರು ಹೇಳುವುದು ಅವರವರ ಅಭಿರುಚಿವೈಚಿತ್ರ್ಯದ ದೆಸೆಯಿಂದ; ಆದರೆ ಎಲ್ಲ ಜಲಪ್ರವಾಹಗಳಿಗೂ ಸಮುದ್ರವನ್ನು ಸೇರುವುದು ಗುರಿಯಾಗಿರುವಂತೆ, ಮನುಷ್ಯರೆಲ್ಲರಿಗೂ ನೀನೊಬ್ಬನೇ ಗಮ್ಯ.

किमीहः किं कायः स खलु किमुपायस्त्रिभुवनं
किमाधारो धाता सृजति किमुपादान इति च ।
अतर्क्यैश्वर्यं त्वय्यनवसरदुःस्थो हतधियः
कुतर्कोऽयं कांश्चिन्मुखरयति मोहाय जगतः ॥८५॥

घृतक्षीरद्राक्षामधुमधुरिमा कैरपि पदैर्
विशिष्यानाख्येयो भवति रसनामात्रविषयः ।
तथा ते सौन्दर्यं परमशिवदृङ्मात्रविषयः
कथंकारं ब्रूमः सकलनिगमागोचरगुणे ॥८३॥

मातर्जाह्नवि शम्भुसङ्गवलिते मौलौ निधायाञ्जलिं
त्वत्तीरे वपुषोऽवसानसमये नारायणाङ्घ्रिद्वयम् ।
सानन्दं स्मरतो भविष्यति मम प्राणप्रयाणोत्सवे
भूयाद्भक्तिरविच्युता हरिहराद्वैतात्मिका शाश्वती ॥८७॥

जाग्रत्स्वप्नसुषुप्तिषु स्फुटतरा या संविदुज्जृम्भते
या ब्रह्मादिपिपीलिकान्ततनुषु प्रोता जगत्साक्षिणी ।
सैवाहं न च दृश्यवस्त्विति दृढप्रज्ञापि यस्यास्ति चेत्
चाण्डालोऽस्तु स तु द्विजोऽस्तु गुरुरित्येषा मनीषा मम ॥८८॥

आस्वाद्य स्वयमेव वच्मि महती मर्मच्छिदो वेदना
मा भूत् कस्यचिदप्ययं परिभवो याच्ञाति संसारिणः ।
पश्य भ्रातरियं हि यौवनजराधिक्कारकेलिस्थली
मानम्लानमषी गुणव्यतिकरप्रागल्भ्यगर्वच्युतिः ॥८९॥

अन्तस्थमात्मानमजं न दृष्ट्वा
भ्रमन्ति मूढा गिरिगह्वरेषु ।
पश्चादुदग्दक्षिणतः पुरस्ताद्
अधःस्विदासीदुपरिस्विदासीत् ॥९०॥

೮೫. ಯಾವ ಬಯಕೆಯಿಂದ, ಯಾವ ಶರೀರದಿಂದ, ಯಾವ ಸಾಧನದಿಂದ ಯಾವುದನ್ನು ಆಧರಿಸಿ, ಯಾವ ವಸ್ತುವಿನಿಂದ ಸೃಷ್ಟಿಕರ್ತನು ಮೂರು ಲೋಕಗಳನ್ನು ಸೃಷ್ಟಿಸುತ್ತಾನೆ? ಎಂದು ಜಗತ್ತನ್ನು ಮರುಳುಗೊಳಿಸಲು, ಮಂದಮತಿಗಳು ಏನೇನನ್ನೋ ಹರಟುವುದು–ಅತರ್ಕ್ಯಪ್ರಭುತ್ವವುಳ್ಳ ನಿನ್ನ ವಿಷಯದಲ್ಲಿ ಅಸಾಂದರ್ಭಿಕವೂ, ಅದೃಢವೂ ಆದ ಕುತರ್ಕವೇ ಸರಿ!

೮೬. ಎಲೈ ಸರ್ವವೇದಗಳಿಗರಿಯದ ಗುಣವುಳ್ಳವಳೇ, ನಾಲಿಗೆಗಷ್ಟೇ ವಿಷಯಗಳಾದ ತುಪ್ಪ, ಹಾಲು, ದ್ರಾಕ್ಷೆ, ಜೇನುಗಳ ಮಾಧುರ್ಯವನ್ನು ಪ್ರತ್ಯೇಕಿಸಿ ಹೇಳಲು ಸಾಧ್ಯವಾಗದಿರುವಾಗ, ಶ್ರೇಷ್ಠವಾದ ಶಿವನ ಕಣ್ಣಿಗಷ್ಟೇ ಕಾಣುವ ನಿನ್ನ ಸೊಬಗನ್ನು ನಾವೆಂತು ಹೇಳಬಲ್ಲೆವು?

೮೭. ಗಂಗಾಮಾತೆಯೇ, ಶಿವನ ಸಂಗದಿಂದ ಚಲಿತಳಾದವಳೇ, ತಲೆಯ ಮೇಲೆ ಮುಗಿದ ಕೈಗಳನ್ನಿಟ್ಟು, ನಿನ್ನ ದಡದಲ್ಲಿ ಶರೀರ ಕೊನೆಗೊಳ್ಳುವ ವೇಳೆಯಲ್ಲಿ, ನಾರಾಯಣನ ಪಾದಗಳನ್ನು ಆನಂದದಿಂದ ನೆನೆಯುವ ನನ್ನ, ಮರಣೋತ್ಸವ ಆಗುವಾಗ ಹರಿಹರರಲ್ಲಿ ಭೇದವನ್ನೆಣಿಸಿದ ಶಾಶ್ವತವೂ, ಭಂಗರಹಿತವೂ, ಆದ ಭಕ್ತಿಯು ಉಂಟಾಗಲಿ!

೮೮. ಎಚ್ಚರ, ಸ್ವಪ್ನ, ನಿದ್ರೆಗಳಲ್ಲಿ ಸ್ಫುಟವಾಗಿ ಒಂದು ಜ್ಞಾನವು ತೆರೆದಿರುತ್ತದೆ; ಅದು ಬ್ರಹ್ಮನಿಂದ ಹಿಡಿದು ಇರುವೆಗಳವರೆಗಿನ ದೇಹಗಳಲ್ಲಿ ಜಗತ್ಸಾಕ್ಷಿಯಾಗಿ ಹೆಣೆದುಕೊಂಡಿರುತ್ತದೆ; "ಅದೇ ನಾನು; ದೃಶ್ಯವಾದ ವಸ್ತುವಲ್ಲ" ಎಂಬ ದೃಢವಾದ ಪ್ರಜ್ಞೆ ಒಬ್ಬನಿಗಿದ್ದರೆ, ಚಾಂಡಾಲನಾಗಿರಲಿ, ಬ್ರಾಹ್ಮಣನಾಗಿರಲಿ– ಅವನು ನನಗೆ ಗುರು ಎಂಬುದೇ ನನ್ನ ವಿಚಾರ!

೮೯. ನಾನು ಸ್ವತಃ ಮರ್ಮಭೇದಕವಾದ ಮಹಾವೇದನೆಗಳನ್ನು ಅನುಭವಿಸಿ ಹೇಳುತ್ತೇನೆ; ಯಾವ ಸಂಸಾರಿಗೂ ಭಿಕ್ಷೆ ಬೇಡುವಂಥ ಅವಮಾನಕರ ಪರಿಸ್ಥಿತಿಯುಂಟಾಗದಿರಲಿ; ನೋಡು ಸೋದರ, ಅದು ಯೌವನ– ಮುಪ್ಪುಗಳನ್ನು ಧಿಕ್ಕರಿಸುವ ಆಟದ ಬಯಲು, ಮರ್ಯಾದೆಯನ್ನು ಮಲಿನಗೊಳಿಸುವ ಮಸಿ, ಸುಗುಣಗಳ ಸಮೂಹದ ಪ್ರೌಢಿಯ ಹೆಮ್ಮೆಗೆ ಚ್ಯುತಿಯನ್ನು ತರುವಂಥದು!

೯೦. ಹುಟ್ಟಿಲ್ಲದ ಒಳಗಿರುವ ಆತ್ಮನನ್ನು ಕಾಣದೆ, ಮೂಢರು ಗಿರಿ–ಗುಹೆಗಳತ್ತ ಹೋಗಿ. ಆತನು ಪಡುವಲಲ್ಲಿರಬಹುದೇ? ತೆಂಕಲಲ್ಲಿರಬಹುದೇ? ತೆಂಕಲಲ್ಲಿರಬಹುದೇ? ಬಡಗಲಲ್ಲಿರಬಹುದೇ? ಮೂಡಲಲ್ಲಿರಬಹುದೇ? ಕೆಳಗಿರಬಹುದೇ, ಮೇಲಿರಬಹುದೇ? ಎಂದು ಅಲೆದಾಡುತ್ತಾರೆ!

सारूप्यं तव पूजने शिव महादेवेति सङ्कीर्तने
सामीप्यं शिवभक्तिधुर्यजनतासाङ्गत्यसम्भाषणे ।
सालोक्यं च चराचरात्मतनुध्याने भवानीपते
सायुज्यं मम सिद्धमत्र भवति स्वामिन् कृतार्थोऽस्म्यहम् ॥९१॥

उदितवति त्वयि विकसति मुकुलीयति
समस्तमस्तमितबिम्बे ।
न ह्यन्यस्मिन् दिनकर सकलं
कमलायते भुवनम् ॥९२॥

गणेशं गाणेशाः शिवमिति च शैवश्च विबुधाः
रविं सौरा विष्णुं प्रथमपुरुषं विष्णुभजकाः ।
वदन्त्येकं शाक्ताजगदुदयमूलां परशिवां
न जाने किं तस्मै नम इति परं ब्रह्म सकलम् ॥९३॥

ज्ञानं न स्यात्क्वचिदपि किल ज्ञेयसम्बन्धशून्यं
ज्ञेयं सत्तामपि न लभते ज्ञानबाह्यं कदाचित् ।
इत्यन्योन्यग्रथितमुभयोर्व्यापकं यत्स्वरूपं
तत्ते प्राहुः प्रकृतिपुरुषस्यार्धनारीश्वरत्वम् ॥९४॥

आत्मा त्वं गिरिजा मतिः परिजनाः प्राणाः शरीरं गृहं
पूजा ते विषयोपभोगरचना निद्रासमाधिस्थितिः ।
सञ्चारः पदयोः प्रदक्षिणविधिः स्तोत्राणि सर्वा गिरो
यद्यत्कर्म करोमि तत्तदखिलं शम्भो तवाराधनम् ॥९५॥

सर्वेषां हृदि विद्यसे शिव ततस्त्वद्ध्यानयोगेन किं
विश्वस्योपरि वर्तसे यदि तदा त्वत्पादमूले नतिः ।
त्रैलोक्यं त्वयि लीयते यदि तदा त्वत्प्राप्त्युपायैरलं
सत्यप्यायतने तनौ किमपरं दैवं न रोचिष्यते ॥९६॥

೯೧. ಎಲೈ ಪಾರ್ವತೀಪತಿಯೇ, ಒಡೆಯನೇ, ನಿನ್ನ ಪೂಜೆಯಲ್ಲಿ ನನಗೆ ನಿನ್ನ ರೂಪವು ಸಿದ್ಧ; "ಶಿವ–ಮಹಾದೇವ" ಎಂಬ ನಿನ್ನ ನಾಮಸಂಕೀರ್ತನೆಯಲ್ಲಿ ನಿನ್ನ ಸಾಮೀಪ್ಯವು ಸಿದ್ಧ; ಶಿವಭಕ್ತಿಪ್ರಧಾನರಾದ ಜನರೊಡನೆ ಇರುವಾಗ ಹಾಗೂ ಮಾತುಕತೆಗಳನ್ನಾಡುವಾಗ, ನನಗೆ ನಿನ್ನ ಸಹಲೋಕವಾಸವು ಸಿದ್ಧ; ನಿನ್ನ ಚರಾಚರ ಸ್ವರೂಪದ ದೇಹವನ್ನು ಧೇನಿಸುವಾಗ, ಇಲ್ಲಿ ನನಗೆ ನಿನ್ನೊಡನೆ ಐಕ್ಯವು ಲಭಿಸುತ್ತದೆ. ಇದರಿಂದ ನಾನು ಕೃತಕೃತ್ಯನಾಗುವೆನು!

೯೨. ರವಿಯೇ, ನೀನು ಉದಯಿಸಿದ ಕೂಡಲೇ ಎಲ್ಲ ತಾವರೆಗಳೂ ಅರಳುತ್ತವೆ, ನಿನ್ನ ಬಿಂಬವು ಅಸ್ತವಾದ ಕೂಡಲೇ ಎಲ್ಲವೂ ಮೊಗ್ಗಿನಂತೆ ಮುದುರಿಕೊಳ್ಳುತ್ತವೆ; ಇತರ ಯಾವನ ಉದಯಾಸ್ತಗಳಿಂದಲೂ ಸಮಸ್ತ ಜಗತ್ತು ತಾವರೆಯ ಹಾಗೆ ನಡೆದುಕೊಳ್ಳುವುದಿಲ್ಲ;

೯೩. ಗಾಣಪತ್ಯ ಮತದವರು ಗಣೇಶನೆಂದೂ, ಶೈವರು ಶಿವನೆಂದೂ ವಿದ್ವಾಂಸರಾದ ಸೂರ್ಯಾರಾಧಕರು ಸೂರ್ಯನೆಂದೂ, ವೈಷ್ಣವರು ವಿರೂಢರೂಪನಾದ ವಿಷ್ಣುವೆಂದೂ, ಶಾಕ್ತರು ಜತ್ತಿನ ಉತ್ಪತ್ತಿಗೆ ಮೂಲಕಾರಣಳಾದ ಪರಶಿವೆಯೆಂದೂ, ಒಬ್ಬನೇ ಒಬ್ಬನೂ ಸರ್ವಸ್ವರೂಪನೂ ಆದ ಪರಬ್ರಹ್ಮನನ್ನು ಕರೆಯುತ್ತಾರೆ; ಆದರೆ ನನಗೇನೂ ಅರಿಯದು; ನಾನಾತನಿಗೆ ನಮಸ್ಕಾರ ಎಂದಷ್ಟೇ ಹೇಳಬಲ್ಲೆ!

೯೪. ತಿಳಿಯಲ್ಪಡಬೇಕಾದುದರ ಸಂಬಂಧವಿಲ್ಲದಿರುವ ತಿಳಿವಳಿಕೆಯೆಂಬುದು ಎಲ್ಲಿಯೂ ಇಲ್ಲ; ತಿಳುವಳಿಕೆಗೆ ಹೊರತಾದ ತಿಳಿಯಲ್ಪಡುವ ವಸ್ತುವಿಗೆ ಅಸ್ತಿತ್ವ ಎಂದೂ ಇಲ್ಲ; ಈ ಪ್ರಕಾರ ಪರಸ್ಪರ ತಳಿಕೆ ಹಾಕಿಕೊಂಡ ನಿನ್ನ ಪ್ರಕೃತಿ–ಪುರುಷ–ಸ್ವರೂಪವನ್ನು ಜನರು ಅರ್ಧನಾರೀಶ್ವರ ಎನ್ನುತ್ತಾರೆ!

೯೫. ನನ್ನ ಆತ್ಮ ನೀನು, ನನ್ನ ಬುದ್ಧಿ ಗಿರಿಜೆ; ನನ್ನ ಪ್ರಾಣಗಳು ಪರಿವಾರದವರು, ನನ್ನ ಶರೀರವು ನಿನ್ನ ಗೃಹ; ನಾನು ಮಾಡುವ ವಿಷಯಭೋಗವು ನಿನ್ನ ಪೂಜೆ, ನನ್ನ ನಿದ್ರೆ ಸಮಾಧಿ; ನಾನು ಪಾದಗಳಿಂದ ತಿರುಗಾಡುವುದು ನಿನಗೆ ಹಾಕುವ ಪ್ರದಕ್ಷಿಣೆ, ನನ್ನ ಮಾತುಗಳೆಲ್ಲವೂ ನಿನ್ನ ಹೊಗಳಿಕೆ; ಹೀಗೆ, ಎಲೈ ಶಿವನೇ, ನಾನು ಮಾಡುವ ಕೆಲಸವೆಲ್ಲವೂ ನಿನ್ನ ಆರಾಧನೆ!

೯೬. ಎಲೈ ಶಿವನೇ, ನೀನು ಎಲ್ಲರ ಹೃದಯದಲ್ಲೂ ಇದ್ದೀಯೆ; ಆದುದರಿಂದ ನಿನ್ನನ್ನು ನೆನೆಯುವ ಯೋಗದಿಂದ ಏನು ಪ್ರಯೋಜನ? ನೀನು ವಿಶ್ವದ ಆಚೆಗೆ ಇರುವುದಾದರೆ, ನಿನ್ನ ಪಾದಕ್ಕೆ ಎರಗುವುದರಿಂದೇನು ಪ್ರಯೋಜನ? ಮೂರು ಲೋಕಗಳೂ (ಕೊನೆಯಲ್ಲಿ) ನಿನ್ನಲ್ಲಿ ಲೀನವಾಗುವವಾದರೆ, ನಿನ್ನನ್ನು ಪಡೆಯುವ ಉಪಾಯಗಳಿನ್ನು ಸಾಕು; ನೀನು ನಿನ್ನ ಮನೆಯಾದ ನನ್ನ ದೇಹದಲ್ಲಿರುವುದರಿಂದ ಇತರ ಯಾವ ದೇವನಾದರೂ ನನಗೆ ಪ್ರಿಯನಾದಾನೇನು?

निराकारं निराधारं निर्विकारं निरामयम्
निर्द्वन्द्वञ्च निरालम्बं वन्दे गुहमुमासुतम् ॥९७॥

विचारिते महिमनि त्वदीये नित्यनिर्मले ।
परमात्मन् गमनमप्याधत्ते परमाणुताम् ॥९८॥

किरीटे निशेशो ललाटे हुताशो
भुजे भोगिराजो गले कालिमा च ।
तनौ कामिनी यस्य तत्तुल्यदेवं
न जाने न जाने न जाने न जाने ॥९९॥

मातर्मेदिनि तात मारुत सखे तेजः सुबन्धो जल
भ्रातर्व्योम निबद्ध एव भवतामन्त्यः प्रणामाञ्जलिः ।
युष्मत्सङ्गवशोपजात सुकृतस्फारस्फुरन्निर्मल–
ज्ञानापास्तसमस्तमोहमहिमा लीये परब्रह्मणि ॥१००॥

೯೭. ಆಕಾರ, ಆಧಾರ, ವಿಕಾರ, ರೋಗ, ದ್ವಂದ್ವ, ಅವಲಂಬನಗಳಿಲ್ಲದ ಪಾರ್ವತೀಸುತನಾದ ಸುಬ್ರಹ್ಮಣ್ಯನನ್ನು ವಂದಿಸುತ್ತೇನೆ.

೯೮. ಎಲೈ ಪರಮಾತ್ಮನೇ, ನಿತ್ಯವೂ ನಿರ್ಮಲವಾದ ನಿನ್ನ ಮಹಿಮೆಯನ್ನು ವಿವೇಚಿಸಿ ನೋಡಿದರೆ, ಆಕಾಶವನ್ನು ಕೂಡ ಅದು ಪರಮಾಣುತ್ವಕ್ಕೆ ಇಳಿಸೀತು (ಎಂದು ತೋರುತ್ತದೆ).

೯೯. ಕಿರೀಟದಲ್ಲಿ ಚಂದ್ರ, ಹಣೆಯಲ್ಲಿ ಬೆಂಕಿ, ತೋಳಿನಲ್ಲಿ ಸರ್ಪರಾಜ, ಕೊರಳಲ್ಲಿ ಕಪ್ಪು, ಮೈಯಲ್ಲಿ ಹೆಂಗಸು ಇರುವ ದೇವನಿಗೆ ಸರಿಸಮಾನನಾದ ಇನ್ನೊಬ್ಬ ದೇವನನ್ನು ನಾ ಕಾಣೆ, ನಾ ಕಾಣೆ, ನಾ ಕಾಣೆ, ನಾ ಕಾಣೆ!

೧೦೦. ಭೂಮಿತಾಯಿಯೇ, ಗಾಳಿ ತಂದೆಯೇ, ಬೆಳಕು ಗೆಳೆಯನೇ, ನೀರನೆಂಟನೇ, ಬಾನಣ್ಣನೇ, ನಿಮಗಿದೋ ಕೊನೆಯ ನಮಸ್ಕಾರ; ನಿಮ್ಮ ಸಹವಾಸದಿಂದೆ ದೊರಕಿದ ಪುಣ್ಯದಿಂದ ಹೆಬ್ಬೊಳಪಿನದೆನ್ನಿಸಿದ ಶುದ್ಧಜ್ಞಾನದಿಂದ ಅಜ್ಞಾನದ ಎಲ್ಲ ದೊಡ್ಡಸ್ತಿಕೆಯನ್ನು ಕಳೆದೊಗೆದ ನಾನು ಪರಬ್ರಹ್ಮದಲ್ಲಿ ಲೀನನಾಗುತ್ತೇನೆ!

## ಅಧ್ಯಾಯ ೩
# ಜೀವನ ಮತ್ತು ಲೋಕಾನುಭವ

### ೧. ರಾಜಕೀಯ ಅನುಭವ

प्रजा यस्य विवर्धन्ते सरसीव महोत्पलम् ।
स राजा सर्वसुखदः स्वर्गलोके महीयते ॥१॥

राजा प्रजानां प्रथमं शरीरं
प्रजाश्च राज्ञोऽप्रतिमं शरीरम् ।
राज्ञा विहीना न भवन्ति देशा
देशैर्विहीना न नृपा भवन्ति ॥२॥

राजैव कर्ता भूतानां राजैव च विनाशकः
धर्मात्मा यः स कर्ता स्यादधर्मात्मा विनाशकः ॥३॥

राज्ञः प्रमाददोषेण दस्युभिः परिमुष्यताम् ।
अशरण्यः प्रजानां यः स राजा कलिरुच्यते ॥४॥

दण्डः संरक्षते धर्मं तथैवार्थं जनाधिप :
कामं संरक्षते दण्डस्त्रिवर्गो दण्ड उच्यते ॥५॥

अलब्धमीहेद् धर्मेण लब्धं यत्नेन पालयेत्
पालितं वर्धयेन्नीत्या वृद्धं पात्रेषु निक्षिपेत् । ॥६॥

स्मृत्योर्विरोधे न्यायस्तु बलवान् व्यवहारतः ।
अर्थशास्त्रात्तु बलवद्धर्मशास्त्रमिति स्थितिः ॥७॥

# ಅಧ್ಯಾಯ ೩
# ಜೀವನ ಮತ್ತು ಲೋಕಾನುಭವ

## ೧. ರಾಜಕೀಯ ಅನುಭವ

೧. ಕೆರೆಯಲ್ಲಿಯ ಹೆದ್ದಾವರೆಯಂತೆ ಅಭಿವೃದ್ಧಿ ಹೊಂದುತ್ತಿರುವ ಪ್ರಜೆಗಳನ್ನುಳ್ಳ ರಾಜನು ಎಲ್ಲರಿಗೂ ಸುಖ ಕೊಡುವವನು; ಅವನು ಸ್ವರ್ಗದಲ್ಲಿ ಸುಖಪಡುತ್ತಾನೆ.

೨. ದೊರೆಯು ಪ್ರಜೆಗಳ ಮೊದಲ ಮೈ; ಪ್ರಜೆಗಳು ದೊರೆಯ ಎಣೆಯಿಲ್ಲದ ಮೈ; ರಾಜನಿಲ್ಲದ ದೇಶ ದೇಶವಲ್ಲ; ದೇಶವಿಲ್ಲದ ರಾಜ ರಾಜನಲ್ಲ.

೩. ಪ್ರಾಣಿಗಳಿಗೆ (ಜೀವನಾನುಕೂಲ ಕಲ್ಪಿಸಿಕೊಡುವ) ಕರ್ತನು ರಾಜನು; (ಅದನ್ನು) ನಾಶ ಮಾಡುವವನು ರಾಜನು; ಧರ್ಮಾತ್ಮನಾದ ದೊರೆ ಕರ್ತನಾಗುತ್ತಾನೆ; ಅಧರ್ಮಾತ್ಮನು ವಿನಾಶಕನಾಗುತ್ತಾನೆ.

೪. ತನ್ನ ತಪ್ಪು ನಡತೆಯ ಫಲವಾಗಿ ತನ್ನ ಪ್ರಜೆಗಳು ದುಷ್ಟರಿಂದ ವಂಚಿತರಾದಾಗ ಅವರನ್ನು ರಕ್ಷಿಸಲಾರದಾದ ಅರಸು ಶುದ್ಧ ಕಲಿಸ್ವರೂಪನೇ ಸರಿ.

೫. ಎಲೈ ಅರಸನೇ, ಧರ್ಮ, ಅರ್ಥ, ಕಾಮಗಳನ್ನು ರಾಜಪ್ರಶಾಸನವು ಕಾಯುವುದರಿಂದ ಅದನ್ನು ತ್ರಿವರ್ಗಯುಕ್ತವೆಂದು ಹೇಳಲಾಗಿದೆ.

೬. ಧರ್ಮಮಾರ್ಗದಿಂದ ಇಲ್ಲದ್ದನ್ನು ಬಯಸಬೇಕು; ಸಿಕ್ಕಿದ್ದನ್ನು ಪ್ರಯತ್ನದಿಂದ ಕಾಪಾಡಿಕೊಳ್ಳಬೇಕು; ಕಾಪಾಡಿಕೊಂಡದ್ದನ್ನು ನೀತಿಯಂತೆ ವೃದ್ಧಿ ಮಾಡಿಕೊಳ್ಳಬೇಕು; ಹಾಗೆ ಸಮೃದ್ಧವಾದ ಅರ್ಥವನ್ನು ಸತ್‌ಪಾತ್ರರಿಗೆ ಕೊಡಬೇಕು.

೭. (ರಾಜಧರ್ಮವನ್ನು ಹೇಳುವ) ಸ್ಮೃತಿಗ್ರಂಥಗಳಲ್ಲಿ (ಯಾವುದಾದರೊಂದು ಪ್ರಕರಣದಲ್ಲಿ) ವಿರೋಧ ಉಂಟಾದರೆ, ಪರಂಪರಾನುಗುಣವಾಗಿ ಮಾಡುವ ತರ್ಕವೇ ಬಲವತ್ತರವಾದುದು; ಅರ್ಥಶಾಸ್ತ್ರ (ರಾಜನ ಲಾಭಗಳನ್ನು ಹೇಳುವ ಶಾಸ್ತ್ರ) ಕ್ಕಿಂತ ಧರ್ಮಶಾಸ್ತ್ರ, (ಸರ್ವರ ಶ್ರೇಯಃ ಪ್ರೇಯಗಳನ್ನು ಪಡೆಯಲು ತಕ್ಕ ಮಾರ್ಗಗಳನ್ನು ಹೇಳುವ ಶಾಸ್ತ್ರ, ಸ್ಮೃತಿ) ಹೆಚ್ಚು ವಿಧಾಯಕವಾದುದು. (ಎಂದು ರಾಜ ತಿಳಿದು ನಡೆದುಕೊಳ್ಳಬೇಕು.)

राज्ञः स्वधर्मः स्वर्गीयः प्रजा धर्मेण रक्षितुः ।
अरक्षितुर्वाक्षेप्तुर्वा मिथ्यादण्डमतोऽन्यथा ॥८॥

न हि स्वसुखमन्विच्छन् पीडयेत् कृपणं नृपः ।
कृपणः पीड्यचमानो हि मन्युना हन्ति पार्थिवम् ॥९॥

स्वाधीनवृत्तेः साफल्यं न पराधीनवर्तिता ।
ये पराधीनकर्माणो जीवन्तोऽपि च ते मृताः ॥१०॥

सर्वं परवशं दुःखं सर्वमात्मवशं सुखम् ।
एतद्विद्यात् समासेन लक्षणं सुखदुःखयोः ॥११॥

अदण्ड्यान् दण्डयन् राजा दण्डड्याश्चैवाप्यदण्डयन् ।
अयशो महदाप्नोति नरकं चैव गच्छति ॥१२॥

दण्डः शास्ति प्रजाः सर्वा दण्ड एवाभिरक्षति ।
दण्डः सुप्तेषु जागर्ति दण्डं धर्मं विदुर्बुधाः ॥१३॥

धर्म एव हतो हन्ति धर्मो रक्षति रक्षितः ।
तस्माद्धर्मो न हन्तव्यो मा नो धर्मो हतो वधीत् ॥१४॥

वृथा वृष्टिः समुद्रस्य वृथा तृप्तस्य भोजनम् ।
वृथा दानं समृद्धस्य नीचस्य सुकृतं यथा ॥१५॥

೮. ಪ್ರಜೆಗಳನ್ನು ಧರ್ಮದಿಂದ ರಕ್ಷಿಸುವ ರಾಜನ ಸ್ವಧರ್ಮವು ಅವನಿಗೆ ಸ್ವರ್ಗಪ್ರಾಪ್ತಿಕರವಾಗುವುದು; ಹಾಗೆ ರಕ್ಷಿಸದ ಅಥವಾ ಅವರನ್ನು ಅವ್ಯವಸ್ಥೆಗೀಡು ಮಾಡಿದ ಇಲ್ಲವೆ ಸುಳ್ಳು-ಸುಳ್ಳೇ (ನಿಷ್ಕಾರಣ-ದುಷ್ಕಾರಣಗಳಿಗಾಗಿ) ಶಿಕ್ಷಿಸಿದ ರಾಜನು ನರಕಕ್ಕೆ ಹೋಗುವನು.

೯. ತನ್ನ ಸುಖಕ್ಕಾಗಿ ಅರಸು ಬಡವನನ್ನು ಪೀಡಿಸಬಾರದು. ಏಕೆಂದರೆ ಪೀಡಿತನಾದ ಬಡವನು ತನ್ನ ಸಿಟ್ಟಿನಿಂದ ಅರಸನನ್ನು ಕೊಲ್ಲುತ್ತಾನೆ.

೧೦. ತನ್ನ ವೃತ್ತಿಯು ತನ್ನ ವಶದಲ್ಲಿರುವವನ ಬಾಳು ಸಫಲ; ಪರಾಧೀನ ವೃತ್ತಿಯವರ ಬಾಳು ವಿಫಲ; ಅವರು ಬದುಕಿದ್ದರೂ ಸತ್ತ ಹಾಗೆಯೇ ಸರಿ.

೧೧. ಪರವಶವಾಗಿರುವ ಎಲ್ಲವೂ ದುಃಖ; ಸ್ವವಶವಾಗಿರುವ ಎಲ್ಲವೂ ಸುಖ. ಇದು ಸುಖ-ದುಃಖಗಳ ಸಂಕ್ಷಿಪ್ತವಾದ ಲಕ್ಷಣ.

೧೨. ನಿರಪರಾಧಿಗಳನ್ನು ಶಿಕ್ಷಿಸುವುದರಿಂದಲೂ, ಅಪರಾಧಿಗಳನ್ನು ಶಿಕ್ಷಿಸದೇ ಬಿಡುವುದರಿಂದಲೂ, ರಾಜನಿಗೆ ಬಹಳ ಅಪಕೀರ್ತಿ ಬರುತ್ತದೆ; ಮತ್ತು ಅವನು ನರಕಕ್ಕೂ ಹೋಗುವನು.

೧೩. ಎಲ್ಲ ಪ್ರಜೆಗಳನ್ನು (ರಾಜನ ಅಥವಾ ಸರಕಾರದ) ಆಡಳಿತವು ಕಾಯದೆಗೊಳಪಡಿಸುತ್ತದೆ; ಅದೇ ಅವರನ್ನು ಕಾಯುತ್ತದೆ; ಪ್ರಶಾಸನ ಶಕ್ತಿಯು (ಜನರು) ಮಲಗಿದ್ದಾಗ (ತಾನು) ಜಾಗೃತವಾಗಿರುತ್ತದೆ; ವಿದ್ವಾಂಸರು (ಅದರಿಂದಲೇ) ಆ ದಂಡಶಕ್ತಿಯನ್ನು ಧರ್ಮವೆಂದು ತಿಳಿಯುತ್ತಾರೆ.

೧೪. ಮುರಿದ ಕಾಯದೆಯು (ರಾಜ, ಪ್ರಜೆ ಎಲ್ಲರನ್ನೂ) ಮುರಿಯುತ್ತದೆ: ಪಾಲಿತವಾದರದು (ಎಲ್ಲರನ್ನೂ) ಪಾಲಿಸುತ್ತದೆ; ಆದುದರಿಂದ ಕಾಯದೆಯನ್ನು ಮುರಿಯಬಾರದು; ಮುರಿದ ಕಾಯದೆಯು ನಮ್ಮನ್ನು ಮುರಿಯುವ ಸಂದರ್ಭ ಉಂಟಾಗದಿರಲಿ.

೧೫. ಕಡಲಲ್ಲಿ ಮಳೆಗರೆದರೆ ಅದು ವ್ಯರ್ಥ; ತೃಪ್ತನಿಗೆ ಉಣಬಡಿಸಿದರೆ ಅದು ವ್ಯರ್ಥ; ಸಮೃದ್ಧನಿಗೆ ದಾನ ಮಾಡಿದರೆ ಅದು ವ್ಯರ್ಥ: ಇವು ನೀಚನಿಗೆ ಒಳಿತನ್ನು ಮಾಡಿದಷ್ಟೇ ಫಲ ಕೊಡುತ್ತವೆ.

त्यजेदेकं कुलस्यार्थे ग्रामस्यार्थे कुलं त्यजेत् ।
ग्रामं जनपदस्यार्थे आत्मार्थे पुथिवीं त्यजेत् ॥१६॥

सद्भावेन हि तुष्यन्ति देवाः सत्पुरुषा द्विजाः ।
इतरे खाद्यपानेन मानदानेन पण्डिताः ॥१७॥

कनकभूषणसङ्ग्रहणोचितो
यदिमणिस्त्रपुणि प्रतिबध्यते ।
न च विरौति न चापि स शोभते
भवति योजयितुर्वचनीयता ॥१८॥

मनः प्रह्लादयन्तीभिर्मन्दं यान्तीभिरप्यलम् ।
महान्तोऽपि हि भिद्यन्ते स्त्रीभिरद्भिरिवाचलाः ॥१९॥

मृगयाक्षस्तथापानं गार्हितानि महीभुजाम् ।
दृष्टास्तेभ्योऽपि विपदः पाण्डुनैषधवृष्णिषु ॥२०॥

जानन्ति तन्त्रयुक्तिं यथास्थितं मण्डलमभिलिखन्ति ।
ये मन्त्ररक्षणपरास्ते सर्पनराधिपावुपचरन्ति ॥२१॥

कुलीनान् नावमन्येत सम्यग्वृत्तान् मनस्विनः ।
त्यजन्त्येतेऽवमन्तारं घ्नन्ति वा मानहेतवः ॥२२॥

೧೬. (ಆಪತ್ಕಾಲದಲ್ಲಿ) ಕುಟುಂಬವೊಂದರ ಹಿತಕ್ಕಾಗಿ ಒಬ್ಬನ ಹಿತವನ್ನು (ಅದರ ಒಬ್ಬ ಸದಸ್ಯನ ಹಿತವನ್ನು) ಬಿಡಬಹುದು; ಗ್ರಾಮವೊಂದರ ಹಿತವನ್ನು ಉಳಿಸಿಕೊಳ್ಳಲು, ಒಂದು ಕುಟುಂಬದ ಹಿತವನ್ನು ಕಡೆಗಣಿಸಬಹುದು; ಒಂದು ರಾಜ್ಯದ (ಅಥವಾ ಒಂದು ರಾಷ್ಟ್ರದ) ಹಿತವನ್ನು ಕಾಯಲು ಗ್ರಾಮವೊಂದರ ಹಿತವನ್ನು ತ್ಯಜಿಸಬಹುದು; ಹಾಗೆಯೇ ರಾಜನು (ಅತ್ಯಯ ಪ್ರಸಂಗದಲ್ಲಿ) ತನ್ನ ಇಡೀ ರಾಜ್ಯವನ್ನೇ (ಮುಂದೆ ಶಕ್ತಿ ಸಂಗ್ರಹ ಮಾಡಿಕೊಂಡು ಬಂದು ಹಗೆಯನ್ನು ಓಡಿಸುವುದಕ್ಕಾಗಿ) ಕೈ ಬಿಡಬಹುದು.

೧೭. (ರಾಜಾಸ್ಥಾನದಲ್ಲಿ) ದೇವತೆಗಳೂ, ಸತ್‌ಪುರುಷರೂ, ದ್ವಿಜರೂ ಸದ್ಭಾವ ತೋರುವುದರಿಂದಲೂ ಮಾನ–ದಾನಗಳಿಂದ ವಿದ್ವಾಂಸರೂ ಇತರರು ತಿಂಡಿ–ತೀರ್ಥಗಳಿಂದಲೂ ಸಂತುಷ್ಟರಾಗುತ್ತಾರೆ.

೧೮. ಚಿನ್ನದ ಒಡವೆಗೆ ತಕ್ಕದ್ದಾದ ರತ್ನವನ್ನು ಸೀಸದ ಕಟ್ಟಿನಲ್ಲಿಟ್ಟರೆ, ಅದು (ಇಂಪಾದ) ಸದ್ದನ್ನು ಉಂಟು ಮಾಡುವುದೂ ಇಲ್ಲ, ಶೋಭಿಸುವುದೂ ಇಲ್ಲ; ಯೋಜಕನನ್ನು ಮಾತ್ರ ಅದು ದೂಷಣೆಗೆ ಗುರಿಮಾಡುತ್ತದೆ.

೧೯. ಬೆಟ್ಟವು ನೀರಿನಿಂದ ಹೇಗೋ ಹಾಗೇ ದೊಡ್ಡವರು (ರಾಜಾದಿಗಳು) ಕೂಡ, ಮನಸ್ಸನ್ನು ಸಂತಸಗೊಳಿಸುವ ಮೆಲುನಡಿಗೆಯ ಹೆಂಗಸರಿಂದ ಭೇದಿಸಲ್ಪಡುತ್ತಾರೆ; ಅವರಿಗೆ ಇಂಥ ಹೆಂಗಸರು ಕೂಡ ಸಾಕು.

೨೦. ಬೇಟೆ, ಜೂಜು, ಮದ್ಯಪಾನಗಳು ರಾಜರಿಗೆ ಹೇಳಿಸಿದಂಥವುಗಳಲ್ಲ; ಅವುಗಳಿಂದ ಕೂಡ ಪಾಂಡು, ನಳ, ಯಾದವರು ವಿಪತ್ತಿಗೀಡಾದದ್ದು ಅನುಭವಸಿದ್ಧವಾಗಿದೆ.

೨೧. ಪ್ರತ್ಯೌಷಧವನ್ನು ತಿಳಿದ, ಇಂದ್ರಜಾಲವೃತ್ತವನ್ನು ಚೆನ್ನಾಗಿ ಬರೆಯಲು ಗೊತ್ತಿರುವ ಮತ್ತು ಮಂತ್ರ ಮಾಡಬಲ್ಲ ಜನರು ಸರ್ಪದೊಡನೆ ವ್ಯವಹರಿಸಬಲ್ಲರು: ಹಾಗೆಯೇ, ರಾಜ್ಯದ ಆಡಳಿತದ ಧೋರಣೆ–ಯೋಜನೆಗಳನ್ನು ಅರಿತ ಮತ್ತು ರಾಜನ ಪರಿವಾರದವರ ಅಧಿಕಾರವನ್ನು ಹಿಡಿತದಲ್ಲಿಟ್ಟುಕೊಳ್ಳಬಲ್ಲ ಜನರು ಮಾತ್ರ ರಾಜಸೇವೆ ಮಾಡಬಲ್ಲರು.

೨೨. (ಅರಸನು) ಒಳ್ಳೆಯ ನಡತೆಯ ಹಾಗೂ ದೊಡ್ಡ ಮನಸ್ಸಿನ ಕುಲೀನರನ್ನು ಅವಮಾನಿಸಕೂಡದು; ಅವರು ಅವಮಾನಿಸಿದವರನ್ನು ಬಿಟ್ಟು ಹೋಗುವರು ಅಥವಾ ಸ್ವಾಭಿಮಾನರಕ್ಷಣೆಗಾಗಿ (ಅರಸನನ್ನು) ನಾಶಮಾಡುವರು.

अभ्यस्तकर्मणस्तज्ज्ञान् शुचीन् शुद्धार्थसङ्गतान् ।
कुर्यादुद्योगसम्पन्नान् अध्यक्षान् सर्वकर्मसु ॥२३॥

कुलं विद्यां श्रुतं शौर्यं सौशील्यं भूतपूर्वताम् ।
वयोऽवस्थां च संवीक्ष्य स्वाद्रियेत महामनाः ॥२४॥

यो यद्वस्तु विजानाति तं तत्र विनियोजयेत् ।
अशेषविषयप्राप्ता विन्द्रियार्थेष्विवेन्द्रियाः ॥२५॥

अपि भ्राता सुतोऽर्घो वा श्वशुरो मातुलोऽपि वा
नादण्ड्यो नाम राज्ञोऽस्ति धर्माद्विचलितः स्वकात् ॥२६॥

ज्ञात्वापराधं देशं च कालं बलमथापि वा
वयं कर्म च वित्तं च दण्डं दण्ड्येषु पातयेत् ॥२७॥

यथाचतुर्भिः कनकं परीक्ष्यते
निघर्षणच्छेदनतापताडनैः ।
तथा चतुर्भिर्भृतकं परीक्षयेद्
व्रतेन शीलेन कुलेन कर्मणा ॥२८॥

क्षणशयितविबुद्धाः कल्पयन्तः प्रयोगान्
उदधिमहति राज्ये काव्यवद्दुर्विगाह्ये ।
गहनमपररात्रप्राप्तबुद्धिप्रसादाः
कवय इव महीपाश्चिन्तयन्त्यर्थजातम् ॥२९॥

विषादप्यमृतं ग्राह्यं बालादपि सुभाषितम् ।
अमित्रादपि सद्वृत्तं अमेध्यादपि काञ्चनम् ॥३०॥

೨೩. ವಿವಿಧ ಕಾರ್ಯಶಾಖೆಗಳಲ್ಲಿ ದೊರೆಯು (ಸರಕಾರವು) ಆಯಾ ಕಾರ್ಯಗಳಲ್ಲಿ ನುರಿತ, ತಜ್ಞರಾದ, ಲಂಚ ತೆಗೆದುಕೊಳ್ಳದ, ನ್ಯಾಯವಾದ ಸಂಪಾದನೆಯಿಂದ ಬದುಕುವ ಮತ್ತು ತಮ್ಮ ತಮ್ಮ ಪ್ರತ್ಯೇಕ ಉದ್ಯೋಗಗಳಿರುವ ಜನರನ್ನು ಶಾಖಾಧ್ಯಕ್ಷ (ಸಚಿವ)ರನ್ನಾಗಿ ನಿಯಮಿಸಿಕೊಳ್ಳಬೇಕು.

೨೪. ಕುಲ, ವಿದ್ಯೆ, ಜ್ಞಾನ, ಪರಾಕ್ರಮ, ಸುಶೀಲ, ಹಿನ್ನೆಲೆ, ವಯಸ್ಸುಗಳನ್ನು ಚೆನ್ನಾಗಿ ಪರಿಶೀಲಿಸಿ, ಮಹಾಶಯದ ದೊರೆಯು (ತಾರತಮ್ಯಾನುಸಾರವಾಗಿ) (ಅಧಿಕಾರಿಗಳನ್ನು ಹಾಗೂ ಜನರನ್ನು) ಆದರಿಸಬೇಕು.

೨೫. ಆಯಾ ಕಾರ್ಯವನ್ನು ಬಲ್ಲವರನ್ನೇ ಆಯಾ ಕಾರ್ಯಶಾಖೆಗಳಲ್ಲಿ ನಿಯಮಿಸಬೇಕು; ಅದಕ್ಕೆ ಎಲ್ಲ ವಿಷಯಗಳನ್ನು ಗ್ರಹಿಸಲು ಆಯಾ ವಿಷಯಗಳಲ್ಲಿ ಆಯಾ ಇಂದ್ರಿಯಗಳನ್ನು ಬಳಸುವ ಅನುಭವವು ದೃಷ್ಟಾಂತ.

೨೬. ತನ್ನ ಕರ್ತವ್ಯದಿಂದ ಚ್ಯುತನಾದವನು ಸೋದರನಿರಲಿ, ಮಗನಿರಲಿ, ಗುರುವಿರಲಿ, ಮಾವನಿರಲಿ, ಸೋದರಮಾವನಿರಲಿ–ಯಾರಾಗಿದ್ದರೂ ಸರಿಯೆ–ರಾಜನಿಗೆ ದಂಡನೆಗೆ ಅನರ್ಹನೆಂಬಾತನಿಲ್ಲ.

೨೭. ಅಪರಾಧವೆಸಗಿದ ಸ್ಥಳ, ಕಾಲಗಳನ್ನು, ಅಪರಾಧಿಗಳ ಬಲ, ವಯಸ್ಸು, ಉದ್ಯೋಗ, ಧನಸಂಪತ್ತುಗಳನ್ನು ಗಮನಿಸಿ, ಅರಸು (ಸಪರಿಮಾಣ) ಶಿಕ್ಷೆಯನ್ನು ವಿಧಿಸಬೇಕು.

೨೮. ಒರೆಗಲ್ಲಿಗೆ ಉಜ್ಜುವುದು, ತುಂಡು ಮಾಡುವುದು, ಕಾಯಿಸುವುದು ಮತ್ತು ಬಡಿಯುವುದು ಎಂಬ ನಾಲ್ಕು ಬಗೆಗಳಿಂದ ಬಂಗಾರವನ್ನು ಪರೀಕ್ಷಿಸುವಂತೆ, (ದೃಢ)ವ್ರತ, ಶೀಲ, ಕುಲ, ಕಾರ್ಯ (ದಕ್ಷತೆ)ಗಳೆಂಬ ನಾಲ್ಕು ಇರುವವೋ ಇಲ್ಲವೋ ಎಂಬುದನ್ನು ನೌಕರನಲ್ಲಿ ಪರೀಕ್ಷಿಸಬೇಕು.

೨೯. ಕಡಲಿನಷ್ಟು ವಿಸ್ತಾರವಾದ ಹಾಗೂ ಕಾವ್ಯದಷ್ಟು ಕಷ್ಟದಿಂದ ಒಳಹೊಗಬೇಕಾದ ರಾಜ್ಯದಲ್ಲಿ ಕವಿಗಳಂತೆ ರಾಜರು ವಿವಿಧ ಪ್ರಯೋಗಗಳನ್ನು ಕಲ್ಪಿಸುತ್ತ, ಒಂದು ಕ್ಷಣ ಮಲಗಿ ಕೂಡಲೇ ಏಳುತ್ತಾರೆ; ಮತ್ತು ಅಪರ ರಾತ್ರಿಯಲ್ಲಿ ಹೊಳೆದ ಉಪಾಯಗಳಿಂದ–ದುರ್ಲಭವಾದ ಅರ್ಥಸಂಪತ್ತನ್ನು ಕುರಿತು ವಿಚಾರ ಮಾಡುತ್ತಾರೆ.

೩೦. ವಿಷದಿಂದ ಕೂಡ ಅಮೃತವನ್ನು (ಅದು ಸಿಗುವಂತಿದ್ದರೆ) ತೆಗೆದುಕೊಳ್ಳಬೇಕು; ಚಿಕ್ಕ ಹುಡುಗನಿಂದ ಕೂಡ ವಿವೇಕದ ಮಾತನ್ನು (ಅವನೊಮ್ಮೆ ಆಡಿದರೆ) ಸ್ವೀಕರಿಸಬೇಕು; ಶತ್ರುವಿನಿಂದ ಕೂಡ (ಅವನಲ್ಲಿದ್ದರೆ) ಒಳ್ಳೆಯ ನಡತೆಯನ್ನು ಕಲಿಯಬೇಕು; ಅಮೇಧ್ಯದಿಂದ ಕೂಡ ಬಂಗಾರವನ್ನು (ಒಮ್ಮೆ ಅಲ್ಲಿದ್ದರೆ) ಎತ್ತಿಕೊಳ್ಳಬೇಕು.

अयुद्धेनैव विजयं वर्धयेद्वसुधाधिपः ।
जघन्यमाहुर्विजयं युद्धेन च नराधिपः ॥३१॥

अद्भ्योऽग्निर्ब्रह्मतः क्षत्रं अश्मनोलोहमुत्थितम् ।
तेषां सर्वत्रगं तेजः स्वासु योनिषु शाम्यति ॥३२॥

सप्ताङ्गस्य च राज्यस्य विपरीतं य आचरेत् ।
गुरुर्वा यदि वा मित्रं प्रतिहन्तव्य एव सः ॥३३॥

अचिराधिष्ठितराज्यः शत्रुः प्रकृतिष्वरूढमूलत्वात् ।
नवसंरोहणशिथिलस्तरुरिव सुकरः समुद्धर्तुम् ॥३४॥

मदमानसमुद्धतं नृपं न वियुंक्ते नियमेन मूढता ।
अतिमूढ उदस्यते नयान्नयहीनादपरज्यते जनः ॥३५॥

अणुरप्युपहन्ति विग्रहः प्रभुमन्तः प्रकृतिप्रकोपजः ।
अखिलं हि हिनास्ति भूधरं तरुशाखान्तनिघर्षजोऽनलः । ॥३६॥

मतिमान् विनयप्रमाथिनः समुपेक्षेत
समुन्नतिं द्विषः ।
सुजयः खलु तादृगन्तरे विपदन्ता
ह्यविनीतसम्पदः ॥३७॥

लघुवृत्तितया भिदां गतं बहिरन्तश्च नृपस्य मण्डलम् ।
अभिभूय हरत्यानन्तरः शिथिलं कूलमिवापगारयः ॥३८॥

೩೧. ಎಲೈ ರಾಜನೇ, ಯುದ್ಧ ಮಾಡದೆಯೇ, (ಸಾಧ್ಯವಾದಲ್ಲೆಲ್ಲಾ) ಗೆಲುವನ್ನು ಸಂಪಾದಿಸಬೇಕು; ಯುದ್ಧದಿಂದ ಗಳಿಸುವ ಜಯವು ಕೀಳೆಂದು (ತಿಳಿದವರು) ಹೇಳುತ್ತಾರೆ.

೩೨. ನೀರಿನಿಂದ ಬೆಂಕಿಯೂ, ಬ್ರಹ್ಮದಿಂದ ಕ್ಷತ್ರವೂ, ಕಲ್ಲಿನಿಂದ ಲೋಹವೂ ಹುಟ್ಟಿವೆ; ಅವುಗಳ ಸರ್ವತ್ರವ್ಯಾಪಿಯಾದ ತೇಜಸ್ಸು, ಆಯಾ ಮೂಲ ಆಕರದಲ್ಲಿ ಶಮನ ಹೊಂದುವುದು.

೩೩. ರಾಜ್ಯದ (ರಾಷ್ಟ್ರದ) ಸಪ್ತಾಂಗದ (ಹಿತಕ್ಕೆ) ವಿರುದ್ಧವಾಗಿ ಗುರು, ಮಿತ್ರ ಅಥವಾ ಯಾರೇ ಆಗಲಿ–ನಡೆದುಕೊಂಡರೆ, ಅಂಥವನು ಮರಣದಂಡನೆಗೆ ಪಾತ್ರನಾಗುವನು.

೩೪. ರಾಜ್ಯಾಧಿಕಾರವನ್ನು ಈಗ ತಾನೇ ಪಡೆದ ಹಗೆಯು ತನ್ನ ಪ್ರಜೆಗಳ ಹೃದಯದಲ್ಲಿ ರೂಢಮೂಲನಾಗದಿರುವುದರಿಂದ ಹೊಸದಾಗಿ ನೆಟ್ಟಂತಹ, ಬುಡಸಡಿಲವಾಗಿರುವ ಮರದಂತೆ ಕಿತ್ತು ಹಾಕಲು ಸುಲಭನಾಗಿರುವನು.

೩೫. ಸೊಕ್ಕು–ಸಿಟ್ಟುಗಳಿಂದ ಕೂಡಿದ ರಾಜನನ್ನು ದಡ್ಡತನವು ಎಂದೂ ಬಿಟ್ಟುಹೋಗದು; ಅತಿ ದಡ್ಡನು ನೀತಿಚ್ಯುತನಾಗುವನು; ನೀತಿಬಾಹಿರನಾದ ರಾಜನಿಂದ ಜನ ಅಸಂತೋಷ ಪಡುವುದು.

೩೬. ಮರದ ಕೊಂಬೆಗಳ ಘರ್ಷಣದಿಂದ ಹುಟ್ಟಿದ ಬೆಂಕಿಯು ಇಡಿ ಬೆಟ್ಟವೊಂದನ್ನು ಅಂಜಿಸುವುದಿಲ್ಲವೇ? ಹಾಗೆಯೇ ತನ್ನ ರಾಜ್ಯದೊಳಗಿನ ಪ್ರಜೆಗಳ ಕೋಪದಿಂದ ಉಂಟಾದ ಒಂದೇ ಒಂದು ವೈರಾಣು ಕೂಡ ರಾಜನನ್ನು ನಷ್ಟಕ್ಕೀಡು ಮಾಡುವುದು!

೩೭. ಬುದ್ಧಿವಂತನಾದ ದೊರೆಯು ಅವಿನೀತನಾದ ಶತ್ರುರಾಜನ ವೃದ್ಧಿಯನ್ನು (ಕೆಲಕಾಲ) ಅಲಕ್ಷಿಸಬೇಕು; ಏಕೆಂದರೆ, ಅಂಥ ಅವಿನೀತನನ್ನು ಅವನ ದುರ್ಬಲ ಸ್ಥಾನವನ್ನು ಹಿಡಿದು ಗೆಲ್ಲುವುದು ಸುಲಭ; ಅವಿನೀತರ ಸಂಪತ್ತು (ವೈರಿಯಿಂದ) ವಿಪತ್ತು ಉಂಟಾಗುವವರೆಗಷ್ಟೇ ಉಳಿಯುವಂಥದು!

೩೮. ರಾಜನ ದುರ್ವೃತ್ತಿಯಿಂದ, ಹೊರಗೆ ಪ್ರಜೆಗಳ ಮತ್ತು ಒಳಗೆ ಮಂತ್ರಿ ಮುಂತಾದವರ ವಿಶ್ವಾಸವನ್ನು ಕಳೆದುಕೊಂಡ ರಾಷ್ಟ್ರವನ್ನು ಆಮೇಲೆ–ಸಡಿಲವಾದ ದಡವನ್ನು ಹೊಳೆಯ ವೇಗವು ಒಡೆಯುವಂತೆ, ಹಗೆಗಳು ಬಂದು ಎದುರಿಸಿ, ಅಪಹರಿಸಿಕೊಂಡೊಯ್ಯುತ್ತಾರೆ.

मुहुर्लक्ष्योद्भेदा मुहुरधिगमाभावगहना
मुहुः सम्पूर्णाङ्गी मुहुरतिकृशा कार्यवशतः ।
मुहुर्नश्यद्बीजा मुहुरपि बहु प्रापितफले–
त्यहो चित्राकारा नियतिरिव नीतिर्नयविदाः ॥३९॥

अधीकारप्राप्त्या तृणमिव विदन् विश्वमखिलं
नियोगी जातार्तिर्नमति गृहदासीरपि रुदन् ।
नदन् मूर्खोऽज्ञानी बहुदुरुपदेशाधिगमतः
करोति प्राणान्ते शिशुरिव च किं किं न विगुणम् ॥४०॥

अमानुषत्वं पुरुषाधिराजा
विटस्तवैः स्वस्य विचिन्त्य सत्यम् ।
तृतीयमक्ष्यभ्यधिकं भुजौ वा
ममेति मत्वा न विदन्ति मृत्युम् ॥४१॥

विलासहासासनयानदान_
पानाशनाद्या असतीः सतीर्वा ।
छायेव चेष्टाः क्षितिपालवर्गः
परानुकारेण करोति सर्वाः ॥४२॥

निशासु येषां प्रभवन्ति दारा
दिनेष्वमात्या नियताधिकाराः
अहो भ्रमः स्वस्य यदत्र तेऽपि
विदन्ति भूपा प्रभविष्णुभावम् ॥४३॥

स्मरेन्नोपपतिः पूर्वपतिद्रोहं कुयोषितः ।
पूर्वस्वाम्यरितां चाद्य कुभृत्यस्येश्वरो जडः ॥४४॥

೩೯. ರಾಜನೀತಿಜ್ಞನ ನೀತಿಯ ಆವಿರ್ಭಾವವು ಕೆಲವು ಸಲ ಚೆನ್ನಾಗಿ ಗೋಚರವಾಗುತ್ತದೆ, ಕೆಲವು ಸಲ ತಿಳಿಯಲಾರದಷ್ಟು ಗೂಢವಾಗಿ ಹೋಗುತ್ತದೆ, ಮತ್ತೆ ಕೆಲವು ಬಾರಿ ಸರ್ವಾಂಗಸಮನ್ವಿತವಾಗುತ್ತದೆ; ಆ ನೀತಿಯು ಕೆಲವೊಮ್ಮೆ ಗುರಿಗನುಗುಣವಾಗಿ ಬಹು ಸೂಕ್ಷ್ಮವಾಗಿಬಿಡುತ್ತದೆ; ಇಂದು ಅದರ ಮೂಲವೇ ಕಿತ್ತು ಹೋಯ್ತೇನೋ ಎಂದು ತೋರುತ್ತದೆ; ನಾಳೆ ಅದು ಬೇಕಾದಷ್ಟು ಹಣ್ಣುಗಳಿಂದ ತುಂಬಿದ್ದಾಗಿ ಕಾಣಿಸುತ್ತದೆ. ಆಹಾ, ಅದು ದೈವದಂತೆ, ಚಿತ್ರ–ವಿಚಿತ್ರ ಆಕೃತಿಗಳುಳ್ಳದ್ದಾಗಿದೆ.

೪೦. ಅಧಿಕಾರ ಸಿಕ್ಕಿದ ಕೂಡಲೇ ಇಡಿ ಜಗತ್ತೇ ಹುಲ್ಲುಕಡ್ಡಿಗೆ ಸಮಾನವೆಂದು ತಿಳಿದುಕೊಳ್ಳುವ ಅಧಿಕಾರಿಯು, ಸಂಕಟವೊದಗಿದಕೂಡಲೇ, ಮನೆಗೆಲಸದ ಹೆಂಗಸರಿಗೆ ಕೂಡ, ಅಳುತ್ತ ನಮಸ್ಕಾರ ಹಾಕುವನು. ದುರ್ಬುದ್ಧಿಯನ್ನು ಬಹಳವಾಗಿ ಕಲಿತುಕೊಂಡು, ಮೂರ್ಖನಾದ ಅಜ್ಞಾನಿಯು ಮೊದಲು, ಬೇಕಾದಹಾಗೆ ಕೂಗಾಡಿ, ಕೊನೆಗೆ ಪ್ರಾಣಕ್ಕೆ ಸಂಚಕಾರ ಬಂದಾಗ, ಮಗುವಿನಂತೆ ಯಾವ ಯಾವ ವಿಕೃತ ಚೇಷ್ಟೆಗಳನ್ನು ಮಾಡದಿದ್ದಾನು?

೪೧. ತನ್ನ ಕುಶೀಲ ಸಂಗಾತಿಗಳ ಹೊಗಳಿಕೆಯಿಂದ ತಮ್ಮಲ್ಲಿ ದೇವತಾ ಗುಣವಿರುವುದು ಸತ್ಯವೆಂದು ಆಲೋಚಿಸಿ, ದೊರೆಗಳು ತಮಗೆ ಮೂರನೆಯ ಕಣ್ಣಿದೆ, ಅಥವಾ ಎರಡರ ಮೇಲೆ ಮತ್ತೆರಡು ತೋಳುಗಳಿವೆ ಎಂದು ತಿಳಿದು, ತಮ್ಮ ಸಾವನ್ನೇ ತಾವು ತಿಳಿಯದವರಾಗಿರುತ್ತಾರೆ.

೪೨. ಉಡಿಗೆ–ತೊಡಿಗೆಗಳಲ್ಲಿ ವಿಲಾಸ ತೋರುವ, ನಗುವ, ಕುಳಿತುಕೊಳ್ಳುವ, ಹೋಗುವ, ದಾನಮಾಡುವ, ಪಾನ ಮಾಡುವ ಮತ್ತು ಉಣ್ಣುವ ಪರಪದ್ಧತಿಗಳೆಲ್ಲವನ್ನೂ ಅವು ಒಳ್ಳೆಯವುಗಳಾಗಿರಲಿ, ಕೆಟ್ಟವುಗಳಾಗಿರಲಿ– ಅರಸರ ವರ್ಗವು ನೆರಳಿನಂತೆ ಅನುಕರಿಸುತ್ತದೆ.

೪೩. ಕೆಲ ಅರಸರು ಇರುಳಿನಲ್ಲಿ ಹೆಂಡಿರ ಅಧೀನರಾಗಿಯೂ, ಹಗಲಲ್ಲಿ ಮಂತ್ರಿಗಳ ಕೈಗೊಂಬೆಗಳಾಗಿಯೂ ನಡೆದುಕೊಳ್ಳುತ್ತಾರೆ; ಅಂಥವರು ಕೂಡ ತಾವು ಬಹಳ ಪ್ರಭಾವಶಾಲಿಗಳೆಂದು ತಿಳಿದುಕೊಂಡರೆ, ಅವರ ಭ್ರಮೆಯನ್ನು ಎಷ್ಟೆಂದು ಹೇಳಬೇಕು!

೪೪. ಕೆಟ್ಟ ಹೆಂಗಸು ತನ್ನ ಹಿಂದಿನ ಗಂಡನಿಗೆ ಮಾಡಿದ ದ್ರೋಹವನು ಮಿಂಡನು ನೆನಪಿಟ್ಟುಕೊಳ್ಳುವುದಿಲ್ಲ; ಹಾಗೆಯೇ ಬುದ್ಧಿಹೀನನಾದ ಒಡೆಯನು (ರಾಜನು) ಕೆಟ್ಟ ಸೇವಕನು ತನ್ನ ಹಿಂದಿನ ಒಡೆಯನಿಗೆ (ರಾಜನಿಗೆ) ಹಗೆಯಾಗಿ ವರ್ತಿಸಿದ್ದನ್ನು ಈಗ ನೆನಪಿಟ್ಟುಕೊಳ್ಳುವುದಿಲ್ಲ.

बुद्धिशस्त्रः प्रकृत्यङ्गो धनसंवृतिकञ्चुकः ।
चारेक्षणो दूतमुखः पुरुषः कोऽपि पार्थिवः ॥४५॥

स्वार्थनिष्पादनपरैर्धनपिशितग्रासगृध्रै–
रास्थाननलिनीबकैः– द्यूतं विनोद इति,
परदाराभिगमनं वैदग्ध्यमिति, मृगया श्रम इति,
पानं विलास इति, प्रमत्तताशौर्यमिति, स्वदार–
परित्यागोऽव्यसनिता चेति, गुरुवचनावधीरणं
अपरप्रणेयत्वमिति, अजितभृत्यता सुखोपसेव्यत्व–
मिति, नृत्यगीतवाद्यवेश्याभिसक्तिः रसिकतेति,
महापराधानाकर्णनं महानुभावतेति, परिभव–
सहत्वं क्षमेति, स्वच्छन्दता प्रभुत्वमिति,
देवावमाननं महासत्वतेति, वन्दिजनख्यातिर्यश
इति, तरलता उत्साह इति, अविशेषज्ञता
अपक्षपातित्वमिति, दोषानपि गुणपक्षमध्यारोप–
यद्भिरन्तः स्वयमपि विहसद्भिः प्रतारणकुशलै–
र्धूर्तैरमानुषोचिताभिः स्तुतिभिः प्रतार्यमाणा
वित्तमदमत्तचित्ता निश्चेतनतया तथैवेत्यन्या–
रोपितालीकाभिमाना मर्त्य धर्माणोदपि दिव्यांशावतिर्णमिव
सदैव तमिव अतिमानुषं
आत्मानमुत्प्रेक्षमाणाः प्रारब्धदिव्योचितचेष्टानुभावाः
सर्वजनस्योपहास्यतामुपयन्ति ॥४६॥

೪೫. ರಾಜನು ಬುದ್ಧಿಯನ್ನು ಆಯುಧವನ್ನಾಗಿಯೂ, ಪ್ರಜೆಗಳನ್ನು ಶರೀರವನ್ನಾಗಿಯೂ, ಕಂಡುಹಿಡಿಯಲಾಗದ ಗುಪ್ತ ರಾಜಕೀಯ ವಿಚಾರಗಳನ್ನು ಕವಚವನ್ನಾಗಿಯೂ, ಗುಪ್ತಚಾರರನ್ನು ಕಣ್ಣುಗಳನ್ನಾಗಿಯೂ, ರಾಯಭಾರಿಯನ್ನು ಬಾಯಿಯನ್ನಾಗಿಯೂ ಉಳ್ಳ ಒಬ್ಬ ವಿಚಿತ್ರ ಪುರುಷನು!

೪೬. ರಾಜಸ್ಥಾನವೆಂಬ ತಾವರೆಬಳ್ಳಿಯಲ್ಲಿ ಕೊಕ್ಕರೆಯಂತೆ ಕುಳಿತಿರುವ ಮತ್ತು ಮಾಂಸದ ತುತ್ತಿಗೆ ಕಾದು ಕುಳಿತ ಹದ್ದುಗಳಂತೆ, ಹಣಕ್ಕಾಗಿ ಹಪಹಪಿಸುವ ಚತುರ ಸ್ವಾರ್ಥಸಾಧಕರು–ಜೂಜನ್ನು ವಿನೋದವೆಂದೂ, ಪರಸ್ತ್ರೀಗಮನವನ್ನು ಪಾಂಡಿತ್ಯವೆಂದೂ, ಬೇಟೆಯನ್ನು ವ್ಯಾಯಾಮವೆಂದೂ, ಮದ್ಯಪಾನವನ್ನು ವಿಲಾಸವೆಂದೂ, ಸೊಕ್ಕನ್ನು ಶೌರ್ಯವೆಂದೂ, ತನ್ನ ಹೆಂಡತಿಯನ್ನು ಬಿಡುವುದು ವ್ಯಸನರಹಿತತೆಯೆಂದೂ ಹಿರಿಯರ ಮಾತನ್ನು ಕೇಳದಿರುವುದು ಸ್ವಾತಂತ್ರ್ಯವೆಂದೂ, ಜವಾನರನ್ನು ಅಂಕೆಯಲ್ಲಿಟ್ಟುಕೊಳ್ಳದಿರುವುದು ಅವನ ಬಗ್ಗೆ ಔದಾರ್ಯದಿಂದಿರುವ ದೊಡ್ಡಸ್ತಿಕೆಯೆಂದೂ ಬಣ್ಣಿಸುತ್ತಾರೆ; ಅಲ್ಲದೆ, ಅವರು ಕುಣಿತ, ಸಂಗೀತ, ಪಕ್ಕವಾದ್ಯ ಮತ್ತು ಸೂಳೆಯರಲ್ಲಿ ಆಸಕ್ತಿ ತಳೆಯುವುದು ರಸಿಕತೆಯೆಂದೂ, ದೊಡ್ಡ ತಪ್ಪನ್ನು ಕೂಡ ಕಿವಿಯಮೇಲೆ ಹಾಕಿಕೊಳ್ಳದಿರುವುದು ಮಹಾನುಭಾವಸ್ವಭಾವವೆಂದೂ ಅರ್ಥಯಿಸಿ ಹೇಳುತ್ತಾರೆ; ಇಷ್ಟೇ ಅಲ್ಲ ಅವಮಾನವನ್ನು ಸಹಿಸಿಕೊಳ್ಳುವುದು ಕ್ಷಮೆ, ಸ್ವಚ್ಛಂದ ವರ್ತನೆಯು ಅಧಿಕಾರಸಂಪನ್ನತೆ, ದೇವರನ್ನು ಹೀಗಳೆಯುವುದು ದೊಡ್ಡ ಬಲಶಾಲಿತ್ವ, ಹೊಗಳುಭಟ್ಟರ ಹೊಗಳಿಕೆಯು ಕೀರ್ತಿ, ಚಂಚಲತೆಯು ಉತ್ಸಾಹ, ವಿಶೇಷಜ್ಞರಾಗದಿರುವುದು ನಿಷ್ಪಕ್ಷಪಾತತೆ, ಎಂದು ಮುಂತಾಗಿ ದೋಷಗಳನ್ನು ಗುಣಗಳೆಂದು ಅವರು ವಿವರಿಸುತ್ತಾರೆ. ಹಾಗೆ ಮುಗ್ಧರೆದುರು (ತರುಣರಾದ ರಾಜಾದಿ ಸರದಾರರೆದುರು) ಹೇಳುವಾಗ ಅವರು ಒಳಗೊಳಗೇ ನಗುತ್ತಿರುತ್ತಾರೆ. ಆ ವಂಚನಾನಿಪುಣರು ಮನುಷ್ಯರಿಗೆ ಹೆಚ್ಚೆನ್ನಿಸುವ ಹೊಗಳಿಕೆಯಿಂದ ಮುಗ್ಧರನ್ನು ಮೋಸಗೊಳಿಸುತ್ತಾರೆ. ಧನಮದಾಂಧರಾದ ಅಂಥ ಮುಗ್ಧರು ಬುದ್ಧಿಸ್ವಾಧೀನತೆಯನ್ನು ಕಳೆದುಕೊಂಡು, ಇತರರು ಹೊರಿಸಿದ ಟೊಳ್ಳು ಅಭಿಮಾನವನ್ನು ತಾಳಿ, ಮನುಷ್ಯ ಸಹಜವಾದ ದೌರ್ಬಲ್ಯ ಉಳ್ಳವರಾಗಿದ್ದೂ, ತಾವು ದೇವರ ಅವತಾರಗಳೇ ಸರಿ ಎಂದುಕೊಂಡು, ಯಾವಾಗಲೂ ತಮ್ಮಲ್ಲಿರುವುದಕ್ಕಿಂತ ಹೆಚ್ಚಿನ ಗುಣಗಳಿವೆಯೆಂದು ತಮ್ಮನ್ನು ತಾವೇ ಮೇಲಕ್ಕೆ ಏರಿಸಿಕೊಂಡು, ದೇವತೆಗಳಿಗೆ ಉಚಿತವಾದ ಮಾತುಕತೆ ಅಭಿನಯಗಳನ್ನು ಅಳವಡಿಸಿಕೊಂಡು, ಎಲ್ಲರ ತಮಾಷೆಗೂ ಗುರಿಯಾಗುತ್ತಾರೆ!

## ೨. ವೀರಾನುಭವ

बद्धगोधाङ्गु लित्राणा हस्तविष्ठितकार्मुकाः
शराध्मातमहातूणा व्यायताबद्धवाससः ॥४७॥

अथ गृहमहितस्य तस्य पुत्रो
प्रथितयशा रघुपार्थिवः पृथुश्रीः ।
पृथुरिव पृथ्वी प्रसह्य योऽरीन्
+ अकृत पराक्रमतः स्ववंशभोज्याम् ॥४८॥

प्रतिभयसमरेष्वरातिशस्त्रो–
ल्लिखितमुखोऽभिमुखाद् द्विषां प्रहर्ता ।
श्रुतिपथनिपुणो कविः प्रदाता
विविधकलाकुशलः प्रजाप्रियश्च ॥४९॥

साधयत्यसहायोऽपि कार्यमुद्यतपौरुषः।
सिंह पातयते मत्तानेक एव मतङ्गजान् ॥५०॥

दोर्दण्डदर्पाद् द्रविडप्रकाण्डं
यः संमुखं धावितमेकवीरम् ।
अभाजनं वीररसस्य चक्रे
बाणोत्करच्छिद्रपरम्पराभिः ॥५१॥

अपरिमितविभूतिस्फीतसामन्तसेना–
मकुटमणिमयूरवाक्रान्तपादारविन्दः ।
युधि पतितगजेन्द्रानीकबी भत्सभूतो
भयविगळितहर्षो येन चाकारि हर्षः ॥५२॥

धौतेऽपि कीर्तिधाराभिश्चरिते चारुणि द्विषः ।
मृषामषीलवैलंक्ष्म लेखितुं के न शिल्पिनः ॥५३॥

## ೨. ವೀರಾನುಭವ

೪೭. (ವೀರರು) ಚರ್ಮದ ರಕ್ಷೆಯನ್ನು ಎಡತೋಳಿಗೆ ಕಟ್ಟಿಕೊಂಡು, ಬೆರಳುಚೀಲಗಳನ್ನು ಹಾಕಿಕೊಂಡು, ಕೈಯಲ್ಲಿ ಬಿಲ್ಲುಗಳನ್ನು ಹಿಡಿದು, ಬಟ್ಟೆಯನ್ನು ಬಿಗಿದುಟ್ಟು, ಅಂಬುಗಳಿಂದ ತುಂಬಿ ಊದಿಕೊಂಡ ದೊಡ್ಡ ಬತ್ತಳಿಕೆಗಳನ್ನು ಧರಿಸಿರುತ್ತಾರೆ.

೪೮. ಮನೆತನದ ದೊಡ್ಡಸ್ತಿಕೆಯುಳ್ಳ ಆತನ (ಭಗೀರಥನ) ಮಗನಾದ ರಘುವು ಪ್ರಸಿದ್ಧವಾದ ಕೀರ್ತಿಯುಳ್ಳವನೂ, ಬಹಳ ಐಶ್ವರ್ಯಸಂಪನ್ನನೂ ಆಗಿದ್ದನು; ಆತನು ಬಲಾತ್ಕಾರದಿಂದ ಶತ್ರುಗಳನ್ನು ಎಳೆದೆಸೆದು, ಪರಾಕ್ರಮದಿಂದ ಭೂಮಿಯನ್ನು ಪೃಥುಮಹಾರಾಜನಂತೆ ತನ್ನ ವಂಶದವರಿಗೆ ಭೋಗ್ಯವನ್ನಾಗಿ ಮಾಡಿದನು.

೪೯. ಭಯಕ್ಕೆ ಪ್ರತಿಭಯವನ್ನುಂಟುಮಾಡುವ, ಕಾಳಗಗಳಲ್ಲಿ ಹಗೆಗಳ ಆಯುಧಗಳ ಗುರುತುಗಳನ್ನುಳ್ಳ ಆತನು ಅವರ ಎದುರು ನಿಂತು, (ಅವರನ್ನು) ಹೊಡೆಯುವಂಥವನಾಗಿದ್ದನು; ಮತ್ತು (ಆ ದೊರೆ), ವೇದವೇದಾಂಗಪಾರಂಗತನೂ ಕವಿಯೂ, ಮಹಾದಾನಿಯೂ, ವಿವಿಧ ಲಲಿತಕಲೆಗಳಲ್ಲಿ ಕುಶಲನೂ, ಪ್ರಜಾಪ್ರಿಯನೂ ಆಗಿದ್ದನು.

೫೦. ಮದಿಸಿದ ಆನೆಗಳನ್ನು ಏಕಾಕಿಯಾಗಿ ಸಿಂಹವು ಮುರಿದು ಕೆಡಹುತ್ತದೆ; ಹಾಗೆಯೇ ಪೌರುಷ(ಪಂಥ)ವನ್ನು ಹಿಡಿದವನು ಅಸಹಾಯಕನಾಗಿದ್ದರೂ ಕಾರ್ಯವನ್ನು ಸಾಧಿಸುತ್ತಾನೆ.

೫೧. ದ್ರಾವಿಡದೊರೆಗಳಲ್ಲಿ ಏಕೈಕವೀರನೆನ್ನಿಸಿದವನನ್ನು (೬ನೆಯ ಚಾಲುಕ್ಯ ವಿಕ್ರಮಾರ್ಕನು) ತನ್ನ ಭುಜಬಲಪರಾಕ್ರಮದಿಂದ ಎದುರು ನಿಂತು ಓಡಿಸಿದನು; ಮತ್ತು ಅವನನ್ನು ತನ್ನ ಬಾಣರಾಶಿಯಿಂದ ಮಾಡಿದ ಗಾಯಗಳ ಮೂಲಕ (ಕಾವ್ಯದ) ವೀರರಸಕ್ಕೆ ಅಪಾತ್ರನನ್ನಾಗಿ ಮಾಡಿದನು.

೫೨. ಆತನ (೨ನೆಯ ಪುಲಿಕೇಶಿಯ) ಪಾದಾರವಿಂದವು ಅಳತೆಗೆ ಮೀರಿದ ಐಶ್ವರ್ಯದಿಂದ ತುಂಬಿದ ಸಾಮಂತ ಅರಸರ ಸಮೂಹದ ಕಿರೀಟಗಳಲ್ಲಿರುವ ನವರತ್ನಗಳ ಕಿರಣಗಳನ್ನು ಆಕ್ರಮಿಸಿತು; ಯುದ್ಧದಲ್ಲಿ ಬಿದ್ದ ಆನೆಗಳೊಡೆಯರ ರಾಶಿಯ ದೆಸೆಯಿಂದ ಜುಗುಪ್ಸೆಗೀಡಾದ ಹರ್ಷವರ್ಧನನು ಈತನಿಂದ ಭಯಕ್ಕೆ ತುತ್ತಾಗಿ, ಹರ್ಷವನ್ನು ಕಳೆದುಕೊಂಡನು.

೫೩. ಕೀರ್ತಿಧಾರೆಗಳಿಂದ ಹಗೆಯ ಚೆಲುವಾದ ಚರಿತವು ಶುಭ್ರವಾಗಿದ್ದರೂ ಅಸತ್ಯವೆಂಬ ಮಸಿವನಿಯಿಂದ ಅದಕ್ಕೆ ಕಲಂಕವನ್ನು ಬರೆಯಲು ಯಾರು ಚತುರರಾಗರು?

जाग्रतामपि निद्रा यः पश्यतामपि योऽन्धता
श्रुते सत्यपि जाड्यं यः प्रकाशोऽपि च यस्तमः ॥५४॥

रथः शरीरं पुरुषस्य दृष्टं
आत्मा नियन्तेन्द्रियाण्याहुरश्वाः ।
तैरप्रमत्तः कुशलः सदश्वैर्
दान्तैः कृती याति पदं स धीरः ॥५५॥

हतो वा प्राप्स्यसि स्वर्गं जित्वा वा भोक्ष्यसे महीम् ।
तस्मादुत्तिष्ट कौन्तेय युध्दाय कृतनिश्चयः ॥५६॥

क्लैब्यं मा स्म गमः पार्थ नैतत् त्वय्युपपद्यते ।
क्षुद्रं हृदयदौर्बल्यं त्यक्त्वोत्तिष्ट परंतप ॥५७॥

जातस्य हि ध्रुवो मृत्युः, ध्रुवं जन्म मृतस्य च ।
तस्मादपरिहार्येऽर्थे न त्वं शोचितुमर्हसि ॥५८॥

उद्यम्य धुरमुत्कर्षेदाजानेयकृतं स्मरन्
कुरु सत्वं च मानं च विद्धि पौरुषमात्मनः ॥५९॥

राशिवर्धनमात्रं स नैव स्त्री न पुनः पुमान्
दाने तपसि सत्ये च यस्य नोच्चरितं यशः ॥६०॥

ज्वल मूर्धन्यमित्राणां मुहूर्तमपि वा क्षणम् ।
एतावानेव पुरुषो यदमर्षी यदक्षमी ॥६१॥

आयसं हृदयं कृत्वा मृगयस्व पुनः स्वकम् ।
परं विषहते यस्मात् तस्मात् पुरुष उच्यते ॥६२॥

क्षुत्क्षामोऽपि जराकृशोऽपि शिथिलप्रायोऽपि कष्टांदशा–
मापन्नोऽपि विपन्नदीधितिरपि प्राणेषु नश्यत्स्वपि ।
मत्तेभेन्द्र विभिन्नकुम्भपिशित ग्रासैकबद्धस्पृहः
किं जीर्णं तृणमत्ति मानमहतामग्रेसरः केसरी ॥६३॥

೫೪. ಮೋಹವೆಂಬುದು ಎಚ್ಚತ್ತಿರುವವನಲ್ಲಿ ನಿದ್ರೆಯಾಗಿರುತ್ತದೆ; ನೋಡುತ್ತಿರುವವನಲ್ಲಿ ಕುರುಡುತನವಾಗಿರುತ್ತದೆ: ಶಾಸ್ತ್ರಜ್ಞರಲ್ಲಿ ಮಂದಮತಿತ್ವವಾಗಿರುತ್ತದೆ; ಮತ್ತು ಪ್ರಕಟವಾದ ಅರ್ಥದಲ್ಲಿಯೂ ಅದನ್ನು ತಿಳಿಯಗೊಡದಂತೆ, ಮಾಡುವ ಪ್ರತಿಬಂಧಕವಾಗಿರುತ್ತದೆ.

೫೫. ಮನುಷ್ಯನಿಗೆ ದೇಹವು ತೇರು, ಆತ್ಮನು ಸಾರಥಿಯು, ಇಂದ್ರಿಯಗಳು ಕುದುರೆಗಳು; ಅವುಗಳಿಂದ ಮತ್ತನಾಗದೆ ನಿಪುಣನಾಗಿ ಹಿಡಿತದಲ್ಲಿಟ್ಟುಕೊಂಡ ಒಳ್ಳೆಯ ಕುದುರೆಗಳ ಮೂಲಕ ಯಶಸ್ವಿಯಾಗಿ ಮುನ್ನಡೆಯುವವನೇ ಧೀರನು.

೫೬–೫೭–೫೮. ಹತನಾದರೆ ಸ್ವರ್ಗವನ್ನು ಹೊಂದುವೆ: ಜಯ ಪಡೆದರೆ ರಾಜ್ಯವನ್ನು ಅನುಭವಿಸುವೆ; ಆದುದರಿಂದ, ಅರ್ಜುನನೇ, ಯುದ್ಧ ಮಾಡಲು ನಿಶ್ಚಯಿಸಿ, ಎದ್ದೇಳು. ಎಲೈ ಹಗೆಗಳನ್ನು ಸುಡಬಲ್ಲ ಅರ್ಜುನ, ಹೇಡಿಯಾಗದಿರು: ಇದು ನಿನಗೆ ತಕ್ಕದ್ದಲ್ಲ; ಕ್ಷುದ್ರವಾದ ಮನೋದೌರ್ಬಲ್ಯವನ್ನು ಬಿಟ್ಟು ನೀನು ಎದ್ದೇಳು. ಹುಟ್ಟಿದವನಿಗೆ ಸಾವು ನಿಶ್ಚಿತ, ಸತ್ತವನಿಗೆ ಹುಟ್ಟು ನಿಶ್ಚಿತ; ಆದುದರಿಂದ ತಪ್ಪಿಸಲಾಗದ ವಿಷಯದಲ್ಲಿ ನೀನು ಚಿಂತಿಸುವುದು ತರವಲ್ಲ!

೫೯,೬೦,೬೧,೬೨. ಯುದ್ಧದಲ್ಲಿ ಜಾತ್ಯಾಶ್ವಗಳು ಧೈರ್ಯದಿಂದ ನಿಂತುದನ್ನು ನೆನೆದು, ನೀನು ಪ್ರಯತ್ನಿಸಿ, ಹೊಣೆಯನ್ನು ಹೊರಬೇಕು; ಧೈರ್ಯ ತಾಳು, ಸಿಡಿದೇಳು, ನಿನ್ನ ಪೌರುಷವನ್ನು ಅರಿತುಕೋ! ದಾನದಲ್ಲಿ, ತಪಸ್ಸಿನಲ್ಲಿ ಅಥವಾ ಸತ್ಯದಲ್ಲಿ ಒಬ್ಬನ ಕೀರ್ತಿಯನ್ನು ಯಾರೂ ಹೇಳದಿದ್ದರೆ, ಅಂಥವನು ಹೆಣ್ಣೂ ಅಲ್ಲ, ಗಂಡೂ ಅಲ್ಲ–ಕೇವಲ ಸಂಖ್ಯಾಭಿವೃದ್ಧಿಗೆ ಕಾರಣನು. ಹಗೆಗಳ ತಲೆಯ ಮೇಲೆ ಒಂದು ನಿಮಿಷವಾಗಲಿ ಕ್ಷಣ ಮಾತ್ರವಾಗಲಿ, ಉರಿ! ಹಗೆಗಳನ್ನು ಕ್ಷಮಿಸದ ಮತ್ತು ಸಹಿಸದ ಮನುಷ್ಯನೇ ಗಂಡಸು! ಹೃದಯವನ್ನು ಕಬ್ಬಿಣವನ್ನಾಗಿ ಮಾಡಿಕೊಂಡು, ನಿನ್ನ ಧನಾದಿಸ್ವತ್ತುಗಳನ್ನು ಪುನಃ ಹುಡುಕು (ಹುಡುಕಿ ಪಡೆ.) ಹಗೆಯನ್ನು ಎದುರಿಸಿ, ತನ್ನದನ್ನು ಉಳಿಸಿಕೊಳ್ಳುವುದರಿಂದಲೇ ಗಂಡಸು ಗಂಡಸೆನ್ನಿಸುತ್ತಾನೆ!

೬೩. ಹಸಿವಿನಿಂದ ಕ್ಷೀಣವಾಗಿದ್ದರೂ, ಮುಪ್ಪಿನಿಂದ ಬಡಕಲಾಗಿದ್ದರೂ ಶರೀರವು ಸಡಿಲಾದಂತಿದ್ದರೂ, ಕಷ್ಟದಲ್ಲಿ ಬಿದ್ದಿದ್ದರೂ, ತೇಜಸ್ಸು ಉಡುಗಿ ಹೋಗಿದ್ದರೂ, ಪ್ರಾಣವೇ ಹೋಗುವಂತಾಗಿದ್ದರೂ, ಮದಿಸಿದ ಬಲಿಷ್ಠ ಆನೆಯ, ಒಡೆದ ಕುಂಭಸ್ಥಳದ ಮಾಂಸದ ತುತ್ತನ್ನೇ ತಿನ್ನಬೇಕೆಂಬ ಬಯಕೆಯುಳ್ಳ, ಮಾನಕ್ಕೆ ಮಹತ್ವ ಕೊಡುವವರಲ್ಲಿ ಅಗ್ರಗಣ್ಯವಾದ, ಸಿಂಹವು (ಎಂದಾದರೂ) ಒಣಹುಲ್ಲನ್ನು ತಿಂದೀತೇ?

अम्बरत्यम्बरं यद्वत् समुद्रोऽपि समुद्रति ।
विक्रमार्कमहीपाल तथा त्वं विक्रमार्कसि ॥६४॥

लोकालोकव्याहतं घर्मरश्मेः
शालीनं वा धाम नालं प्रसर्तम् ।
लोकस्याग्रे पश्यतो धृष्टमाशु
क्रामत्युच्चैर्भूभृतो यस्य तेजः ॥६५॥

स्ववीर्यं यः समाश्रित्य समाह्वयति वै परान् ।
अभीतो युध्यते शत्रून् स वै पुरूष उच्यते ॥६६॥

परवीर्यं समाश्रित्य यः समाह्वयते परान् ।
क्षत्रबन्धुरशक्तत्वाल्लोके स पुरुषाधमः ॥६७॥

यदा धृतिं कुरुते योत्स्यमानः
स दीर्घबाहुर्दृढधन्वा महात्मा ।
सिंहस्येव गन्धमाघ्राय गावः
सञ्चेष्टन्ते शत्रवोऽस्माद्रणाग्रे ॥६८॥

सन्त्यन्येऽपि बृहस्पतिप्रभृतयः सम्भाविताः पञ्चषा –
स्तान् प्रत्येष विशेषविक्रमरुची राहुर्न वैरायते ।
द्वावेव ग्रसते दिवाकरनिशाप्राणेश्वरौ भास्वरौ
भ्रातः पर्वणि पश्य दानवपतिः शीर्षावशेषाकृतिः ॥६९॥

निन्दन्तु नीतिनिपुणा यदि वा स्तुवन्तु
लक्ष्मीः समाविशतु गच्छतु वा यथेष्टम्
अद्यैव वा मरणमस्तु युगान्तरे वा
न्यायात् पथः प्रविचलन्ति पदं न धीराः ॥७०॥

೬೪. ಎಲೈ ವಿಕ್ರಮಾದಿತ್ಯ ದೊರೆಯೇ, ಬಾನು ಬಾನಿಸುವಂತೆ, (ಎಲ್ಲವನ್ನೂ ಒಳಗೊಳ್ಳುವ ಪರಾಕ್ರಮವನ್ನು ತೋರುವಂತೆ), ಕಡಲು ಕಡಲಿಸುವಂತೆ (ಅದೇ ಪ್ರಕಾರ ಗರ್ಜಿಸಿ, ತರ್ಜಿಸಿ, ಭೂಮಿಯ ಬಹ್ವಂಶವನ್ನು ಆಕ್ರಮಿಸಿರುವಂತೆ), ನೀನು ವಿಕ್ರಮಾರ್ಕಿಸಿರುವೆ. (ಸಮಸ್ತ ಸಾಮಂತರ ರಾಜ್ಯಗಳನ್ನಾಕ್ರಮಿಸಿ, ಅವರ ಮೇಲೆ ಪ್ರಭುತ್ವವನ್ನು ಸ್ಥಾಪಿಸಿಕೊಂಡಿರುವೆ)!

೬೫. ಸೂರ್ಯನ ತೇಜಸ್ಸು ಲೋಕಾಲೋಕಪರ್ವತ ಅಡ್ಡ ಬಂದುದರಿಂದ ಮುಂದೆ ಪಸರಿಸಲಾರದೆ, ನಾಚಿಕೊಂಡಂತೆ ತೋರುತ್ತದೆ; ಆದರೆ ವೀರದೊರೆಗಳ ತೇಜಸ್ಸು ನೋಡುತ್ತಿರುವ ಲೋಕದೆದುರಿಗೇ ಅಡೆ–ತಡೆಗಳಿಲ್ಲದೆ, ಆಗಿಂದಾಗ ಎತ್ತರಕ್ಕೆ ಏರಿ ಹಬ್ಬುತ್ತದೆ!

೬೬–೬೭. ತನ್ನ ಪರಾಕ್ರಮವನ್ನೇ ಅವಲಂಬಿಸಿ, ಹಗೆಗಳನ್ನು ಯುದ್ಧಕ್ಕೆ ಕರೆದು, ಹೆದರದೆ ಅವರೊಡನೆ ಹೋರುವವನು ಗಂಡಸೆಂದು ಹೇಳಿಸಿಕೊಳ್ಳುತ್ತಾನೆ: ಹಾಗಲ್ಲದೆ, ಇನ್ನೊಬ್ಬರ ಪರಾಕ್ರಮವನ್ನು ಆಧರಿಸಿ, ಹಗೆಗಳನ್ನು ಕಾಳೆಗಕ್ಕೆ ಆಹ್ವಾನಿಸುವ ಹೀನ ಕ್ಷತ್ರಿಯನು ತನ್ನ ದೌರ್ಬಲ್ಯದ ದೆಸೆಯಿಂದ ಪುರುಷಾಧಮನೆನ್ನಿಸಿಕೊಳ್ಳುತ್ತಾನೆ.

೬೮. ಯುದ್ಧ ಮಾಡುವವನು ಧೈರ್ಯ ತಾಳಿದರೆ ಆಗ ಅವನೇ ನೀಳ್ದೋಳಿನವನು, ಅವನೇ ಗಟ್ಟಿಯಾಗಿ ಬಿಲ್ಲನ್ನು ಹಿಡಿದಂಥವನು, ಅವನೇ ಮಹಾ ಆತ್ಮಶಕ್ತಿಸಂಪನ್ನನು; ಸಿಂಹದ ವಾಸನೆಯನ್ನು ಮೂಸಿ ತಿಳಿದು, ಹಸುಗಳು ಮಾಡುವಂತೆ, ಅಂಥವನಿಂದ ರಣರಂಗದ ಮುಂಚೂಣಿಯಲ್ಲಿ ನಿಂತ ಹಗೆಗಳು ಗಾಬರಿಗೆಟ್ಟು, ದೂರ ಓಡುತ್ತಾರೆ!

೬೯. ಸೋದರ, ಹುಣ್ಣಿಮೆ–ಅಮಾವಾಸ್ಯೆಗಳಲ್ಲಿ ನೋಡು–ತಲೆಯನ್ನಷ್ಟೇ ಉಳಿಸಿಕೊಂಡಿರುವ ರಾಕ್ಷಸರೊಡೆಯನಾದ ಈ ರಾಹುವು, ವಿಶೇಷ ಪರಾಕ್ರಮದಲ್ಲಿ ಅಭಿರುಚಿಯುಳ್ಳವನಾದುದರಿಂದ, ತಕ್ಕವರಾದ ಬೃಹಸ್ಪತಿ ಮೊದಲಾದ ಐದಾರು ಜನರು (ದೇವಲೋಕದಲ್ಲಿ) ಇದ್ದರೂ, ಅವರಲ್ಲಿ ವೈರವನ್ನು ಸಾಧಿಸಲಿಲ್ಲ; (ತದ್ವಿರುದ್ಧವಾಗಿ) ಆತನು ಪ್ರಕಾಶಮಾನರಾದ ಸೂರ್ಯ–ಚಂದ್ರರಿಬ್ಬರನ್ನೇ ನುಂಗುತ್ತಾನೆ!

೭೦. ಶಾಸ್ತ್ರಜ್ಞರು ತೆಗಳಲಿ ಅಥವಾ ಹೊಗಳಲಿ; ಐಶ್ವರ್ಯವು ಬರಲಿ ಅಥವಾ ಅಡೆತಡೆಯಿಲ್ಲದೆ ಹೊರಟು ಹೋಗಲಿ; ಈಗಲೇ ಸಾವು ಬರಲಿ ಅಥವಾ ಕಲ್ಪಾಂತರ ಕಳೆದ ಮೇಲೆ ಬರಲಿ–ಏನೇ ಆದರೂ ಧೀರರು ನ್ಯಾಯವಾದ ಮಾರ್ಗವನ್ನು ಬಿಟ್ಟು (ಬೇರೆ ಮಾರ್ಗದಲ್ಲಿ) ಹೆಜ್ಜೆ ಇಡರು!

अवन्ध्यकोपस्य विहन्तुरापदां
भवन्ति वश्याः स्वयमेव देहिनः ।
अमर्षशून्येन जनस्य जन्तुना
न जातहार्देन न विद्विषादरः ॥७१॥

त्यक्तग्राम्यसुखाः पार्था नित्यं वीरसुखप्रियाः
न तु स्वल्पेन तुष्येयुर्महोत्साहा महाबलाः ॥७२॥

कामार्थौ लिप्स्यमानस्तु धर्ममेवादितश्चरेत्
न हि धर्मादपैत्यर्थः कामो वाऽपि कदाचन ॥७३॥

रत्नैर्महाब्धेस्तुतुषुर्न देवा
न भेजिरे भीमविषेण भीतिम् ।
सुधां विना न प्रययुर्विरामं
न निश्चितार्थाद्विरमन्ति धीराः ॥७४॥

इमे वङ्गाः पौण्ड्रा मगधनरपा कोसलनृपा
अमी काळिङ्गान्ध्रा द्रविडनरनाथास्त्वसुहृदाः ।
विशीर्णाश्शस्त्रौघैर्नरपतिविमुक्तैरिति जनाः
प्रशंसा यस्यालं विदधुरनिशं सामियरणे ॥७५॥

## ೩. ಸಾಮಾಜಿಕ ಅನುಭವ

सबन्धुर्यो हिते युक्तः स पिता यस्तु पोषकः ।
तन्मित्रं यत्र विश्वासः स देशो यत्र जीव्यते ॥७६॥

स जीवति गुणा यस्य धर्मो यस्य स जीवति ।
गुणधर्मविहीनो यो निष्फलं तस्य जीवनम् ॥७७॥

दुष्टा भार्या शठं मित्रं भृत्यश्चोत्तरदायकः ।
ससर्पे च गृहे वासो मृत्युरेव न संशयः ॥७८॥

೭೧. ಆಪತ್ತುಗಳನ್ನು ಸದೆಬಡಿಯುಬಲ್ಲ ಹಾಗೂ ತನ್ನ ಸಿಟ್ಟನ್ನು ಬಂಜೆಯಾಗಗೊಡದ ಮನುಷ್ಯನಿಗೆ ಎಲ್ಲರೂ ತಾವಾಗಿಯೇ ವಶವರ್ತಿಗಳಾಗುವರು; ಸಿಟ್ಟೇಬಾರದಂತಹ ಮಿತ್ರನ ಅಥವಾ ಶತ್ರುವಿನ ಬಗೆಗೆ ಜನರಿಗೆ ಆದರ ಉಂಟಾಗದು. (ಅಥವಾ ಮಿತ್ರನ ಬಗೆಗೆ ಅದರ ಹುಟ್ಟದು, ಶತ್ರುವಿನ ಬಗೆಗೆ ಭಯ ಉಂಟಾಗದು).

೭೨–೭೩. ಪಾಂಡವರು ಅಸಂಸ್ಕೃತ ಸುಖವನ್ನು ಬಿಟ್ಟು, ನಿತ್ಯವೂ ವೀರ ಸಹಜವಾದ ಸುಖವನ್ನು ಬಯಸುವವರು; ಬಲಿಷ್ಠರೂ, ಬಹಳ ಉತ್ಸಾಹಶಾಲಿಗಳೂ ಆದವರು ಅಲ್ಪದಿಂದ ಎಂದೂ ತೃಪ್ತರಾಗರು. ಕಾಮ, ಅರ್ಥಗಳನ್ನು (ಪುರುಷಾರ್ಥಗಳಲ್ಲಿ ಎರಡನ್ನು) ಬಯಸುವವರು ಮೊದಲು ಧರ್ಮವನ್ನೇ ಆಚರಿಸಬೇಕು; ಅರ್ಥವಾಗಲಿ, ಕಾಮವಾಗಲಿ–ಎಂದೂ ಧರ್ಮವನ್ನು ಬಿಟ್ಟಿರದು.

೭೪. ದೇವತೆಗಳು ಮಹಾಸಮುದ್ರದಲ್ಲಿ ಸಿಕ್ಕಿದ ಬಹಳ ಬೆಲೆಯುಳ್ಳ ರತ್ನಗಳಿಂದ ತೃಪ್ತರಾಗಲಿಲ್ಲ; ಭಯಂಕರವಾದ ವಿಷದಿಂದ ಅವರು ಹೆದರಲಿಲ್ಲ; ಅಮೃತ ಸಿಗುವವರೆಗೆ ಪ್ರಯತ್ನವನ್ನವರು ನಿಲ್ಲಿಸಲಿಲ್ಲ; ಹೀಗೆ ಧೀರರು (ತಮ್ಮ) ನಿಶ್ಚಿತವಾದ ಗುರಿಯನ್ನೇ ಮುಟ್ಟದೆ ನಿಲ್ಲುವುದಿಲ್ಲ.

೭೫. "ಇವರು ಬಂಗಾಳಿಗಳು, ಇವರು ಪೌಂಡ್ರಕರು, ಇವರು ಮಗಧ ದೇಶದರಸರು, ಇವರು ಕೋಸಲ ದೇಶದರಸರು, ಇವರು ಕಳಿಂಗ (ಒಡಿಸ್ಸಾ) ದೇಶದವರು, ಇವರು ಆಂಧ್ರರು, ಇವರು ತಮಿಳರೊಡೆಯರು; ಈ ಎಲ್ಲ ಹಗೆಗಳೂ ನಮ್ಮ ದೊರೆ (೨ನೆಯ ರಾಚಮಲ್ಲ) ಎಸೆದ ಆಯುಧಗಳಿಂದ ಸಾಮಿಯ ರಣಾಂಗಣದಲ್ಲಿ ಚದುರಿಹೋದರು" ಎಂದು ನಿತ್ಯವೂ ಜನರು ಮಾಡಿದ್ದ ಪ್ರಶಂಸೆಯೇ (ನಮ್ಮ ದೊರೆಯ ಕೀರ್ತಿಯನ್ನು ಹೇಳಲು) ಸಾಕು!

## ೩. ಸಾಮಾಜಿಕ ಅನುಭವ

೭೬. ನಮಗೆ ಹಿತಕಾರಿಯಾದವನು ನೆಂಟ; ಪೋಷಕನಾದವನು ತಂದೆ; ವಿಶ್ವಾಸಕ್ಕೆ ಪಾತ್ರನಾದವನು ಗೆಳೆಯ; ಜೀವನಕ್ಕೆ ಅನುಕೂಲ ಮಾಡಿಕೊಟ್ಟಿರುವುದು (ಸ್ವ)ದೇಶ.

೭೭. ಗುಣಿಯ ಬದುಕೇ ಬದುಕು; ಧರ್ಮಿಷ್ಠನ ಬದುಕೇ ಬದುಕು; ಗುಣ, ಧರ್ಮಗಳಿಲ್ಲದವನ ಬದುಕು ನಿಷ್ಫಲವಾದುದು.

೭೮. ಕೆಟ್ಟ ಹೆಂಡತಿ, ವಿಶ್ವಾಸಘಾತಕನಾದ ಗೆಳೆಯ, ಎದುರುತ್ತರ ಕೊಡುವ ಆಳು ಮತ್ತು ಸರ್ಪ ನೆಲೆಸಿರುವ ಮನೆಯಲ್ಲಿಯ ವಾಸ–ಇವು ಸಾವೇ ಸರಿ; ಇದರಲ್ಲಿ ಸಂಶಯವಿಲ್ಲ.

कान्तावियोग: स्वजनापमानं
ऋणस्य शेष: कुजनस्य सेवा ।
दारिद्र्यभावाद्विमुखं च मित्रं
विनाग्निना पञ्च दहन्ति तीव्रा: ॥७९॥

जयन्ति जितमत्सरा परहितार्थमभ्युद्यता:
पराभ्युदयसुस्थिता: परविपत्तिखेदाकुला: ।
महापुरुषसत्कथाश्रवणजातकौतूहला:
समस्तदुरितार्णवप्रकटसेतव: साधव: ॥८०॥

रक्षन् परसंस्पर्शं शौचार्थी ब्रह्मलोकेऽपि
दम्भ: पुरोऽस्य तस्थावुत्थित एवासनाकांक्षी ॥८१॥

वचने बाह्लीकानां व्रतनियमे प्राच्यदाक्षिणात्यानाम् ।
अधिकारे कीराणां दम्भ: सर्वत्र गौडानाम् ॥८२॥

दम्भविकार: पुरतो वञ्चकचक्रस्य कल्पवृक्षोऽयम्
वामनदम्भेन पुरा हरिणा त्रैलोक्यमाक्रान्तम् ॥८३॥

कदर्थितस्यापि हि धैर्यवृत्तेर्
न शक्यते सर्वगुणप्रमाथ: ।
अध: खलेनापि कृतस्य वह्नेर्
नाध: शिखा याति कदाचिदेव ॥८४॥

अर्थेन किं कृपणहस्तगतेन केन
ज्ञानेन किं बहुशठाग्रहसङ्कुलेन।
रूपेण किं गुणपराक्रमवर्जितेन
मित्रेण किं व्यसनकालपराङ्मुखेन ॥८५॥

अहिंसा सूनृता वाणी सत्यं शौचं दया क्षमा ।
वर्णिनां लिङ्गिनां चव सामन्यो धर्म इष्यते ॥८६॥

೭೯. ಹೆಂಡತಿಯ ಅಗಲುವಿಕೆ, ಸಜ್ಜನರಿಗೆ ಅವಮಾನವಾಗುವುದು, ಸಾಲದ ಬಾಕಿ, ದುರ್ಜನರ ಸೇವೆ, ಬಡತನದ ದೆಸೆಯಿಂದ ಗೆಳೆಯ ದೂರ ಸರಿಯುವುದು ಎಂಬ ಈ ಐದು ತೀಕ್ಷ್ಣ ಅನುಭವಗಳು ಮನುಷ್ಯನನ್ನು ಬೆಂಕಿಯಿಲ್ಲದೆ ಸುಡಬಲ್ಲವು.

೮೦. ಮತ್ಸರವನ್ನು ಗೆದ್ದವರು, ಪರರ ಹಿತಕ್ಕಾಗಿ ದುಡಿಯುವವರು. ಪರರ ಅಭ್ಯುದಯದಿಂದ ಸಮಾಧಾನ ಪಡುವವರು. ಪರರಿಗೆ ಸಂಕಟ ಬಂದಾಗ ಮರುಗುವವರು, ಮಹಾಪುರುಷರ ಸಮಾಚಾರವನ್ನು ಕೇಳುವುದರಲ್ಲಿ ಕುತೂಹಲವುಳ್ಳವರು ಯೋಗ್ಯರೆಂದೆನ್ನಿಸುತ್ತಾರೆ; ಅವರು ಎಲ್ಲ ಪಾಪಸಮುದ್ರಗಳನ್ನು ದಾಟಲು ಸೇತುವಾಗಿದ್ದಾರೆ; ಆದ್ದರಿಂದ ಲೋಕಜೀವನದಲ್ಲಿ ಯಶಸ್ವಿಗಳೆನ್ನಿಸುತ್ತಾರೆ.

೮೧. ಮಡಿವಂತನು ಬ್ರಹ್ಮಲೋಕದಲ್ಲಿ ಕೂಡ ಇನ್ನೊಬ್ಬರು ತನ್ನನ್ನು ಮುಟ್ಟಿಯಾರು, ಎಂದು ಕಾಯ್ದುಕೊಳ್ಳುತ್ತಾನೆ; ತನ್ನ ಆಸನವನ್ನು ಬಿಟ್ಟು ಏಳುವಷ್ಟರಲ್ಲಿಯೇ ಅದರ ಮೇಲೆ ಕುಳಿತುಕೊಳ್ಳಬೇಕೆಂಬ ಆಸೆಯನ್ನಿಟ್ಟುಕೊಂಡಿರುವಂಥ ಅವನೆದುರು ದಂಭವು ನಿಂತಿರುತ್ತದೆ!

೮೨. ಮಾತಿನಲ್ಲಿ ಬಾಹ್ಲೀಕರೂ (ಪಂಜಾಬಿಗಳೂ), ವ್ರತನಿಯಮಗಳಲ್ಲಿ ಪೂರ್ವ ಮತ್ತು ದಕ್ಷಿಣ ಭಾರತೀಯರೂ, ಅಧಿಕಾರದಲ್ಲಿ ಕಾಶ್ಮೀರಿಗಳೂ ಈ ಎಲ್ಲವುಗಳಲ್ಲೂ ಗೌಡರೂ (ಬಂಗಾಳಿಗಳೂ) ಡಾಂಭಿಕರು!

೮೩. ದಂಭವಿಕಾರವು ವಂಚಕರೆದುರಿಗಿರುವ ಕಲ್ಪವೃಕ್ಷ; ಹಿಂದೆ ವಾಮನಾವತಾರದ ದಂಭದಿಂದ ವಿಷ್ಣುವು ಮೂರು ಲೋಕಗಳನ್ನು ಆಕ್ರಮಿಸಿದನು.

೮೪. ಬೆಂಕಿಯನ್ನು ದುಷ್ಟನೊಬ್ಬನು ಕೆಳಮುಖ ಮಾಡಿ ಹಿಡಿದರೂ, ಅದರ ಉರಿಯು ಎಂದೂ ಕೆಳಮುಖವಾಗದು; ಹಾಗೆಯೇ ಧೀರವೃತ್ತಿಯವನನ್ನು ಹೀಯಾಳಿಸಿದರೂ ಅವನಲ್ಲಿರುವ ಎಲ್ಲ ಗುಣಗಳನ್ನೂ ನಾಶಮಾಡಲು ಸಾಧ್ಯವಾಗದು.

೮೫. ಜಿಪುಣನ ಕೈಗೆ ಹೋದ ಯಾವ ಹಣದಿಂದ ಏನು ಪ್ರಯೋಜನ? ಶಾಠ್ಯ-ಆಗ್ರಹಗಳಿಂದ ಕೂಡಿದ ಯಾವ ಜ್ಞಾನದಿಂದ ಏನು ಉಪಯೋಗ? ಗುಣಪರಾಕ್ರಮಗಳಿಲ್ಲದ ಯಾವ ರೂಪದಿಂದ ಏನು ಫಲ? ಕಷ್ಟಕಾಲದಲ್ಲಿ ತಿರುಗಿ ನೋಡದ ಯಾವ ಗೆಳೆಯನಿಂದ ಏನು ಲಾಭ?

೮೬. ಅಹಿಂಸೆ, ಒಳ್ಳೆಯ ಮಾತು, ಸತ್ಯಸಂಧತೆ, ನಿರ್ಮಲವಾದ ನಡತೆ, ದಯೆ, ಕ್ಷಮೆಗಳು ವರ್ಣಾಶ್ರಮಧರ್ಮವನ್ನು ಪಾಲಿಸುವ ಹಾಗೂ ಪಾಲಿಸದ ಸರ್ವರಿಗೂ ಸಾಮಾನ್ಯವಾದ ಧರ್ಮ.

दाक्षिण्यं स्वजने दया परिजने शाठ्यं सदा दुर्जने
प्रीतिः साधुजने नयो नृपजने विद्वज्जने चार्जवम् ।
शौर्यं शत्रुजने क्षमा गुरुजने कान्ताजने धृष्टता
ये चैवं पुरुषाः कलासु कुशलास्तेष्वेव लोकस्थितिः ॥८७॥

इदं तत् स्नेहसर्वस्वं सममाढ्यदरिद्रयोः ।
अचन्दनमनौशीरं हृदयस्यानुलेपनम् ॥८८॥

दारिद्र्यात् ह्रियमेति ह्रीपरिगतः प्रभ्रश्यते तेजसो
निस्तेजाः परिभूयते परिभवान्निर्वेदमापद्यते।
निर्विण्णः शुचमेति शोकविहतो बुध्द्या परित्यज्यते
निर्बुद्धिः क्षयमेत्यहो निधनता सर्वापदामास्पदम् ॥८९॥

यशः सौरभ्यलशुनः शान्तिशैत्यहुताशनः
कारुण्यकुसुमाकाशः पिशुनः केन वर्ण्यते ॥९०॥

वरं कार्यं मौनं न च वचनमुक्तं यदनृतं
वरं क्लैब्यं पुंसां न च परकलत्राभिगमनम् ।
वरं प्राणत्यागो न च पिशुनवाक्येष्वभिरतिर्
वरं भिक्षाशित्वं न च परधनास्वादनसुखम् ॥९१॥

शास्त्राण्यधीत्यापि भवन्ति मूर्खा
यस्तु क्रियावान् पुरुषः स विद्धान् ।
सञ्चिन्तितं त्वौषधमातुरं हि
किं नाममात्रेण करोत्यरोगम् ॥९२॥

उपकर्तुमनुपकर्तुः प्रियाणि कर्तुं कृतान्यनुस्मर्तुम् ।
विनिपतितांश्चोद्धर्तु कुलान्वितानामुचितमेतत् ॥९३॥

೮೭. ಸ್ವಜನರಲ್ಲಿ ದಾಕ್ಷಿಣ್ಯ, ನೌಕರರಲ್ಲಿ ದಯೆ, ದುಷ್ಟರಲ್ಲಿ ಶಾಠ್ಯ (ಅಪ್ರಿಯವಾಗಿ ವರ್ತಿಸುವುದು), ಸುಸ್ವಭಾವದವರಲ್ಲಿ ಪ್ರೀತಿ, ರಾಜಮಾರ್ಗದವರಲ್ಲಿ ಕಾಯದೆಬದ್ಧವಾದ ನಡತೆ, ವಿದ್ವಾಂಸರಲ್ಲಿ ಮುಚ್ಚುಮರೆ ಇಲ್ಲದಿರುವುದು, ಶತ್ರುಗಳಲ್ಲಿ ಶೌರ್ಯ, ಹಿರಿಯರಲ್ಲಿ ಕ್ಷಮೆ, ಸ್ತ್ರೀಯರಲ್ಲಿ ಪ್ರಾಗಲ್ಭ್ಯ (ವಶವರ್ತಿಯಾಗದಿರುವುದು)–ಎಂಬ ಕಲೆಗಳಲ್ಲಿ ಯಾವಾಗಲೂ ನಿಪುಣರಾಗಿರುವವರಿಗೆ ಮಾತ್ರ ಲೋಕಮರ್ಯಾದೆ ಸಿಗುತ್ತದೆ.

೮೮. ಈ ಸ್ನೇಹಸಾರವು ಬಡವ–ಬಲ್ಲಿದರಿಬ್ಬರಿಗೂ ಸರಿಸಮ; ಇದು ಗಂಧ ಮತ್ತು ಲವಂಚದ ಮುಲಾಮುಗಳಿಲ್ಲದೆ ತಯಾರಿಸಿದ ಎದೆಲೇಪ.

೮೯. ಬಡತನದಿಂದ ಮಾನವನು ನಾಚಿಕೆಗೊಳಗಾಗುವನು: ನಾಚಿಕೆಯಲ್ಲಿ ಮುಳುಗಿದವನು ನಿಸ್ತೇಜನಾಗುವನು; ನಿಸ್ತೇಜತೆಯಿಂದ (ಮುಂದೆ) ಆತನು ಅವಮಾನಿತನಾಗುವನು; ಅವಮಾನದಿಂದ ಮನಸ್ಸಿನಲ್ಲಿ ಅವನು ಕುಸಿದುಹೋಗುವನು. ಮನಸ್ಸಿನ ಕುಸಿತದಿಂದ ಆತ ದುಃಖಕ್ಕೀಡಾಗುವನು; ದುಃಖದಲ್ಲಿ ಮಗ್ನನಾದವನು ಬುದ್ಧಿಯನ್ನು ಕಳೆದುಕೊಳ್ಳುವನು; ಬುದ್ಧಿಹೀನನು ನಾಶಹೊಂದುವನು: ಆಹಾ, ಬಡತನವು ಸರ್ವಸಂಕಟಗಳ ಮೂಲ!

೯೦. ಚಾಡಿಕೋರನು ಕೀರ್ತಿಯ ಪರಿಮಳಕ್ಕೆ ಬೆಳ್ಳುಳ್ಳಿ, ಶಾಂತಿಯ ತಂಪಿಗೆ ಬೆಂಕಿ, ಮರುಕದ ಹೂವಿಗೆ ಬಾನು (ಆಶ್ರಯ ಕೊಡದವನು); ಇಂಥವನನ್ನು ಯಾರು ವರ್ಣಿಸಬಲ್ಲರು?

೯೧. ಸುಳ್ಳು ಹೇಳುವುದಕ್ಕಿಂತ ಸುಮ್ಮನಿರುವುದೇ ಲೇಸು; ಪರಸ್ತ್ರೀ ಸಹವಾಸಕ್ಕಿಂತ ಪುರುಷರಿಗೆ ನಪುಂಸಕತೆಯೇ ಲೇಸು: ಚಾಡಿಕೋರರ ಮಾತಿನಲ್ಲಿ ಆಸಕ್ತಿ ವಹಿಸುವುದಕ್ಕಿಂತ ಪ್ರಾಣಬಿಡುವುದೇ ಒಳ್ಳೆಯದು; ಪರರ ಆಸ್ತಿಯನ್ನು ಸವಿಯುವ ಸುಖಕ್ಕಿಂತ ಬೇಡಿ ತಿನ್ನುವುದೇ ಉತ್ತಮ.

೯೨. ಶಾಸ್ತ್ರಗಳನ್ನು ಕಲಿತರೂ ಮೂರ್ಖರಾಗುತ್ತಾರೆ. (ಕಲಿತುದನ್ನು) ಕೃತಿಯಲ್ಲಿ ಮಾಡಿ ತೋರಿಸುವವನೇ ಗಂಡಸು, ವಿದ್ವಾಂಸ; (ಮನದಲ್ಲಿ) ನೆನೆಸಿಕೊಂಡ ಔಷಧವು ಹೆಸರು ಹೇಳಿದ ಕೂಡಲೇ ರೋಗಿಯನ್ನು ಆರೋಗ್ಯವಂತನನ್ನಾಗಿ ಮಾಡುವುದೇ?

೯೩. ಉಪಕಾರ ಮಾಡದವನಿಗೆ ಉಪಕಾರ ಮಾಡುವುದು, (ಪರರಿಗೆ) ಪ್ರಿಯವಾದ ಕೆಲಸಗಳನ್ನು ಮಾಡುವುದು, (ಇತರರು) ಮಾಡಿದುದನ್ನು ನೆನಪಿಟ್ಟುಕೊಳ್ಳುವುದು ಮತ್ತು ಪತಿತರನ್ನು ಉದ್ಧಾರ ಮಾಡುವುದು ಸತ್ಕುಲಪ್ರಸೂತರಿಗೆ (ಸುಸಂಸ್ಕೃತರಿಗೆ) ತಕ್ಕಂಥವುಗಳು.

आसन्नमेव नृपतिर्भजते मनुष्यं
विद्याविहीनमकुलीनमसंस्तुतं वा ।
प्रायेण भूमिपतयः प्रमदा लताश्च
यः पार्श्वतो वसति तं परिवेष्टयन्ति ॥९४॥

मायाविनिमयविभ्रमनिन्हववैचित्त्यकूटकपटानाम् ।
सञ्चयदुर्गपिशाचः सर्वहरो मूलकारणं लोभः ॥९५॥

क्षुत्क्षामस्तनयो वधूः परगृहप्रेष्यावासन्नः सुहृत्
दुग्धा गौरशनाद्यभावविवशाहम्बारवोद्गारिणी ।
निष्पथ्यौ पितरावदूरमरणौ स्वामी द्विषन्निर्जितो
दृष्टो येन परं न तस्य निरये प्राप्तव्यमस्त्यप्रियम् ॥९६॥

हालाहलं खलु पिपासति कौतुकेन
कालानलं परिचुचुम्बिषति प्रकामम् ।
व्यालाधिपं च यतते परिरब्धुमद्धा ।
यो दुर्जनं वशयितुं कुरुते मनीषाम् ॥९७॥

केयूराणि न भूषयन्ति पुरुषं हारा न चन्द्रोज्वला
न स्नानं न विलेपनं कुसुमं नालङ्कृता मूर्धजाः ।
वाण्येका समलङ्करोति पुरुषं या संस्कृता धार्यते
क्षीयन्तेऽखिलभूषणानि सततं वाग्भूषणं भूषणम् ॥९८॥

अकुर्वंतोऽपि पापानि शुचयः पापसंश्रयात् ।
परपापैनार्विनश्यन्ति मत्स्या नगह्रदे यथा ॥९९॥

अदृष्टगुणदोषाणामध्रुवाणां च कर्मणाम्
नान्तरेण क्रियां तेषां फलमिष्टं प्रवर्तत्ते ॥१००॥

೯೪. ಹತ್ತಿರ ಇರುವವನು ವಿದ್ಯಾಹೀನ, ಕುಲಹೀನ (ಅಸಂಸ್ಕೃತ) ಅಥವಾ ಅಯೋಗ್ಯನಾಗಿದ್ದರೂ ದೊರೆ ಆತನನ್ನೇ ಅವಲಂಬಿಸುತ್ತಾನೆ; ದೊರೆಗಳೂ ಯುವತಿಯರೂ, ಬಳ್ಳಿಗಳೂ, ಬಹುಶಃ ಹತ್ತಿರ ಇರುವವನನ್ನು ಸುತ್ತಿಕೊಳ್ಳುತ್ತಾರೆ!

೯೫. ಸುಳ್ಳು ಹೇಳುವುದು, ಅದಲುಬದಲು ಮಾಡುವುದು, ಸುತ್ತು ಹಾಕುವುದು, ಅಡಗಿಸಿಕೊಳ್ಳುವುದು, ಗೊಂದಲ ಮಾಡುವುದು, ದಗ ಹಾಕುವುದು, ಮೋಸ ಮಾಡುವುದು ಎಂಬೀ ಎಲ್ಲವುಗಳಿಗೂ ಕೂಡಿಡುವಿಕೆ ಎಂಬ ಕೋಟೆಯನ್ನಾಕ್ರಮಿಸಿರುವ ಲೋಭ ಎಂಬ ಪಿಶಾಚವೇ ಮೂಲಕಾರಣ.

೯೬. ಮಗ ಹಸಿದಿರುವುದನ್ನು, ಹೆಂಡತಿ ಇನ್ನೊಬ್ಬರ ಮನೆಯಲ್ಲಿ ಕೆಲಸಕ್ಕೆ ಆಳಾಗಿ ಹೋಗುವುದನ್ನು, ಗೆಳೆಯ ಸಾಯುವುದನ್ನು, ಕರೆದ ಹಸು ಆಹಾರ ಮುಂತಾದವುಗಳಿಲ್ಲದೆ ನಿತ್ರಾಣ ಹೊಂದಿ ಅಂಬಾ ಎಂದು ಕೂಗುವುದನ್ನು, ಸಾವು ಬಹಳ ದೂರದಲ್ಲಿಲ್ಲದ ತಾಯಿ–ತಂದೆಗಳು (ಅತಿ ಮುದುಕರು) ಪಥ್ಯವಿಲ್ಲದೆ ಇರುವುದನ್ನು ಮತ್ತು ಒಡೆಯನು ಹಗೆಯಿಂದ ಸೋತು ಹೋಗುವುದನ್ನು ಕಾಣುವಂತಾದವನಿಗೆ ನರಕಕ್ಕೆ ಹೋಗಿ ಹೊಂದಬೇಕಾದ ಹೆಚ್ಚಿನ ಅಪ್ರಿಯ ಅನುಭವ ಇನ್ನಾವುದೂ ಇಲ್ಲ!

೯೭. ದುಷ್ಟರನ್ನು ವಶಕ್ಕೆ ತರಲು ಆಲೋಚಿಸುವವನು–ಕುತೂಹಲದಿಂದ ಹಾಲಾಹಲ ಕುಡಿಯಲು ಬಯಸುತ್ತಾನೆ. ಯಥೇಷ್ಟವಾಗಿ ಪ್ರಳಯಾಗ್ನಿಗೆ ಮುತ್ತಿಡಲು ಆಶಿಸುತ್ತಾನೆ; ನಿಜವಾಗಿಯೂ ಆತನು ನಾಗರಹಾವುಗಳ ಅರಸನನ್ನು ಅಪ್ಪಿಕೊಳ್ಳಲು ಪ್ರಯತ್ನಿಸುತ್ತಾನೆ!

೯೮. ತೋಳುಬಂದಿಗಳಾಗಲಿ, ಚಂದ್ರನಂತೆ ಹೊಳೆಯುವ ಸರಗಳಾಗಲಿ, ಸ್ನಾನವಾಗಲಿ, ಪರಿಮಳದ್ರವ್ಯಗಳ ಲೇಪನವಾಗಲಿ, ಹೂವಾಗಲಿ, ಕೂದಲಿನೊಪ್ಪವಾಗಲಿ ಮಾನವನಿಗೆ ಶೋಭೆ ತರುವುದಿಲ್ಲ; ಅವನಲ್ಲಿರುವ ಸುಸಂಸ್ಕೃತವಾದ ವಾಕ್ ಶಕ್ತಿಯೊಂದೇ ಅವನಿಗೆ ಸರಿಯಾದ ಶೋಭೆ ಉಂಟುಮಾಡಬಲ್ಲದು: ಇತರ ಒಡವೆಗಳೆಲ್ಲವೂ ಎಂದಾದರೂ ನಶಿಸಿಹೋಗತಕ್ಕಂಥವುಗಳೇ; ವಾಗ್ಮಿತ್ವ ಎಂಬ ಆಭರಣವೊಂದೇ ನಿಜವಾದ ಆಭರಣ (ಏಕೆಂದರೆ, ಅದು ಸಾಯುವ ತನಕ ಇರಬಲ್ಲದು.)

೯೯–೧೦೦. ತಾವೇ ಪಾಪ ಮಾಡದಿದ್ದರೂ, ಪಾಪಿಗಳನ್ನು ಆಶ್ರಯಿಸಿದ್ದರಿಂದ ನಿರ್ಮಲ ಸ್ವಭಾವದವರು, ಇತರರ ಪಾಪಗಳಿಂದ, ಆನೆಹೊಂಡದಲ್ಲಿರುವ ಮೀನುಗಳಂತೆ, ನಾಶ ಹೊಂದುತ್ತಾರೆ. ಗುಣ–ದೋಷ ಗೊತ್ತಿಲ್ಲದ ಮತ್ತು ಚಿರಸ್ಥಾಯಿಯಲ್ಲದ ಕೆಲಸಗಳಿಗೆ ಮತ್ತೇನಾದರೂ ಒಂದನ್ನು (ಆಮೇಲೆ) ಮಾಡದೆ, ಬಯಸಿದ ಫಲ ಉಂಟಾಗದು.

## ಅಧ್ಯಾಯ ೪
# ಮಹಾನಾಯಕರು

सर्वातिरिक्तसारेण सर्वतेजोऽभिभाविन।
स्थितः सर्वोन्नतेनोर्वीं क्रान्त्वा मेरुरिवात्मना ॥१॥

प्रजानामेव भूत्यर्थं स ताभ्यो बलिमग्रहीत् ।
सहस्त्रगुणमुत्स्त्रष्टुमादत्ते हि रसं रविः ॥२॥

जुगोपात्मानमत्रस्तो भेजे धर्ममनातुरः ।
अगृध्नुराददे सोऽर्थमसक्तः सुखमन्वभूत् ॥३॥

स्थित्यै दण्डयतो दण्ड्यान् परिणेतुः प्रसूतये ।
अप्यर्थकामौ तस्यास्तां धर्म एव मनिषिणः ॥४॥

दुदोह गां स यज्ञाय सस्याय मघवा दिवम् ।
सम्पद्विनिमयेनोभौ दधतुर्भुवनत्रयम् ॥५॥

यथाप्रह्लादनाच्चन्द्रः प्रतापात्तपनो यथ।
तथैव सोऽभूदन्वर्थो राजा प्रकृतिरञ्जनात् ॥६॥

रघुवंशप्रदीपेन तेनाप्रतिमतेजसा ।
रक्षगृहगता दीपाः प्रत्यादिष्टा इवाभवत् ॥७॥

# ಅಧ್ಯಾಯ ೪
# ಮಹಾನಾಯಕರು

೧. ಎಲ್ಲ ಪ್ರಾಣಿಗಳಿಗಿಂತಲೂ ಅಧಿಕಬಲನಾಗಿ ಎಲ್ಲ ಪ್ರಾಣಿಗಳ ತೇಜಸ್ಸನ್ನೂ ಮೀರಿಸುವ, ಎಲ್ಲರಿಗಿಂತಲೂ ಎತ್ತರವಾದ ಶರೀರವುಳ್ಳ ದಿಲೀಪನು ಮೇರುಪರ್ವತದಂತಿದ್ದನು.

೨. ಅವನು ಉತ್ಪನ್ನದ ಆರನೆಯ ಒಂದಂಶದಷ್ಟನ್ನು ಪ್ರಜೆಗಳ ಅಭಿವೃದ್ಧಿಗಾಗಿಯೇ ಕಂದಾಯರೂಪದಲ್ಲಿ ತೆಗೆದುಕೊಳ್ಳುತ್ತಿದ್ದನು; ಸೂರ್ಯನು ಒಂದಕ್ಕೆ ಸಾವಿರದಷ್ಟು ಹಿಂದಿರುಗಿ ಕೊಡಲೆಂದೇ ನೀರನ್ನು (ಆವಿಯ ರೂಪದಲ್ಲಿ) ತೆಗೆದುಕೊಳ್ಳುತ್ತಾನಷ್ಟೇ!

೩. ಹೆದರದ ದೊರೆ ತನ್ನ ಶರೀರವನ್ನು ಕಾಯ್ದುಕೊಂಡಿದ್ದನು: ಕಾಹಿಲೆ ಇಲ್ಲದ ಆತನು ಪುಣ್ಯಕರ್ಮವನ್ನು ಮಾಡಿದನು; ದುರಾಶೆಯಿಲ್ಲದ ಆತ ದ್ರವ್ಯಾರ್ಜನೆ ಮಾಡಿದನು; ಅನಾಸಕ್ತನಾಗಿ ಸುಖವನ್ನು ಅನುಭವಿಸಿದನು.

೪. ಲೋಕಪಾಲನೆಗಾಗಿ ದೊರೆ ಶಿಕ್ಷಾರ್ಹರನ್ನು ಶಿಕ್ಷಿಸಿದನು; ಸಂತಾನ ಲಾಭಕ್ಕಾಗಿ ಮದುವೆಯಾದನು; ಆದುದರಿಂದ ವಿದ್ವಾಂಸನಾದ ಆ ದೊರೆಗೆ ಅರ್ಥಕಾಮಗಳು ಕೂಡ ಧರ್ಮಸ್ವರೂಪದವುಗಳೇ ಆದವು.

೫. (ಸತ್ಪಾತ್ರದಾನಪ್ರಧಾನವಾದ) ಯಜ್ಞಕ್ಕಾಗಿ ದಿಲೀಪದೊರೆಯು ಭೂಕಂದಾಯವನ್ನು ವಸೂಲು ಮಾಡಿದನು; ದೇವೇಂದ್ರನು ಸಸ್ಯಗಳ ಬೆಳವಣಿಗೆಗಾಗಿ ಆಕಾಶದಿಂದ ಮಳೆಯನ್ನು ಸುರಿಸಿದನು. ಹೀಗೆ ಈ ಇಬ್ಬರು ತಮ್ಮ ತಮ್ಮ ಸಂಪತ್ತುಗಳ ವಿನಿಮಯದಿಂದ ಮೂರುಲೋಕಗಳನ್ನು ಹೊರೆದರು.

೬. ಆಹ್ಲಾದವನ್ನುಂಟುಮಾಡುವುದರಿಂದ ಚಂದ್ರನು ಚಂದ್ರನೆನ್ನಿಸಿದಂತೆ ಮತ್ತು ಸೂರ್ಯನು ಉರಿಯನ್ನುಂಟುಮಾಡುವುದರಿಂದ ತಪನನೆನ್ನಿಸಿದಂತೆ ರಘು ರಾಜನು ಪ್ರಜಾಹಿತವನ್ನು ಸಾಧಿಸುತ್ತಿದ್ದುದರಿಂದ ರಾಜನೆಂಬ ಅನ್ವರ್ಥನಾಮಕ್ಕೆ ಪಾತ್ರನಾದನು.

೭. ಹೋಲಿಕೆಯಿಲ್ಲದ ತೇಜಸ್ಸಿನಿಂದ ಕೂಡಿದ ರಾಮಚಂದ್ರನ ಎದುರಿಗೆ ಪ್ರಸೂತಿಗೃಹದ ದೀಪಗಳು ಮಂದಪ್ರಭವಾದವು.

एको दाशरथिःकामं यातुधानाः सहस्रशः
ते तु यावन्त एवाजौ तावांश्च ददृशे स तै : ॥८॥

श्रुताप्सरोगीतिरपि क्षणेऽस्मिन्
हरः प्रसंख्यानपरो बभूव ।
आत्मेश्वराणां न हि जातु विघ्नाः
समाधिभेदप्रभवो भवन्ति ॥९॥

तपः परामर्शविवृद्धमन्यो
र्भ्रूभङ्गदुष्प्रेक्षमुखस्य तस्य ।
स्फुरन्नुदर्चिः सहसा तृतीया–
दक्ष्णः कृशानुः किल निष्पपात ॥१०॥

स हि देवः परं ज्योतिस्तमः पारे व्यवस्थितम् ।
परिच्छिन्नप्रभावर्द्धिर्न मया न च विष्णुना ॥११॥

असम्पदस्तस्य वृषेण गच्छतः
प्रभिन्नदिग्वारणवाहनो वृषा ।
करोति पादावुपगम्य मौलिना
विनिद्रमन्दाररजोरुणाङ्गुली ॥१२॥

अकिञ्चनः सन् प्रभवः स सम्पदां
त्रिलोकनाथः पितृसद्मगोचरः ।
स भीमरूपः शिव इत्युदीर्यते
न सन्ति थार्थ्यविदः पिनाकिनः ॥१३॥

विभूषणोद्भासि पिनद्धभोगि वा
गजाजिनालम्बि दुकूलधारि वा ।
कपालि वा स्यादाथवेन्दुशेखरं
न विश्वमूर्तेरवधार्यते वपुः ॥१४॥

೮. ರಾಮನು ಒಬ್ಬ, ರಾಕ್ಷಸರು ಸಾವಿರಾರು; ಆದರೆ ಯುದ್ಧದಲ್ಲಿ ಅವರಿಗೆ ತಮ್ಮಷ್ಟೇ ಸಂಖ್ಯೆಯಲ್ಲಿ ಅವನು ಕಾಣಿಸಿಕೊಂಡನು.

೯. ವಸಂತ ಋತುವಿನ ಆರಂಭ ಕಾಲದಲ್ಲಿ ದಿವ್ಯಸುಂದರಿಯರ ಗಾನವನ್ನು ಕೇಳಿದರೂ ಹರನು ಆತ್ಮಾನುಸಂಧಾನಪರನಾದನು; ಮನಸ್ಸಿನ ಮೇಲೆ ನಿಯಂತ್ರಣವುಳ್ಳವರಿಗೆ ಎಂದೂ ಎಡರುಗಳು ಸಮಾಧಿಯನ್ನು ಭಂಗಿಸುವುದರಲ್ಲಿ ಶಕ್ತವಾಗುವುದಿಲ್ಲ.

೧೦. ತನ್ನ ತಪಸ್ಸಿಗೆ ತೊಂದರೆಯನ್ನುಂಟುಮಾಡಿದ್ದರಿಂದ ಹೆಚ್ಚಿದ ಕೋಪವನ್ನುಳ್ಳ ಮತ್ತು ಗಂಟಿಕ್ಕಿದ ಹುಬ್ಬಿನಿಂದ ನೋಡಲಸಾಧ್ಯವಾದ ಮುಖವುಳ್ಳ ಶಿವನ ಮೂರನೆಯ ಕಣ್ಣಿನಿಂದ ಮೇಲೆದ್ದ ಉರಿಗಳಿಂದೊಡಗೂಡಿದ ಬೆಂಕಿಯು ಕೂಡಲೇ (ಮನ್ಮಥನನ್ನು ಸುಡಲು) ಹೊರಬಿದ್ದಿತು.

೧೧. ಆ ಶಿವನು ಪರಂಜ್ಯೋತಿಃಸ್ವರೂಪವನು; ಅವನು ತಮಃಸಾಗರದ ಆಚೆಯ ದಡದಲ್ಲಿದ್ದಾನೆ. ಆ ದೇವನ ಮಹಿಮಾತಿಶಯದ ಆಳವನ್ನು ಅಳೆಯಲು ನಾನೂ (ಬ್ರಹ್ಮನೂ) ಶಕ್ತನಲ್ಲ, ವಿಷ್ಣುವೂ ಶಕ್ತನಲ್ಲ.

೧೨. ಬಡವನಾಗಿ ಎತ್ತನ್ನು ಹತ್ತಿಕೊಂಡು ಹೋಗುವ ಶಿವನ ಪಾದಗಳೆಡೆಗೆ ಹೋಗಿ, ಮದಿಸಿದ ದಿಗ್ಗಜವಾದ ಐರಾವತವನ್ನೇರಿದ ಇಂದ್ರನು ಅವುಗಳ ಬೆರಳುಗಳಿಗೆ ಅರಳಿದ ಮಂದಾರ ಹೂಗಳ ರೇಣುಗಳನ್ನು ಬಳಿಯುತ್ತಾನೆ.

೧೩. ಶಿವನು ಬಡವನಾಗಿಯೂ ಸಂಪತ್ತಿಗೆ ಕಾರಣನು; ಮೂಲೋಕಗಳ ಒಡೆಯನಾಗಿಯೂ ಸುಡುಗಾಡಿನಲ್ಲಿದ್ದಾನೆ; ಭಯಂಕರಾಕೃತಿಯ ಆತನನ್ನು ಶಿವನೆನ್ನುತ್ತಾರೆ; ಪಿನಾಕವೆಂಬ ಬಿಲ್ಲನ್ನು ಹಿಡಿದ ಅವನ ಸತ್ಯಸ್ವರೂಪವನ್ನು ತಿಳಿದವರಿಲ್ಲ.

೧೪. ಅಷ್ಟಮೂರ್ತಿಯಾದ ಶಿವನ ಶರೀರವು ಆಭರಣಗಳಿಂದ ಅಲಂಕೃತವಾಗಿರಬಹುದು, ಅಥವಾ ಸರ್ಪಗಳನ್ನು ಸುತ್ತಿಕೊಂಡಿರಬಹುದು; ಆನೆಯ ಚರ್ಮವನ್ನು ಉಟ್ಟಿರಬಹುದು ಅಥವಾ ಹತ್ತಿಯ ಬಟ್ಟೆಯನ್ನು ಧರಿಸಿರಬಹುದು; ಬ್ರಹ್ಮ ಕಪಾಲವನ್ನು ಕೈಯಲ್ಲಿ ಹಿಡಿದಿರಬಹುದು ಅಥವಾ ಹಣೆಯಲ್ಲಿ ಚಂದ್ರನನ್ನು ಧರಿಸಿರಬಹುದು; ಅವನ ಶರೀರದ ಸ್ವರೂಪವನ್ನು ಯಾರೂ ನಿರ್ಧರಿಸಿ ಹೇಳಲಾರರು.

उदासितारं निगृहीतमानसैर्
गृहीतमध्यात्मदृशा कथञ्चन ।
बहिर्विकारं प्रकृतेः पृथग्विदुः
पुरातनं त्वां पुरुषं पुराविदः ॥१५॥

अनन्यगुर्वास्तव केन केवलः
पुराणमूर्तेर्महिमावगम्यते ।
मनुष्यजन्माऽपि सुरासुरान्गुणैर्
भवान् भवच्छेदकरैः करोत्यधः ॥१६॥

उपप्लुतं पातुमदो मदोद्धतै
स्त्वमेव विश्वम्भर विश्वमीशिषे ।
ऋते रवेः क्षालयितुं क्षमेत कः
क्षपातमस्काण्डमलीमसं नभः ॥१७॥

करोति कंसादिमहीभृतां वधाज्
जनो मृगाणामिव यत्तव स्तवम् ।
हरे हिरण्याक्षपुरः सरासुर–
द्विपद्विषः प्रत्युत सा तिरस्क्रिया ॥१८॥

अथ वीररसावतारतस्तरसापल्लवितेन चेतसा
जगदद्भुतभूरिसाहसः प्रहसन्नुच्चलति स्म पार्थिवः ॥१९॥

बभार हारावलिमौक्तिकानि
वक्षःस्थलेन स्फटिकोज्वलेन ।
उच्चैः स्थितस्य प्रतिबिम्बितानि
स कुड्मलानीव यशोद्रुमस्य ॥२०॥

೧೫. "ಮನಸ್ಸನ್ನು ನಿಗ್ರಹಿಸಿದ ಯೋಗಿಗಳು ಚಿತ್ತವೃತ್ತಿಗಳನ್ನು ಅಂತರ್ಮುಖ ಮಾಡಿಕೊಂಡ ಅಧ್ಯಾತ್ಮಕ ಕಣ್ಣಿನಿಂದ ಎಷ್ಟೋ ಪ್ರಯಾಸದಿಂದ ನಿನ್ನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ನಿನ್ನನ್ನು ಜಗತ್ತಿನ ಸುಖ–ದುಃಖಗಳಿಂದ ಅತೀತನೆಂದೂ ಸಾಂಖ್ಯೋಕ್ತ ಪ್ರಕೃತಿಯಿಂದ ಪ್ರತ್ಯೇಕನೆಂದೂ ವಿಜ್ಞಾನವೆಂಬ ದಿವ್ಯಜ್ಞಾನದಿಂದ ತುಂಬಿದ ಅನಾದಿ ಪುರುಷನೆಂದೂ ಗತೇತಿಹಾಸವನ್ನು ಬಲ್ಲವರು ತಿಳಿದಿದ್ದಾರೆ" ಎಂಬುದು ವಿಷ್ಣು (ಕೃಷ್ಣ) ವರ್ಣನೆ.

೧೬. "ನಿನಗೆ ಯಾವ ಗುರುವೂ ಇಲ್ಲ. ಅನಾದಿಪುರುಷನಾದ ನಿನ್ನ ಮಹಿಮೆ ಕೇವಲಸ್ವರೂಪದ್ದು. ಅದನ್ನರಿಯಲು ಯಾರಿಗೆ ಸಾಧ್ಯ? ಮಾನವ ಜಾತಿಯಲ್ಲಿ ನೀನು ಹುಟ್ಟಿದರೂ ಭವಬಂಧನಹರವಾದ ಗುಣಗಳಿಂದ ಸುರಾಸುರರನ್ನು ಮೀರಿಸಿದ್ದೀಯೆ"– ಎಂಬುದು ವಿಷ್ಣುಸ್ವರೂಪ.

೧೭. "ಎಲೈವಿಶ್ವರಕ್ಷಕನೇ, ಮದೋನ್ಮತ್ತರಾದ ಜನರಿಂದ ಪೀಡಿತವಾದ ಈ ವಿಶ್ವವನ್ನು ಕಾಪಾಡಲು ನೀನೇ ಸಮರ್ಥನು. ರಾತ್ರಿಯ ಕತ್ತಲಿನಿಂದ ಕಪ್ಪಾದ ಆಕಾಶವನ್ನು ಸೂರ್ಯನಲ್ಲದೆ ಇನ್ನಾರು ಸ್ವಚ್ಛ ಮಾಡಬಲ್ಲರು?"– ವಿಷ್ಣುಸ್ತುತಿ.

೧೮. "ಕಂಸ ಮೊದಲಾದ ದೊರೆಗಳನ್ನು ಸಾಮಾನ್ಯ ಪಶುಗಳನ್ನು ಸಂಹರಿಸಿದಂತೆ ನೀನು ಸಂಹರಿಸಿದ್ದನ್ನು ಜನರು ಹೊಗಳುವುದು ನಿನ್ನನ್ನು ತೆಗಳಿದಂತೆಯೇ ಸರಿ; ಏಕೆಂದರೆ, ಎಲೈ ಹರಿಯೇ, ನೀನು ಹಿರಣ್ಯಾಕ್ಷ ಮುಂತಾದ ಆನೆಗಳಂಥ ಅಸುರರನ್ನು ಕೊಂದವನು!" ವಿಷ್ಣುಸ್ತುತಿ.

೧೯. ಜಗತ್ತಿಗೇ ಆಶ್ಚರ್ಯವನ್ನುಂಟುಮಾಡುವ ಪರಾಕ್ರಮವನ್ನು ಉಳ್ಳದೊರೆ ವಿಕ್ರಮಾಂಕದೇವನು ವೀರರಸದ ಆವಿರ್ಭಾವದ ದೆಸೆಯಿಂದ ಪುಟಿದೆದ್ದ ಹೃದಯದಿಂದ ನಗುತ್ತ ವೇಗವಾಗಿ ಹೊರಟನು.

೨೦. ಆತನು ಸ್ಫಟಿಕದಂತೆ ಪ್ರಕಾಶಮಾನವಾದ ವಕ್ಷಃಸ್ಥಳದಲ್ಲಿ ಹಾರದ ಮುತ್ತುಗಳನ್ನು ಧರಿಸಿದನು; ಅವು ಉನ್ನತ ಸ್ಥಾನದಲ್ಲಿದ್ದ ಅವನ ಕೀರ್ತಿಯೆಂಬ ಮರದ (ಮರ ಬಿಟ್ಟ) ಮೊಗ್ಗುಗಳನ್ನು ಪ್ರತಿಬಿಂಬಿಸಿದವು.

चालुक्यवंशे महतां महीभुजां
महाभुजः शेखरतामसौ गतः ।
न मानुषीमेव निराचकार यः
प्रजासु दैवीमपि चिच्छिदे रुजम् ॥२१॥

अकालमृत्युर्नचचार कुत्रचित्
क्वचिन्न दुर्भिक्षमलक्ष्यत क्षितौ ।
किमन्यदन्यायनिबर्हणो नृपः
स राज्यमिक्ष्वाकुपतेरदर्शयत् ॥२२॥

न भानुरत्यर्थमतापयज्जनं
ववुः समीराः श्रममात्रहारिणः ।
फलानि भङ्क्त्वातिभरेण पादपान्
भियेव पक्वान्यभजन्त पाण्डुताम् ॥२३॥

अहं सदा प्राणसमं महीभुजा–
मयं तु मां वेत्ति नृपस्तृणोपमम् ।
इतीव कर्णेषु सुवर्णमर्थिनां
स्वखेदमाख्यातुमभूत्कृतास्पदम् ॥२४॥

ददौ स दानानि महान्ति षोडश
प्रतापशाली प्रतिपर्व पार्थिवः ।
तदन्तिकाद्दानजलैः सकर्दमा–
न्निपात भीत्येव कलिः पलायितः ॥२५॥

अथ तीव्रतरव्रतस्थितेर्विमलध्याननिवेशितात्मनः ।
उदपद्यत केवलं मुनेः परमं ज्योतिरनाश्रितेन्द्रियम् ॥२६॥

स ददर्श जगत्त्रयं ततो विलसत्केवलबोधसम्पदा ।
अवलुप्ततमः प्रदीपकप्रभयानक्तमिवात्ममन्दिरम् ॥२७॥

೨೧. ಅವನು ಪ್ರಜೆಗಳಲ್ಲಿ ಮಾನವರೂಪದ ಶತ್ರುಬಾಧೆಯನ್ನಷ್ಟೇ ಅಲ್ಲ, ದೈವಿಕ ಆಪತ್ತನ್ನೂ ಪರಿಹರಿಸಿದನು; ಆದುದರಿಂದ ಆ ವಿಕ್ರಮಾಂಕದೇವನು ನೀಳ್ತೋಳಿನವನು ಮತ್ತು ಚಾಲುಕ್ಯ ವಂಶದ ದೊಡ್ಡ ದೊರೆಗಳೆಲ್ಲವರಿಗೂ ಶಿರೋಮಣಿ ಎನ್ನಿಸಿದನು.

೨೨. ಅವನ ರಾಜ್ಯದಲ್ಲಿ ಎಲ್ಲಿಯೂ ಅಕಾಲ ಮರಣ ಉಂಟಾಗಲಿಲ್ಲ. ದುರ್ಭಿಕ್ಷೆ ಒದಗಲಿಲ್ಲ; ಇನ್ನೇನನ್ನು ಬಣ್ಣಿಸಬೇಕು? ಅನ್ಯಾಯ ಪರಿಹಾರಕನಾದ ಆ ದೊರೆಯು ರಾಮರಾಜ್ಯದ (ಸುಖ–ಸಂಪತ್ತುಗಳನ್ನು) ಪ್ರಜೆಗಳ ಅನುಭವಕ್ಕೆ ತಂದುಕೊಟ್ಟನು.

೨೩. ಅವನ ರಾಜ್ಯದಲ್ಲಿ ಸೂರ್ಯನು ಜನರನ್ನು ಬಹಳ ತಾಪಕ್ಕೀಡು ಮಾಡಲಿಲ್ಲ; ಗಾಳಿಯು ಕೇವಲ ಶ್ರಮಪರಿಹಾರಕವಾಗಿ ಬೀಸಿತು; ಗಳಿತ ಹಣ್ಣುಗಳು ಮರಗಳನ್ನು ಬಿರಿದು ಹಾಗೆ ಮಾಡಿದ ತಪ್ಪಿಗೆ ಹೆದರಿಯೋ ಏನೋ ಎಂಬಂತೆ ಬಿಳಚಿಕೊಂಡವು.

೨೪. "ದೊರೆಗಳಿಗೆ ನಾನು ಪ್ರಾಣಕ್ಕೆ ಸಮ; ಆದರೆ ಈ ದೊರೆಯು ನನ್ನನ್ನು ಹುಲ್ಲುಕಡ್ಡಿಗೆ ಸಮನೆಂದು ತಿಳಿಯುತ್ತಾನೆ" ಎಂದು ಬಂಗಾರವು ಬಡವರ ಕಿವಿಗಳಲ್ಲಿ ತನ್ನ ದುಃಖವನ್ನು ತೋಡಿಕೊಳ್ಳತೊಡಗಿತೋ ಏನೋ ಎಂಬಂತಾಯಿತು.

೨೫. ಪ್ರತಾಪಶಾಲಿಯಾದ ಆ ದೊರೆಯು ಪ್ರತಿ ಹುಣ್ಣಿಮೆ–ಅಮಾವಾಸ್ಯೆಗಳಲ್ಲಿಯೂ ೧೬ ದೊಡ್ಡ ದಾನಗಳನ್ನು ಮಾಡಿದನು; ಆ ದಾನೋದಕದ ಕೆಸರಿನ ದೆಸೆಯಿಂದ ತಾನು ಬಿದ್ದುಬಿಟ್ಟೇನೆಂದು ಹೆದರಿಯೋ ಏನೋ ಎಂಬಂತೆ ಕಲಿಯು ಓಡಿಹೋದನು.

೨೬. ತೀಕ್ಷ್ಣವಾದ ತಪಸ್ಸಿನಲ್ಲಿದ್ದು, ನಿರ್ಮಲವಾದ ಧ್ಯಾನದಲ್ಲಿ ತನ್ನ ಆತ್ಮವನ್ನು ಮಗ್ನಗೊಳಿಸಿಕೊಂಡ ನೇಮಿನಾಥ ಮುನಿಗೆ ಇಂದ್ರಿಯಗಳ ಆಶ್ರಯವಿಲ್ಲದ ಕೇವಲ ಸ್ವರೂಪದ ಪರಂಜ್ಯೋತಿಯ ಸಾಕ್ಷಾತ್ಕಾರವಾಯಿತು.

೨೭. ಆತನು ಅನಂತರ, ಕತ್ತಲನ್ನು ಕಳೆದ ದೀಪಪ್ರಭೆಯಿಂದ ಇರುಳನ್ನು ಹೇಗೋ ಹಾಗೆ, ಪ್ರಕಾಶಿಸುವ ಕೇವಲ ಜ್ಞಾನಸಂಪತ್ತಿನಿಂದ ತನ್ನ ಆತ್ಮಮಂದಿರವನ್ನು ನೋಡಿದನು.

सुकृतानवलोक्यसुस्थितान्नरकस्थांश्च विरुद्धकर्मणः ।
मुदमुद्वहति स्म न क्षणं करुणार्द्रो भवति स्म केवली ॥२८॥

अथापगतमानवप्रकृतिरुत्तरैर्दैवतै–
रयुज्यत सचेष्टितैर्दलितकर्ममर्मा जिनः ।
महीरुह इवाखिलच्युतपुराणपत्रावलि–
र्नवैः किसलयोत्करैः कलितचैत्रकालागमः ॥२९॥

आयोजनशतद्वन्द्वमद्भुतात्तप्रभावतः ।
दुर्भिक्षस्यैव सञ्जज्ञे बाधा न प्राणिनां क्वचित् ॥३०॥

ज्ञानदर्शनचारित्राण्यासाद्येवास्य मूर्तताम् ।
अन्यानि त्रीणि वक्त्राणि प्रादुरासन्नमायिनः ॥३१॥

सम्भाव्य एष भवतो भगवान् यवीयां ।
ल्लीलाकलेवरधरः पुरुषः पुराणः ।
यद्भ्रूविभङ्गमनुरुध्य विधातृमुख्या ।
विख्यापयन्यधिकृता विविधाधिकारान् ॥३२॥

देवः स एष नरवेषधरो धराया–
मस्मत्तपः परवशाऽवरजस्तवास्ते ।
समानयैनमिदमीयविभूतिभोगै–
स्तन्मा नय क्रुधममुं न विमानयावाम् ॥३३॥

सुरविजयसमेतं स्वप्रतिज्ञातमेतं
मधुमथनमुपेतं पारिजातेन सार्धम् ।
सपदि समवगत्य प्रत्यगारं गरीयः
किमपि नगरनार्यश्चक्रिरे मङ्गलानि ॥३४॥

सद्वृत्तसर्वंकषयुद्धशौण्डहिंसीरदर्पोद्धरणायधात्रा ।
धात्रीप्रतोषाय समभ्युदायि क्षोणीतले सद्ययनः स एक : ॥३५॥

೨೮. ಅದರಲ್ಲಿ ಕೇವಲಿಯಾದ ಅವನು ಸುಖಿಗಳಾದ ಪುಣ್ಯಾತ್ಮರನ್ನೂ ಪಾಪದಿಂದ ದುಃಖಿಗಳಾದ ಪಾಪಿಗಳು ನರಕಾನುಭವ ಪಡೆಯುತ್ತಿರುವುದನ್ನೂ ಕಂಡು, ಒಂದು ಕ್ಷಣವೂ ಸಂತೋಷಪಡದೆ, ಕರುಣಾರ್ದ್ರಹೃದಯನಾದನು.

೨೯. ಕರ್ಮಮುಕ್ತನಾದ ಆ ಜಿನನು ಮಾನವ ಪ್ರಕೃತಿಯನ್ನು ಬಿಟ್ಟು, ಸಕ್ರಿಯವಾದ ದೇವಗುಣಗಳಿಂದ ಕೂಡಿದವನಾಗಿ, ಹಳೆಯ ಎಲೆಗಳೆಲ್ಲವನ್ನೂ ಕಳೆದುಕೊಂಡು ವಸಂತಾಗಮದಲ್ಲಿ ಹೊಸ ಚಿಗುರುಗಳಿಂದ ಕೂಡಿದ ಮರದಂತಾದನು.

೩೦. ಅವನ ಸುತ್ತಲೂ ಇನ್ನೂರು ಯೋಜನದ ತ್ರಿಜ್ಯೆಯಲ್ಲಿ ಯಾವ ಜೀವಿಗಳಿಗೂ ಅವನ ಅದ್ಭುತವಾದ ಪ್ರಭಾವದ ದೆಸೆಯಿಂದ ದುರ್ಭಿಕ್ಷೆಯಂಥ ಬಾಧೆ ಯಾವುದೂ ಉಂಟಾಗಲಿಲ್ಲ.

೩೧. ನಿರ್ಮಾಯನಾದ ಆ ನೇಮಿನಾಥನಲ್ಲಿ ಜ್ಞಾನ, ದರ್ಶನ, ಚಾರಿತ್ರಗಳು ಮೂರ್ತರೂಪ ಹೊಂದಿ ಮೊದಲಿದ್ದ ಏಕಮುಖದೊಡನೆ ಸೇರಿ ಅವನನ್ನು ಚತುರ್ಮುಖನನ್ನಾಗಿ ಮಾಡಿದವು.

೩೨. ಎಲೈ ಇಂದ್ರನೇ, ಈತನನ್ನು (ಕೃಷ್ಣನನ್ನು) ನೀನು ಕಿರಿಯನೆಂದು ತಿಳಿದುಕೊಳ್ಳುವುದು ಸಹಜ; ಆದರೆ ಇವನು ಲೀಲೆಗಾಗಿ ಶರೀರಧಾರಣ ಮಾಡಿದ ಪುರಾತನ ಪುರುಷನು; ಬ್ರಹ್ಮ ಮುಂತಾದ ದೇವತೆಗಳು ಈತನ ಹುಬ್ಬಿನ ಸನ್ನೆಯ ಪ್ರಕಾರ ವಿವಿಧ ಅಧಿಕಾರಗಳನ್ನು ಪಡೆದು ನಡೆಸುತ್ತಿದ್ದಾರೆ.

೩೩. ಈತನು ನರವೇಷಧರನಾದ ದೇವನು; ನನ್ನ ತಪಸ್ಸಿಗೆ ಪರವಶನಾಗಿ ನಿನ್ನ ಅನುಜನಾದನು. ಈ ಐಶ್ವರ್ಯಭೋಗಗಳಿಂದ ಈತನನ್ನು ಸತ್ಕರಿಸು. ಇವನನ್ನು ಸಿಟ್ಟಿಗೆಬ್ಬಿಸಬೇಡ ಮತ್ತು ನಮ್ಮಿಬ್ಬರಿಗೆ ಅವಮಾನವನ್ನು ಉಂಟುಮಾಡಬೇಡ.

೩೪. ಮಧುಸೂದನನಾದ ಕೃಷ್ಣನು ದೇವತೆಗಳನ್ನು ಗೆದ್ದು ತನ್ನ ಪ್ರತಿಜ್ಞಾನುಸಾರವಾಗಿ ಪಾರಿಜಾತದೊಡನೆ ಊರಿಗೆ ಮರಳಿಬಂದುದನ್ನು ತಿಳಿದಕೂಡಲೇ ನಗರದ ನಾರಿಯರೆಲ್ಲರೂ ಮನೆಮನೆಯಲ್ಲಿ (ಬಾಗಿಲೆದುರು) ಅದ್ಭುತರೀತಿಯಿಂದ ಮಂಗಲಾರತಿಯನ್ನು ಅವನಿಗೆ ಎತ್ತಿದರು.

೩೫. ಸಜ್ಜನರನ್ನು ಯುದ್ಧಮಾಡಿ ಕೊಲ್ಲುವುದರಲ್ಲಿ ಪ್ರಾವೀಣ್ಯ ಉಳ್ಳವರ ಸೊಕ್ಕನ್ನು ಮುರಿಯಲೆಂದು ಮತ್ತು ಅದರಿಂದ ಭೂದೇವಿಗೆ ಸಂತಸ ಉಂಟಾಗಲೆಂದು ಸಜ್ಜನರಕ್ಷಕನೂ (ಪರಾಕ್ರಮದಲ್ಲಿ) ಏಕಮೇವಾದ್ವಿತೀಯನೂ ಆದ ರಾಮ (ಅಥವಾ ನಳ) ಭೂಲೋಕದಲ್ಲಿ ಬ್ರಹ್ಮನಿಂದ ಹುಟ್ಟುವಂತಾದನು.

कपिकच्छूः शत्रूणां मित्राणामास पाटीरः ।
कल्पतरुर्दीनानां वनीपकानां स वीरसेनसुतः ॥३६॥

घटदोहिन्यो गावः फलपूर्णा विदिद्युते वसुधा ।
व्यसनानि पुष्कसमपि त्यक्त्वारण्यं प्रयातानि ॥३७॥

निःस्वेदत्वादिभिस्तस्य सहजैर्दशभिर्गुणैः ।
बभासे भुवनोद्भासि वपुर्भास्करभासुरम् ॥३८॥

व्यहरद्यत्र यत्रासौ तत्र तत्र सुभिक्षता ।
अजायत जनप्रीत्यै योजनानां शतद्वये ॥३९॥

गगने गमनं तस्य सर्वेषामपि हृष्टये ।
बभूव प्राणिनां प्राणिविरोधेन विवर्जितम् ॥४०॥

चतुराननतारूपमहातिशयशालिनः
चतुरा न नता तस्य काभ्युत्थाय स्वयं प्रजा ॥४१॥

भोगे रोगे काञ्चने वा तृणे वा
मित्रे शत्रौ पत्तने वा वने वा ।
देवो दृष्टिं निर्विशेषं दधानोऽ
प्येकः सीमासीद्विशेषज्ञतायाः ॥४२॥

तथ्यं पथ्यां चेदभाषिष्ट किंचित्
सिद्धं शुद्धं चेदभुङ्क्तान्यदत्तम् ।
मुक्त्वा नक्तं चेदयासीत् स पश्यन्
सर्वं किंचित् तस्य शास्त्रानुरोधि ॥४३॥

निर्व्यामोहो निर्मदो निष्प्रपञ्चो ।
निःसङ्गोऽपं निर्भयो निर्ममश्च ।
देशे देशे पर्यटन् संयतानां
केषां नासीन्मोक्षशिक्षैकहेतुः ॥४४॥

೩೬. ರಾಮ (ಅಥವಾ ನಳ) ಹಗೆಗಳಿಗೆ ನಸುಗುನ್ನಿ (ಚುರುಚಿ), ಗೆಳೆಯರಿಗೆ ಮಲಯ ಮಾರುತ, ಬೇಡುವ ದೀನರಿಗೆ ಕಲ್ಪವೃಕ್ಷ ಆಗಿದ್ದನು; ಅಲ್ಲದೆ, ಅವನು ಪರಾಕ್ರಮಶಾಲಿಯಾದ ಸೈನ್ಯ ಉಳ್ಳ ದೊರೆಯ ಮಗನೆನ್ನಿಸಿದ್ದನು.

೩೭. ರಾಮ (ನಳ) ರಾಜ್ಯಭಾರ ಮಾಡುತ್ತಿದ್ದಾಗ, ಹಸುಗಳು ಕೊಡವಾಲಕೊಟ್ಟವು. ಭೂಮಿಯು ಫಲಪೂರ್ಣವಾಗಿ ಪ್ರಕಾಶಿಸಿತು ಮತ್ತು ದುರ್ವ್ಯಸನಗಳು ಚಂಡಾಲನನ್ನು ಕೂಡ ಬಿಟ್ಟು ಕಾಡಿಗೆ ಹೋದವು.

೩೮. ಚಂದ್ರಪ್ರಭಮುನಿಯ ಮೈಯು ಬೆವರಿಲ್ಲದಿರುವಿಕೆಯೇ ಮೊದಲಾದ ಹತ್ತು ಹುಟ್ಟುಗುಣಗಳಿಂದ ಕೂಡಿದ್ದೂ ಜಗತ್ತಿಗೇ ಬೆಳಕನ್ನು ಕೊಡುವಂಥದ್ದೂ ಸೂರ್ಯನಷ್ಟು ಪ್ರಕಾಶಮಾನವಾದದ್ದೂ ಆಗಿ ಹೊಳೆಯಿತು.

೩೯. ಆತನು ಎಲ್ಲೆಲ್ಲಿ ವಿಹರಿಸಿದನೋ ಅಲ್ಲಲ್ಲಿ ಎರಡು ಯೋಜನಗಳ ತ್ರಿಜ್ಯೆಯಲ್ಲಿ ಜನಪ್ರೀತಿಗಾಗಿ ಸುಭಿಕ್ಷೆ ಉಂಟಾಯಿತು.

೪೦. ಅವನ ಆಕಾಶಗಮನವು ಎಲ್ಲರಿಗೂ ಸಂತೋಷವನ್ನು ಉಂಟುಮಾಡಿತು; ಪ್ರಾಣಿ–ಪ್ರಾಣಿಗಳಲ್ಲಿ ಪರಸ್ಪರ ವಿರೋಧವಿಲ್ಲದಂತಾಯಿತು.

೪೧. ಚತುರ್ಮುಖಬ್ರಹ್ಮನಂಥ ರೂಪಾತಿಶಯದಿಂದ ಕೂಡಿದ ಆ ಮುನಿಯನ್ನು (ಕಂಡು) ಜಾಣನಾದ ಯಾವನು ತಾನೇ ಎದ್ದು ನಮಸ್ಕರಿಸದೆ ಉಳಿದಿದ್ದನು?

೪೨. ಭೋಗ–ರೋಗ, ಚಿನ್ನ–ಹುಲ್ಲುಕಡ್ಡಿ, ಹಗೆ–ಗೆಳೆಯ, ಪಟ್ಟಣ–ವನ ಎಂಬಿವುಗಳನ್ನು ಸಮಾನವೆಂದು ಧರ್ಮನಾಥದೇವನು ತಿಳಿದನು. ಅವನ ವಿಶೇಷಜ್ಞತೆಗೆ ಇದೊಂದೇ ಗಡಿಗೆರೆಯಾಗಿತ್ತು.

೪೩. ಆತನು ಸತ್ಯವೂ ಪಥ್ಯವೂ ಆದದ್ದೇನಾದರೂ ಇದ್ದರೆ ಅದನ್ನು ಹೇಳುತ್ತಿದ್ದನು; ಯಾರಾದರೂ ಬಡಿಸಿದ ಪಕ್ವವೂ ಪರಿಶುದ್ಧವೂ ಆದುದೇನಾದರೂ ಇದ್ದರೆ ಅದನ್ನು ಉಣ್ಣುತ್ತಿದ್ದನು; ಇರುಳನ್ನುಳಿದು ಬೇರೆ ಕಾಲವೇನಾದರೂ ಇದ್ದರೆ ಅದನ್ನು ಗಮನಿಸಿ ತಿರುಗಾಡಲು ಹೋಗುತ್ತಿದ್ದನು; ಅವನ ಕೆಲಸ ಏನಿದ್ದರೂ ಅವೆಲ್ಲವೂ ಶಾಸ್ತ್ರಾನುಸಾರವಾಗಿದ್ದವು.

೪೪. ಧರ್ಮನಾಥನು ವ್ಯಾಮೋಹ, ಮದ, ಪ್ರಪಂಚದ ಮೇಲಿನ ಆಸೆ ಸಹವಾಸದ ಬಯಕೆ, ಭಯ, ಮಮಕಾರಗಳನ್ನು ಬಿಟ್ಟು ದೇಶ–ದೇಶಗಳಲ್ಲಿ ಸಂಚರಿಸುತ್ತಿದ್ದಾಗ, ಸಂಯಮಶೀಲರಾದ ಯಾರಿಗೆ ಮೋಕ್ಷಶಿಕ್ಷಣವನ್ನು ಪಡೆಯಲು ಕಾರಣವಾಗದಿದ್ದಾನು?

नो दौर्भिक्षं नेतयो नोपसर्गा
नो दारिद्र्यं नोपघातो न रोगाः ।
तन्माहात्म्याद्योजनानां शते द्वे
नाभूत् किंचित्क्वापि कर्माप्यनिष्टम् ॥४५॥

निष्पन्दाया ज्ञानदृष्टेरिवापुः
पक्ष्मस्पन्दं स्पर्धया नेक्षणानि ।
वृद्धिं प्रापुर्नाङ्गजा वा नखा वा
तस्यावश्यं योगनिद्रास्थितस्य ॥४६॥

भद्राख्यः प्रसदोज्वलश्च सततं यो राजहंसश्रिया
भ्राजिष्णुः सुकुमारतां समगमद्यो वै घनोद्भासितः ।
स श्रीमाञ्जयति प्रकाममसुरश्रेणीकृपाणी हरिर्
गङ्गावद्गजगण्डवद् गगनवद् गाङ्गेयवद् गेयवत् ॥४८॥

गङ्गा पादसरोजपुष्परसति व्यालाधिपस्तत्पति ।
त्रैलोक्यं च कुटुम्बति द्विरसनद्वेषी रथत्यण्डजः ।
कालः शस्त्रति शासनत्यनुदिनं सा वेदवाणी गृह–
त्यब्धिर्यस्य रमाविलासरसिके तास्मिन्न किं सद्गुणाः ॥४८॥

यैः क्रियते जगति बलादक्षतरक्षोभिमानसारोद्धारः ।
से पार्थास्तव दर्पं दक्षतरक्षोभिमानसारोद्धारः ॥४९॥

यः सुतरा ज्यायस्तः पतगानां यस्य दृढतराज्यायस्तः ।
यो न हराज्यायस्तः स च भीमश्च प्रभू स्वराज्याय स्तः ॥५०॥

೪೫. ಅವನ ಸುತ್ತ ೨೦೦ ಯೋಜನಗಳವರೆಗೆ ಅವನ ಪ್ರಭಾವದ ದೆಸೆಯಿಂದ ಈತಿಬಾಧೆ, ಮರಣಸೂಚನೆ, ಬಡತನ, ಅಪಾಯ, ಕಾಹಿಲೆಗಳು ಉಂಟಾಗಲಿಲ್ಲ.

೪೬. ಆತನ ಕಣ್ಣುಗಳು ಸ್ಪಂದಿಸಲು ಪೈಪೋಟಿ ನಡೆಸದೆ ಜ್ಞಾನದೃಷ್ಟಿಯ ನಿಷ್ಪಂದತೆಯನ್ನು ಪಡೆದವು; ಯೋಗನಿದ್ರೆಯಲ್ಲಿದ್ದ ಅವನ ಉಗುರು–ಕೂದಲುಗಳು ಬೆಳೆಯಲಿಲ್ಲ.

೪೭. ಶ್ರೀನಿವಾಸ (ವೆಂಕಟೇಶ) ಗಂಗೆಯಂತೆ ಮಂಗಲವಾದ ಹೆಸರನ್ನುಳ್ಳವನು; ಗಂಗಾಪ್ರವಾಹವೊಂದಕ್ಕೆ ಭದ್ರೆ(=ಮಂಗಲೆ)ಯೆಂಬ ಹೆಸರಿದೆ. ಅವನು ಆನೆಯ ಗಂಡಸ್ಥಳದಂತೆ ಸಂತೋಷ (=ಪ್ರಮದ) ಉಳ್ಳವನಾಗಿದ್ದಾನೆ; ಆನೆಯ ಗಂಡಸ್ಥಳದಲ್ಲಿ ಮದೋದಕವಿದೆಯೆಂಬುದು ಕವಿಸಮಯ ಪ್ರಸಿದ್ಧ. ಆತನು ಆಕಾಶದಂತೆ ರಾಜಶ್ರೇಷ್ಠನ ಸಂಪತ್ತನ್ನು (=ರಾಜಹಂಸ ಶ್ರೀಃ) ಉಳ್ಳವನಾಗಿದ್ದಾನೆ; ಆಕಾಶದ ಸಂಪತ್ತು ಚಂದ್ರಸೂರ್ಯರ ಶೋಭೆ. ಅವನು ಗಂಗೆಯಲ್ಲಿ ಹುಟ್ಟಿದವನಷ್ಟು ಸುಕುಮಾರನು; (ಗಾಂಗೇಯನೆಂದರೆ ಕುಮಾರ ಅಥವಾ ಕಾರ್ತಿಕೇಯ. ಅವನ ಸೌಕುಮಾರ್ಯವು ಪುರಾಣ ಪ್ರಸಿದ್ಧ). ಅವನು ಮೋಡದಂತೆ ಹೊಳೆಯುತ್ತಾನೆ; ಘನವೆಂಬ ವಾದ್ಯದ ಧ್ವನಿಯಂತೆ ಖ್ಯಾತನಾಗಿದ್ದಾನೆ (ಘನ=ಮೋಡ ಮತ್ತು ವಾದ್ಯಭೇದ).

೪೮. ಗಂಗೆಯು ಶ್ರೀನಿವಾಸನ ಪಾದಕಮಲ ಮಕರಂದವಾಗಿದ್ದಾಳೆ; ಹಾವುಗಳ ಒಡೆಯನು ಹಾಸಿಗೆಯಾಗಿದ್ದಾನೆ; ಮೂರುಲೋಕಗಳು ಅವನಿಗೆ ಕುಟುಂಬ ಸ್ಥಾನದಲ್ಲಿವೆ; ಸರ್ಪಶತ್ರುವಾದ ಗರುಡನು ಅವನಿಗೆ ತೇರಾಗಿದ್ದಾನೆ; ಕಾಲವು ಅವನ ಆಯುಧವಾಗಿದೆ; ಯಾವಾಗಲೂ ವೇದವಾಣಿಯು ಅವನ ಅಪ್ಪಣೆಯಾಗಿ ನಡೆದುಕೊಳ್ಳುತ್ತದೆ; ಕಡಲು ಅವನ ಮನೆಯಾಗಿದೆ. ಹೀಗಿರುವಾಗ ಲಕ್ಷ್ಮಿಯ ವಿಲಾಸದಲ್ಲಿ ಅಭಿರುಚಿಯುಳ್ಳ ಅವನಲ್ಲಿ ಯಾವ ಸದ್ಗುಣ ಇಲ್ಲವೆಂದು ಹೇಳಲು ಬಂದೀತು?

೪೯. ಕುಂತಿಯ ಮಕ್ಕಳು ಈ ಲೋಕದಲ್ಲಿ ತಮ್ಮ ಬಲದಿಂದ ರಾಕ್ಷಸರ ಅಭಿಮಾನದ ಸಾರವನ್ನು ಕಿತ್ತೆಸೆದು ಗಾಯಗೊಳ್ಳದೆ ಉಳಿದರು; ಎಲೈ ಕೌರವನೇ, ಅವರು ಪ್ರಕ್ಷುಬ್ಧಮನಸ್ಕರಾಗಿ ಇನ್ನೂ ಹೆಚ್ಚು ದಕ್ಷತೆಯಿಂದ ನಿನ್ನ ಸೊಕ್ಕನ್ನು ತಡೆ ಹಿಡಿಯುತ್ತಾರೆ.

೫೦. ಹಕ್ಕಿಗಳ ಹಿರಿಯನಾದ ಗರುಡನಿಗಿಂತಲೂ ಅರ್ಜುನನು ಹೆಚ್ಚು ವೇಗವುಳ್ಳವನು; ಅವನಿಗೆ ಕಬ್ಬಿಣಕ್ಕಿಂತಲೂ ಹೆಚ್ಚು ದಾರ್ಢ್ಯವುಳ್ಳ ಬಿಲ್ಲಿನ ಹುರಿಯಿದೆ; ಅವನು ಹರನೊಡನೆ ಹೋರಾಡುವಾಗ ಖಿನ್ನನಾಗಲಿಲ್ಲ. ಅಂಥ ಅರ್ಜುನನೂ ಭೀಮನೂ ತಮ್ಮ ರಾಜ್ಯವನ್ನು ಸಂಪಾದಿಸಿಕೊಳ್ಳಲು ಸಮರ್ಥರು.

न सुखं प्रार्थये नार्थमुदन्वद्वीचिचञ्चलम् ।
नानित्यताशने स्त्रस्यन् विविक्तं ब्रह्मण:पदम् ॥५१॥

प्रमार्ष्टुमयशः पङ्कमिच्छेयं छद्मना कृतम् ।
वैधव्यतापितारातिवनितालोचनाम्बुभि : ॥५२॥

कृतं पुरुषशब्देन जातिमात्रावलम्बिना ।
योऽङ्गीकृतगुणै:श्लाघ्यः सविस्मयमुदाहृतः ॥५३॥

ग्रसमानमिवौजांसि सदसा गौरवेरितम् ।
नाम यस्याभिनन्दन्ति द्विषोऽपि स पुमान् पुमान् ॥५४॥

न रागिचेतः परमा विलासिता
वधू:शरीरेऽस्ति न चास्ति मन्मथः ।
नमस्क्रिया चोषसि धातुरित्यहो
निसर्गदुर्बोधमिदं तवेहितम् ॥५५॥

तत्कृतं यन्न केनापि तद्दत्तं यन्न केनचित् ।
तत्साधितमसाध्यं यद्विक्रमार्केण भूभुजा ॥५६॥

धाराधीश धरामहेन्द्रगणनाकौतूहली यामयं
वेधास्त्वद्गणने चकार खटिकाखण्डेन रेखांदिवि ।
सैवेयं त्रिदशापगा समभवत्त्वत्तुल्यभूमीधरा–
भावात्तु त्यजति स्म सोऽयमवनीपृष्टे तुषाराचलः ॥५७॥

೫೧. ಅರ್ಜುನನೆಂದ –"ಕಡಲಲೆಗಳಂತೆ ನಶ್ವರವಾದ ಸುಖವನ್ನಾಗಲಿ, ಅರ್ಥವನ್ನಾಗಲಿ ನಾನು ಬೇಡೆನು; ಅಷ್ಟೇ ಅಲ್ಲ–ನಶ್ವರತೆ ಎಂಬ ಸಿಡಿಲಿಗಂಜಿ, ಬಾಧಾರಹಿತವಾದ ಮುಕ್ತಿಪದವನ್ನೂ ಯಾಚಿಸೆನು."

೫೨. ಅವನು ಮತ್ತೂ ಹೇಳಿದ್ದೇನೆಂದರೆ– "ವೈಧವ್ಯದಿಂದ ಸುಟ್ಟ ಶತ್ರು ಪತ್ನಿಯರ ಕಣ್ಣೀರಿಂದ, ಮೋಸದಿಂದ ನಮ್ಮ ಮೇಲೆ ಎಸೆಯಲಾದ ಅಪಕೀರ್ತಿಯ ಕೆಸರನ್ನು ತೊಳೆಯಬಯಸುತ್ತೇನೆ."

೫೩. "ಪ್ರಾಣಿಗಳಿಗೂ ಮನುಷ್ಯರಿಗೂ ಸಾಧಾರಣವಾದ ಪುಲ್ಲಿಂಗ ಜಾತಿ ವಾಚಕವೆನ್ನಿಸಿದ 'ಪುರುಷ'ಎಂಬ ಹೆಸರು ಸಾಕು (ಅದು ನಿರರ್ಥಕ); ಸಮಾಜವು ಆಶ್ಚರ್ಯದಿಂದ ಮನ್ನಿಸಿ ತೋರಿಸುವ ಪುರುಷಗುಣಗಳಿಂದ ಕೂಡಿದವನೇ ಪ್ರಶಸ್ತನು" ಎಂಬುದು ಅರ್ಜುನ ತನಗನ್ವಯಿಸಿಕೊಂಡ ನಾಯಕತ್ವದ ನಿಕಷ.

೫೪. "ಸಭೆಯಲ್ಲಿ ಗೌರವದಿಂದ ಮಾತನಾಡುವ ಸಂದರ್ಭದಲ್ಲಿ ಯಾವನ ತೇಜಸ್ಸಿನ ಬಗೆಗೆ ಕೇಳುವಾಗ ಅವನ ಹೆಸರನ್ನು ನುಂಗುವಂತೆ ಅದು ಕುಳ್ಳಿರುವುದೋ ಮತ್ತು ಹಗೆಗಳೂ ಅದನ್ನು ಒಪ್ಪುವರೋ ಅವನೇ ನಿಜವಾದ ಗಂಡಸು" ಎಂಬುದು ಅರ್ಜುನಮತ.

೫೫. ಎಲೈ ದೇವನೇ, ನಿನ್ನ ಮನಸ್ಸು ರಾಗರಹಿತ; ಆದರೂ ನೀನು ವಿಲಾಸಿತನದ ಪರಾಕಾಷ್ಠೆಯಲ್ಲಿರುವೆ. ನಿನ್ನ ಶರೀರಾರ್ಧದಲ್ಲಿ ನಿನ್ನ ಹೆಂಡತಿ ಇದ್ದಾಳೆ; ಆದರೂ ಅಲ್ಲಿ ಕಾಮನಿಲ್ಲ, (ಸ್ವಯಂ ಸರ್ವವಂದ್ಯನಾದ ನೀನು)ಉಷಃಕಾಲದಲ್ಲಿ ಬ್ರಹ್ಮನಿಗೆ ನಮಸ್ಕಾರ ಮಾಡುವೆ. ಹೀಗೆ (ಪರಸ್ಪರ ವಿರುದ್ಧವಾದ) ನಿನ್ನ ನಡತೆಯು ಸ್ವಭಾವತಃ ಅರಿಯಲರಿದು"–ಎಂಬುದು ಅರ್ಜುನ ಮಾಡಿದ ಶಿವಪುರುಷತ್ವದ ವರ್ಣನೆ.

೫೬. ವಿಕ್ರಮಾದಿತ್ಯ ಮಾಡಿದ್ದನ್ನು ಇನ್ನಾವನೂ ಮಾಡಿಲ್ಲ; ಅವನು ಮಾಡಿದಷ್ಟು ದಾನವನ್ನು ಇನ್ನಾವನೂ ಮಾಡಿಲ್ಲ; ಆತನು (ಅನ್ಯರಿಗೆ) ಅಸಾಧ್ಯವೆನ್ನಿಸಿದ ಎಲ್ಲವನ್ನೂ ಸಾಧಿಸಿದನು.

೫೭. ಎಲೈ ಭೋಜರಾಜನೇ, ಬ್ರಹ್ಮನಿಗೆ ಒಮ್ಮೆ ಭೂಮಿಯಲ್ಲಿರುವ ಅರಸರನ್ನು ಎಣಿಸುವ ಕುತೂಹಲವುಂಟಾಯ್ತು; ಆಗ ಅವನು ಸೀಮೆಯ ಸುಣ್ಣದ ತುಂಡಿನಿಂದ ಆಕಾಶದಲ್ಲಿ ಒಂದು ಗೆರೆ ಎಳೆದನು; ಆ ಗೆರೆಯೇ ದೇವನದಿ (ಅಲಕನಂದೆ) ಯಾಯ್ತು; ನಿನ್ನಂಥ ದೊರೆಗಳಿಲ್ಲವಾದುದರಿಂದ ಭೂಮಿಯ ಬೆನ್ನಿನ ಮೇಲಿರುವ ಹಿಮಾಲಯ ಪರ್ವತವು ಭೂಮಿಯನ್ನು ಬಿಡುತ್ತದೆ (ಬಿಟ್ಟು ಆಕಾಶದತ್ತ ಏರುತ್ತಿದೆ) ಎನ್ನಬಹುದಲ್ಲವೇ!

मागाः प्रत्युपकारकातरधिया वैवर्ण्यमाकर्णय
श्रीकर्णाटवसुन्धराधिपसुधासिक्तानि सूक्तानि नः ।
वर्ण्यन्ते कति नाम नार्णवनदीदावाग्निविन्ध्याटवी–
सन्ध्यामारुतनिर्झरप्रभृतयस्तेभ्यः किमाप्तं मया ॥५८॥

आबाहूद्गतमण्डलाग्ररुचयः संनद्धवक्षःस्थलाः
सोष्माणो व्रणिनो विपक्षहृदयप्रोन्माथिनः कर्कशाः ।
उत्सृष्टाम्बरदृष्टविग्रहभरा यस्य स्मराग्रेसरा
योधावारवधूस्तनानाश्च न दधुः क्षोभं स वोऽव्याज्जिनः ॥५९॥

मन्दश्चन्द्रकिरीटपूजनरसे तृष्णा न कृष्णार्चने
स्तम्भः शम्भुनितम्बिनीप्रणतिषु व्यगृ न धातुर्गुहे ।
अस्माकं परमर्दनोऽस्ति वदने न्यस्तेन संरक्षितः
पृथ्वीराजनरेश्वरादिति तृणं तत्पत्तने पूज्यते ॥६०॥

कम्पक्षितीशमनिशं कथयन्ति सन्तः
सङ्गीतदुग्धजलधेरुदितं सधांशुम् ।
साहित्यमानससरोवरराजहंसं
सङ्ग्रामरङ्गनटनस्थितिसूत्रधारम् ॥६१॥

वीरश्रीकम्पराजोऽस्ति विदुषां सञ्चरन्निधिः ।
यत्कीर्तिकामिनीहस्ते ब्रह्माण्डं कन्दुकायते ॥६२॥

ओमित्युमेति युवयोरभिधानमेकं
सृष्ट्यदि सृष्ट्यावधितगुणमात्र भिन्नम् ।
एकं च तावदभिधेयमपीह रूपं
वेणी जटेति कचसंहतिभेदभिन्नम् ॥६३॥

೫೮. ಎಲೈ, ಪ್ರತ್ಯುಪಕಾರ ಮಾಡಬೇಕಾದೀತಲ್ಲಾ–ಎಂಬ ಭಯದಿಂದ ನೀನು ಪೆಚ್ಚಾಗಬೇಡ; ನಮ್ಮ ಶ್ರೀಮಂತವಾದ ಕರ್ಣಾಟಕ ನಾಡಿನ ದೊರೆಯ ಅಮೃತ ಬಿಂದುಗಳಿಂದ ಸಿಂಪಡಿಸಲ್ಪಟ್ಟ ಗೀತಗಳನ್ನು ಕೇಳು: ಎಷ್ಟು ಕಡಲು, ಹೊಳೆ, ಕಾಳ್ಗಿಚ್ಚು, ವಿಂಧ್ಯ ಪರ್ವತದ ಅಡವಿ, ಸಂಜೆಗಾಳಿ, ಬೆಟ್ಟದೊರೆ ಮುಂತಾದವು ಬಣ್ಣಿಸಲ್ಪಡುವುದಿಲ್ಲ? ಹಾಗೆ ವರ್ಣಿತವಾದವುಗಳಿಂದ ಏನನ್ನು ನಾನು ಪಡೆದುಕೊಂಡೆ? (ಉಕ್ತ ಗೀತಗಳನ್ನು!)

೫೯. ಕಂಕುಳಿಂದ ಎದ್ದುನಿಂತ ವೃತ್ತಾಕಾರದ ತುದಿಯ ಕಾಂತಿಯುಳ್ಳ, ಎದೆಯನ್ನು ತುಂಬಿಕೊಂಡಿರುವ, ಬೆಚ್ಚಗಿರುವ (ಉಗುರು) ಗಾಯಗಳಿಂದ ಕೂಡಿದ, ಎದುರಾದವರ ಎದೆಯನ್ನು ಕಡೆದು ನೀರುಮಾಡುವ, ಕಠಿನಸ್ವಭಾವದ, ಬಟ್ಟೆ ಕಿತ್ತೊಗೆದು ಕಾಣಿಸುವಂತೆ ನಿಂತ ಮೂರ್ತತೆಯಿಂದ ಕೂಡಿದ ಮತ್ತು ಮನ್ಮಥನಿಗಿಂತ ಮೊದಲು ಮುಂದೆ ಬರುವ ವೇಶ್ಯಾಸ್ತನಗಳೆಂಬ ಬಂಟರು ಕ್ಷೋಭೆಯನ್ನುಂಟು ಮಾಡದಿರುವ ಶ್ರೀ ಬುದ್ಧದೇವನು ನಿಮ್ಮನ್ನು ಕಾಯಲಿ.

೬೦. ಶಿವಪೂಜೆಯಲ್ಲಿ ನನಗೆ ಅಭಿರುಚಿಯಿಲ್ಲ; ಕೃಷ್ಣನ ಪೂಜೆಯಲ್ಲಿಯೂ ಆಸೆಯಿಲ್ಲ; ಪಾರ್ವತೀದೇವಿಗೆ ನಮಸ್ಕಾರ ಹಾಕುವುದರಲ್ಲಿ ನಾನು ತಟಸ್ಥನು; ಬ್ರಹ್ಮಾಲಯದಲ್ಲಿ ಆಸಕ್ತಿಯನ್ನು ನಾನು ತಾಳಲಾರೆನು; ನಮ್ಮ ಹತ್ತಿರ ಒಂದು ಶತ್ರುಸಂಹಾರಕ ವಸ್ತುವಿದೆ; ಅದನ್ನು ಬಾಯಲ್ಲಿಟ್ಟುಕೊಂಡರೆ ಸಾಕು, (ಭಾರತೀಯನು) ಪೃಥ್ವೀರಾಜನಿಂದ ರಕ್ಷಿತನಾಗುತ್ತಾನೆ– ಎಂಬ ನಂಬಿಗೆಯಿಂದ ಅವನ (ರಾಜಧಾನೀ) ನಗರದಲ್ಲಿ ಹುಲ್ಲುಕಡ್ಡಿಯು ಪೂಜಿಸಲ್ಪಡುತ್ತಿದೆ!

೬೧. ವೀರಕಂಪಣರಾಯನನ್ನು ಸಂಗೀತವೆಂಬ ಹಾಲುಗಡಲಲ್ಲಿ ಹುಟ್ಟಿದ ಚಂದ್ರನೆಂದೂ ಸಾಹಿತ್ಯವೆಂಬ ಮಾನಸಸರೋವರದ ರಾಜಹಂಸವೆಂದೂ ಯುದ್ಧವೆಂಬ ರಂಗಸ್ಥಳದಲ್ಲಿ ಕುಣಿಯುವ ರುದ್ರನೆಂದೂ ಯಾವಾಗಲೂ ತಿಳಿದವರು ಹೇಳುತ್ತಾರೆ.

೬೨. ವೀರಶ್ರೀಯುತನಾದ ಕೆಂಪರಾಜನು ವಿದ್ವಾಂಸರಿಗೆ ತಿರುಗಾಡುವ ನಿಕ್ಷೇಪಸ್ಥಾನವಾಗಿದ್ದಾನೆ; ಅವನ ಕೀರ್ತಿಯೆಂಬ ಸುಂದರಿಯ ಕೈಯಲ್ಲಿ ಬ್ರಹ್ಮಾಂಡವೊಂದು ಚೆಂಡಿನ ಗಾತ್ರಕ್ಕಿಳಿಯುತ್ತದೆ.

೬೩. (ಎಲೈ ಶಿವ–ಪಾರ್ವತಿಯರೇ) "ಓಂ" ಮತ್ತು "ಉಮೆ" ಎಂಬ ಒಂದೇ ಹೆಸರನ್ನುಳ್ಳವರು ನೀವು; ಸೃಷ್ಟಿಯ ಆದಿಯಿಂದ ಅಂತ್ಯದವರೆಗೆ ಇರುವ ಗುಣದಿಂದ ಮಾತ್ರ ನೀವು ಭಿನ್ನರು; ಹೆಸರು ಒಂದೇ ಆದರೂ ನಿಮ್ಮ ರೂಪದಲ್ಲಿ ಪ್ರತಿಗೂದಲ ಗಂಟಿಗೆ "ಜಡೆ" ಮತ್ತು "ಜಟೆ" ಎಂಬ ಎರಡು ಹೆಸರುಗಳಿರುವಷ್ಟೇ ಪ್ರತ್ಯೇಕತೆಯಿದೆ–ಎಂದು ನಾರಾಯಣ ನುತಿಸುತ್ತಾನೆ.

भुञ्जीथा न हालाहलं यदि महादेव त्वमेवं विधं
भुञ्जीरन् किमिमे सुराश्चरुपुरोडाशादिहव्यं मखे ।
आसीथा न यदि स्वयं पितृवने भूतानि संमोहयन्
आसीरन् किमिमे जनाः सुकृतिनो हर्म्येषु सौधेषु च ॥६४॥

दृप्तदानवनिशाचर वर्गस्
तत्र गाण्डिवभृता निहतोऽपि ।
तन्निषङ्गयुगबाणगणानां
संख्यया प्रतिभटत्वमकार्षीत् ॥६५॥

राज्ञां मौलिपरस्परां चरणयोः पाणौ प्रदानश्रियं
बुद्धौ राजनयोदयं हदि कृपां सत्यं च जिह्वाञ्चले ।
बाहौ सागरमेखलां वसुमतीं मस्ते किरीटं मुदा
कुर्वन् धर्मतनूभवश्चिरमसौ गोपायति स्म प्रजाः ॥६६॥

राज्यं दश सहस्राणि प्राप्य वर्षाणि राघवः
शताश्वमेधानाजह्रे सदश्वान् भूरिदक्षिणान् ॥६७॥

आजानुलम्बबाहुः स महास्कन्धः प्रतापवान्
लक्ष्मणानुचरो रामः पृथिवीमन्वपालयत् ॥६८॥

राघवश्चाऽपि धर्मात्मा प्राप्य राज्यमनुत्तमम्
ईजे बहुविधैर्यज्ञैः ससुहृज्ज्ञातिबान्धवैः ॥६९॥

न पर्यदेवन् विधवा न च व्यालकृतं भयम् ।
न व्याधिजं भयं वापि रामे राज्यं प्रशासति ॥७०॥

निर्दस्युरभवल्लोकोनानर्थः कंचिदस्पृशत् ।
न च स्म वृद्धा बालानां प्रेतकार्याणि कुर्वते ॥८१॥

೬೪. ಎಲೈ ಮಹಾದೇವನೇ, ನೀನು ಹೀಗೆ ಹಾಲಾಹಲ ವಿಷವನ್ನು ನುಂಗದಿದ್ದರೆ, ಯಜ್ಞದಲ್ಲಿ ಈ ದೇವತೆಗಳು ಚರು–ಪುರೋಡಾಶ ಮುಂತಾದ ಹವಿಸ್ಸನ್ನು ತಿನ್ನುತ್ತಿದ್ದರೆ (ತಿನ್ನಲು ಶಕ್ತರಾಗುತ್ತಿದ್ದರೆ?) ನೀನು ಸ್ವೇಚ್ಛಾನುಸಾರ ಭೂತಗಳನ್ನು ಮರುಳ್ಗೊಳಿಸಿ ಸ್ಮಶಾನದಲ್ಲಿ ಕುಳಿತುಕೊಳ್ಳದೆ ಹೋಗಿದ್ದರೆ, ಈ ಪುಣ್ಯವಂತರು ಅರಮನೆ–ಉಪ್ಪರಿಗೆ ಮನೆಗಳಲ್ಲಿ ಕುಳಿತುಕೊಳ್ಳುತ್ತಿದ್ದರೆ? (ಕುಳಿತಿರಲು ಶಕ್ತರಾಗುತ್ತಿದ್ದರೆ?)

೬೫. ಗರ್ವಿಗಳಾದ ದಾನವರ ಹಾಗೂ ಇರುಳಲೆಗರ ವರ್ಗವು ಗಾಂಡೀವ ಧನುರ್ಧರನಾದ ಅರ್ಜುನನಿಂದ ಕೊಲ್ಲಲ್ಪಟ್ಟರೂ ಅವನ ಎರಡು ಬತ್ತಳಿಕೆಗಳಲ್ಲಿದ್ದ ಅಂಬುಗಳಿಗೆ ಸಂಖ್ಯಾಬಲದಿಂದ ಎದುರಾಳಾಯಿತು.

೬೬. ಸಾಮಂತರ ಕಿರೀಟಗಳ ಸಾಲುಗಳನ್ನು ತನ್ನ ಚರಣತಲದಲ್ಲಿರಿಸಿ, ದಾನದ ಸಿರಿಯನ್ನು ಕೈಯಲ್ಲಿಟ್ಟು, ರಾಜನೀತಿಯ ಪ್ರಗತಿಯನ್ನು ಬುದ್ಧಿಯಲ್ಲಿ ಸಾಧಿಸಿ, ಹೃದಯದಲ್ಲಿ ಭೂತದಯೆಯನ್ನು ಬೆಳೆಸಿಕೊಂಡು, ನಾಲಿಗೆಯ ತುದಿಯಲ್ಲಿ ಸತ್ಯವನ್ನಿರಿಸಿ, ಚತುಃಸಮುದ್ರ ಸೀಮಿತವಾದ ಭೂಮಿಯನ್ನು ತೋಳುಗಳಲ್ಲಿ ಹೊತ್ತು ಮತ್ತು ತಲೆಯ ಮೇಲೆ ಕಿರೀಟವನ್ನು ಧರಿಸಿ ಧರ್ಮರಾಯನು ಸಂತೋಷದಿಂದ ಪ್ರಜೆಗಳನ್ನು ಬಹುಕಾಲ ಕಾಪಾಡಿದನು.

೬೭. ಶ್ರೀರಾಮನು ರಾಜ್ಯವನ್ನು ಪಡೆದು ೧೦,೦೦೦ ವರ್ಷಗಳವರೆಗೆ ಒಳ್ಳೆಯ ಕುದುರೆಗಳಿಂದ ಮತ್ತು ಭೂರಿದಕ್ಷಿಣೆಗಳಿಂದ ಸಹಿತವಾದ ನೂರು ಅಶ್ವಮೇಧ ಯಾಗಗಳನ್ನು ಮಾಡಿದನು.

೬೮. ಅಜಾನುಬಹುವಾದ ಆತನು ದೊಡ್ಡ ಹೆಗಲಿನ ಪರಾಕ್ರಮಿ; ಅವನಿಗೆ ಲಕ್ಷ್ಮಣನು (ಸದಾ) ಅನುಯಾಯಿ; ಅಂಥ ರಾಮಚಂದ್ರನು ಸತ್‌ಪರಂಪರಾನುಸಾರವಾಗಿ ಜಗತ್ತನ್ನು ಕಾಪಾಡಿದನು;

೬೯. ಧರ್ಮಾತ್ಮನಾದ ಶ್ರೀರಾಮನು ಅತ್ಯುತ್ತಮವಾದ ರಾಜ್ಯ ದೊರಕಿದ ಮೇಲೆ ನಾನಾ ವಿಧದ ಯಜ್ಞಗಳನ್ನು ಗೆಳೆಯರಿಂದ ಹಾಗೂ ಬಾಂಧವರಿಂದ ಕೂಡಿ ಮಾಡಿದನು.

೭೦. ಶ್ರೀರಾಮನು ರಾಜ್ಯಭಾರ ಮಾಡುತ್ತಿದ್ದಾಗ ವಿಧವೆಯರು ಅಳಲಿಲ್ಲ, ದುಷ್ಟರ ಹಾಗೂ ರೋಗರುಜೆಗಳ ಭಯ (ಜನರಿಗೆ) ಇರಲಿಲ್ಲ.

೭೧. (ರಾಮರಾಜ್ಯದಲ್ಲಿ) ಲೋಕವು ಕಳ್ಳರ ಬಾಧೆಯಿಂದ ಮುಕ್ತವಾಯಿತು. ಯಾರಿಗೂ ಅನರ್ಥ ಉಂಟಾಗಲಿಲ್ಲ ಮತ್ತು ಮುದುಕರು ಎಳೆಯರ ಉತ್ತರಕ್ರಿಯೆಗಳನ್ನು ಮಾಡುವ ಸಂದರ್ಭ ಉಂಟಾಗಲಿಲ್ಲ.

सर्वं मुदितमेवासीत् सर्वो धर्मपरोऽभवत् ।
राममेवानुपश्यन्तो नाभ्यहिंसन् परस्परम् ॥७२॥

आसन् वर्षसहस्राणि तथा पुत्रसहस्रिणः ।
निरामया विशोकाश्च रामे राज्यं प्रशासति ॥७३॥

रामो रामो राम इति प्रजानामभवन् कथाः ।
रामभूतं जगदभूद्रामे राज्यं प्रशासति । ।७४॥

नित्यपुष्पा नित्यफलास्तरवं स्कन्धविस्तृताः ।
काले वर्षी च पर्जन्यः सुखस्पर्शश्च मारुतः ॥७५॥

ब्राह्मणाः क्षत्रिया वैश्याः शूद्रा लोभविवर्जिताः ।
स्वकर्मसु प्रवर्तन्ते तुष्टाः स्वैरेव कर्मभिः ॥७६॥

आसन् प्रजा धर्मरता रामे शासति नानृताः ।
सर्वे लक्षणसम्पन्नाः सर्वे धर्मपरायणाः ॥७७॥

वासुदेवः सङ्कर्षणः प्रद्युम्नः पुरुषः स्वयम्
अनिरुद्ध इति ब्रह्मन् मूर्तिव्यूहोऽभिधीयते ॥७८॥

स विश्वस्तैजसः प्राज्ञस्तुरीय इति वृत्तिभिः ।
अर्थेन्द्रियाशयज्ञानैर्भगवान्परिभाव्यते ॥७९॥

अङ्गोपाङ्गायुधाकल्पैर्भगवांस्तच्चतुष्टयम् ।
बिभर्ति स्म चतुर्मूर्तिर्भगवान् हरिरीश्वरः ॥८०॥

೭೨. ಎಲ್ಲವೂ ಸಂತೋಷವೇ ಆಗಿತ್ತು; ಪ್ರತಿಯೊಬ್ಬನೂ ಕರ್ತವ್ಯಪರನಾದನು; ರಾಮನನ್ನೇ ಪದೇ ಪದೇ (ಮೇಲ್ಪಂಕ್ತಿಯನ್ನಾಗಿ) ಕಂಡು (ಜನರು) ಪರಸ್ಪರ ಹಿಂಸೆಯಲ್ಲಿ ತೊಡಗದಾದರು.

೭೩. ಶ್ರೀರಾಮನು ರಾಜ್ಯವಾಳುತ್ತಿದ್ದಾಗ (ಪ್ರಜೆಗಳು) ಬಹುಪುತ್ರರೂ ದೀರ್ಘಾಯುಗಳೂ ರೋಗದುಃಖರಹಿತರೂ ಆದರು.

೭೪. ಶ್ರೀರಾಮನ ಆಳಿಕೆಯಲ್ಲಿ ಪ್ರಜೆಗಳು (ಯಾವಾಗಲೂ ರಾಮನ ಸುದ್ದಿಯನ್ನೇ ಎತ್ತಿಕೊಂಡು ಮಾತಾಡುತ್ತಿದ್ದರು. ಅವರ ಜಗತ್ತಿಡೀ ರಾಮಮಯವಾಗಿತ್ತು!

೭೫. (ರಾಮರಾಜ್ಯದಲ್ಲಿ) ಮರಗಿಡಗಳು ಸದಾ ಹೂ-ಹಣ್ಣುಗಳನ್ನು ಬಿಡುವ ವಿಸ್ತಾರವಾದ ಕೊಂಬೆಗಳಿಂದ ಕೂಡಿದ್ದವು; ಸರಿಯಾದ ಕಾಲದಲ್ಲಿ ಮಳೆ ಸುರಿಯುತ್ತಿತ್ತು ಮತ್ತು ಗಾಳಿಯು ಹಿತಕರವಾಗಿ ಬೀಸುತ್ತಿತ್ತು.

೭೬. ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ ವೃತ್ತಿಯವರೆಲ್ಲರೂ ದುರಾಶಾಗ್ರಸ್ತರಾಗಿರಲಿಲ್ಲ; ಎಲ್ಲರೂ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿ ಅವುಗಳಿಂದಲೇ ತೃಪ್ತರಾಗಿರುತ್ತಿದ್ದರು.

೭೭. ಶ್ರೀರಾಮನು ಆಳುತ್ತಿದ್ದಾಗ ಪ್ರಜೆಗಳು ನೀತಿನಿಷ್ಠರಾದರು, ಯಾರೂ ಸುಳ್ಳು ಹೇಳದಾದರು; ಎಲ್ಲರೂ ಸಲ್ಲಕ್ಷಣ ಸಂಪನ್ನರೂ ದಾನಧರ್ಮಶೀಲರೂ ಆದರು.

೭೮. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬುದಾಗಿ-ಎಲೈ ಬ್ರಾಹ್ಮಣನೇ-ಆ ಪರಮಪುರುಷನನ್ನು (ಆ ವಿಶ್ವೇಶ್ವರನನ್ನು) ಚತುರ್ ಮೂರ್ತಿಗಳ ಹೆಸರುಗಳಿಂದ ಕರೆಯುತ್ತಾರೆ.

೭೯. ಆ ಭಗವಂತನನ್ನು ವಿಶ್ವ, ತೈಜಸ, ಪ್ರಾಜ್ಞ ಮತ್ತು ತುರೀಯ ಎಂದು ವಿಷಯೇಂದ್ರಿಯಗಳ ಆಧಾರವಾಗಿರುವುದರ ದೆಸೆಯಿಂದ (ವಿವಿಧನನ್ನಾಗಿ) ಎಣಿಸುತ್ತಾರೆ.

೮೦. ಅಂಗ-ಉಪಾಂಗ-ಆಯುಧ-ವೇಷಭೂಷಣಗಳನ್ನೂ ಹಾಗೇ ಆ ಭಗವಂತನಾದ ಹಾಗೂ ಈಶ್ವರನಾದ ವಿಷ್ಣುವು ತನ್ನ ನಾಲ್ಕು ಮೂರ್ತಿಗಳಲ್ಲಿ (ವಿವಿಧವಾಗಿ ಧರಿಸಿದ್ದಾನೆ-ಎಂದು ಕಲ್ಪಿಸಲಾಗಿದೆ.

द्विजऋषभ स एष ब्रह्मयोनिः स्वयंदृक्
स्वमहिमपरिपूर्णो मायया च स्वयैतत् ।
सृजति हरति पातित्याख्ययानावृताक्षो
विवृत इव निरुक्तस्तत्परैरात्मलभ्यः ॥८१॥

सत्सु राज्योपभोगेषु चित्ताविभ्रमहेतुषु ।
स लेभे चोत्तमं लाभं शुद्धचित्तो गृहे वसन् ॥८२॥

जहौ राज्यं च धैर्येण गुणैराकृष्टवाञ्जनान् ।
यन्न पूर्वं ददौ कश्चित्तदगृध्नुरदादसौ ॥८३॥

धर्मं ररक्ष योगेन शर्म लेभे ह्यनुत्तसम् ।
चिकाय स यशोऽक्षय्यं यमं कामं जिगाय च ॥८४॥

गौरवे मेरुणा तुल्यः क्षमायां पृथिवीसमः ।
जलदेन समो दाता स मुनिर्नद्य वर्तते ॥८५॥

पुत्रवल्लालितो लोकः शिष्यवच्छिक्षितस्तथा ।
प्रजावत्पालितो येन स मुनिर्नाद्य वर्तते ॥८६॥

हीयमानं तु तद्रक्षः समीक्ष्य पुरुषादकम् ।
निष्पिष्य भूमौ जानुभ्यां समाजघ्ने वृकोदरः ॥८७॥

त तोऽस्य जानुना पृष्ठमवपीड्य बलादिव
बाहुना परिजग्राह दक्षिणेन शिरोधराम् ॥८८॥

सव्येन च कटीदेशे गृह्यवाससि पाण्डवः ।
तद्रक्षो द्विगुणं चक्रे रवन्तं भैरवं रवम् ॥८९॥

೮೧. ಎಲೈ ಬ್ರಾಹ್ಮಣಶ್ರೇಷ್ಠನೇ: ಅಂಥ ಪರಮೇಶ್ವರನು ಸೃಷ್ಟಿಕರ್ತನ ಜನಕ, ಸ್ವಯಂದರ್ಶಿ, ಪೂರ್ಣಮಹಿಮ; ಆತನು ತನ್ನ ಮಾಯೆಯಿಂದ ಈ ಜಗತ್ತನ್ನು ಹುಟ್ಟಿಸಿ ಸಲಹಿ ಕೊನೆಗೊಳಿಸುವವನು ಎಂಬ ಹೇಳಿಕೆಯಿಂದ ಅನಾವೃತಾಕ್ಷನೆನ್ನಿಸಿದ್ದಾನೆ; ಅವನನ್ನರಿತವರು (ಅವನ ಈ ಸೃಷ್ಟಿ–ಸ್ಥಿತಿ–ಲಯ ಕರ್ತೃತ್ವದ ದೃಷ್ಟಿಯಿಂದ) ಜಗತ್ತನ್ನು ಅವನ ವಿವರ್ತವೆನ್ನುತ್ತಾರೆ; ಅವರಿಗೆ ಆತ್ಮಜ್ಞಾನದಿಂದ ಅವನ ಜ್ಞಾನವಾಗುವುದು.

೮೨. ಮನಸ್ಸನ್ನು ಭ್ರಮೆಗೊಳಿಸುವ ರಾಜ್ಯೋಪಭೋಗಗಳಿದ್ದರೂ ಮನೆಯಲ್ಲೇ ಶುದ್ಧಚಿತ್ತನಾಗಿದ್ದು ಅಶೋಕ ಚಕ್ರವರ್ತಿಯು ಉತ್ತಮವಾದ ಧರ್ಮಲಾಭವನ್ನು ಹೊಂದಿದನು.

೮೩. ಬುದ್ಧದೇವನು ಧೈರ್ಯದಿಂದ ರಾಜ್ಯವನ್ನು ತ್ಯಜಿಸಿದನು; ಆತನು ತನ್ನ ಸುಗುಣಗಳಿಂದ ಜನತೆಯನ್ನು ಆಕರ್ಷಿಸಿದನು ಮತ್ತು ಲೋಭರಹಿತನಾಗಿ ಜಗತ್ತಿಗೆ ಇನ್ನಾವನೂ ಕೊಡದಿದ್ದಂಥ ದಾನವನ್ನು ಕೊಟ್ಟನು.

೮೪. ಆತನು ಯೋಗದಿಂದ ಧರ್ಮವನ್ನು ರಕ್ಷಿಸಿದನು, ಅತ್ಯುತ್ತಮವಾದ ಸುಖವನ್ನು ಪಡೆದನು, ಅಕ್ಷಯ ಕೀರ್ತಿಯನ್ನು ಸಂಪಾದಿಸಿದನು ಮತ್ತು ಯಮನನ್ನೂ ಕಾಮನನ್ನೂ ಜಯಿಸಿದನು.

೮೫. ಆ ಬುದ್ಧನು ಗೌರವದಲ್ಲಿ ಮೇರುಸಮಾನನು, ಕ್ಷಮೆಯಲ್ಲಿ ಭೂಮಿ ತಾಯಿಗೆ ಸರಿಸಮನು ಮತ್ತು ದಾನಿಗಳಲ್ಲಿ ಮೋಡಕ್ಕೆ ಸರಿದೊರೆ; ಅಂಥ ಮುನಿಯು ಈಗ ಇಲ್ಲ.

೮೬. ಲೋಕವನ್ನು ಮಗನೆಂದು ಮುದ್ದಾಡಿ, ಶಿಷ್ಯನೆಂದು ಪಾಠ ಕಲಿಸಿ, ಪ್ರಜೆಯೆಂದು ಪಾಲಿಸಿದ ಶಾಕ್ಯಮುನಿಯು ಈಗ ಇಲ್ಲ.

೮೭. ಹಿಮ್ಮೆಟ್ಟತೊಡಗಿದ ನರಭಕ್ಷಕ ರಾಕ್ಷಸನಾದ ಬಕನನ್ನು ನೋಡಿ ಭೀಮಸೇನನು ತನ್ನ ಮೊಣಕಾಲುಗಳಿಂದ ನೆಲಕ್ಕೆ ಒತ್ತಿ ಪುಡಿಯಾಗುವಂತೆ ತಿಕ್ಕಿದನು.

೮೮. ಅನಂತರ ತನ್ನ ಮೊಣಕಾಲಿನಿಂದ ಭೀಮನು ಅವನ ಬೆನ್ನನ್ನು ಒತ್ತಿ ಜೋರಾಗಿ ಬಲದೋಳಿನಿಂದ ಬಕನನ್ನು ತಲೆಕೆಳಗೆ ಮಾಡಿ ಹಿಡಿದನು.

೮೯. ಅವನು ಬಕನ ಸೊಂಟದ ವಸ್ತ್ರವನ್ನು ಎಡಗೈಯಿಂದ ಹಿಡಿದುಕೊಂಡಾಗ ಆ ರಾಕ್ಷಸನು ಎರಡುಪಟ್ಟು ಹೆಚ್ಚು ಭೀಕರವಾಗಿ ಚೀರಿದನು.

ततोऽस्य रुधिरं वक्त्रात् प्रादुरासीद्विशांपते ।
भज्यमानस्य भीमेन तस्य घोरस्य रक्षसः ॥९०॥

आसिद्राजा नलो नाम वीरसेनसुतो बली
उपपन्नोगुणैरिष्टे रूपवानश्वकोविदः ॥९१॥

अतिष्ठन्मनुजेन्द्राणां मूर्ध्नि देवपतिर्यथा ।
उपर्युपरि सर्वेषामादित्य इव तेजसा ॥९२॥

ब्रह्मण्यो वेदविच्छूरो निषधेषु महीपतिः ।
अक्षप्रियः सत्यवादी महानक्षौहिणी पतिः ॥९३॥

ईप्सितो वरनारीणामुदारः संयतेन्द्रियः ।
रक्षिता धन्विनां श्रेष्ठः साक्षादिव मनुःस्वयम् ॥९४॥

तस्यां पुर्यामयोध्यायां वेदवित्सर्वसंग्रहः ।
दीर्घदर्शी महातेजाः पौरजानपदप्रियः ॥९५॥

इक्ष्वाकूणामतिरथो यज्वा धर्मरतो वशी ।
महर्षिकल्पो राजर्षिस्त्रिषुलोकेषु विश्रुतः ॥९६॥

बलवान्निहतामित्रो मित्रवान् विजितेन्द्रियः ।
धनैश्च सञ्चयैश्चान्यैः शक्रवैश्रवणोपमः ॥९७॥

यथा मनुर्महातेजा लोकस्य परिरक्षिता ।
तथा दशरथो राजा वसञ्जगदपालयत् ॥९८॥
तेन सत्याभिसन्धेन त्रिवर्गमनुतिष्ठता ।
पालितासा पुरी श्रेष्ठा इन्द्रेणेवामरावती ॥९९॥

तस्मिन् पुरवरे हृष्टा धर्मात्मानो बहुश्रुताः ।
नरास्तुष्टा धनैः स्वैः स्वैरलुब्धा सत्यवादिनः ॥२००॥

೯೦. ಅನಂತರ, ಎಲೈ ರಾಜನೇ, ಭೀಮ ಸೀಳುತ್ತಿರುವಾಗ ಆ ಘೋರ ರಾಕ್ಷಸನ ಬಾಯಿಯಿಂದ ನೆತ್ತರು ಹರಿಯಿತು.

೯೧. ವೀರಸೇನನ ಮಗನಾದ ನಳನೆಂಬ ಬಲಿಷ್ಠ ದೊರೆಯಿದ್ದನು; ಆತನು ಇಷ್ಟವಾದ ಗುಣಗಳಿಂದಲೂ ರೂಪದಿಂದಲೂ ಕೂಡಿದ ಅಶ್ವಶಾಸ್ತ್ರಜ್ಞನಾಗಿದ್ದನು.

೯೨. ನಳನು ದೇವರಾಜನಂತೆ ಅರಸರ ತಲೆಯ ಮೇಲಿದ್ದನು: ಎಲ್ಲರಿಗೂ ಮೇಲೆ ಮೇಲಾದ ಆತನು ಸೂರ್ಯನಂಥ ತೇಜಸ್ವಿಯಾಗಿದ್ದನು.

೯೩. ಬ್ರಾಹ್ಮಣಾನುಕೂಲನೂ ವೇದಜ್ಞನೂ ಶೂರನೂ ಆದ ಆ ನಿಷಧೇಶನು ದ್ಯೂತಪ್ರಿಯ, ದೊಡ್ಡ ಸತ್ಯವಾದಿ ಮತ್ತು ಅಕ್ಷೌಹಿಣೀ ಸೈನ್ಯವುಳ್ಳವನಾಗಿದ್ದನು.

೯೪. ಅವನು ಶ್ರೇಷ್ಠ ಸ್ತ್ರೀಯರಿಗೆ ಬೇಕಾದವನೂ ಉದಾರನೂ ಜಿತೇಂದ್ರಿಯನೂ ಧನುರ್ಧರರಲ್ಲೆಲ್ಲ ಶ್ರೇಷ್ಠನೂ ಆದ ಪ್ರಜಾಪಾಲಕನೆನ್ನಿಸಿ ಸಾಕ್ಷಾತ್ ಮನು ಸಮಾನನಾಗಿದ್ದನು.

೯೫. ಆ ಅಯೋಧ್ಯಾಪುರದಲ್ಲಿ (ಆಳುತ್ತಿದ್ದ ದಶರಥನು) ವೇದಜ್ಞನೂ ಸರ್ವಸಾಧನಗಳನ್ನು ಸಂಗ್ರಹಿಸಿಕೊಂಡವನೂ ದೂರದರ್ಶಿಯೂ ಮಹಾತೇಜಸ್ವಿಯೂ ಹಳ್ಳಿ–ಪಟ್ಟಣಗಳೆರಡರ ಜನಗಳಿಗೆ ಪ್ರಿಯನೂ ಆಗಿದ್ದನು.

೯೬. ಆತನು ಇಕ್ಷ್ವಾಕು ವಂಶದ ದೊರೆಗಳಲ್ಲಿ ಅತಿರಥನಾಗಿದ್ದನು; ಯಜ್ಞ ಮಾಡುವ ಮತ್ತು ಜಿತೇಂದ್ರಿಯತ್ವದಿಂದ ಧರ್ಮನಿಷ್ಠನಾಗಿರುವ ಮಹರ್ಷಿಸದೃಶನಾದ ಆ ರಾಜರ್ಷಿ ದಶರಥನು ಮೂರು ಲೋಕಗಳಲ್ಲಿ ಪ್ರಖ್ಯಾತನಾಗಿದ್ದನು.

೯೭. ಅವನು ಬಲವಂತನೂ ಹಗೆಗಳನ್ನು ಕೊಂದವನೂ ಇಂದ್ರಿಯಗಳನ್ನು ಗೆದ್ದವನೂ ಆಗಿದ್ದನಲ್ಲದೆ, ಧನ ಮತ್ತು ಇತರ ವಸ್ತುಗಳ ಸಂಚಯದಿಂದ ದೇವೇಂದ್ರ ಕುಬೇರರಿಗೆ ಸರಿದೊರೆಯಾಗಿದ್ದನು.

೯೮. ಲೋಕರಕ್ಷಕನಾಗಿದ್ದ ಮನುವಿನಂತೆ ಆ ದಶರಥನು ಮಹಾತೇಜಸ್ವಿಯಾಗಿ ಜಗತ್ತನ್ನು ಪಾಲಿಸುತ್ತಿದ್ದನು.

೯೯. ಆ ಸತ್ಯಸಂಧನಾದ (ದೊರೆಯು) ಧರ್ಮಾರ್ಥಕಾಮಗಳನ್ನು ಸಾಧಿಸುತ್ತ ಇಂದ್ರನು ಅಮರಾವತಿಯನ್ನು ಪಾಲಿಸುವಂತೆ ಅಯೋಧ್ಯಾಪುರವನ್ನು ಸಂರಕ್ಷಿಸುತ್ತಿದ್ದನು.

೧೦೦. (ದಶರಥ ಆಳುತ್ತಿದ್ದ) ಆ ಶ್ರೇಷ್ಠ ನಗರದಲ್ಲಿ ಜನರು ಧರ್ಮಾತ್ಮರೂ ಸಂತೋಷಭರಿತರೂ, ವಿದ್ವಾಂಸರೂ, ತಮ್ಮ ತಮ್ಮ ಆಸ್ತಿಗಳಿಂದ ತೃಪ್ತರಾಗಿಯೂ ಲೋಭರಹಿತರಾಗಿಯೂ, ಸತ್ಯವಾದಿಗಳಾಗಿಯೂ ಇದ್ದರು.

## ಅಧ್ಯಾಯ ೫

# ಪ್ರಕೃತಿ ಸೌಂದರ್ಯ ವರ್ಣನೆ

ग्रीवाभङ्गाभिरामं मुहुरनुपतति स्यन्दने दत्तदृष्टिः
पश्चार्धेन प्रविष्टः शरपतनभयाद् भूयसा पूर्वकायम् ।
दर्भैरर्धावलीढैः श्रमविवृतमुखभ्रंशिभिः कीर्णवर्त्मा
पश्योदग्रप्लुतत्वाद्वियति बहुतरं स्तोकमुर्व्यां प्रयाति ॥१॥

यदालिकेसूक्ष्मं व्रजति सहसा तद्विपुलतां
यदद्धाविच्छिन्नं भवतिकृतसन्धानमिव तत् ।
प्रकृत्या यद्वक्रं तदपि समरेखं नयनयोर्
नमे दूरे किञ्चित् क्षणमपि न पार्श्वे रथजवात् ॥२॥

नीवाराः शुकगर्भकोटरमुखभ्रष्टास्तरूणामधः
प्रस्निग्धाः क्वचिदिङ्गुदीफलभिदः सूच्यन्त एवोपलाः
विश्वासोपगमादभिन्नगतयः शब्दं सहन्ते मृगास्
तोयाधारपथाश्च वल्कलशिखानिष्यन्दरेखांकिताः ॥३॥

यात्येकतोऽस्तशिखरं पतिरोषधीनां
आविष्कृतोऽरुणपुरःसर एकतोऽर्कः ।
तेजोद्वयस्य युगपद्व्यसनोदयाभ्यां
लोको नियम्यत इवैष दषान्तरेषु ॥४॥



## ಅಧ್ಯಾಯ ೫
# ಪ್ರಕೃತಿ ಸೌಂದರ್ಯ ವರ್ಣನೆ

೧. ನೋಡು– (ಈ ಜಿಂಕೆಯು) ನನ್ನ ತೇರಿನಲ್ಲೇ ನೆಟ್ಟ ದೃಷ್ಟಿಯುಳ್ಳದ್ದಾಗಿದೆ; ನನ್ನಂಬು ತಾಗೀತೆಂಬ ಹೆದರಿಕೆಯಿಂದ ತನ್ನ ಮೈಯ ಹಿಂಭಾಗವನ್ನು ಹೆಚ್ಚಾಗಿ ಮುಂಭಾಗದಲ್ಲಿ ಇದು ತುರುಕಿಕೊಂಡಿದೆ; ಅರ್ಧ ಅಗಿದ ದರ್ಭೆಗಳು ಸುಸ್ತಾದ ಇದರ ತೆರೆವಾಯಿಂದ ದಾರಿಯುದ್ದಕ್ಕೂ ಚೆಲ್ಲಿವೆ; ತನ್ನ ಕುತ್ತಿಗೆಯನ್ನು ತಿರುಹಿಕೊಂಡು ಚೆಲುವಾಗಿ ಇದು ತನ್ನ ಎತ್ತರದ ಜಿಗಿತದ ದೆಸೆಯಿಂದ ಅಂತರಿಕ್ಷದಲ್ಲಿ ಹೆಚ್ಚಾಗಿಯೂ ನೆಲದ ಮೇಲೆ ಕಡಿಮೆಯಾಗಿಯೂ ಹೋಗುತ್ತಿದೆ!

೨. ನನ್ನ ತೇರಿನ ವೇಗದ ದೆಸೆಯಿಂದ ಚಿಕ್ಕದಾಗಿ ಕಂಡದ್ದು ಕೂಡಲೇ ದೊಡ್ಡದಾಗಿ ಬಿಡುತ್ತದೆ, ತುಂಡಾದದ್ದು ಕೂಡಿಸಿಟ್ಟಂತೆ ತೋರುತ್ತದೆ, ಸ್ವಾಭಾವಿಕ ಡೊಂಕಾದದ್ದು ಕಣ್ಣಿಗೆ ನೆಟ್ಟಗಾಗಿ ಕಾಣಿಸುತ್ತದೆ ಮತ್ತು ನನಗೆ ಯಾವುದೂ ಒಂದು ಕ್ಷಣಕಾಲ ಕೂಡ ದೂರದಲ್ಲೂ ಇರದು, ಹತ್ತಿರದಲ್ಲೂ ಇರದು!

೩. ಮರಗಳಡಿಯಲ್ಲಿ ಗಿಳಿಗಳು ವಾಸಮಾಡುತ್ತಿರುವ ಪೊಟ್ಟರೆಗಳಿಂದ ಕಾಡುನವಣೆಯ ಕಾಳುಗಳು ಉದುರಿ ಬಿದ್ದಿವೆ; ಕೆಲವೆಡೆ ಧೂಪಕ್ಕೆ ಬೇಕಾದ ಇಂಗುದಿ ಕಾಯಿಗಳನ್ನು ಒಡೆಯಲು ಬಳಸಿದ ಎಣ್ಣೆಹಿಡಿದ ಕಲ್ಲುಗಳು ಕಾಣಿಸುತ್ತವೆ; ಜಿಂಕೆ ಮುಂತಾದ ಪ್ರಾಣಿಗಳು ಮನುಷ್ಯರಲ್ಲಿ ಬೆಳೆದುಬಂದ ವಿಶ್ವಾಸದ ದೆಸೆಯಿಂದ ಸಹಜವಾಗಿ ತಿರುಗುತ್ತ ಮನುಷ್ಯರ ಸದ್ದನ್ನು ಸಹಿಸುತ್ತಿವೆ; ನಾರುಬಟ್ಟೆಯಿಂದ ಉದುರಿದ ಹನಿಗಳಿಂದ ಎಳೆದ ಗೆರೆಗಳ ಗುರುತುಗಳನ್ನುಳ್ಳ ನೀರಾವಳಿಗಳೂ (ಮೇಲಿನವುಗಳಂತೆಯೇ ಹತ್ತಿರದಲ್ಲೇ ಒಂದು ಋಷ್ಯಾಶ್ರಮವಿದೆ ಎಂಬುದನ್ನು) ಸೂಚಿಸುತ್ತವೆ.

೪. ಒಂದು ಕಡೆ ವನಸ್ಪತಿಗಳೊಡೆಯನಾದ ಚಂದ್ರನು ಮುಳುಗುತ್ತಿದ್ದಾನೆ. ಇನ್ನೊಂದೆಡೆ ಸೂರ್ಯನು ಅರುಣನನ್ನು ಮುಂದಿಟ್ಟುಕೊಂಡು ಮೂಡುತ್ತಿದ್ದಾನೆ. ಈ ಎರಡು ತೇಜೋರಾಶಿಗಳ ಏಕಕಾಲಿಕವಾದ ಬೀಳು– ಏಳುಗಳಿಂದ ಇಂಥ ಬೇರೆ ಬೇರೆ ಸ್ಥಿತಿಗತಿಗಳಲ್ಲಿ ಜಗತ್ತು ಬದ್ಧವಾಗಿದೆಯೋ ಏನೋ ಎಂದು ತೋರುತ್ತದೆ.

कर्कन्धूनामुपरि तुहिनं रञ्जयत्यग्रसन्ध्या
दार्भं मुञ्चत्युटजपटलं वीतनिद्रोमयूरः ।
वेदिप्रान्तात्खुरविलिखितादुत्थितश्चैष सद्यः
पश्चादुच्चैर्भवति हरिणः स्वाङ्गमायच्छमानः ॥५॥

शैलानामवरोहतीव शिखरादुन्मज्जतां मेदिनी
पर्णाभ्यन्तरलीनतां विजहति स्कन्धोदयात्पादपाः ।
सन्तानात्तनुभावनष्टसलिला व्यक्तिं भजन्त्यापगाः
केनाप्युत्क्षिपतेव पश्य भुवनं मत्पार्श्वमानीयते ॥६॥

अग्रे यान्ति रथस्य रेणुवदमी चूर्णीभवन्तो घनाश्
चक्रभ्रान्तिररान्तरेषु जनयत्यन्यामिवारावलीम् ।
चित्रन्यस्तमिवाचलं हयशिरस्यायामवच्चामरं
यष्ट्यग्रे च समं स्थितो ध्वजपटः प्रान्ते च वेगानिलात् ॥७॥

अग्रे स्त्रीनखपाटलं कुरबकं श्यामं द्वयोर्भागयोर्
बालाशोकमुपोढरागसुलभं भेदोन्मुखं तिष्ठति ।
ईषद्बद्धरजःकणाग्रकपिशा चूते नवा मञ्जरी
मुग्धत्वस्य च यौवनस्य च सखे मध्ये मधुश्रीः स्थिता ॥८॥

उष्णालुः शिशिरे निषीदति तरोर्मूलालवाले शिखी
निर्भिद्योपरि कर्णिकारमुकुलान्यालीयते षट्पदः ।
तप्तं वारि विहाय वीरनलिनीं कारण्डवः सेवते
क्रीडावेश्मनि चैष पञ्जरशुकः क्लान्तो जलं याचते ॥९॥

೫. ಮುಚ್ಚಂಜೆಯು ಕರ್ಕಂಧು ಫಲಗಳ ಮೇಲಿನ ಇಬ್ಬನಿಯನ್ನು ಆಕರ್ಷಕವಾದುದನ್ನಾಗಿ ಮಾಡಿದೆ. ನವಿಲು ಎಲೆವನೆಯಲ್ಲಿರುವ ದರ್ಭೆಹುಲ್ಲಿನ ಹಾಸನ್ನು ಬಿಟ್ಟು ಎಚ್ಚರವಾಗಿದೆ; ಜಿಂಕೆಯು ಈಗ ಗೊರಸಿನ ಗೆರೆ ಇರುವ ಜಗುಲಿಯಿಂದೆದ್ದು ಮುರಿ ತೆಗೆದು ಎತ್ತರವಾಗಿ ನಿಲ್ಲುತ್ತಿದೆ.

೬. ಪರ್ವತ ಶಿಖರದಿಂದ ಕೆಳಗೆ ಧುಮ್ಮಿಕ್ಕುತ್ತಿರುವ (ವಿಮಾನದಲ್ಲಿ ಕುಳಿತ) ನನಗೆ–ಭೂಮಿಯು ಬೆಟ್ಟಗಳಿಂದ ಕೆಳಕ್ಕಿಳಿಯುತ್ತಿರುವ ಹಾಗೆ ತೋರುತ್ತದೆ; ಕೊಂಬೆಗಳು ಮೇಲಕ್ಕೇಳುವುದರಿಂದ ಮರಗಳು ಎಲೆಮರೆಯಿಂದ ಹೊರಬೀಳುತ್ತಿವೆ. ಸಾಲುಸಾಲಾಗದೆ ಒತ್ತಟ್ಟಿಗೆ ಕಾಣಿಸುವುದರಿಂದ ಹೊಳೆಗಳು ಒಂದೇ ಒಂದು ಹೆಬ್ಬೊನಲಾಗಿ ತೋರುತ್ತವೆ; ನೋಡು (ಸಾರಥಿ)– ಉರುಳಿಸುತ್ತಿದ್ದ ಯಾವನೋ ಒಬ್ಬನು ಈ ಜಗತ್ತನ್ನು ನನ್ನ ಹತ್ತಿರಕ್ಕೆ ಎಳೆದುಕೊಂಡು ಬರುವ ಹಾಗೆ ಕಾಣಿಸುತ್ತದೆ!

೭. ರಥವೇಗದ ಗಾಳಿಯ ದೆಸೆಯಿಂದ, ತೇರುಬೀದಿಯ ಧೂಳೀಕಣಗಳಂತೆ, ಚೂರುಚೂರಾಗುತ್ತಿರುವ ಮೋಡಗಳು ತೇರಿನ ಮುಂದೆ ಹಾರುತ್ತಿವೆ; ಗಾಲಿಗಳ ಉರುಳುವಿಕೆಯು ಹಳಿಗಳ ನಡುವೆ ಮತ್ತೊಂದು ಗಾಲಿ ತಿರುಗುತ್ತಿರುವ ಭ್ರಮೆಯನ್ನು ಹುಟ್ಟಿಸುತ್ತದೆ: ಕುದುರೆಯ ತಲೆಯ ಮೇಲಿನ ನೀಳವಾದ ಚಾಮರವು ಚಿತ್ರದಲ್ಲಿ ಇರುವ ಹಾಗೆ ಅಲುಗಾಡದೆ ಇದೆ; ಬದಿಯ ನಿಲುಗಂಬದ ತುದಿಯಲ್ಲಿ ಇರುವ ಧ್ವಜಪತಾಕೆಯು ನೆಟ್ಟನೆ ನಿಂತಿದೆ.

೮. ಎಲ್ಮೆ ಗೆಳೆಯ, ಇಬ್ಬಾಗದಲ್ಲಿಯೂ ನೀಲವರ್ಣವುಳ್ಳ (ಮತ್ತು ನಡುವೆ) ಹೆಂಗಸರ ಉಗುರಿನಂತೆ ಕೆಂಪಾಗಿರುವ ಗೋರಟೆ ಎದುರಿಗಿದೆ. ಅಶೋಕವೃಕ್ಷದ ಎಳಮೊಗ್ಗು ಕೆಂಪೇರಿಬರುತ್ತಿರುವುದರಿಂದ ಸುಲಭವಾಗಿ ಒಡೆದರಳಲು ತೊಡಗಿದೆ; ಮಾವಿನ ಮರದಲ್ಲಿ ಹೊಸ ನನೆಗೊಂಚಲು ಪರಾಗ ತುಂಬಿಕೊಳ್ಳುತ್ತಿರುವುದರಿಂದ ತುದಿಯಲ್ಲಿ ಸ್ವಲ್ಪ ಬೂದಾಗಿದೆ: (ಈ ಲಕ್ಷಣಗಳಿಂದ) ವಸಂತಲಕ್ಷ್ಮಿಯು ಬಾಲ್ಯಯೌವನಗಳ ನಡುವಣ (ಕೌಮಾರ) ದಶೆಯಲ್ಲಿರುವಂತೆ ಕಾಣಿಸುತ್ತಾಳೆ.

೯. (ಮಧ್ಯಾಹ್ನಕಾಲದಲ್ಲಿ) ಸೆಕೆಹಿಡಿದ ನವಿಲು ಮರದಡಿಯ ತಂಪಾದ ನೀರಾವಳಿಯಲ್ಲಿ ಕುಳಿತುಕೊಳ್ಳುತ್ತದೆ; ಜೇನುಹುಳುವು ಕರ್ಣಿಕಾರ ಹೂವನ್ನು ಮೇಲಿನಿಂದ ಬಿರಿದು ಒಳಹೊಕ್ಕು ಮರೆಯಾಗುತ್ತದೆ; ಕಾರಂಡವ ಹಕ್ಕಿಯು ಬಿಸಿಯಾದ ನೀರನ್ನು ಬಿಟ್ಟು ದಡದ ಸನಿಹದಲ್ಲಿರುವ ತಾವರೆಬಳ್ಳಿಯನ್ನು ಆಶ್ರಯಿಸುತ್ತದೆ; ಆಡುಮನೆಯಲ್ಲಿರುವ ಈ ಗೂಡುಗಿಳಿಯು ಸುಸ್ತಾಗಿ ನೀರನ್ನು ಬೇಡುತ್ತದೆ.

उत्कीर्णा इव वासयष्टिषु निशानिद्रालसा बार्हिणो
धूपैर्जालविनिः सृतैर्वलभयः संदिग्धपारावताः ।
आचारप्रयतः सपुष्पबलिषु स्थानेषु चार्चिष्मतीः
सन्ध्यामङ्गलदीपिका विभजने शुद्धान्तवृद्धाजनः ॥१०॥

पत्रच्छायासु हंसा मुकुलितनयना दीर्घिकापद्मिनीनां
सौधान्यत्यर्थतापाद्वलभिपरिचयद्वेषिपारावतानि ।
बिन्दुक्षेपान् पिपासुः परिसरति शिखी भ्रान्तिमद्वारियन्त्रं
सर्वैरुस्रैः समग्रैस्त्वमिव नृपगुणैर्दीप्यते सप्तसप्तिः ॥११॥

उन्मत्तानां श्रवणसुभगैः कूजितैः कोकिलानां
सानुक्रोशं मनसिजरुजः सह्यतां पृच्छतेव ।
अङ्गे चूतप्रसवसुरभिर्दक्षिणो मारुतो मे
सान्द्रस्पर्शः करतल इव व्यापृतो माधवेन ॥१२॥

रक्ताशोकरुचा विशेषितगुणो बिम्बाधरालक्तकः
प्रत्याख्यातविशेषकं कुरबकं श्यामावदातारुणम् ।
आक्रान्ता तिलकक्रिया च तिलकैर्लग्नद्विरेफाञ्जनैः
सावज्ञेव मुखप्रसाधन विधौ श्रीर्माधवी योषिताम् ॥१३॥

वासोऽर्थं दययेव नाति पृथवः कृत्तास्तरूणां त्वचा
भग्नाऽऽलक्ष्यजरत्कमण्डलु नभः स्वच्छं पयोनैर्झरम् ।
दृश्यन्ते त्रुटितोऽज्झिताश्च वटुभिमौञ्ज्यः क्वचिन्मेखला
नित्याकर्णतया शुकेन च पदं साम्नामिदं पठ्यते ॥१४॥

೧೦. (ಸಂಜೆ) ಗೂಡುಗಳಲ್ಲಿ ಚೆಲ್ಲಿ ಬಿದ್ದಂತಿರುವ ನವಿಲುಗಳು ಇರುಳಲ್ಲಿ ನಿದ್ರಿಸಿದವರಿಗಿರುವಂಥ ಆಲಸ್ಯವನ್ನು ಹೊಂದಿವೆ; ಸೌಧಗಳ ಅಟ್ಟದ ಮೇಲಿನ ಹೊಗೆಕಿಂಡಿಗಳಿಂದ ಹೊರಬರುವ ಹೊಗೆಯ ದೆಸೆಯಿಂದ ಪಾರಿವಾಳಗಳು ದಿಕ್ಕುಗಾಣದ ಸಂದಿಗ್ಧ ಸ್ಥಿತಿಯಲ್ಲಿವೆ; ರಾಣೀವಾಸದಲ್ಲಿರುವ ಮುದುಕಿಯರು ಆಚಾರದಿಂದ ಪುನೀತರಾಗಿ ಹೂಬಲಿ ಚೆಲ್ಲಿದ ಸ್ಥಳಗಳಲ್ಲಿ ಜ್ವಾಲಾಮಯವಾದ ಸಂಧ್ಯಾಶುಭದ ದೀವಿಗೆಗಳನ್ನು ಹಚ್ಚಿಡುತ್ತಾರೆ.

೧೧. ಪುಷ್ಕರಿಣಿಗಳಲ್ಲಿರುವ ತಾವರೆಬಳ್ಳಿಗಳ ಎಲೆಗಳ ನೆರಳಿನಲ್ಲಿ ಹಂಸಗಳು (ಮಧ್ಯಾಹ್ನ ಕಾಲದಲ್ಲಿ) ಕಣ್ಣು ಮುಚ್ಚಿ ಕುಳಿತಿವೆ; ಅತಿಯಾದ ಬಿಸಿಲ ಬೇಗೆಯ ದೆಸೆಯಿಂದ ಸೌಧಗಳ ತುದಿಯನ್ನು ಪಾರಿವಾಳಗಳು ಮುಟ್ಟಲೊಲ್ಲವು; ಸಿಡಿವನಿಗಳನ್ನು ಕುಡಿಯುವ ಆಸೆಯಿಂದ ನವಿಲು ತಿರುಗುತ್ತಿರುವ ಜಲಯಂತ್ರವನ್ನು ಸುತ್ತುವರಿಯುತ್ತಿದೆ; ನೀನು ನಿನ್ನ ಎಲ್ಲ ರಾಜಗುಣಗಳಿಂದ ಹೇಗೋ ಹಾಗೇ ಏಳು ಕುದುರೆತೇರನ್ನೇರಿ ಬರುವ ಸೂರ್ಯನು ತನ್ನ ಎಲ್ಲ ಕಿರಣಗಳಿಂದಲೂ ಕೂಡಿದವನಾಗಿ ಪ್ರಕಾಶಿಸುತ್ತಿದ್ದಾನೆ.

೧೨. (ವಸಂತ ಋತುವಿನಲ್ಲಿ) ಮದುವೇರಿದ ಕೋಗಿಲೆಗಳ ಇಂಪಾದ ಧ್ವನಿಯ ಮೂಲಕ ವಸಂತನು ದಯೆಯಿಂದ ನನ್ನನ್ನು 'ಪ್ರೇಮಜ್ವರವು ಸಹ್ಯವಾಗಿದೆಯೇ?' ಎಂದು ಕೇಳುವಂತೆ ತೋರುತ್ತದೆ; ಅವನ ಅಂಗೈಯ ಗಾಢಸ್ಪರ್ಶವೇನೋ ಎಂಬಂತೆ ಮಾವಿನ ನನೆಯ ಪರಿಮಳವನ್ನು ಸೂಸುವ ಮಲಯ ಮಾರುತನು ತನ್ನ ಮೈಮೇಲೆ ಬೀಸುತ್ತಿದ್ದಾನೆ!

೧೩. (ವಸಂತ ಋತುವಿನಲ್ಲಿ) ತರುಣಿಯರ ಬಿಂಬಾಧರಗಳ ಅರಗುಗೆಂಪನ್ನು ಕೆಂಪು ಅಶೋಕದ ಕಾಂತಿಯು ಮೀರಿಸಿದೆ; ಅವರ ಗಲ್ಲ ಮೊಲೆ ಮುಂತಾದ ಅವಯವಗಳ ಮೇಲಿನ ಬಣ್ಣದ ಲೇಪವನ್ನು (ಕರಿ–ಬಿಳಿ–ಕೆಂಪು ಬಣ್ಣದ ಗೆರೆಗಳನ್ನು) ಗೋರಟೆ ಕೀಳ್ಗಳೆಯುತ್ತಿದೆ; ಕಾಡಿಗೆಯಂಥ ದುಂಬಿಗಳಿಂದ ತುಂಬಿದ ತಿಲಕ ಪುಷ್ಪಗಳು ಅವರ ಹಣೆಯ ತಿಲಕದ ಕರ್ಬೊಟ್ಟನ್ನು (ಚೆಂದದಲ್ಲಿ) ಹಿಮ್ಮೆಟ್ಟಿಸಿದೆ.

೧೪. (ಈ ತಪೋವನದಲ್ಲಿ) ಬಟ್ಟೆಗಾಗಿ ಮರಗಿಡಗಳ ತೆಳ್ಳನೆಯ ತೊಗಟನ್ನು ದಯೆಯಿಂದಲೋ ಎಂಬಂತೆ ಬಿಚ್ಚಿ ತೆಗೆಯಲಾಗಿದೆ; ಒಡಕು ಬಿರುಕುಗಳು ಕಾಣಿಸದ ಹಳೆಯ ಕಮಂಡಲುವಿನಲ್ಲಿರುವ ಗಿರಿನದೀಜಲವು ಆಗಸದಷ್ಟು ಸ್ವಚ್ಛವಾಗಿದೆ; ಇಲ್ಲಿ ಕೆಲವೆಡೆ ಬ್ರಹ್ಮಚಾರಿಗಳು ತಮ್ಮ ಹರಿದ ಮೌಂಜೀ ಮೇಖಲೆಗಳನ್ನು ಎಸೆದುದು ಕಂಡುಬರುತ್ತದೆ; ದಿನವೂ ಕೇಳಿ ಕೇಳಿ ಕಲಿತ ಸಾಮವೇದದ ಪದಗಳನ್ನು ಗಿಳಿಗಳು ಹೇಳುತ್ತವೆ.

मधुरमिव वदन्ति स्वागतं भृङ्गशब्दैर्
नतिमिवफलनमैः कुर्वतेऽमी शिरोभिः ।
मम ददत इवार्घ्यं पुष्पवृष्टीः किरन्तः
कथमतिथिसपर्यां शिक्षिताः शाखिनोऽपि ॥१५॥

तापात्तत्क्षणघृष्टचन्दनरसौ पाण्डू कपोली वहन्
संसक्तैर्निजकर्णतालपवनैः संवीज्यमानाननः ।
सम्प्रत्येष विशेषसिक्तहृदयो हस्तोज्झितैः शीकरैः
गाढायल्लकदुः सहामिव दशां धत्ते गजानां पतिः ॥१६॥

निष्यन्दश्चन्दनानां शिशिरयति लतामण्डपे कुट्टिमान्तान्
आराद् धारागृहाणां ध्वनिमनुतनुते ताण्डवं नीलकण्ठः ।
यन्त्रोन्मुक्तश्च वेगाच्चलति विटपिनां पूरयन्नालवालान्
आपातोत्पीडहेलाहतकुसुमरजः पिञ्जरोऽयं जलौधः ॥१७॥

अमीगीतारम्भैर्मुखरितलतामण्डपभुवः
परागैः पुष्पाणां प्रकटपटवासव्यतिकराः ।
पिबन्तः पर्याप्तं सह सहचरीभिर्मधुरसं
समन्तादापानोत्सवमनुभवन्तीह मधुपाः ॥१८॥

निद्रामुद्रावबन्धव्यतिकरमनिशं पद्मकोषादपास्यन्
आशापूरैककर्मप्रवणनिजकराप्रीणिताशेषविश्वः ।
दृष्टः सिद्धैः प्रसक्तस्तुतिमुखरमुखैरस्तमप्येष गच्छन्
एकः श्लाघ्यो विवस्वान् परिहितकरणायैव यस्य प्रयासः ॥१९॥

उद्गर्जज्जलकुञ्जरेन्द्ररभसास्फालानुबन्धोद्धतः
सर्वाः पर्वतकन्दरोदरभुवः कुर्वन् प्रतिध्वानिनीः ।
उच्चैरुच्चरति ध्वनिः श्रुतिपथोन्माथी यथाऽयं तथा
प्रायः प्रेंखदसंख्यशङ्खवलया वेलेयमागच्छति ॥२०॥

೧೫. (ಈ ತಪೋವನದಲ್ಲಿ) ಮರಗಳು ತಮ್ಮ ಜೇನುದನಿಯಿಂದ ಇಂಪಾಗಿ ನನ್ನನ್ನು ಸ್ವಾಗತಿಸುವಂತೆ ತೋರುತ್ತದೆ; ಇವು ತಮ್ಮ ಫಲಭಾರದಿಂದ ತಲೆಬಾಗಿ ನಮಸ್ಕಾರ ಮಾಡುವಂತೆ ಕಾಣಿಸುತ್ತವೆ; ಹೂಗಳನ್ನು (ಸುತ್ತಲೂ) ಸುರಿದ ಇವು ನನಗೆ ಕೈತೊಳೆಯಲು ನೀರು ಕೊಡುವಂತೆ ಭಾಸವಾಗುತ್ತದೆ; ಇದೇನು? ಮರ–ಗಿಡಗಳು ಕೂಡ ಇಲ್ಲಿ ಅತಿಥಿ ಸತ್ಕಾರ ಮಾಡಲು ಕಲಿತುಕೊಂಡಿವೆಯೇ?

೧೬. (ಮಧ್ಯಾಹ್ನದ ಈ ಅವಧಿಯಲ್ಲಿ) ಆನೆಗಳ ಒಡೆಯನಾದ ಈ ಹೇರಾನೆಯೂ ಬಿಸಿಲ ಬೇಗೆಯಿಂದ ಗಂಧದ ಗಿಡಗಳಿಗೆ ತಿಕ್ಕಿ ಕೆಂಗೆನ್ನೆಯುಳ್ಳದ್ದಾಗಿದೆ; ಬೀಸಣಿಗೆಯಂಥ ತನ್ನ ಕಿವಿಗಳಿಂದ ಗಾಳಿಯನ್ನು ತನ್ನ ಮುಖಕ್ಕೆ ಇದು ಬೀಸಿಕೊಳ್ಳುತ್ತಿದೆ; ಈಗ ಈ ಆನೆಯು ತನ್ನ ಸೊಂಡಿಲಿಂದ ಎದೆಗೆ ಚೆನ್ನಾಗಿ ನೀರನ್ನು ಸಿಂಪಡಿಸಿಕೊಳ್ಳುತ್ತಿದ್ದರೂ ಕಂಬಕ್ಕೆ ಕಟ್ಟಿದ ಬಿಗಿತದಿಂದ ಎಂಬಷ್ಟು ದುಃಸಹ ವೇದನೆಯನ್ನು ಅನುಭವಿಸುತ್ತಿದೆ.

೧೭. (ಈ ಉದ್ಯಾನದಲ್ಲಿ) ಬಳ್ಳಿಮಾಡಗಳ ಜಗುಲಿಯ ತುದಿಗಳನ್ನು ಗಂಧದ ಮರಗಳಿಂದ ಒಸರಿದ ರಸವು ತಂಪು ಮಾಡಿದೆ; ಹತ್ತಿರದಲ್ಲೇ ನವಿಲು ನೀರಿನ ಧಾರೆ ಬೀಳುವಂಥ ಮೀವ ಮನೆಗಳ (ಧಾರಾಪಾತದ) ತಾಂಡವ ಧ್ವನಿಯನ್ನು ಬಿತ್ತರಿಸುತ್ತಿದೆ; ಪಂಪಿನಿಂದ ವೇಗವಾಗಿ ಬಂದ ನೀರು ಮರದಡಿಯ ನೀರಾವಳಿಯನ್ನು ತುಂಬಿಸಿ, ತನ್ನ ರಭಸದ ಪೆಟ್ಟಿನಿಂದ ಲೀಲಾಜಾಲವಾಗಿ ಉದುರಿದ ಪರಾಗದಿಂದ ಹಳದಿಯಾಗಿದೆ.

೧೮. (ಈ ಉದ್ಯಾನದಲ್ಲಿ) ದುಂಬಿಗಳು ಬಳ್ಳಿಮಾಡಗಳಲ್ಲಿ ತಮ್ಮ ಝೇಂಕಾರ ಧ್ವನಿಯನ್ನು ತುಂಬಿವೆ; ಹೂವಿನ ಪರಾಗದಿಂದ ಇವು ಬಟ್ಟೆ–ಬರೆ ತೊಟ್ಟಂತೆ ತೋರುತ್ತವೆ; ಅಲ್ಲದೆ, ಈ ಜೇನುಗಳು ತಮ್ಮ ಪ್ರೇಯಸಿಯರೊಡನೆ ಯಥೇಷ್ಟವಾಗಿ ಹೂವಿನ ಮಕರಂದವನ್ನು ಕುಡಿದು, ಇಲ್ಲೇ ಪಾನೋತ್ಸವವನ್ನು ಅನುಭವಿಸುತ್ತಿರುವಂತೆ ಕಾಣುತ್ತದೆ,

೧೯. ಸೂರ್ಯನು ಪದ್ಮಕೋಶದ ನಿದ್ರಾಮುದ್ರೆಯ ಬಂಧವನ್ನು ನಿತ್ಯವೂ ಬಿಡಿಸಿ, ದಿಕ್ಕುಗಳೆಲ್ಲವನ್ನೂ ತುಂಬುವುದರಲ್ಲಿಯೇ ನಿರತವಾದ ತನ್ನ ಕಿರಣಗಳಿಂದ ಇಡಿ ಜಗತ್ತನ್ನು ಸಂತೋಷಪಡಿಸಿದ್ದು ಅವನ ಸ್ತುತಿಮಾಡುವ ಸಿದ್ಧರಿಗೆ ತಿಳಿಯಿತು; ಅವನೀಗ ಅಸ್ತಂಗತನಾಗುತ್ತಿದ್ದಾನೆ. ಅಂಥ ಪರೋಪಕಾರಕ್ಕಾಗಿ ಪ್ರಯಾಸಪಡುವ ಅವನೊಬ್ಬನೇ ಶ್ಲಾಘ್ಯನು.

೨೦. ಸಮುದ್ರದ ಭರತದ ಪ್ರವಾಹವು, ಗರ್ಜಿಸುವ ನೀರಾನೆಗಳ ರಭಸದ ಸತತವಾದ ಬಡಿತಗಳಿಂದ ಕೆರಳಿ, ಎಲ್ಲ ಬೆಟ್ಟಗಳ ಕಣಿವೆಗಳಲ್ಲೂ ಪಡಿನುಡಿಯುವಂತೆಸಗಿ, ಕಿವಿ ಗಡಚಿಕ್ಕುವಂತೆ ಗಟ್ಟಿಯಾದ ದನಿಯೆದ್ದಿರುವುದರಿಂದ, ಉರುಳಿ ಬರುವ ಅನೇಕಾನೇಕ ಶಂಖದ ಚಿಪ್ಪುಗಳೊಡನೆ ಹರಿದು ಬರುತ್ತಿದೆಯೆಂದು ತೋರುತ್ತದೆ.

कवलितलवङ्गपल्लव करिमकरोद्गारसुरभिणा पयसा ।
एषा समुद्रवेला रत्नद्युतिरञ्जिता भाति ॥२१॥

उदयति हि शशाङ्कः क्लिन्नखर्जूरपाण्डुर्
युवतिजनसहायो राजमार्गप्रदीपः ।
तिमिरनिचयमध्ये रश्मयो यस्य गौराः
हृतजल इव पङ्के क्षीरधाराः पतन्ति ॥२२॥

द्रुमा धावन्तीव द्रुतरथगतिक्षीणविषया
नदीवोद्वृत्ताम्बुर्निपतति मही नेमिविवरे ।
अरव्यक्तिर्नष्टा स्थितमिव जवाच्चक्रवलयं
रजश्चश्वोद्भूतं पतति पुरतो नानुपतति ॥२३॥

भ्रमति सलिलं वृक्षावर्ते सफेनमवस्थितं
तृषितपतितानैतेक्लिष्टं पिबन्ति जलं खगाः ।
स्थलमभिपतन्त्यार्द्राः कीटा बिले जलपूरिते
नववलयिनो वृक्षा मूले जलक्षयरेखया ॥२४॥

कनकरचिताविद्रुमेन्द्रनीलैर्
विकृतमहाद्रुमपंक्तिचित्रदेशा ।
रुचिरतरनगा विभातिशुभ्रा
नभसि सुरेन्द्रविहारभूमिकल्पा ॥२५॥

सजलजलधरेन्द्रनीलनीरो
विलुलितफेनतरङ्गचारुहारः ।
समधिगतनदीसहस्रबाहुर्
हरिरिव भाति सरित्पतिः शयानः ॥२६॥

೨೧. ಲವಂಗದ ಚಿಗುರುಗಳನ್ನು ನುಂಗಿದ ನೀರಾನೆ ಹೆಮ್ಮೀನುಗಳು ಉಗುಳಿದ ಸುವಾಸನೆ ಬೆರೆತ ನೀರಿಂದ ನವರತ್ನಗಳ ಕಾಂತಿಯಿಂದ ರಂಜಿಸುವ ಈ ಕಡಲ ಭರತದ ಹೊನಲು ಸುಂದರವಾಗಿ ತೋರುತ್ತದೆ.

೨೨. ರಾಜಬೀದಿಗೆ ದೀಪವಾಗಿ, ತರುಣಿಯರಿಗೆ ಸಹಚರನಾಗಿ, ನೀರಲ್ಲಿ ಅದ್ದಿದ ಬೆಳ್ಳಿಯಂತೆ ಬೆಳ್ಳಗಿರುವ ಚಂದ್ರನು ಮೂಡುತ್ತಿದ್ದಾನೆ; ಕತ್ತಲ ಮೊತ್ತದ ನಡುವೆ ಆತನ ಬೆಳ್‌ಗದಿರುಗಳು ನೀರು ಬತ್ತಿದ ಕೆಸರುಗೆರೆಯಲ್ಲಿ ಹಾಲಿನ ಧಾರೆಗಳಂತೆ ಬೀಳುತ್ತಿವೆ.

೨೩. (ತೇರೇರಿ ಕುಳಿತ ನನಗೆ) ರಥಗತಿಯ ವೇಗದಿಂದ ಮರಗಳು ಓಡುವಂತೆಯೂ ವಸ್ತುಗಳು ಚಿಕ್ಕವುಗಳಾಗುತ್ತ ಹೋಗುವಂತೆಯೂ ಭೂಮಿಯು ನೀರು ಮೇಲೆದ್ದ ನದಿಯಂತೆ ರಥಚಕ್ರದ ಸುತ್ತುಪಟ್ಟಿಯೊಳಗಿನ ತೂತುಗಳಲ್ಲಿ ಬೀಳುವಂತೆಯೂ ತೋರುತ್ತವೆ; ಹಳಿಗಳು ಕಾಣಿಸವು; ವೇಗದ ದೆಸೆಯಿಂದ ಗಾಲಿಯಚ್ಚಿನ ಬಳೆ ನಿಂತಂತೆ ಕಾಣುತ್ತದೆ; ಕುದುರೆಗಳೆಬ್ಬಿಸಿದ ಧೂಳು ಒಮ್ಮೆ ಮೇಲೆದ್ದು ಕೆಳಗೆ ಬೀಳುವುದಲ್ಲದೆ, ತೇರನ್ನು ಹಿಂಬಾಲಿಸಿಬಾರದು.

೨೪. ಮರದಡಿಯ ನೀರಾವಳಿಯಲ್ಲಿ ನೊರೆ ನೀರು ಸುತ್ತುತ್ತಿದೆ; ಹಕ್ಕಿಗಳು ಬಾಯಾರಿ ಕೆಳಗೆ ಹಾರಿ ಸುಖವಾಗಿ ನೀರು ಕುಡಿಯುತ್ತಿವೆ; ನೀರು ತುಂಬಿದ ಚಿಕ್ಕ ಕುಳಿಗಳಲ್ಲಿಯ ಒದ್ದೆಯಾದ ಹುಳುಗಳು ಮೇಲೆದ್ದು ನೆಲದತ್ತ ಹರಿಯುತ್ತಿವೆ; ನೀರಾರಿ ಹೋದ ನೀರಾವಳಿಯುಳ್ಳ ಮರಗಳ ಬೇರುಗಳಿಗೆ ನೀರಾರಿದ ಗೆರೆಗಳ ದೆಸೆಯಿಂದ ಹೊಸ ಬಳೆಯನ್ನು ತೊಡಿಸಿದಂತೆ ತೋರುತ್ತದೆ.

೨೫. ಆಕಾಶದ ಪ್ರದೇಶವು (ಈಗ) ಬಂಗಾರದಿಂದ ಮಾಡಿದ ಹವಳ ನೀಲಮಣಿಗಳಿಂದ ಕೂಡಿದ, ವಿಕಟಾಕಾರದ ದೊಡ್ಡ ಮರಗಳ ಸಾಲುಗಳಿಂದ ಚಿತ್ರ ವಿಚಿತ್ರವಾಗಿ ಕಾಣುತ್ತದೆ; ಶುಭ್ರವೂ ಸುಂದರವೂ ಆದ ಬೆಟ್ಟಗಳು ಬೇರೆ ತೋರುತ್ತಿವೆ. ಆದುದರಿಂದ ಅದು ದೇವತೆಗಳ ಒಡೆಯನಾದ ಇಂದ್ರನ ವಿಹಾರ ಸ್ಥಳಕ್ಕೆ ಸರಿದೊರೆಯಾಗಿದೆ.

೨೬. ನೀರ್ಮೋಡಗಳಿಂದ ನೀಲ ನೀರುಳ್ಳವನಾಗಿ, ಅತ್ತಿತ್ತ ಚಲಿಸುವ ನೊರೆಯಲೆಗಳಿಂದ ಸೊಗಸಾದ ಹಾರವುಳ್ಳವನಾಗಿ, ಪಡೆದ(ಸಾವಿರಾರು) ಹೊಳೆಗಳಿಂದ ಸಾವಿರ ಕೈಗಳನ್ನುಳ್ಳವನಾಗಿ ಹೊಳೆಗಳೊಡೆಯನಾದ ಕಡಲು ಮಲಗಿದ ನಾರಾಯಣನಂತೆ ತೋರುತ್ತಾನೆ.

क्वचित्फेनोद्गारी क्वचिदपिच मीनाकुलजल:
क्वचिच्छङ्काकीर्ण: क्वचिदपिच नीलाम्बुदनिभ: ।
क्वचिद्वीचीमाल: क्वचिदपिच नक्रप्रतिभय:
क्वचिद्भीमावर्त: क्वचिदपि च निष्कम्पसलिल: ॥२७॥

अस्ताद्रिमस्तकगत: प्रतिसंहतांशु:
संन्ध्यानुरञ्जितवपु: प्रतिभाति सूर्य: ।
रक्तोज्वलांशुकवृते द्विरदस्य कुम्भे
जाम्बूनदेन रचित: पुलको यथैव ॥२८॥

विस्रब्धं हरिणाश्चरन्त्यचकिता देशागतप्रत्यया
वृक्षा: पुष्पफलै: समृद्धविटपा: सर्वे दयारक्षिता: ।
भूयिष्टं कपिलानि गोकुलधनान्यक्षेत्रवत्योदिश:
नि:सन्दिग्धमिदं तपोवनमयं धूमोहि बह्वाश्रय: ॥२९॥

खगा वासोपेता: सलिलमवगाढो मुनिजन:
प्रदीप्तोऽग्निर्भाति प्रविचरति धूमो मुनिवनम् ।
परिभ्रष्टो दूराद्रविरपि च संक्षिप्तकिरणो
रथं व्यावर्त्यासौ प्रविशति शनैरस्तशिखरम् ॥३०॥

ऋज्वायतां च विरलां च नतोन्नतां च
सप्तर्षिवंशकुटिलां च निवर्तनेषु ।
निर्मुच्यमान भुजगोदरनिर्मलस्य
सीमामिवाम्बरतलस्य विभज्यमानाम् ॥३१॥

पूर्वा तु काष्टा तिमिरानुलिप्ता
सन्ध्यारुणा भाति च पश्चिमाशा ।
द्विधा विभक्तान्तरमन्तरिक्षं
यात्यर्धनारीश्वररूपशोभाम् ॥३२॥

೨೭. ಸಮುದ್ರವು ಕೆಲವೆಡೆ ನೊರೆಯುಗುಳುತ್ತಿದೆ; ಕೆಲವೆಡೆ ಅದರ ನೀರಿನಲ್ಲಿ ಮೀನುಗಳು ತುಂಬಿವೆ; ಮತ್ತೆ ಕೆಲವೆಡೆ ಶಂಖದ ಚಿಪ್ಪುಗಳು ಚೆಲ್ಲಿ ಬಿದ್ದಿವೆ; ಇತರ ಕಡೆ ಅದು ನೀಲಮೇಘಸದೃಶವಾಗಿದೆ; ಕೆಲವೆಡೆ ಅದು ತರಂಗ ಮಾಲೆಗಳಿಂದ ಕೂಡಿದ್ದರೆ, ಇನ್ನೂ ಕೆಲವೆಡೆ ಮೊಸಳೆಯನ್ನೂ ಹೆದರಿಸುವಷ್ಟು ಭಯಂಕರವಾಗಿದೆ; ಹೆದರಿಕೆ ಹುಟ್ಟಿಸುವಂಥ ಬಲವಾದ ಸುಳಿಗಳು ಕೆಲವೆಡೆ ಇದ್ದರೆ, ಕೆಲವೆಡೆ ಅದರ ನೀರು ನಿಷ್ಪಂದವಾಗಿದೆ.

೨೮. ಸೂರ್ಯನು (ಈಗ) ಅಸ್ತಪರ್ವತದ ಶಿಖರದಲ್ಲಿದ್ದಾನೆ; ತನ್ನ ಕಿರಣಗಳನ್ನವನು ಹಿಂದಕ್ಕೆ ಎಳೆದು ಕೊಂಡಿರುವುದರಿಂದ ಆತನು ಕೆಂಪಾಗಿ ಹೊಳೆಯುವ ಬಟ್ಟೆಯಿಂದ ಅಲಂಕೃತವಾದ ಆನೆಯ ಕುಂಭಸ್ಥಳದಲ್ಲಿಟ್ಟ ರತ್ನದಂತೆ ತೋರುತ್ತಾನೆ.

೨೯. ನಾಡಿಂದ ಬಂದ ಜನರ ಪರಿಚಯವುಳ್ಳ ಜಿಂಕೆಗಳಿಲ್ಲಿ ಹಾಯಾಗಿ ತಿರುಗಾಡುತ್ತಿವೆ; ದಯೆಯಿಂದ ರಕ್ಷಿತವಾದ ಮರಗಳ ಕೊಂಬೆಗಳು ಫಲಪುಷ್ಪಗಳಿಂದ ಸಮೃದ್ಧವಾಗಿವೆ; ಕಪಿಲೆ ಹಸುಗಳು ಬೇಕಾದಷ್ಟಿವೆ; ಸುತ್ತುಮುತ್ತಲಿನ ಪ್ರದೇಶಗಳನ್ನು ಉತ್ತು ಬಿತ್ತಿ ಯಾರಾರೂ ಬೇಸಾಯಕ್ಕೊಳಪಡಿಸಿಲ್ಲ; ಆದುದರಿಂದ ಬಹಳ ಕಡೆಗಳಲ್ಲಿ ಹೊಗೆ ಏಳುತ್ತಿರುವ ಈ ಪ್ರದೇಶವು ನಿಃಸಂದೇಹವಾಗಿ ಒಂದು ತಪೋವನವೇ ಸರಿ.

೩೦. (ತಪೋವನದಲ್ಲಿ ಈ ಸಂಜೆ) ಹಕ್ಕಿಗಳು ಗೂಡು ಸೇರುತ್ತಿವೆ; ತಪಸ್ವಿಗಳು ಸ್ನಾನಮಾಡುತ್ತಿದ್ದಾರೆ; ಹಚ್ಚಿದ ಬೆಂಕಿಯು ಹೊಳೆಯುತ್ತಿದೆ; ತಪೋವನದ ತುಂಬ ಹೊಗೆ ಆಡುತ್ತಿದೆ; ಸೂರ್ಯ ಕೂಡ ತನ್ನ ಕಿರಣಗಳನ್ನು ಮೊಟಕು ಮಾಡಿಕೊಂಡು ದೂರದಲ್ಲಿ ಕಳಚಿಕೊಳ್ಳುತ್ತಿದ್ದಾನೆ; ಅವನು ತೇರು ತಿರುಗಿಸಿಕೊಂಡು ಮೆಲ್ಲ ಮೆಲ್ಲನೆ ಅಸ್ತಾಚಲದ ಶಿಖರವನ್ನು ಹೊಗುತ್ತಿದ್ದಾನೆ.

೩೧. ಆಕಾಶದಲ್ಲಿ ಸಾರಸಪಕ್ಷಿಗಳ ಸಾಲು ನೇರವೂ ಉದ್ದವೂ ಆಗಿದೆ; ಅದರಲ್ಲಿ ಪಕ್ಷಿಗಳ ಸ್ಥಾನ ಬಿಡಿ ಬಿಡಿ ಆಗಿದೆ ಮತ್ತು ತಗ್ಗು ಏರಾಗಿದೆ; ತಿರುಗುವ ಸಂದರ್ಭದಲ್ಲಿ ಸಪ್ತರ್ಷಿ ಮಂಡಲದಂತೆ ಡೊಂಕಾಗುತ್ತದೆ; ಅದು ಬಿಡಲ್ಪಡುತ್ತಿರುವ ಹಾವಿನ ಪೊರೆಯಷ್ಟು ಸ್ವಚ್ಛವಾಗಿರುವ ಬಾಂದಳದ ಸೀಮಾರೇಖೆ ಎಳೆಯಲ್ಪಡುತ್ತಿದೆ ಎಂಬಂತೆ ತೋರುವ ಹಾಗೆ ಮಾಡಿದೆ.

೩೨. ಮೂಡಲಿಗೆ ಕತ್ತಲು ಬಳಿದುಕೊಂಡಿದೆ; ಪಡುವಲು ಸಂಜೆಗೆಂಪಿನಿಂದ ಶೋಭಿಸುತ್ತಿದೆ; ಅದರಿಂದ ಮುಗಿಲು ಇಬ್ಭಾಗವಾಗಿ ಅರ್ಧನಾರೀಶ್ವರನ ಚೆಂದವನ್ನು ಹೊಂದಿದೆ.

व्यामृष्टसूर्यतिलको विततोडुमालो
नष्टातपो मृदुमनोहरशीतवातः ।
संलीनकामुकजनः प्रविकीर्णशूरो
वेषान्तरं रचयतीव मनुष्यलोकः ॥३३॥

गर्भस्था इव मोहमभ्युपगताः सर्वाः प्रजा निद्रया
प्रासादाः सुखसुप्तनीरवजनाध्यानं प्रविष्टा इव ।
प्रग्रस्ता इव सञ्चितेन तमसा स्पर्शानुमेया नगा
अन्तर्धानमिवोपयति सकलं प्रच्छन्नरूपं जगत् ॥३४॥

तिमिरमिव वहन्ति मार्गनद्यः
पुलिननिभाः प्रतिभान्ति हर्म्य मालाः ।
तमसि दश दिशो निमग्नरूपाः
प्लवतरणीय इवायमन्धकारः ॥३५॥

अत्युष्णाज्वरितेव भास्करकरैरापीतसारा मही
यक्ष्मार्ता इव पादापाः प्रमुषितच्छायादवाग्न्याश्रयात् ।
विक्रोशन्त्यवशादिवोच्छ्रितगुहाव्यात्ताननाः पर्वता
लोकोऽयं रविपाकनष्टहृदयः संयाति मूर्छामिव ॥३६॥

लिम्पन्ति रूक्षपवनाः सिकताग्निचूर्णैः
संखेदयन्ति च नगाः परुषैः पलाशैः ।
दावैर्द्रवीकृततनुः स्रवतीव भास्वान्
आदित्यपाकचलितः फलतीव लोकः ॥३७॥

शैलेन्द्राः कलभोपमा जलधयः क्रीडातटाकोपमा
वृक्षाः शैवलसन्निभाः क्षितितलं प्रच्छन्ननिम्नस्थलम् ।
सीमन्ता इव निम्नगाः सुविपुलाः सौधाश्चबिन्दूपमा
दृष्टं वक्रमिवाभिभाति सकलं संक्षिप्तरूपं जगत् ॥३८॥

೩೩. ಈಗ ಮನುಷ್ಯಲೋಕವು ಸೂರ್ಯನೆಂಬ ತಿಲಕವನ್ನು ಕಳೆದುಕೊಂಡಿದೆ; ತಾರಾಮಾಲೆ (ಆಕಾಶದಲ್ಲಿ) ಹಬ್ಬಿದೆ; ಬಿಸಿಲಿಳಿದಿದೆ; ಚೆನ್ನಾದ ಮೆಲ್ಲೆಲರು ತಂಪಾಗಿ ಬೀಸುತ್ತಿದೆ; ಪ್ರಿಯ–ಪ್ರೇಯಸಿಯರು ಅವಿತು ಸೇರುತ್ತಿದ್ದಾರೆ; ಇದರಿಂದ, ಶೂರರಿಂದ ತುಂಬಿದ ಈ ಪ್ರಪಂಚವು ವೇಷ ಬದಲಾಯಿಸಿದಂತೆ ತೋರುತ್ತಿದೆ!

೩೪. ಎಲ್ಲ ಪ್ರಜೆಗಳೂ ಗರ್ಭಸ್ಥ ಶಿಶುಗಳಂತೆ ಎಚ್ಚರವಿಲ್ಲದವರಾಗಿದ್ದಾರೆ (ಈ ಅರ್ಧರಾತ್ರಿಯಲ್ಲಿ), ಸುಖವಾಗಿ ನಿದ್ದೆಮಾಡಿದ ಜನರಿಂದ ನಿಃಶಬ್ದವಾಗಿರುವ ಉಪ್ಪರಿಗೆ ಮನೆಗಳು ಧ್ಯಾನಮಗ್ನವಾಗಿರುವಂತೆ ತೋರುತ್ತವೆ; ಕೂಡಿಬಂದ ಕಪ್ಪಿನಿಂದ ಕಬಳಿಸಲ್ಪಟ್ಟಿರುವ ಹಾಗೆ ಬೆಟ್ಟಗಳು ಮುಟ್ಟಿದರೆ ಮಾತ್ರ ಗೊತ್ತಾಗುವ ಸ್ಥಿತಿಯಲ್ಲಿವೆ; ಆದುದರಿಂದ ಅವ್ಯಕ್ತವಾಗಿರುವ ಈ ಜಗತ್ತು ಅದೃಶ್ಯವಾಗಿ ಹೋಗಿರುವಂತೆ ತೋರುತ್ತದೆ.

೩೫. (ಈ ನಟ್ಟಿರುಳಲ್ಲಿ) ಹಾದಿಯುದ್ದಕ್ಕು ಸಿಗುವ ಹೊಳೆಗಳು ಕತ್ತಲಿನಂತೆ ಹರಿಯುತ್ತಿವೆ; ಸೌಧಗಳ ಮಾಲೆ ಮರಳು ದಿಣ್ಣೆಗಳಂತೆ ತೋರುತ್ತವೆ; ಹತ್ತು ದಿಕ್ಕುಗಳೂ ಕಪ್ಪಿನಲ್ಲಿ ಮುಳುಗಿಹೋಗಿವೆ; ಈ ಕಗ್ಗತ್ತಲು ದೋಣಿ ಹತ್ತಿ ದಾಟಬೇಕಾದ (ಹೊನಲಿನ)ಹಾಗೆ ಇದೆ.

೩೬. (ಬೇಸಿಗೆಯಲ್ಲಿ) ಬಹಳ ಬಿಸಿಯಾದ ಭೂಮಿಯೂ, ಸೂರ್ಯನ ಕಿರಣಗಳು ಹೀರಿದ್ದರಿಂದ, ಶಕ್ತಿಯನ್ನು ಕಳೆದುಕೊಂಡಿದೆ; ಕಾಳ್ಗಿಚ್ಚಿನ ದೆಸೆಯಿಂದ ನೆಳಲೀಯಲಾರದ ಮರಗಳು ಕ್ಷಯರೋಗದಿಂದ ನರಳುತ್ತಿರುವ ಹಾಗೆ ಕಾಣಿಸುತ್ತವೆ; ಮೇಲ್ಭಾಗದಲ್ಲಿ ಬಾಯ್ದೆರೆದಿರುವ ಗುಹೆಗಳಿಂದ ಕೂಡಿದ ಬೆಟ್ಟಗಳು ವಶತಪ್ಪಿಗಟ್ಟಿಯಾಗಿ ಅಳುವಂತೆ ತೋರುತ್ತವೆ; ಈ ಲೋಕವೇ ಸೂರ್ಯ ಬೇಯಿಸಿದ್ದರಿಂದ ಎದೆಯನ್ನು ಕಳೆದುಕೊಂಡು ಮೂರ್ಛೆಹೋದಂತಾಗಿದೆ.

೩೭. (ಬೇಸಿಗೆಯಲ್ಲಿ) ಬೆಂಕಿಯಾದ ಹೊಯಿಗೆ ಹುಡಿಗಳ ದೆಸೆಯಿಂದ ಒಣಗಾಳಿ ಕುಂಟುತ್ತಿದೆ; ಒರಟು ಮುತ್ತುಗ ಮರಗಳ ದೆಸೆಯಿಂದ ಬೆಟ್ಟಗಳು ಬೆವರುತ್ತಿವೆ; ಸೂರ್ಯನು ಕಾಳ್ಗಿಚ್ಚು ಹಬ್ಬಿದ್ದರಿಂದ ನೀರಾದ ಮೈಯುಳ್ಳವನಾಗಿ ಸೋರುತ್ತಿರುವ ಹಾಗೆ ಕಾಣಿಸುತ್ತಾನೆ; ಜಗತ್ತು ಸೂರ್ಯ ಬೇಯಿಸಿದ್ದರಿಂದ ಹಣ್ಣಾಗುತ್ತಿದೆಯೋ ಏನೋ ಎಂಬಂತೆ ತೋರುತ್ತದೆ.

೩೮. (ಆಕಾಶಯಾನದಲ್ಲಿರುವಾಗ ಕೆಳಗೆ ನೋಡಿದರೆ) ಹೆಬ್ಬೆಟ್ಟಗಳು ಆನೆಮರಿಗಳಂತೆ, ಕಡಲುಗಳು ಆಟದ ಕೆರೆಗಳಂತೆ, ಮರಗಳು ಹಾವಸೆಗಳ ಹಾಗೆ, ನೆಲವು ತಗ್ಗಿಲ್ಲದಂತೆ, ಹೊಳೆಗಳು ಬೈತಲೆ ಗೆರೆಗಳಂತೆ ಮತ್ತು ದೊಡ್ಡ ಮನೆಗಳು ಚುಕ್ಕೆಗಳ ಹಾಗೆ ಕಾಣಿಸುತ್ತವೆ; (ಒಟ್ಟಿನಲ್ಲಿ) ಇಡಿ ಜಗತ್ತೇ ಚಿಕ್ಕದಾಗಿಯೂ ಸೊಟ್ಟ ಸ್ವಭಾವದ್ದಾಗಿಯೂ ತೋರುತ್ತಿದೆ.

जलदसमयघोषणाडम्बरानेकरूपक्रियाजम्भका वज्रभृद्_ गृष्टयो
भगणयवनिकास्तटित्पन्नगीवासवल्मीकभूतानभोमार्गरूढ क्षपा: ।
मदनशरनिशातशैला: प्ररुष्टाङ्गनासन्धिपाला गिरिस्नापनाम्भोघटा:
उदधिसलिलभैक्षहारा रवीन्द्वर्गला देवयन्प्रप्रपाभान्तिनीलाम्बुदा:
॥३९॥

व्योमार्णवोर्मिसदृशा निनदन्ति मेघा
मेघप्ररोहसदृशा प्रपतन्ति धारा: ।
रक्षोङ्गनाभ्रुकुटिवत् तडित: स्फुरन्ति
प्राप्तोऽग्रयौवनघनस्तनमर्दकाल: ॥४०॥

लिम्पतीव तमोऽङ्गानि वर्षतीवाञ्जनं नभ: ।
असत्पुरुषसेवेव दृष्टिर्निष्फलतां गता ॥४१॥

आलोकविशाला मे सहसा तिमिरप्रवेशसञ्छन्ना ।
उन्मीलिताऽपि दृष्टिर्निमीलितेवान्धकारेण ॥४२॥

अप्रकाशा इव दिशो घनीभूता इव द्रुमा: ।
सुनिविष्टस्य लोकस्य कृतो रूपविपर्यय: ॥४३॥

कपाले मार्जार: पय इति कराँल्लेढि शशिनस्
तरुच्छिद्रप्रोतान् बिसमिति करी सङ्कलयति ।
रतान्ते तल्पस्थान् हरति वनिताऽप्यंशुकमिति
प्रभामत्तश्चन्द्रो जगदिदमहो विप्लवयति ॥४४॥

೩೯. (ಕಾರ್ಗಾಲದ) ನೀಲಮೋಡಗಳು ಇಂದ್ರನ ಆನೆಗಳು; ಮಳೆಗಾಲದಲ್ಲಿ ಅವು ಘೀಳಿಡುತ್ತ ವಿವಿಧ ಆಡಂಬರದ ರೂಪ-ನಡತೆಗಳನ್ನು ವ್ಯಕ್ತಪಡಿಸುತ್ತವೆ; ಆಗ ಸಹ ಹಾದಿಯಲ್ಲಿ ನೆಲೆನಿಂತ ಇರುಳುಗಳಂತಿರುವ ಅವು ಮಿಂಚೆಂಬ ನಾಗರಹಾವು ವಾಸವಾಗಿರುವ ಹುತ್ತಗಳಾಗಿರುವುವಲ್ಲದೆ, ನಕ್ಷತ್ರಗಳನ್ನು ಮುಚ್ಚಿದ ಪರದೆಗಳೂ ಆಗಿವೆ; ಅವು ಮನ್ಮಥನ ಅಂಬುಗಳಷ್ಟು ಹರಿತವಾದ (ಬಂಡೆಗಳನ್ನುಳ್ಳ) ಗುಡ್ಡಗಳು, ಸಿಟ್ಟುಬಂದ ಸುಂದರಿಯರ (ಮನವೊಲಿಸುವ) ರಾಯಭಾರಿಗಳು, ಪರ್ವತಗಳಿಗೆ ಅಭಿಷೇಕ ಮಾಡುವ ನೀರ್ಗೊಡಗಳು, ಕಡಲಿತ್ತ ನೀರ ಭಿಕ್ಷೆಯನ್ನು ಕೊಂಡೊಯ್ಯುವಂಥವು, ಸೂರ್ಯ-ಚಂದ್ರರು ಹೊರಬೀಳದಂತೆ ಜಡಿದ ಬಾಗಿಲ ತಾಳುಗಳು, ದೇವತೆಗಳು ರಚಿಸಿದ ಯಂತ್ರಗಳಿಂದ ಕೂಡಿದ ಅರವಟ್ಟಿಗೆಗಳು ಎಂಬಂತೆ ತೋರುತ್ತವೆ.

೪೦. ಆಕಾಶಸಮುದ್ರದ ಅಲೆಗಳಂತಹ ಮೋಡಗಳು ಸದ್ದುಮಾಡುತ್ತಿವೆ; ಮೋಡದ ಮೊಗ್ಗುಗಳಂತಹ ಜಲಧಾರೆಗಳು ಜೋರಾಗಿ ಬೀಳುತ್ತಿವೆ; ರಾಕ್ಷಸ ಸ್ತ್ರೀಯರ ಗಂಟಿಕ್ಕಿದ ಹುಬ್ಬುಗಳಂತೆ ಮಿಂಚುಗಳು ಜಗ್ಗನೆ ಹೊಳೆಯುತ್ತಿವೆ; ಆದುದರಿಂದ ಮುಂಬರೆಯದ ಜವ್ವನೆಯರ ಸ್ತನಮರ್ದನದ ಕಾಲ (ಮಳೆಗಾಲವು) ಬಂದಿದೆ.

೪೧. (ಈ ಕಾರಿರುಳಿನಲ್ಲಿ) ಕಪ್ಪು ಕೈಕಾಲುಗಳಿಗೆ ಬಳಿಯುತ್ತಿರುವಂತೆ ಮತ್ತು ಬಾನು ಕಾಡಿಗೆಮಳೆ ಸುರಿಸುತ್ತಿರುವಂತೆ ತೋರುತ್ತದೆ; ಆದುದರಿಂದ ದುಷ್ಟರ ಚಾಕರಿ ಮಾಡಿಯೋ ಎಂಬಂತೆ ಕಣ್ಣು ಕಾಣದಂತಾಯಿತು.

೪೨. ನೋಡಲು ಅಗಲವಾಗಿರುವ ನನ್ನ ಕಣ್ಣು ಒಮ್ಮಿಂದೊಮ್ಮೆ ಕತ್ತಲು ಹೊಕ್ಕುದರಿಂದ ತೆರೆದೇ ಇದ್ದರೂ ಕಪ್ಪಿನಿಂದ ಮುಚ್ಚಿಹೋದಂತೆ ತೋರುತ್ತದೆ.

೪೩. ಎಲ್ಲ ದಿಕ್ಕುಗಳಲ್ಲೂ ಬೆಳಕಿಲ್ಲದಂತೆ ಮತ್ತು ಎಲ್ಲ ಮರಗಳೂ ಗಡ್ಡೆಗಟ್ಟಿ ಹೋಗಿರುವಂತೆ ಕಾಣುತ್ತದೆ; (ಕತ್ತಲು ತನ್ನ) ಹಿಡಿತಕ್ಕೆ ಸಿಕ್ಕಿದ ಜಗತ್ತಿನ ರೂಪವನ್ನೇ ವಿಪರೀತಗೊಳಿಸಿದೆಯೇನೋ ಎನ್ನಿಸುತ್ತದೆ.

೪೪. ತಟ್ಟೆಯಲ್ಲಿ ಬಿದ್ದ ಚಂದ್ರಕಿರಣಗಳನ್ನು ಬೆಕ್ಕು ನೆಕ್ಕುತ್ತಿದೆ; ಮರಗಳ ಸಂದಿಗಳಲ್ಲಿ ಸಿಕ್ಕಿಬಿದ್ದಿರುವ ಬೆಳ್ದಿರುಗಳನ್ನು ಆನೆ ತಾವರೆದಂಟೆಂದು ತಿಳಿದು ಒಟ್ಟು ಗೂಡಿಸುತ್ತದೆ; ತರುಣಿಯೊಬ್ಬಳು ಪ್ರಿಯಭೋಗಾಂತದಲ್ಲಿ ಹಾಸಿಗೆಯ ಮೇಲೆ ಚೆಲ್ಲಿದ ಬೆಳುದಿಂಗಳನ್ನು ಬಟ್ಟೆಯೆಂದು ಬಗೆದು ತೆಗೆದುಕೊಳ್ಳುತ್ತಿದ್ದಾಳೆ: ಅಬ್ಬಾ! ತನ್ನ ಬೆಳಕಿನಿಂದ ಸೊಕ್ಕಿದ ಚಂದ್ರನು ಈ ಲೋಕವನ್ನೇ ಗಲಿಬಿಲಿಗೊಳಿಸುತ್ತಿದ್ದಾನೆ.

प्रालेयमिश्रमकरन्दकरालकोशैः
पुष्पैः समं निपतिता रजनीप्रबुद्धैः ।
अर्कांशुभिन्नमुकुलोदरसान्द्रगन्ध–
संसूचितानि कमलान्यलयः पतन्ति ॥४५॥

जृम्भारम्भप्रविततदलोपान्तजालप्रविष्टैर्
भाभिर्भानोनृपतय इव स्पृश्यमाना विबुद्धाः ।
स्त्रीभिः सार्धं घनपरिमलस्तोकलक्ष्याङ्गरागा
मुञ्चन्त्येके विकचनलिनीगर्भशय्यां द्विरेफाः ॥४६॥

दिक्षु व्यूढांघ्रिपाङ्गस्तृणजटिलचलत्प्रांशुदण्डोऽन्तरिक्षे
झाङ्कारी शर्करालः पथिषु विटपिनां स्कन्धकाषैः सधूमः ।
प्रासादानां निकुञ्जेष्वभिनवजलदोद्गारगम्भीरधीरस्
चण्डारम्भः समीरो वहति परिदिशं भीरु किं सम्भ्रमेण ॥४७॥

हर्म्याणां हेमश्रृङ्गश्रियमिव निचयैरर्चिषामादधानः
सान्द्रोद्यानद्रुमाग्रग्लपनपिशुनितात्यन्ततीव्राभितापः ।
कुर्वन् क्रीडामहीध्रं सजलजलधरश्यामलं धूमपातैर्
एष प्लोषार्तयोषिज्जन इह सहसैवोत्थितोऽन्तःपुरोऽग्निः ॥४८॥

आभात्यर्कांशुतापक्वथमिव शफरोद्वर्तनैर्दीर्घिकाम्भश्
छत्राभं नृत्तलीलाशिथिलमपि शिखी बर्हभारं तनोति ।
छायाचक्रं तरूणां हरिणशिशुरुपैत्यालवालाम्बुलुब्धः
सद्यस्त्यक्त्वा कपोलं विशति मधुकरः कर्णपाली गजस्य ॥४९॥

೪೫. (ಈ ಮುಂಜಾವದಲ್ಲಿ) ಮಂಜಿನ ಹನಿಗಳಿಂದಲೂ ಮಕರಂದ ರಸದಿಂದಲೂ ಬಿರುಸಾಗಿರುವ ಕೇಸರವುಳ್ಳ ಮತ್ತು ಇರುಳಲ್ಲೇ ಅರಳಿದ ಹೂಗಳು ತಂಗಾಳಿಯಿಂದ ಉದುರಿ ಕೆಳಗೆ ಬೀಳುತ್ತಲೇ, ಅವುಗಳಲ್ಲಿದ್ದ ಜೇನುಗಳು ಆ ಹೂಗಳನ್ನು ಬಿಟ್ಟು ಸೂರ್ಯಕಿರಣಗಳಿಂದ ಅರಳಿದ ಕಮಲಗಳ ಸುಗಂಧವನ್ನು ಮೂಸಿ ಆ ಕಮಲಗಳ ಮಧುವನ್ನು ಸೇವಿಸಹೋಗುತ್ತವೆ.

೪೬. ಅರಳು ಮೊಗ್ಗೆಗಳ ಎಸಳುಗಳ ಬಿರುಕುಗಳಿಂದ ಒಳಗೆ ಬಂದ ಸೂರ್ಯ ಕಿರಣಗಳು ಮೈಮೇಲೆ ಬಿದ್ದದ್ದರಿಂದ ತಮ್ಮ ತಮ್ಮ ಸ್ತ್ರೀಯರೊಡನೆ ದುಂಬಿಗಳು ಅರಸರಂತೆ ಸಾಂದ್ರ ಸುಗಂಧದ ಪರಾಗದ ಉರುಟಣೆ ಮೈಯಲ್ಲಿ ಸ್ವಲ್ಪ ಸ್ವಲ್ಪ ಹತ್ತಿರಲು ಕಮಲಗರ್ಭವೆಂಬ ಹಾಸಿಗೆಯನ್ನು ಬಿಟ್ಟು ಏಳುತ್ತವೆ.

೪೭. ಉಗ್ರವಾದ ಈ ಗಾಳಿಯು ದಿಕ್ಕುದಿಕ್ಕಿನಲ್ಲಿರುವ ಮರಗಳ ಮೈಯನ್ನೇರಿದೆ, ಹುಲ್ಲುಕಡ್ಡಿಗಳೊಡನೆ ಕೂಡಿಕೊಂಡು ಅಂತರಿಕ್ಷದಲ್ಲಿ ಗದೆಯಾಗಿ ಆಳೆತ್ತರಕ್ಕೆ ಜಿಗಿದಿದೆ. ಹಾದಿಗಳಲ್ಲಿ ಕಲ್ಲು ಹುಡಿಗಳಿಂದ ಅಲಂಕೃತವಾಗಿ ಭೋರ್ಗರೆಯುತ್ತಿದೆ, ಮರಗಳ ಕೊಂಬೆಗಳ ಘರ್ಷಣಗಳಿಂದ (ಹೊತ್ತಿದ ಬೆಂಕಿಯ) ಹೊಗೆಯನ್ನು ಕೂಡಿಕೊಂಡಿದೆ ಮತ್ತು ದೊಡ್ಡ ಮಹಡಿ ಮನೆಗಳೆದುರಿನ ಬೆಳ್ಳಿಮೋಡಗಳಲ್ಲಿ ಹೊಸ ಮೋಡ ಸುರಿಸುವ ಮಳೆಯ ದೆಸೆಯಿಂದ ಗಂಭೀರವೂ ಧೀರವೂ ಆಗಿದೆ; ಎಲೈ ಪುಕ್ಕಿಯೇ ಹೀಗೆ ಬೀಸಲಾರಂಭಿಸಿದ್ದು (ಬಿರು)ಗಾಳಿ; ಇದರಿಂದೇಕೆ ಗಾಬರಿಗೊಳ್ಳುವೆ?

೪೮. ಹೆಮ್ಮನೆಗಳ ಹೊಂಗೋಪುರಗಳ ಸೌಂದರ್ಯವನ್ನು ತಳೆದನೋ ಎಂಬಂತೆ ಜ್ವಾಲಾಸಮೂಹಗಳನ್ನು ತಳೆದು, ಉದ್ಯಾನದಲ್ಲಿ ದಟ್ಟವಾಗಿ ಬೆಳೆದ ಮರಗಳ ತುದಿಗಳೆಲ್ಲವನ್ನೂ ಕರಿಕಲು ಮಾಡುವುದರ ಮೂಲಕ ತನ್ನ ಉಗ್ರವಾದ ಉರಿಯನ್ನು ಪ್ರಕಟಿಸಿ, ಹೊಗೆ ಹಬ್ಬಿಸಿ ಆಟದ ಬೆಟ್ಟಗಳನ್ನು ಮಳೆಗಾಲದ ಮೋಡದಷ್ಟು ಕಪ್ಪು ಮಾಡಿ ಅಗ್ನಿಯು ಎದ್ದನು; ಆಗ ಅಂತಃಪುರದಲ್ಲಿ ಸುಡತದ ದೆಸೆಯಿಂದ ದುಃಖಕ್ಕೀಡಾದ ಈ ಹೆಂಗಸರು ಧಿಗ್ಗನೆ ಎಚ್ಚತ್ತರು.

೪೯. (ಈ ನಡುಹಗಲಿನಲ್ಲಿ) ನೀಳ್ಗೊಳದ ನೀರು ಸೂರ್ಯನ ಬಿಸಿಲಿನಿಂದ ಕುದಿದಂತಾಗಿರುವುದರಿಂದ (ಅಲ್ಲಿಯ) ಹೊಳೆವ ಸಣ್ಣ ಮೀನುಗಳು ಮೊಗಚಾಡುತ್ತವೆ. ಕುಣಿದಾಟದಿಂದ ಸುಸ್ತಾಗಿದ್ದರೂ ನವಿಲು ಕೊಡೆಯಂತೆ ತನ್ನ ಗರಿಗಳನ್ನು ಬಿಚ್ಚಿ ಹೊತ್ತಿದೆ; ನೀರಾವಳಿಯಲ್ಲಿಯ ನೀರನ್ನಾಶಿಸಿ ಜಿಂಕೆಮರಿ ಗಿಡಗಳ ಉರುಟು ನೆಳಲನ್ನು ಸಮೀಪಿಸಿ ಹೋಗುತ್ತಿದೆ; ದುಂಬಿಯು ಈಗ ಆನೆಯ ಕೆನ್ನೆಯನ್ನು ಬಿಟ್ಟು (ಅದರ) ಹೊರಗಿವಿಯತ್ತ ಹೋಗುತ್ತದೆ.

वृन्तैः क्षुद्रप्रवालस्थगितमिव तलं भाति शेफालिकानां
गन्धः सप्तच्छदानां सपदि गजमदामोदमोहं करोति ।
एतेचोन्निद्रपद्मच्युतबहलरजः पुञ्जपिङ्गाङ्गरागा
गायन्त्यव्यक्तवाचः किमपि मधुलिहो वारुणीपानमत्ताः ॥५०॥

उदयति हिशशाङ्कः कामिनीगण्डपाण्डुर्
ग्रहगणपरिवारो राजमार्गप्रदीपः ।
तिमिरनिकरमध्ये रश्मयो यस्य गौराः
स्रुतजल इव पङ्के क्षीरधाराः पतन्ति ॥५१॥

असौहि दत्वा तिमिरावकाशं
अस्तं व्रजत्युन्नतकोटिरिन्दुः ।
जलावगाढस्य वनद्विपस्य
तीक्ष्णं विषाणाग्रमिवावशिष्टम् ॥५२॥

मेघोजलार्द्रमहिषोदरभृङ्गनीलो
विद्युत्प्रभारचितपीतपटोत्तरीयः ।
आभाति संहतबलाकगृहीतशङ्खः
रवं केशवोऽपर इवाक्रमितुं प्रवृत्तः ॥५३॥

केशवगात्रश्यामः कुटिलबलाकावलीरचितशङ्खः
विद्युद्गुणकौशेयः चक्रधर इवोन्नतो मेघः ॥५४॥

संसक्तैरिव चक्रवाकमिथुनैर्हंसैः प्रडीनैरिव
व्याविद्धैरिव मीनचक्रमकरैर्हर्म्यैरिव प्रोच्छ्रितैः ।
तैस्तैराकृतिविस्तरैरनुगतैर्मेघैः समभ्युन्नतैः
पत्रच्छेद्यमिवेह भाति गगनं विश्लेषितैर्वायुना ॥५५॥

೫೦. (ಈ ಕಾರಂಜಿ ತೋಟದಲ್ಲಿ)) ಶೇಫಾಲಿಕಾ ವೃಕ್ಷಗಳ ಅಡಿಯ ನೆಲವು ಅವುಗಳ ಹೂಗಳ ಉದುರಿದ ತೊಟ್ಟುಗಳ ದೆಸೆಯಿಂದ ಚಿಕ್ಕ ಚಿಕ್ಕ ಹವಳಗಳಿಂದ ಜಡಿದಿರುವ ಹಾಗೆ ತೋರುತ್ತದೆ; ಏಳುಸುಳಿ ಬಾಳೆಗಳ ಪರಿಮಳವು ಒಮ್ಮಿಂದೊಮ್ಮೆ ಆನೆಯ ಮದೋದಕವೇನೋ ಎನ್ನಿಸುತ್ತದೆ; ಮಧುವನ್ನು ಹೀರಿದ ಈ ತುಂಬಿಗಳು ಅರಳಿದ ತಾವರೆಗಳ ರಾಶಿರಾಶಿಯಾದ ಪರಾಗವನ್ನು ಮೈತುಂಬ ಮೆತ್ತಿಕೊಂಡು ಕೆಂಭಳದಿಯಾಗಿರುವುದಲ್ಲದೆ, ಏನೇನನ್ನೋ ಅಸ್ಪಷ್ಟವಾಗಿ ಹಾಡುತ್ತಿವೆ.

೫೧. ಸುಂದರಿಯರ ಮೇಲ್ಗೆನ್ನೆಯಷ್ಟು ಗೌರವರ್ಣವುಳ್ಳ ಚಂದ್ರನು ಉದಯಿಸುತ್ತಿದ್ದಾನೆ; ಅವನ ಸುತ್ತಲೂ ಗ್ರಹಗಳ ಪರಿವಾರವಿದೆ; ಅವನು ರಾಜಮಾರ್ಗಕ್ಕೆ ದೀವಿಗೆಯಾಗಿದ್ದಾನೆ. ಕತ್ತಲ ರಾಶಿಯ ನಡುವೆ ಅವನ ಕಿರಣಗಳು ಬೆಳ್ಳಗಾಗಿ ತೋರುತ್ತವೆ; ಅವು ನೀರರತ ಕೆಸರಿನಲ್ಲಿ ಬೀಳುವ ಹಾಲಿನ ಧಾರೆಗಳು!

೫೨. ಕತ್ತಲಿಗೆ ಅವಕಾಶ ಮಾಡಿಕೊಟ್ಟು ಈ ಚಂದ್ರನು ಎತ್ತರದ ಕೋಡಿನಿಂದ ಮುಳುಗುತ್ತಿದ್ದಾನೆ; ಆ ಕೋಡು ನೀರಲ್ಲಿ ಮುಳುಗಿದ ಕಾಡಾನೆಯ ನೀರ ಮೇಲೆ ಉಳಿದ ದಂತದಂತಿದೆ.

೫೩. ಈ ಮೋಡವು ನೀರಿಂದ ತೊಯ್ದು ಕೋಣದ ಹೊಟ್ಟೆಯಂತೆ ದುಂಬಿ ನೀಲಿ ಬಣ್ಣವನ್ನು ತಳೆದಿದೆ; ಇದಕ್ಕೆ ಮಿಂಚಿನ ಹೊಳಪೆಂಬ ಹಳದೀ ಬಟ್ಟೆಯ ಮೇಲುದುವಿದೆ; ಒಟ್ಟುಗೂಡಿದ ಕೊಕ್ಕರೆಗಳ ದೆಸೆಯಿಂದ ಇದು ಶಂಖವನ್ನು ಹಿಡಿದುಕೊಂಡಂತೆ ತೋರುತ್ತದೆ; ಆದ್ದರಿಂದ ತ್ರಿವಿಕ್ರಮನಂತೆ ಆಕಾಶವನ್ನು ಆಕ್ರಮಿಸಲು ಇದು ಹೊರಟಂತೆ ಕಾಣುತ್ತದೆ.

೫೪. ಈ ಮೋಡವು ವಿಷ್ಣುವಿನ ಮೈಯ ಹಾಗೆ ಕಪ್ಪಾಗಿದೆ, ಸೊಟ್ಟಾದ ಬೆಳ್ಳಕ್ಕಿಗಳ ಸಮೂಹದಿಂದ ಶಂಖ ಹಿಡಿದುಕೊಂಡಿರುವಂತೆ ತೋರುತ್ತದೆ; ಮಿಂಚಿಂದ ಪಟ್ಟೆಯುಟ್ಟಂತೆ ಕಾಣಿಸುವ ಇದು ಚಕ್ರಪಾಣಿ ವಿಷ್ಣುಮೂರ್ತಿಯ ಹಾಗೆ ಎತ್ತರವಾಗಿದೆ.

೫೫. ಚಕ್ರವಾಕ ದಂಪತಿಗಳಿಂದೊಡಗೂಡಿದಂತೆಯೂ ಹಾರುತ್ತಿರುವ ಹಂಸಗಳಿಂದ ಕೂಡಿದಂತೆಯೂ ಮೀನು-ನೆಗಳಗಳ ಚಿತ್ರಗಳಿಂದ ಕೂಡಿದ ಎತ್ತರದ ದೊಡ್ಡ ಮನೆಗಳಿಂದ ತುಂಬಿರುವಂತೆಯೂ ಕಾಣುವ ಹಾಗೂ ಇನ್ನೂ ಯಾವ ಯಾವುವೋ ಆಕಾರಗಳಿಂದ ಹಿಂಬಾಲಿಸಲ್ಪಟ್ಟಂತಿರುವ ಎತ್ತರದ ಮೋಡಗಳ ದೆಸೆಯಿಂದ, ಗಾಳಿ ಪಾಲು ಪಾಲಾಗಿ ಒಡೆದ ಆಕಾಶವೀಗ ಬಣ್ಣಬಣ್ಣದ ಚಿತ್ರಗಳಿಂದ ವಿಂಗಡಿಸಲ್ಪಟ್ಟಂತೆ ತೋರುತ್ತದೆ.

एतत्तद्धृतरा॒चक्रसदृशं मेघान्धकारं नभो
हृष्टो गर्जति चातिदर्पितबलो दुर्योधनो वा शिखी ।
अक्षद्यूतजितो युधिष्ठिर इवाध्वानं गतः कोकिलो
हंसाः सम्प्रति पाण्डवा इव वनादज्ञातचर्यागताः ॥५६॥

गर्जन्ति शैलशिखरेषु विलम्बिबिम्बा
मेघा वियुक्तवनितहृदयानुकाराः ।
येषां रवेण सहसोत्पतितैर्मयूरैः
रवं वीज्यते मणिमयैरिव तालवृन्तैः ॥५७॥

पङ्कक्लिन्नमुखाः पिबन्ति सलिलं धाराहता दर्दुराः
कण्टं मुञ्चति बर्हिणः समदनो नीपः प्रदीपायते ।
संन्यासः कुलदूषणैरिव जनैर्मेघैर्वृतश्चन्द्रमा
विद्युन्नीचकुलोद्गतेव युवतिर्नैकत्र सन्तिष्ठते ॥५८॥

पवनचपलवेगः स्थूलधाराशरौघः
स्तनितपटहनादः स्पष्टविद्युत्पताकः ।
हरति करसमूहं खे शशाङ्कस्य मेघो
नृप इव पुरमध्ये मन्दवीर्यस्य शत्रोः ॥५९॥

एह्येहीति शिखण्डिनां पटुतरं केकाभिराक्रन्दितः
प्रोड्डीयेव बलाकया सरभसं सोत्कण्ठमालिङ्गितः ।
हंसैरुज्झित पङ्कजैरतितरं सोद्वेगमुद्वीक्षितः ।
कुर्वन्नञ्जनमेचका इव दिशो मेघः समुत्तिप्ठति ॥६०॥

विद्युद्भिर्ज्वलतीव संविहसतीवोच्चैर्बलाकाशतैः
माहेन्द्रेण विवल्गतीव धनुषा धाराशरोद्गारिणा ।
विस्पष्टाशनिनिस्वनेन रसतीवाघूर्णतीवानिलैः
नीलैः सान्द्रमिवाहिभिर्जलधरैर्धूपायतीवाम्बरम् ॥६१॥

೫೬. ಮೋಡಗತ್ತಲಿನ ಈ ಆಕಾಶವು ಧೃತರಾಷ್ಟ್ರನ ಸೈನ್ಯದಂತಿದೆ; ನವಿಲು ಕೌರವನಂತೆ ಹೆಚ್ಚಿನ ದರ್ಪಬಲದಿಂದ ಸಂತುಷ್ಟವಾಗಿ ಕೇಕೆ ಹಾಕುತ್ತಿದೆ; ಪಗಡೆ ಜೂಜಿನಲ್ಲಿ ಸೋತ ಧರ್ಮರಾಯನಂತೆ ಕೋಗಿಲು (ದೂರದ) ದಾರಿ ಹಿಡಿದು ಹೋಗಿದೆ; ವನವಾಸ ಮುಗಿಸಿದ ಪಾಂಡವರಂತೆ ಹಂಸಗಳೀಗ ಅಜ್ಞಾತವಾಸಕ್ಕೆ ತೆರಳಿವೆ.

೫೭. ಪರ್ವತ ಶಿಖರಗಳಲ್ಲಿ ನೇತಾಡುತ್ತಿರುವ ಮುಗಿಲುಗಳು ಕೂಗುತ್ತಿವೆ; ಅವು ವಿರಹಿಣಿಯರ ಹೃದಯವನ್ನು ಅನುಕರಿಸುತ್ತಿವೆ; ಅವುಗಳ ಸದ್ದಿನಿಂದ ಕೂಡಲೆ ಎದ್ದ ನವಿಲುಗಳ ದೆಸೆಯಿಂದ ಆಕಾಶವು ರತ್ನಖಚಿತವಾದ ಬೀಸಣಿಗೆಗಳಿಂದ ಬೀಸಲ್ಪಡುತ್ತಿದೆಯೋ ಏನೋ ಎಂಬಂತೆ ತೋರುತ್ತದೆ.

೫೮. ಮಳೆಯಧಾರೆಯ ಹೊಡೆತಕ್ಕೆ ಸಿಕ್ಕಿದ ಕಪ್ಪೆಗಳು ಕೆಸರು ಹಿಡಿದ ಬಾಯಿಂದ ನೀರನ್ನು ಕುಡಿಯುತ್ತಿವೆ; ಕಡವಾಲಮರವು ಮನ್ಮಥನಿಂದ ಪ್ರದೀಪ್ತವಾಗಿ ನವಿಲಿನ ಕೊರಳನ್ನು (ಕೇಕೆ ಹಾಕಲು) ಪ್ರೇರಿಸುತ್ತದೆ; ಕುಲಕಲಂಕರಾದ ಜನರು ಸಂನ್ಯಾಸ ಹಿಡಿಯುವಂತೆ ಮೋಡಗಳು ಚಂದ್ರನನ್ನು (ಆವರಿಸಿ) ಹಿಡಿದಿವೆ; ನೀಚ ಕುಲದಲ್ಲಿ ಹುಟ್ಟಿದ ಯುವತಿಯಂತೆ ಮಿಂಚು ಒಂದು ಕಡೆ ನಿಲ್ಲುವುದೇ ಇಲ್ಲ.

೫೯. ಗಾಳಿಯಷ್ಟು ಚುರುಕಾದ ವೇಗವುಳ್ಳ, ದೊಡ್ಡ ಜಲಧಾರೆಗಳೆಂಬ ಬಾಣಾವಳಿಯನ್ನುಳ್ಳ, ಗುಡುಗೆಂಬ ಭೇರೀನಾದವುಳ್ಳ ಮತ್ತು ಮಿಂಚೆಂಬ ಧ್ವಜ ಪತಾಕೆಯನ್ನುಳ್ಳ ಮೋಡವು ಆಕಾಶದಲ್ಲಿ ಚಂದ್ರನ ಕಿರಣಗಳನ್ನು ರಾಜನು ತನ್ನ ರಾಜಧಾನಿಯ ಮಧ್ಯದಲ್ಲಿ ನಿಂತು ಅವನ ಕರಗಳೆಲ್ಲವನ್ನೂ (ತೆರಿಗೆಯಿಂದ ಬಂದ ಆದಾಯವೆಲ್ಲವನ್ನೂ) ಅಪಹರಿಸಿಕೊಂಡು ಹೋಗುವಂತೆ ಅಪಹರಿಸುತ್ತಿದೆ.

೬೦. ನವಿಲುಗಳಿಂದ "ಬಾ, ಬಾ" ಎಂದು ಕೇಕೆಯ ಮೂಲಕ ಕರೆಯಿಸಿಕೊಂಡು ಹಾರಿಬಂದ ಹೆಣ್ಣು ಕೊಕ್ಕರೆಯಿಂದ ಅತ್ಯಂತ ಪ್ರಣಯಾವೇಶ ಪೂರ್ವಕವಾಗಿ ರಭಸದಿಂದ ಆಲಿಂಗಿತವಾಗಿ, ತಾವರೆಗಳನ್ನುಳಿದು ಹಂಸಗಳು ಉದ್ವೇಗದಿಂದ ಮೇಲಕ್ಕೆ ನೋಡುತ್ತಿರುವಾಗ, ದಿಕ್ಕುಗಳನ್ನು ಕಾಡಿಗೆಯಷ್ಟು ಕಪ್ಪು ಬಣ್ಣಕ್ಕೆ ತಿರುಗಿಸಿ ಎಂಬಂತೆ ಮುಗಿಲು ಮೇಲಕ್ಕೆದ್ದಿದೆ.

೬೧. ಆಕಾಶವು ಮಿಂಚುಗಳಿಂದ ಉರಿಯುವಂತೆಯೂ ನೂರಾರು ಬೆಳ್ಳಕ್ಕಿಗಳಿಂದ ಚೆನ್ನಾಗಿ ನಗುತ್ತಿರುವಂತೆಯೂ, ಮಳೆಯ ಧಾರೆಗಳೆಂಬ ಬಾಣಗಳನ್ನು ಬಿಡುವ ಮಳೆಬಿಲ್ಲಿನಿಂದ ಜಿಗಿಯುವಂತೆಯೂ, ಜೋರಾದ ಸಿಡಿಲಿನ ಸದ್ದಿನಿಂದ ಗರ್ಜಿಸುವಂತೆಯೂ, ಗಾಳಿಗಳಿಂದ ಅಲ್ಲಾಡುವಂತೆಯೂ ಮತ್ತು ನೀಲವರ್ಣದ ದಟ್ಟವಾದ ಸರ್ಪಸದೃಶ ಮೋಡಗಳಿಂದ ಹೊಗೆಯಾಡುವಂತೆಯೂ ತೋರುತ್ತದೆ.

तालीषु तारं बिटपेषु मन्द्रं
शिलासु रूक्षं सलिलेषु चण्डम् ।
सङ्गीतवीणा इव ताड्यमानास्
तालानुसारेण पतन्ति धाराः ॥६२॥

वणिज इव भान्ति तरवः पण्यानीव स्थितानि कुसुमानि ।
शुल्कमिव साधयन्तो मधुकरपुरुषाः प्रविचरन्ति ॥६३॥

धारायन्त्रविमुक्तसन्ततपयः पूरस्नुते सर्वतः
सद्यः सान्द्रविमर्दकर्दमकृतक्रीडे क्षणं प्राङ्गणे ।
उद्दामप्रमदाकपोलनिपतत्सिन्दूररागारूणैः
सैन्दूरीक्रियते जनेन चरणन्यासैः पुरः कुट्टिमम् ॥६४॥

उद्यद्विद्रुमकान्तिभिः किसलयैस्ताम्रां त्विषं बिभ्रतो
भृङ्गाली विरूतैः कलैरविशदव्याहारलीलाभृतः ।
घूर्णन्तो मलयानिलाहतिचलैः शाखासमूहैर्मुहु
र्भ्रान्तिं प्राप्य मधुप्रसङ्गमधुना मत्ता इवामी द्रुमाः ॥६५॥

अध्वानं नैकचक्रः प्रभवति भुवनभ्रान्तिदीर्घं विलङ्घ्य
प्रातः प्राप्तुं रथो मे पुनरिति मनसि न्यस्तचिन्तातिभारः ।
सन्ध्याकृष्टावशिष्टस्वकरपरिकरस्पष्टहेमारपङ्क्तिर्
व्याकृष्यावस्थितोऽस्तक्षितिभृति नयतीवैष दिक्चक्रमर्कः ॥६६॥

यातोऽस्मि पद्मवदने समयो ममैष
सुप्ता मयैव भवती प्रतिबोधनीया ।
प्रत्यायनामयमितीव सरोरूहिण्याः
सूर्योऽस्तमस्तकनिविष्टकरः करोति ॥६७॥

೬೨. ತಾಳೆಮರಗಳ ಮೇಲೆ ತಾರಸ್ವರದಿಂದ, ಪೊದೆಗಳ ಮೇಲೆ ಮಂದ್ರ ಸ್ವರದಿಂದ, ಕಲ್ಲುಗಳ ಮೇಲೆ ಕರ್ಕಶ ಸ್ವರದಿಂದ ಮತ್ತು ನೀರಿನ ಮೇಲೆ ಭಯಂಕರವಾದ ಸ್ವರದಿಂದ ಮಳೆಯ ಧಾರೆಗಳು ಸಂಗೀತ ಸಂದರ್ಭದಲ್ಲಿ ವೀಣೆ ಬಾರಿಸಿದಂತೆ ತಾಳ ತಪ್ಪದೆ ಬೀಳುತ್ತಿವೆ.

೬೩. (ಈ ಉದ್ಯಾನದಲ್ಲಿ) ಗಿಡಗಳು ವ್ಯಾಪಾರಿಗಳಂತೆಯೂ ಅವುಗಳ ಹೂವುಗಳು ಮಾರಲಿಟ್ಟ ಸಾಮಾನುಗಳಂತೆಯೂ ದುಂಬಿಗಳೆಂಬ ಅಧಿಕಾರಿಗಳು (ಅತ್ತಿತ್ತ) ತಿರುಗುತ್ತ ಸುಂಕ ವಸೂಲು ಮಾಡುತ್ತಿರುವಂತೆಯೂ ತೋರುತ್ತವೆ.

೬೪. ಅಂಗಳವು ಕಾರಂಜಿಯಿಂದ ಒಂದೇ ಸಮನಾಗಿ ಜಿಗಿಯುತ್ತಿರುವ ಜಲಪ್ರವಾಹದಿಂದ ತುಂಬಿರುವಾಗ ಮತ್ತು ಕೂಡಲೇ ಅಲ್ಲಿ ದಟ್ಟವಾದ ಕೆಸರಾಗಿ, ಅದನ್ನು ಮೆಟ್ಟಿ ಕ್ಷಣಕಾಲ ಆಟವಾಡಿದಾಗ, ಮೇಲ್ವಾಯ್ದು ಬರುವ ತರುಣಿಯರ ಕೆನ್ನೆಗಳಿಂದ ಬೀಳುವ ಕುಂಕುಮದ ಬಣ್ಣದಿಂದ ಕೆಂಪಾದ ಹೆಜ್ಜೆಗಳ ಚೆಟ್ಟುಗಳನ್ನು ಹಾಕುವ ಜನರಿಂದ ಮುಂದಿನ ಜಗುಲಿಯು ಕುಂಕುಮಮಯವಾಗಿ ಮಾರ್ಪಡುತ್ತಿದೆ.

೬೫. ಹವಳದಷ್ಟು ಎದ್ದುಕಾಣುವ ಕಾಂತಿಯುಳ್ಳ ಚಿಗುರುಗಳಿಂದ ಕೆಂಪಾಗಿ ಹೊಳೆಯುವ, ದುಂಬಿಗಳ ಕಲರವದಿಂದ ಅಸ್ಪಷ್ಟವಾಗಿ ಮಾತನಾಡುವ ಲೀಲೆಯನ್ನು ತಳೆದ ಮತ್ತು ಮಲಯ ಮಾರುತದ ಮೇಲಿಂದಮೇಲೆ ಬೀಳುವ ಹೊಡೆತದಿಂದ ಅಲುಗಾಡುವ ಕೊಂಬೆಗಳ ದೆಸೆಯಿಂದ ಹೊಯ್ದಾಡುತ್ತಿರುವ ಈ ಮರಗಳು ತಮ್ಮ ಹೂಗಳಲ್ಲಿ ಮಕರಂದ (ಮದ್ಯ) ಒಸರುವ ಪ್ರಸ್ತುತ ವಸಂತ ಋತುವಿನಲ್ಲಿ ಮದಮತ್ತವಾದಂತೆ ತೋರುತ್ತವೆ.

೬೬. ಒಗ್ಗಾಲಿಯ ನನ್ನ ತೇರು ಜಗತ್ತಿನ ಉದ್ದಕ್ಕೂ ಇರುವ ಮಾರ್ಗವನ್ನು ಕ್ರಮಿಸಿ ಮತ್ತೆ ಬೆಳಿಗ್ಗೆ ಹೊರಡಲು ಶಕ್ತವಾಗದು ಎಂದು ಮನಸ್ಸಿನಲ್ಲಿ ಚಿಂತಾಕುಲನಾದ ಸೂರ್ಯನು, ಸಂಜೆ ಎಳೆದುಕೊಂಡ ಮೇಲೆ ಉಳಿದ ಕಿರಣಗಳನ್ನು ಕೂಡಿಕೊಂಡು, ಬಂಗಾರದ ಬಣ್ಣದ ತೇರ್ಗಾಲಿಯ ಹಳಿಗಳಿಂದ ದಿಕ್ಕುಗಳನ್ನು ಅಸ್ತಾಚಲದತ್ತ ಎಳೆದುಕೊಂಡು ಹೋಗಿ ನಿಂತಂತೆ ಕಾಣುತ್ತದೆ.

೬೭. 'ಎಲೈ ಕಮಲಮುಖಿ, ನನ್ನ ವೇಳೆ ಮುಗಿಯಿತು, ನಾನು ಹೋಗುತ್ತೇನೆ; ಮಲಗುವ ನಿನ್ನನ್ನು ನಾನೇ ಎಚ್ಚರಿಸುತ್ತೇನೆ' ಎಂದು ಸೂರ್ಯದೇವನು ಅಸ್ತಾದ್ರಿಯ ಶಿಖರದಲ್ಲಿ ಕರವಿಟ್ಟು ಪದ್ಮಿನಿಯನ್ನು ಸಂತೈಸುತ್ತಿರುವಂತಿದೆ.

पुरः पूर्वामेव स्थगयति ततोऽन्यामपि दिशं
क्रमात्कामन्नद्रिद्रुमपुरविभागांस्तिरयति ।
उपेतः पीनत्वं तदनु च जनस्येक्षणपथं
तमः सङ्घातोऽयं हरति हरकण्ठद्युतिहरः ॥६८॥

प्रचण्डसूर्यः स्पृहणीय चन्द्रमाः
सदावगाहक्षमवारिसञ्चयः ।
दिनान्तरम्योऽ भ्युपशान्तमन्मथो
निदाघकालोऽयमुपागतः प्रिये ॥ ६९ ॥

सशीकराम्भोधरमत्तकुअस्जरस्
तडित्पताकोऽशनिशब्दमर्दलः ।
समागतो राजवदुद्धतद्युतिर्
घनागमः कामिजनप्रियःप्रिये ॥७०॥

काशांशुका विकचपद्मनोज्ञवक्त्रा ।
सोन्मादहंसरवनूपुरनादरम्या
आपक्वशालिरुचिरानतगात्रयष्टिः
प्राप्ता शरन्नववधूरिव रूपरम्या ॥७१॥

नवप्रवालोद्गमसस्यरम्यः
प्रफुल्ललोध्रः परिपक्वशालिः ।
विलीनपद्मः प्रपतत्तुषारो
हेमन्तकालः समुपागतोयम् ॥७२॥

प्ररूढशालीक्षुचयावृतक्षितिं
क्वचित्स्थितक्रौञ्चनिनादराजितम् ।
प्रकामकामं प्रमदाजनप्रियं
वरोरु कालं शिशिराह्वयं श्रृणु ॥७३॥

೭೮. ಈ ಕತ್ತಲಿನ ರಾಶಿಯು ಮೊದಲು ಮೂಡಲನ್ನೂ ಅನಂತರ ಇತರ ದಿಕ್ಕುಗಳನ್ನೂ ಕ್ರಮವಾಗಿ ಸ್ಥಗಿತಗೊಳಿಸುತ್ತ ಹೋಗುತ್ತಿದೆ; ಆಮೇಲೆ ಅದು ಬೆಟ್ಟ, ಪಟ್ಟಣ ವಿಭಾಗ ಮುಂತಾದವೆಲ್ಲವನ್ನೂ ಆವರಿಸುತ್ತ ನಡೆಯುತ್ತಿದೆ. ಘನವಾಗಿ ಬೆಳೆದು ಅದು ನೀಲಕಂಠನ ಕೊರಳ ಕಾಂತಿಯನ್ನು ಮಿಂಚಿಸುತ್ತ ಜನರ ಕಣ್ಣಿಗೆ ದಾರಿಗಾಣದಂತೆ ಎಸಗುತ್ತದೆ.

೭೯. ಪ್ರಿಯೇ, ಈಗ ಬೇಸಿಗೆ ಬಂದಿದೆ: ಸೂರ್ಯನು ಭಯಂಕರ; ಚಂದ್ರನು ಸುಖಕರ: ನೀರು ದಿನವಿಡೀ ಮೀಯಲು ತಕ್ಕದ್ದಾಗಿದೆ; ಸಂಜೆಗಳು ಸುಂದರ; (ಜನಮನದ) ಪ್ರೇಮವೃತ್ತಿಯು ಶಾಂತವಾಗಿದೆ.

೮೦. ಈಗ, ಪ್ರಿಯೇ, ದೊರೆಯ ಹಾಗೆ ಮಳೆಗಾಲ ಬಂದಿದೆ; ದೊರೆಬರುವಾಗ ಮದಿಸಿದ ಆನೆಗಳು ಮದೋದಕ ಸುರಿಸಿದರೆ, ಇದು ಬರುತ್ತಿರುವಾಗ ಮೋಡಗಳು ನೀರ್ವನಿಗಳನ್ನು ಸುರಿಸುತ್ತಿವೆ; ಮಿಂಚು ಇದರ ಧ್ವಜಪತಾಕೆ, ಸಿಡಿಲು ಮದ್ದಳೆಯ ಹೊಡೆತ; ದರ್ಪಪ್ರಭೆಯನ್ನು ಬೀರುತ್ತಿರುವ ಈ ಕಾಲವು ಇದರ ಬರವನ್ನೇ ಹಾರೈಸುತ್ತಿರುವ ಜನಕ್ಕೆ ಬಹಳ ಪ್ರಿಯವೆನ್ನಿಸಿದೆ.

೮೧. ರೂಪದಲ್ಲಿ ಸುಂದರವಾದ ಹೊಸ ಸೊಸೆಯ ಹಾಗಿರುವ ಶರದೃತುವೀಗ ಪ್ರಾಪ್ತವಾಗಿದೆ; (ಶುಭ್ರವಾದ) ಕಾಶ ವಸ್ತ್ರವನ್ನು ಅದು ಧರಿಸಿದೆ, ಅರಳುತ್ತಿರುವ ಕಮಲಗಳಿಂದಾದ ಅದರ ಮುಖ ಚೆಲುವಾಗಿದೆ, ಉತ್ಸಾಹ ಚಿಮ್ಮುತ್ತಿರುವ ಹಂಸಗಳ ಸ್ವರದ ಮೂಲಕ ಅದು ಇಂಪಾಗಿ ಕಾಲುಗೆಜ್ಜೆಯ ಸದ್ದನ್ನು ಮಾಡುತ್ತಿದೆ, ಮತ್ತು ಮಾಗಿದ ಭತ್ತದ ಸಸಿಗಳ ಮೂಲಕ ಸೊಗಸಾಗಿ ಬಾಗಿದ ಮೈಯುಳ್ಳದ್ದಾಗಿದೆ.

೮೨. ಈಗ ಚಳಿಗಾಲ ಬಂತು. ಇದು ಹೊಸ ಚಿಗುರುವಡೆದ ಸಸ್ಯಗಳಿಂದ ಸೊಗಸಾಗಿದೆ; ಈಗ ಲೋಧ್ರದ ಹೂ ಅರಳಿದೆ, ಬತ್ತ ಬೆಳೆದು ಮಾಗಿದೆ, ತಾವರೆ ಅಡಗಿದೆ ಮತ್ತು ಮಂಜಿನ ಹನಿ ಬೀಳುತ್ತಿದೆ.

೮೩. ಕೇಳು ಚಲುವಾದ ಮೊಣಕಾಲಿನವಳೇ, ತರುಣಿಯರಿಗೆ ಪ್ರಿಯವಾದ ಶಿಶಿರ ಋತುವೀಗ ಬಂದಿದೆ; ಈಗ ಭೂಮಿಯು ಬೆಳೆದ ಬತ್ತ-ಕಬ್ಬುಗಳ ಹೊಲಗಳಿಂದ ತುಂಬಿದೆ, ಅಲ್ಲಲ್ಲಿ ಕೇಳಿಬರುವ ಕ್ರೌಂಚಪಕ್ಷಿಗಳ ಧ್ವನಿಯಿಂದ ಅಲಂಕೃತವಾಗಿದೆ ಮತ್ತು ಜನಮನದಲ್ಲಿ ಪ್ರೇಮಭಾವ ಪುಟಿದೇಳುತ್ತಿದೆ.

प्रफुल्लचूताङ्कुरतीक्ष्णसायको
द्विरेफमालाविलसद्धनुर्गुणः ।
मनांसि भेत्तुं सुरतप्रसङ्गिनां
वसन्तयोद्धा समुपागतः प्रिये ॥७४॥

उन्नमति नमति गर्जति वर्षति मेघः करोति तिमिरौघम् ।
प्रथम श्रीरिव पुरुषः करोति रूपाण्यनेकानि ॥७४॥

शीतलादिव सन्त्रस्तं प्रावृषेण्यान्नभस्वतः ।
नभो बभार नीरन्ध्रं जीमूतकुलकम्बलम् ॥७६॥

वह्नेः शक्तिर्जलमिवगता दर्शनाद्दाहवृत्तेर्
नित्योद्गन्धे नवमरुबके वर्तते पुष्पकार्यम् ।
शीतत्रासं दधदिव रविर्याति सिन्धोः कृशानुं
शीतैर्भीता इव च दिवसाः साम्प्रतं सङ्कुचन्ति ॥७७॥

केशानाकुलयन् दृशौ मुकुलयन् वासो बलादक्षिपन्
आतन्वन् पुलकोद्गमं प्रकटयन्नावेगकम्पं गतेः ।
वारं वारमुदारसीत्कृतभरैर्दन्तच्छदं पीडयन्
प्रायः शैशिर एषसम्प्रति मरुत्कान्तासु कान्तायते ॥७८॥

चन्द्रायते शुक्लरुचापि हंसो
हंसायते चारुगतेन कान्ता ।
कान्तायते स्पर्शसुखेन वारि
वारीयते स्वच्छतया विहायः ॥७९॥

अङ्गारैः खचितेव भूर्वियदपि ज्वालाकरालं करैस्
तिग्मांशोः किरतीव तीव्रमभितो वायुः कुकूलानलम् ।
अप्यम्भांसि नखंपचानि सरितामाशाज्वलन्तीव च
ग्रीष्मेऽस्मिन्नववह्निदीपितमिवाशेषं जगद्वर्तते ॥८०॥

೭೪. ಪ್ರಿಯೇ, ಯೋಧನಾದ ವಸಂತಋತು ಈಗ ಬಂದ. ಅರಳಿದ ಮಾವಿನ ನನೆ ಅವನ ಹರಿತವಾದ ಅಂಬು, ದುಂಬಿಗಳ ಮಾಲೆ ಅವನ ಪ್ರಕಾಶಮಾನವಾದ ಬಿಲ್ಲು, ಅವನು ಬಂದದ್ದು ಪ್ರಣಯ ಪ್ರಸಂಗಿಗಳ ಎದೆಯನ್ನು ಭೇದಿಸುವುದಕ್ಕಾಗಿ!

೭೫. ಮೋಡವು ಮೇಲಕ್ಕೆ ಸೆಟೆದು ಹೋಗುತ್ತದೆ, ಕೆಳಗೆ ಬಾಗುತ್ತದೆ, ಗುಡುಗುತ್ತದೆ, ಮಳೆ ಸುರಿಸುತ್ತದೆ, ಮತ್ತು ಕತ್ತಲನ್ನು ಕವಿಸುತ್ತದೆ; ಅದು ಹೊಸದಾಗಿ ಶ್ರೀಮಂತಿಕೆಗೇರಿದ ಮನುಷ್ಯನಂತೆ ಅನೇಕ ವಿಧವಾಗಿ ವರ್ತಿಸುತ್ತದೆ.

೭೬. ಮಳೆಗಾಲದ ಗಾಳಿಯ ಶೀತದಿಂದ ಹೆದರಿಯೋ ಎಂಬಂತೆ ಆಕಾಶವು ಎಡೆಬಿಡದೆ ಮೋಡದೊಡ್ಡೆಂಬ ಕಂಬಳಿಯನ್ನು ಹೊದೆದಿರುವಂತೆ ತೋರುತ್ತದೆ.

೭೭. ಕಂಡಕೂಡಲೆ ಸುಡುವ ಸ್ವಭಾವವುಳ್ಳ ಬೆಂಕಿಯ ಶಕ್ತಿಯು (ಈ ಶಿಶಿರ ಋತುವಿನಲ್ಲಿ) ನೀರಲ್ಲಿ ಕಂತಿ ಹೋದಂತೆ ಕಾಣುತ್ತದೆ; ನಿತ್ಯವೂ ಸುವಾಸನೆ ಸೂಸುವ ಮರುಬಕದಲ್ಲಿ ಪುಷ್ಪವಾಗುವ ಕಾರ್ಯ (ಮಾತ್ರ) ಆಗುತ್ತಿದೆ; ಶೀತದಿಂದ ಹೆದರಿಯೋ ಎಂಬಂತೆ ಸೂರ್ಯನು ಬಡಬಾನಲನಲ್ಲಿ ಸೇರುತ್ತಿದ್ದಾನೆ; ಶೀತಭೀತಿಯಿಂದಲೋ ಎಂಬಂತೆ ಈಗ ಹಗಲುಗಳು ಸಣ್ಣವುಗಳಾಗುತ್ತಹೋಗಿವೆ,

೭೮. ತಲೆಕೂದಲನ್ನು ಕೆದರಿ, ಕಣ್ಣುಗಳನ್ನು ಮುಚ್ಚಿಸಿ, ಉಡುಪನ್ನು ಬಲಾತ್ಕಾರದಿಂದ ಕಿತ್ತೆಸೆದು, ರೋಮಗಳನ್ನು ನಿಗುರಿಸಿ, ನಡಿಗೆಯಲ್ಲಿ ಭಾವೋದ್ವೇಗದ ನಡುಕವನ್ನು ಪ್ರಕಟಿಸಿ, ಪದೇ ಪದೇ ದೊಡ್ಡದಾಗಿ ಸೀನುವಂತೆ ಮಾಡಿ ಮತ್ತು ತುಟಿಯನ್ನು ಮುದುರಿಸಿ ಬಹುಶಃ ಈ ಶಿಶಿರಮಾರುತನು ಈಗ ಪ್ರಣಯ ಸುಂದರಿಯರೆದುರಿಗೆ ಪ್ರಣಯಸುಂದರನಾಗಿ ನಿಲ್ಲುವಂತೆ ತೋರುತ್ತದೆ.

೭೯. (ಈ ಶರತ್ಕಾಲದಲ್ಲಿ) ಹಂಸವು ಬಿಳಿ ಹೊಳಪಿನಿಂದ ಚಂದ್ರನಾಗುತ್ತದೆ. ಆಕರ್ಷಕ ನಡಿಗೆಯಿಂದ ಪ್ರಿಯತಮೆಯು ಹಂಸೆಯಾಗುತ್ತಾಳೆ; ಸ್ಪರ್ಶಸುಖದಿಂದ ನೀರು ಪ್ರಿಯತಮೆಯಾಗುತ್ತದೆ; ಬಾನು ಸ್ವಚ್ಛತೆಯಿಂದ ನೀರಾಗುತ್ತದೆ.

೮೦. ಈ ಗ್ರೀಷ್ಮ ಋತುವಿನಲ್ಲಿ ನೆಲವು ಬೆಂಕಿಕೆಂಡಗಳಿಂದ ಖಚಿತವಾಗಿದೆ, ಬಾನು ಸೂರ್ಯನ ಕಿರಣಗಳಿಂದ ಭಯಂಕರವಾಗಿ ಉರಿಯುತ್ತಿದೆ, ಗಾಳಿಯು ಎದುರುಗಡೆ ಉರಿಬೆಂಕಿಯಾಗಿದೆ. ನದಿಗಳ ನೀರು ಉಗುರನ್ನು ಸುಡುತ್ತದೆ ಮತ್ತು ದಿಕ್ಕುಭುಗಿಲೆನ್ನುತ್ತದೆ–ಎಂಬ ಹಾಗೆ ಇಡಿ ಜಗತ್ತು ಹೊಸದಾಗಿ ಬೆಂಕಿ ಹೊತ್ತಿ ಉರಿಯುತ್ತಿರುವಂತೆ ತೋರುತ್ತದೆ.

आध्मातोद्धतदाववह्निसुहृदः कीर्णोष्मरेणूत्कराः
सन्तप्ताध्वगमुक्तखेदविषमश्वासोष्णसंवादिनः ।
तृष्णार्ताजगरायतास्यकुहरक्षिप्रप्रवेशोत्कटा
भ्रूभङ्गैरिव तर्जयन्ति पवना दग्धस्थलीकज्जलैः ॥८१॥

तत्रापश्यद् द्रुमान् फुल्लान् विहगैर्वल्गुनादितान्
नदीश्च विपुलावर्ता वैढूर्यविमलप्रभाः ॥८२॥

हंसकारण्डवोद्गीताः सारसाभिरुतास्तथा ।
पुंस्कोकिलरुताश्चैव क्रौञ्चबर्हिणनादिताः ॥८३॥

मनोहरवनोपेतस्तस्मिन्नतिरथोऽर्जुनः ।
पुण्यशीतामलजलाः पश्यन् प्रीतमनाभवत् ॥८४॥

ज्वलन्तमचलं मेरुं तेजोराशिमनुत्तमम् ।
आक्षिपन्तं प्रभां भानोः स्वशृङ्गैःकाञ्चनोज्ज्वलैः ॥८५॥

कनकाभरणं चित्रं देवंगन्धर्वसेवितम् ।
अप्रमेयमनाधृष्यमधर्मबहुलैर्जनैः ॥८६॥

व्यालैरावारितं घोरैर्दिव्यौषधिविदीपितम् ।
नाकमावृत्य तिष्ठन्तमुच्छ्रयेण महागिरिम् ॥८७॥

अगम्यं मनसाप्यन्यैर्नदीवृक्षसमन्वितम् ।
नानापतगसङ्घैश्च नादितं सुमनोहरैः ॥८८॥

ततोऽभ्रशिखराकरैर्गिरिश्रृङ्गैरलङ्कृतम् ।
मन्दरं पर्वतवरं लताजालसमाकुलम् ॥८९॥

नानाविहगसंघुष्टं नानादंिसमाकुलम् ।
किन्नरैरप्सरोऽभिश्च दैवैरपि च सेवितम् ॥९०॥

೮೧. ಈ ಗ್ರೀಷ್ಮ ಮಾರುತಗಳು ಊದಿ ಉದ್ಧಟವಾದ ಕಾಳ್ಕಿಚ್ಚಿನ ಗೆಳೆಯರಾಗಿವೆ, ಚೆಲ್ಲಿದ ಬಿಸಿಯಾದ ಧೂಲೀಕಣಗಳಿಂದ ತುಂಬಿವೆ; ಬೇಗೆಗೆ ತುತ್ತಾದ ದಾರಿಗರು ಬಿಟ್ಟ ದುಃಖ ಪೂರ್ಣವಾದ ನಿಟ್ಟುಸಿರಿನ ಬಿಸಿಗೆ ಅವುಗಳ ಬಿಸಿ ಸರಿದೊರೆಯಾಗಿದೆ. ಬಾಯಾರಿದ್ದರಿಂದ ತೆರೆದ ಹೆಬ್ಬಾವಿನಷ್ಟು ಅಗಲವಾದ ಗಂಟಲಗುಳಿಯೊಳಗೆ ಕೂಡಲೇ ಹೋಗಲು ಅವು ತವಕಿಸುತ್ತಿವೆ ಮತ್ತು ಆ ಗಾಳಿಗಳು ಸುಟ್ಟಸ್ಥಳಗಳ ಕರಕುಗಳಿಂದ ಹುಬ್ಬುಗಂಟಿಕ್ಕಿಯೋ ಎಂಬಂತೆ ಬೆದರಿಸುತ್ತಿವೆ.

೮೨. ಅರ್ಜುನನು ಹಿಮಾಚಲದಲ್ಲಿ ಪಕ್ಷಿಗಳ ಇಂಚರದಿಂದೊಡಗೂಡಿದ ಅರಳಿದ ಮರಗಳನ್ನೂ ವೈಡೂರ್ಯದ ಪವಿತ್ರಕಾಂತಿಯನ್ನುಳ್ಳ ದೊಡ್ಡ ಸುಳಿಯ ಹೊಳೆಗಳನ್ನೂ ನೋಡಿದನು.

೮೩. ಆ ಹೊಳೆಗಳ ಸನಿಹದಲ್ಲಿ ಹಂಸ, ಕಾರಂಡವ, ಸಾರಸ, ಗಂಡುಕೋಗಿಲೆ, ಕ್ರೌಂಚ ಮತ್ತು ನವಿಲುಗಳ ಧ್ವನಿ ಕೇಳಿಸುತ್ತಿತ್ತು.

೮೪. ಅತಿರಥನಾದ ಅರ್ಜುನನು ಅಲ್ಲಿ ಸುಂದರ ವನಗಳಿಂದೊಡಗೂಡಿದ ಪುಣ್ಯ, ಶೀತಲ ಮತ್ತು ನಿರ್ಮಲ ಜಲಾಶಯಗಳನ್ನು ನೋಡಿ ಸಂತಸಪಟ್ಟನು.

೮೫. ಉತ್ತಮ ತೇಜೋರಾಶಿಯಿಂದ ಕೂಡಿದ ಮೇರುಪರ್ವತವು ಉರಿಯುತ್ತಿತ್ತು; ಅದು ಚಿನ್ನದಂತೆ ಹೊಳೆಯುವ ತನ್ನ ಶಿಖರಗಳಿಂದ ಸೂರ್ಯಪ್ರಭೆಯನ್ನು ತೆಗೆದು ದೂರ ಎಸೆಯುತ್ತಿತ್ತು.

೮೬. ಆ ಪರ್ವತವು ಆಶ್ಚರ್ಯಕರವಾದ ಒಂದು ಬಂಗಾರದ ಒಡವೆಯಾಗಿತ್ತು; ಅದರಲ್ಲಿ ದೇವತೆಗಳೂ ಗಂಧರ್ವರೂ ಇರುತ್ತಿದ್ದರು; ಅಧಾರ್ಮಿಕರಿಗದು ಅಳತೆಗೆ ಮೀರಿದ್ದೂ ಎದುರಿಸಲಾರದ್ದೂ ಆಗಿತ್ತು.

೮೭. ಅದು ಭಯಂಕರವಾದ ಹಾವುಗಳಿಂದ ತುಂಬಿತ್ತು, ದಿವ್ಯ ವನಸ್ಪತಿಗಳಿಂದ ದೀಪ್ತವಾಗಿತ್ತು; ತನ್ನ ಎತ್ತರದಿಂದ ಆ ಮಹಾಗಿರಿಯು ಸ್ವರ್ಗವನ್ನು ಆವರಿಸಿ ನಿಂತಿತ್ತು.

೮೮. ದೇವತೆಗಳಲ್ಲದ ಯಾರ ಮನಸ್ಸಿಗೂ ಅದು ಹೊಳೆಯದು; ಹೊಳೆಗಳೂ ಮರಗಳೂ ಅಲ್ಲಿ ತುಂಬಿದ್ದವು; ವಿವಿಧ ಹಕ್ಕಿಬಳಗಗಳು ಅಲ್ಲಿ ಇಂಪಾಗಿ ಹಾಡುತ್ತಿದ್ದವು. (ಅಂಥ ಪರ್ವತದ ಶಿಖರವನ್ನು ದೇವತೆಗಳು ಹತ್ತಿದರು).

೮೯. ಮುಗಿಲೊಡ್ಡುಗಳಾಕೃತಿಯ ಶಿಖರಗಳಿಂದ ಶೋಭಿಸುವ ಶ್ರೇಷ್ಠ ಪರ್ವತವಾದ ಮಂದರದಲ್ಲಿ ಎಲ್ಲೆಲ್ಲೂ ಬಳ್ಳಿಗಳು ಬೆಳೆದಿದ್ದವು.

೯೦. ನಾನಾವಿಧದ ಪಕ್ಷಿಘೋಷ, ನಾನಾವಿಧದ ಕೋರೆದಾಡೆಗಳುಳ್ಳ ಮೃಗಗಳು, ಕಿನ್ನರ–ಅಪ್ಸರೆಯರಲ್ಲದೆ ದೇವತೆಗಳೂ ಕೂಡ ಅಲ್ಲಿದ್ದರು.

एकादशसहस्राणि योजनानां समुच्छ्रितम् ।
अधो भूमेः सहस्रेषु तावत्स्वेव प्रतिष्ठितम् ॥९१॥

आदीप्तानिव वैदेहि सर्वतः पुष्पितान्नगान् ।
स्वैः पुष्पैः किंशुकान् पश्य मालिनः शिशिरात्यये ॥९२॥

पश्य भल्लातकान् बिल्वान् वानरैरुपसेवितान् ।
फलपुष्पैरवनतान् नूनं शक्याम जीवितुम् ॥९३॥

पश्य द्रोणप्रमाणानि लम्बमानानि लक्ष्मण ।
मधूनि मधुकारीभिः संभृतानि नगे नगे ॥ ९४

एष क्रोशाति नत्यूहस्तं शिखी प्रतिकूजति ।
रमणीये वनोद्देशे पुष्पसंस्तरसङ्कटे ॥९५॥

मताङ्गयूथानुसृतं पक्षिसंघानुनादितम् ।
चित्रकूटमिमं पश्य प्रवृद्धशिखरं गिरिम् ॥९६॥

समभूमितले रम्ये द्रुमैर्बहुभिरावृते ।
पुण्ये रंस्यामहे तात चित्रकूटस्य कानने ॥९७॥

तं तु पर्वतमासाद्य नानापक्षिगणायुतम् ।
बहुमूलफलं रम्यं सम्पन्नं सरसोदकम् ॥९८॥

मनोज्ञोऽयं गिरिः सौम्य नाना द्रुमलतायुतः ।
बहुमूलफलो रम्यः स्वाजीवः प्रतिभाति मे ॥९९॥

मुनयश्च महात्मानो वसन्त्यस्मिञ्शलोच्चये ।
अयं वासो भवेत्तावदत्र सौम्य रमेमहि ॥१००॥

೯೧. ಆ ಮಂದರವು ಹನ್ನೊಂದು ಸಾವಿರ ಯೋಜನಗಳಷ್ಟು ಎತ್ತರವಾಗಿತ್ತು; ಭೂಮಿಯಿಂದ ಅದು ಅಷ್ಟೇ ಕೆಳಗೆ ನೆಲೆನಿಂತಿತ್ತು. (ದೇವತೆಗಳದನ್ನು ಎತ್ತಲಾರದಾದರು).

೯೨. ಎಲೈ ಸೀತೆ, ಸುತ್ತಲೂ ಹೂಗಳಿಂದ ತುಂಬಿ ಬುಡದಿಂದ ತುದಿಯವರೆಗೆ ದೀಪಗಳನ್ನು ಹಚ್ಚಿಟ್ಟಿದ್ದಾರೋ ಏನೋ ಎಂಬಂತೆ ತೋರುವ ಗುಡ್ಡ-ಬೆಟ್ಟಗಳನ್ನೂ, ಶಿಶಿರ ಋತು ಕೊನೆಗೊಂಡ ಈ ಕಾಲದಲ್ಲಿ ತಮ್ಮ ತಮ್ಮ ಹೂಗಳಿಂದ ಮಾಲಾಧಾರಿಗಳಾಗಿರುವ ಮುತ್ತುಗದ ಮರಗಳನ್ನೂ ನೋಡು: (ಎಂದು ರಾಮನು ಚಿತ್ರಕೂಟದ ಗುಡ್ಡಗಳನ್ನು ತೋರಿಸಿದನು).

೯೩. ಮಂಗಗಳು ಹತ್ತಿ ಕುಳಿತಿರುವ ಬಿಲ್ವಪತ್ರೆಯ ಮರಗಳನ್ನೂ ಗೇರುಮರಗಳನ್ನೂ ನೋಡು; ಅವು ಹಣ್ಣು-ಹೂಗಳಿಂದ ಬಾಗಿವೆ; ಆದುದರಿಂದ ನಾವು ನಿಶ್ಚಯವಾಗಿ (ಇಲ್ಲಿ) ಬದುಕಬಲ್ಲೆವು.

೯೪. ಎಲೈ ಲಕ್ಷ್ಮಣ, ನಾನೂರು ಗಜಗಳ ಉದ್ದಕ್ಕೂ ಜೋತುಬಿದ್ದಿರುವ ಜೇನು(ತಟ್ಟೆ)ಗಳನ್ನು ನೋಡು; ಅವು ಪ್ರತಿ ಬೆಟ್ಟದಲ್ಲಿಯೂ ಜೇನುಹುಳುಗಳಿಂದ ತುಂಬಿವೆ.

೯೫. ಹೂ ಹಾಸಿದ ಇಕ್ಕಟ್ಟಾದ (ಈ) ಸುಂದರ ವನಪ್ರದೇಶದಲ್ಲಿ ಈ ಕಾಗೆಯು ಕೂಗಿದ್ದಕ್ಕೆ ನವಿಲು ಪ್ರತ್ಯುತ್ತರ ಕೊಡುವಂತೆ ಕೂಗುತ್ತಿದೆ.

೯೬. ಆನೆಹಿಂಡುಗಳು ಅನುಸರಿಸಿ ಬರುವ, ಹಕ್ಕಿಬಳಗ ಎಡೆಬಿಡದೆ ಚಿಲಿಪಿಲಿಗುಟ್ಟುವ, ಬೆಳೆದ ಶಿಖರವನ್ನುಳ್ಳ ಈ ಚಿತ್ರಕೂಟ ಪರ್ವತವನ್ನು ನೋಡು.

೯೭. ಪ್ರಿಯ ಲಕ್ಷ್ಮಣ, ಬಹಳ ಮರಗಳಿಂದ ಆವೃತವಾದ, ಚಪ್ಪಟೆಯಾದ ಚೆಲುನೆಲವನ್ನುಳ್ಳ ಚಿತ್ರಕೂಟದ ಈ ಪುಣ್ಯಾರಣ್ಯದಲ್ಲಿ ನಾವು ಸಂತೋಷದಿಂದ ಇರೋಣ- (ಎಂದು ರಾಮನು ಹೇಳಿದನು).

೯೮. ರಾಮಸೀತಾಲಕ್ಷ್ಮಣರು ವಿವಿಧ ಹಕ್ಕಿಹಿಂಡುಗಳಿಂದ ಕೂಡಿದ, ಬಹಳ ಗಡ್ಡೆಗೆಣಸು-ಹಣ್ಣು ಹಂಪಲಗಳನ್ನುಳ್ಳ ಮತ್ತು ಸವಿಯಾದ ನೀರುಳ್ಳ ಆ ರಮ್ಯ ಪರ್ವತವನ್ನು ತಲುಪಿದರು.

೯೯. ಸೌಮ್ಯ ಸ್ವಭಾವದ ಲಕ್ಷ್ಮಣ, ಈ ಬೆಟ್ಟವು ಸುಂದರವಾಗಿದೆ, ಇದರಲ್ಲಿ ನಾನಾ ತರಹದ ಮರಗಿಡಬಳ್ಳಿಗಳಿವೆ. ಮತ್ತು ಬೇಕಾದಷ್ಟು ಕಂದಮೂಲ ಫಲಗಳಿವೆ; ಆದುದರಿಂದ ಇಲ್ಲಿ ನಾವು ಸುಖವಾಗಿ ಬದುಕಬಹುದೆಂದು ತೋರುತ್ತದೆ.

೧೦೦. ಈ ಗುಡ್ಡದ ಮೇಲೆ ಮಹಾತ್ಮರಾದ ಮುನಿಗಳು ವಾಸಿಸುತ್ತಿದ್ದಾರೆ; ಇದೇ ನಮಗೆ ವಸತಿಯಾಗಲಿ, ಎಲೈ ಸೌಮ್ಯನಾದ ತಮ್ಮಾ, ಇಲ್ಲೆ ನಾವು ಸುಖವಾಗಿರೋಣ- (ಎಂದು ರಾಮನು ಹೇಳಿದನು).

## ಅಧ್ಯಾಯ ೬

# ಹಾಸ್ಯ ಮತ್ತು ಚತುರೋಕ್ತಿಗಳು

दिनकरकरामृष्टं बिभ्रद्द्युतिं परिपाटलां
दशनकिरणैरुत्सर्पद्भिः स्फुटीकृतकेसरम् ।
अयि मुखमिदं मुग्धे सत्यं समं कमलेन ते
मधु मधुकरः किन्त्वेतस्मिन् पिबन्नविभाव्यते ॥१॥

समं बाष्पेण पतता तस्योपरि ममाप्यधः
पितुर्मे क्लेदितौ पादौ ममापि क्लेदितं शिरः ॥२॥

अस्मदीयैर्महावृक्षैरस्मदीया महाबलाः ।
क्षिप्रमेवहतास्तेन किङ्करा द्रुमयोधिना ॥३॥

अदत्तेत्यागतालज्जा दत्तेतिव्यथितं मनः ।
धर्मस्नेहान्तरे न्यस्ता दुःखिताः खलु मातरः ॥४॥

असारे खलु संसारे सारं श्वशुरमन्दिरम् ।
हरो हिमालये शेते हरिःशेते महोदधौ ॥५॥

सदा वक्रः सदा क्रूरः सदा पूजामपेक्षते ।
कन्याराशिस्थितो नित्यं जामाता दशमो ग्रहः ॥६॥

उदरद्वयभरणभयादर्धाङ्गाहितदारः ।
यदि नैवं तस्य सुतः कथमद्यापि कुमारः ॥७॥

# ಅಧ್ಯಾಯ ೬
# ಹಾಸ್ಯ ಮತ್ತು ಚತುರೋಕ್ತಿಗಳು

೧. ಸೂರ್ಯಕಿರಣದ ಸ್ಪರ್ಶದಿಂದ ಕೆಂಪಾಗಿ ಕಾಂತಿವೆತ್ತ, ಹಲ್ಲುಗಳ ಮೇಲಿಂದ ಎದ್ದು ಹೊಳೆಯುವ ಕಿರಣಗಳ ಮೂಲಕ ಸ್ಪಷ್ಟವಾದ ಕೇಸರಗಳನ್ನುಳ್ಳ ನಿನ್ನ ಮುಖವು, ಸುಂದರಿ, ನಿಜವಾಗಿಯೂ ಕಮಲಕ್ಕೆ ಸರಿದೊರೆ, ಆದರೆ ಈ ನಿನ್ನ ಮುಖದಲ್ಲಿ ಮಕರಂದ ಕುಡಿಯುವ ಜೇನುಗಳು ಕಾಣಿಸುವುದೇ ಇಲ್ಲವಲ್ಲಾ!

೨. ನನ್ನ ಮತ್ತು ನನ್ನ ತಂದೆಯ ಕಂಬನಿ ಮೇಲಿನಿಂದ ಮತ್ತು ಕೆಳಗಿನಿಂದ ಬಿದ್ದಾಗ ಏಕಕಾಲದಲ್ಲಿ ಆತನ ಪಾದಗಳೂ ನನ್ನ ತಲೆಯೂ ಒದ್ದೆಯಾದವು.

೩. ಈ ಮರಗಾಳೆಗದವನು ನಮ್ಮವುಗಳೇ ಆದ ಮರಗಳಿಂದ ಮಹಾಬಲರಾದ ನಮ್ಮ ಸೇವಕರನ್ನೇ ಕ್ಷಣಾರ್ಧದಲ್ಲಿ ಕೊಂದನು!

೪. ಮಗಳನ್ನು ಮದುವೆ ಮಾಡಿಕೊಡದಿರುವಾಗ ಕೊಡಲಿಲ್ಲವಲ್ಲಾ ಎಂದು ನಾಚಿಕೆ, ಕೊಟ್ಟ ಮೇಲೆ (ಅಯ್ಯೋ) ಕೊಟ್ಟುಬಿಟ್ಟೆವಲ್ಲಾ ಎಂಬ ಚಿಂತೆ– ಹೀಗೆ ಧರ್ಮ ಮತ್ತು ಮಮತೆಗಳ ನಡುವೆ ಸಿಕ್ಕಿಬೀಳುವ ತಾಯಂದಿರು (ಯಾವಾಗಲೂ) ದುಃಖಿಗಳೇ ಸರಿ.

೫. ಸಾರವಿಲ್ಲದ ಸಂಸಾರದಲ್ಲಿ ಮಾವನ ಮನೆಯೊಂದೇ ಸಾರವುಳ್ಳದ್ದು; ಅದರಿಂದಲೇ ಹರನು ಹಿಮಾಲಯದಲ್ಲಿಯೂ ಹರಿಯು ಹೆಗ್ಗಡಲಿನಲ್ಲಿಯೂ ಮಲಗಿದ್ದಾರೆ.

೬. ಅಳಿಯನೆಂದರೆ ಯಾವಾಗಲೂ ವಕ್ರವಾಗಿ ನಡೆದುಕೊಳ್ಳುವವನು, ನಿರ್ದಯನಾಗಿ ವರ್ತಿಸುವವನು, ನಿತ್ಯವೂ ತನ್ನ ಪೂಜೆ ನಡೆಯುತ್ತಿರಬೇಕೆಂದು ಬಯಸುವವನು ಮತ್ತು ತರುಣಿಯರ ಗುಂಪಿನಲ್ಲಿರುವವನು; ಆದುದರಿಂದ ಆತನು ೧೦ನೆಯ ಗ್ರಹವೇ ಸರಿ!

೭. ಎರಡು ಹೊಟ್ಟೆಗಳನ್ನು ಹೊರೆಯಬೇಕಾದೀತೆಂಬ ಭಯದಿಂದ ಶಿವನು ತನ್ನ ಅರ್ಧಾಂಗದಲ್ಲೇ ಹೆಂಡತಿಯನ್ನು ಇಟ್ಟುಕೊಂಡಿದ್ದಾನೆ: ಇದು ಸುಳ್ಳೆನ್ನುವುದಾದರೆ ಅವನ ಮಗ ಈಗಲೂ ಅವಿವಾಹಿತ (ಕುಮಾರ)ನಾಗಿಯೇ ಇರುವುದು ಹೇಗೆ?

क्रयविक्रयकूटतुलालाघवनिक्षेपरक्षणव्याजैः ।
एते हि दिवसचौरा मुष्णन्ति महाजनं वणिजः ॥८॥

आख्यायिकानुरागी व्रजति सदा पुण्यपुस्तकं श्रोतुम् ।
दष्ट इव कृष्णसर्पैः पलायते दानधर्मेभ्यः ॥९॥

वाचयति नान्यलिखितं लिखितमनेनापि वाचयति नान्यः
अयमपरोऽस्य विशेषः स्वयमपि लिखितं स्वयं न वाचयति ॥१०॥

एका भार्या प्रकृतिमुखरा चञ्चलाच द्वितीया
पुत्रस्त्वेको भुवनविजयी मन्मथो दुर्निवारः ।
शेषः शय्या शयनमुदधौ वाहनं पन्नगारिः
स्मारं स्मारं स्वगृहचरितं दारुभूतो मुरारिः ॥११॥

अत्तुं वाञ्छति वाहनं गणपतेराखुं क्षुधार्तः फणी
तं च क्रौञ्चपतेः शिखी च गिरिजासिंहोऽपि नागाननम्
गौरी जह्नुसुतामसूयति कलानाथं कपालानलो
निर्विण्णः स पपौ कुटुम्बकलहादीशोऽपि हालाहलम् ॥१२॥

रे रे कोकिल मा भज मौनं
किञ्चिदुदञ्चय पञ्चमरागम् ।
नो चेत् त्वामिह को जानीते
काककदम्बकपिहिते चूते ॥१३॥

आमरणादपि विरुतं कुर्वाणाः स्पर्धया मयूरैः ।
किं जानन्ति वराकाः काकाः केकारवं कर्तुम् ॥१४॥

೮. ಕೊಂಡು ಮಾರಲು ಮೋಸದ ತಕ್ಕಡಿಯ ತಟ್ಟೆ ಕೆಳಗೆ ಇಳಿಯದಂತೆ ಪೇರು ಕಟ್ಟುವ ನೆವಗಳಿಂದ ಹಗಲುಗಳ್ಳರಾದ ಈ ವ್ಯಾಪಾರಿಗಳು ಸಾರ್ವಜನಿಕರನ್ನು ಮೋಸಗೊಳಿಸುತ್ತಾರೆ.

೯. ಈತನು ಕಥೆ ಕೇಳುವುದರಲ್ಲಿ ಆಸಕ್ತನಾಗಿರುವುದರಿಂದ ಯಾವಾಗಲೂ ಪುಣ್ಯಕಥಾಶ್ರವಣಕ್ಕೆಂದು (ದೇವಾಲಯಗಳಿಗೆ) ಹೋಗುತ್ತಾನೆ. ಆದರೆ ದಾನಧರ್ಮಗಳನ್ನು ಮಾಡಬೇಕಾದ ಸಂದರ್ಭ ಬಂದಕೂಡಲೇ ಕೃಷ್ಣಸರ್ಪ ಕಚ್ಚಿದವನಂತೆ ಓಡಿ ಹೋಗುತ್ತಾನೆ.

೧೦. ಇನ್ನೊಬ್ಬ ಬರೆದದ್ದನ್ನು ಈತ ಓದುವುದಿಲ್ಲ; ಇನ್ನಾವನೂ ಈತ ಬರೆದದ್ದನ್ನು ಓದುವುದಿಲ್ಲ. ಇವನಲ್ಲಿಯ ಇನ್ನೂ ಒಂದು ವಿಶೇಷವೇನೆಂದರೆ, ತಾನು ಬರೆದದ್ದನ್ನೂ ತಾನೇ ಓದುವುದಿಲ್ಲ!

೧೧. ಒಬ್ಬ ಹೆಂಡತಿಯು ಸ್ವಭಾವತಃ ಹರಟೆಮಲ್ಲಿ; ಎರಡನೆಯವಳು ಇದ್ದಲ್ಲಿ ಇರುವವಳಲ್ಲ; ಲೋಕಗಳನ್ನು ಗೆಲ್ಲುವ ಒಬ್ಬನೇ ಆದ ಮನ್ಮಥನೆಂಬ ಮಗನು ಹಿಡಿತಕ್ಕೆ ಸಿಕ್ಕುವವನಲ್ಲ; ಆದಿಶೇಷನು ಹಾಸಿಗೆ; ಮಲಗುವುದು ಕಡಲಲ್ಲಿ; ಹತ್ತಿಕೊಂಡು ಹೋಗುವುದು ಗರುಡನನ್ನು! ಮನೆವಾರ್ತೆಯ ಈ ಬಗೆಯ ವ್ಯವಸ್ಥೆಯನ್ನು ನೆನೆದು ನೆನೆದು ನಾರಾಯಣನು ಮರವಟ್ಟು ಹೋದನು.

೧೨. ಹಸಿದ ಸರ್ಪವು ಗಣಪತಿಯ ವಾಹನವಾದ ಇಲಿಯನ್ನು ತಿನ್ನಲು ಬಯಸುತ್ತದೆ; ಸುಬ್ರಹ್ಮಣ್ಯನ ವಾಹನವಾದ ನವಿಲು ಆ ಸರ್ಪವನ್ನು ತಿನ್ನಲಪೇಕ್ಷಿಸುತ್ತದೆ; ಗಿರಿಜೆ ಏರಿ ಕುಳಿತ ಸಿಂಹವು ಆನೆಯ ಮುಖಕ್ಕೆ ಬಾಯಿಹಾಕಬಯಸುತ್ತದೆ; ಗಿರಿಜೆಯು ಗಂಗೆಯ ಬಗ್ಗೆ ಹೊಟ್ಟೆಕಿಚ್ಚುಪಡುತ್ತಾಳೆ; (ಶಿವ ಹಿಡಿದ) ಕಪಾಲದಲ್ಲಿರುವ ಬೆಂಕಿಯು (ಅವನ ಹಣೆಯ ಮೇಲಿರುವ) ಚಂದ್ರನ ಬಗ್ಗೆ ಅಸೂಯೆ ಪಡುತ್ತದೆ; ಈ ಕುಟುಂಬಕಲಹದ ದೆಸೆಯಿಂದ ನಿರ್ವಿಣ್ಣನಾಗಿ ಶಿವನೂ ಹಾಲಾಹಲವೆಂಬ ವಿಷವನ್ನು ಕುಡಿದನು!

೧೩. ಎಲೈ ಕೋಗಿಲೆಯೇ, ಮೌನದಿಂದಿರಬೇಡ; ನಿನ್ನ ಪಂಚಮಸ್ವರವನ್ನು ಸ್ವಲ್ಪ ಹೊರಡಿಸು; ಇಲ್ಲವಾದರೆ ಈ ಕಾಗೆಗುಂಪಿನಿಂದ ತುಂಬಿದ ಮಾವಿನ ಮರದಲ್ಲಿ ನಿನ್ನನ್ನು ಯಾರು ಗುರುತಿಸುತ್ತಾರೆ?

೧೪. ನವಿಲುಗಳೊಡನೆ ಪೈಪೋಟಿ ಹೂಡಿ ಸಾಯುವ ತನಕ ಕೂಗಿದರೂ ಬಡ ಕಾಗೆಗಳಿಗೆಂದಾದರೂ ಕೇಕೇ ಹಾಕಲು ಬಂದೀತೇ?

एष बकः सहसैव विपन्नः
शाठ्यमहो क्वनु तद्गतमस्य ।
साधु कृतान्तक कश्चिदपि त्वां
वञ्चयितुं न कुतोऽपि समर्थः ॥१५॥

न कोकिलानामिव मञ्जु कूजितं
न लब्धलास्यानि गतानि हंसवत्
न बर्हिणानामिव चित्रपक्षता
गुणस्तथाप्यस्ति बके बकव्रतम् ॥१६॥

पिब पयः प्रसर क्षितिपान्तिकं
कलय काञ्चन काञ्चनश्रृङ्खलाम् ।
इदमवद्यतमं हि यदीहसे
भषक सम्प्रति केसरिणस्तुलम् ॥१७॥

दिव्यं चूतरसं पीत्वा गर्वं नो याति कोकिलः ।
पीत्वा कर्दमपानीयं भेको रटरटायते ॥१८॥

उदस्योच्चैः पुच्छं शिरसि निहितं जीर्णजटिलं
यदृच्छाव्यापन्नद्विपपिशितलेशाः कवलिताः ।
गुहागर्ते शून्ये सुचिरमुषितं जम्बुक सखे
किमेतस्मिन् कुर्मो यदसि न गतः सिंहसमताम् ॥१९॥

तावद् गर्जन्ति मण्डूकाः कूपमाश्रित्य निर्भयाः
यावत्करिकराकारः कृष्णसर्पो न विद्यते ॥२०॥

हारं वक्षसि केनापि दत्तमज्ञेन मर्कटः ।
लेढि विघ्रति संक्षिप्य करोत्युन्नतमाननम् ॥२१॥

೧೫. ಒಮ್ಮೆಲೇ ಈ ಬಕ ವಿಪತ್ತಿಗೀಡಾಯಿತು (ಸತ್ತಿತು). ಅದರಲ್ಲಿ ಅಡಗಿದ ಶಠತ್ವ (ಈಗ) ಎಲ್ಲಿಗೆ ಹೋಯಿತಯ್ಯಾ! ಯಮನೇ, ನೀನು ಒಳ್ಳೆಯ ಕೆಲಸ ಮಾಡಿದೆ–ನೀನು ಯಾವನೇ ಆಗಿರು–ನಿನ್ನನ್ನು (ಯಾರೂ) ಯಾವುದರಿಂದಲೂ ಮೋಸಗೊಳಿಸಲಾರರು.

೧೬. ಕೊಕ್ಕರೆಗೆ ಕೋಗಿಲೆಗಳಂಥ ಇಂಪಾದ ಸ್ವರವಿಲ್ಲ; ಹಂಸಗಳಂಥ ಲಾಸ್ಯ ಕಲೆ ಅರಿಯದು; ನವಿಲುಗಳಂಥ ಬಣ್ಣ–ಬಣ್ಣದ ಗರಿಗಳಿಲ್ಲ; ಆದರೂ ಅದರಲ್ಲಿ ಒಂದು ಗುಣವಿದೆ–ಅದೇನೆಂದರೆ ಬಕವ್ರತ (ಕಪಟ ಧ್ಯಾನದ ವ್ರತ).

೧೭. ಎಲೈ ನಾಯಿಯೇ, ಹಾಲು ಕುಡಿ, ದೊರೆಯ ಹತ್ತಿರ ಹೋಗು, ಯಾವುದಾದರೊಂದು ಚಿನ್ನದ ಸರಪಳಿಯನ್ನು ಹಾಕಿಸಿಕೋ. ಹೀಗೆ ಮಾಡಿದರೆ ಹೀನತಮವಾದದ್ದನ್ನು ಬಯಸುವ ನೀನು (ಖಂಡಿತವಾಗಿಯೂ) ಈಗ ಸಿಂಹಕ್ಕೆ ಸರಿಸಾಟಿಯಾಗುತ್ತೀಯೆ!

೧೮. ದಿವ್ಯವಾದ ಮಾವಿನ ರಸವನ್ನು ಕುಡಿದೂ ಕೋಗಿಲೆ ಸೊಕ್ಕದು; ಕೆಸರು ನೀರನ್ನು ಕುಡಿದೂ ಕಪ್ಪೆ (ಜಂಭದಿಂದ) ವಟಗುಟ್ಟುತ್ತದೆ!

೧೯. ಗೆಳೆಯನಾದ ನರಿಯೇ, ಜೀರ್ಣವೂ ಜಟಿಲವೂ ಆದ ನಿನ್ನ ಬಾಲವನ್ನೆತ್ತಿ ತಲೆಯ ಮೇಲಿಟ್ಟುಕೊಂಡೆ; ಆಕಸ್ಮಿಕವಾಗಿ ಸತ್ತ ಆನೆಯ ಮಾಂಸದ ಚೂರುಗಳನ್ನು ನೀನು ತಿಂದೆ; ನಿರ್ಜನವಾದ ಗವಿಯ ಹೊಂಡದಲ್ಲಿ ಬಹಳ ಕಾಲ ವಾಸಿಸಿದೆ; ಆದರೂ ನೀನು ಸಿಂಹಸಮನಾಗದೆ ಹೋದರೆ ಇದರಲ್ಲಿ ನಾವೇನು ಮಾಡಬೇಕು?

೨೦. ಆನೆಯ ಸೊಂಡಿಲಿನ ಆಕಾರದ ಕೃಷ್ಣಸರ್ಪವು ಬಾರದಿರುವತನಕ ನಿರ್ಭಯವಾಗಿ ಬಾವಿಯಲ್ಲಿ ಕುಳಿತು ಕಪ್ಪೆಗಳು ಗರ್ಜನೆ ಮಾಡುತ್ತವೆ.

೨೧. ಯಾವನೋ ಒಬ್ಬ ಹೆಡ್ಡನು ಮಂಗದ ಕೊರಳಿಗೆ ಹಾರ ಹಾಕಿದ ಎಂದುಕೊಳ್ಳಿ; ಆಗ ಅದು ಆ ಹಾರವನ್ನು ನೆಕ್ಕುತ್ತದೆ, ಮೂಸುತ್ತದೆ ಮತ್ತು ಮುದುಡಿ (ಎಸೆದು) ಮೇಲೆ ನೋಡುತ್ತ ಕುಳಿತುಕೊಳ್ಳುತ್ತದೆ.

कस्त्वं भोः कथयामि दैवहतकं मां विद्धि शाखोटकं
वैराग्यादिव वक्षि साधुविदितं कस्मादिदं कथ्यते ।
वामेनात्र वटस्तमध्वगजनः सर्वात्मना सेवते
न च्छायापि परोपकारकृतये मार्गस्थितस्यापि मे ॥२२॥

निम्ब किं बहुनोक्तेन निष्फलानि फलानि ते ।
यानि सञ्जातपाकानि काका निःशेषयन्त्यमी ॥२३॥

अखिलेषु विहङ्गेषु हन्त स्वच्छन्दचारिषु ।
शुक पञ्जरबन्धस्ते मधुराणां गिरां फलम् ॥२४॥

पलाशकुसुमभ्रान्त्या शुकतुण्डे पतत्यलिः
सोऽपि जम्बूफलभ्रान्त्या तमलिं धर्तुमिच्छति ॥२५॥

अयं रत्नाकरोंऽभोधिरित्यसेवि धनाशया ।
धनं दूरेऽस्तु वदनमपूरि क्षारवारिभिः ॥२६॥

काकः कृष्णः पिकः कृष्ण को भेदः पिककाकयोः ।
वसन्तसमये प्राप्ते काकः काकः पिकः पिकः ॥२७॥

वैद्यराज नमस्तुभ्यं यमराज सहोदर ।
यमस्तु हरति प्राणान् वैद्यः प्राणान् धनानि च ॥२८॥

काकाल्लौल्यं यमात् क्रौर्यं स्थपतेदृढघातिताम् ।
आद्यक्षराणि संगृह्य कायस्थः केन निर्मितः ॥२९॥

೨೨. ಎಲೈ ನೀನು ಯಾರು? ಹೇಳುತ್ತೇನೆ– "ನಾನು ದುರ್ದೈವಿಯಾದ ಶಾಖೋಟಕ (ಚಿಕ್ಕ ಕುರೂಪಿ ಮರ) ಎಂದು ತಿಳಿ," ವೈರಾಗ್ಯದಿಂದಲೋ ಎಂಬಂತೆ ಉತ್ತರಿಸುವೆ ಎಂಬುದು ಚೆನ್ನಾಗಿ ತಿಳಿಯಿತು. "ಏಕೆ ಇದನ್ನು ಹೇಳಬೇಕು (ನಾನು)? ಇಲ್ಲಿ ಎಡಗಡೆ ಆಲದಮರವಿದೆ; ಅದನ್ನು ದಾರಿಹೋಕರು ಸಂಪೂರ್ಣ ತೃಪ್ತಿಯಿಂದ ಆಶ್ರಯಿಸುತ್ತಾರೆ; ದಾರಿಯಲ್ಲಿರುವೆನಾದರೂ ನನ್ನ ನೆರಳು ಕೂಡ ಪರೋಪಕಾರಕ್ಕೆ ಮೀಸಲಾಗಲಿಲ್ಲವಲ್ಲಾ!"

೨೩. ಎಲೈ ಬೇವಿನ ಮರವೇ, ಹೆಚ್ಚಿಗೆ ಹೇಳುವುದೇನಿದೆ? ನಿನ್ನ ಹಣ್ಣುಗಳೆಲ್ಲಾ ವ್ಯರ್ಥ; ಏಕೆಂದರೆ, ಅವು ಸರಿಯಾಗಿ ಮಾಗಿದೊಡನೆಯೇ ಕಾಗೆಗಳು ಅವುಗಳನ್ನು (ತಿಂದು) ನಿಃಶೇಷ ಮಾಡಿಬಿಡುತ್ತವೆ!

೨೪. ಮನಬಂದಂತೆ ತಿರುಗುವ ಎಲ್ಲ ಹಕ್ಕಿಗಳಲ್ಲಿ–ಅಯ್ಯೋ ಗಿಳಿಯೇ–ನಿನಗೆ ಪಂಜರದಲ್ಲಿ ಬಂಧನ! ಇದು ನಿನ್ನ ಇಂಪಾದ ಉಲಿಯ ಫಲ! (ತಪ್ಪೆಲ್ಲ ನಿನ್ನದೇ)

೨೫. ಮುತ್ತುಗದ ಹೂವೆಂದು ಭ್ರಮಿಸಿ ದುಂಬಿಯು ಗಿಳಿಯ ಕೊಕ್ಕಿನಲ್ಲಿ ಹಾರಿ ಹೊಗುತ್ತದೆ; ಗಿಳಿಯಾದರೂ ಅದೊಂದು ಜಂಬುನೇರಿಳೆ ಹಣ್ಣೆಂದು ಭ್ರಮಿಸಿ ಆ ಜೇನುಹುಳುವನ್ನು ಹಾಗೇ ಕೊಕ್ಕಿನಲ್ಲಿಟ್ಟುಕೊಳ್ಳಬಯಸುತ್ತದೆ!

೨೬. ಈ ಕಡಲು ರತ್ನಗಳ ಆಕರವೆಂದು ಧನಾಶೆಯಿಂದ ನಾನು ಇದರ ನೀರನ್ನು ಕುಡಿದೆನು; ಆದರೆ ಧನವಲ್ಲಿರಲಿ, ನನ್ನ ಬಾಯಿಯೆಲ್ಲಾ ಉಪ್ಪು ನೀರಿನಿಂದ ತುಂಬಿಹೋಯಿತು!

೨೭. ಕಾಗೆಯೂ ಕಪ್ಪು, ಕೋಗಿಲೆಯೂ ಕಪ್ಪು; ಆದರೆ ವಸಂತ ಋತು ಬಂದೊಡನೆಯೇ ಕಾಗೆ ಕಾಗೆ, ಕೋಗಿಲೆ ಕೋಗಿಲೆ!

೨೮. ವೈದ್ಯಶ್ರೇಷ್ಠನೇ, ನಿನಗೆ ನಮಸ್ಕಾರ; ನೀನು ಯಮರಾಜನ ಅಣ್ಣ. ಏಕೆಂದರೆ ಯಮ ಪ್ರಾಣವನ್ನು ಮಾತ್ರ ತೆಗೆದುಕೊಂಡು ಹೋಗುತ್ತಾನೆ; (ನೀನೋ? ವೈದ್ಯ!) ವೈದ್ಯನು ಪ್ರಾಣ–ಧನ ಎರಡನ್ನೂ ಹಾರಿಸಿಕೊಂಡು ಹೋಗುತ್ತಾನೆ!

೨೯. "ಕಾಗೆ"ಯಿಂದ ಚಾಪಲವನ್ನೂ "ಯಮ"ನಿಂದ ಕ್ರೂರತೆಯನ್ನೂ "ಸ್ಥಪತಿ" ಎನ್ನಿಸಿದ ಬಡಿಗನಿಂದ ಜೋರಾಗಿ ಹೊಡೆಯುವುದನ್ನೂ (ಘಾತ ಮಾಡುವುದನ್ನೂ ನಷ್ಟ ಉಂಟು ಮಾಡುವುದನ್ನೂ) ಮೊದಲಕ್ಷರಗಳಿಂದ ತೆಗೆದು ಒಟ್ಟುಗೂಡಿಸಿ ಯಾರಯ್ಯಾ "ಕಾಯಸ್ಥ" ಎನ್ನಿಸಿದ ಬರಹಗಾರನನ್ನು ಹುಟ್ಟಿಸಿದವನು?

वैकल्यं धरणीपातमयथोचितजल्पनम् ।
संनिपातस्य चिह्नानि मद्यं सर्वाणि दर्शयेत् ॥३०॥

किमहं वदामि खल दिव्यमतं
गुणपक्षपातमभितो भवतः ।
गुणशालिनो निखिलसाधुजनान्
यदहर्निशं न खलु विस्मरसि ॥३१॥

कृपणेन समो दाता न भूतो न भविष्यति ।
अस्पृशन्नेव वित्तानि यः परेभ्यः प्रयच्छति ॥३२॥

मत्वा सारं गुणानां शिरसि यदि शशी
स्थापितो दैवयोगात्
ईशेन क्षीणबिम्बः सकलमुपचयं
किं न नीतः क्षणेन ।
मिथ्यैवं ख्यापयन्तो गुणिनि सरलतां
लोकभक्त्यर्थमुच्चैर्
आढ्याः कुर्वन्ति वित्तव्ययचकितधियो
मानमर्थेन शून्यम् ॥३३॥

काचो मणिर् मणिः काचो येषां तेऽन्ये हि देहिनः ।
सन्ति ते सुधियो येषां काचः काचो मणिर्मणिः ॥३४॥

यद्यपि रटति सरोषं मृगपति पुरतोऽपि मत्तगोमायुः ।
तदपि न कुप्यति सिंहोऽप्यसदृशपुरुषेषु कः कोपः ॥३५॥

आकर्ण्य गर्जितरवं घनगर्जतुल्यं
सिंहस्य यान्ति वनमन्यदिभा भयार्ताः ।
तत्रैव पौरुषनिधिः स्वकुलेन सार्धं
दर्पोद्धुरो वसति वीतभयो वराहः ॥३६॥

೩೦. ನಿಟ್ಟುಗೇಡು, ನೆಲದ ಮೇಲೆ ಬೀಳುವುದು ಮತ್ತು ಬಾಯಿಗೆ ಬಂದ ಹಾಗೆ ಗಳಹುವುದು ತಲೆಗೆ ಸನ್ನಿ ಏರಿದವರ ಲಕ್ಷಣಗಳು. (ಕುಡಿದವರಲ್ಲಿ) ಹೆಂಡ ಈ ಎಲ್ಲವನ್ನೂ ತೋರಿಸೀತು!

೩೧. ಎಲೈ ಧೂರ್ತನೇ, ನಿನ್ನೆದುರು ನಾನು ನೀನಿಟ್ಟುಕೊಂಡಿರುವ 'ಗುಣ ಪಕ್ಷಪಾತ' ಎಂಬ ದಿವ್ಯ ಸಿದ್ಧಾಂತದ ಬಗ್ಗೆ ಏನು ಹೇಳಲಿ? ಗುಣವಂತರಾದ ಎಲ್ಲ ಸಜ್ಜನರನ್ನೂ ನೀನು ಹಗಲೂ ರಾತ್ರಿಯೂ ಮರೆಯದಿರುವೆ (ಕಾಡಿಸಲು ಮರೆಯದಿರುತ್ತೀಯೆ).

೩೨. ದಾನಿಯೆಂದೂ ಕೃಪಣನಿಗೆ ಸರಿಸಾಟಿ ಎನ್ನಿಸನು; ಏಕೆಂದರೆ, ಕೃಪಣನು ಧನವನ್ನು (ಕೈಯಿಂದ) ಮುಟ್ಟದೆ ಇನ್ನೊಬ್ಬನಿಗೆ ಕೊಟ್ಟುಬಿಡುತ್ತಾನೆ!

೩೩. ದೈವಯೋಗದಿಂದ ಚಂದ್ರನ ಗುಣಸಾರವನ್ನರಿತು ಈಶ್ವರನು ತನ್ನ ತಲೆಯ ಮೇಲಿಟ್ಟುಕೊಂಡದ್ದು ನಿಜವಾದರೆ–ಅವನ ಬಿಂಬ ಚಿಕ್ಕದಾದಾಗ ಕ್ಷಣಾರ್ಧದಲ್ಲಿ ಈಶ್ವರನೇಕೆ ಅವನ ಬಿಂಬವನ್ನು (ಮೊದಲಿರುವಂತೆ) ತುಂಬಿಕೊಡುವುದಿಲ್ಲ? ಆಢ್ಯರಾದವರು ಗುಣವಂತರಲ್ಲಿಯ ಸರಳತೆಯನ್ನು ಗಟ್ಟಿಯಗಿ ಕೂಗಿ ಹೇಳುವುದೆಲ್ಲ ಕಪಟ–ಲೋಕ ತಮಗೆ ಭಕ್ತಿದೋರಲಿ– ಎಂಬ ಆಸೆಯಿಂದ ಮಾತ್ರ ಅವರು ಹಾಗೆ ಹೇಳುವುದು. ತಮ್ಮ ದುಡ್ಡೆಲ್ಲಿಯಾದರೂ ಖರ್ಚಾಗಿ ಹೋದರೆ ಏನು ಗತಿ? ಎಂಬ ಹೆದರಿಕೆಯಿಂದ ಅವರು (ಯಾವಾಗಲೂ) ಯೋಗ್ಯತಾಸಂಪನ್ನರಿಗೆ ಧನವನ್ನು ದಾನ ಮಾಡದೇ ಬರಿ ಮಾನವಷ್ಟನ್ನೇ ಕೊಡುತ್ತಾರೆ!

೩೪. ಗಾಜು ಮಣಿ, ಮಣಿ (ರತ್ನ) ಗಾಜು ಎಂದು ತಿಳಿಯುವ ಜನಗಳ ವರ್ಗವೇ ಬೇರೆ; ಗಾಜು ಗಾಜು, ರತ್ನ ರತ್ನ ಎಂಬುದನ್ನು ಬಲ್ಲ ಸುಬುದ್ಧಿ ಸಂಪನ್ನರು ಇದ್ದೇ ಇರುತ್ತಾರೆ.

೩೫. ಸೊಕ್ಕಿದ ನರಿಯು ಮೃಗರಾಜನಾದ ಸಿಂಹನ ಎದುರು ಸಿಟ್ಟಿನಿಂದ ಕಿರಿಚಿದರೂ ಸಿಂಹವು ಪ್ರತಿಯಾಗಿ ಕೆರಳದು; ಸರಿಸಮಾನರಲ್ಲದವರೆದುರು ಸಿಟ್ಟು ಎಲ್ಲಿ ಬಂತು?

೩೬. ಸಿಂಹದ ಗುಡುಗಿನಂಥ ಗರ್ಜನೆಯನ್ನು ಕೇಳಿ ಹೆದರಿದ ಆನೆಗಳು (ತಾವಿರುವ ಕಾಡಿನಿಂದ) ಇನ್ನೊಂದು ಕಾಡಿಗೆ ಓಡಿಹೋಗುತ್ತವೆ; ಆದರೆ ಪೌರುಷಕ್ಕೆ ನಿಕ್ಷೇಪಸ್ಥಾನವಾದ ಮತ್ತು ದರ್ಪ–ದಕ್ಷತೆಗಳನ್ನುಳ್ಳ ಹಂದಿಯು ನಿರ್ಭಯವಾಗಿ ತನ್ನ ಬಳಗಡೊದನೆ ಇದ್ದಲ್ಲೇ ಇರುತ್ತದೆ.

वाप्यां स्नाति विचक्षणो द्विजवरो मूर्खोऽपि वर्णाधमः
फुल्लां नाम्यति वायसोऽपि हि लतां या नामिता बर्हिणा ।
ब्रह्मक्षत्रविशस्तरन्ति च यया नावा तयैवेतरे
त्वं वापीव लतेव नौरिव जनं वेश्यासि सर्वं भज ॥३७॥

अभिलषसि यदीन्दो वक्त्रलक्ष्मीं मृगाक्ष्याः
पुनरपि सकृदब्धौ मज्ज संक्शालयाङ्कम् ।
सुविमलमथ बिम्बं पारिजातस्य गन्धैः
सुरभय वद नोचेत् त्वं क्व तस्या मुखं क्व ॥३८॥

तव कुसुमशरत्वं शीतरश्मित्वमिन्दोर्
द्वयमिदमयथार्थं दृश्यते मद्विधेषु ।
विसृजति हिमगर्भैरग्निमिन्दुर्मयूखैस्
त्वमपि कुसुमबाणान् वज्रसारीकरोषि ॥३९॥

हंस प्रयच्छ मे कान्तां गतिरस्यास्त्वया हृता
विभावितैकदेशेन देयं यदभियुज्यते ॥४०॥

अस्ति यद्यपि सर्वत्र नीरं नीरजमण्डितम् ।
रमते न मरालस्य मानसं मानसं विना ॥४१॥

दिक्चक्रं तृणभस्मना कवलितं मूलान्यपि क्ष्मारुहां
निर्दग्धानि न चार्भकोऽपि हरिणीयूथस्य शेषीकृतः ।
आःकष्टं विपिनौकसोऽपि मुनयः प्लुष्टाः कृतान्ताक्रियां
कृत्वेत्थं वनवह्निना किमधुना शान्तेन दीप्तेन वा ॥४२॥

೩೭. ಬುದ್ಧಿವಂತನಾದ ದ್ವಿಜನೂ ಕೀಳುವರ್ಣದ ಮೂಢನೂ ಒಂದೇ ಬಾವಿಯ ನೀರಿಂದ ಮೀಯುತ್ತಾರೆ; ನವಿಲು (ಹತ್ತಿ) ಬಾಗಿಸಿದ ಅರಳಿದ ಹೂ ಬಳ್ಳಿಯನ್ನು ಕಾಗೆಯೂ ಬಾಗಿಸುತ್ತದೆ; ದ್ವಿಜರು ದಾಟಿದ ದೋಣಿಯಿಂದಲೇ ಇತರರೂ (ಹೊಳೆಗಳನ್ನು) ದಾಟುತ್ತಾರೆ. ಎಲೈ, ನೀನು ಬೆಲೆವೆಣ್ಣಾಗಿರುವುದರಿಂದ ಬಾವಿ, ಬಳ್ಳಿ, ದೋಣಿಗಳಂತೆ (ಎಲ್ಲರಿಗೂ ಆಶ್ರಯ ಕೊಡು) ಎಲ್ಲರನ್ನೂ ಸೇವಿಸು.

೩೮. ಆ ಹರಿಣಾಕ್ಷಿಯ ಮೊಗದ ಚೆಲುವನ್ನು ನೀನು ಬಯಸುವುದಾದರೆ– ಎಲೈ ಚಂದ್ರನೇ– ಮತ್ತೊಮ್ಮೆ ಕಡಲಲ್ಲಿ ಮುಳುಗು, ನಿನಗೆ ಹಿಡಿದ ಕಲಂಕವನ್ನು ಚೆನ್ನಾಗಿ ತೊಳೆದು ಚೊಕ್ಕ ಮಾಡಿಕೋ; ಅಲ್ಲದೆ, ಹಾಗೆ ತೊಳೆದು ಶುದ್ಧ ಮಾಡಿಕೊಂಡ ನಿನ್ನ ಬಿಂಬಕ್ಕೆ ಪಾರಿಜಾತದ ಪರಿಮಳವನ್ನು ಬಳಿದುಕೋ– ಏನು ಹೇಳುವೆ?– ಇಲ್ಲವಾದರೆ ನೀನೆಲ್ಲಿ, ಅವಳ ಮೊಗವೆಲ್ಲಿ?

೩೯. (ಎಲೈ ಮನ್ಮಥನೇ) ನೀನು ಹೂವಿನಂಬುಗಳನ್ನು ಬಿಡುವವನು ಮತ್ತು ಚಂದ್ರನು ತಂಪಾದ ಕಿರಣಗಳನ್ನು ಚೆಲ್ಲುವವನು ಎಂಬೀ ಎರಡೂ ನನ್ನ ಅನುಭವದಲ್ಲಿ ಸುಳ್ಳಾಗಿವೆ; ತನ್ನ ತಂಗದಿರುಗಳಿಂದ ಚಂದ್ರನು ಬೆಂಕಿಯನ್ನು ಸುರಿಸುತ್ತಿದ್ದಾನೆ; ನೀನೂ ನಿನ್ನ ಹೂಬಾಣಗಳನ್ನು ವಜ್ರಕಠೋರವಾಗಿ ಮಾಡಿರುತ್ತೀಯೆ.

೪೦. ಎಲೈ ಹಂಸವೇ, ನನ್ನ ಪ್ರಿಯತಮೆಯನ್ನು ಕೊಡು; ಅವಳ ನಡಿಗೆಯ ಸೊಗಸನ್ನು ನೀನು ಅಪಹರಿಸಿಕೊಂಡು ಹೋಗಿರುವೆ. (ಕಳವು ಮಾಲಿನ) ಒಂದು ಭಾಗದೊಡನೆ (ನೀನು) ಸಿಕ್ಕಿಬಿದ್ದಿರುವುದರಿಂದ ಎಲ್ಲವನ್ನೂ ನೀನೇ ಕೊಡಬೇಕಾಗುತ್ತದೆ.

೪೧. ಎಲ್ಲೆಲ್ಲೂ ನೀರು ತಾವರೆಯಿಂದ ಅಲಂಕೃತವಾಗಿದ್ದರೂ ಹಂಸದ ಮನಸ್ಸು ಮಾನಸ ಸರೋವರವನ್ನುಳಿದು ಇನ್ನೆಲ್ಲೂ ಸಂತೋಷಪಡದು.

೪೨. ಕಾಳ್ಗಿಚ್ಚು ಎಲ್ಲ ದಿಕ್ಕುಗಳನ್ನೂ ಹುಲ್ಲುಬೂದಿಯಿಂದ ಮುಚ್ಚಿತು; ಮರಗಳ ಬೇರುಗಳು ಸಹ ಸುಟ್ಟು ಹೋದವು; ಜಿಂಕೆಗಳ ಗುಂಪಿನ ಒಂದು ಮರಿಯನ್ನೂ ಕಾಳ್ಗಿಚ್ಚು ಉಳಿಸಲಿಲ್ಲ; ಅಯ್ಯೋ, ಎಂಥ ಕಷ್ಟ! ಕಾಡಿನಲ್ಲಿ ನೆಲೆಸಿದ್ದ ಮುನಿಗಳು ಕೂಡ ದಗ್ಧರಾದರು. ಈಗ ಈ ಕಿಚ್ಚು– ಯಮಕಾರ್ಯವನ್ನು ಮಾಡಿದ ಬಳಿಕ–ಆರಿದರೇನು, ಉರಿದರೇನು?

मणिर्लुठति पादेषु काचः शिरसि धार्यते ।
यथैवास्ते तथैवास्तां काचः काचो मणिर्मणिः ॥४३॥

लभेत सिकतासु तैलमपि यत्नतः पीडयन्
पिबेच्च मृगतृष्णिकासु सलिलं पिपासार्दितः
कदाचिदपि पर्यटन् शशविषाणमासादयेत्
न तु प्रतिनिविष्टमूर्खजनचित्तमाराधयेत् ॥४४॥

अथ वाभिनिविष्टबुद्धिषु व्रजति व्यर्थकतां सुभाषितम् ।
रविरागिषु शीतरोचिषः करजालं कमलाकरेष्विव ॥४५॥

यस्य भार्या विरूपा च कश्मला कलहप्रिया ।
अधिकाधिक भक्षा च सा जरा न जरा जरा ॥४६॥

मक्षिका व्रणमिच्छन्ति धनमिच्छन्ति पार्थिवाः ।
नीचाः कलहमिच्छन्ति शान्तिमिच्छन्ति साधवः ॥४७॥

काके शौचं द्यूतकारे च सत्यं
सर्पे क्षान्तिः स्त्रीषु कामोपशान्तिः ।
क्लीबे धैर्यं मद्यपे तत्वचिन्ता
राज्ञां मित्रं केन दृष्टं श्रुतं वा ॥४८॥

को न याति वशं लोके मुखे पिण्डेन पूरितः ।
मृदङ्गो मुखलेपेन करोति मधुरध्वनिम् ॥४९॥

मूर्खो द्विजातिः स्थविरो गृहस्थः
कामी दरिद्रो धनवांस्तपस्वी ।
वेश्या कुरूपा नृपतिः कदर्यो
लोके षडेतानि विडम्बितानि ॥५०॥

೪೩. ರತ್ನವು ಕಾಲ ಕೆಳಗೆ ಉರುಳುತ್ತಿದೆ. ಗಾಜು ಒಬ್ಬನ ತಲೆಯ ಮೇಲೆ ರಾಜಿಸುತ್ತದೆ–ಎಂದಿಟ್ಟುಕೊಳ್ಳಿರಿ; ಅವು ಆಯಾ ಸ್ಥಳಗಳಲ್ಲೇ ಇರಲಿ (ಪರವಾಯಿಲ್ಲ); ಆದರೆ (ಅವು ಉಕ್ತ ಸ್ಥಳಗಳಲ್ಲೇ ಇದ್ದರೂ) ಗಾಜು ಗಾಜೇ, ರತ್ನ ರತ್ನವೇ!

೪೪. ಪ್ರಯತ್ನದಿಂದ ಮಳಲಿನಲ್ಲಿ ಎಣ್ಣೆಯನ್ನಾದರೂ ಹಿಂಡಿ ತೆಗೆಯಬಹುದು; ಬಾಯಾರಿದವನು ಬಿಸಿಲುಗುದುರೆಯಲ್ಲಾದರೂ ನೀರು ಕುಡಿಯಬಹುದು; ಎಂದಾದರೊಮ್ಮೆ ತಿರುತಿರುಗಿ ಮೊಲದ ಕೊಂಬನ್ನಾದರೂ ತರಬಹುದು; ಆದರೆ ಎದುರು ನಿಂತ (ಪೂರ್ವಗ್ರಹದೂಷಿತರಾದ)ದ ಮೂರ್ಖ ಜನರ ಮನಸ್ಸನ್ನು ಸಂತೋಷಗೊಳಿಸಲು ಸಾಧ್ಯವಾಗದು.

೪೫. ಪೂರ್ವಗ್ರಹದೂಷಿತರಲ್ಲಿ ಒಳ್ಳೆಯ ಮಾತನ್ನು ಹೇಳುವುದು ನಿಷ್ಪ್ರಯೋಜಕವಾಗುವುದೆಂದು ತೋರುತ್ತದೆ; ಸೂರ್ಯನಲ್ಲಿ ಆಸಕ್ತವಾದ ತಾವರೆಗೊಳಗಳಲ್ಲಿ ಚಂದ್ರನ ಕಿರಣಗಳು ನಿಷ್ಫಲವಾಗುವುದಲ್ಲವೇ!

೪೬. ಕುರೂಪಿಣಿಯೂ ಕೊಳಕಿಯೂ ಕಲಹಪ್ರಿಯೆಯೂ ಬಹು ಭಕ್ಷಕಳೂ ಆದ ಹೆಂಡತಿಯೇ (ಗಂಡನಿಗೆ) ಮುಪ್ಪಲ್ಲದೆ ಮುಪ್ಪು ಮುಪ್ಪಲ್ಲ.

೪೭. ನೊಣಗಳು ಗಾಯವನ್ನೂ ರಾಜರು ಧನವನ್ನೂ ನೀಚರು ಜಗಳವನ್ನೂ ಸಾಧುಗಳು ಶಾಂತಿಯನ್ನೂ ಬಯಸುತ್ತಾರೆ.

೪೮. ಕಾಗೆಯಲ್ಲಿ ಶುಚಿಯನ್ನೂ ಜೂಜುಗಾರನಲ್ಲಿ ಸತ್ಯಸಂಧತೆಯನ್ನೂ ಸರ್ಪದಲ್ಲಿ ಕ್ಷಮೆಯನ್ನೂ ಸ್ತ್ರೀಯರಲ್ಲಿ ಕಾಮತೃಪ್ತಿಯನ್ನೂ ನಪುಂಸಕನಲ್ಲಿ ಧೈರ್ಯವನ್ನೂ ಹೆಂಡಗುಡಿಕನಲ್ಲಿ ತತ್ವಜಿಜ್ಞಾಸೆಯನ್ನೂ ರಾಜರಲ್ಲಿ ಗೆಳೆಯನನ್ನೂ ಕಂಡವರಾರು? ಕೇಳಿದವರಾರು?

೪೯. ಬಾಯಿಗೆ ತುತ್ತು ತುಂಬಿಸಿದಾಗ ಈ ಜಗತ್ತಿನಲ್ಲಿ ಯಾರು ವಶವಾಗುವುದಿಲ್ಲ? ಮದ್ದಳೆಯ ಮುಖಕ್ಕೆ ಬೋನವನ್ನು ಬಳಿದಾಗ ಇಂಪಾದ ದನಿಗೊಡುತ್ತದೆ!

೫೦. ಬ್ರಾಹ್ಮಣ, ಕ್ಷತ್ರಿಯ ಅಥವಾ ವೈಶ್ಯನು ಮೂಢನಾದರೆ, ಗೃಹಸ್ಥನು ಮುದುಕನಾದರೆ (ಕರ್ಮಮಾಡಲು ಅಶಕ್ತನಾದರೆ), ಪ್ರೇಮಿಯು ದರಿದ್ರನಾದರೆ, ತಪಸ್ವಿಯು ಧನವಂತನಾದರೆ, ವೇಶ್ಯೆಯು ಕುರೂಪವತಿಯಾದರೆ ಮತ್ತು ರಾಜನು ಕೃಪಣನಾದರೆ (ಈಯೆಲ್ಲರೂ) ಲೋಕದಲ್ಲಿ ಹಾಸ್ಯಾಸ್ಪದರಾಗುತ್ತಾರೆ.

वन्दी विन्दति चेदमात्यपदवीं शिष्टैरलं भूरिभिः
पुंभिश्चेत् प्रतिपाद्यते रतिकला क्वैणीदृशामादरः
विश्रान्ता यदि वैखरीषु कविता काव्येन भव्येन किं
भूपाले यवने समस्तभुवने वैदग्ध्यमस्तं गतम् ॥५१॥

आहूतेषु विहङ्गमेषु मशको नायान् पुरो वार्यते
मध्ये वारिधि मा वसंस्तृणमणिर्धत्ते मणीनां रुचम् ।
खद्योतोऽपि न कम्पते प्रविचलन्मध्येऽपि तेजस्विनां
धिक् सामान्यमचेतसं प्रभुमिवानामृष्टतत्वान्तरम् ॥५२॥

खलः सर्षपमात्राणि परच्छिद्राणि पश्यति ।
आत्मनो बिल्वमात्राणि पश्यन्नपि नपश्यति ॥५३॥

विपर्यस्तमनश्चेष्टैः शिलाशकलवर्ष्मभिः ।
मांसवृक्षैरियं मूर्खैर्भाराक्रान्ता वसुन्धरा ॥५४॥

स्वाभिप्रायपरोक्षस्य परचित्तानुवर्तिनः ।
स्वयं विक्रीतदेहस्य सेवकस्य कुतः सुखम् ॥५५॥

धर्मः प्रव्रजितस्तपः प्रचलितः सत्यं च दूरे गतं
पृथ्वी मन्दफला नराः कपटिनश्चित्तं च शाठ्योर्जितम्
राजानोऽर्थपरा न रक्षणपराः पुत्राः पितुर्द्वेषिणः
साधुः सीदति दुर्जनः प्रभवति प्राप्तौ कलौ दुर्युगे ॥५६॥

೫೨. ಹೊಗಳುಭಟ್ಟನು ಮಂತ್ರಿಪದವಿಯನ್ನು ಪಡೆದರೆ ಶಿಷ್ಟರು ಮೂಲೆಗುಂಪಾಗುವರು; ಬಹಳ ಜನ ಪುರುಷರು ರತಿಕಲಾಪ್ರತಿಪಾದನನಿರತರಾದರೆ ಹರಿಣಾಕ್ಷಿಯರಿಗೆಲ್ಲಿ ಮಾನ ಉಳಿದೀತು? ಕವಿತೆಯು ಬುರುಡೆ ಹೊಡೆಯುವುದರಲ್ಲೇ ಮುಗಿತಾಯಗೊಂಡರೆ ಭಾವಿ ಕಾವ್ಯದ ನಿರ್ಮಾಣಕ್ಕೆಲ್ಲಿ ಬರಬೇಕು ಅವಕಾಶ? ಯುವನನು ರಾಜನಾದ್ದರಿಂದ ಇಡಿ ಜಗತ್ತಿನಲ್ಲಿ ಪಾಂಡಿತ್ಯವು ಅಸ್ತಂಗತವಾಯಿತು.

೫೨. ಹಕ್ಕಿಗಳನ್ನು ಕರೆದಾಗ ಸೊಳ್ಳೆ ಎದುರಿಗೆ ಬಂದರೆ ಯಾರೂ ತಡೆಯರು; ಕಡಲ ನಡುವೆ ನೆಲೆಸಿದ ಹುಲ್ಲಿನ ಚೆಂಡು ರತ್ನದ ಕಾಂತಿಯನ್ನು ಹೊಂದುತ್ತದೆ; ತೇಜಃಪುಂಜ ವ್ಯಕ್ತಿಗಳ ಮಧ್ಯದಲ್ಲಿ ತಿರುಗುವಾಗಲೂ ಮಿಣುಕುಹುಳು (ಭಯದಿಂದ) ಕಂಪಿಸುವುದಿಲ್ಲ. ಬುದ್ಧಿಯಿಲ್ಲದ ಸಾಮಾನ್ಯ ಮನುಷ್ಯನಿಗೆ ಧಿಕ್ಕಾರ; ಅವನೂ ಒಂದೇ, (ಮೇಲೆ ಹೇಳಿದಂಥ) ತತ್ವವ್ಯತ್ಯಾಸಗಳನ್ನು ತಿಳಿಯದ ರಾಜನೂ ಒಂದೇ.

೫೩. ದುಷ್ಟನು ಸಾಸಿವೆಯಷ್ಟಿರುವ ಪರದೋಷವನ್ನಾದರೂ ಕಾಣುತ್ತಾನೆ; ಆದರೆ ತನ್ನಲ್ಲಿಯ ಬಿಲ್ವಗಾತ್ರದ ದೋಷವನ್ನೂ ಕಂಡೂ ಕಾಣನು!

೫೪. ವಿಚಾರ–ಕೃತಿಗಳೆಲ್ಲವೂ ವಿಪರೀತಗಳಾಗಿರುವ, ದೇಹಗಳು ಕಲ್ಲುಚೂರುಗಳ ರಾಶಿಯಂತಿರುವ ಮತ್ತು ಮಾಂಸದ ಮರಗಳಂತೆ ಬೆಳೆದಿರುವ ಮೂರ್ಖರು 'ಕೂಳಿಗೆ ಕೇಡು, ಭೂಮಿಗೆ ಭಾರ' ಎನ್ನಿಸುತ್ತಾರೆ.

೫೫. ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಲಾರದ, ಮಂದಿ ಹೇಳಿದ ಹಾಗೆ ನಡೆದುಕೊಳ್ಳುವ ಮತ್ತು ತನ್ನ ಮೈಯನ್ನು ಮಾರಿಕೊಂಡ ಆಳಿಗೆ ಸುಖ ಎಲ್ಲಿಂದ ಬಂದೀತು?

೫೬. 'ಕಲಿ' ಎಂಬ ದುರ್ಯುಗ ಬಂದಾಗ– ಧರ್ಮವು ಮನೆಬಿಟ್ಟು ಹೋಗುತ್ತದೆ, ತಪವು ಚಂಚಲಿಸುತ್ತದೆ, ಸತ್ಯವು ದೂರ ಹೋಗುತ್ತದೆ, ಭೂಮಿಯು ತಡವಾಗಿ (ಕಡಿಮೆ) ಫಸಲನ್ನು ಕೊಡುತ್ತದೆ, ಮನುಷ್ಯರು ಕಪಟಿಗಳಾಗುತ್ತಾರೆ, ನಿಶ್ಚಯಾತ್ಮಕವಾಗಿ ಮನಸ್ಸು ಶಠತ್ವದಿಂದ ಮೆರೆಯುತ್ತದೆ, ರಾಜರು (ಆಳುವವರು) ದುಡ್ಡಿಗಾಗಿ ಬಾಯಿನೀರು ಬಿಡುವರಲ್ಲದೆ ಪ್ರಜಾಸಂರಕ್ಷಣೆ ಮಾಡರು, ಮಕ್ಕಳು ತಂದೆಗಳನ್ನು ದ್ವೇಷಿಸುತ್ತಾರೆ, ಒಳ್ಳೆಯವನು ಹಾಳಾಗುತ್ತಾನೆ ಮತ್ತು ಕೆಟ್ಟವನು ಪ್ರಭಾವಿಯಾಗುತ್ತಾನೆ.

न देवे देवत्वं कपटपटवस्तापसजना
जनो मिथ्यावादी विरलतरवृष्टिर्जलधरः ।
प्रसङ्गो नीचानामवनिपतयो दुष्टमनसो
जना भ्रष्टा नष्टा अहह कलिकालः प्रभवनि ॥५७॥

संसारविषवृक्षस्य द्वे फले ह्यमृतोपमे ।
काव्यामृतरसास्वादः आलापः सज्जनैः सह ॥५८॥

कुभार्यां च कुपुत्रं च कुराजानं कुसौहृदम्
कुसम्बन्धं कुदेशं च दूरतः परिवर्जयेत् ॥५९॥

तीर्थस्थितः स्वकुलजांस्तिमिरत्ति भुङ्क्ते
मौनि बकस्तिमिमुपेत्य वनान्तवासी ।
व्याधो निहन्ति तु बकं प्रभवन्ति ते ते
पात्राण्युपर्युपरि वञ्चनवञ्चुतायाम् ॥६०॥

तीर्थासेवनमौनभागपि तिमिः सक्तः स्वकुल्याशने
वाताशान् ग्रसते शिखी घनपयोमात्राशनोऽप्यन्वहम् ।
विश्वस्तान् जलचारिणः प्रकटितध्यानोऽपि भुङ्क्ते बकः
सत्कर्माचरणेऽपि दोषविकृतौ न प्रत्ययः पापिनाम् ॥६१॥

ऐश्वर्यात् +सह सम्बन्धं न कुर्याच्च कदाचन ।
गते च गौरवं नास्ति ह्यागते च धनक्षयः ॥६२॥

अङ्गुल्या कःकपाटं प्रहरति कुटिले माधवः किं वसन्तो
नो चक्री किं कुलालो न हि धरणिधरः किं द्विजिह वः फणीन्द्रः ।
नाहं घोराहिमर्दी किमुत खगपतिर्नो हरिः किं कपीन्द्र
इत्येवं स्त्यभामाप्रतिवचनजितः पातु वश्चक्रपाणिः ॥६३॥

೫೭. ದೇವನಲ್ಲಿ ದೇವತ್ವವಿಲ್ಲ, ತಪಸ್ವಿಗಳು ಕಪಟಾಚಾರದಲ್ಲಿ ಪ್ರವೀಣರು, ಜನರು ಸುಳ್ಳು ಹೇಳುವವರು, ಮೋಡ ವಿರಳವಾಗಿ ಮಳೆ ಸುರಿಸುತ್ತದೆ, ನೀಚರ ಸಹವಾಸವು ಪ್ರಾಪ್ತವಾಗುತ್ತದೆ, ಆಳರಸರು ದುಷ್ಟಬುದ್ಧಿಗಳಾಗುತ್ತಾರೆ, ಮಂದಿ ಭ್ರಷ್ಟರೂ ನಷ್ಟ ಹೊಂದುವವರೂ ಆಗುತ್ತಾರೆ– ಆಹಹಾ ಕಲಿಕಾಲವು ಎಷ್ಟು ಪ್ರಭಾವಶಾಲಿ!

೫೮. ಸಂಸಾರವೆಂಬ ವಿಷವೃಕ್ಷಕ್ಕೆ ಎರಡು ಅಮೃತದಂಥ ಹಣ್ಣುಗಳು; ಅವಾವುವೆಂದರೆ– ಕಾವ್ಯಾಮೃತದ ರಸಾಸ್ವಾದ ಮತ್ತು ಸಜ್ಜನರೊಡನೆ ಮಾಡುವ ಸಂಭಾಷಣೆ.

೫೯. ಕೇಡಿಗಳಾದ ಹೆಂಡತಿ, ಮಗ, ದೊರೆ (ಮೇಲಧಿಕಾರಿ) ಗೆಳೆಯ, ನೆಂಟ ಮತ್ತು ದೇಶಗಳನ್ನು ದೂರವಿಟ್ಟು ತ್ಯಜಿಸಬೇಕು.

೬೦. ತಿಮಿ ಎಂಬ ಹೆಮ್ಮೀನು ನೀರಿನಲ್ಲಿದ್ದ ತನ್ನ ವಂಶದವುಗಳನ್ನು ತಿನ್ನುತ್ತದೆ; ಕಾಡಬದಿಯ ಕೊಕ್ಕರೆಯು ಮೌನವಾಗಿ ತಿಮಿಯನ್ನು ಸಮೀಪಿಸಿ ತಿಂದು ಹಾಕುತ್ತದೆ; ಆ ಕೊಕ್ಕರೆಯನ್ನು ಬೇಡನು ಕೊಲ್ಲುತ್ತಾನೆ; ವಂಚಿಸುವ ಒಂದನ್ನು ವಂಚಿಸಲು ಇನ್ನೊಂದು ಅದರ ಮೇಲೆ ಇದ್ದೇ ಇರುತ್ತದೆ!

೬೧. ನೀರು ಕುಡಿಯಲು ಮೌನವಾಗಿ ಆರಂಭಿಸಿದ ತಿಮಿಯು ತನ್ನ ವಂಶಜರನ್ನು ತಿನ್ನುವದರಲ್ಲಿ ಆಸಕ್ತ; ಪ್ರತಿದಿನವೂ ಮೋಡದ ಹನಿಗಳನ್ನು ಮಾತ್ರ ಕುಡಿಯಲು ತೊಡಗಿದ ನವಿಲು ಸರ್ಪಗಳನ್ನು ಕಬಳಿಸುತ್ತದೆ; ಪ್ರಕಟವಾಗಿ ಧ್ಯಾನಸ್ಥವಾಗಿದ್ದರೂ ಕೊಕ್ಕರೆಯು ವಿಶ್ವಾಸಕ್ಕೆ ಪಾತ್ರವಾದ ಜಲಚರ ಪ್ರಾಣಿಗಳನ್ನು ಫಲಾಹಾರ ಮಾಡುತ್ತದೆ; ಹೀಗೆ ಸತ್ಕರ್ಮ ಮಾಡುವಾಗಲೂ ದೋಷದಿಂದ ಆಗುವ ವಿಕಾರವು ಪಾಪಿಗಳಿಗೆ ಗೊತ್ತಾಗುವುದೇ ಇಲ್ಲ.

೬೨. ಐಶ್ವರ್ಯದೊಡನೆ ಎಂದೂ ಸಂಬಂಧ ಮಾಡಿಕೊಳ್ಳಬಾರದು; ಏಕೆಂದರೆ ಅದು ಹೋದಾಗ (ಅದರ ಜೊತೆಗೇ) ನಮ್ಮ ಗೌರವ ಹೊರಟುಹೋಗುತ್ತದೆ ಮತ್ತು ಅದು ಬಂದಾಗ (ಗೌರವ ಉಳಿಸಿಕೊಳ್ಳುವುದಕ್ಕಾಗಿ) ದುಡ್ಡು ಖರ್ಚಾಗುತ್ತದೆ!

೬೩. "ಬೆರಳಿಂದ ಬಾಗಿಲು ಬಡಿವವರಾರು?" "ಸುಂದರಿ, ಮಾಧವ." "ವಸಂತನೇನು?" "ಅಲ್ಲ ಚಕ್ರಿ". "ಕುಂಬಾರನೇ?" "ಅಲ್ಲ, ಧರಣೀಧರ". ಏನು, ಎರಡು ನಾಲಗೆಯ ಆದಿಶೇಷನೇ? "ಅಲ್ಲ, ಭಯಂಕರವಾದ ಸರ್ಪವನ್ನು ಕೊಂದವನು". "ಏನು, ಹಕ್ಕಿಗಳರಸನೇ?" "ಅಲ್ಲ, ಹರಿ". "ಮಂಗಗಳ ದೊರೆಯೇ?" ಎಂಬೀ ಪ್ರಕಾರ ಸತ್ಯಭಾಮೆಯ ಪ್ರತ್ಯುತ್ತರಗಳಿಂದ ಸೋತ ಚಕ್ರಪಾಣಿಯಾದ ಕೃಷ್ಣನು ನಿಮ್ಮನ್ನು ಕಾಯಲಿ.

कस्त्वं शूली मृगय भिषजं नीलकण्ठः प्रियेऽहं
केकामेकां कुरु पशुपतिर्नैव दृश्ये विषाणे ।
स्थाणुर्मुग्धे न वदति तरुर्जीवितेशः शिवाया
गच्छाटव्यामिति हतवचाः पातुवश्चन्द्रचूडः ॥६४॥

साहित्यसङ्गीतकलाविहीनः
साक्षात् पशुः पुच्छविषाणहीनः ।
तृणं न खादन्नपि जीवमानस्
तद्भागधेयं परमं पशूनाम् ॥६५॥

कलेरन्ते भविष्यन्ति नररूपेण राक्षसाः ।
मनुष्यान् भक्षयिष्यन्ति वित्ततो न शरीरतः ॥६६॥

निर्वीर्या पृथिवि निरौषाधिरसा नीचा महत्त्वं गताः
राजानोऽर्थपरायणाः प्रतिदिनं विप्रा विकर्मस्थिताः ।
भार्या भर्तृषु बद्धवैरनिरता पुत्राः पितुर्दूषकाः
इत्थं भूतमिदं जगत्कलियुगे धर्मो वनं प्रास्थितः ॥६७॥

किं कृतेन न यत्र त्वं यत्र त्वं किमसौ कलिः ।
कलौ चेद्भवतो जन्म कलिरस्तु कृतेन किम् ॥६८॥

सर्वज्ञ इति लोकोऽयं भवन्तं भाषते मृषा ।
पदमेकं न जानीषे वस्तु नास्तीति याचके ॥६९॥

द्वावम्भसि विनिक्षेप्यौ गाढं बद्ध्वा गले शिलाम् ।
धनिनं चाप्यदातारं दरिद्रं चातपस्विनम् ॥७०॥

महानप्यल्पतां. याति निर्गुणे गुणवानपि ।
आधाराधेयभावाच्च गजेन्द्र इव दर्पणे ॥७१॥

೬೪. "ನೀನು ಯಾರು?" "(ನಾನು)ಶೂಲಿ," (ಶೂಲ= ಹೊಟ್ಟೆನೋವು ಅಥವಾ ತ್ರಿಶೂಲ). "ಹಾಗಿದ್ದರೆ) ವೈದ್ಯನನ್ನು ಹುಡುಕಿಕೊಂಡು ಹೋಗು." "ಪ್ರಿಯೇ, ನಾನು ನೀಲಕಂಠ" (ನವಿಲು ಅಥವಾ ಶಿವ). "(ಹಾಗಾದರೆ) ಒಂದು ಕೇಕೆ ಹಾಕು." "(ನಾನು) ಪಶುಗಳರಸ" (ಅಥವಾ ಶಿವ) "ಹಾಗಾದರೆ) ಕೊಂಬುಗಳು ಕಾಣಿಸುತ್ತಿಲ್ಲವಲ್ಲಾ?" "ಸುಂದರಿ, (ನಾನು ಸ್ಥಾಣು" (ಶಿವ). "ಸ್ಥಾಣುರೂಪದ ಮರಮಟ್ಟುಗಳು ಮಾತಾಡುವುದಿಲ್ಲವಲ್ಲ!" "ಶಿವೆಯ ಜೀವಿತೇಶ". "(ಹೆಣ್ಣು ನರಿಯ ಗಂಡನಾದರೆ) ಅಡವಿಗೆ ಹೋಗು; (ಇಲ್ಲೇಕೆ ಬಂದೆ?)"– ಎಂಬೀ ರೀತಿಯಿಂದ ಪಾರ್ವತಿಯ) ಪ್ರತ್ಯುತ್ತರಗಳ ಹೊಡೆತ ತಿಂದ ಚಂದ್ರಶೇಖರನು ನಿಮ್ಮನ್ನು ಸಂರಕ್ಷಿಸಲಿ.

೬೫. ಸಾಹಿತ್ಯ, ಸಂಗೀತ, ಕಲೆಗಳ ಪರಿಚಯವಿಲ್ಲದವನು ಬಾಲ–ಕೊಂಬುಗಳಿಲ್ಲದ ಸಾಕ್ಷಾತ್ ಪಶು; ಅಂಥವನು ಹುಲ್ಲನ್ನು ತಿನ್ನದೇ ಬದುಕುತ್ತಿರುವುದು ಪಶುಗಳ ಪರಮ ಭಾಗ್ಯವೆಂದೆನ್ನಬೇಕು!

೬೬. ಕಲಿಯುಗದ ಅಂತ್ಯದಲ್ಲಿ ರಾಕ್ಷಸರು ನರರೂಪರಾಗುವರು; ಅವರು ಮನುಷ್ಯರ ಮೈಯನ್ನಲ್ಲ– ಆಸ್ತಿಯನ್ನು ತಿನ್ನುವರು.

೬೭. ನಿರ್ವೀರ್ಯವಾದ ನೆಲವು ವನಸ್ಪತಿರಹಿತವೂ ರಸಹೀನವೂ ಆಗುವುದು; ನೀಚರು ದೊಡ್ಡಸ್ತಿಕೆಯನ್ನು ಪಡೆಯುವರು; ಆಳರಸರು ದುಡ್ಡೇ ದೊಡ್ಡಪ್ಪ ಎಂಬ ನೀತಿಯನ್ನು ಹಿಡಿಯುವರು; ವಿದ್ಯಾವಂತರು ವಿಕಟಕೃತ್ಯಗಳಿಗಿಳಿಯುವರು; ಹೆಂಡಂದಿರು ಗಂಡಂದಿರಲ್ಲಿ ಹಗೆತನ ಸಾಧಿಸುವರು; ಮಕ್ಕಳು ತಂದೆಯನ್ನು ನಿಂದಿಸುವರು; ಕಲಿಯುಗದಲ್ಲಿ ಹೀಗಾಗುವುದು– ಧರ್ಮವು (ಸೀದಾ ಎದ್ದು) ಕಾಡಿಗೆ ಹೋಗುವುದು!

೬೮. ನೀನಿಲ್ಲದಲ್ಲಿ ಕೃತಯುಗ ಬಂದರೂ ಪ್ರಯೋಜನವೇನು? ನೀನಿದ್ದಲ್ಲಿ ಕಲಿಯಿಂದೇನಾದೀತು? ಕಲಿಯುಗದಲ್ಲಿ ನೀನು ಹುಟ್ಟಿದರೆ ಕಲಿಯೇ (ನಮಗೆ) ಇರಲಿ– ಕೃತಯುಗದಿಂದ ನಮಗೇನಾಗಬೇಕು?

೬೯. ಈ ಜಗತ್ತು ಸುಳ್ಳು ಸುಳ್ಳೇ ನಿನ್ನನ್ನು ಸರ್ವಜ್ಞ ಎನ್ನುತ್ತದೆ; ಏಕೆಂದರೆ ಬೇಡುವವರು ಬಂದಾಗ 'ಈ ವಸ್ತು ಇಲ್ಲ' ಎಂಬ ವಾಕ್ಯ ನಿನಗೆ ಗೊತ್ತೇ ಇಲ್ಲ!

೭೦. ಬಿಗಿಯಾಗಿ ಕೊರಳಿಗೆ ಕಲ್ಲುಕಟ್ಟಿ ಈ ಇಬ್ಬರನ್ನು ನೀರಲ್ಲಿ ಎಸೆಯಬೇಕು; ದಾನ ಮಾಡದ ಧನಿಯನ್ನು ಮತ್ತು ತಪಸ್ಸು ಮಾಡದ ದರಿದ್ರನನ್ನು!

೭೧. ಆಧಾರ–ಆಧೇಯ ಭಾವದ ಸಂಬಂಧದಿಂದ ದೊಡ್ಡವನು ಚಿಕ್ಕವನ ಸಂಸರ್ಗದಿಂದ ಚಿಕ್ಕವನಾಗುವನು ಮತ್ತು ನಿರ್ಗುಣನ ಸಂಪರ್ಕದಿಂದ ಗುಣವಂತನೂ ನಿರ್ಗುಣತ್ವಕ್ಕಿಳಿಯುವನು; ಕನ್ನಡಿಯ ಸಂಪರ್ಕದಿಂದ ಆನೆ ಚಿಕ್ಕದಾಗುವುದಿಲ್ಲವೇ? ಹಾಗೆ.

असन्तुष्टो द्विजो नष्टः सन्तुष्टः क्षत्रियस्तथा \
सलज्जा गणिका नष्टा निर्लज्जा च कुलाङ्गना ॥७२॥

शुनः पुच्छमिव व्यर्थं जीवितं विद्यया विना ।
न गुह्यगोपने शक्तं न च दंशनिवारणे ॥७३॥

परदारानुबद्धस्य सरागस्य विकारिणः ।
विशेषं नाधिगच्छामि विषस्य विटस्य च ॥७४॥

न ब्रह्मचारी न गृही न वनस्थो न वा यतिः ।
पञ्चमः पञ्चभद्राख्यश्छात्राणामयमाश्रमः ॥७५॥

हृदयविहीनो धूर्तः संग्रहरहितः स वञ्चको वैद्यः ।
वक्ति न दोषान् दोषी चरकश्चरकं न जानाति ॥७६॥

सङ्करकृद्वर्णानां विबुधानां पतितपङ्क्तिभिर्भयदः ।
सततामेध्यः पापी कलिकालो लेखकः साक्षात् ॥७७॥

अज्ञतया प्रेम्णा वा चूडामणिमाकलय्य काचमणिम् ।
नृपतिर्वहेत शिरसा तेनासौ न ह्यनर्घमणिः ॥७८॥

नीरसान्यपि रोचन्ते कार्पासस्य फलानि मे ।
येषां गुणमयं जन्म सर्वेषां गुह्यगुप्तये ॥७९॥

करोतु करटः शब्दं सर्वदा प्राङ्गणे वसन् ।
न श्रृणोति बुधः प्रीत्या श्रृणोति पिकभाषितम् ॥८०॥

೭೨. ಅಸಂತೃಪ್ತನಾದ ಬ್ರಾಹ್ಮಣನೂ ಸಂತೃಪ್ತನಾದ ಕ್ಷತ್ರಿಯನೂ ಹಾನಿ ಹೊಂದುತ್ತಾರೆ; ಹಾಗೇ ನಾಚಿಕೆಯುಳ್ಳ ಸೂಳೆಯೂ ನಾಚಿಕೆಬಿಟ್ಟ ಗರತಿಯೂ ಹಾನಿ ಹೊಂದುತ್ತಾರೆ.

೭೩. ನಿರ್ವಿದ್ಯ ಜೀವನವು ನಾಯಿಯ ಬಾಲದಂತೆ ನಿಷ್ಫಲ; ಅದು (ನಾಯಿಯ ಬಾಲವು) ಅದರ ಮರ್ಮವನ್ನೂ ಮುಚ್ಚಿಡಲಾರದು. ಕಚ್ಚುವ ಕಾಡು ನೊಣಗಳನ್ನೂ ಓಡಿಸಲಾರದು.

೭೪. ಪರಸ್ತ್ರೀಯ ಬೆನ್ನು ಹಿಡಿದು ಅವಳಲ್ಲಿ ಮೋಹಿತನಾಗಿ ವಿಕೃತವಾಗಿ ನಡೆದುಕೊಳ್ಳುವ ಮಿಂಡನಿಗೂ ವಿಷಕ್ಕೂ ವ್ಯತ್ಯಾಸವನ್ನು (ಎಷ್ಟು ಹುಡುಕಿದರೂ) ದೊರಕಿಸಲಾರದಾದೆ.

೭೫. "ಇವನು ಬ್ರಹ್ಮಚಾರಿ ಅಲ್ಲ, ಗೃಹಸ್ಥನಲ್ಲ, ವಾನಪ್ರಸ್ಥನಲ್ಲ, ಸಂನ್ಯಾಸಿಯಲ್ಲ; ಇವನು 'ಪಂಚಭದ್ರ' ಎಂಬ ಪಂಚಮ" ಎಂಬಂತಹ ವಿದ್ಯಾರ್ಥಿಗಳ ಹಾಸ್ಟೆಲ್ಲಿದು (ಪಂಚೇಂದ್ರಿಯಗಳ ತೃಪ್ತಿಗೆ ಯೇನ ಕೇನ ಪ್ರಕಾರವಾಗಿ ಪ್ರಯತ್ನಿಸುವವ ಪಂಚಭದ್ರ)!

೭೬. ನಿರ್ದಯನೂ ಧೂರ್ತನೂ ಸಾಧನ ಸಂಗ್ರಹರಹಿತನೂ ಆದ ಡಾಕ್ಟರನು ವಂಚಕ; ಸ್ವತಃ ದೋಷಿಯಾದ ಅವನು (ರೋಗಿಯ ಶಾರೀರಿಕ) ದೋಷಗಳನ್ನು ಹೇಳ: ಅವನೊಬ್ಬ ಚರಕ (ವಿಜಿಟ್ ಕೊಡುವವ); ಆದರವನಿಗೆ ಚರಕಶಾಸ್ತ್ರ (ವೈದ್ಯಶಾಸ್ತ್ರ) ಗೊತ್ತಿಲ್ಲ!

೭೭. ಸಾಕ್ಷಾತ್ ಕಲಿಸ್ವರೂಪನಾದ ಲೇಖಕನು ಪಾಪಿ, ಹೊಲಸು ಮನುಷ್ಯ; ಆತನು ಅಕ್ಷರಗಳ ಜಾತಿ ಕೆಡಿಸುವವನು ಮತ್ತು ತಿಳಿದವರಿಗೆ ತನ್ನ ದುಷ್ಪಂಕ್ತಿಗಳಿಂದ ಭಯ ಉಂಟುಮಾಡುವವನು.

೭೮. ಅಜ್ಞಾನದಿಂದಲೋ ಪ್ರೀತಿಯಿಂದಲೋ ರಾಜನೊಬ್ಬನು ಗಾಜಿನ ಮಣಿಯನ್ನು ಚೂಡಾಮಣಿಯೆಂದು ತನ್ನ ತಲೆಯ ಮೇಲೆ ಧರಿಸಿಕೊಂಡದ್ದರಿಂದ ಅದೆಂದೂ ಅಮೂಲ್ಯ ರತ್ನವೆನ್ನಿಸದು.

೭೯. ಹತ್ತಿಯ ಹಣ್ಣುಗಳು ನೀರಸವಾದರೂ ನನಗೆ ರುಚಿಸುತ್ತವೆ; ಏಕೆಂದರೆ, ದಾರ ಮಾಡಲು ಬರುವ ಹತ್ತಿಯು ಎಲ್ಲರ ಮರ್ಮಸ್ಥಾನಗಳನ್ನೂ ಮುಚ್ಚಿಕೊಳ್ಳಲು ಸಹಾಯಕವಾಗುತ್ತದೆ.

೮೦. ಅಂಗಳದಲ್ಲಿ ಕಾಗೆಯು ವಾಸಿಸುತ್ತ (ಬೇಕಾದ ಹಾಗೆ) ಕೂಗಲಿ; ತಿಳಿದವನು ಅದನ್ನು ಕೇಳನು; ಅವನು ಕೋಗಿಲೆಯ ದನಿಯನ್ನೇ ಆಲಿಸುತ್ತಾನೆ.

नौकां वै भजते तावद् पारं न गच्छति ।
उत्तीर्णे तु नदीपारे नौकया किं प्रयोजनम् ॥८१॥

काका वृका भेकबकाश्च घूकाः
प्रणम्य युष्मानिदमेव याचे ।
कोलाहलं मा कुरुत क्षमध्वं
पुंस्कोकिलः कूजति मञ्जुरावम् ॥८२॥

अन्तर्वसति मार्जारी शुनी वा राजवेश्मनि ।
बहिर्बद्धोऽपि मातङ्गस्ततः किं लघुतां गतः ॥८३॥

नीलोत्पलस्य मत्स्यस्य पद्मस्य कुमुदस्य च ।
एकयोनिप्रसूतानां तेषां गन्धः पृथक् पृथक् ॥८४॥

तारागणश्चन्द्रमसं भजन्ते
न जातु नाथं नलिनाकराणाम् ।
एतावता तस्य किमस्ति हानिर्
ज्ञाता तयोरन्तरमेष लोकः ॥८५॥

निशाचरोऽपि दीनोऽपि सकलङ्कोऽपि चन्द्रमाः ।
चकोरी नयनद्वन्द्वमानन्दयति सर्वदा ॥८६॥

यद्यपि खदिरारण्ये गुप्तो वास्ते हि चम्पको वृक्षः ।
तदपि च परिमलमतुलं दिशि दिशि कथयेत् समीरणस्तस्य ॥८७॥

साधुत्वमपि दोषाय च्छाग लोकातिशायि यत्
अत एव हि सर्वेषां हिंसनीयोऽसि देहिनाम् ॥८८॥

खलः करोति दौरात्म्यं मलः पतति साधुषु ।
रावणेन हृता सीता बन्धनं तु महोदधेः ॥८९॥

कर्पूरधूलीरचितालवालः कस्तूरिकाकल्पितदोहदश्रीः ।
हिमाम्बुपूरैरभिषिच्यमानः प्राञ्चं गुणं मुञ्चति किं ॥९०॥

೮೧. ಹೊಳೆ ದಾಟುವವರೆಗೆ ಜನರು ದೋಣಿಯನ್ನು ಆಶ್ರಯಿಸುತ್ತಾರೆ. ದಾಟಿದ ಅನಂತರ (ಆಚೆಯ ದಡವನ್ನು ತಲುಪಿದ ಮೇಲೆ) ದೋಣಿಯಿಂದ ಏನು ಪ್ರಯೋಜನ?

೮೨. ಕಾಗೆ, ತೋಳ, ಕಪ್ಪೆ, ಕೊಕ್ಕರೆ, ಗೂಗೆಗಳೇ! ನಿಮಗೆ ನಮಸ್ಕಾರ ಮಾಡಿ ಇದನ್ನು ಬೇಡಿಕೊಳ್ಳುತ್ತೇನೆ: (ದಯವಿಟ್ಟು) ಕ್ಷಮಿಸಿರಿ: ಕೋಲಾಹಲ ಮಾಡಬೇಡಿರಿ; ಏಕೆಂದರೆ, ಗಂಡು ಕೋಗಿಲೆಯು ಇಂಪಾದ ದನಿಯಿಂದ ಕೂಗುತ್ತಿದೆ.

೮೩. ಅರಮನೆಯಲ್ಲಿ ಬೆಕ್ಕು ಅಥವಾ ನಾಯಿ ಒಳಗೆ ಇರುತ್ತದೆ; ಅಷ್ಟು ಮಾತ್ರದಿಂದ ಹೊರಗೆ ಕಟ್ಟಿಹಾಕಿರುವ ಆನೆ (ಎಂದಾದರೂ) ಕೀಳೆನ್ನಿಸುವುದೇ?

೮೪. ನೀಲಕಮಲ, ಮೀನು, ತಾವರೆ, ನೈದಿಲೆಗಳು ಒಂದೇ ಆಕರದಲ್ಲಿ (ನೀರಲ್ಲಿ) ಹುಟ್ಟಿದರೂ ಅವುಗಳ ವಾಸನೆಯು ಪ್ರತ್ಯೇಕ ಪ್ರತ್ಯೇಕವಾಗಿರುತ್ತದೆ.

೮೫. ನಕ್ಷತ್ರ ಸಮೂಹವು ಚಂದ್ರನನ್ನು ಆಶ್ರಯಿಸುತ್ತದೆ; ಆತನು ಕಮಲಾಕರಗಳ ಒಡೆಯನನ್ನು ಆಶ್ರಯಿಸದಿದ್ದರೆ ಹೋಯಿತು; ಇಷ್ಟು ಮಾತ್ರದಿಂದ ಅವನಿಗೇನು ಹಾನಿಯಾಯಿತು? ಈ ಜಗತ್ತು ಅವುಗಳಲ್ಲಿಯ ವ್ಯತ್ಯಾಸವನ್ನು ತಿಳಿದುಕೊಂಡಿದೆ.

೮೬. ಇರುಳಲೆಗನೂ ಕಲಾಹೀನನೂ ಕಲಂಕಯುಕ್ತನೂ ಆದರೂ ಚಂದ್ರನು ಯಾವಾಗಲೂ ಚಕೋರ ಪಕ್ಷಿಯ ಎರಡು ಕಂಗಳಿಗೂ ಆನಂದವನ್ನು ಉಂಟು ಮಾಡುತ್ತಾನೆ.

೮೭. ಕದಿರೆಯ ಕಾಡಿನಲ್ಲಿ ಗುಪ್ತವಾಗಿ ವಾಸಿಸುತ್ತಿದ್ದರೂ ಸಂಪಿಗೆಯ ಹೆಚ್ಚಿನ ಪರಿಮಳವನ್ನು ಗಾಳಿಯು ದಿಕ್ಕುದಿಕ್ಕುಗಳಲ್ಲಿ ಹೇಳುತ್ತಿದೆ.

೮೮. ಎಲೈ ಕುರಿಯೇ, ಲೋಕದಲ್ಲೇ ಅತಿಶಯವೆನ್ನಿಸುವ ಒಳ್ಳೆಯತನವು ದೋಷವಾಗಿದೆ; ಅದರಿಂದಲೇ ಎಲ್ಲ ಪ್ರಾಣಿಗಳಲ್ಲಿ ನೀನು ಹಿಂಸೆಗೆ ಪಾತ್ರವಾಗಿರುವೆ.

೮೯. ದುಷ್ಟನು ದುಷ್ಕಾರ್ಯವನ್ನು ಮಾಡುತ್ತಾನೆ; ಅದರ ದುಷ್ಪರಿಣಾಮವು ಸಜ್ಜನರ ಮೇಲೆ ಬೀಳುತ್ತದೆ; ರಾವಣನು ಸೀತೆಯನ್ನು ಕದ್ದೊಯ್ದನು; (ಆದರೆ) ಹೆಗ್ಗಡಲು ಸೇತುಬಂಧನಕ್ಕೆ ಒಳಪಟ್ಟಿತು.

೯೦. ನೀರುಳ್ಳಿಯ ಸಸಿಗೆ ಕರ್ಪೂರದ ಪುಡಿಯಿಂದ ಪಾತಿ ಮಾಡಿ, ಕಸ್ತೂರಿಯಿಂದ ಬಯಕೆ ತೀರಿಸಿ, ತಣ್ಣೀರಿನಿಂದ ಅಭಿಷೇಕ ಮಾಡಿದರೂ ತನ್ನ ಹಳೆಯ ಗುಣವನ್ನದು (ಎಂದಾದರೂ) ಬಿಟ್ಟೀತೇ?

एकस्य जाने सुखभोगभाजः
श्लाघ्यस्य सेवाव्यसनं निवृत्तम् ।
सदैव शिश्नोदरवर्जितत्वाद्
अयाच्ययाच्ञारहितस्य राहोः ॥९१॥

मत्स्यस्येवाप्सु सदा दम्भस्य ज्ञायते गतिः केन ।
नास्यकरौ नच पादौ न शिरो दुर्लक्ष्य एवासौ ॥९२॥

वच्दने ब्रह्लीकानां व्रतनियमे दाक्षिणात्यानाम् ।
अधिकारे कीराणां दम्भः सर्वत्र गौडानाम् ॥९३॥

गुणागुणितया भान्ति येषु वस्तेषु विस्मयः ।
निर्गुणेषु गुणानेव ये वदन्ति जयन्ति ते ॥९४॥

अन्यमुखे दुर्वादो यः प्रियवदने स एव परिहासः ।
इतरेन्धनजन्मा यो धूमः सोऽगुरुभवो धूपः ॥९५॥

धनाशा जीविताशा च गुर्वी प्राणभृतां सदा ।
वृद्धस्य तरुणीभार्या प्राणेभ्योऽपि गरीयसी ॥९६॥

कुग्रामवासः कुजनस्य सेवा
कुभोजनं क्रोधमुखी च भार्या ।
मूर्खश्च पुत्रो विधवा च कन्या
दहन्त्यमी वह्नि मृते शरीरम् ॥९७॥

सुतं पतन्तं प्रसमीक्ष्य पावके
न बोधयामास पतिं पतिव्रता ।
तदाऽभवत् तत्पतिभक्तिगौरवाद्
धुताशनश्चन्दनपङ्कशीतलः ॥९८॥

೯೧. ಸೇವೆ ಮಾಡುವ ಚಟದಿಂದ ನಿವೃತ್ತನಾದವನು ಒಬ್ಬನೇ ಎಂಬುದನ್ನು ಬಲ್ಲೆ; ಯಾವಾಗಲೂ ಶಿಶ್ನೋದರರಹಿತನಾಗಿರುವುದರಿಂದ, ರಾಹುವು ಅಯೋಗ್ಯರೆಡೆಗೆ ಬೇಡಹೋಗದೆ, ಶ್ಲಾಘ್ಯನೂ ಸುಖಭೋಗಿಯೂ ಆಗಿದ್ದಾನೆ– ಅವನೇ ಆ ಒಬ್ಬನು!

೯೨. ನೀರಿನಲ್ಲಿ ಮೀನಿನ ಕೈಕಾಲು ತಲೆಗಳು ಕಾಣಿಸದಿರುವಂತೆ ದಂಭದ ಕೈಕಾಲು ತಲೆಗಳೂ ಕಾಣಿಸವು; ಅದುದರಿಂದ (ಮನುಷ್ಯರಲ್ಲಿರುವ) ಅದು ಸುಲಭವಾಗಿ ತೋರದಾಗಿದೆ.

೯೩. ಮಾತಿನಲ್ಲಿ ಪಂಜಾಬಿಗಳೂ ವ್ರತನಿಯಮಗಳಲ್ಲಿ ದಕ್ಷಿಣ ದೇಶದವರೂ ಅಧಿಕಾರ ನಿರ್ವಹಿಸುವುದರಲ್ಲಿ ಕಾಶ್ಮೀರಿಗಳೂ ಎಲ್ಲದರಲ್ಲಿಯೂ ಬಂಗಾಳಿಗಳೂ ದಾಂಭಿಕರು.

೯೪. ಗುಣಗಳು ಗುಣಿಗಳಲ್ಲಿ ಪ್ರಕಾಶಿಸುತ್ತಿರುವುದನ್ನು ಕಂಡು ನೀವು ಆಶ್ಚರ್ಯಪಡುತ್ತೀರಿ; ಆದರೆ ನಿರ್ಗುಣರಲ್ಲಿ ಗುಣಗಳಿವೆಯೆಂದು ಹೇಳುವವರು (ವ್ಯವಹಾರ ಜಗತ್ತಿನಲ್ಲಿಂದು) ಜಯಶಾಲಿಗಳಾಗುತ್ತಾರೆ!

೯೫. ಇನ್ನೊಬ್ಬರ ಬಾಯಲ್ಲಿ ಕೆಟ್ಟ ಮಾತೆನ್ನಿಸಿದ್ದು ನಮಗೆ ಬೇಕಾದವರ ಬಾಯಲ್ಲಿ ಪರಿಹಾಸವೆನ್ನಿಸುತ್ತದೆ; ಬೇರೆ ಕಟ್ಟಿಗೆಹೊಗೆಯು ಹೊಗೆ–ಅದೇ ಹೊಗೆ ಅಗುರುವಿನದಾದರೆ ಧೂಪ!

೯೬. ಜೀವಿಗಳಿಗೆ ಧನಾಶೆ– ಜೀವಿತಾಶೆಗಳು ಬಹಳ ಹೆಚ್ಚಿನವು; ಮುದುಕನಿಗೆ ಎಳೆಯ ಹೆಂಡತಿಯು ತನ್ನ ಪ್ರಾಣಕ್ಕಿಂತಲೂ ಹೆಚ್ಚಿನವಳು!

೯೭. ಕೆಟ್ಟ ಊರಿನಲ್ಲಿರುವುದು, ಕೆಟ್ಟ ಜನರ ಕೆಳಗೆ ನೌಕರಿ ಮಾಡುವುದು, ಕೆಟ್ಟ ಊಟ ಉಣ್ಣುವುದು, ಹೆಂಡತಿ (ಯಾವಾಗಲೂ) ಸಿಟ್ಟಿನ ಮುಖದವಳಾಗಿರುವುದು, ಮಗ ಮೂರ್ಖನಾಗಿರುವುದು ಮತ್ತು ಮಗಳು ವಿಧವೆಯಾಗಿರುವುದು ಇವು ಬೆಂಕಿಯ ಸಹಾಯವಿಲ್ಲದೆ ಮೈಸುಡುತ್ತವೆ!

೯೮. ಮಗನು ಬೆಂಕಿಯಲ್ಲಿ ಬೀಳುವುದನ್ನು ಕಂಡರೂ ಪತಿವ್ರತೆಯು ಪತಿಯನ್ನು ಎಬ್ಬಿಸಲಿಲ್ಲ; ಆಗ ಅವಳ ಪತಿಭಕ್ತಿಗೆ ಗೌರವಕೊಟ್ಟು ಬೆಂಕಿಯು ಗಂಧದ ಲೇಪದಷ್ಟು ತಣ್ಣಗಾದನು!

राजाभिषेके मदविह्वलाया
हस्ताच्च्युतो हेमघटो युवत्याः ।
सोपानमार्गे प्रकरोति शब्दं
टटण्टटण्टं टटटण्टटण्टम् ॥९९॥

भट्टिर्नष्टो भारविश्चाऽपि नष्टो
भिक्षुर्नष्टो भीमसेनोऽपि नष्टः ।
भुक्कुण्डोऽहं भूपतिस्त्वं हि राजन्
भब्भापङ्क्तावन्तकः संनिविष्टः ॥१००॥

೯೯. ಮಹಾರಾಜನಿಗೆ ಸ್ನಾನ ಮಾಡಿಸುವಾಗ ಕಾಮಪೀಡಿತಳಾದ ಒಬ್ಬ ತರುಣಿಯ ಕೈಯಲ್ಲಿದ್ದ ಚಿನ್ನದ ಕೊಡವು ಮೆಟ್ಟಿಲ ಮೇಲೆ ಬಿದ್ದು "ಟಟಂ ಟಟಂ ಟಂ ಟಟಟಂ ಟಟಂ ಟಂ" ಎಂದು ಸದ್ದು ಮಾಡಿತು.

೧೦೦. ಎಲೈ ದೊರೆಯೇ, ಭಟ್ಟಿ, ಭಾರವಿ, ಭಿಕ್ಷುಗಳೆಂಬ ಕವಿಗಳಲ್ಲದೆ ಭೀಮಸೇನಕವಿಯೂ ಮೃತನಾದನು; ನಾನೀಗ ಭುಕ್ಕುಂಡ ಕವಿ, ನೀನು ದೊರೆ. ಯಮನು 'ಅಂಬಾ' ಎಂದು ಕೂಗುವ ಪ್ರಾಣಿಗಳ (ಅರ್ಥಾತ್ ನಮ್ಮಂಥ ಕಿರಿಗವಿಗಳ) ಸಾಲನ್ನು (ಈಗ) ಹೊಕ್ಕನು! (ಆದುದರಿಂದ ದೇವರೇ ನಮ್ಮನ್ನು ಕಾಪಾಡಬೇಕು).



----------

# ಪದ್ಯಸೂಚಿ ಮತ್ತು ಆಕರನಿರ್ದೇಶ

## ಅಧ್ಯಾಯ ೧

## ಪ್ರಕರಣ: ಪ್ರೇಮ ಮತ್ತು ಗೃಹಸ್ಥ ಜೀವನ

| ಶ್ಲೋಕ | ಆಕರ |
|---|---|
| ೧. ವಿಕ್ರಮಾಂಕದೇವಚರಿತ | ೨ನೆಯ ಸರ್ಗ, ೨೧ನೆಯ ವೃತ್ತ |
| ೨. ” | ೧೮ ” |
| ೩. ” | ೭ ” |
| ೪. ” | ೧೩ ” |
| ೫. ” | ೬ ” |
| ೬. ಕಲಾವಿಲಾಸ | ೭ ” |
| ೭. ರುಕ್ಮಿಣೀಶವಿಜಯ | ೧೭ನೆಯ ಸರ್ಗ ೫೯ನೆಯ ವೃತ್ತ |
| ೮. ಮಧುರಾ ವಿಜಯ | ೧–೫೬ |
| ೯. ” | ೧–೬೦ |
| ೧೦. ಕವಿಕರ್ಣ ರಸಾಯನ | ೨–೫೦ |
| ೧೧. ಮೇಘದೂತ | ೭೧ನೆಯ ವೃತ್ತ |
| ೧೨. ” | ೬೬ ” |
| ೧೩. ವಿಶ್ವಗುಣಾದರ್ಶಚಂಪೂ | ೧೬೬” |
| ೧೪. ” | ೧೬೬” |
| ೧೫. ಕಾವ್ಯಾದರ್ಶ – | ೨ನೆಯ ಪರಿಚ್ಛೇದ ೧೯೩ನೆಯ ಶ್ಲೋಕ |
| ೧೬. ” | ೯೪ ” |
| ೧೭. ” | ೮೦ ” |
| ೧೮. ” | ೬೭ |
| ೧೯. ರಘುವಂಶ | ೧ನೆಯ ಸರ್ಗ ೧೩ನೆಯ ಶ್ಲೋಕ |
| ೨೦. ” | ೧೫ ” |

| ಶ್ಲೋಕ | ಆಕರ |
|---|---|
| ೨೧. ಅಭಿಜ್ಞಾನ ಶಾಕುಂತಲ | ೩ನೆಯ ಅಂಕ, ೧೪ನೆಯ ಶ್ಲೋಕ |
| ೨೨. ಸುಭಾಷಿತ ರತ್ನಭಾಂಡಾರ | ೬ನೆಯ ಭಾಗ ೨ನೆಯ ವೃತ್ತ |
| ೨೩. ಕುಮಾರ ಸಂಭವ | ೫ನೆಯ ಸ. ೩೬ ವೃ. |
| ೨೪. ಅಭಿಜ್ಞಾನ ಶಾಕುಂತಲ | ೩–೧೪. |
| ೨೫. ಮಾಲವಿಕಾಗ್ನಿಮಿತ್ರ | ೩ ಅಂ. ೧೫ ವೃ. |
| ೨೬. ಶೃಂಗಾರ ಶತಕ | ೬೫ನೆಯ ವೃ. |
| ೨೭. ಮಾಲವಿಕಲಾಗ್ನಿಮಿತ್ರ | ೨ ಅಂ. ೪ ವೃ. |
| ೨೮. ಕಿರಾತಾರ್ಜುನೀಯ | ೧೦ ಸ, ೧೧ ವೃ. |
| ೨೯. ಸೌಂದರನಂದ | ೯ ಸ. ೨೮ ವೃ. |
| ೩೦. ಗೀತಗೋವಿಂದ | ೧೧–೨ |
| ೩೧. ಮಾಲತೀ ಮಾಧವ | ೯–೪೫ |
| ೩೨. ವಿಕ್ರಮೋರ್ವಶೀಯ | ೩–೧೫ |
| ೩೩. ಮಾಲತೀ ಮಾಧವ | ೫–೭ |
| ೩೪. ರಸಗಂಗಾಧರ ಪುಟ ೭೦ | (ರಸನಿರೂಪಣಾತ್ಮಕೇ ಪೂರ್ವಮಾನನೇ) |
| ೩೫. ಕಾವ್ಯಾದರ್ಶ | ೨ನೆಯ ಪರಿಚ್ಛೇದ ೧೫೧ನೆಯ ಶ್ಲೋಕ |
| ೩೬. ” | ೧೪೧ ” |
| ೩೭. ಉತ್ತರ ರಾಮಚರಿತ | ೩–೩೧ |
| ೩೮. ” ” | ೩೫ |
| ೩೯. ” ” | ೩೮ |
| ೪೦. ರಸಗಂಗಾಧರ | ಪುಟ.೪೯೧ |
| ೪೧. ಅಮರಶತಕ | ೧೦ನೆಯ ವೃತ್ತ |
| ೪೨. ” | ೧೨ ” |
| ೪೩. ರತ್ನಾವಳೀ | ೩–೧೭ |
| ೪೪. ಸಾಹಿತ್ಯದರ್ಪಣ ಪುಟ | ೧೫೭ |
| ೪೫. ” | ” |
| ೪೬. ಶಿಶುಪಾಲವಧ | ೬–೭೬ |
| ೪೭. ” | ೭–೪೬ |
| ೪೮. ” | ೧೦–೭೯ |
| ೪೯. ಸುಭಾಷಿತ ಸುಧಾನಿಧಿ ಪುಟ ೨೩೨ | |
| ೫೦. ಉತ್ತರರಾಮಚರಿತ | ೧–೩೫ |
| ೫೧. ” | ೧–೨೭ |

| ಶ್ಲೋಕ | ಆಕರ |
|---|---|
| ೫೨. ” | ೧–೩೯ |
| ೫೩. ಭಾಗವತ | ೧೦–೩೧–೧೭ |
| ೫೪. ಅಮರಶತಕ | ೮೨ನೆಯ ವೃ. |
| ೫೫. ಹಿತೋಪದೇಶ | ಪ್ರಸ್ತಾವಿಕೆ–೧೯ |
| ೫೬. ಪಂಚತಂತ್ರ | ೧–೧೫೪ |
| ೫೭. ” | ೪–೩ |
| ೫೮. ಯಾಜ್ಞವಲ್ಕ್ಯ ಸ್ಮೃತಿ | ೩–೮೭ |
| ೫೯. ಮನುಸ್ಮೃತಿ | ೫–೧೬೫ |
| ೬೦. ಮೇಘದೂತ | –೬೯ |
| ೬೧. ಶಾಂತಿಶತಕ | ೨–೨೮ |
| ೬೨. ಪದ್ಮಪುರಾಣ, ಪಾತಾಲಖಂಡ | ೮೯–೨೯ |
| ೬೩. ಭಾಗವತ | ೧೧–೧೨–೨೧ |
| ೬೪. ಅಗ್ನಿಪುರಾಣ | ೬೪–೬ |
| ೬೫. ಸ್ಕಂದಪುರಾಣ, ನಾಗರಖಂಡ | ೨೭೧–೩೧೮ |
| ೬೬. ಸ್ವಪ್ನವಾಸವದತ್ತ | ೧–೧೩ |
| ೬೭. ಕುಮಾರಸಂಭವ | ೪–೩೩ |
| ೬೮. ಅಬಿಜ್ಞಾನ ಶಾಕುಂತಲ | ೪–೧೯ |
| ೬೯. ಅವಿಮಾರಕ | ೩–೧೭ |
| ೭೦. ಉತ್ತರ ರಾಮಚರಿತ | ೧–೩೮ |
| ೭೧. ರಘುವಂಶ | ೩–೧೪ |
| ೭೨. ” | ೩–೧೭ |
| ೭೩. ಅಭಿಜ್ಞಾನ ಶಾಕುಂತಲ | ೭–೧೮ |
| ೭೪. ಉತ್ತರ ರಾಮಚರಿತ | ೬–೧೨ |
| ೭೫. ” | ೬–೧೩ |
| ೭೬. ಹಿತೋಪದೇಶ ಪ್ರಸ್ತಾವಿಕ | –೩೩ |
| ೭೭. ” ” | –೩೪ |
| ೭೮. ” ” | –೧೪ |
| ೭೯. ” ” | –೧೩ |
| ೮೦. ಪಂಚತಂತ್ರ ೩ನೆಯ ತಂತ್ರ | ೯–೭೫ |
| ೮೧. ಹಿತೋಪದೇಶ ಸುಹೃದ್ ಭೇದ | –೩೬ |
| ೮೨. ” ” | –೧೪೧ |

| ಶ್ಲೋಕ | ಆಕರ |
|---|---|
| ೮೩. ಮಹಾಭಾರತ ವನಪರ್ವ | ೧೩೪–೯ |
| ೮೪. ” ” | ೧೫೯–೧೪ |
| ೮೫. ಮನುಸ್ಮೃತಿ ” | ೩–೧೦೧ |
| ೮೬. ” ” | ೩–೧೦೬ |
| ೮೭. ” ” | ೩–೧೧೪ |
| ೮೮. ಮಹಾಭಾರತ ವನಪರ್ವ | ೨೦೬–೨೦ |
| ೮೯. ” ” | ೨೦೬–೨೧ |
| ೯೦. ” ಆದಿಪರ್ವ | ೯೧–೩ |
| ೯೧. ” ಸಭಾಪರ್ವ | ೫–೧೨ |
| ೯೨. ” ಶಾಂತಿಪರ್ವ | ೨೬೯–೬ |
| ೯೩. ಚತುರ್ವರ್ಗ ಸಂಗ್ರಹ: ಧರ್ಮಪ್ರಶಂಸೆ | –೧೯ |
| ೯೪. ಚಾರುಚರ್ಯಾ | –೭೦ |
| ೯೫. ಮನುಸ್ಮೃತಿ | ೯–೧೦೧ |
| ೯೬. ” | ೪–೭೯ |
| ೯೭. ” | ೩–೯೨ |
| ೯೮. ದರ್ಪದಲನ | ೨–೩೫ |
| ೯೯. ಹರ್ಷಚರಿತ | ೮–೨ |
| ೧೦೦. ವಿಶ್ವಗುಣಾದರ್ಶ ಚಂಪು ೧೧೧ನೆಯ ವೃ. | |
| ೧೦೧. ದರ್ಪದಲನ | ೧–೮೨ |
| ೧೦೨. ಚತುರ್ವರ್ಗಸಂಗ್ರಹ ಮೋಕ್ಷಪ್ರಶಂಸೆ ೨೮ನೆಯ ವೃತ್ತ | |

## ಅಧ್ಯಾಯ ೨

## ಪ್ರಕರಣ: ಮಾನವನ ತತ್ತ್ವಾನುಸಂಧಾನ

| ಶ್ಲೋಕ | ಆಕರ |
|---|---|
| ೧. ಉಮಾಸಹಸ್ರ | ೪–೩–೯ |
| ೨. ರಾಜತರಂಗಿಣೀ | ೭–೧೭–೩೧ |
| ೩. ಸನತ್ಸುಜಾತೀಯ ಭಾಷ್ಯ | –೨೫ |
| ೪. ವೇಣೀಸಂಹಾರ | ೧–೨೩ |
| ೫. ಮನುಸ್ಮೃತಿ | ೧೨–೧೨೨ |
| ೬. ಭಾಗವತ | ೧೧–೨೪–೧೮ |
| ೭. ಗಜೇಂದ್ರ ಮೋಕ್ಷ | –೪೭ |
| ೮. ನೀತಿಶತಕ | –೧ |
| ೯. ಸುಭಾಷಿತಾವಳಿ | –೧೧ |
| ೧೦. ” | –೧೫ |
| ೧೧. ” | –೨೬ |
| ೧೨. ಭೀಷ್ಮಸ್ತವರಾಜ | –೮೩ |
| ೧೩. ಮನುಸ್ಮೃತಿ | –೨೪ |
| ೧೪. ಸ್ಕಂದ ಪುರಾಣ, ಕಾ.ಖಂ.ಪೂ.ಅ. | ೧೦–೧೨೬ |
| ೧೫. ಶಿವಪುರಾಣ–ರುದ್ರಸಂಹಿತೆ ಯುದ್ಧಖಂಡ | ೫೦–೩೧ |
| ೧೬. ಪದ್ಮಪುರಾಣ, ಸೃಷ್ಟಿಖಂಡ | ೪೦–೧೩ |
| ೧೭. ಗರುಡಪುರಾಣ, ಪೂ.ಖಂ. | ೪೪–೪ |
| ೧೮. ವೈರಾಗ್ಯಶತಕ | ೬೯ |
| ೧೯. ಮಹಾಭಾರತ, ಶಾಂತಿಪರ್ವ | ೨೫೯–೮೬–೧೦ |
| ೨೦. ” ” | ೩–೨೦೫–೨೧ |
| ೨೧. ರಾಮಾಯಣ | ೨–೧೦೯–೧೩ |
| ೨೨. ಶ್ವೇತಾಶ್ವತರ ಮಂತ್ರೋ–ಪನಿಷತ್ | ೬–೧೮ |
| ೨೩. ಭಗವದ್ಗೀತೆ | ೧೧–೧೫ |

| ಶ್ಲೋಕ | ಆಕರ |
| --- | --- |
| ೨೪. " | ೧೩–೨೨ |
| ೨೫. ಆತ್ಮಬೋಧ | ೬೦ |
| ೨೬. ಮಹಾಭಾರತ–ಅನುಶಾಸನ ಪರ್ವ | ೧೬–೮ |
| ೨೭. ಮ.ಭಾ.ಉದ್ಯೋಗ ಪರ್ವ | ೪೬–೬ |
| ೨೮. ಕುಮಾರ ಸಂಭವ | ೨–೯ |
| ೨೯. " | ೨–೧೦ |
| ೩೦. " | ೨–೮ |
| ೩೧. " | ೨–೧೩ |
| ೩೨. " | ೨–೧೫ |
| ೩೩. ಬ್ರಹ್ಮಾಂಡ ಪುರಾಣ– ಉತ್ತರ ಭಾಗ | ೮–೯ |
| ೩೪. ಮನುಸ್ಮೃತಿ | ೧೨–೨೬ |
| ೩೫. ಮ.ಭಾ. ಆಶ್ವಮೇದಿಕ ಪರ್ವ | ೫೦–೧೦ |
| ೩೬. " | ೫೦–೪೦ |
| ೩೭. " | ೫೦–೨೭ |
| ೩೮. ಭಗವದ್ಗೀತೆ | ೨–೨೯ |
| ೩೯. " | ೨–೨೦ |
| ೪೦. ಕಾಮಂದಕೀಯ ನೀತಿಸಾರ | ೧–೩೫ |
| ೪೧. " | ೧–೩೬ |
| ೪೨. " | ೧–೩೭ |
| ೪೩. ಮ.ಭಾ. ಶಾಂತಿಪರ್ವ | ೧೬೨–೭ |
| ೪೪. " | ೧೬೨–೮ |
| ೪೫. " | ೧೬೨–೯ |
| ೪೬. ಮನುಸ್ಮೃತಿ | ೨–೧೩ |
| ೪೭. ಸುಭಾಷಿತ ಸುಧಾನಿಧಿ ಪುಟ | ೨೪೫–೨ |
| ೪೮. ಬ್ರಹ್ಮಾಂಡ ಪುರಾಣ– ಮಧ್ಯಭಾಗ | ೬೮–೧೦೩ |
| ೪೯. ಅಪರೋಕ್ಷಾನುಭೂತಿ | ೫೧ |
| ೫೦. ಮನುಸ್ಮೃತಿ | ೧೨–೫೯ |
| ೫೧. " | ೧೨–೧೨೩ |
| ೫೨. " | ೧೨–೧೨೫ |
| ೫೩. ಶಿಶುಪಾಲವಧ | ೧–೩೩ |
| ೫೪. " | ೧೪–೭೦ |

| ಶ್ಲೋಕ | ಆಕರ |
|---|---|
| ೫೫. ಬುದ್ಧಚರಿತ | ೧೨–೬೫ |
| ೫೬. ” | ೧೯–೨೭ |
| ೫೭. ” | ೧೭–೩೬ |
| ೫೮.ಶಾಂತವಿಲಾಸ | ೭ |
| ೫೯.ಕಾದಂಬರಿ–ಆದಿವೃತ್ತ | |
| ೬೦. ಶಾಂತಿಶತಕ | ೪ |
| ೬೧. ” | ೪–೫ |
| ೬೨. ವೈರಾಗ್ಯ ಶತಕ | ೯೮ |
| ೬೩. ಗೀತಗೋವಿಂದ | ೧–೫ |
| ೬೪.ಉಮಾಸಹಸ್ರ | ೧–೨–೨೦ |
| ೬೫. ” | ೭–೩–೧೩ |
| ೬೬. ಶಿವಶಾಂತಸ್ತೋತ್ರ ತಿಲಕ | ೬೭ |
| ೬೭. ವೈರಾಗ್ಯಶತಕ | ೮೭ |
| ೬೮.ರತ್ನಾವಳಿ | ೪–೧೧ |
| ೬೯. ಗಂಗಾಲಹರಿ | ೧ |
| ೭೦. ಅಮೃತಲಹರಿ | ೮ |
| ೭೧.ಕರುಣಾಲಹರಿ | ೩೩ |
| ೭೨. ಲಕ್ಷ್ಮೀಲಹರಿ | ೪೧ |
| ೭೩. ಹಂಸಸಂದೇಶ | ೧–೨೬ |
| ೭೪. ” | ೧–೪೬ |
| ೭೫. ಶಾಕುಂತಲ | ೧–೧ |
| ೭೬.ಕಿರಾತಾರ್ಜುನೀಯ | ೧೮–೩೩ |
| ೭೭. ಮಹಾಯೋಗ ಪರಿಶಿಷ್ಟ 'ಬ' | ೨೮೩ |
| ೭೮. ” ” | ೧೯೬ |
| ೭೯. ಪ್ರಬೋಧಸುಧಾಕರ | ೧೮೩ |
| ೮೦.ಮ.ಭಾ. ಅನುಶಾಸನಪರ್ವ ಅಧ್ಯಾಯ ೧೬ ಶ್ಲೋಕ | ೧೮ |
| ೮೧. ವೈರಾಗ್ಯ ಶತಕ | ೯೬ |
| ೮೨. ಶೃಂಗಾರ ಶತಕ | ೯೪ |
| ೮೩. ” | ೬೯ |
| ೮೪. ಶಿವಮಹಿಮ್ನಸ್ತೋತ್ರ | ೭ |
| ೮೫. ” | ೫ |

| ಶ್ಲೋಕ | ಆಕರ |
|---|---|
| ೮೬. ಆನಂದಲಹರಿ | ೨ |
| ೮೭. ಗಂಗಾಷ್ಟಕ | ೮ |
| ೮೮. ಮನೀಷಾಪಂಚಕ | ೧ |
| ೮೯. ಶಾಂತಿಶತಕ | ೧–೧೬ |
| ೯೦. ವೇದಪಾದಸ್ತವ | ೧೧ |
| ೯೧. ಶಿವಾನಂದಲಹರಿ | ೨೮ |
| ೯೨. ಸೂರ್ಯಾರ್ಯಾಸ್ತೋತ್ರ | ೮ |
| ೯೩. ಗಣೇಶಮಹಿಮಸ್ತೋತ್ರ | ೨ |
| ೯೪. ಹಲಾಯುಧಸ್ತೋತ್ರ | ೫೦ |
| ೯೫. ಶಿವಾತ್ಮಾರ್ಪಣಸ್ತುತಿ | ೫೦ |
| ೯೬. ಬಿಲ್ಹಣಕೃತಶಿವಸ್ತೋತ್ರ | ೪ |
| ೯೭. ಗುಹಪಂಚರತ್ನಂ | ೫ |
| ೯೮. ಪಂಡಿತರಾಜಕಾವ್ಯ ಸಂಗ್ರಹ | ೧೪–೯೧ |
| ೯೯. ” | ೧೩–೫೭೧ |
| ೧೦೦. ವೈರಾಗ್ಯಶತಕ | ೧೦೦ |

## ಅಧ್ಯಾಯ ೩

# ಪ್ರಕರಣ: ಜೀವನ ಮತ್ತು ಲೋಕಾನುಭವ

| ಶ್ಲೋಕ ಆಕರ | ಅ.ಶ್ಲೋ. |
|---|---|
| ೧. ಸುಭಾಷಿತಸುಧಾನಿಧಿ | ೫೦–೪ |
| ೨. ಮ.ಭಾ. ಶಾಂತಿಪರ್ವ | ೬೮–೫೯ |
| ೩. ” ” | ೧೨–೯ |
| ೪. ” ” | ೧೨–೨೯ |
| ೫. ” ” | ೧೫–೩ |
| ೬. ಯಾಜ್ಞವಲ್ಕ್ಯಸ್ಮೃತಿ ಆಚಾರಾಧ್ಯಾಯ | ೧೩–೩೬೭ |
| ೭. ” ವ್ಯವಹಾರಾಧ್ಯಾಯ | ೨–೨೧ |
| ೮. ಅರ್ಥಶಾಸ್ತ್ರ | ೩–೧–೪೧ |
| ೯. ಕಾಮಂದಕೀಯ ನೀತಿಸಾರ | ೩–೭ |
| ೧೦. ಶೌನಕೀಯ ನೀತಿಸಾರ ೩೭ (ಗರುಡ ಪುರಾಣ, ಪೂರ್ವ ಖಂಡ, ೧೦೮ನೆಯ ಅಧ್ಯಾಯ) | |
| ೧೧. ಮನುಸ್ಮೃತಿ | ೪–೧೬೦ |
| ೧೨. ” | ೮–೧೨೮ |
| ೧೩. ” | ೭–೧೩ |
| ೧೪. ” | ೮–೧೫ |
| ೧೫. ಶೌನಕೀಯ ನೀತಿಸಾರ ೭೫ | (ಗರುಡಪುರಾಣ, ಪೂ. ಖಂ. ೧೦೮ ಅ.) |
| ೧೬. ಬೃಹಸ್ಪತಿ ಪ್ರೋಕ್ತ ನೀತಿಸಾರ ೨ (......., ..... ೧೦೯ ಅ.) | |
| ೧೭. ” ” | ೧೧ |
| ೧೮. ” ” ೧೪ (ಗರುಡ ಪುರಾಣ ಪೂ.ಖಂ.೧೧೦ ಅ.) | |
| ೧೯. ಕಾಮಂದಕೀಯ ನೀ.ಸಾ. | ೧–೫೫ |
| ೨೦. ” ” | ೧–೫೬ |
| ೨೧. ಮುದ್ರಾರಾಕ್ಷಸ | ೨–೧ |

| ಶ್ಲೋಕ ಆಕರ | | | ಅ.ಶ್ಲೋ. |
|---|---|---|---|
| ೨೨. ಕಾಮಂದಕೀಯ ನೀ.ಸಾ. | | | ೫–೬೭ |
| ೨೩. | ” | ” | ೫–೭೪ |
| ೨೪. | ” | ” | ೫–೬೬ |
| ೨೫. | ” | ” | ೫–೭೫ |
| ೨೬. | ಯಾಜ್ಞವಲ್ಕ್ಯ ಸ್ಮೃತಿ | | ೧೨–೩೫೮ |
| ೨೭. | ” | ” | ೧೩–೩೬೮ |
| ೨೮. ಬೃಹಸ್ಪತಿ ನೀತಿಸಾರ ೩(ಗರುಡ ಪುರಾಣ, ಪೂ. ಖಂ., ೧೧೨ ಅ.) | | | |
| ೨೯. ಶಿಶುಪಾಲವಧ | | | ೧೧–೬ |
| ೩೦. ಮನುಸ್ಮೃತಿ | | | ೨–೨೩೯ |
| ೩೧. ಮ.ಭಾ.ಶಾಂತಿ ಪರ್ವ | | | ೯೪–೧ |
| ೩೨. | ” | ” | ೫೬–೨೪ |
| ೩೩. | ” | ” | ೫೭–೫ |
| ೩೪. ಮಾಲವಿಕಾಗ್ನಿಮಿತ್ರ | | | ೧–೮ |
| ೩೫. ಕಿರಾತಾರ್ಜುನೀಯ | | | ೨–೪೯ |
| ೩೬. ” | ” | | ೨–೫೧ |
| ೩೭. ” | ” | | ೨–೫೨ |
| ೩೮. ” | ” | | ೨–೫೩ |
| ೩೯. ಮುದ್ರಾರಾಕ್ಷಸ | | | ೫–೩ |
| ೪೦. ರಾಜತರಂಗಿಣಿ | | | ೭–೭೧೧ |
| ೪೧. ” | | | ೭–೧೧೧೨ |
| ೪೨. ” | | | ೭–೧೧೧೧ |
| ೪೩. ” | | | ೭–೧೧೧೩ |
| ೪೪. ” | | | ೮–೧೨೧ |
| ೪೫. ಶಿಶುಪಾಲವಧ | | | ೨–೫೨ |
| ೪೬. ಕಾದಂಬರಿ | | | ೩೩೧–೩೩೨ |
| ೪೭. ಸೌಂದರನಂದ | | | ೧–೩೫ |
| ೪೮.ಶಾಂತಿವರ್ಮನ ತಾಳಗುಂದದ ಶಾಸನ | | | |
| ೪೯. ” | ” | | |
| ೫೦. ಸುಭಾಷಿತ ಸುಧಾನಿಧಿ | | | ೧೪೨–೯ |
| ೫೧. ವಿಕ್ರಮಾಂಕದೇವಚರಿತ | | | ೧–೧೧೪ |
| ೫೨. ೨ನೆಯ ಪುಲಿಕೇಶಿ– | ಐಹೊಳೆ ಶಾಸನ | | |

| **ಶ್ಲೋಕ ಆಕರ** | **ಅ.ಶ್ಲೋ.** |
|---|---|
| ೫೩. ನೈಷಧ | ೨೦–೧೩೬ |
| ೫೪. ” ” | ೧೭–೩೩ |
| ೫೫. ಸುಭಾಷಿತ ಸುಧಾನಿಧಿ | ೫೮–೧೫ |
| ೫೬. ಭಗವದ್ಗೀತೆ | ೨–೩೭ |
| ೫೭. ” ” | ೨–೩ |
| ೫೮. ” ” | ೨–೨೭ |
| ೫೯. ಮ.ಭಾ. ಉದ್ಯೋಗಪರ್ವ | ೧೩೩–೨೧ |
| ೬೦. ” ” | ೧೩೩–೨೩ |
| ೬೧. ” ” | ೧೩೩–೩೨ |
| ೬೨. ” ” | ೧೩೩–೩೫ |
| ೬೩. ನೀತಿಶತಕ | –೨೧ |
| ೬೪. ರಸಗಂಗಾಧರ | ೨೦೬ |
| ೬೫. ಶಿಶುಪಾಲವಧ | ೧೬–೮೩ |
| ೬೬. ಮ.ಭಾ.ಉದ್ಯೋಗಪರ್ವ | ೧೬೩–೩ |
| ೬೭. ” ” | ೧೬೩–೪ |
| ೬೮. ” ” | ೪೮–೪೭ |
| ೬೯. ನೀತಿಶತಕ | –೨೮ |
| ೭೦. ” | –೭೪ |
| ೭೧. ಕಿರಾತಾರ್ಜುನೀಯ | ೧–೩೩ |
| ೭೨. ಮ.ಭಾ.ಉದ್ಯೋಗಪರ್ವ | ೯೦–೯೫ |
| ೭೩. ” ” | ೧೨೪–೩೭ |
| ೭೪. ನೀತಿಶತಕ | –೭೧ |

೭೫. ೨ನೆಯ ರಾಚಮಲ್ಲನ ಕೆರೆಗೋಡೆ ರಂಗಪುರ ದತ್ತಿಶಾಸನದಿಂದ

೭೬. ಬೃಹಸ್ಪತಿಪ್ರೋಕ್ತನೀತಿಸಾರ –೧೫ (ಗರುಡಪುರಾಣ ಪೂ.ಖಂ. ೧೦೮ ಅ.)

೭೭. ” ” –೧೭

೭೮. ” ” –೨೫

೭೯. ಶೌನಕೀಯ ನೀತಿಸಾರ –೧೮ (ಅದೇ ಪುರಾಣದ ಅದೇ ಅಧ್ಯಾಯ)

೮೦. ಬುದ್ಧಚರಿತ ೨೨ನೆಯ ಸರ್ಗ (ಸಂಸ್ಕೃತ ಕಾವ್ಯ ಪು.೨೧೪)

೮೧. ಕಲಾವಿಲಾಸ ಸರ್ಗ ೧–ವೃತ್ತ–೭೨

| ಶ್ಲೋಕ ಆಕರ | ಅ.ಶ್ಲೋ. |
|---|---|
| ೮೨. ಕಲಾವಿಲಾಸ ಸರ್ಗ | ೧–೮೭ |
| ೮೩. ” ” | ೧–೯೬ |
| ೮೪. ಬೃಹಸ್ಪತಿ ನೀ.ಸಾ. –೧೬ | (ಗ.ಪು.ಪೂ.ಖಂ. ೧೧೦ ಅಧ್ಯಾಯ) |
| ೮೫. ” ” | ೧೦೯–೬ |
| ೮೬. ಕಾಮಂದಕೀಯ ನೀ.ಸಾ. | ೨–೩೨ |
| ೮೭. ನೀತಿಶತಕ | –೧೮ |
| ೮೮. ಮೃಚ್ಛಕಟಿಕೆ | ೧೦–೨೩ |
| ೮೯. ” | ೧–೧೪ |
| ೯೦. ರಸಗಂಗಾಧರ | ಪುಟ ೨೮೪ |
| ೯೧. ಪಂಚತಂತ್ರ | ೨–೪೩ |
| ೯೨. ” | ೨–೫೪ |
| ೯೩. ” | ೪–೬ |
| ೯೪. ” | ೧–೨೦ |
| ೯೫. ಕಲಾವಿಲಾಸ | ೨–೨ |
| ೯೬. ರಾಜತರಂಗಿಣಿ | ೭–೧೪೧೪ |
| ೯೭. ಭಾಮಿನೀವಿಲಾಸ ಪ್ರ.ವಿ. | –೯೦ |
| ೯೮. ನೀತಿಶತಕ | –೧೫ |
| ೯೯. ರಾಮಾಯಣ ಅರಣ್ಯಕಾಂಡ | ೩೮–೨೬ |
| ೧೦೦. ” ” | ೬೬–೧೭ |

## ಅಧ್ಯಾಯ ೪

# ಪ್ರಕರಣ: ಮಹಾನಾಯಕರು

| ಶ್ಲೋಕ | ಆಕರ | ಅ.ಶ್ಲೋ. |
|---|---|---|
| ೧. | ರಘುವಂಶ | ೧–೧೪ |
| ೨. | ” | ೧–೧೮ |
| ೩. | ” | ೧–೨೧ |
| ೪. | ” | ೧–೨೫ |
| ೫. | ” | ೧–೨೬ |
| ೬. | ” | ೪–೧೨ |
| ೭. | ” | ೧೦–೬೮ |
| ೮. | ” | ೧೨–೪೫ |
| ೯. | ಕುಮಾರಸಂಭವ | ೩–೪೦ |
| ೧೦. | ” | ೩–೭೧ |
| ೧೧. | ” | ೨–೫೮ |
| ೧೨. | ” | ೫–೮೦ |
| ೧೩. | ” | ೫–೭೭ |
| ೧೪. | ” | ೫–೭೮ |
| ೧೫. | ಶಿಶುಪಾಲ ವಧ | ೧–೩೩ |
| ೧೬. | ” | ೧–೩೫ |
| ೧೭. | ” | ೧–೩೮ |
| ೧೮. | ” | ೧–೩೯ |
| ೧೯. | ವಿಕ್ರಮಾಂಕದೇವ ಚರಿತ | ೧೫–೨೧ |
| ೨೦. | ” | ೧೬–೨೧ |
| ೨೧. | ” | ೧೭–೨ |
| ೨೨. | ” | ೧೭–೪ |
| ೨೩. | ” | ೧೭–೫ |
| ೨೪. | ” | ೧೭–೧೧ |

| ಶ್ಲೋಕ | ಆಕರ | ಅ.ಶ್ಲೋ. |
|---|---|---|
| ೨೫. | ” | ೧೭–೩೬ |
| ೨೬. | ನೇಮಿನಿರ್ವಾಣ | ೧೪–೪೧ |
| ೨೭. | ” | ೧೪–೪೫ |
| ೨೮. | ” | ೧೪–೪೬ |
| ೨೯. | ” | ೧೪–೪೮ |
| ೩೦. | ” | ೧೫–೨ |
| ೩೧. | ” | ೧೫–೬ |
| ೩೨. | ಪಾರಿಜಾತಹರಣ | ೫–೫೯ |
| ೩೩. | ” | ೫–೬೦ |
| ೩೪. | ” | ೫–೬೪ |
| ೩೫. | ರಾಘವನೈಷಧೀಯ | ೧–೩ |
| ೩೬. | ” | ೧–೧೧೬ |
| ೩೭. | ” | ೧–೧೧೮ |
| ೩೮. | ಚಂದ್ರಪ್ರಭಚರಿತಂ | ೧೮–೧೩೩ |
| ೩೯. | ” | ೧೮–೧೩೪ |
| ೪೦. | ” | ೧೮–೧೩೫ |
| ೪೧. | ” | ೧೮–೧೩೭ |
| ೪೨. | ಧರ್ಮಶರ್ಮಾಭ್ಯುದಯ | ೨೦–೫೭ |
| ೪೩. | ” | ೨೦–೫೨ |
| ೪೪. | ” | ೨೦–೫೫ |
| ೪೫. | ” | ೨೦–೬೬ |
| ೪೬. | ” | ೨೦–೬೩ ಮತ್ತು ೬೪ |
| ೪೭. | ಶ್ರೀನಿವಾಸವಿಲಾಸ | ೩–೧೨ |
| ೪೮. | ” | ೩–೧೩ |
| ೪೯. | ಯುಧಿಷ್ಠರ ವಿಜಯ | ೬–೧೨೯ |
| ೫೦. | ” | ೬–೧೩೦ |
| ೫೧. | ಕಿರಾತಾರ್ಜುನೀಯ | ೧೧–೬೬ |
| ೫೨. | ” | ೧೧–೬೭ |
| ೫೩. | ” | ೧೧–೭೨ |
| ೫೪. | ” | ೧೧–೭೩ |
| ೫೫. | ” | ೧೮–೩೧ |

| ಶ್ಲೋಕ ಆಕರ | ಅ.ಶ್ಲೋ. |
|---|---|
| ೫೬. ಶಾರ್ಙ್ಗಧರ ಪದ್ಧತಿ | ೧೨೪೯ |
| ೫೭. ಭೋಜಪ್ರಬಂಧ | ೨೦೨ |
| ೫೮. ಭರ್ತೃಹರಿ ಸುಭಾಷಿತ ಸಂಗ್ರಹ | ೬೪೬ |
| ೫೯. ಸುಭಾಷಿತಾವಲಿ | ೭೪ |
| ೬೦. ಶಾರ್ಙ್ಗಧರ ಪದ್ಧತಿ | ೧೨೫೪ |
| ೬೧. ಸುಭಾಷಿತ ಸುಧಾನಿಧಿ | ೪೪–೫೮ |
| ೬೨. ” | ೧–೨ |
| ೬೩. ನೀಲಕಂಠ ವಿಜಯ | ೪–೨೪ |
| ೬೪. ” | ೪–೩೯ |
| ೬೫. ಚಂಪೂ ಭಾರತ | ೩–೧೨೨ |
| ೬೬. ” | ೧೨–೩೨ |
| ೬೭. ರಾಮಾಯಣ | ೬–೧೩೧–೯೫ |
| ೬೮. ” | –೯೬ |
| ೬೯. ” | –೯೭ |
| ೭೦. ” | –೯೮ |
| ೭೧. ” | –೯೯ |
| ೭೨. ” | –೧೦೦ |
| ೭೩. ” | –೧೦೧ |
| ೭೪. ” | –೧೦೨ |
| ೭೫. ” | –೧೦೩ |
| ೭೬. ” | –೧೦೪ |
| ೭೭. ” | –೧೦೫ |
| ೭೮. ಭಾಗವತ | ೧೨–೧೧–೨೧ |
| ೭೯. ” | ೧೨–೧೧ |
| ೮೦. ” | –೨೩ |
| ೮೧. ” | –೨೪ |
| ೮೨. ಬುದ್ಧಚರಿತ | ೨–೨೮–೭೦ |
| ೮೩. ” | ೨–೨೭–೨೨ |
| ೮೪. ” | –೨೫ |
| ೮೫. ” | –೩೬ |
| ೮೬. ” | –೩೭ |

| ಶ್ಲೋಕ | ಆಕರ | | ಅ.ಶ್ಲೋ. |
|---|---|---|---|
| ೮೭. | ಮಹಾಭಾರತ (ಆದಿಪರ್ವ) | | ೧೨೦–೨೫ |
| ೮೮. | ” | ” | ೧೨೦–೨೬ |
| ೮೯. | ” | ” | ೧೨೦–೨೭ |
| ೯೦. | ” | ” | ೧೨೦–೨೮ |
| ೯೧. | ” | (ವನಪರ್ವ) | ೫೩– ೧ |
| ೯೨. | ” | ” | ೫೩– ೨ |
| ೯೩ | ” | ” | ೫೩– ೩ |
| ೯೪. | ” | ” | ೫೩–೪ |
| ೯೫. | ರಾಮಾಯಣ(ಬಾಲಕಾಂಡ) | | ೬– ೧ |
| ೯೬. | ” | ” | ೬– ೨ |
| ೯೭. | ” | ” | ೬– ೩ |
| ೯೮. | ” | ” | ೬– ೪ |
| ೯೯. | ” | ” | ೬– ೫ |
| ೧೦೦. | ” | ” | ೬– ೬ |

## ಅಧ್ಯಾಯ ೫

# ಪ್ರಕರಣ: ಪ್ರಕೃತಿ ಸೌಂದರ್ಯ ವರ್ಣನೆ

| ಶ್ಲೋಕ ಆಕರ | | ಅ.ಶ್ಲೋ. |
|---|---|---|
| ೧. | ಶಾಕುಂತಲ | ೧–೭ |
| ೨. | ” | ೧–೯ |
| ೩. | ” | ೧–೧೪ |
| ೪. | ” | ೪–೨ |
| ೫. | ” | ೪–೪ |
| ೬. | ” | ೭–೮ |
| ೭. | ವಿಕ್ರಮೋರ್ವಶೀಯ | ೧–೪ |
| ೮. | ” | ೨–೭ |
| ೯. | ” | ೨–೨೩ |
| ೧೦. | ” | ೩–೨ |
| ೧೧. | ಮಾಲವಿಕಾಗ್ನಿಮಿತ್ರ | ೨–೧೨ |
| ೧೨. | ” | ೩–೪ |
| ೧೩. | ” | ೩–೫ |
| ೧೪. | ನಾಗಾನಂದ | ೧–೧೧ |
| ೧೫. | ” | ೧–೧೨ |
| ೧೬. | ” | ೧–೨೧ |
| ೧೭. | ” | ೩–೭ |
| ೧೮. | ” | ೩–೮ |
| ೧೯. | ” | ೩–೧೮ |
| ೨೦. | ” | ೪–೩ |
| ೨೧. | ” | ೪–೪ |
| ೨೨. | ಚಾರುದತ್ತ | ೧–೨೯ |
| ೨೩. | ಪ್ರತಿಮಾನಾಟಕ | ೩–೨ |
| ೨೪. | ” | ೫–೨ |

| **ಶ್ಲೋಕ** | **ಆಕರ** | **ಅ.ಶ್ಲೋ.** |
|---|---|---|
| ೨೫. | ಅಭಿಷೇಕನಾಟಕ | ೨–೫ |
| ೨೬. | ಅಭಿಷೇಕನಾಟಕ | ೪–೩ |
| ೨೭. | ” | ೪–೧೭ |
| ೨೮. | ” | ೪–೨೩ |
| ೨೯. | ಸ್ವಪ್ನವಾಸವದತ್ತ | ೧–೧೨ |
| ೩೦. | ” | ೧–೧೬ |
| ೩೧. | ” | ೪–೨ |
| ೩೨. | ಅವಿಮಾರಕ | ೨–೧೨ |
| ೩೩. | ” | ೨–೧೩ |
| ೩೪. | ” | ೩–೩ |
| ೩೫. | ” | ೩–೪ |
| ೩೬. | ” | ೪–೪ |
| ೩೭. | ” | ೪–೫ |
| ೩೮. | ” | ೪–೧೧ |
| ೩೯. | ” | ೫–೬ |
| ೪೦. | ” | ೫–೭ |
| ೪೧. | ಚಾರುದತ್ತ | ೧–೧೯ |
| ೪೨. | ” | ೧–೨೧ |
| ೪೩. | ಬಾಲಚರಿತ | ೧–೧೬ |
| ೪೪. | ಕಾವ್ಯಪ್ರಕಾಶ | ೧೭೯ |
| ೪೫. | ವೇಣೀಸಂಹಾರ | ೨–೭ |
| ೪೬. | ” | ೨–೮ |
| ೪೭. | ” | ೨–೧೯ |
| ೪೮. | ರತ್ನಾವಲಿ | ೪–೧೪ |
| ೪೯. | ಪ್ರಿಯದರ್ಶಿಕೆ | ೧–೧೨ |
| ೫೦. | ” | ೨–೨ |
| ೫೧. | ಮೃಚ್ಛಕಟಿಕ | ೧–೫೭ |
| ೫೨. | ” | ೩–೬ |
| ೫೩. | ” | ೫–೨ |
| ೫೪. | ” | ೫–೩ |
| ೫೫. | ” | ೫–೫ |

| ಶ್ಲೋಕ | ಆಕರ | ಅ.ಶ್ಲೋ. |
|---|---|---|
| ೫೬. | ಮೃಚ್ಛಕಟಿಕ | ೫–೬ |
| ೫೭. | ” | ೫–೧೩ |
| ೫೮. | ” | ೫–೧೪ |
| ೫೯. | ” | ೫–೧೭ |
| ೬೦. | ” | ೫–೨೩ |
| ೬೧. | ” | ೫–೨೭ |
| ೬೨. | ” | ೫–೫೨ |
| ೬೩. | ” | ೭–೧ |
| ೬೪. | ರತ್ನಾವಲಿ | ೧–೧೧ |
| ೬೫. | ” | ೧–೧೭ |
| ೬೬. | ” | ೩–೫ |
| ೬೭. | ” | ೩–೬ |
| ೬೮. | ” | ೭–೩ |
| ೬೯. | ಋತುಸಂಹಾರ | ೧–೧ |
| ೭೦. | ” | ೨–೧ |
| ೭೧. | ” | ೩–೧ |
| ೭೨. | ” | ೪–೧ |
| ೭೩. | ” | ೫–೧ |
| ೭೪. | ” | ೬–೧ |
| ೭೫. | ಮೃಚ್ಛಕಟಿಕ | ೫–೨೬ |
| ೭೬. | ಶಾರ್ಙ್ಗಧರಪದ್ಧತಿ | ೩೮೬೨ |
| ೭೭. | ಬಾಲರಾಮಾಯಣ | ೫–೩೫ |
| ೭೮. | ಸುಭಾಷಿತಾವಲಿ | ೧೮೫೪ |
| ೭೯. | ಕಾವ್ಯಾಲಂಕಾರ | ೮–೨೮ |
| ೮೦. | ಶಾರ್ಙ್ಗಧರ ಪದ್ಧತಿ | ೩೮೨೭ |
| ೮೧. | ” | ೩೮೫೩ |
| ೮೨. | ಮಹಾಭಾರತ (ಕೈಲಾಸಪರ್ವ) | ೩೮–೧೯ |
| ೮೩. | ” | ೩೮–೨೦ |
| ೮೪. | ” | ೩೮–೨೧ |
| ೮೫. | ” (ಆಸ್ತಿಕಪರ್ವ) | ೧೭–೫ |
| ೮೬. | ” ” | ೧೭–೬ |

| ಶ್ಲೋಕ | ಆಕರ | | ಅ.ಶ್ಲೋ. |
|---|---|---|---|
| ೮೭. | ಮಹಾಭಾರತ | (ಆಸ್ತಿಕಪರ್ವ) | ೧೭–೭ |
| ೮೮. | ” | ” | ೧೭–೮ |
| ೮೯. | ” | ” | ೧೮–೧ |
| ೯೦. | ” | ” | ೧೮–೨ |
| ೯೧. | ” | ” | ೧೮–೩ |
| ೯೨. | ರಾಮಾಯಣ | (ಅಯೋಧ್ಯಾಕಾಂಡ) | ೫೬–೬ |
| ೯೩. | ” | ” | ೫೬–೭ |
| ೯೪. | ” | ” | ೫೬–೮ |
| ೯೫. | ” | ” | ೫೬–೯ |
| ೯೬. | ” | ” | ೫೬–೧೦ |
| ೯೭. | ” | ” | ೫೬–೧೧ |
| ೯೮. | ” | ” | ೫೬–೧೩ |
| ೯೯. | ” | ” | ೫೬–೧೪ |
| ೧೦೦. | ” | ” | ೫೬–೧೫ |

## ಅಧ್ಯಾಯ ೬

# ಪ್ರಕರಣ: ಹಾಸ್ಯ ಮತ್ತು ಚತುರೋಕ್ತಿಗಳು

| ಶ್ಲೋಕ | ಆಕರ | ಅ.ಶ್ಲೋ. |
|---|---|---|
| ೧. | ನಾಗಾನಂದ | ೩–೧೩ |
| ೨. | ಪ್ರತಿಮಾನಾಟಕ | ೧–೬ |
| ೩. | ಅಭಿಷೇಕನಾಟಕ | ೨–೫ |
| ೪. | ಸ್ವಪ್ನವಾಸವದತ್ತ | ೨–೭ |
| ೫. | ಧರ್ಮವಿವೇಕ | ೧೨ |
| ೬. | ಸುಭಾಷಿತಾವಲಿ | ೨೩೦೮ |
| ೭. | ಶಾರ್ಙ್ಗಧರಪದ್ಧತಿ | ೬೪ |
| ೮. | ” | ೪೦೩೫ |
| ೯. | ” | ೪೦೩೬ |
| ೧೦. | ಸುಭಾಷಿತಾವಲಿ | ೨೩೪೪ |
| ೧೧. | ನೀತಿತರಂಗ | ೧೪ |
| ೧೨. | ಪಂಚತಂತ್ರ | ೧–೧೭೫ |
| ೧೩. | ಭರ್ತೃಹರಿಸುಭಾಷಿತ ಸಂಗ್ರಹ | ೭೧೯ |
| ೧೪. | ಶಾರ್ಙ್ಗಧರಪದ್ಧತಿ | ೮೮೨ |
| ೧೫. | ” | ೮೯೦ |
| ೧೬. | ” | ೮೯೨ |
| ೧೭. | ” | ೧೨೧೧ |
| ೧೮. | ನೀತಿ(ರತ್ನ)ಪ್ರದೀಪ | ೯ |
| ೧೯. | ಶಾರ್ಙ್ಗಧರಪದ್ಧತಿ | ೧೨೧೨ |
| ೨೦. | ಸುಭಾಷಿತಾವಲಿ | ೫೮೮ |
| ೨೧. | ಭಾಮಿನೀವಿಲಾಸ | ೧೪ |
| ೨೨. | ಶಾರ್ಙ್ಗಧರಪದ್ಧತಿ | ೧೦೪೬ |
| ೨೩. | ” | ೧೦೪೦ |

| ಶ್ಲೋಕ | ಆಕರ | ಅ.ಶ್ಲೋ. |
|---|---|---|
| ೨೪. | ಕುವಲಯಾನಂದ | ೧೬೨ |
| ೨೫. | ” | ೧೬೨ |
| ೨೬. | ಸಾಹಿತ್ಯದರ್ಪಣ | ೧೦–೭೦ |
| ೨೭. | ನೀತಿತರಂಗ | ೧೩ |
| ೨೮. | ಸುಭಾಷಿತಾವಲಿ | ೨೩೧೯ |
| ೨೯. | ಸೂಕ್ತಿಮುಕ್ತಾವಲಿ | ೮೯–೩೫ |
| ೩೦. | ಪಂಚತಂತ್ರ | ೧–೧೮೮ |
| ೩೧. | ರಸಗಂಗಾಧರ | |
| ೩೨. | ಕವಿತಾಮೃತಕೂಪ | ೨೯ |
| ೩೩. | ಸುಭಾಷಿತಾವಲಿ | ೪೯೪ |
| ೩೪. | ಭಲ್ಲಟಶತಕ | ೩ |
| ೩೫. | ಭರ್ತೃಹರಿ ಸುಭಾಷಿತ ಸಂಗ್ರಹ | ೬೭೪ |
| ೩೬. | ಶಾರ್ಙ್ಗಧರಪದ್ಧತಿ | ೬೦ |
| ೩೭. | ಮೃಚ್ಛಕಟಿಕ | ೧–೩೨ |
| ೩೮. | ಕುವಲಯಾನಂದ | ೩೮ |
| ೩೯. | ಶಾಕುಂತಲ | ೩–೩ |
| ೪೦. | ವಿಕ್ರಮೋರ್ವಶೀಯ | ೪–೩೩ |
| ೪೧. | ಸುಭಾಷಿತಾವಲಿ | ೬೯೩ |
| ೪೨. | ಸೂಕ್ತಿಮುಕ್ತಾವಲಿ | ೩೪–೬ |
| ೪೩. | ನೀತಿ(ರತ್ನ)ಪ್ರದೀಪ | ೧೨ |
| ೪೪. | ಭರ್ತೃಹರಿ ನೀತಿಶತಕ | ೧–೪ |
| ೪೫. | ಶಿಶುಪಾಲವಧ | ೧೬–೪೩ |
| ೪೬. | ಗರುಡಪುರಾಣ (ಪೂರ್ವ) | ೧೦೮ |
| ೪೭. | ಚಾಣಕ್ಯನೀತಿಸಾರ | ೫೮ |
| ೪೮. | ವಿಕ್ರಮಚರಿತ | ೪೧ |
| ೪೯. | ಭರ್ತೃಹರಿಶತಕತ್ರಯ | ೨–೧೦೫ |
| ೫೦. | ವಾನರ್ಯಷ್ಟಕ | ೫ |
| ೫೧. | ಭರ್ತೃಹರಿ ಸುಭಾಷಿತ ಸಂಗ್ರಹ | ೬೧೨ |
| ೫೨. | ಭಲ್ಲಟಶತಕ | ೬೯ |
| ೫೩. | ಮಹಾಭಾರತ | ೧–೩೦೬೯ |
| ೫೪. | ಮೃಚ್ಛಕಟಿಕ | ೮–೬ |

| **ಶ್ಲೋಕ** | **ಆಕರ** | **ಅ.ಶ್ಲೋ.** |
|---|---|---|
| ೫೫. | ಪ್ರಸಂಗಾಭರಣ | ೧೬ |
| ೫೬. | ಗರುಡಪುರಾಣ (ಪೂರ್ವ) | ೧೧೫ |
| ೫೭. | ಭರ್ತೃಹರಿ ಸುಭಾಷಿತ ಸಂಗ್ರಹ | ೫೫೫ |
| ೫೮. | ಹಿತೋಪದೇಶ | ೧–೧೫೪ |
| ೫೯. | ಮಹಾಭಾರತ | ೧೨–೫೨೨೬ |
| ೬೦. | ರಾಜತರಂಗಿಣಿ | ೫–೩೦೪ |
| ೬೧. | ” | ೬–೩೦೯ |
| ೬೨. | ಚಾಣಕ್ಯನೀತಿಸಾರ | ೩–೩೩ |
| ೬೩. | ಸುಭಾಷಿತಾವಲಿ | ೧೩೦ |
| ೬೪. | ಶಾರ್ಙ್ಗಧರಪದ್ಧತಿ | ೯೫ |
| ೬೫. | ಭರ್ತೃಹರಿಸುಭಾಷಿತ ಸಂಗ್ರಹ | ೭೯೬ |
| ೬೬. | ಸುಭಾಷಿತಸುಧಾನಿಧಿ | ೨೯–೧ |
| ೬೭. | ” | ೨೯–೨ |
| ೬೮. | ” | ೪೪–೩ |
| ೬೯. | ” | ೪೪–೭ |
| ೭೦. | ” | ೧೩೫–೩ |
| ೭೧. | ” | ೧೩೪–೨ |
| ೭೨. | ” | ೧೩೭–೨ |
| ೭೩. | ವೃದ್ಧಚಾಣಕ್ಯ ಶತಕ ೭–೧೯ | |
| ೭೪. | ಕ್ಷೇಮೇಂದ್ರ ಲಘುಕಾವ್ಯ ಸಂಗ್ರಹ | ೨೮೭–೩ |
| ೭೫. | ” | ೨೯೩–೩೨ |
| ೭೬. | ” | ೩೦೩–೩೪ |
| ೭೭. | ” | ೩೦೫–೪೪ |
| ೭೮. | ಪಂಡಿತರಾಜಕಾವ್ಯಸಂಗ್ರಹ | ೧೩೩–೯೪ |
| ೭೯. | ” | ೧೩೩–೯೫ |
| ೮೦. | ” | ೧೩೩–೮೬ |
| ೮೧. | ” | ೧೩೪–೯೭ |
| ೮೨. | ” | ೧೩೮–೧೪೦ |
| ೮೩. | ” | ೧೪೧–೧೬೨ |
| ೮೪. | ” | ೧೪೨–೧೭೬ |
| ೮೫. | ” | ೧೪೫–೨೦೨ |

| ಶ್ಲೋಕ | ಆಕರ | ಅ.ಶ್ಲೋ. |
|---|---|---|
| ೮೬. | ಪಂಡಿತರಾಜಕಾವ್ಯಸಂಗ್ರಹ | ೧೪೬–೨೦೮ |
| ೮೭. | ” | ೧೪೮–೨೨೭ |
| ೮೮. | ” | ೧೫೩–೨೭೩ |
| ೮೯. | ” | ೧೫೮–೩೦೫ |
| ೯೦. | ” | ೧೬೦–೩೨೪ |
| ೯೧. | ಕ್ಷೇಮೇಂದ್ರ ಲಘುಕಾವ್ಯ ಸಂಗ್ರಹ | ೨೧೧–೩೭ |
| ೯೨. | ” | ಪು ೨೨೩–೪೩ |
| ೯೩. | ” | ೨೨೭–೮೭ |
| ೯೪. | ” | ೪೨೨–೭ |
| ೯೫. | ಶಾರ್ಙ್ಗಧರ ಪದ್ಧತಿ | ಪು–೪ |
| ೯೬. | ಹಿತೋಪದೇಶ | ೧–೧೧೨ |
| ೯೭. | ಪದ್ಯಸಂಗ್ರಹ | ೧೦ |
| ೯೮. | ಭೋಜಪ್ರಬಂಧ | ೧೩೮–೧೯೨ |
| ೯೯. | ” | ೧೫೬–೩೧೭ |
| ೧೦೦. | ” | ೧೫೬–೩೧೮ |

# ಶ್ಲೋಕಾನುಕ್ರಮಣಿಕೆ

## ಅ

## ಆ

## ಋ



## ೠ



## ಏ



## ಓ



## ಕ

## ಖ



## ಗ



## ಘ

## ಚ



## ಜ



## ತ

## ದ

## ಧ

## ನ

## ಪ

## ಬ

## ಭ



## ಮ

## ಯ

## ರ

## ಲ



## ವ

## ಸ

## ಹ



## ಕ್ಷ



## ಜ್ಞ



–––––––

# ಮನುಸ್ಮೃತಿಯ ಸಪ್ತಮಾಧ್ಯಾಯ
# ರಾಜಧರ್ಮ
## ಪ್ರಸ್ತಾವನೆ

ಕಲ್ಪವು ಆರು ವೇದಾಂಗಗಳಲ್ಲಿ ಒಂದು. ಅದರಲ್ಲಿ ಯಜ್ಞ ವಿಚಾರ ಮತ್ತು ವಿಧಾನಗಳಿಗೆ ಹೆಚ್ಚಿನ ಸ್ಥಾನವಿರುತ್ತದೆ. ಕಲ್ಪಸೂತ್ರಗಳಲ್ಲಿ ಮೂರು ವಿಭಾಗಗಳಿವೆ: ಶ್ರೌತಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ– ಎಂದು. ಗೃಹ್ಯಸೂತ್ರಗಳಲ್ಲಿ ಹೇಳಿದ ಕೆಲ ವಿಷಯಗಳೊಡನೆ ಧರ್ಮಸೂತ್ರಗಳು ಅರ್ಥಶಾಸ್ತ್ರೀಯ, ರಾಜಧಾರ್ಮಿಕ, ಸರಕಾರಿ ಮತ್ತು ಅಪರಾಧಿಕ–ಅನಾಪರಾಧಿಕ ಕಾಯಿದೆಗಳ ಅಂಶಗಳ ಬಗೆಗೆ ತಿಳುವಳಿಕೆ ನೀಡುತ್ತವೆ.

ಧರ್ಮಸೂತ್ರಗಳ ಆದಿಕಾಲ ಕ್ರಿ.ಪೂ.೬೦೦ ರಿಂದ ೩೦೦. ಗೃಹ್ಯಸೂತ್ರಗಳ ಹಾಗೂ ಧರ್ಮಸೂತ್ರಗಳ ಕಾಲ ಹೆಚ್ಚು ಕಡಿಮೆ ಒಂದೇ ಎನ್ನಬಹುದು. ಮಾನವ ಗೃಹ್ಯಸೂತ್ರವೆಂಬುದು ಅವುಗಳಲ್ಲಿ ಒಂದು. ಅದರ ಕರ್ತೃ ಮಾನವಾಚಾರ್ಯ. ಅದಕ್ಕೆ 'ಪುರುಷ'ಗಳೆಂಬ ಎರಡು ಭಾಗಗಳಿವೆ. ಅದರ ಭಾಷ್ಯಕಾರ ಅಷ್ಟಾವಕ್ರ. 'ಮಾನವ ಧರ್ಮಸೂತ್ರ' ಎಂಬ ಹೆಸರಿನ ಯಾವ ಗ್ರಂಥವೂ ಈವರೆಗೆ ಸಿಕ್ಕಿಲ್ಲ. 'ಮಾನವ ಶ್ರೌತಸೂತ್ರ' ಎಂಬುದು ಉಪಲಬ್ಧ. ಗೃಹ್ಯಸೂತ್ರಗಳು ಗೃಹ್ಯಕರ್ಮಗಳನ್ನಲ್ಲದೆ ಸಾಮಾನ್ಯ ನೀತಿಗಳನ್ನು ಹೇಳುವುದಿಲ್ಲ. ಧರ್ಮಸೂತ್ರಗಳು ಗದ್ಯಮಯ ಅಥವಾ ಗದ್ಯಪದ್ಯ ಸಂಮಿಶ್ರವಾಗಿರುತ್ತವೆ; ಸ್ಮೃತಿಗಳಾದರೋ ಹೆಚ್ಚಾಗಿ ಪದ್ಯಮಯವಾಗಿರುತ್ತವೆ. ಮೊದಲನೆಯವುಗಳ ಭಾಷೆ ಸ್ವಲ್ಪ ಹಳೆಯದು, ಎರಡನೆಯವುಗಳ ಭಾಷೆ ಸ್ವಲ್ಪ ಹೊಸದು; ಹಾಗೇ ಅವುಗಳ ವಿಷಯಮಂಡನ ಅಕ್ರಮವಾದರೆ, ಇವುಗಳದ್ದು ಆಚಾರ, ವ್ಯವಹಾರ ಮತ್ತು ಪ್ರಾಯಶ್ಚಿತ್ತಗಳೆಂಬ ಕ್ರಮಬದ್ಧ ವಿಭಾಗಗಳಿಂದ ಕೂಡಿರುತ್ತದೆ. ಸ್ಮೃತಿಗಳಲ್ಲೆಲ್ಲ ಮನುಸ್ಮೃತಿಯೇ ಅತ್ಯಂತ ಹಳೆಯದು.

ಕೆಲ ಧರ್ಮಸೂತ್ರಗಳ ಅನುಕ್ರಮ ಇಂತಿದೆ: ಗೌತಮ, ಬೌಧಾಯನ, ಆಪಸ್ತಂಭ, ಹಿರಣ್ಯಕೇಶಿ, ವಸಿಷ್ಠ, ವಿಷ್ಣು, ಹಾರೀತ, ಶಂಖ, ಲಿಖಿತ ಎಂಬುವರು ಬರೆದ ಧರ್ಮಸೂತ್ರಗಳು. ಹಲವಾರು ಧರ್ಮಸೂತ್ರಕಾರರ ಹೆಸರುಗಳೂ ಕೆಲ ಅವತರಣಿಕೆಗಳೂ ಸಿಕ್ಕಿವೆಯಲ್ಲದೆ ಪೂರ್ಣ ಗ್ರಂಥಗಳು ಸಿಕ್ಕಿಲ್ಲ.

ಪಾಣಿನಿಯ ವ್ಯಾಕರಣ ; ಶ್ರೌತ ಗೃಹ್ಯ ಮತ್ತು ಧರ್ಮಸೂತ್ರಗಳು; ಮಹಾಭಾರತ; ಮನು, ಯಾಜ್ಞವಲ್ಕ್ಯ ಹಾಗೂ ಇತರ ಗ್ರಂಥಗಳು ಸ್ಮೃತಿಗಳೆಂದು ಪ್ರಸಿದ್ಧವಾಗಿವೆ. ಆದರೆ ವೇದಾನುಮತವಾದ ವರ್ಣ, ಜಾತಿ, ಆಶ್ರಮ ಮುಂತಾದವುಗಳನ್ನು ಹೇಳುವುದು ಸ್ಮೃತಿಯ ಕೆಲಸ ಎಂಬುದು ಮನುಮತ.

ಸುಮಾರು ೨೬೦ ಶ್ಲೋಕಗಳು ಮೂಲ ಮನುಸ್ಮೃತಿಗೂ ಅನಂತರದ ಮಹಾಭಾರತಕ್ಕೂ ಸಾಧಾರಣ. 'ಧರ್ಮಸೂತ್ರಕ್ಕಿಂತ' 'ಧರ್ಮಶಾಸ್ತ್ರ'ದ ಅರ್ಥವ್ಯಾಪ್ತಿ ಹೆಚ್ಚಿನದು. ಬಹಳ ಪ್ರಾಚೀನ ಕಾಲದ ಶಾಸನಗಳು ಮನುಸ್ಮೃತಿಯನ್ನು ಉಲ್ಲೇಖಿಸಿವೆ. ಅದೊಂದು ಧರ್ಮಶಾಸ್ತ್ರ. ಕ್ರಿ.ಶ. ೫೨೫ರ ಧ್ರುವಸೇನಶಾಸನ, ೫೭೪ರ ಸಿಂಹದೇವಶಾಸನ, ೫೭೧ರ ೨ನೆಯ ಧರಸೇನನ ಶಾಸನ ಮತ್ತು ೬೩೨ರ ೧ನೆಯ ಚಾಲುಕ್ಯ ಜಯಸೇನನ ಶಾಸನ ಮುಂತಾದವು ಅವುಗಳಲ್ಲಿ ಕೆಲವು.

ಸ್ಮೃತಿಕಾರರಲ್ಲಿ ಮನು, ಯಾಜ್ಞವಲ್ಕ್ಯ, ಕಾತ್ಯಾಯನ, ಅಂಗಿರಸ್, ಮಾರ್ಕಂಡೇಯರು ಗಣ್ಯರು – ಎಂಬುದು ಕ್ರಿ.ಶ. ೧೧೧೯ರ ಚಾಹಮಾನ ರತ್ನಪಾಲನ ಶಾಸನದಿಂದ ತಿಳಿದು ಬರುತ್ತದೆ. ರಘುವಂಶ–ಮೃಚ್ಛಕಟಿಕೆಗಳು ಮನುಧರ್ಮವನ್ನು ಉಲ್ಲೇಖಿಸಿವೆ. ಗೌತಮ ಧರ್ಮಸೂತ್ರವು ಮನುವನ್ನು ಸ್ಮೃತಿಕಾರನೆಂದು ಹೆಸರಿಸಿದೆ. ಉತಥ್ಯತನಯ, ಅತ್ರಿ, ಭೃಗು, ವಸಿಷ್ಠ, ವಿಖಾನಸ್ ಮತ್ತು ಶೌನಕರು ಮನೂಕ್ತ ಸ್ಮೃತಿಕಾರರು. ಇತರ ಆಕರಗಳಿಂದ ೧೦೦ ಸ್ಮೃತಿಗಳಿದ್ದವೆಂದು ತಿಳಿದು ಬರುತ್ತದೆ. ಅವು ಗದ್ಯ, ಪದ್ಯ, ಮಿಶ್ರ ಪದ್ಧತಿಗಳನ್ನು ಹಿಡಿದಂಥವು; ಪದ್ಯಮಯವಾದಂಥವು ಅಧಿಕ. ಗೌತಮ, ಆಪಸ್ತಂಬ, ಬೌಧಾಯನ ಮತ್ತು ಮನುಸ್ಮೃತಿಗಳು (ಕ್ರಿ.ಪೂ.) ಪ್ರಾಚೀನತಮ. ಯಾಜ್ಞವಲ್ಕ್ಯ, ಪರಾಶರ, ನಾರದ ಸ್ಮೃತಿಗಳು ಕ್ರಿ.ಪೂ.೧ನೆಯ ಶತಮಾನದವು. ಮಿಕ್ಕವು ಕ್ರಿ.ಶ. ೪೦೦ರಿಂದ ೧೦೦೦ದ ನಡುವಿನವು. ಧರ್ಮಸೂತ್ರಗಳನ್ನು ಬಿಟ್ಟರೆ, ಕೇವಲ ೧೨ ಸ್ಮೃತಿ ಗ್ರಂಥಗಳಿಗೂ ವ್ಯಾಖ್ಯಾನಗಳಿದ್ದಂತಿಲ್ಲ. ವ್ಯಾಖ್ಯಾನಗಳ ದೃಷ್ಟಿಯಿಂದ ಮನು–ಯಾಜ್ಞವಲ್ಕ್ಯ ಸ್ಮೃತಿಗಳು ಅತಿಗಣ್ಯ.

ಮನುವು ಮುನಿಯೆಂಬುದನ್ನು ಋಗ್ವೇದ ಸೂಕ್ತಗಳಿಂದ ತಿಳಿಯಬಹುದು. ಅವನ ಹೆಸರಿನಲ್ಲಿ ಯಾರೋ ಮನುಸ್ಮೃತಿಯನ್ನು ರಚಿಸಿದರು. ಮಾನವ ಗೃಹ್ಯಸೂತ್ರಕ್ಕೂ ಮನುಸ್ಮೃತಿಗೂ ಗಣ್ಯವಾದ ಭಿನ್ನಾಭಿಪ್ರಾಯಗಳಿವೆ. ಸದ್ಯದ ಮನುಸ್ಮೃತಿಕಾರನು ಮನುವಿನ ಹೆಸರಿನಲ್ಲಿದ್ದ ಧರ್ಮಶಾಸ್ತ್ರ ಮತ್ತು ಅರ್ಥಶಾಸ್ತ್ರ ಗ್ರಂಥಗಳನ್ನು ಕೌಟಿಲ್ಯನ ಅರ್ಥಶಾಸ್ತ್ರ ರಚಿತವಾಗುವುದಕ್ಕೆ ಸ್ವಲ್ಪ ಮುಂಚೆ ಒಂದುಗೂಡಿಸಿ ತನ್ನ ಮನುಸ್ಮೃತಿಯನ್ನು ರಚಿಸಿರಬೇಕೆಂಬುದು (ಮಾನವೀಯವೆಂದು ಕೌಟಿಲ್ಯನ ಅರ್ಥಶಾಸ್ತ್ರ ಹೇಳಿರುವ ಅಂಶಗಳು ಶಬ್ದಶಃ ಮನುಸ್ಮೃತಿಯ ಕರ್ತೃತ್ವವನ್ನು ಸ್ವಾಯಂಭುವ ಮತ್ತು ಪ್ರಾಚೇತ ಸೇತರ ಆರು ಮನುಗಳಿಗೆ ಅನ್ವಯಿಸಿ ಇದರಲ್ಲೇ ಹೇಳಿದೆ. ಇದರ ಅಧ್ಯಾಯಗಳು

೧೨ ಮತ್ತು ಶ್ಲೋಕಗಳು ೨೬೮೪. ವ್ಯಾಸನ ಸಮಕಾಲೀನನಾಗಿರಬಹುದಾದ ಭೃಗುವು ಮೂಲ ಮನುಸ್ಮೃತಿಯನ್ನು ಈ ರೂಪಕ್ಕೆ ತಿರುಗಿಸಿರಬಹುದಾಗಿ ತೋರುತ್ತದೆ. ವ್ಯಾಸನ ಕಾಲ ಸುಮಾರು ಕ್ರಿ.ಪೂ. ೪೦೦–೨೦೦.

ಧರ್ಮಶಾಸ್ತ್ರಗಳಲ್ಲಿ ಬರುವ ವಿಷಯಗಳ ಮೂಲವು ಅತ್ಯಂತ ಪ್ರಾಚೀನವಾದ ವೈದಿಕ ಪರಂಪರೆಯಲ್ಲಿದೆ. ಆದರೆ ವೇದಗಳು ಕೇವಲ ಧರ್ಮಶಾಸ್ತ್ರೀಯ ವಿಷಯಗಳಿಗೆ ಪರಿಸೀಮಿತವಾದ ಗ್ರಂಥಗಳಲ್ಲ; ಸ್ವರೂಪತಃ ಅವು ಭಿನ್ನ; ಅವುಗಳಲ್ಲಿ ಅನುಸ್ಯೂತವಾಗಿ ಧರ್ಮಶಾಸ್ತ್ರೀಯ ವಿಚಾರಗಳು ಉಲ್ಲೇಖಿಸಲ್ಪಟ್ಟಿಲ್ಲ. ಸ್ಮೃತಿಗಳೇ ಔಪಚಾರಿಕವಾಗಿ ಮತ್ತು ಸುಸಂಬದ್ಧವಾಗಿ ಧರ್ಮಕರ್ಮಗಳ ವ್ಯವಸ್ಥೆಯನ್ನು ವಿವರಿಸಿದ ಆದ್ಯ ಗ್ರಂಥಗಳು.

ಮಂತ್ರ, ಬ್ರಾಹ್ಮಣ, ಅರಣ್ಯಕ ಮತ್ತು ಉಪನಿಷತ್ತುಗಳು 'ಶ್ರುತಿ'ಗಳೆನ್ನಿಸಿಕೊಳ್ಳುತ್ತವೆ. ಅವುಗಳ ಅಭ್ಯಾಸಕ್ಕೆ ಪೂರಕವಾದಂಥವು ಸೂತ್ರಗ್ರಂಥಗಳು. ಧರ್ಮಸೂತ್ರ ಗ್ರಂಥಗಳು ಅವುಗಳಲ್ಲಿ ಒಂದು ವರ್ಗ. ಸ್ಮೃತಿಗಳು ಅವುಗಳನ್ನೊಳಗೊಳ್ಳುವ ಧರ್ಮಶಾಸ್ತ್ರ ಗ್ರಂಥಗಳು.

ಪೂರ್ವ ಮೀಮಾಂಸಕರು ಚೋದನಾ ಲಕ್ಷಣವುಳ್ಳ ಅರ್ಥವೇ ಧರ್ಮವೆನ್ನುತ್ತಾರೆ. ಧರ್ಮಾಧರ್ಮಗಳೆಂದರೆ "ಅದೃಷ್ಟ" ಎಂಬುದು ನೈಯಾಯಿಕರ ಮತ. ಔಪನಿಷದಿಕರಿಗೆ ಯೋಗದಿಂದ ಆತ್ಮಸಾಕ್ಷಾತ್ಕಾರ ಮಾಡಿಸಿಕೊಡುವಂತಹದು ಧರ್ಮ. ಸಂಪ್ರದಾಯಸ್ಥರಿಗೆ ಆಚಾರವೇ ಪರಮ ಧರ್ಮ. ಕೆಲವರಿಗೆ ಇಷ್ಟವನ್ನು ಪಡೆಯಲು ಮತ್ತು ಅನಿಷ್ಟವನ್ನು ತೊಡೆಯಲು ಸಾಧನವಾಗುವ ಅಲೌಕಿಕ ಪದಾರ್ಥವು ಧರ್ಮ. ತಮ್ಮ ಇರವಿಗೆ ಅನಿವಾರ್ಯವಾದ ಅರಿವೇ ಧರ್ಮ – ಉಳಿದವರಿಗೆ.

ವೇದ, ಸ್ಮೃತಿ, ಸದಾಚಾರ, ಶುದ್ಧಬುದ್ಧಿಗೆ ಪ್ರಿಯವಾದ ಅಂಶ– ಎಂಬೀ ನಾಲ್ಕು ಧರ್ಮಾಕರಗಳು; ಋಗ್ವೇದ, ಯಜುರ್ವೇದ ಸಾಮವೇದ, ಹಾಗೂ ಅಥರ್ವವೇದಗಳು ನಾಲ್ಕು ವೇದಗಳು; ಶಿಕ್ಷೆ, ಕಲ್ಪ, ವ್ಯಾಕರಣ, ಛಂದಸ್, ನಿರುಕ್ತ ಮತ್ತು ಜ್ಯೋತಿಷ ಎಂಬಿವು ಆರು ವೇದಾಂಗಗಳು. ಸಾಮಾನ್ಯವಾಗಿ ಅಪೌರುಷೇಯ ವೇದ ಸಾಹಿತ್ಯವನ್ನು 'ಶ್ರುತಿ' ಎಂದೂ, ಋಷಿಪ್ರೋಕ್ತ ಧರ್ಮಗ್ರಂಥಗಳನ್ನು 'ಸ್ಮೃತಿ' ಎಂದೂ ಹೇಳುವ ರೂಢಿ ಇದೆ. ಆದರೆ ಸ್ಮೃತಿ ಶಬ್ದಕ್ಕೆ ಪರಂಪರಾಗತ ಕಾಯದೆ ಎಂಬ ವಿಶೇಷಾರ್ಥವು ಬೇರೆ ಉಂಟು. ಅಂಥ ಕಾಯದೆ ಕಟ್ಟಳೆಗಳ, ವಿಧಿವಿಧಾನಗಳ ಸಂಗ್ರಹ ಅಥವಾ ಸಂಹಿತೆ ಒಂದು ಸ್ಮೃತಿ ಗ್ರಂಥವೆನಿಸುತ್ತದೆ.

ಯಾಜ್ಞವಲ್ಕ್ಯನ ಪ್ರಕಾರ– ಮನು, ಅತ್ರಿ, ವಿಷ್ಣು, ಹಾರೀತ, ಯಾಜ್ಞವಲ್ಕ್ಯ, ಉಶನಸ್, ಅಂಗಿರಸ್, ಯಮ, ಆಪಸ್ತಂಬ, ಸಂವರ್ತ, ಕಾತ್ಯಾಯನ, ಬೃಹಸ್ಪತಿ, ಪರಾಶರ, ವ್ಯಾಸ, ಶಂಖ, ಲಿಖಿತ, ದಕ್ಷ, ಗೌತಮ, ಶಾತಾತಪ, ಮತ್ತು ವಸಿಷ್ಠರು ಸ್ಮೃತಿಕಾರರು.

ಮನುಸ್ಮೃತಿಯು ಸ್ಮೃತಿಗ್ರಂಥಗಳಲ್ಲೆಲ್ಲ ಮೇಲ್ಪಂಕ್ತಿಯದು. ಅದಕ್ಕೆ ೧೨ ಅಧ್ಯಾಯಗಳಿವೆ. ಅದರ ೭ನೆಯ ಅಧ್ಯಾಯವು ರಾಜಧರ್ಮವನ್ನು ವಿವರಿಸುತ್ತದೆ. ರಾಜಧರ್ಮವು ವರ್ಣಧರ್ಮಗಳಲ್ಲಿ ಒಂದಾದ ಕ್ಷತ್ರಿಯತ್ವದ* ವಿಶಿಷ್ಟ ಧರ್ಮ. ನಾಲ್ಕು ಆಶ್ರಮಧರ್ಮಗಳು ಪ್ರತಿಯೊಂದು ವರ್ಣಕ್ಕೂ ಇವೆ. ರಾಜಧರ್ಮದಲ್ಲಿ, ರಾಜನ ಹುಟ್ಟು, ಪ್ರಾಧಿಕಾರ (Authority ಅಧಿಕಾರ ಸ್ವರೂಪ), ಅವನ ದಿನಚರಿ, ಸರಕಾರದ ರಚನೆ, ರಾಜ್ಯ ವಿಭಾಗಗಳು, ರಾಜ್ಯದ ಸಪ್ತಾಂಗಗಳು, ರಾಜನೀತಿ, ರಾಜಮಂತ್ರ, ರಾಜ್ಯಪ್ರಶಾಸನ (Administration ಆಡಳಿತ), ಗೂಢಚಾರರ ನೇಮಕ, ರಾಜದೂತ ಲಕ್ಷಣ, ಪ್ರಕೃತಿಗಳು, ರಾಜಮಂಡಲ, ಯುದ್ಧನೀತಿ, ದುರ್ಗರಚನೆ, ಸೈನ್ಯವ್ಯೂಹ ವಿಧಾನ, ಷಾಡ್ಗುಣ್ಯ, ವಿಜಯೋತ್ತರ ನೀತಿ ಮುಂತಾದ ಹಲವಾರು ವಿಷಯಗಳನ್ನು ವಿವರಿಸಲಾಗಿದೆ.

## ರಾಜಾಧಿಕಾರ :

ರಾಜನಿಲ್ಲದ ದೇಶದಲ್ಲಿ ಅರಾಜಕತೆ ಇರುತ್ತದೆ – ಎಂಬುದು ರಾಜ್ಯಶಾಸ್ತ್ರದ ಆರಂಭದ ಮಾತು. ಸರ್ವಜ್ಞ ಕವಿಯು

**"ಗುರುಗಳಿಲ್ಲದ ಮಠವು ಹಿರಿಯರಿಲ್ಲದ ಮನೆಯು**
**ಅರಸಿಲ್ಲದೂರು ಇವು ಮೂರು ನುಲಿಬೆಂದ**
**ಹೊರಸಿನಂತಕ್ಕು ಸರ್ವಜ್ಞ"**

ಎಂದು ಹೇಳಿದಂತೆ, ಸರಕಾರವಿಲ್ಲದಲ್ಲಿ ಸಮಾಜಕಂಟಕರು ಭಯೋತ್ಪಾದಕ ಚಟುವಟಿಕೆಗಳನ್ನು ನಡೆಸುತ್ತಾರೆ; ಪ್ರಜೆಗಳ ವಿತ್ತಜೀವಿತಗಳ ಸುರಕ್ಷಿತತೆ ಉಳಿಯದು; ಅವರು ಹೆದರಿ ದಿಕ್ಕಾಪಾಲಾಗಿ ಓಡಿಹೋಗಬೇಕಾಗುವದು. ಈ ಭವಿತವ್ಯವನ್ನು ತಪ್ಪಿಸಲು ಬ್ರಹ್ಮನು ರಾಜನನ್ನು ಸೃಷ್ಟಿ ಮಾಡಿದನು – ಎನ್ನುತ್ತಾನೆ ಮನು. ಸಬಲರು ದುರ್ಬಲರನ್ನು ಶೋಷಿಸುವ ಮಾತ್ಸ್ಯ ನ್ಯಾಯಕ್ಕೆ, ಅವನ ಪ್ರಕಾರ, ಇದೊಂದೇ ಮದ್ದು.

ವೇನ ಮೊದಲಾದ ದುಷ್ಟ ರಾಜರನ್ನು ಜನರಿಂದ ಪೂಜಿತರಾದ ಋಷಿ–ಮುನಿಗಳು ಅವರ ಬೆಂಬಲದಿಂದ ಪದಚ್ಯುತಿಗೊಳಿಸಿದ್ದನ್ನು ಮನು ಹೇಳುತ್ತಾನೆ. ಇದರಿಂದ ರಾಜ್ಯಾಧಿಕಾರವು ಆಮರಣವಲ್ಲವೆಂಬುದು ಸ್ಪಷ್ಟವಾಗುತ್ತದೆ; ಪ್ರಜಾಪೀಡಕ ಸರಕಾರವನ್ನು ಪ್ರಜೆಗಳು ಉರುಳಿಸಬಹುದೆಂದು ಗೊತ್ತಾಗುತ್ತದೆ. ವೇನನ ಮಗನಾದ ಪೃಥುವು ಪಟ್ಟಾಭಿಷಿಕ್ತನಾದುದು ಅವನ ಯೋಗ್ಯತಾಬಲದಿಂದ, ಕೇವಲ ಆನುವಂಶಿಕ

* ಎಂಟನೆಯ ಅಧ್ಯಾಯದಲ್ಲಿ ಮನುವು ಆಪತ್ಕಾಲದಲ್ಲಿ ಮೊದಲಿನ ಮೂರು ವರ್ಣದವರಲ್ಲಿ ಎಲ್ಲರೂ ಶಸ್ತ್ರಧಾರಿಗಳಾಗಿ ಅಧಾರ್ಮಿಕರನ್ನು ಶಿಕ್ಷಿಸಬಹುದು ಎಂದಿರುವದರಿಂದ ಕ್ಷತ್ರಿಯರಲ್ಲಿ ಯೋಗ್ಯರಿಲ್ಲವಾದಾಗ ಬ್ರಾಹ್ಮಣ ಅಥವಾ ವೈಶ್ಯರಲ್ಲಿ ಯಾರಾದರೂ ಸಮರ್ಥರು ರಾಜರಾಗಬಹುದು ಎಂಬರ್ಥ ಉಂಟು.

ಹಕ್ಕಿನಿಂದಲ್ಲ. ಸುಸಂಸ್ಕೃತ ಕುಲದಲ್ಲಿ ಹುಟ್ಟಿರುವುದೂ ಗುಣವಿದ್ಯಾದಿ ಸಂಪನ್ನತೆಯೂ ಇಲ್ಲಿ ಸಮವಾಗಿ ಗಣ್ಯತೆಯನ್ನು ಪಡೆದಿವೆ.

ರಾಜನು ದೇವಾಂಶ ಸಂಭೂತನೆಂದು ಮನು ಹೇಳುತ್ತಾನೆ. ಅದನ್ನು ಕೇಳಿ ಕೆಲವರು ಇಂಗ್ಲೆಂಡಿನಲ್ಲಿ ಹಿಂದೆ ಇದ್ದ "ರಾಜನ ಅಧಿಕಾರವು ದೈವದತ್ತ" ಎಂಬ ಸಿದ್ಧಾಂತಕ್ಕಿದು ಸರಿದೊರೆ ಎನ್ನುತ್ತಾರೆ. ಆದರಿದು ಅಸಮಂಜಸ. ದೇವದತ್ತಾಧಿಕಾರದ ಮುಖ್ಯಾಂಶಗಳಿಂತಿವೆ:

೧. ರಾಜಪ್ರಭುತ್ವವು ದೇವೋಕ್ತವಾದ ಶಾಸನ ಸಂಸ್ಥೆ.

೨. ಎಂದೂ ರಾಜಾಧಿಕಾರದ ಆನುವಂಶಿಕತೆಯನ್ನು ಉಲ್ಲಂಘಿಸಬಾರದು.

೩. ರಾಜರು ದೇವರಿಗೆ ಮಾತ್ರ ಜವಾಬುದಾರರು.

೪. ಪ್ರಜೆಗಳು ಎಂದೂ ರಾಜನನ್ನೆದುರಿಸಬಾರದೆಂಬುದು ದೇವರ ಆಜ್ಞೆ; ಆ ಆಜ್ಞೆಯನ್ನು ಮೀರುವುದು ಪಾಪಕರ.

ಈ ನಾಲ್ಕು ಮುಖ್ಯಾಂಶಗಳಲ್ಲಿ ಮೊದಲಿನದೊಂದನ್ನು 'ರಾಜನು ಬ್ರಹ್ಮನಿಂದ ವಿಶಿಷ್ಟ ರೂಪದಲ್ಲಿ ಸೃಷ್ಟಿಸಲ್ಪಟ್ಟವನು' ಎಂಬ ಅಂಶದೊಡನೆ ಸಮನ್ವಯಿಸಬಹುದು. ಉಳಿದ ಯಾವ ಅಂಶವನ್ನೂ ಮನುಮತ ಎನ್ನಲು ಸಾಧ್ಯವಿಲ್ಲ. ರಾಜನಿಲ್ಲಿ ದೇವರಿಗೆ ಜವಾಬುದಾರನಲ್ಲ, ಪ್ರಜೆಗಳಿಗೆ ಜವಾಬುದಾರ. ಪ್ರಜಾಹಿತಕ್ಕಿಲ್ಲಿ ರಾಜನು ಸಾಧನ; ರಾಜಹಿತಸಾಧನೆಯು ಪ್ರಜಾಹಿತಸಾಧನೆಯನ್ನೇ ಅವಲಂಬಿಸಿದೆ. ಆದುದರಿಂದ ಮನುವಿನ ಕಾಲದ ಭಾರತೀಯ ರಾಜನು ಸಾಂಕುಶ ಪ್ರಭು. ರಾಜನ ಅಧಿಕಾರವು ದೈವದತ್ತವಾದರೆ ಅವನ ಪ್ರಭುತ್ವವು ನಿರಂಕುಶವಾಗುತ್ತದೆ. ದೈವದತ್ತಾಧಿಕಾರವುಳ್ಳ ರಾಜನು ದುಷ್ಟನಾದರೆ ಅವನನ್ನು ಪದಚ್ಯುತಗೊಳಿಸುವ ಹಕ್ಕು ಪ್ರಜೆಗಳಿಗಿರದು. ಇಂದ್ರಾದಿ ದೇವತೆಗಳ ಅಂಶವು ರಾಜನ ವ್ಯಕ್ತಿತ್ವದಲ್ಲಿದೆ ಎಂದು ಮನು ಹೇಳಿದ್ದು ಪ್ರಜೆಗಳು ಕಾಯದೆಬದ್ಧವಾಗಿ ನಡೆದುಕೊಳ್ಳುವುದು ಕರ್ತವ್ಯ ಎಂಬುದನ್ನು ಬಿಂಬಿಸುವುದಕ್ಕಾಗಿ ಮಾತ್ರ. ಒಬ್ಬ ರಾಜನು ಇನ್ನೊಬ್ಬ ರಾಜನನ್ನು ಸೋಲಿಸಿದಾಗ ಎರಡನೆಯವನ ರಾಜ್ಯಾಧಿಕಾರಕ್ಕೆ ಚ್ಯುತಿ ಬರುವುದು ಮನುವಿಗೆ ಗೊತ್ತು. ಆದುದರಿಂದ ರಾಜ್ಯಾಧಿಕಾರವು ದೈವದತ್ತ ಎಂದು ಅವನು ಹೇಳಿಲ್ಲ. "ರಾಜಾ ಪ್ರತ್ಯಕ್ಷದೇವತಾ ನಾವಿಷ್ಣುಃ ಪೃಥಿವೀಪತಿಃ" ಎಂದು ಮುಂತಾಗಿ ರಾಜನ ದೇವತ್ವದ ಬಗ್ಗೆ ತೆಗೆದ ಉದ್ಗಾರಗಳಿಗೆಲ್ಲ ರಾಜಾಜ್ಞೆ ಅನುಲ್ಲಂಘನೀಯ ಎಂಬುದನ್ನು ಸೂಚಿಸುವುದಷ್ಟೇ ತಾತ್ಪರ್ಯ ಎಂದು ತಿಳಿಯಬೇಕು.

ಭಾರತದ ರಾಜನು ವೇದ–ಸ್ಮೃತಿ–ಸದಾಚಾರಗಳಲ್ಲಿ ಕಂಡು ಬರುವ ಅರ್ಥ–ಕಾಮಗಳ ವೈಯಕ್ತಿಕ ಸಿದ್ಧಿಯಲ್ಲಿ ಅನಾಸಕ್ತರಾದ ಶುದ್ಧ ಬುದ್ಧಿಯವರು ಉಸಿರಿದ

ಅಂಶಗಳನ್ನು ಧರ್ಮವೆಂದು ತಿಳಿದು, ಅವುಗಳನ್ನು ಜಾರಿಗೆ ತರಬೇಕಲ್ಲದೆ, ತಾನೇ ತನ್ನ ಮನಸ್ಸಿಗೆ ಬಂದಂತೆ ಯಾವ ಕಾಯದೆಯನ್ನೂ ರಚಿಸಲಾರ ಮತ್ತು ಹಾಗೆ ರಚಿಸಿ ಅದನ್ನು ಪಾಲಿಸಬೇಕೆಂದು ರಾಜಾಜ್ಞೆ ಹೊರಡಿಸಲಾರ– ಎಂಬುದು ರಾಜನ ದೈವದತ್ತ ನಿರಂಕುಶ ಪ್ರಭುತ್ವದ ಕಲ್ಪನೆಗೆ ವಿರುದ್ಧವಾಗಿದೆ. ರಾಜನಿಗೆ ರಾಜ್ಯವೆಲ್ಲ ಸ್ವಂತದ ಜಮೀನಾಗಿರಲಿಲ್ಲ. "ಭಾರತೀಯ ಸಂಸ್ಕೃತಿ" ಎಂಬ ಪ್ರಮಾಣಗ್ರಂಥದಲ್ಲಿ ಡಾ.ಎಸ್.ಶ್ರೀಕಂಠ ಶಾಸ್ತ್ರಿಗಳು ಎತ್ತಿ ತೋರಿಸಿರುವಂತೆ (ಪುಟ ಸಂಖ್ಯೆ : ೨೫೦), ಚಕ್ರವರ್ತಿಯೇ ಭೂಮಿಗೆಲ್ಲ ಅಧಿಕಾರಿ, ಜನರು ಅವನ ಅನುಮತಿಯಿಂದ ಜೀವಿಸುವರು ಎಂಬ ತತ್ವಕ್ಕೆ ಬ್ರಿಟಿಷರೇ ಮೂಲ; ಪ್ರಜೆಗಳು ರಾಜನ ಪೂರ್ವಾನುಮತಿಯಿಲ್ಲದೆ ಭೂದಾನ ಮಾಡಬಹುದಾಗಿತ್ತು. ಈ ಎಲ್ಲ ಅಂಶಗಳನ್ನೂ ಗಮನಿಸಿಯೇ ಡಾ.ಪಿ.ವಿ.ಕಾಣೆ ಅವರು ಭಾರತದ ರಾಜಪ್ರಭುತ್ವವನ್ನು "ಪರಿಮಿತ ಶಾಸಕತ್ವದ ರಾಜಪ್ರಭುತ್ವ" ಎಂದು ಕರೆದಿದ್ದಾರೆ. ಹೀಗೆ ಮನುವಿನ ಅಭಿಪ್ರಾಯದಂತೆ ರಾಜನ ಪ್ರಶಾಸನಾಧಿಕಾರ ಅಥವಾ ದಂಡಾಧಿಕಾರವು ಕೆಲಮಟ್ಟಿಗೆ ಪರಿಮಿತ (ಸಾಂಕುಶ) ವಾಗಿತ್ತೆಂಬುದು ತಾತ್ಪರ್ಯ.*

## ಆಡಳಿತದ ಮೂಲತತ್ವ :

ರಾಜನು ಅತಿವರ್ತನೆಗಿಳಿದು ಉಗ್ರದಂಡನೂ ಆಗಬಾರದು, ಶಿಥಿಲದಂಡನೂ ಆಗಬಾರದು– ಎಂಬುದು ದಂಡನೀತಿಯ ಮೂಲತತ್ವ. "ದಂಡವು" ಮೂಲತಃ ದಂಡಿಸುವ ಅಥವಾ ಶಿಕ್ಷಿಸುವ ಅಧಿಕಾರ. ರಾಜಶಾಸನಗಳನ್ನು ಮೀರುವವರನ್ನು ಬಲಪ್ರಯೋಗದಿಂದ ಅಂಕೆಯಲ್ಲಿಡುವುದು ಪ್ರಜಾಹಿತೈಷಿಯಾದ ರಾಜನ ಮೊದಲ ಕರ್ತವ್ಯ. (ರಾಜನ) ಸರಕಾರವೆಂದರೆ ಮೂಲತಃ ದುಷ್ಟದಂಡನೆ– ಶಿಷ್ಟ ಪರಿಪಾಲನೆಗಳನ್ನು ಮಾಡಲು ಸ್ಥಾಪಿಸಲಾದ ಪ್ರಾಧಿಕಾರ ಸಂಸ್ಥೆ. ಭಾರತದ ಸಾಮಾಜಿಕ ನ್ಯಾಯದ ಕಲ್ಪನೆಗಿದು ತಳಹದಿ. ಇದನ್ನೇ ಎಲ್.ಟಿ.ಹಾಬ್‌ಹೌಸ್ ಮಹಾಶಯನು ಇನ್ನೂ ಸ್ಪಷ್ಟವಾಗಿ, ಸರ್ವ ಪ್ರಜಾಹಿತದಲ್ಲಿರುವ ಆನುಪಾತಿಕ ಸಮಾನತೆಯ (Proportionate Equality) ಮೂಲ ತತ್ವ– ಎಂದು ಹೇಳಿದ್ದಾನೆ. (ನೋಡಿರಿ : Elements of Social Justice, ಪುಟ ಸಂಖ್ಯೆ : ೧೧೭). ನಿರಪರಾಧಿಗಳಾದ ಪ್ರಜೆಗಳು ತಮಗೆ ಧರ್ಮಬದ್ಧವಾಗಿ ದೊರೆತ ವಿತ್ತ–ಜೀವಿತಗಳನ್ನು ನಿರಾತಂಕವಾಗಿ ಅನುಭವಿಸಲು ರಾಜಪ್ರಶಾಸನವು ಅವಕಾಶ ಕೊಡಬೇಕು. ಅದಕ್ಕೆ ವಿರೋಧ ಮಾಡುವವರು ಸಮಾಜಕಂಟಕರು. ಅವರ ತಪ್ಪಿಗೆ ತಕ್ಕ ಶಿಕ್ಷೆಯನ್ನು ವಿಧಿಸಲು ರಾಜದಂಡವು ಸದಾ

---

* "Divine in the person of the king, contractive in this functional aspect, hereditary and primogenital in succession under ordinary circumstances and limited in his legislative power."

ಜಾಗರಿತವಾಗಿರಬೇಕು. ದಂಡದ ಉಗ್ರತೆ–ಶಿಥಿಲತೆಗಳು ನಿಷ್ಪಕ್ಷಪಾತ ನ್ಯಾಯಕ್ಕೆ ವಿರುದ್ಧವಾದಂಥವುಗಳು ಅರ್ಥಾತ್ ಭ್ರಷ್ಟಾಚಾರಗಳು. ಉಗ್ರದಂಡಕ್ಕೆ ವಾಕ್‌ಪಾರುಷ್ಯ, ದಂಡಪಾತನ ಮತ್ತು ಅರ್ಥದೂಷಣೆಗಳು ಉದಾಹರಣೆಗಳು.

ಮನುವಿನ ಮಾತಿನಲ್ಲಿ ದಂಡವೇ ಧರ್ಮ. ಅದು ಬ್ರಹ್ಮಪುತ್ರ, ಯಮನಂತೆ ತನ್ನ ನ್ಯಾಯನಿಷ್ಠುರತೆಯಿಂದ (ದುರ್ಜನರಿಗೆ) ಭಯಂಕರ. ಸರಕಾರದ (ರಾಜನ) ಅರ್ಥನೀತಿಯು ಒಬ್ಬ ವ್ಯಕ್ತಿಯ ಅಥವಾ ಒಂದು ರಾಷ್ಟ್ರದ ನೈತಿಕ ಕ್ಷೇಮಕ್ಕೆ ಭಂಗ ತರುವಂತಿದ್ದರೆ ಅದು ಅನೈತಿಕ, ಪಾಪಕರ – ಎಂದು ಮಹಾತ್ಮ ಗಾಂಧಿಯವರೆಂದದ್ದು ದಂಡದ ಪ್ರಯೋಗವು ನೀತಿ (ಧರ್ಮ) ಸೂತ್ರಗಳಿಂದ ಬದ್ಧ ಎಂಬ ಅಂಶವನ್ನು ಎತ್ತಿ ತೋರಿಸುತ್ತದೆ. ವ್ಯಕ್ತಿಧರ್ಮ–ಸಮಾಜಧರ್ಮಗಳ ಆಚರಣೆ ಅವಿರುದ್ಧವಾಗಿ ನಡೆಯುವಂತೆ ನೋಡಿಕೊಳ್ಳುವುದು ರಾಜಧರ್ಮದ ದಂಡನೀತಿಯ ನ್ಯಾಯಸೂತ್ರ.

## ರಾಜನ ವಿದ್ಯಾಭ್ಯಾಸ :

ತ್ರಯಿ, ವಾರ್ತೆ, ದಂಡನೀತಿ, ಆನ್ವೀಕ್ಷಿಕಿ ಮತ್ತು ಆತ್ಮವಿದ್ಯೆಗಳನ್ನು ರಾಜನು ಕಲಿತಿರಬೇಕು – ಎನ್ನುತ್ತಾನೆ ಮನು. ಋಕ್, ಯಜುಸ್, ಸಾಮ, ಅಥರ್ವವೇದಗಳ ಜ್ಞಾನವು ರಾಜನ ಧರ್ಮಜ್ಞತೆಗೆ ಅಗತ್ಯ; ದಂಡನೀತಿಯು ಅವನ ಅರ್ಥಜ್ಞತೆಗೆ ಅವಶ್ಯಕ; ತರ್ಕವಿದ್ಯೆಯು ಯುಕ್ತಾಯುಕ್ತ ವಿವೇಕದಿಂದ ನ್ಯಾಯ, ಸತ್ಯಗಳನ್ನು ಸಂಸ್ಥಾಪಿಸಲು ಬೇಕಾದ ಸಾಧನ; ವೇದಾಂತ ಜ್ಞಾನವು ಲಾಭ–ನಷ್ಟ, ಸುಖ–ದುಃಖಗಳಲ್ಲಿ ಹಿಗ್ಗದೆ–ಕುಗ್ಗದೆ ಇರುವ ಸಮತ್ವವನ್ನು ಸಾಧಿಸಿಕೊಳ್ಳಲು ಅಗತ್ಯ. ಇತರ ಶಾಸ್ತ್ರಗಳನ್ನು ರಾಜನು ಓದಿರಬಹುದಾದರೂ ಅವು ಈ ಐದರಷ್ಟು ಅಗತ್ಯವಾದವುಗಳಲ್ಲ.

ಅವಿದ್ಯೆ–ಅಪವಿದ್ಯೆಗಳಿಂದ ಅತ್ಯಂತ ಹೊಣೆಗಾರಿಕೆಯದಾದ ರಾಜ್ಯಪ್ರಶಾಸನವನ್ನು ಯಾರೂ ಚೆನ್ನಾಗಿ ನಡೆಸಲಾರರು. ಆದುದರಿಂದ ಭಾರತದ ಧರ್ಮಶಾಸ್ತ್ರಕಾರರೂ ಅರ್ಥಶಾಸ್ತ್ರ ಸಂಪ್ರದಾಯದವರೂ ರಾಜನ ವಿದ್ಯಾಭ್ಯಾಸಕ್ಕೆ ಬಹಳ ಮಹತ್ವವನ್ನು ಕೊಟ್ಟಿದ್ದಾರೆ. ವಿದ್ಯೆಯಿಂದ ಜ್ಞಾನ–ಶೀಲಗಳೆರಡೂ ಅಂದು ಲಭ್ಯವಾಗುತ್ತಿದ್ದವು. ರಾಜತ್ವ ಮತ್ತು ಋಷಿತ್ವಗಳೆರಡೂ ಕೂಡಿರಬೇಕೆಂಬುದು ಭಾರತದ ರಾಜಾದರ್ಶ. ಶೀಲ, ಸಂಯಮ, ಶಿಸ್ತುಗಳಲ್ಲಿ ರಾಜನು ಮಾದರಿಯಾಗಿರಬೇಕೆಂಬುದು ಮನುಮತ. ರಾಜನು ಅಜ್ಞಾನಿಯೂ ಕುಶೀಲನೂ ಆದರೆ ಆಡಳಿತವು ಜನಹಿತವನ್ನು ಸಾಧಿಸದು. ದುಷ್ಟತನ–ದಡ್ಡತನಗಳಲ್ಲಿ ಯಾವುದೇ ಒಂದಿದ್ದರೂ ರಾಜ್ಯಭಾರ ಚೆನ್ನಾಗದು. ಆದುದರಿಂದ ರಾಜನು ನಿತ್ಯವೂ ವೃದ್ಧಸೇವೆ ಮಾಡಿ ವಿನಯವಂತಿಕೆಯನ್ನು ಹೆಚ್ಚಿಸಿಕೊಳ್ಳುತ್ತಿರಬೇಕೆಂಬುದನ್ನು ಮನು ಒತ್ತಿ ಹೇಳಿದ್ದಾನೆ: ನಯಜ್ಞತೆಯೊಂದೇ

ಸಾಲದು, ವಿನಯಜ್ಞತೆಯೂ ರಾಜನಿಗೆ ಅತ್ಯಗತ್ಯ ಎಂಬುದು ತಾತ್ಪರ್ಯ.

ಮಹಾಭಾರತ–ರಾಮಾಯಣಗಳ ಕಥಾನಾಯಕರು ಯೋಗ್ಯ ರಾಜರ ಮಾದರಿಗಳೆಂಬುದು ಭಾರತದಲ್ಲಿ ಪ್ರಸಿದ್ಧ. ನಮ್ಮ ಪರಂಪರೆಯಲ್ಲಿ ಮಾಂಧಾತ, ನಹುಷ, ಅಂಬರೀಷ, ಸಗರ, ಪೃಥು, ಹೈಹಯ, ಯುಧಿಷ್ಠಿರ, ನಳ, ದಶರಥ, ರಾಮ, ಪರಶುರಾಮ, ಇಕ್ಷ್ವಾಕು, ವಿಭೀಷಣ, ಭರತ, ಉತ್ತಾನಪಾದ ಮತ್ತು ಧ್ರುವ ಎಂಬ ಚಕ್ರವರ್ತಿಗಳು ನಯ–ವಿನಯಗಳನ್ನುಳ್ಳ ಆದರ್ಶ ರಾಜರೆಂದು ಹೆಸರಾಗಿದ್ದಾರೆ. ಪ್ಲೇಟೋ ಕೂಡ ತತ್ವಜ್ಞಾನಿ ರಾಜನು ಅತ್ಯುತ್ತಮನೆಂದಿರುವುದಿಲ್ಲಿ ಸ್ಮರಣೀಯ. ರಾಜನೂ ಅವನ ಅಧಿಕಾರಿಗಳೂ ಅಜ್ಞರಾದರೆ ಅಥವಾ ಅವಿನೀತರಾದರೆ ಬೇಲಿ ಎದ್ದು ಹೊಲವನ್ನು ಮೇಯುವ ಪರಿಸ್ಥಿತಿ ರಾಜ್ಯದಲ್ಲಿ ತಲೆದೋರುವುದು ಇಂದಿಗೂ ಸತ್ಯ.

## ದುರ್ವ್ಯಸನಗಳು :

ರಾಜನೂ ಮಂತ್ರಿಗಳೂ ಕರ್ಮಸಚಿವರೂ ಉನ್ನತಾಧಿಕಾರಿಗಳೂ ಕಾಮಜ ಮತ್ತು ಕ್ರೋಧಜ ದುರ್ವ್ಯಸನಗಳಿಂದ ದೂರವಿರಬೇಕೆಂಬುದು ಮನುಹೃದಯ. ವಾಗ್ದಂಡ ಪಾರುಷ್ಯಗಳೂ ಅರ್ಥದೂಷಣಗಳೂ ರಾಜನಿಂದ ಸಂಭವಿಸುವುದು ಅವನು ದುರ್ವ್ಯಸನ ದಾಸನಾಗಿ ಇಂದ್ರಿಯ ತೃಪ್ತಿಗಿಳಿದಾಗ ಎಂಬುದು ಸುಲಭವಾಗಿ ಊಹ್ಯ. ಆತ್ಮ ಸಂಯಮ ಅಥವಾ ಇಂದ್ರಿಯನಿಗ್ರಹವು ದುರ್ವ್ಯಸನಿಗಳಿಗೆ ಅಸಾಧ್ಯ. ಆದುದರಿಂದ ಅವರು ಭ್ರಷ್ಟಾಚಾರಪರಾಯಣರಾಗಿ ಪರಿಣಮಿಸುವುದು ಸಹಜ. ದುಶ್ಚಟದ ದಾಸರ ಮನಶ್ಚಾಂಚಲ್ಯವನ್ನು ಸರ್ವಜ್ಞಕವಿಯ –

**"ಹರಿವ ನೀರೆಳೆವಳ್ಳಿ ತುರಗ ಭೈತ್ರವು ಬಂಡಿ**
**ಅರಸಿನಾ ಮನವು ಬೆಲೆವೆಣ್ಣು ಇವು ಏಳು**
**ತಿರುಹುವವರಿಚ್ಚೆ ಸರ್ವಜ್ಞ"**

ಎಂಬ ತ್ರಿಪದಿ ಚೆನ್ನಾಗಿ ವರ್ಣಿಸಿದೆ. 'ಮೂಢಃ ಪರಪ್ರತ್ಯಯನೇಯಬುದ್ಧಿಃ' ಎಂಬ ಕಾಳಿದಾಸೋಕ್ತಿಯು ಅನುಭವಸಿದ್ಧ. ದುರಭ್ಯಾಸದ ದಾಸ್ಯವು ಬುದ್ಧಿವಂತರ ಬುದ್ಧಿಯನ್ನೂ ಮೌಢ್ಯದಿಂದ ಮುಚ್ಚುತ್ತದೆ. ರಾಜ, ಅನಂತರ ಅವನ ಮಂತ್ರಿಗಳು, ಆಮೇಲೆ ಅವರ ಕೆಳಗಿನ ಹಿರಿಯ ಅಧಿಕಾರಿಗಳು – ಹೀಗೆ ಒಂದು ವರ್ಗ ಆದ ಮೇಲೆ ಇನ್ನೊಂದು ಪಾನ–ದ್ಯೂತ–ಸ್ತ್ರೀಲೋಲುಪವಾಗುತ್ತ ಹೋದರೆ ಉಗ್ರಾಣಿಯವರೆಗಿನ ಕೆಳ ಅಧಿಕಾರಿಗಳೂ "ಯದ್ಯದಾಚರತಿಶ್ರೇಷ್ಠಸ್ತತ್ತದೇವೇತರೋ ಜನಃ" ಎಂಬ ಗೀತೋಕ್ತಿಯಂತೆ ದುರಾಚಾರಿಗಳಾಗುವುದು ಕ್ರಮಪ್ರಾಪ್ತ. ಅನಂತರ ಅವರ ಸಹಕಾರಿಗಳಾಗಲು "ನಗರ ಕಾಕರು" ಎಲ್ಲೆಲ್ಲೂ ಹುಟ್ಟುತ್ತಾರೆ. ಅದರ ಫಲವಾಗಿ

"ರಾಜನಿದ್ದೂ ದೇಶ ಅರಾಜಕ" ಎಂಬ ಪರಿಸ್ಥಿತಿಯುಂಟಾಗುತ್ತದೆ. ಭ್ರಷ್ಟಾಚಾರದ ಈ ರಶನಾಲಂಕಾರ ಕ್ರಮವನ್ನು ಸರಿಯಾಗಿ ತರ್ಕಿಸಿಯೇ ಮನುವು ರಾಜನು ಹತ್ತು ಕಾಮಜ ಮತ್ತು ಎಂಟು ಕ್ರೋಧಜ ದುರ್ವ್ಯಸನಗಳಿಂದ ದೂರ ಇರಬೇಕೆಂದು ಸ್ಪಷ್ಟವಾಗಿ ಸಾರಿದ್ದಾನೆ. ಭ್ರಷ್ಟಾಚಾರ ಪರನಾದ ರಾಜನಿಂದ ಹೀಗೆ ಧರ್ಮಗ್ಲಾನಿಯುಂಟಾದರೆ, "ಹರ ಕೊಲ್ಲಲ್ ಪರ ಕಾಯ್ವನೇ?" ಎಂದು ಕೇಳುವ ದುರ್ಗತಿ ಸತ್ಪ್ರಜೆಗಳಿಗುಂಟಾಗುತ್ತದೆ. "ಪಂಚತಂತ್ರವು" ಅಸಂಯಮಿಗಳ ಬಗ್ಗೆ –

**"ಯೌವನಂ ಧನಸಂಪತ್ತಿಃ ಪ್ರಭುತ್ವಮವಿವೇಕಿತಾ**
**ಏಕೈಕಮಪ್ಯನರ್ಥಾಯ ಕಿಮು ಯತ್ರ ಚತುಷ್ಟಯಂ"**

ಎಂದು ಹೇಳಿದ್ದು ದುರ್ವ್ಯಸನಿಯಾದ ರಾಜನಿಗೆ ಚೆನ್ನಾಗಿ ಅನ್ವಯಿಸುತ್ತದೆ. ಆದುದರಿಂದ ದುರ್ವ್ಯಸನಗಳು ಪ್ರಜೆಗಳಿಗೂ ಹಾನಿಕರವಾದರೂ ಅವರ ಧರ್ಮನಿಯಾಮಕನಾದ ರಾಜನಿಗೆ ಹಿಡಿದರೆ ಅವನಿಗಲ್ಲದೆ ಅವರಿಗೂ ಹೆಚ್ಚಿನ ಪ್ರಮಾಣದಲ್ಲಿ ಹಾನಿಕರವಾದೀತು – ಎಂಬುದು ಅನುಭವಸಿದ್ಧ.

## ಮಂತ್ರಿಗಳ ನೇಮಕ :

ರಾಜನು ತನ್ನ ಅಪ್ಪ–ಅಜ್ಜಂದಿರ ಕಾಲದಿಂದ ನಂಬಿಗಸ್ಥರಾಗಿ, ತನ್ನ ಪೂರ್ವಜರ ಮಂತ್ರಿಗಳಾಗಿ ಕೆಲಸ ಮಾಡುತ್ತ ಬಂದವರ ಮಕ್ಕಳು ಶಾಸ್ತ್ರಜ್ಞರೂ ಸುಶೀಲರೂ ಶೂರರೂ ಸುಸಂಸ್ಕೃತರೂ ದಕ್ಷರೂ ಆಗಿದ್ದರೆ ಅವರನ್ನೇ ಮಂತ್ರಿಗಳನ್ನಾಗಿ ತೆಗೆದುಕೊಳ್ಳಬೇಕು – ಎಂದಿದ್ದಾನೆ ಮನು. ದೀರ್ಘಸೇವೆ ಮತ್ತು ಯೋಗ್ಯತೆಗಳೆರಡನ್ನೂ ಉಳ್ಳವರಿಗೆ ಮೇಲಿನ ಹುದ್ದೆಯನ್ನು ಕೊಡುವ ಸೂತ್ರಕ್ಕಿದು ಸರಿಸಮಾನ; ಪ್ರಾಮಾಣಿಕತೆ ಮತ್ತು ದಕ್ಷತೆಗಳೆರಡನ್ನೂ ಉಳ್ಳವರ ನೇಮಕಕ್ಕಿದು ಸರಿದೊರೆ. ಆಯ್ಕೆಯ ಈ ಸೂತ್ರವನ್ನು ಸುವರ್ಣಸೂತ್ರವೆನ್ನಬಹುದು. ಇತ್ತೀಚೆಗೆ ಭಾರತದ ಜಾಗ್ರತಾ ಆಯೋಗದ ಕಮೀಶನರರು – ಹತ್ತಾರು ವರ್ಷಗಳ ಕಾಲ ಪ್ರಾಮಾಣಿಕರಾಗಿ ದುಡಿದು ಅನಂತರ ಮೇಲಿನ ಹುದ್ದೆಗೆ ಹೋದ ದಕ್ಷ ಎಂಜಿನಿಯರನೇಕರು ತಮ್ಮ ಹಿಂದಿನ ಪ್ರಾಮಾಣಿಕತೆಯ ಬಲದಿಂದ ಮೇಲಧಿಕಾರಿಗಳ ವಿಶ್ವಾಸವನ್ನು ಗಳಿಸಿಕೊಂಡದ್ದನ್ನು ಈಗ ದುರುಪಯೋಗ ಮಾಡಿಕೊಳ್ಳತೊಡಗಿದ್ದರಿಂದ ಅವರ ಭ್ರಷ್ಟಾಚಾರ ಅತಿಯಾದದ್ದು ಕಂಡು ಬಂದಿದೆ– ಎಂದು ಹೇಳಿದ್ದಿಲ್ಲಿ ಸ್ಮರಣೀಯ. ದಕ್ಷತೆ–ಪ್ರಾಮಾಣಿಕತೆಗಳಲ್ಲಿ ಒಂದಿದ್ದು ಇನ್ನೊಂದಿಲ್ಲದ ಯಾವ ನೌಕರ ವರ್ಗವೂ ಪ್ರಜಾಹಿತಕ್ಕೆ ಧಕ್ಕೆಯುಂಟಾಗದಂತೆ ನಡೆದುಕೊಳ್ಳಲಾರದು. ಈ ಅಂಶವನ್ನು ತಿಳಿದೇ ಮನುವು ಆನುವಂಶಿಕವಾಗಿ ಬಂದ ಪ್ರಾಮಾಣಿಕತೆ ಮತ್ತು ಶಾಸ್ತ್ರಜ್ಞಾನಾದಿ ವಿದ್ವತ್ತೆಗಳೆರಡೂ ಕೂಡಿರುವವರನ್ನು ಅತ್ಯಂತ ಜವಾಬುದಾರಿಯದಾದ ಮಂತ್ರಿಪದವಿಗಳಲ್ಲಿ ನೇಮಿಸಿಕೊಳ್ಳಬೇಕು ಎಂದು ಹೇಳಿದ್ದು. "ಯೋಗ್ಯವಾದ ನ್ಯಾಯಾಂಗ

ಮತ್ತು ಕಾರ್ಯಾಂಗ ಪದ್ಧತಿಗಳನ್ನು ರಚಿಸಿಕೊಳ್ಳದೆ ಹೋದುದರ ಫಲವಾಗಿ ಅನೇಕ ಸಂದರ್ಭಗಳಲ್ಲಿ ರಾಷ್ಟ್ರಗಳೆಷ್ಟೋ ವಿಘಟಿತವಾಗಿ ಹಾಳಾಗಿ ಹೋದದ್ದುಂಟು" ಎಂದು ಪ್ರೊ.ಸತ್ಯನಾಥ ಅಯ್ಯರರೆಂದಿರುವುದು ಮನುಮತವನ್ನು ಮನಸ್ಸಿನಲ್ಲಿಟ್ಟುಕೊಂಡೇ ಎನ್ನಬಹುದು. ಉಭಯಪಕ್ಷಗಳಲ್ಲಿ ಯಾವುದು ಅಯೋಗ್ಯ ಅಥವಾ ಅಪ್ರಾಮಾಣಿಕವೆನ್ನಿಸಿದರೂ ಪ್ರಜಾಹಾನಿಯುಂಟಾಗುವುದು ತಪ್ಪದು.

## ವರ್ಣಧರ್ಮ :

ಮನುವು ವರ್ಣಧರ್ಮ, ಆಶ್ರಮಧರ್ಮ, ದೇಶಧರ್ಮ, ಕುಲಧರ್ಮ, ಜಾತಿಧರ್ಮ, ಪಾಷಂಡಗಣಧರ್ಮ ಎಂದು ಧರ್ಮದ ಷಡಂಗಗಳನ್ನು ಉಲ್ಲೇಖಿಸಿದ್ದಾನೆ. ಡಾ.ಪಿ.ವಿ.ಕಾಣೆಯವರು– "ವರ್ಣದ ಕಲ್ಪನೆಯು ಕುಲ, ಸಂಸ್ಕೃತಿ, ಚಾರಿತ್ರ ಮತ್ತು ವೃತ್ತಿಗಳನ್ನು ಆಧರಿಸಿತ್ತು; ಮೊದಲು ಅದು ಮುಖ್ಯವಾಗಿ ಮನುಷ್ಯನ ನೈತಿಕ ಹಾಗೂ ಬೌದ್ಧಿಕ ಯೋಗ್ಯತೆಯನ್ನು ಲೆಕ್ಕಕ್ಕೆ ತೆಗೆದುಕೊಳ್ಳುತ್ತಿತ್ತು. ಆದ್ದರಿಂದ ಅದು ಮಾಡಿದ ಸಮಾಜವರ್ಗೀಕರಣವು ಸ್ವಾಭಾವಿಕವಾಗಿತ್ತು. ಸ್ಮೃತಿಗಳಲ್ಲಿ ಕೂಡ ವರ್ಣದ ಆದರ್ಶವು ಕರ್ತವ್ಯಗಳಿಗೂ ಉನ್ನತತರ ಮಟ್ಟಕ್ಕೂ ಕೊಟ್ಟಷ್ಟು ಪ್ರಾಶಸ್ತ್ಯವನ್ನು ಆನುವಂಶಿಕ ಅಥವಾ ಜನ್ಮಸಿದ್ಧವೆನ್ನಿಸುವ ಹಕ್ಕು ಹಾಗೂ ವಿಶೇಷಾಧಿಕಾರಗಳಿಗೆ ಕೊಟ್ಟಿಲ್ಲ. ಜಾತಿಪದ್ಧತಿಯಾದರೋ ಹುಟ್ಟು ಮತ್ತು ಆನುವಂಶಿಕತೆಗಳಿಗೆ ಸರ್ವಪ್ರಾಧಾನ್ಯವನ್ನು ಕೊಡುತ್ತದೆ; ಅಲ್ಲದೆ ಸಂಬಂಧಿಸಿದ ಕರ್ತವ್ಯಗಳನ್ನು ಮಾಡಲು ಪ್ರಯತ್ನಿಸದೆ ಕೇವಲ ಅಂಥ ಹಕ್ಕುಗಳಿಗೇ ಅಂಟಿಕೊಳ್ಳುವ ಮನೋಧರ್ಮದತ್ತ ಒಲೆಯುತ್ತದೆ"– ಎಂದು ಹೇಳಿದ್ದಿಲ್ಲಿ ಗಮನಾರ್ಹ.

## ಗೂಢಚಾರರ ಮಹತ್ವ :

"ಚಾರೈಃ ಪಶ್ಯಂತಿ ರಾಜಾನಃ" ಎಂಬ ತತ್ವವನ್ನು ಕೌಟಿಲ್ಯದಂತೆ ಮನುವೂ ದೃಢವಾಗಿ ನಂಬಿದವನು. ರಾಜಪುರುಷರ ಮತ್ತು ವಿವಿಧ ವೃತ್ತಿಗಳನ್ನು ಹಿಡಿದ ಪ್ರಜೆಗಳ ದಕ್ಷತೆ–ಪ್ರಾಮಾಣಿಕತೆಗಳನ್ನು ಕಾಲಕಾಲಕ್ಕೆ ಅರಿತುಕೊಳ್ಳಲು ರಾಜನಿಗೆ ಇರುವ ಒಂದೇ ಒಂದು ಅಭೇದ್ಯ ಯೋಜನೆಯೆಂದರೆ ಗೂಢಚಾರರನ್ನು ನಿಯಮಿಸಿಕೊಳ್ಳುವ ಪದ್ಧತಿ. ಅವರು ರಾಷ್ಟ್ರದ ಒಳಗೂ ಅಗತ್ಯ, ಹೊರಗೂ ಅಗತ್ಯ ಎನ್ನಿಸಿದವರು. ಅವರ ದಕ್ಷತೆ–ಪ್ರಾಮಾಣಿಕತೆಗಳನ್ನು ಅತ್ಯಂತ ಜಾಗರೂಕತೆಯಿಂದ ಕಾಯ್ದುಕೊಂಡಿರುವುದು ರಾಜನ ರಾಜ್ಯಭಾರದಕ್ಷತೆಯ ಮೂಲಾಧಾರ. ಅವರ ಸ್ವಾಮಿನಿಷ್ಠೆಯು ಅಭೇದ್ಯವಾಗಿರಬೇಕಲ್ಲದೆ, ಅವರ ಕಾರ್ಯಕೌಶಲವೂ ಅಸಾಧಾರಣವಾಗಿರಬೇಕು. ಈ ಸಂದರ್ಭದಲ್ಲಿ ರಾಜನೇ ಅಪ್ರಾಮಾಣಿಕನಾಗಿ ಅವರ ಸೇವೆಯನ್ನು ದುರುಪಯೋಗ ಮಾಡಿಕೊಂಡರೇನು ಗತಿ? ಎಂದು ಯಾರಾದರೂ ಕೇಳಬಹುದು. ಅಂಥ ಸಂದರ್ಭದಲ್ಲಿ

ಅವನ ಪದಚ್ಯುತಿ ಮಾಡಲು ಜನರು ಸಂಘಟಿತರಾಗಬೇಕು ಎಂಬುದೊಂದೇ ಉತ್ತರ.

ರಾಜನ ವಿವಿಧ ಕರ್ತವ್ಯಗಳಲ್ಲಿ ಮೇಲ್ವಿಚಾರಣೆ ಅತ್ಯಂತ ಹೆಚ್ಚಿನದು. ಸ್ವ–ಪರ ರಾಜ್ಯಗಳ ರಾಜಪುರುಷರ ಮತ್ತು ಪ್ರಜೆಗಳ ವರ್ತನೆಗಳನ್ನು ಅವರಿಗೆ ಗೊತ್ತಾಗದಂತೆ ತಿಳಿದುಕೊಂಡು, ಆ ಮೂಲಕ ತನ್ನ ರಾಜ್ಯಹಿತದ ಬಗೆಗೆ ಅನುಸರಿಸಬೇಕಾದ ನೀತಿಗಳಲ್ಲಿ ಮತ್ತು ಕ್ರಮಗಳಲ್ಲಿ ತಕ್ಕ ಬದಲಾವಣೆಗಳನ್ನು ರಾಜನು ಮಾಡಿಕೊಳ್ಳುವುದು ಅಗತ್ಯ. ಗೋಮುಖವ್ಯಾಘ್ರರಿರುವವರೆಗೆ ಗೂಢಚಾರದಳ ಬಲವಾಗಿಲ್ಲದ ರಾಷ್ಟ್ರವು ಅಧೋಗತಿಗಿಳಿಯುವುದು ನಿಶ್ಚಿತ. ಜಾಗತಿಕ ಮಹಾಯುದ್ಧಗಳ ಕಾಲದಲ್ಲಿ ಇಂಗ್ಲೆಂಡ್, ಅಮೇರಿಕ, ಜರ್ಮನಿ ಮತ್ತು ರಶಿಯಗಳು ತಮ್ಮ ಗೂಢಚಾರ ಪಡೆಗಳಿಗೆ ಹೆಸರಾದವು.

ಕಾಪಟಿಕ, ಉದಾಸ್ಥಿತ, ಗೃಹಪತಿ, ವೈದೇಹಿತ, ತಾಪಸ ಎಂಬ ಪಂಚವರ್ಗಗಳನ್ನು ಗೂಢಚಾರ ಸಂಘಟನೆಯಲ್ಲಿ ಮನು ಹೇಳಿದ್ದು "ಸರ್ವೋ ದಂಡಜಿತೋ ಲೋಕಃ ದುರ್ಲಭೋ ಹಿ ಶುಚಿರ್ನರಃ" ಎಂಬ ಅವನ ಅನುಭವವನ್ನು ಆಧರಿಸಿಯೇ. ಆ ಅನುಭವ ಭಾರತದ ಮತದಾರರಲ್ಲಿ ಪ್ರಾಮಾಣಿಕರಾದವರಿಗೆ ಈಗಲೂ ಬಂದಿದೆ. ಆದುದರಿಂದ ಆಡಳಿತ ದಕ್ಷತೆಗೆ "ಜಾಗ್ರತಾ ಆಯೋಗ" ಹೆಚ್ಚು ಹೆಚ್ಚು ಜಾಗರಿತವಾಗಿ ಮತ್ತು ಜಾಣತನದಿಂದ ಕರ್ತವ್ಯನಿರ್ವಹಣೆ ಮಾಡಬೇಕಾದುದು ಮನುಕಾಲಕ್ಕಷ್ಟೇ ಪರಿಸೀಮಿತವಲ್ಲ, ಅನುಗಾಲವೂ ನಡೆಯಬೇಕಾದ ಪದ್ಧತಿ. ಅಧಿಕಾರದ ಅನುಪಯೋಗ–ದುರುಪಯೋಗಗಳನ್ನು ತಡೆಯಲು ಅದೊಂದೇ ತಾರಕೋಪಾಯ.

## ಧರ್ಮಯುದ್ಧ :

ಧರ್ಮಯುದ್ಧ ಪದ್ಧತಿಯು ಹಿಂದೆ ಬಹಳ ದೇಶಗಳಲ್ಲಿತ್ತು. ಇಂದಿನ ನಿಶ್ಶಸ್ತ್ರೀಕರಣ ಪರಿಷತ್ತುಗಳ ಹಿಂದೆ ಧರ್ಮದ ಪ್ರೇರಣೆಯಿದೆ. ಅಂತಾರಾಷ್ಟ್ರೀಯ ಸಮಯಗಳನ್ನು ಮುರಿದು ಯುದ್ಧ ಮಾಡಿದ್ದು ಎರಡನೆಯ ಜಾಗತಿಕ ಮಹಾಯುದ್ಧದಲ್ಲಿ. ಗುಪ್ತಾಯುಧ, ವಿಷಲಿಪ್ತಾಯುಧ, ಜ್ವಾಲಾಮಯ ಆಯುಧ, ಮುಂತಾದವುಗಳ ಬಳಕೆಯನ್ನು ನಿಷೇಧ ಮಾಡಿದ್ದು ಮನುವಿನ ಮಾನವೀಯತೆಗೆ ಸಾಕ್ಷಿಯಾಗಿದೆ. ಯುದ್ಧವೇ ಬೇಡವೆಂದು ಅವನು ಹೇಳದಿರುವುದು ವ್ಯಾವಹಾರಿಕ ಸತ್ಯವನ್ನಾಧರಿಸಿಯೇ. "ಸ್ವಭಾವೋ ದುರತಿಕ್ರಮಃ" ಎಂಬುದು ಅವನಿಗೆ ಗೊತ್ತು. ದುಷ್ಟರಿರುವುದರಿಂದಲೇ ಅವರನ್ನು ದಂಡಿಸಲು ಸರಕಾರ ಹೇಗೆ ಅಗತ್ಯವೋ ಹಾಗೇ ಆಕ್ರಮಣಶೀಲ ಸರಕಾರಗಳಿರುವವರೆಗೆ ಒಂದು ರಾಜ್ಯವು ರಕ್ಷಣಾರ್ಥವಾಗಿ ಯಾವಾಗಲೂ ಯುದ್ಧಸಿದ್ಧತೆಯನ್ನು ಮಾಡಿಕೊಂಡೇ ಇರಬೇಕಾಗುತ್ತದೆ. ಷಂಡ, ಶರಣಾಗತ, ಹೆದರಿ ಓಡುವ ಹೇಡಿ, ನೋಟಕ, ನಿದ್ರಾಪರವಶ, ನಿಶ್ಶಸ್ತ್ರ, ನಿಷ್ಕವಚ, ಅನ್ಯಾಸಕ್ತ, ಭಗ್ನಶಸ್ತ್ರ, ಆರ್ತ, ಭಯಗ್ರಸ್ತ, ಆಪದ್ಗತರ ಮೇಲೆ

ಶಸ್ತ್ರಪ್ರಯೋಗ ಮಾಡಬಾರದೆಂದು ಮನುವು ಹೇಳಿದ್ದಾನೆ. ಇದು ಇಂದಿಗೂ ಮನನೀಯವಿದೆ.

ದುರ್ಬಲರನ್ನು ಕಾಯುವುದು ಗೌರವದಾಯಕವೆಂಬ ನಂಬಿಗೆ ಕ್ಷಾತ್ರಬಲ ಸಂಪನ್ನರನ್ನು ದೇಶರಕ್ಷಣೆಗಾಗಿ ಹೋರಾಡಲು ಪ್ರೇರಿಸುತ್ತದೆ– ಎಂಬುದು ಹಾಬ್‌ಹೌಸ್ ಮಹಾಶಯನ ಮತ. ಸಮಾಜದಲ್ಲಿ ಕ್ಷಾತ್ರಕ್ಕೆ ಗೌರವ ಕಡಿಮೆಯಾದಾಗ, ವೈಶ್ಯಸಾಧನೆಗೆ ಅತಿ ಮಹತ್ವ ಉಂಟಾದಾಗ, ರಾಜ್ಯದಲ್ಲಿ ಅಂತಃಕ್ಷೋಭೆ ಮತ್ತು ಅಂತಾರಾಜ್ಯ ಕಲಹಗಳ ಮೂಲಕ ಜನಶೋಷಣೆಗಳು ಪ್ರಾರಂಭವಾಗುತ್ತವೆ. ವೇದ, ಸ್ಮೃತಿ, ಸದಾಚಾರ, ಶುದ್ಧ ಬುದ್ಧಿಮತ್ತೆಗಳುಳ್ಳ ವಿದ್ವಾಂಸರಿಂದ ಸಾರ್ವಜನಿಕ ನಡಾವಳಿಗಳು ಬೆಳೆದು ಬಂದದ್ದೇ ಇಲ್ಲಿ ಹೆಚ್ಚು. ಧರ್ಮಯುದ್ಧ ನೀತಿಯ ಆದರ್ಶಗಳನ್ನು ಮನು ಹೇಳಿದ್ದು ಇತರ ಆದರ್ಶಗಳಂತೆಯೇ ಶ್ರೇಷ್ಠರಾದ ಋಷಿಮುನಿಗಳ ಉಪದೇಶದ ಸಾಂಪ್ರದಾಯಿಕ ಮೂಲ ಆಕರಗಳನ್ನಾಧರಿಸಿಯೇ ಎಂಬುದು ಐತಿಹಾಸಿಕ ಸತ್ಯ. ಬೌದ್ಧರ ಪಂಚಶೀಲವು ಮನೂಕ್ತ ಪಂಚ ಸಾಮಾನ್ಯ ಧರ್ಮಗಳನ್ನಾಧರಿಸಿರುವುದು ಸ್ಪಷ್ಟ. ಅಹಿಂಸಾತತ್ವವು ಪಂಚ ಶಾಶ್ವತ (ಸಾಮಾನ್ಯ) ಧರ್ಮಗಳಲ್ಲಿ ಮೊದಲನೆಯದು. ಅದಕ್ಕೆ ಉತ್ಸರ್ಗದ ಸ್ಥಾನ; ಯುದ್ಧಕ್ಕೆ ಅಪವಾದದ ಸ್ಥಾನ.

ಧರ್ಮಯುದ್ಧದಲ್ಲಿ ಸಾಯುವ ರಾಜನಿಗೆ ಸ್ವರ್ಗ ಸಿಗುವುದೆಂದ ಮನುವಿನ ಮಾತು ಅಂದಿನ ಸಮಾಜವು ಯುದ್ಧವೀರನಿಗೆ ಸಾಕಷ್ಟು ಗೌರವ ನೀಡುತ್ತಿತ್ತೆಂಬುದನ್ನು ಸೂಚಿಸುತ್ತದೆ. ಯುದ್ಧದಿಂದ ಸೋತು ಓಡಿಬರಬಾರದೆಂಬ ಮಾತೂ ಅದೇ ಪ್ರಕಾರ ಅಂದಿನ ಯುದ್ಧಧರ್ಮ. ಅದು ನಾಗರಿಕತೆಯ ಔನ್ನತ್ಯಕ್ಕೊಂದು ನಿದರ್ಶನ. ನೀತಿಬಾಹಿರ ಯುದ್ಧದಲ್ಲಿ ಮಾತ್ರ ಪಲಾಯನವು ಪರಾಕ್ರಮವಾದೀತು. ಗೆಲುವಿಗಾಗಿ ಗೆಲುವಲ್ಲ; ಅರ್ಥಕ್ಕಾಗಿ ಧರ್ಮವಲ್ಲ; ಧರ್ಮಬಾಹಿರವಾದ ಗೆಲುವೂ ಅರ್ಥಲಾಭವೂ ಅಧರ್ಮ, ಅನಾಗರಿಕ, ಅಸಂಸ್ಕೃತ– ಎಂದು ನಂಬಿದ ನಾಗರಿಕತೆಯನ್ನು ಮನು ಪ್ರತಿನಿಧಿಸುವುದಿಲ್ಲಿ ಸುವೇದ್ಯ.

## ರಾಜನ ಅರ್ಥಶಾಸ್ತ್ರ :

ರಾಜನು ಅರ್ಥಾರ್ಜನೆ ಮಾಡುವುದು (ಕಾಳಿದಾಸನ ಮಾತಿನಲ್ಲಿ "ಅಪ್ಯರ್ಥ ಕಾಮೌ ತಸ್ಯಾಸ್ತಾಂ ಧರ್ಮ ಏವ ಮನೀಷಿಣಃ") ಪ್ರಜಾಹಿತಸಾಧನೆಗಾಗಿಯೇ ಎಂಬುದು ಗೃಹೀತ. ಯೋಗ, ಕ್ಷೇಮ, ವೃದ್ಧಿ, ವ್ಯಯಗಳು ಭಾರತೀಯ ಅರ್ಥಶಾಸ್ತ್ರದ ಚತುರಂಗ. ಇಲ್ಲದ್ದನ್ನು ಪಡೆಯುವುದು ಯೋಗ; ಪಡೆದದ್ದನ್ನು ರಕ್ಷಿಸಿಕೊಳ್ಳುವುದು ಕ್ಷೇಮ; ರಕ್ಷಿತವನ್ನು ಬೆಳೆಯಿಸಿಕೊಳ್ಳುವುದು ವೃದ್ಧಿ; ಹಾಗೆ ಅಭಿವೃದ್ಧಿ ಮಾಡಿಕೊಂಡ ಅರ್ಥವನ್ನು (ಐಶ್ವರ್ಯವನ್ನು) ಸದ್ವಿನಿಯೋಗ ಮಾಡುವುದು ವ್ಯಯ. ಮನುವಿನ ಪ್ರಕಾರ ಕರಾಕರಣೆಯು ರಾಜಾದಾಯದ ಧರ್ಮಸಿದ್ಧವಾದ ಮೊದಲನೆಯ ಆಕರ. ಅಧರ್ಮ

ಮಾರ್ಗಗಳಿಂದ ರಾಜನು ತನ್ನ ಬೊಕ್ಕಸವನ್ನು ತುಂಬಿಕೊಳ್ಳಕೂಡದು. ಆದರೆ ಆ ಯಾವ ಕರವೂ ಪ್ರಜೆಗಳ ಶೋಷಣೆಗೆ ಕಾರಣವಾಗುವಷ್ಟಿರಬಾರದು. ಅರ್ಥಸಮಾಹರ್ತನೆಂಬ ಕರ್ಮ ಸಚಿವನು ಅರ್ಥ (ವಿತ್ತ ಅಥವಾ ದ್ರವ್ಯ) ಮಂತ್ರಿ. ಜಮೀನುಗಳ ಮೇಲಿನ ಕಂದಾಯ, ನೀರಾವರಿಯ ಮೇಲಿನ ತೆರಿಗೆ, ಸರಕಾರಿ ವ್ಯಾಪಾರಗಳಿಂದ ಬರುವ ಲಾಭ, ಸುಂಕಗಳು, ವಾರಸುದಾರರಿಲ್ಲದೆ ಸತ್ತುಹೋದವರ ಆಸ್ತಿಗಳನ್ನು ಸ್ವಾಧೀನಪಡಿಸಿಕೊಳ್ಳುವುದು ಮತ್ತು ಗೆದ್ದ ರಾಜರಿಂದ ಕಪ್ಪಕಾಣಿಕೆಗಳನ್ನು ಸ್ವೀಕರಿಸುವುದು– ರಾಜಾದಾಯದ ಪ್ರಮುಖ ಆಕರಗಳಾಗಿದ್ದವು.

"ಅಲಬ್ಧಮಿಚ್ಛೇದ್ದಂಡೇನ" ಎಂಬ ಮಾತಿನಲ್ಲಿ ಮನುವು ದುಷ್ಟ ರಾಜರನ್ನು ದಂಡದಿಂದ ದಮನ ಮಾಡಿ ಅವರಿಂದ ಕಪ್ಪ ಕಾಣಿಕೆಗಳನ್ನು ತರುವುದು ಧರ್ಮವೆಂಬುದನ್ನು ಸೂಚಿಸಿದ್ದಾನೆ. ತನ್ನ ಪ್ರಜೆಗಳು ಸ್ವಧರ್ಮನಿರತರಾಗಿರುವಂತೆ ನೋಡಿಕೊಳ್ಳುವಷ್ಟೇ ಇತರ ರಾಜರೂ ಧರ್ಮನಿರತರಾಗಿರುವಂತೆ ನೋಡಿಕೊಳ್ಳುವುದು ರಾಜಧರ್ಮ. ಅದರ ಪಾಲನೆಯಿಂದ ಅರ್ಥಲಾಭ.

ರಾಜಾದಾಯದ ವೃದ್ಧಿಗೆ ವ್ಯಾಪಾರ, ದುರ್ವ್ಯಯ ನಿರೋಧ ಮತ್ತು ರಾಜೋದ್ಯಮಗಳು ಗಣ್ಯಸಾಧನಗಳೆಂಬುದೂ ಮನೂಕ್ತ. ರಾಜನ ಕೋಶಬಲವೂ ರಕ್ಷಣಾಬಲದ ಸಂವರ್ಧನೆಗೆ ಆಧಾರವೆಂಬುದು ಸರ್ವವೇದ್ಯ.

ಮನುಯುಗದ ರಾಜ್ಯೋದ್ಯಮಗಳಲ್ಲಿ ಸೇತುವೆ ನಿರ್ಮಾಣ, ಜಲಯಾನ ವ್ಯವಸ್ಥೆ, ಕೃಷಿ, ಹುಲ್ಲುಗಾವಲಿನ ಪಾಲನೆ, ಗೋರಕ್ಷೆ ಮತ್ತು ಆನೆಗಳನ್ನು ಹಿಡಿಯುವುದು ಮುಖ್ಯವಾಗಿದ್ದವು.

ಅರಣ್ಯೋತ್ಪನ್ನಗಳಾದ ನಾಟ, ಮಾಂಸ, ಜೇನು, ಗಂಧದ ಮರ, ಗಂಧದೆಣ್ಣೆ, ಹಣ್ಣಿನ ರಸ, ಹೂವುಗಳು, ಕಂದಮೂಲಗಳು, ಸೊಪ್ಪು, ತರಕಾರಿ, ಹುಲ್ಲು, ಚರ್ಮ, ಬೇಳೆಕಾಳುಗಳು ಮುಂತಾದವುಗಳ ಮೇಲೆ ಸುಂಕವನ್ನು ಆಕರಿಸಲಾಗುತ್ತಿತ್ತು. ಕಲ್ಲು, ಮಣ್ಣು ಮತ್ತು ಲೋಹಗಳಿಂದ ಮಾಡಿದ ಪಾತ್ರೆ–ಪಡಗ ಮೊದಲಾದ ವಸ್ತುಗಳ ಮಾರಾಟದ ಮೇಲೆ ಕರಗಳನ್ನು ಹೇರಲಾಗುತ್ತಿತ್ತು. ಆದರೆ ಈ ಯಾವ ಸುಂಕ ಅಥವಾ ಕರವೇ ಆಗಲಿ, ಕೊಡುವ ಪ್ರಜೆಗೆ ಭಾರವೆನ್ನಿಸುವಷ್ಟಿರಲಿಲ್ಲ. ಹಾಗೆ ಭಾರವೆನ್ನಿಸುವಂತಾದರೆ ಕರೆಯುವ ದನದ ಕೆಚ್ಚಲನ್ನು ಕೊಯ್ದಂತಾಗಿ ರಾಷ್ಟ್ರವು ದುರ್ಗತಿಗೀಡಾಗುವುದು.

## ರಾಜಮಂಡಲ :

ಹನ್ನೆರಡು ರಾಜರ ಗುಂಪಿಗೆ "ರಾಜಮಂಡಲ" ಎಂದು ಹೆಸರು. ಇವರಲ್ಲಿ ಒಬ್ಬೊಬ್ಬ ರಾಜನಿಗೆ ಐದೈದು "ದ್ರವ್ಯ ಪ್ರಕೃತಿಗಳು" ಇರುತ್ತವೆ. ಅಮಾತ್ಯ, ಮಂತ್ರಿ,

ರಾಷ್ಟ್ರ, ದುರ್ಗ ಮತ್ತು ದಂಡಗಳು ದ್ರವ್ಯ ಪ್ರಕೃತಿಗಳು. ರಾಜಮಂಡಲದ ೧೨ ಜನ ರಾಜರೂ ದ್ರವ್ಯ ಪ್ರಕೃತಿಗಳಿಗೆ ಮೂಲ. ರಾಜಮಂಡಲದಲ್ಲಿ ಮಧ್ಯಮ, ವಿಜಿಗೀಷು, ಉದಾಸೀನ ಮತ್ತು ಶತ್ರುಗಳು ಮೂಲಪ್ರಕೃತಿಗಳು;ಮಿತ್ರ, ಅರಿಮಿತ್ರ, ಮಿತ್ರಮಿತ್ರ, ಅರಿಮಿತ್ರಮಿತ್ರ, ಪಾರ್ಷ್ಣಿಗ್ರಾಹ, ಆಕ್ರಂದ, ಪಾರ್ಷ್ಣಿಗ್ರಾಹಾಸಾರ ಮತ್ತು ಆಕ್ರಂದಾಸಾರರೆಂಬ ರಾಜರು ಶಾಖಾಪ್ರಕೃತಿಗಳು.




ಈ ೧೨ ರಾಜಪ್ರಕೃತಿಗಳ ದ್ರವ್ಯಪ್ರಕೃತಿಗಳ ಮೊತ್ತ ೬೦, ಉಭಯ ವರ್ಗಗಳ ಪ್ರಕೃತಿಜಾತಿಗಳ ಒಟ್ಟು ಮೊತ್ತ ೭೨.

| | | |
|---|---|---|
| | ಅರಿಮಿತ್ರಮಿತ್ರ | |
| | ಮಿತ್ರಮಿತ್ರ | ಉದಾಸೀನ |
| | ಅರಿಮಿತ್ರ | |
| | ಮಿತ್ರ | |
| ಮಧ್ಯಮ | ಅರಿ (ಶತ್ರು) | |
| | ವಿಜಿಗೀಷು | |
| | ಪಾರ್ಷ್ಣಿಗ್ರಾಹ | |
| | ಆಕ್ರಂದ | |
| | ಪಾರ್ಷ್ಣಿಗ್ರಾಹಾಸಾರ | |
| | ಆಕ್ರಂದಾಸಾರ | |

ದಂಡಯಾತ್ರೆಗೆ ಹೊರಟವನು ವಿಜಿಗೀಷು. ಅವನ ರಾಜ್ಯದ ಹಿಂದು, ಮುಂದು, ಎಡ, ಬಲಗಳ ಭೌಗೋಲಿಕ ದಿಕ್ಕುಗಳನ್ನಾಧರಿಸಿ ಉಳಿದ ೧೧ ರಾಜರ ರಾಜ್ಯಸ್ಥಾನಗಳನ್ನಿಲ್ಲಿ ಚಿತ್ರಿಸಲಾಗಿದೆ. ಸ್ಥಾನವಿಲ್ಲಿ ವಿಜಿಗೀಷುವಿನ ದೃಷ್ಟಿಯಲ್ಲಿ ಇತರ ರಾಜರ ಶತ್ರುತ್ವ–ಮಿತ್ರತ್ವ ಮುಂತಾದ ಸಂಬಂಧಗಳನ್ನು ನಿರ್ಣಯಿಸುತ್ತದೆ.

ಪಾರ್ಷ್ಣಿಗ್ರಾಹ ರಾಜನು ವಿಜಿಗೀಷುವಿಗೆ ಹಿಂದಿನಿಂದ ತೊಂದರೆ ಕೊಡಬಲ್ಲ; ಅವನ ಸ್ಥಾನವೇ ಅಂಥದು. ಅರಿ ಅಥವಾ ಶತ್ರುರಾಜನು ತನ್ನ ರಾಜ್ಯದ ಸ್ಥಾನಬಲದಿಂದ ಮುಂದಿನಿಂದ ತೊಂದರೆ ಕೊಡಬಲ್ಲ. ಆಕ್ರಂದ ರಾಜನೂ ಮಿತ್ರರಾಜನೂ ವಿಜಿಗೀಷುವಿಗೆ ತೊಂದರೆ ಕೊಡುವ ಅರಿ ಹಾಗೂ ಪಾರ್ಷ್ಣಿಗ್ರಾಹರೆಂಬ ರಾಜರನ್ನು ತಡೆಯಬಲ್ಲ ಸ್ಥಾನಗಳಲ್ಲಿದ್ದಾರೆ. ಪಾರ್ಷ್ಣಿಗ್ರಾಹಾಸಾರನೆಂಬ ರಾಜನೂ ಅರಿಮಿತ್ರನಾಗಿರುವ ರಾಜನೂ ವಿಜಿಗೀಷುವಿಗೆ ಹಿಂದೆ ಮತ್ತು ಮುಂದೆ ಎಡರೊಡ್ಡಬಲ್ಲ ಸ್ಥಾನಗಳಲ್ಲಿದ್ದಾರೆ; ಆಕ್ರಂದಾಸಾರನೂ ಅರಿ ಮಿತ್ರಮಿತ್ರನೂ ಅವರನ್ನು ಅನುಕ್ರಮವಾಗಿ ತಡೆಯಬಲ್ಲ ದಿಕ್ಕುಗಳಲ್ಲಿ ಹಾಗೂ ಸ್ಥಾನಗಳಲ್ಲಿ ರಾಜ್ಯವುಳ್ಳವರಾಗಿದ್ದಾರೆ. ಅರಿರಾಜನೂ ವಿಜಿಗೀಷುರಾಜನೂ ಒಟ್ಟಾದರೆ ಅವರಿಗೆ ಸಹಾಯ ಮಾಡಬಲ್ಲ ಮತ್ತು ಅವರು ಬೇರೆಯಾದರೆ ಅವರನ್ನು ನಿಗ್ರಹಿಸಬಲ್ಲ ರಾಜ್ಯಸ್ಥಾನವು ಮಧ್ಯಮರಾಜನದು. ಹಾಗೇ ವಿಜಿಗೀಷು–ಮಧ್ಯಮರು ಒಟ್ಟಾದರೆ ಅವರನ್ನು ಬೆಂಬಲಿಸಬಲ್ಲ ಮತ್ತು ಬೇರೆಯಾದರೆ ಅವರನ್ನು ಸೋಲಿಸಬಲ್ಲ ರಾಜ್ಯ ಸ್ಥಾನವು ಅವರಿಂದ ದೂರದಲ್ಲಿರುವ ಉದಾಸೀನ ರಾಜನದು. ಈ ಪ್ರಕಾರ, ಮಧ್ಯಮ ರಾಜ್ಯಾಧಿಪತಿಯೂ ಉದಾಸೀನ ರಾಜ್ಯಾಧಿಪತಿಯೂ ಸಂದರ್ಭಾನುಸಾರವಾಗಿ ವಿಜಿಗೀಷುವಿಗೆ ಶತ್ರುಗಳೂ ಆದಾರು, ಮಿತ್ರರೂ ಆದಾರು.

## ಉಪಾಯ ಮತ್ತು ಷಡ್ಗುಣಗಳು :

ರಾಜತಂತ್ರದಲ್ಲಿ ನಾಲ್ಕು ಉಪಾಯಗಳು ಮತ್ತು ಆರು ಗುಣಗಳು ಮನುಸ್ಮೃತ. ಸಾಮ, ದಾನ, ಭೇದ, ದಂಡಗಳು ಚತುರುಪಾಯಗಳಾದರೆ–ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಂಶ್ರಯಗಳು ಷಡ್ಗುಣಗಳು. ವಿದೇಶ ಸಂಬಂಧಗಳಲ್ಲಿ ಈ ಉಪಾಯ ಮತ್ತು ಷಡ್ಗುಣಗಳ ಬಳಕೆ ಅತ್ಯವಶ್ಯಕ: ಸ್ವದೇಶ ರಕ್ಷಣೆಗೆ ರಾಜತಂತ್ರವು ಇಂದಿಗೂ ಬಿಡಲಾರದ ಸಾಧನವಾಗಿದೆ.




ಹಗೆಗೆ ಕೆಲಮಟ್ಟಿಗೆ ಪ್ರಿಯವಾಗುವಂತೆ ನಡೆದುಕೊಳ್ಳುವುದು ಸಾಮೋಪಾಯ ಅದರಿಂದ ಒಬ್ಬ ರಾಜನಿಗೆ ತನ್ನ ಪ್ರಜೆಗಳನ್ನು ವೈರಿಯ ಹಿಂಸೆಯಿಂದ ಕೆಲವೊಮ್ಮೆ ತಪ್ಪಿಸಲು ಸಾಧ್ಯವಾಗುತ್ತದೆ. ಅದರಿಂದ ವೈರಿಯು ಸಗ್ಗದಿದ್ದರೆ ದಾನೋಪಾಯದ ಪ್ರಯೋಗವನ್ನು ಮಾಡಬೇಕು. ದಾನವೆಂದರಿಲ್ಲಿ ಲಂಚ. ಶತ್ರುವಿಗೆ ಕೈ ಬೆಚ್ಚಗೆ

ಮಾಡಿ ಅವನು ರಾಜ್ಯದ ಮೇಲೆ ದಾಳಿ ಮಾಡದಂತೆ ಸುಮ್ಮನಿರಿಸುವುದು ಎರಡನೆಯ ಉಪಾಯ. ಅದೂ ಫಲಿಸದಿದ್ದರೆ ಹಗೆಯ ಪಕ್ಷದಲ್ಲಿ ಒಳಜಗಳವನ್ನುಂಟು ಮಾಡುವುದು ಮೂರನೆಯದಾದ ಭೇದೋಪಾಯ. ಒಡೆದಾಳುವ ಈ ಉಪಾಯದಿಂದ ಶತ್ರುರಾಜನು ದುರ್ಬಲನಾಗುವುದೂ ಆ ಮೂಲಕ ಅವನು ನಮ್ಮ ರಾಜ್ಯದ ಮೇಲೆ ದಂಡೆತ್ತಿ ಬರಲಾರದಂತಾಗುವುದೂ ಸಂಭವನೀಯ. ಈ ಉಪಾಯವೂ ಯಶಸ್ವಿಯಾಗದೆ ಹೋದರೆ, ನಾಲ್ಕನೆಯದಾದ ದಂಡೋಪಾಯವನ್ನು ಪ್ರಯೋಗಿಸಬೇಕು–ಅರ್ಥಾತ್ ಯುದ್ಧ ಮಾಡಿ ಹಗೆಯನ್ನು ಸೋಲಿಸಬೇಕು.

ರಾಜ್ಯರಕ್ಷಣೆಗಾಗಿ ಸಮರ್ಥ ರಾಜನು ಕೊನೆಯದಾಗಿ ಯುದ್ಧ ಹೂಡಬೇಕೆಂದಿರುವುದು–ಅನಿವಾರ್ಯವಾದರೆ ಮಾತ್ರ ಯುದ್ಧ ಮಾಡಬೇಕು, ಇಲ್ಲವಾದರೆ ಮೊದಲ ಮೂರು ಉಪಾಯಗಳನ್ನೇ ಪ್ರಯೋಗಿಸಬೇಕು–ಎಂಬ ಅರ್ಥವನ್ನು ಕೊಡುತ್ತದೆ. ಆದುದರಿಂದ ಆದಷ್ಟು ಮಟ್ಟಿಗೆ ಯುದ್ಧವನ್ನು ತಪ್ಪಿಸಬೇಕು–ಎಂಬುದು ಮನುವಿನ ಆಶಯ. ಏಕೆಂದರೆ, ಯುದ್ಧವು ಒಂದು ಹಿಂಸಾಕಾರ್ಯ; ಸ್ವಪಕ್ಷ–ಪರಪಕ್ಷಗಳೆರಡಲ್ಲೂ ವಿತ್ತ–ಜೀವಿತಗಳ ಹಾನಿ ಅದರಿಂದ ಸಂಭವಿಸುತ್ತದೆ.

ಷಡ್ಗುಣಗಳಲ್ಲಿ ಮೊದಲನೆಯದು ಸಂಧಿ. ಅದು ದ್ವಿವಿಧ; (೧) ಸಮಾನ ಯಾನ ಕರ್ಮ ಮತ್ತು (೨) ಅಸಮಾನ ಯಾನ ಕರ್ಮ–ಎಂದು. ಮೂರನೆಯವನಾದ ಒಬ್ಬ ಶತ್ರುರಾಜನೊಡನೆ ಇಬ್ಬರು ರಾಜರು ತಾತ್ಕಾಲಿಕ ಅಥವಾ ಕಾಲಾಂತರದ ಲಾಭಕ್ಕಾಗಿ ಹೋರಾಡಲೆಂದು ಪರಸ್ಪರ ಸಂಧಿ ಮಾಡಿಕೊಳ್ಳುವುದು ಸಮಾನಯಾನ ಕರ್ಮ. ಅಂಥ ಲಾಭಕ್ಕಾಗಿ ಅವರು ಮೊದಲಿನಂತೆ ಒಟ್ಟಾಗಿ ದಾಳಿ ಮಾಡದೆ ಶತ್ರುರಾಜನನ್ನು ವಂಚಿಸಲೋಸುಗ ಆ ರಾಜನು ಆ ಕಡೆಯಿಂದ ಮತ್ತು ಈ ರಾಜನು ಈ ಕಡೆಯಿಂದ ಅವನ ಮೇಲೆ ಏರಿ ಹೋಗಲು ಸಂಧಿ (ಒಪ್ಪಂದ) ಮಾಡಿಕೊಳ್ಳುವುದು ಅಸಮಾನಯಾನ ಕರ್ಮ.

ವಿಗ್ರಹದಲ್ಲಿ ಎರಡು ಬಗೆಗಳು: ಶತ್ರು ಕಷ್ಟದಲ್ಲಿ ಸಿಕ್ಕಿರುವಾಗ ಉಕ್ತ ಅಥವಾ ಅನುಕ್ತ ಕಾಲದಲ್ಲಿ ಯುದ್ಧವನ್ನು ತಾನು ಆರಂಭಿಸುವದು ಒಂದು ವಿಧದ ವಿಗ್ರಹ; ಮಿತ್ರರಾಜನೊಬ್ಬನ ಮೇಲೆ ಇನ್ನೊಬ್ಬ ದಾಳಿ ಮಾಡಿದಾಗ ಅವನನ್ನು ರಕ್ಷಿಸಲು ಮಾಡುವ ಯುದ್ಧ ಇನ್ನೊಂದು ಬಗೆಯ ವಿಗ್ರಹ.

ಸಮರ್ಥನಾದ ರಾಜನು ಶತ್ರು ಕಷ್ಟದಲ್ಲಿ ಸಿಕ್ಕಿರುವಾಗ ಅವನ ಮೇಲೆ ಏರಿ ಹೋಗುವುದು ಒಂದು ಬಗೆಯ ಯಾನ; ತಾನು ದುರ್ಬಲನಾಗಿದ್ದರೂ ಮಿತ್ರರಾಜನ ಸಹಾಯದೊಡನೆ ಶತ್ರುವಿನ ಮೇಲೇರಿ ಹೋಗುವುದು ಇನ್ನೊಂದು ಬಗೆಯ ಯಾನ.

ತಾನು ದುರ್ಬಲನಿರಲಿ ಅಥವಾ ಬಲಿಷ್ಠನಿರಲಿ ರಾಜನೊಬ್ಬನು ಸ್ವಕಾರ್ಯ ಸಿದ್ಧಿಗಾಗಿ ವೈರಿಯ ವಿರುದ್ಧವಾಗಿ ಯಾವುದಾದರೊಂದು ನೆಲೆಯನ್ನು ಆಕ್ರಮಿಸಿರುವುದು

ಒಂದು ವಿಧದ ಆಸನ; ಮಿತ್ರಕಾರ್ಯಸಿದ್ಧಿಗಾಗಿ ಹಾಗೆ ಮಾಡುವುದು ಇನ್ನೊಂದು ವಿಧದ ಆಸನ.

ಸ್ವಕಾರ್ಯಸಿದ್ಧಿಗಾಗಿ ತನ್ನ ಸೈನ್ಯವನ್ನು ಇಬ್ಭಾಗ ಮಾಡಿ ಒಂದನ್ನು ವೈರಿಯೊಡನೆ ಹೋರಾಡಲು ಮತ್ತು ಇನ್ನೊಂದನ್ನು ತನ್ನ ರಾಜಧಾನಿಯನ್ನು ಕಾಯಲು ನಿಲ್ಲಿಸುವುದು– ಎಂದು ದ್ವೈಧದಲ್ಲಿ ಇಬ್ಬಗೆಯದಾಗಿದೆ. ಶತ್ರುವಿನ ಉಪದ್ರವವನ್ನು ಪರಿಹರಿಸಿಕೊಳ್ಳಲು ಮೊದಲಿನ ದ್ವೈಧವು ಸೇನಾಪತಿಯು ಅರ್ಧ ಸೈನ್ಯವನ್ನು ರಾಜಧಾನಿಯಿಂದ ಹೊರಡಿಸಿಕೊಂಡು ಹೋಗುತ್ತಾನೆ: ಉಳಿದರ್ಧವನ್ನು ರಾಜ ತಾನೇ ಕೋಟೆಯಲ್ಲಿಟ್ಟುಕೊಂಡಿರುವುದು ಎರಡನೆಯ ಬಗೆಯ ದ್ವೈಧ.

ವೈರಿಗಳಿಂದ ತೊಂದರೆಗೀಡಾದ ಕಾಲದಲ್ಲಿ ದುರ್ಬಲ ರಾಜನು ಪ್ರಬಲ ರಾಜನನ್ನಾಶ್ರಯಿಸುವುದು (ಅವನ ರಕ್ಷಣೆಯಲ್ಲಿ ಇರುವುದು) ಒಂದು ಬಗೆಯ ಸಂಶ್ರಯ; ಅಂಥ ತೊಂದರೆ ಮುಂದೆ ಬಂದೀತೆಂದು ಈಗಲೇ ಹಾಗೆ ಮಾಡುವುದು ಎರಡನೆಯ ಬಗೆಯ ಸಂಶ್ರಯ.

ತನ್ನ ದೇಶದ ವಿವಿಧ ಹಿತಗಳ ರಕ್ಷಣೆಗಾಗಿ ರಾಜನು ವಿದೇಶಗಳ ರಾಜರೊಡನೆ ನಡೆದುಕೊಳ್ಳಬೇಕಾದ ವಿವಿಧ ಸಂದರ್ಭಗಳನ್ನು ಮನು ಈ ರಾಜತಂತ್ರ ವಿಧಾನಗಳಿಂದ ವಿವರಿಸಿದ್ದಾನೆ ಮತ್ತು ಜಗತ್ತಿನ ವಿವಿಧ ರಾಷ್ಟ್ರಗಳಲ್ಲಿ ಈಗಲೂ ಒಂದಲ್ಲ ಒಂದು ರೀತಿಯಿಂದ ಆಚರಣೆಯಲ್ಲಿ ಇವು ಉಳಿದಿವೆ. ಅಂದಿನಿಂದ ಇಂದಿನವರೆಗೂ ಹಾಗೂ ಮುಂದೆ ಸಹ ಉಳಿಯಬಹುದಾದ ಆಲೋಚನೆಗಳನ್ನು ಮಾಡಿದ ಅವನ ಮೇಧಾವಿತ್ವವನ್ನು ಯಾರಾದರೂ ಕೊಂಡಾಡಲೇ ಬೇಕು. "ಮಾನವ ಕುಲಮೊಂದೆ ವಲಂ" ಎಂದು ಪಂಪ ಮಹಾಕವಿ ಉದ್ಗರಿಸಿದಂತೆ, ರಾಜಕೀಯ ವ್ಯವಹಾರಗಳ ಸಾಮಾನ್ಯ ಲಕ್ಷಣಗಳೂ ಹಾಗೇ ನಿರ್ದಿಷ್ಟ ರೂಪರೇಖೆಗಳನ್ನುಳ್ಳವುಗಳೆಂಬುದು ಮನೂಕ್ತ ರಾಜತಂತ್ರದ ವಿವರಗಳಿಂದ ಸ್ಪಷ್ಟವಾಗುತ್ತದೆ.

## ಮನುಸ್ಮೃತಿಯ ಕಾಲ:

ಮನುಸ್ಮೃತಿಗೆ ಮಾನವ ಧರ್ಮಶಾಸ್ತ್ರವೆಂಬ ನಾಮಾಂತರವು ಉಂಟು. ಮನು ಎಂಬ ಹೆಸರು ವೇದದಷ್ಟು ಪ್ರಾಚೀನವಾದುದು. ''यद्वै किञ्च मनुरवदत् तद्भेषजम् (ಮನು ಹೇಳಿದ್ದೆಲ್ಲವೂ ಹಿತಕರ) ಎಂಬ ವಾಕ್ಯವು ಯಜುರ್ವೇದದ ತೈತ್ತಿರೀಯ ಸಂಹಿತೆ (II, 10, 2,) ಯಲ್ಲಿ ಬರುತ್ತದೆ. ಇಲ್ಲಿ ಮನು ಎಂದರೆ ಬ್ರಹ್ಮನ ಮಗನೆನ್ನಲಾಗುವ ಆದಿ ಮಾನವನೇ ಹೊರತು ಸ್ಮೃತಿಕಾರನಲ್ಲ.

ಈಗ ನಮಗೆ ದೊರಕಿದ ಮನುಸ್ಮೃತಿ ಗ್ರಂಥವು ಭೃಗುವಿನಿಂದ ಪ್ರೋಕ್ತವಾದುದು ಎಂದು ಹೇಳಲಾಗಿದೆ. ಅವನು ಈ ಸಂಹಿತೆಯನ್ನು ರಚಿಸಿದ ಕಾಲಾವಧಿ ಕ್ರಿ.ಪೂ.

೨೦೦ ಮತ್ತು ಕ್ರಿ. ಶ. ೨೦೦ ವರ್ಷಗಳ ನಡುವಿನದೆಂದು ಡಾ. ಪಿ.ವಿ. ಕಾಣೆಯವರೂ ಡಾ. ಎ.ಬಿ.ಕೀತರೂ ಅಭಿಪ್ರಾಯಪಟ್ಟಿದ್ದಾರೆ. ಜರ್ಮನ್ ವಿದ್ವಾಂಸ ಡಾ. ಬ್ಯೂಲರ್ ಮಹಾಶಯನು ಕ್ರಿ.ಶ ೨ನೆಯ ಶತಮಾನದಲ್ಲಿ ಈ ಸ್ಮೃತಿ ಗ್ರಂಥಕ್ಕೆ ಇಂದಿನ ರೂಪ ಬಂತು ಎಂದು ಸಂಶೋಧಿಸಿದ್ದಾನೆ. ಡಾ. ಕೆ.ಪಿ. ಜಯಸ್ವಾಲರು ಇದರ ಕಾಲ ಕ್ರಿ.ಶ. ೧೫೦ ಎಂದು ನಿರ್ಧರಿಸಿದ್ದಾರೆ.

ಮೊದಲು ಮನುಸ್ಮೃತಿಯು ಒಂದು ಲಕ್ಷ ಶ್ಲೋಕಗಳಿಂದ ತುಂಬಿತ್ತೆಂದು ಐತಿಹ್ಯ. ಇವುಗಳನ್ನು ೨೪ ಅಧ್ಯಾಯಗಳಲ್ಲಿ ವಿಂಗಡಿಸಿ ಇಡಲಾಗಿತ್ತಂತೆ. ನಾರದ ಮುನಿಯು ಅದನ್ನು ೧೨೦೦೦ ಶ್ಲೋಕಗಳಿಗಿಳಿಸಿದನೆಂದು ಪ್ರತೀತಿ. ಆಮೇಲೆ ಸುಮತಿಯು ಆ ೧೨೦೦೦ ಶ್ಲೋಕಗಳನ್ನು ೪೦೦೦ಕ್ಕೆ ಇಳಿಸಿದನೆಂದು ನಂಬಲಾಗಿದೆ. ಈಗ ನಮಗೆ ದೊರಕಿದ ಮನುಸ್ಮೃತಿಯಲ್ಲಿ ೨೬೮೪ ಶ್ಲೋಕಗಳಿವೆ. ಆಗ, ಈಗ ಇದರಲ್ಲಿ ಬೃಹನ್ಮನುವಿನ ಅಥವಾ ವೃದ್ಧಮನುವಿನ ಉಲ್ಲೇಖ ಕಂಡುಬರುವುದರಿಂದ ಈ ರೂಪವನ್ನಿದು ತಾಳುವುದಕ್ಕಿಂತ ಮೊದಲು ಬಹಳ ಸಲ ವಿವಿಧ ಪರಿಮಾಣದ ಸಂಹಿತೆಗಳಾಗಿ ರೂಪಿಸಲ್ಪಟ್ಟಿತ್ತೆನ್ನಬಹುದು. ಆದರೆ ಆ ಸಂಹಿತೆಗಳಲ್ಲಿ ಒಂದೂ ಈಗ ಉಪಲಬ್ಧವಾಗಿಲ್ಲ. ಬ್ಯೂಲರ್ ಮುಂತಾದ ವಿದ್ವಾಂಸರ ಅಭಿಪ್ರಾಯದಲ್ಲಿ ಮನು ಸ್ಮೃತಿಯು ಇದಕ್ಕೆ ಪೂರ್ವದಲ್ಲಿ ಸೂತ್ರರೂಪವಾಗಿದ್ದ "ಮಾನವೀಯ ಧರ್ಮಸೂತ್ರ"ದ ಶ್ಲೋಕಬದ್ಧವಾದ ರೂಪಾಂತರವಾಗಿದೆ. ಕೃಷ್ಣ ಯಜುರ್ವೇದದ ಮೈತ್ರಾಯಣೀಯ ಶಾಖೆಯ ಮಾನವ ಸೂತ್ರ ಚರಣವು ಪ್ರಸಿದ್ಧವಿದೆ. ಮಾನವೀಯ ಧರ್ಮಸೂತ್ರವು ಆ ಚರಣಕ್ಕೆ ಸೇರಿದವರಿಂದ ನಿರ್ಮಿತವಾಗಿರಬಹುದು. ಯಾಸ್ಕನ ನಿರುಕ್ತದಲ್ಲಿ (III, 4) ಒಮ್ಮೆ ಹಾಗೂ ಮಹಾಭಾರತದಲ್ಲಿ ಅನೇಕ ಸಲ 'ಮನುರಬ್ರವೀತ್' ಎಂಬ ಉಕ್ತಿಯೊಡನೆ ಧರ್ಮಾಚಾರಗಳ ಉಲ್ಲೇಖಗಳು ಬರುತ್ತವೆ. ಇವೊಂದೂ ಈಗಿನ ಮನುಸ್ಮೃತಿಯಲ್ಲಿ ಕಾಣಸಿಗುವುದಿಲ್ಲ. ಆದ್ದರಿಂದ ಈ ಉಲ್ಲೇಖಗಳು ಪೂರ್ವದ ಮಾನವೀಯ ಧರ್ಮಸೂತ್ರಕ್ಕೆ ಅನ್ವಯಿಸುತ್ತವೆಯೋ ಏನೋ ಎಂದು ವಿದ್ವಾಂಸರು ಊಹಿಸುತ್ತಾರೆ.

ಮನುಸ್ಮೃತಿಗೆ ಭಾರತದ ಪ್ರಸಿದ್ಧ ಇತಿಹಾಸ–ಪುರಾಣ ಗ್ರಂಥಗಳೊಡನೆ ಸಮಾನ ಸ್ಥಾನವಿದೆ. ಕೌಟಿಲ್ಯನ ಅರ್ಥಶಾಸ್ತ್ರದಂತೆಯೇ ಇದೂ ಭಾರತದ ವಿವಿಧ ರಾಜರಿಗೆ ಸಾವಿರಾರು ವರ್ಷಗಳವರೆಗೆ ರಾಜಧರ್ಮದ ಮಾರ್ಗದರ್ಶಕವಾಗಿತ್ತು. ಇಲ್ಲಿ ಬಹುಕಾಲ ಯುದ್ಧ, ಶಾಂತಿ, ಆಡಳಿತ ನಿರ್ವಹಣೆ ಮತ್ತು ಇತರ ವಿವಿಧ ಆಚಾರ–ವಿಚಾರಗಳು ಮನುಸ್ಮೃತಿಯನ್ನಾಧರಿಸಿಯೇ ಪ್ರಗತಿ ಹೊಂದಿದ್ದು ಇದರ ಪೂಜ್ಯತೆಗೆ ಕಾರಣ. ರಾಜಧರ್ಮದ ಬಗೆಗೆ ಮಹಾಭಾರತ ಹಾಗೂ ಮನುಸ್ಮೃತಿಗಳ ಅಭಿಪ್ರಾಯಗಳು ಹೆಚ್ಚು ಕಡಿಮೆ ಒಂದೇ ಆಗಿವೆ ಎಂದು ಹೇಳಬಹುದು. ವರ್ತಮಾನ ಭಾರತದ ಪ್ರಜೆಗಳೂ ಶಾಸಕರೂ ಈ ಗ್ರಂಥದ ಅಭ್ಯಾಸದಿಂದ ಬಹುವಿಧವಾಗಿ ಬುದ್ಧಿ ವಿಕಾಸವನ್ನೂ ಮಾರ್ಗದರ್ಶನವನ್ನೂ ಪಡೆಯಬಹುದು.

# ಮನುಸ್ಮೃತಿ
## ಏಳನೆಯ ಅಧ್ಯಾಯ

राजधर्मान्प्रवक्ष्यामि यथावृत्तो भवेन्नृपः ।
संभवश्च यथा तस्य सिद्धिश्च परमा यथा ॥१॥
**ರಾಜಧರ್ಮಾನ್ ಪ್ರವಕ್ಷ್ಯಾಮಿ ಯಥಾವೃತ್ತೋ ಭವೇನ್ನೃಪಃ ।**
**ಸಂಭವಶ್ಚ ಯಥಾ ತಸ್ಯ ಸಿದ್ಧಿಶ್ಚ ಪರಮಾ ಯಥಾ ॥೧॥**

೧. ನಾನು ರಾಜಧರ್ಮಗಳನ್ನು ಹೇಳುತ್ತೇನೆ. ರಾಜನ ಆಚಾರ ಹೇಗಿರಬೇಕು? ಅವನ ಹುಟ್ಟು ಹೇಗಾಯಿತು? ಮತ್ತು ಅವನು ಪರಮಸಿದ್ಧಿಯನ್ನು ಹೇಗೆ ಪಡೆಯುತ್ತಾನೆ? (ಎಂಬುದನ್ನೂ ಹೇಳುತ್ತೇನೆ.)

೧. ಇಲ್ಲಿ ರಾಜಧರ್ಮವೆಂದರೆ ರಾಜನ ಕರ್ತವ್ಯಗಳು, धर्मशब्दः कर्तव्यतावचनः । मेधातिथि । परमा सिद्धिः ಯುದ್ಧದಲ್ಲಿ ಹಾಗೂ ಮಿಕ್ಕೆಲ್ಲ ಕಾರ್ಯಗಳಲ್ಲಿ ದೊರಕುವ ಪೂರ್ಣಸಿದ್ಧಿ.

ब्राह्मं प्राप्तेन संस्कारं क्षत्रियेण यथाविधि ।
सर्वस्यास्य यथान्यायं कर्त्तव्यं परिरक्षणम् ॥२॥
**ಬ್ರಾಹ್ಮಂ ಪ್ರಾಪ್ತೇನ ಸಂಸ್ಕಾರಂ ಕ್ಷತ್ರಿಯೇಣ ಯಥಾವಿಧಿ ।**
**ಸರ್ವಸ್ಯಾಸ್ಯ ಯಥಾನ್ಯಾಯಂ ಕರ್ತವ್ಯಂ ಪರಿರಕ್ಷಣಮ್ ॥೨॥**

೨. ಶಾಸ್ತ್ರೋಕ್ತವಾಗಿ ವೈದಿಕ ಸಂಸ್ಕಾರವನ್ನು ಪಡೆದ ಕ್ಷತ್ರಿಯನು (ರಾಜನು) ಈ ಇಡೀ ಜಗತ್ತಿನ ರಕ್ಷಣೆಯನ್ನು ನ್ಯಾಯಸಮ್ಮತವಾಗಿ ಮಾಡಬೇಕು.

೨. संस्कार–उपनयन (मेधातिथि, गोविन्दरज, कुल्लूक, सर्वज्ञनरायण) राज्याभिषेक (नन्दन) – ಬ್ರಹ್ಮವೆಂದರೆ ವೇದ. ವೇದಾಧ್ಯಯನಾರ್ಥವಾಗಿ ಇರುವ ಸಂಸ್ಕಾರವೆಂದರೆ ಉಪನಯನ; ಆದರೆ ಕೆಲವರ ಮತಾನುಸಾರ, ಇದು 'ರಾಜಧರ್ಮ ಪ್ರಕರಣ'ವಾದ್ದರಿಂದ 'ರಾಜ್ಯಾಭಿಷೇಕ'ವನ್ನು ಸೂಚಿಸುತ್ತದೆ. यथाविधि – ಶಾಸ್ತ್ರೋಕ್ತವಾಗಿ.

अराजके हि लोकेऽस्मिन्सर्वतो विद्रुते भयात् ।
रक्षार्थमस्य सर्वस्य राजानमसृजत्प्रभुः ॥३॥
**ಅರಾಜಕೇ ಹಿ ಲೋಕೇಽಸ್ಮಿನ್ ಸರ್ವತೋ ವಿದ್ರುತೇ ಭಯಾತ್ ।**
**ರಕ್ಷಾರ್ಥಮಸ್ಯ ಸರ್ವಸ್ಯ ರಾಜಾನಮಸೃಜತ್ಪ್ರಭುಃ ॥೩॥**

೩. ರಾಜನಿಲ್ಲದಿರಲು ಜನರೆಲ್ಲ ಹೆದರಿ ದಿಕ್ಕಾಪಾಲಾಗಿ ಓಡುತ್ತಿರುವಾಗ, ಈ ಜಗತ್ತಿನ ರಕ್ಷಣೆಗಾಗಿ ಬ್ರಹ್ಮನು ರಾಜನನ್ನು ಸೃಷ್ಟಿಮಾಡಿದನು.

೩. प्रभुः ಪ್ರಜಾಪತಿ, ಬ್ರಹ್ಮ, सर्वतो विद्रुते भयात्– ದುರ್ಜನರ ದೆಸೆಯಿಂದ ಹೆದರಿ ಎಲ್ಲೆಡೆಗೂ ಓಡತೊಡಗಿದಾಗ, ಬ್ರಹ್ಮನು ರಾಜನನ್ನು ಸೃಷ್ಟಿಸಿದನೆಂದರೆ ರಾಜಶಕ್ತಿಯನ್ನು, ರಾಜಸ್ಥಾನವನ್ನು ಅಥವಾ ರಾಜತ್ವರೂಪದ ಪ್ರಜಾನಿಯಾಮಕ ಶಕ್ತಿಕೇಂದ್ರವನ್ನು ಸ್ಥಾಪಿಸಿಕೊಳ್ಳಲು ಜನನಾಯಕರಿಗೆ ಅವನು ಪ್ರೇರಣೆ ಕೊಟ್ಟನೆಂದರ್ಥ.

इन्द्रानिलयमार्काणामग्नेश्च वरुणस्य च ।
चन्द्रवित्तेशयोश्चैव मात्रा निर्हृत्य शाश्वतीः ॥४॥
**ಇಂದ್ರಾನಿಲಯಮಾರ್ಕಾಣಾಮಗ್ನೇಶ್ಚ ವರುಣಸ್ಯ ಚ ।**
**ಚಂದ್ರವಿತ್ತೇಶಯೋಶ್ಚೈವ ಮಾತ್ರಾ ನಿರ್ಹೃತ್ಯ ಶಾಶ್ವತೀಃ ॥೪॥**

೪. ಇಂದ್ರ, ವಾಯು, ಯಮ, ಸೂರ್ಯ, ಅಗ್ನಿ, ವರುಣ, ಚಂದ್ರ ಮತ್ತು ಕುಬೇರರ ಸಾರಭೂತ ನಿತ್ಯಾಂಶಗಳನ್ನು ತೆಗೆದುಕೊಂಡು (ಬ್ರಹ್ಮನು ರಾಜನನ್ನು ಸೃಷ್ಟಿಸಿದನು).

೪. मात्राः – सारभूतांशाः – दधिमण्डस्य नवनीतवत् (राधवानन्द) – ಸಾರ–ವತ್ತಾದ ಅಂಶಗಳನ್ನು ಕೆನೆಮೊಸರನ್ನು ಕಡೆದು ಬೆಣ್ಣೆ ತೆಗೆಯುವಂತೆ ತೆಗೆದು–ಎಂದು ತಾತ್ಪರ್ಯ; ಇಂದ್ರಾದಿಗಳಿಗೆ ದುಷ್ಟ ಶಿಕ್ಷಣ, ಶಿಷ್ಟ ಪರಿಪಾಲನೆ ಮಾಡುವ ದಿವ್ಯಶಕ್ತಿಯೇ ಸಾರಭೂತವಾದ ಅಂಶ.

यस्मादेषां सुरेन्द्राणां मात्राभ्यो निर्मितो नृपः ।
तस्मादभिभवत्येष सर्व भूतानि तेजसा ॥५॥
**ಯಸ್ಮಾದೇಷಾಂ ಸುರೇಂದ್ರಾಣಾಂ ಮಾತ್ರಾಭ್ಯೋ ನಿರ್ಮಿತೋ ನೃಪಃ ।**
**ತಸ್ಮಾದಭಿಭವತ್ಯೇಷ ಸರ್ವಭೂತಾನಿ ತೇಜಸಾ ॥೫॥**

೫. ರಾಜನು ಇಂದ್ರಾದಿ ದೇವತೆಗಳ ಅಂಶಗಳಿಂದ ನಿರ್ಮಿತನಾಗಿದ್ದಾನೆ. ಆದ್ದರಿಂದ ಅವನು ಎಲ್ಲ ಜೀವಿಗಳನ್ನು ಶಕ್ತಿಯಲ್ಲಿ ಮೀರಿಸುತ್ತಾನೆ.

೫. ಮನುವು 'ರಾಜನ ರಾಜತ್ವವು ಅವನಿಗೆ ಹುಟ್ಟಿದೊಡನೆಯೇ ಬಂದ ದೈವದತ್ತಾಧಿಕಾರ' ಎಂಬ ಸಿದ್ಧಾಂತವನ್ನಿಲ್ಲಿ ಹೇಳಿಲ್ಲ (ಪೀಠಿಕೆಯಲ್ಲಿ ವಿವರಗಳನ್ನು ಓದಿರಿ). ರಾಜಶಾಸನವು ಅನುಲ್ಲಂಘನೀಯ ಎಂದು ಪ್ರಜೆಗಳಿಗೆ ಬೋಧಿಸುವುದಷ್ಟೇ ಇಲ್ಲಿಯ ಉದ್ದೇಶ.

तपत्यादित्यवच्चैष चक्षूंषि च मनांसि च ।
न चैनं भुवि शक्नोति कश्चिदप्यभिवीक्षितुम् ॥६॥
**ತಪತ್ಯಾದಿತ್ಯವಚ್ಚೈಷ ಚಕ್ಷೂಂಷಿ ಚ ಮನಾಂಸಿ ಚ ।**
**ನ ಚೈನಂ ಭುವಿ ಶಕ್ನೋತಿ ಕಶ್ಚಿದಪ್ಯಭಿವೀಕ್ಷಿತುಮ್ ॥೬॥**

೬. ಅವನು ಸೂರ್ಯನಂತೆ ನೋಡುವವರ ಕಣ್ಮನಗಳನ್ನು ಕುಕ್ಕುತ್ತಾನೆ. (ಆದ್ದರಿಂದ ಭೂಮಿಯ ಮೇಲಿರುವ ಯಾವನೂ ಅವನನ್ನು ದಿಟ್ಟಿಸಿ ನೋಡಲಾರ.

೬. ಸೂರ್ಯನ ಕಿರಣಗಳು ಪ್ರಖರವಾಗಿರುವುದರಿಂದ ಜನರು ಅವನನ್ನು ದಿಟ್ಟಿಸಿ ನೋಡಲಾರರು; ಹಾಗೇ ರಾಜನಿಗೆ ಅಪಾರವಾದ ದಂಡಶಕ್ತಿ ಇರುವುದರಿಂದ ಪ್ರಜೆಗಳು ಅವನ ಮುಖವನ್ನು ನೇರವಾಗಿ ನೋಡಲಾರರು. ದಂಡಶಕ್ತಿಯಿಂದ ಭಯ, ಭಯದಿಂದ ಭಕ್ತಿ, ಭಕ್ತಿಯಿಂದ ವಿಧೇಯತೆ ಅವರಲ್ಲಿ ಉಂಟಾಗುತ್ತದೆ.

सोऽग्निर्भवति वायुश्च सोऽर्कः सोमः स धर्मराट्।
स कुबेरः स वरुणः स महेन्द्रः प्रभावतः ॥७॥
ಸೋಽಗ್ನಿರ್ಭವತಿ ವಾಯುಶ್ಚ ಸೋಽರ್ಕಃ ಸೋಮಃ ಸ ಧರ್ಮರಾಟ್ ।
ಸ ಕುಬೇರಃ ಸ ವರುಣಃ ಸ ಮಹೇಂದ್ರಃ ಪ್ರಭಾವತಃ ॥೭॥

೭. ಅವನು (ತನ್ನ) ಪ್ರಭಾವದಲ್ಲಿ ಅಗ್ನಿ, ವಾಯು, ಸೂರ್ಯ, ಚಂದ್ರ, ಯಮ, ಕುಬೇರ, ಮಹೇಂದ್ರ!

೭. ದೇವಾಂಶಸಂಭೂತನೆಂದು ಪ್ರಜೆಗಳು ಗ್ರಹಿಸಿರುವುದರಿಂದ ಅವನಲ್ಲಿ ದೇವತಾಪ್ರಭಾವವಿದೆಯೆಂದು ಅವರು ನಂಬಿ, ಅವನ ಆಜ್ಞೆಗಳನ್ನು ಪಾಲಿಸುತ್ತಾರೆ. ದೇವತಾಮೂಲವೆಂದು ನಂಬಿದ ಯಾವ ಅಧಿಕಾರಕ್ಕೂ ಜನರು ಕೊನೆಯ ತನಕ ವಿಧೇಯರಾಗಿ ವರ್ತಿಸುವರು ಎಂಬುದು ಮನುವಿನ ಸಮಾಜಮನೋವಿಜ್ಞಾನ.

बालोऽपि नावमन्तव्यो मनुष्य इति भूमिपः ।
महती देवता ह्येषा नररूपेण तिष्ठति ॥८॥
**ಬಾಲೋಽಪಿ ನಾವಮಂತವ್ಯೋ ಮನುಷ್ಯ ಇತಿ ಭೂಮಿಪಃ ।**
**ಮಹತೀ ದೇವತಾ ಹ್ಯೇಷಾ ನರರೂಪೇಣ ತಿಷ್ಠತಿ ॥೮॥**

೮. ರಾಜನು ಮನುಷ್ಯನೆಂದು ತಿಳಿದು ಬಾಲಕನಾಗಿದ್ದರೂ ಅವನನ್ನು ಅಪಮಾನಿಸಬಾರದು; ಏಕೆಂದರೆ, ಅವನು (ಮನುಷ್ಯನಲ್ಲ) ಮನುಷ್ಯ ರೂಪದಲ್ಲಿರುವ ಒಂದು ದೊಡ್ಡ ದೇವತೆಯೇ ಸರಿ.

೮. ರಾಜನು ದೇವತಾಶಕ್ತಿಗಳ ಮೂರ್ತಸ್ವರೂಪ; ಆದ್ದರಿಂದ ಅವನೊಮ್ಮೆ ಚಿಕ್ಕವನಾಗಿದ್ದರೂ ಅವನಿಗೆ ಅಪಮಾನ ಮಾಡಬಾರದು. ಅವನ ಅಪಮಾನವೆಂದರೆ ದೇವತೆಗಳ ಅಪಮಾನವೇ ಸರಿ. ಅವನಿಲ್ಲಿ 'ಮನುಷ್ಯ'ನೆಂದು ಸ್ಪಷ್ಟಪಡಿಸಿರುವುದು ಹಿಂದೆ ಹೇಳಿದ ವಿವರಣೆಯನ್ನು ಸಮರ್ಥಿಸುತ್ತದೆ.

एकमेव दहत्यग्निर्नरं दुरूपसर्पिणम् ।
कुलं दहति राजाग्निः सपशुद्रव्यसंचयम् ॥९॥
ಏಕಮೇವ ದಹತ್ಯಗ್ನಿರ್ನರಂ ದುರುಪಸರ್ಪಿಣಮ್।
ಕುಲಂ ದಹತಿ ರಾಜಾಗ್ನಿಃ ಸಪಶುದ್ರವ್ಯಸಂಚಯಮ್ ॥೯॥

೯. ಬೆಂಕಿಯು ಅಜಾಗರೂಕತೆಯಿಂದ ತನ್ನ ಬಳಿಗೆ ಬರುವ ಒಬ್ಬನನ್ನು ಮಾತ್ರ ಸುಡುತ್ತದೆ. ಆದರೆ ರಾಜನೆಂಬ ಬೆಂಕಿಯು ದನಕರುಧನಧಾನ್ಯಾದಿ ಸಂಪತ್ತಿನೊಡನೆ ಅವನ (ಅಪರಾಧಿಯ) ವಂಶವನ್ನೇ ನಾಶಮಾಡುತ್ತದೆ.

೯. अग्नितोऽपि राजा दाहशक्तौ विशिष्टतरः (नं) ಬೆಂಕಿಗಿಂತ ರಾಜನ ಕೋಪ ಹೆಚ್ಚು ಹಾನಿಕರ (ವ್ಯತಿರೇಕಾಲಂಕಾರ). ಈ ಶ್ಲೋಕವೂ ಹಿಂದಿನವುಗಳಂತೆಯೇ ಪ್ರಜೆಗಳಲ್ಲಿ ಕಾಯದೆ ಬದ್ಧ ವರ್ತನೆಯ ಬಗ್ಗೆ ನಂಬಿಗೆಯನ್ನು ದೃಢಪಡಿಸಲು ಹೇಳಿದ್ದು.

कार्यं सोऽवेक्ष्य शक्तिं च देशकलौ च तत्त्वतः ।
कुरूते धर्मसिद्ध्यर्थं विश्वरूपं पुनः पुनः ॥१०॥
**ಕಾರ್ಯಂ ಸೋಽವೇಕ್ಷ್ಯ ಶಕ್ತಿಂ ಚ ದೇಶಕಾಲೌ ಚ ತತ್ತ್ವತಃ ।**
**ಕುರುತೇ ಧರ್ಮಸಿದ್ಧ್ಯರ್ಥಂ ವಿಶ್ವರೂಪಂ ಪುನಃ ಪುನಃ ॥೧೦॥**

೧೦. ಅವನು ತನ್ನ ಕರ್ತವ್ಯವನ್ನೂ ಶಕ್ತಿಯನ್ನೂ ದೇಶಕಾಲಗಳನ್ನೂ ಸರಿಯಾಗಿ ವಿಮರ್ಶಿಸಿ ರಾಜಕಾರ್ಯದ ಸಿದ್ಧಿಗಾಗಿ ಮತ್ತೆ ಮತ್ತೆ ಅನೇಕ ರೂಪಗಳನ್ನು ತಾಳುತ್ತಾನೆ.

೧೦. ರಾಜನು ದುರ್ಬಲನಾದಾಗ ಅಪರಾಧಿಯನ್ನು ಕ್ಷಮಿಸುತ್ತಾನೆ: ಶಕ್ತನಾಗಿರುವಾಗ ಶಿಕ್ಷಿಸುತ್ತಾನೆ; ತನ್ನ ಉದ್ದೇಶಾನುಸಾರವಾಗಿ ಅವನು ಬೇರೆ ಬೇರೆ ದೇಶಕಾಲಗಳಲ್ಲಿ ಶತ್ರು, ಮಿತ್ರ ಅಥವಾ ಉದಾಸೀನನಾಗಿರುತ್ತಾನೆ. ಹೀಗಿರುವಾಗ ತಾನು ರಾಜನಿಗೆ ಬೇಕಾದವನೆಂಬ ಭ್ರಮೆಯಿಂದ ಯಾರೂ ಅವನನ್ನು ಕಡೆಗಣಿಸಿ ಮನಬಂದಂತೆ ವರ್ತಿಸಬಾರದು–ಎಂಬುದು ಕುಲ್ಲೂಕಾದಿಗಳ ವಿವರಣೆ. ಇದು 'ರಾಜ್ಞಾಂ ಮಿತ್ರಂ ಕೇನ ದೃಷ್ಟಂ ಶ್ರುತಂ ವಾ' ಎಂಬ ಸುಭಾಷಿತವನ್ನು ದೃಢಪಡಿಸುತ್ತದೆ.

यस्य प्रसादे पद्मा श्रीर्विजयश्च पराक्रमे ।
मृत्युश्च वसति क्रोधे सर्वतेजोमयो हि सः ॥११॥

**ಯಸ್ಯ ಪ್ರಸಾದೇ ಪದ್ಮಾಶ್ರೀರ್ವಿಜಯಶ್ಚ ಪರಾಕ್ರಮೇ ।**
**ಮೃತ್ಯುಶ್ಚ ವಸತಿ ಕ್ರೋಧೇ ಸರ್ವತೇಜೋಮಯೋ ಹಿ ಸಃ ॥೧೧॥**

೧೧. ರಾಜನ ಪ್ರಸನ್ನತೆಯಲ್ಲಿ ಮಹಾಲಕ್ಷ್ಮಿ ನೆಲೆಸಿದ್ದಾಳೆ; ಅವನ ಪರಾಕ್ರಮದಲ್ಲಿ ಗೆಲುವು ನೆಲೆನಿಂತಿದೆ; ಅವನ ಸಿಟ್ಟಿನಲ್ಲಿ ಮೃತ್ಯು ಕುಳಿತಿದೆ. ಆದ್ದರಿಂದ ಅವನು ಸರ್ವ (ದೇವತಾ) ಶಕ್ತಿ ಸಂಪನ್ನನಾಗಿರುತ್ತಾನೆ.

೧೧. ಹಣದಾಸೆಯುಳ್ಳವನು, ಹಗೆಯ ನಾಶವನ್ನು ಬಯಸುವವನು ಮತ್ತು ಜೀವಿಸಿರ ಬಯಸುವವನು ರಾಜನ ಸೇವೆ ಮಾಡಬೇಕು; ಅವನ ವಿರುದ್ಧ ಹೋಗಬಾರದು–ಏಕೆಂದರೆ, ಅವನಲ್ಲಿ ದೇವತಾಶಕ್ತಿ ಅಡಗಿದೆ.

तं यस्तु द्वेष्टि संमोहात्स विनश्यत्यसंशयम् ।
तस्य ह्याशु विनाशाय राजा प्रकुरूते मनः ॥१२॥

**ತಂ ಯಸ್ತು ದ್ವೇಷ್ಟಿ ಸಂಮೋಹಾತ್ಸ ವಿನಶ್ಯತ್ಯಸಂಶಯಮ್ ।**
**ತಸ್ಯ ಹ್ಯಾಶು ವಿನಾಶಾಯ ರಾಜಾ ಪ್ರಕುರತೇ ಮನಃ ॥೧೨॥**

೧೨. ಅಜ್ಞಾನದಿಂದ ರಾಜನನ್ನು ದ್ವೇಷಿಸುವವನು ನಿಃಸಂದೇಹವಾಗಿ ನಾಶವಾಗುತ್ತಾನೆ; ಏಕೆಂದರೆ, ಅವನ ನಾಶಕ್ಕಾಗಿ ರಾಜನು ಕೂಡಲೇ ಸಂಕಲ್ಪಿಸುತ್ತಾನೆ.

೧೨. द्वेष्टि – प्रातिकूल्येन वर्तते (में); अप्रीतिमुत्पादयति (कुं) – ರಾಜನಿಗೆ ಪ್ರತಿಕೂಲವಾಗಿ ವರ್ತಿಸುವವನು–ಎಂದು ತಾತ್ಪರ್ಯ.

तस्माद्धर्मं यमिष्टेषु स व्यवस्येन्नराधिपः ।
अनिष्टं चाप्यनिष्टेषु तं धर्मं न विचालयेत् ॥१३॥

**ತಸ್ಮಾದ್ಧರ್ಮಂ ಯಮಿಷ್ಟೇಷು ಸ ವ್ಯವಸ್ಯೇನ್ನರಾಧಿಪಃ ।**
**ಅನಿಷ್ಟಂ ಚಾಪ್ಯನಿಷ್ಟೇಷು ತಂ ಧರ್ಮಂ ನ ವಿಚಾಲಯೇತ್ ॥೧೩॥**

೧೩. ಆದುದರಿಂದ ಅಂಥ ರಾಜನು ತನ್ನ ಇಷ್ಟಕಾರ್ಯಗಳ ಬಗೆಗೆ ಮಾಡುವ ನಿಯಮವನ್ನೂ ಇಷ್ಟಕ್ಕೆ ಬಾರದ ಕಾರ್ಯಗಳ ಬಗೆಗೆ ಮಾಡುವ ಅನಿಷ್ಟವಾದ ನಿಯಮವನ್ನೂ (ಪ್ರಜೆಗಳು) ಉಲ್ಲಂಘಿಸಬಾರದು.

೧೩. 'ಈ ದಿನ ಮಂತ್ರಿಯ ಮನೆಯಲ್ಲಿ ಮದುವೆಯಿರುವುದರಿಂದ ಎಲ್ಲರೂ ಉತ್ಸವವನ್ನು ಆಚರಿಸಬೇಕು' ಅಥವಾ 'ಈ ಮನುಷ್ಯನು ಪಾತಕಿಯಾದುದರಿಂದ ಯಾರೂ ಇವನಿಗೆ ಮನೆಯಲ್ಲಿ ಪ್ರವೇಶಕೊಡಲಾಗದು' ಎಂಬಂತಹ ಆಜ್ಞೆಗಳನ್ನು ರಾಜನು ಮಾಡಿದಾಗ ಪ್ರಜೆಗಳು ಅವನ್ನು ಪಾಲಿಸಬೇಕು– ಎಂದು ಮೇಧಾತಿಥಿ ವಿವರಿಸಿದ್ದಾನೆ. ಇದರಲ್ಲಿ ಮೊದಲನೆಯದು 'ಇಷ್ಟ' ಶಾಸನಕ್ಕೂ ಎರಡನೆಯದು 'ಅನಿಷ್ಟ' ಶಾಸನಕ್ಕೂ ಉದಾಹರಣೆಗಳು. ಇಷ್ಟಾನಿಷ್ಟಗಳೆಂದರಿಲ್ಲಿ ವಿಧಿ–ನಿಷೇಧ–ಗಳೆಂದು ತಾತ್ಪರ್ಯವಿದ್ದಂತಿದೆ.

तस्यार्थे सर्वभूतानां गोप्तारं धर्ममात्मजम् ।
ब्रह्मतेजोमयं दण्डमसृजत्पूर्वमीश्वरः ॥१४॥

**ತಸ್ಯಾರ್ಥೇ ಸರ್ವಭೂತಾನಾಂ ಗೋಪ್ತಾರಂ ಧರ್ಮಮಾತ್ಮಜಮ್।**
**ಬ್ರಹ್ಮತೇಜೋಮಯಂ ದಂಡಮಸೃಜತ್ಪೂರ್ವಮೀಶ್ವರಃ ॥೧೪॥**

೧೪. ಹಿಂದೆ ಬ್ರಹ್ಮನು ಅವನಿಗಾಗಿ ಬ್ರಹ್ಮತೇಜೋಮಯವಾದ, ಸ್ವಸುತ ರೂಪದ, ಎಲ್ಲ ಜೀವಿಗಳಿಗೂ ರಕ್ಷಕವಾದ, ಧರ್ಮಸ್ವರೂಪದ ದಂಡವನ್ನು ಸೃಷ್ಟಿಸಿದನು.

೧೪. ದಂಡವು ಮೂರ್ತಿಮತ್ತಾದ ಧರ್ಮವೇ; ಏಕೆಂದರೆ, ಅದರಿಂದ ಪ್ರಜಾರಕ್ಷಣೆಯಾಗುವುದು. ಬ್ರಹ್ಮನಿಂದ ಹುಟ್ಟಿದ್ದರಿಂದ ಅದು ಬ್ರಹ್ಮನ ಮಗನಂತೆಯೇ!

न च अयं प्राणधनहारित्वादधमो विज्ञेयः (में) ಪ್ರಜೆಗಳ ವಿತ್ತಜೀವಿತಗಳಿಗೆ ಹಾನಿಯುಂಟುಮಾಡುವುದೆಂದು ಅದನ್ನು ಕೀಳ್ಗಳೆಯಬಾರದು.

तस्य सर्वाणि भूतानि स्थावराणि चराणि च ।
भयाद्भोगाय कल्पन्ते स्वधर्मान्न चलन्ति च ॥१५॥

**ತಸ್ಯ ಸರ್ವಾಣಿ ಭೂತಾನಿ ಸ್ಥಾವರಾಣಿ ಚರಾಣಿ ಚ।**
**ಭಯಾದ್ಭೋಗಾಯ ಕಲ್ಪಂತೇ ಸ್ವಧರ್ಮಾನ್ನ ಚಲಂತಿ ಚ ॥೧೫॥**

೧೫. ಅದರ (ದಂಡದ) ಭಯದಿಂದ ಚರಾಚರ ಜೀವಜಾತಗಳು ಭೋಗ ಯೋಗ್ಯವಾಗುತ್ತವೆ ಮತ್ತು ಅವು ತಮ್ಮ ತಮ್ಮ ಕರ್ತವ್ಯಗಳಿಂದ ಚ್ಯುತವಾಗುವುದಿಲ್ಲ.

೧೫. ದಂಡದ ಭಯವಿಲ್ಲದೆ ಹೋದರೆ, ಮಾತ್ಸ್ಯನ್ಯಾಯದಂತೆ, ದುರ್ಬಲನನ್ನು ಬಲಿಷ್ಠನು ಪೀಡಿಸುತ್ತಾನೆ ಮತ್ತು ಆ ಬಲಿಷ್ಠನಿಗಿಂತ ಹೆಚ್ಚು ಸಮರ್ಥನಾದವನು ಅವನನ್ನು ಪೀಡಿಸುತ್ತಾನೆ. ದಂಡಭಯವಿದ್ದರೆ ಯಾರೂ ಇಂತಹ ವರ್ತನೆಗಿಳಿಯುವುದಿಲ್ಲ; ಆದ್ದರಿಂದ ಎಲ್ಲರೂ ಸುಖವಾಗಿರುತ್ತಾರೆ.

तं देशकालौ शक्तिं च विद्यां चावेक्ष्य तत्त्वतः ।
यथार्हतः संप्रणयेन्नरेष्वन्यायवर्तिषु ॥१६॥

**ತಂ ದೇಶಕಾಲೌ ಶಕ್ತಿಂ ಚ ವಿದ್ಯಾಂ ಚಾವೇಕ್ಷ್ಯ ತತ್ತ್ವತಃ ।**
**ಯಥಾರ್ಹತಃ ಸಂಪ್ರಣಯೇನ್ನರೇಷ್ವನ್ಯಾಯವರ್ತಿಷು ॥೧೬॥**

೧೬. ದೇಶ, ಕಾಲ, (ತನ್ನ) ದಂಡಶಕ್ತಿ ಮತ್ತು ಔಚಿತ್ಯಗಳನ್ನು ಸರಿಯಾಗಿ ಅರಿತುಕೊಂಡು, ಅನ್ಯಾಯದಿಂದ ವರ್ತಿಸುವವರಿಗೆ, ರಾಜನು ತಕ್ಕಂತೆ ಶಿಕ್ಷೆಯನ್ನು ವಿಧಿಸಬೇಕು.

೧೬. शक्ति – ಅಪರಾಧಿಯ ಸಾಮರ್ಥ್ಯ (ಅಥವಾ ದುರ್ಬಲತೆ).

विद्या–ಯಾವ ಅಪರಾಧಕ್ಕೆ ಯಾವ ಶಿಕ್ಷೆ ಯೋಗ್ಯ ಎಂಬುದರ ಜ್ಞಾನ.

स राजा पुरुषो दण्डः स नेता शासिता च सः ।
चतुर्णामाश्रमाणां च धर्मस्य प्रतिभूः स्मृतः ॥१७॥

**ಸ ರಾಜಾ ಪುರುಷೋ ದಂಡಃ ಸ ನೇತಾ ಶಾಸಿತಾ ಚ ಸಃ ।**
**ಚತುರ್ಣಾಮಾಶ್ರಮಾಣಾಂಚ ಧರ್ಮಸ್ಯ ಪ್ರತಿಭೂಃ ಸ್ಮೃತಃ ॥೧೭॥**

೧೭. ಆ ದಂಡವೇ ಪೌರುಷ; ಆ ದಂಡವೇ ರಾಜ; ಅದೇ ನಾಯಕ ಹಾಗೂ ಶಾಸಕ; ನಾಲ್ಕು ಆಶ್ರಮಗಳ ಧರ್ಮಕ್ಕೆ ಅದೇ ಭದ್ರತೆ ಕೊಡತಕ್ಕದ್ದು ಎಂದು ಹೇಳಲಾಗಿದೆ.

೧೭. ಆ ದಂಡವೇ ರಾಜ; ಏಕೆಂದರೆ, ಅದು ಪ್ರಜೆಗೆ ಸುಖವನ್ನುಂಟು ಮಾಡುತ್ತದೆ (राजा प्रजारञ्जनलब्धवर्णः रघुवंश ६ – २१).

धर्मस्य प्रतिभूः ನಾಲ್ಕೂ ವರ್ಣಾಶ್ರಮ ಧರ್ಮಗಳ ಆಚರಣೆಗೆ ಭದ್ರತೆ ಅಥವಾ ಜಾಮೀನಿದ್ದಂತೆ.

दण्डः शास्ति प्रजाः सर्वा दण्ड एवाभिरक्षति ।
दण्डः सुप्तेषु जागर्ति दण्डं धर्मं विदुर्बुधाः ॥१८॥
**ದಂಡಃ ಶಾಸ್ತಿ ಪ್ರಜಾಃ ಸರ್ವಾ ದಂಡ ಏವಾಭಿರಕ್ಷತಿ।**
**ದಂಡಃ ಸುಪ್ತೇಷು ಜಾಗರ್ತಿ ದಂಡಂ ಧರ್ಮಂ ವಿದುರ್ಬುಧಾಃ ॥೧೮॥**

೧೮. ದಂಡವು ಪ್ರಜೆಗಳನ್ನೆಲ್ಲ ಆಳುತ್ತದೆ; ದಂಡವೇ ಅವರನ್ನು ಕಾಯುತ್ತದೆ; ಜನರು ನಿದ್ರಿಸುತ್ತಿರುವಾಗಲೂ ದಂಡವು ಎಚ್ಚರವಾಗಿರುತ್ತದೆ. ಆದ್ದರಿಂದ ವಿದ್ವಾಂಸರು ದಂಡವನ್ನೇ ಧರ್ಮವೆಂದು ತಿಳಿಯುತ್ತಾರೆ.

೧೮. सुप्तेषु जागर्ति – ದಂಡದ ಭಯವಿರುವುದರಿಂದ ಕಳ್ಳರು ಇರುಳಲ್ಲಿ ಕೂಡ ಕಳವು ಮಾಡಲು ಸಹಜವಾಗಿ ಹೊರಡರು.

दण्डं धर्मं बिदुः ದಂಡವು ಧರ್ಮಕ್ಕೆ ಮುಖ್ಯಾಧಾರ; ಆದ್ದರಿಂದ ದಂಡ–ಧರ್ಮಗಳಲ್ಲಿ ಅಭೇದವನ್ನು ಆರೋಪಿಸಲಾಗಿದೆ (आयुर्घृतम् ಎನ್ನುವಂತೆ).

समीक्ष्य स धृतः सम्यक्सर्वा रञ्जयति प्रजाः ।
असमीक्ष्य प्रणीतस्तु विनाशयति सर्वतः ॥१९॥
**ಸಮೀಕ್ಷ್ಯ ಸ ಧೃತಃ ಸಮ್ಯಕ್ ಸರ್ವಾ ರಂಜಯತಿ ಪ್ರಜಾಃ ।**
**ಅಸಮೀಕ್ಷ್ಯ ಪ್ರಣೀತಸ್ತು ವಿನಾಶಯತಿ ಸರ್ವತಃ ॥೧೯॥**

೧೯. ಸಮಗ್ರವಾಗಿ ಪರ್ಯಾಲೋಚಿಸಿ ಸರಿಯಾಗಿ ವಿಧಿಸಿದ ದಂಡವು ಎಲ್ಲ ಪ್ರಜೆಗಳಲ್ಲಿ ರಾಜನ ಬಗ್ಗೆ ಪ್ರೀತಿ ಹುಟ್ಟಿಸುತ್ತದೆ. ಅವಿಚಾರದಿಂದ ವಿಧಿಸಿದ ದಂಡವು ಎಲ್ಲವನ್ನೂ ನಾಶಮಾಡುತ್ತದೆ.

೧೯. समीक्ष्य– ರಾಜನೀತಿಶಾಸ್ತ್ರಾನುಸಾರ ಸಂಪೂರ್ಣ ವಿಚಾರ ಮಾಡಿ.

यदि न प्रणयेद्राजा दण्डं दण्डयेष्वतन्द्रितः ।
शूले मत्स्यानिवपक्ष्यन्दुर्बलान्बलवत्तराः ॥२०॥
**ಯದಿ ನ ಪ್ರಣಯೇದ್ರಾಜಾ ದಂಡಂ ದಂಡ್ಯೇಷ್ವತಂದ್ರಿತಃ ।**
**ಶೂಲೇ ಮತ್ಸ್ಯಾನಿವಾಪಕ್ಷ್ಯನ್ ದುರ್ಬಲಾನ್ ಬಲವತ್ತರಾಃ ॥೨೦॥**

೨೦. ರಾಜನು ಆಲಸ್ಯರಹಿತನಾಗಿ ದಂಡಾರ್ಹರ ಮೇಲೆ ದಂಡಪ್ರಯೋಗವನ್ನು ಮಾಡದಿದ್ದರೆ, ಮೀನುಗಳನ್ನು ಶೂಲಗಳಲ್ಲಿ ಚುಚ್ಚಿ ಸುಡುವಂತೆ ಬಲಿಷ್ಠರು ದುರ್ಬಲರನ್ನು ಪೀಡಿಸಿಯಾರು.

೨೦. शूले मत्स्यान् इव – ಮೀನು ದುರ್ಬಲ ಪ್ರಾಣಿ. ಆದ್ದರಿಂದ ಅದನ್ನು ಹಿಡಿದು ಶೂಲಕ್ಕೆ ಚುಚ್ಚಿ ಬೆಂಕಿಯಲ್ಲಿ ಸುಡುತ್ತಾರೆ. ದಂಡದ ಭಯವಿಲ್ಲದಿದ್ದರೆ ಈ ಪ್ರಕಾರ ಬಲಿಷ್ಠರು ದುರ್ಬಲರನ್ನು ಹಿಂಸಿಸುವ ಸಾಧ್ಯತೆ ಇದೆ.

अद्यात्काकः पुरोडाशं श्वा च लिह्याद्धविस्तथा ।
स्वाम्यं च न स्यात्कस्मिंश्चित्प्रवर्तेताधरोत्तरम् ॥२१॥
**ಅದ್ಯಾತ್ಕಾಕಃ ಪುರೋಡಾಶಂ ಶ್ವಾ ಚ ಲಿಹ್ಯಾದ್ಧವಿಸ್ತಥಾ ।**
**ಸ್ವಾಮ್ಯಂ ಚ ನ ಸ್ಯಾತ್ಕಸ್ಮಿಂಶ್ಚಿತ್ಪ್ರವರ್ತೇತಾಧರೋತ್ತರಮ್ ॥೨೧॥**

೨೧. ರಾಜದಂಡದ ಭಯವಿಲ್ಲದಿದ್ದರೆ ಕಾಗೆ ಪುರೋಡಾಶವನ್ನು ತಿನ್ನಬಹುದು. ಮತ್ತು ನಾಯಿ ಹವಿಸ್ಸನ್ನು ನೆಕ್ಕಬಹುದು; ಯಾವ ವಸ್ತುವಿನ ಮೇಲೂ ಯಾರ ಒಡೆಯತನವೂ ಉಳಿಯಲಾರದು, (ಹೀಗೆ) ಮೇಲುಕೀಳಿನ ವ್ಯವಸ್ಥೆ ತಲೆಕೆಳಗಾದೀತು.

೨೧. ಪುರೋಡಾಶ ಹಾಗೂ ಹವಿಸ್ಸು, ಯಜ್ಞದ ಆಹುತಿಗಳಾದುದರಿಂದ ಕಾಗೆ–ನಾಯಿಗಳ ಸ್ಪರ್ಶ ಅವುಗಳಿಗಾಗಬಾರದು. ಆದರೆ ಅವ್ಯವಸ್ಥೆಯಾದಾಗ ಎಲ್ಲವೂ ತಿರುವು–ಮುರುವು ಆಗುವುದು. ಪುರೋಡಾಶ–ದೇವತೆಗಳಿಗೆ ಯಜ್ಞದಲ್ಲಿ ಅರ್ಪಿಸಲು ಹಿಟ್ಟಿನಿಂದ ಮಾಡಿದ ನೈವೇದ್ಯ.

सर्वो दण्डजितो लोको दुर्लभो हि शुचिर्नरः ।
दण्डस्य हि भयात्सर्वं जगद्भोगाय कल्पते ॥२२॥
**ಸರ್ವೋ ದಂಡಜಿತೋ ಲೋಕೋ ದುರ್ಲಭೋ ಹಿ ಶುಚಿರ್ನರಃ ।**
**ದಂಡಸ್ಯ ಹಿ ಭಯಾತ್ ಸರ್ವಂ ಜಗದ್ಭೋಗಾಯ ಕಲ್ಪತೇ ॥ ೨೨ ॥**

೨೨. ಎಲ್ಲರೂ ದಂಡಕ್ಕೆ ಬಗ್ಗುವವರೇ; ಶುದ್ಧಶೀಲನಾದ ಮನುಷ್ಯನು ದುರ್ಲಭ. ದಂಡದ ಭಯದಿಂದಲೇ ಜಗತ್ತು ಭೋಗಯೋಗ್ಯವಾಗುತ್ತದೆ.

೨೨. ಶಾಸನದ (ದಂಡದ) ಭಯದಿಂದ ಮನುಷ್ಯನು ಹೀನಕೃತ್ಯಗಳನ್ನು ಮಾಡುವುದಿಲ್ಲ. ಸ್ವಭಾವತಃ ಮನುಷ್ಯನು ಅಶುದ್ಧನು.

देवदानवगन्धर्वा रक्षांसि पतगोरगः ।
तेऽपि भोगाय कल्पन्ते दण्डेनैव निपीडिताः ॥ २३ ॥
**ದೇವದಾನವಗಂಧರ್ವಾ ರಕ್ಷಾಂಸಿ ಪತಗೋರಗಾಃ ।**
**ತೇಽಪಿ ಭೋಗಾಯ ಕಲ್ಪಂತೇ ದಂಡೇನೈವ ನಿಪೀಡಿತಾಃ ॥ ೨೩ ॥**

೨೩. ದೇವ, ದಾನವ, ಗಂಧರ್ವ, ರಾಕ್ಷಸ, ಹಕ್ಕಿ, ಹಾವುಗಳು ಕೂಡ (ಪರಮಾತ್ಮನ) ದಂಡಕ್ಕಂಜಿಯೇ ಭೋಗಯೋಗ್ಯರಾಗುತ್ತಾರೆ.

೨೩. ದೇವತೆಗಳು ಕೂಡ ಜಗದೊಡೆಯನಾದ ಪರಮಾತ್ಮನ ಭಯದಿಂದ ತಮ್ಮ ತಮ್ಮ ಕೆಲಸಗಳನ್ನು ಸರಿಯಾಗಿ ಮಾಡುತ್ತಾರೆ. ಹೋಲಿಸಿರಿ:

भीषाऽस्माद् वातः पवते भीषोदेति सूर्यः ।

भीषाऽस्माद् अग्निश्चेन्द्रश्च मृत्युर्धावति पञ्चमः ॥

–तैत्तिरीयोपनिषत् २–८–१.

दुष्येयुः सर्ववर्णाश्च भिद्येरन्सर्वसेतवः ।
सर्वलोकप्रकोपश्च भ्वेद्दण्डस्य विभ्रमात् ॥ २४ ॥

**ದುಷ್ಯೇಯುಃ ಸರ್ವವರ್ಣಾಶ್ಚ ಭಿದ್ಯೇರನ್ ಸರ್ವಸೇತವಃ ।**
**ಸರ್ವಲೋಕಪ್ರಕೋಪಶ್ಚ ಭವೇದ್ದಂಡಸ್ಯ ವಿಭ್ರಮಾತ್ ॥ ೨೪ ॥**

೨೪. ದಂಡದ ದುರುಪಯೋಗದಿಂದ ಎಲ್ಲ ವರ್ಣದವರೂ ಕೆಟ್ಟು ಹೋದಾರು, ಎಲ್ಲ ಕಟ್ಟುಗಳೂ ಒಡೆದು ಹೋದಾವು ಮತ್ತು ಎಲ್ಲೆಲ್ಲೂ ಜನಕ್ಷೋಭೆಯುಂಟಾದೀತು.

೨೪. ದಂಡದ ಅಭಾವ ಮತ್ತು ಅನುಚಿತ ಪ್ರಯೋಗವಾದರೆ ವರ್ಣಸಂಕರವಾಗುವುದು, ಶಾಸ್ತ್ರನಿಯಮಗಳ ಉಲ್ಲಂಘನೆಯಾಗುವುದು ಮತ್ತು ಸಮಾಜದಲ್ಲಿ ಅಶಾಂತಿ ಉದ್ಭವಿಸುವುದು. ವರ್ಣಗಳು ವೃತ್ತಿನಿಷ್ಠ ಎಲ್ಲರೂ ಎಲ್ಲ ಕೆಲಸಗಳನ್ನು ಮಾಡಹೋದರೆ ಅನಾರೋಗ್ಯಕರ ಸ್ಪರ್ಧೆಯುಂಟಾಗಿ ಎಲ್ಲರಿಗೂ ನಷ್ಟ ಸಂಭವಿಸುತ್ತದೆ.

यत्र श्यामो लोहिताक्षो दण्डश्चरति पापहा ।
प्रजास्तत्र न मुह्यन्ति नेता चेत्साधु पश्यति ॥ २४ ॥

**ಯತ್ರ ಶ್ಯಾಮೋ ಲೋಹಿತಾಕ್ಷೋ ದಂಡಶ್ಚರತಿ ಪಾಪಹಾ ।**
**ಪ್ರಜಾಸ್ತತ್ರನ ಮುಹ್ಯಂತಿ ನೇತಾ ಚೇತ್ಸಾಧು ಪಶ್ಯತಿ ॥ ೨೫ ॥**

೨೫. ಪಾಪಹರವಾದ ಕಾರೊಡಲ ಕೆಂಗಣ್ಣ ದಂಡವು ತಿರುಗುತ್ತಿರುವೆಡೆಯಲ್ಲಿ ಪ್ರಜೆಗಳು ತಪ್ಪು ಮಾಡರು; ರಾಜನು ಸರಿಯಾಗಿ ನೋಡಿ ದಂಡವನ್ನು ಪ್ರಯೋಗಿಸುವುದು ಅದಕ್ಕೆ ಅಗತ್ಯ.

೨೫. नेता चेत् साधु पश्यति – ರಾಜನು ಶಿಕ್ಷೆರಕ್ಷೆಗಳನ್ನು (ಉಚಿತವಾಗಿ) ಸರಿಯಾಗಿ ಮಾಡಿದರೆ,

तस्याहुः संप्रणेतारं राजानं सत्यवादिनम् ।
समीक्ष्यकारिणं प्राज्ञं धर्मकामार्थकोविदम् ॥ २३ ॥
**ತಸ್ಯಾಹುಃ ಸಂಪ್ರಣೇತಾರಂ ರಾಜಾನಂ ಸತ್ಯವಾದಿನಂ ।**
**ಸಮೀಕ್ಷ್ಯಕಾರಿಣಂ ಪ್ರಾಜ್ಞಂ ಧರ್ಮಕಾಮಾರ್ಥಕೋವಿದಂ ॥ ೨೬ ॥**

೨೬. ಸತ್ಯಭಾಷಿಯೂ ವಿಚಾರ ಮಾಡಿ ಕೆಲಸ ಮಾಡುವವನೂ ಬುದ್ಧಿವಂತನೂ ಧರ್ಮ, ಕಾಮ, ಅರ್ಥ (ಎಂಬ ಪುರುಷಾರ್ಥ)ಗಳನ್ನು ಬಲ್ಲವನೂ ಆದ ರಾಜನೇ ದಂಡವನ್ನು ವಿಧಿಸಬೇಕೆಂದು (ವಿದ್ವಾಂಸರು) ಹೇಳಿದ್ದಾರೆ.

೨೬. ಶಿಷ್ಟರಕ್ಷಣೆ ಮತ್ತು ದುಷ್ಟದಂಡನೆಗಳನ್ನು ಮಾಡಲು ಅರ್ಹನಾದ ರಾಜನ ಗುಣಗಳನ್ನು ಹೇಳಲಾಗಿದೆ.

तं राजा प्रणयन्सम्यक् त्रिवर्गेणाभिवर्धते ।
कामात्मा विषमः क्षुद्रो दण्डेनैव निहन्यते ॥ २७ ॥
**ತಂ ರಾಜಾ ಪ್ರಣಯನ್ ಸಮ್ಯಕ್ ತ್ರಿವರ್ಗೇಣಾಭಿವರ್ಧತೇ ।**
**ಕಾಮಾತ್ಮಾ ವಿಷಮಃ ಕ್ಷುದ್ರೋ ದಂಡೇನೈವ ನಿಹನ್ಯತೇ ॥೨೭ ॥**

೨೭. ಅಂಥ ದಂಡವನ್ನು ಸರಿಯಾಗಿ ವಿಧಿಸುವ ರಾಜನು ಧರ್ಮಾರ್ಥಕಾಮಗಳ ಸಿದ್ಧಿಯಿಂದ ಏಳಿಗೆ ಹೊಂದುತ್ತಾನೆ. (ಹಾಗಲ್ಲದೆ) ವಿಷಯಲಂಪಟನೂ (ಬಹುಬೇಗ) ಕೆರಳುವವನೂ ಅಲ್ಪನೂ ಆದರೆ, ಅಂಥ ರಾಜನು ಆ ದಂಡದಿಂದಲೇ ನಾಶ ಹೊಂದುತ್ತಾನೆ.

೨೭. ದಂಡವು ಸರಿಯಾಗಿ ಪ್ರಯುಕ್ತವಾಗದಿದ್ದರೆ (ದುರಾಡಳಿತ ನಡೆದರೆ) ಜನರಲ್ಲಿ ಕ್ಷೋಭೆಯುಂಟಾಗಿ ಮಂತ್ರಿ ಮೊದಲಾದವರ ಪ್ರಯತ್ನದಿಂದ ರಾಜನ ಅಧಿಕಾರ ಕೊನೆಗೊಳ್ಳುತ್ತದೆ.

दण्डो हि सुमहत्तेजो दुर्धरश्चाकृतात्मभिः ।
धर्माद्विचलितं हन्ति नृपमेव सबान्धवम् ॥ २८ ॥
**ದಂಡೋ ಹಿ ಸುಮಹತ್ತೇಜೋ ದುರ್ಧರಶ್ಚಾಕೃತಾತ್ಮಭಿಃ ।**
**ಧರ್ಮಾದ್ವಿಚಲಿತಂ ಹಂತಿ ನೃಪಮೇವ ಸ ಬಾಂಧವಮ್ ॥ ೨೮ ॥**

೨೮. ದಂಡವೆಂದರೊಂದು ಮಹಾತೇಜಸ್ಸು; ಆದ್ದರಿಂದಲೇ ಅಸಂಯಮಿಗಳದನ್ನು ಹಿಡಿಯಲಾರರು: ಧರ್ಮಭ್ರಷ್ಟ ರಾಜನನ್ನದು ಪರಿವಾರ ಸಮೇತ ನಾಶ ಮಾಡುತ್ತದೆ.

೨೮. अकृतात्मभि :– ಧರ್ಮಶಾಸ್ತ್ರದ ಸಂಸ್ಕಾರವಿಲ್ಲದ ಸ್ವೇಚ್ಛಾಚಾರಿಗಳಿಗೆ ದಂಡಪ್ರಯೋಗದ ತಿಳುವಳಿಕೆ ಬರುವುದು ಕಠಿನ; ಏಕೆಂದರೆ ಅದು ಬೆಂಕಿಯಂತಿದೆ. ದಂಡದ ದುರುಪಯೋಗದಿಂದ ರಾಜನಲ್ಲದೆ ಅವನ ಪುತ್ರ–ಬಾಂಧವಾದಿಗಳೂ ಹಾಳಾಗುತ್ತಾರೆ. ಅಪಪ್ರಶಾಸನ ನಡೆದರೆ ಜನರು ಸರಕಾರವನ್ನು ಉರುಳಿಸುತ್ತಾರೆ–ಎಂದರ್ಥ. ಶಿಕ್ಷೆ ರಕ್ಷೆಗಳನ್ನು ಮಾಡದಿರುವುದು ಮತ್ತು ತಪ್ಪಾಗಿ ಮಾಡುವುದು ಅಪಪ್ರಶಾಸನ (ದುರಾಡಳಿತ).

ततो दुर्गं च राष्ट्रं च लोकं च सचराचरम् ।
अन्तरिक्षगतांश्चैव मुनीन्देवांश्च पीडयेत् ॥ २९ ॥
**ತತೋ ದುರ್ಗಂ ಚ ರಾಷ್ಟ್ರಂಚ ಲೋಕಂ ಚ ಸಚರಾಚರಮ್ ।**
**ಅಂತರಿಕ್ಷಗತಾಂಶ್ಚೈವ ಮುನೀನ್ದೇವಾಂಶ್ಚ ಪೀಡಯೇತ್ ॥ ೨೯ ॥**

೨೯. ಆಮೇಲೆ ಅದು ಕೋಟೆ, ನಾಡು ಮತ್ತು ಚರಾಚರ ಜಗತ್ತನ್ನಷ್ಟೇ ಅಲ್ಲದೆ, ಅಂತರಿಕ್ಷದಲ್ಲಿರುವ ಮುನಿಗಳನ್ನೂ ದೇವತೆಗಳನ್ನೂ ಪೀಡಿಸೀತು !

೨೯. ದಂಡದ ದುರುಪಯೋಗವು ರಾಜನನ್ನು ಮತ್ತು ಅವನ ಬಳಗವನ್ನಲ್ಲದೆ ಎಲ್ಲರನ್ನೂ ಪೀಡಿಸುವುದು. ಸ್ವರ್ಗಸ್ಥರಾದ ಮುನಿಗಳಿಗೆ ಮತ್ತು ದೇವತೆಗಳಿಗೆ ಸಹ ಹವಿರ್ಭಾಗ ಸಿಗದೆ ತೊಂದರೆಯುಂಟಾಗುವುದು.

सोऽसहायेन मूढेन लुब्धेनाकृतबुद्धिना ।
न शक्यो न्यायतो नेतुं सक्तेन विषयेषु च ॥ ३० ॥
**ಸೋಽಸಹಾಯೇನ ಮೂಢೇನ ಲುಬ್ಧೇನಾಕೃತಬುದ್ಧಿನಾ ।**
**ನ ಶಕ್ಯೋ ನ್ಯಾಯತೋ ನೇತುಂ ಸಕ್ತೇನ ವಿಷಯೇಷು ಚ ॥ ೩೦ ॥**

೩೦. (ಮಂತ್ರಿ ಮೊದಲಾದವರ) ಬೆಂಬಲವಿಲ್ಲದವನೂ ಅಜ್ಞಾನಿಯೂ ಲೋಭಿಯೂ ಶಾಸ್ತ್ರನಿಶ್ಚಯವಿಲ್ಲದವನೂ ವಿಷಯಾಸಕ್ತನೂ ಆದ ರಾಜನು ದಂಡವನ್ನು ನ್ಯಾಯದಂತೆ ವಿಧಿಸಲು ಸಮರ್ಥನಾಗನು.

೩೦. अकृतबुद्धि :– ಶಾಸ್ತ್ರದ ಅಭ್ಯಾಸದಿಂದ ಬರುವ ನಿಶ್ಚಯ ಬುದ್ಧಿ ಇಲ್ಲದವನು.

असहायेन – मन्त्रि=सेनापतिपुरोहितादिसहायरहितेन (कु० )– ಮಂತ್ರಿ ಪುರೋಹಿತಾದಿಗಳ ಬೆಂಬಲವಿಲ್ಲದ (ರಾಜನಿಂದ).

शुचिना सत्यसंधेन यथाशास्त्रानुसारिणा ।
प्रणेतुं शक्यते दण्डः सुसहायेन धीमता ॥ ३१ ॥
**ಶುಚಿನಾ ಸತ್ಯಸಂಧೇನ ಯಥಾಶಾಸ್ತ್ರಾನುಸಾರಿಣಾ ।**
**ಪ್ರಣೇತುಂ ಶಕ್ಯತೇ ದಂಡಃ ಸುಸಹಾಯೇನ ಧಿಮತಾ ॥ ೩೧ ॥**

೩೧. ಶುದ್ಧನೂ ಸತ್ಯಸಂಧನೂ ಶಾಸ್ತ್ರದಂತೆ ನಡೆದುಕೊಳ್ಳುವವನೂ ಒಳ್ಳೆಯ ಬೆಂಬಲವುಳ್ಳವನೂ ಬುದ್ಧಿವಂತನೂ ಆದ ರಾಜನು ದಂಡವನ್ನು ವಿಧಿಸಲು ಸಮರ್ಥ.

೩೧. सत्यसन्ध – ಸತ್ಯವೇ ಮುಖ್ಯವೆಂದು ತಿಳಿಯುವವನು (ಮೇ.); ಕೊಟ್ಟ ವಚನವನ್ನು ಪಾಲಿಸುವವನು (ಗೋ.ಗು.ರಾಘು).

स्वराष्ट्रे न्यायवृत्तः स्याद्भृशदण्डश्च शत्रुषु ।
सुहृत्स्वजिह्मः स्निग्धेषु ब्राह्मणेषु क्षमान्वितः ॥ ३२ ॥
**ಸ್ವರಾಷ್ಟ್ರೇ ನ್ಯಾಯವೃತ್ತಃ ಸ್ಯಾದ್ಭೃಶದಂಡಶ್ಚ ಶತ್ರುಷು ।**
**ಸುಹೃತ್ಸ್ವಜಿಹ್ಮಃ ಸ್ನಿಗ್ಧೇಷು ಬ್ರಾಹ್ಮಣೇಷು ಕ್ಷಮಾನ್ವಿತಃ ॥ ೩೨ ॥**

೩೨. ರಾಜನು ತನ್ನ ರಾಜ್ಯದಲ್ಲಿ ನ್ಯಾಯದಿಂದ ನಡೆಯಬೇಕು, ಹಗೆಗಳ ಮೇಲೆ ತೀಕ್ಷ್ಣವಾಗಿ ದಂಡಪ್ರಯೋಗ ಮಾಡುವವನಾಗಿರಬೇಕು, ಪ್ರಿಯ ಮಿತ್ರರಲ್ಲಿ ನೇರ್ನಡೆಯುಳ್ಳವನಾಗಿರಬೇಕು ಮತ್ತು ಬ್ರಾಹ್ಮಣರಲ್ಲಿ ಕ್ಷಮಾವಂತನಾಗಿರಬೇಕು.

೩೨. स्वराष्ट्रे – कश्मीरकस्य काश्मीर, पञ्चालस्य पाञ्चाल: (मे० )– ತನ್ನ ರಾಜ್ಯದಲ್ಲಿರುವ ನಿಯಮಗಳಂತೆ ರಾಜನು ತನ್ನ ರಾಜ್ಯದ ಪ್ರಜೆಗಳಿಗೆ ನ್ಯಾಯವನ್ನು ಕೊಡಬೇಕು; ಬೇರೆ ಬೇರೆ ರಾಜ್ಯಗಳ ಶಾಸನಗಳು ಬೇರೆ ಬೇರೆಯಾಗಿದ್ದಾಗ ಅವುಗಳಂತೆಯೇ ಅಲ್ಲಲ್ಲಿ ನ್ಯಾಯದಾನ ಮಾಡಬೇಕು.

ब्राह्मणेषु कृताल्पापराधेषु (कु० )– ಒಂದು ವೇಳೆ ವಿದ್ವಾಂಸರೂ ಚಿಕ್ಕ ತಪ್ಪು ಆಡಿದ್ದರೆ ಅವರನ್ನು ಕ್ಷಮಿಸಬೇಕು. ('A word for the wise and a rod for the fool').

एवंवृत्तस्य नृपतेः शिलोञ्छेनापि जीवतः ।
विस्तीर्यते यशो लोके तैलबिन्दुरिवाम्भसि ॥ ३३ ॥
**ಏವಂವೃತ್ತಸ್ಯ ನೃಪತೇಃ ಶಿಲೋಂಛೇನಾಪಿ ಜೀವತಃ ।**
**ವಿಸ್ತೀರ್ಯತೇ ಯಶೋ ಲೋಕೇ ತೈಲಬಿಂದುರಿವಾಂಭಸಿ ॥ ೩೩ ॥**

೩೩. ಹೀಗೆ ವರ್ತಿಸುವ ರಾಜನಿಗೆ ಹಕ್ಕಲಾರಿಸುವಷ್ಟು ದಟ್ಟದಾರಿದ್ರ್ಯ ಬಂದರೂ ಅವನ ಕೀರ್ತಿಯು ನೀರಲ್ಲಿ ಬಿದ್ದ ಎಣ್ಣೆಯ ಹನಿಯಂತೆ ಲೋಕದಲ್ಲೆಲ್ಲ ಹರಡುತ್ತದೆ.

೩೩. शिलोञ्छेन – उञ्छो धान्यकणादानं काणिशाद्यर्जनं शिलम् – ಗದ್ದೆಯಲ್ಲಿ ಸುಗ್ಗಿಯಾದ ಮೇಲೆ ಬಿದ್ದಿರುವ ಧಾನ್ಯಕಣಗಳನ್ನು ಆರಿಸಿಕೊಳ್ಳುವುದಕ್ಕೆ 'ಉಂಛ' ಎಂದೂ ಒಂದೊಂದೇ ತೆನೆಯನ್ನು ಎತ್ತಿಕೊಳ್ಳುವುದಕ್ಕೆ 'ಶಿಲ' ಎಂದೂ ಹೆಸರು. ಹೀಗೆ ಬಾಳಬೇಕಾದ (ಅತಿ ಬಡತನದ ) ಪ್ರಸಂಗ ಬಂದರೂ ರಾಜನು ನ್ಯಾಯಶೀಲನಾಗಿಯೇ ಇರಬೇಕು; ಅದರಿಂದಲೇ ಅವನಿಗೆ ಕೀರ್ತಿ ಬರುತ್ತದೆ. ಅಂದಿನ ಭಾರತದಲ್ಲಿ ಹಣಕ್ಕಿಲ್ಲದ ಬೆಲೆ ನ್ಯಾಯಕ್ಕಿತ್ತು!

अतस्तु विपरीतस्य नृपतेरजितात्मनः
संक्षिप्यते यशो लोके घृतबिन्दुरिवाम्भसि ॥ ३४ ॥

**ಅತಸ್ತು ವಿಪರೀತಸ್ಯ ನೃಪತೇರಜಿತಾತ್ಮನಃ ।**
**ಸಂಕ್ಷಿಪ್ಯತೇ ಯಶೋ ಲೋಕೇ ಘೃತಬಿಂದುರಿವಾಂಭಸಿ ॥ ೩೪ ॥**

೩೪. ಅದಕ್ಕೆ ವಿರುದ್ಧವಾಗಿ ನಡೆದುಕೊಳ್ಳುವ ಅಸಂಯಮಿಯಾದ ರಾಜನ ಕೀರ್ತಿಯು ನೀರಲ್ಲಿ ಬಿದ್ದ ತುಪ್ಪದ ಹನಿಯಂತೆ ಲೋಕದಲ್ಲಿ ಕ್ಷೀಣವಾಗಿ ಹೋಗುತ್ತದೆ.

೩೪. अजितात्मनः– लोभाद्यासक्तचित्तस्य (राम० ) – ಆರು ಹಗೆಗಳಿಗೆ ಆಳಾದವನ.

स्वे स्वे धर्मे निविष्टानां सर्वेषशामनुपूर्वशः ।
वर्णानामाश्रमाणां च राजा सृष्टोऽभिरक्षिता ॥ ३४ ॥

**ಸ್ವೇ ಸ್ವೇ ಧರ್ಮೇ ನಿವಿಷ್ಟಾನಾಂ ಸರ್ವೇಷಾಮನುಪೂರ್ವಶಃ ।**
**ವರ್ಣಾನಾಮಾಶ್ರಮಾಣಾಂ ಚ ರಾಜಾ ಸೃಷ್ಟೋಽಭಿರಕ್ಷಿತಾ ॥ ೩೫ ॥**

೩೫. ತಮ್ಮ ತಮ್ಮ ಧರ್ಮದಲ್ಲಿ ಅನುಕ್ರಮವಾಗಿ ಇದ್ದುಕೊಂಡಿರುವ ಎಲ್ಲ ವರ್ಣಗಳ ಹಾಗೂ ಅಶ್ರಮಿಗಳ ರಕ್ಷಕನನ್ನಾಗಿ (ಬ್ರಹ್ಮನು) ರಾಜನನ್ನು ಹುಟ್ಟಿಸಿದನು.

೩೫. वर्णानामाश्रमाणां च – ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬೀ ನಾಲ್ಕು ವರ್ಣಗಳು; ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸ ಎಂಬೀ ನಾಲ್ಕು ಆಶ್ರಮಗಳು. ವರ್ಣಾಶ್ರಮ ನಿಯಮಗಳಂತೆ ನಡೆಯುವ ಜನರ ರಕ್ಷೆಯನ್ನು ಮಾಡುವುದು ರಾಜನ ಕರ್ತವ್ಯ; ಹಾಗೆ ನಡೆಯದವರನ್ನು ಶಿಕ್ಷಿಸುವುದೂ (ಅಂದು) ಅವನ ಕರ್ತವ್ಯವಾಗಿತ್ತು. ಸಾಮಾಜಿಕ–ಕೌಟುಂಬಿಕ ಸಂಬಂಧಗಳ ಬಗೆಗಿನ ಕಾಯದೆಗಳನ್ನು ಉಲ್ಲಂಘಿಸಿದರೆ ಈಗಲೂ ಸರಕಾರ ಶಿಕ್ಷಿಸಬೇಕು.

तेन यद्यत्सभृत्येन कर्तव्यं रक्षता प्रजा : ।
तत्तद्वोऽहं प्रवक्ष्यामि यथावदनुपूर्वशः ॥ ३६ ॥
**ತೇನ ಯದ್ಯತ್ಸಭೃತ್ಯೇನ ಕರ್ತವ್ಯಂ ರಕ್ಷತಾ ಪ್ರಜಾಃ ।**
**ತತ್ತದ್ವೋಽಹಂ ಪ್ರವಕ್ಷ್ಯಾಮಿ ಯಥಾವದನುಪೂರ್ವಶಃ ॥ ೩೬ ॥**

೩೬. ಆದ್ದರಿಂದ ಭೃತ್ಯವರ್ಗದೊಂದಿಗೆ ಪ್ರಜಾಪಾಲನೆ ಮಾಡುತ್ತಿರುವ ರಾಜನು ಮಾಡಬೇಕಾದುದೆಲ್ಲವನ್ನೂ ಸರಿಯಾಗಿ ನಾನು ನಿಮಗೆ ಕ್ರಮಶಃ ಹೇಳುವೆನು.

೩೬. सभृत्येन – ಇಲ್ಲಿ 'ಭೃತ್ಯ' ಎಂದರೆ ಅಮಾತ್ಯಾದಿಗಳೆಂದು ಗ್ರಹಿಸಬೇಕು.

यथावत् – ಶಾಸ್ತ್ರದಲ್ಲಿ ಹೇಳಿದಂತೆ, ಸರಿಯಾಗಿ.

ब्राह्मणान्पर्युपासीत प्रातरुत्थाय पार्थिवः ।
त्रैविद्यवृद्धान्विदुषस्तिष्ठेत्तेषां च शासने ॥ ३७ ॥
**ಬ್ರಾಹ್ಮಣಾನ್ ಪರ್ಯುಪಾಸೀತ ಪ್ರಾತರುತ್ಥಾಯ ಪಾರ್ಥಿವಃ ।**
**ತ್ರೈವಿದ್ಯವೃದ್ಧಾನ್ ವಿದುಷಸ್ತಿಷ್ಠೇತ್ತೇಷಾಂ ಚ ಶಾಸನೇ ॥ ೩೭ ॥**

೩೭. ಬೆಳಿಗ್ಗೆ ಎದ್ದು ರಾಜನು ಮೂರು ವೇದಗಳನ್ನೋದಿ ವಿದ್ವಾಂಸರಾದ ಬ್ರಾಹ್ಮಣರನ್ನು ಪೂಜಿಸಬೇಕು ಮತ್ತು ಅವರ ಆಜ್ಞೆಯಂತೆ ನಡೆದುಕೊಳ್ಳಬೇಕು.

೩೭. त्रैविद्यवृद्धान् – ಋಕ್, ಯಜುಸ್, ಸಾಮವೇದಗಳಲ್ಲಿ ಪಾರಂಗತರು; ವೇದವೇತ್ತರು.
विदुष – ವೇದಗಳ ಅರ್ಥವನ್ನು ಬಲ್ಲವರು (ಮೇ.)
– ರಾಜನೀತಿ ಪಂಡಿತರು (ಕು.).

वृद्धांश्च नित्यं सेवेत विप्रान्वेदविदः शुचीन् ।
वृद्धसेवी हि सततं रक्षोभिरपि पूज्यते ॥ ३८ ॥
**ವೃದ್ಧಾಂಶ್ಚ ನಿತ್ಯಂ ಸೇವೇತ ವಿಪ್ರಾನ್ ವೇದವಿದಃ ಶುಚೀನ್ ।**
**ವೃದ್ಧಸೇವೀ ಹಿ ಸತತಂ ರಕ್ಷೋಭಿರಪಿ ಪೂಜ್ಯತೇ ॥ ೩೮ ॥**

೩೮. ವೇದವೋದಿ ಪವಿತ್ರಹೃದಯರಾದ ವೃದ್ಧಬ್ರಾಹ್ಮಣರ ಸೇವೆಯನ್ನು ರಾಜನು ನಿತ್ಯವೂ ಮಾಡಬೇಕು. ಏಕೆಂದರೆ, ಹಳಬರ ಸೇವೆಯನ್ನು ಯಾವಾಗಲೂ ಮಾಡುವವನನ್ನು ರಾಕ್ಷಸರು ಕೂಡ ಗೌರವಿಸುತ್ತಾರೆ (ಎಂದ ಮೇಲೆ ಮನುಷ್ಯರು ಅಂಥವನನ್ನು ಗೌರವಿಸಿದರೆ ಅದರಲ್ಲೇನಾಶ್ಚರ್ಯವಿದೆ?).

೩೮. वृद्धान् – क्योवृद्धान्, तेषां पुरावृत्तज्ञतया ऊहापोहशक्तत्वात् (स०).
रक्षोभिरपि – ದುಷ್ಟರಿಂದ ಕೂಡ ಎಂದು ತಾತ್ಪರ್ಯ.

तेभ्योऽधिगच्छेद्विनयं विनीतात्मापि नित्यशः ।
विनीतात्मा ही नृपतिर्न विनश्यति कर्हिचित् ॥ ३९ ॥
**ತೇಭ್ಯೋಽಧಿಗಚ್ಛೇದ್ವಿನಯಂ ವಿನೀತಾತ್ಮಾಪಿ ನಿತ್ಯಶಃ ।**
**ವಿನೀತಾತ್ಮಾಹಿ ನೃಪತಿರ್ನ ವಿನಶ್ಯತಿ ಕರ್ಹಿಚಿತ್ ॥ ೩೯ ॥**

೩೯. ಆಗಲೇ ತಾನು ವಿನೀತನಾಗಿದ್ದರೂ ಅವರಿಂದ ರಾಜನು ದಿನವೂ ವಿನಯವನ್ನು ಕಲಿತುಕೊಳ್ಳಬೇಕು. ಏಕೆಂದರೆ, ವಿನೀತನಾದ ರಾಜನು ಎಂದೂ ನಾಶ ಹೊಂದನು.

೩೯. विनीतात्मा अपि – तं (चन्द्रापीडं) आरूढविनयमपि विनीततरमिच्छन् कर्तुं शुकनासः सविस्तरमुवाच (कादम्बरीपूर्वभाग).

बहवोऽविनयान्नष्टा राजानः सपरिच्छदाः ।
वनस्था अपि राज्यानि विनयात्प्रतिपेदिरे ॥ ४० ॥
**ಬಹವೋಽವಿನಯಾನ್ನಷ್ಟಾ ರಾಜಾನಃ ಸಪರಿಚ್ಛದಾಃ ।**
**ವನಸ್ಥಾ ಅಪಿ ರಾಜ್ಯಾನಿ ವಿನಯಾತ್ಪ್ರತಿಪೇದಿರೇ ॥ ೪೦ ॥**

೪೦. ಅವಿನಯದ ದೆಸೆಯಿಂದ ಅನೇಕ ರಾಜರು ಸರ್ವಸ್ವದೊಡನೆ ನಾಶ ಹೊಂದಿದರು. ಕಾಡುಪಾಲಾದ ರಾಜರು ಕೂಡ (ತಮ್ಮ) ವಿನಯದ ದೆಸೆಯಿಂದ ರಾಜ್ಯಗಳನ್ನು ಪಡೆದರು.

೪೦. ವಿನಯ (ನಮ್ರತೆ) ರಹಿತರಾದ ಮತ್ತು ವಿನಯ ಸಹಿತರಾದ ರಾಜರ ಹೆಸರುಗಳನ್ನು ಮುಂದಿನ ಎರಡು ಶ್ಲೋಕಗಳಲ್ಲಿ ಹೇಳಲಾಗಿದೆ. ರಾಜನು ನಮ್ರನಾಗಿರುವುದು ಬಹಳ ಅಗತ್ಯ. ಶಾಸ್ತ್ರೋಕ್ತ ನೀತಿಗಳಿಗನುಸಾರವಾಗಿ ವಿಧೇಯತೆಯಿಂದ ವರ್ತಿಸುವುದು ವಿನಯ ಅಥವಾ ನಮ್ರತೆ.

वेनो विनष्टोऽविनयान्नहुषश्चैव पार्थिवः ।
सुदाः पैजवनश्चैव सुमुखो निमिरेव च ॥ ४१ ॥
**ವೇನೋ ವಿನಷ್ಟೋಽವಿನಯಾನ್ನಹುಷಶ್ಚೈವ ಪಾರ್ಥಿವಃ ।**
**ಸುದಾಃ ಪೈಜವನಶ್ಚೈವ ಸುಮುಖೋ ನಿಮಿರೇವ ಚ ॥ ೪೧ ॥**

೪೧. ಅವಿನಯದ ದೆಸೆಯಿಂದ ರಾಜರಾಗಿದ್ದ ವೇನ, ನಹುಷ, ಪಿಜವನನ ಮಗ ಸುದಾಸ, ಸುಮುಖ ಮತ್ತು ನಿಮಿಗಳೇ ನಾಶ ಹೊಂದಿದರು!

೪೧. वेन – ಇವನು ಬಹಳ ಕ್ರೂರಿಯಾದ ರಾಜ; ತನ್ನ ರಾಜ್ಯದಲ್ಲಿ ಯಜ್ಞಯಾಗಾದಿಗಳನ್ನು ಮಾಡದೆ, ಜನರು ರಾಜನಾದ ತನ್ನನ್ನೇ ಪೂಜಿಸಬೇಕೆಂಬ ಆಜ್ಞೆಯನ್ನು ಹೊರಡಿಸಿದ; ತಾನೇ ದೇವತೆಗಳನ್ನು ಮೀರಿಸಿದವನೆಂದು ಹೇಳಿಕೊಂಡ. ಇವನು ಅತಿ ಹಿಂಸಾಚಾರಕ್ಕಿಳಿದಾಗ ಋಷಿಗಳಿಂದ ಹತನಾದನು (ಹರಿವಂಶ ೧, ೫; ವಾಯುಪುರಾಣ ೨, ೧; ಭಾಗವತ ೪, ೧೪; ವಿಷ್ಣುಪುರಾಣ ೪, ೧೩; ಮತ್ಸ್ಯ ಪುರಾಣ ೧೦, ೧, ೧೦.)

नहुष – ಪುರೂರವನ ಮೊಮ್ಮಗನಾದ ಹಾಗೂ ಆಯುವಿನ ಮಗನಾದ ನಹುಷನು ಬಹಳ ಶೂರನಾದ ರಾಜನಾಗಿದ್ದ. ಇಂದ್ರನು ಬ್ರಹ್ಮಹತ್ಯಾದೋಷದ ಭಯದಿಂದ ಓಡಿಹೋದಾಗ ಅವನಿಗೆ ಇಂದ್ರಪದವನ್ನು ಕೊಡಲಾಯಿತು. ಆಗ ಅವನು ಇಂದ್ರಪತ್ನಿಯಾದ ಶಚಿ ತನ್ನ ಹೆಂಡತಿಯಾಗಬೇಕೆಂದು ಬಯಸಿದ. ಅವನ ಪಲ್ಲಕ್ಕಿಯನ್ನು ಅವನ ಆಜ್ಞೆಯಂತೆ ಋಷಿಗಳು ಹೊತ್ತುಕೊಂಡು ಅವಳೆಡೆಗೆ ಹೋಗುವಾಗ ಅವನು ಅಗಸ್ತ್ಯಋಷಿಗಳನ್ನು ಒದ್ದು ಬೇಗ ಬೇಗ ಹೋಗ ಹೇಳಿದ. ಕೋಪಗೊಂಡ ಅಗಸ್ತ್ಯರ ಶಾಪದಿಂದ ಅವನು ಸರ್ಪವಾಗಿ ಭೂಮಿಯನ್ನು ಬಿದ್ದನು. (ಮಹಾಭಾರತ, ಉದ್ಯೋಗಪರ್ವ ೧೧–೧೭, ಅನುಶಾಸನಪರ್ವ ೧೫೬–೧೫೭, ವನಪರ್ವ ೧೭೮–೧೮೧).

सुदास – ಇವನು ಪಿಜವನರಾಜನ ಮಗ (ನಿರುಕ್ತ ೨, ೨೪). ದಾಶರಾಜ ಯುದ್ಧದಲ್ಲಿ ವಸಿಷ್ಠರ ನೆರವಿನಿಂದ ಹತ್ತು ರಾಜರ ವಿರುದ್ಧ ಹೋರಾಡಿ ಇವನು ಗೆದ್ದ (ಋಗ್ವೇದ ೭, ೧೮), ವಿಪಾಟ್ ಮತ್ತು ಶುತುದ್ರಿ ನದಿಗಳನ್ನು ಇವನು ವಿಶ್ವಾಮಿತ್ರರ ಸಹಾಯದಿಂದ ಸುರಕ್ಷಿತವಾಗಿ ದಾಟಿದ (೩,೩೩). ಇವನಿಗೆ ವಸಿಷ್ಠರು ಪಟ್ಟಾಭಿಷೇಕ ಮಾಡಿದರು. (ಐತರೇಯ ಬ್ರಾಹ್ಮಣ ೮, ೨೧). ಇವನು ಅವಿನಯದಿಂದ ನಾಶ ಹೊಂದಿದನೆಂದು ಮತ್ತೆಲ್ಲೂ ಉಲ್ಲೇಖವಿಲ್ಲ; ಆದ್ದರಿಂದ ಹಲವು ಹಸ್ತಲಿಖಿತ ಪ್ರತಿಗಳಲ್ಲಿ, 'न्सुदासो यवनश्चैव' ಎಂಬ ಪಾಠಾಂತರವಿದೆ. (ಸುದಾಸನೆಂಬ ಯವನ ರಾಜನಾಗಿರಬಹುದು).

सुमुख – ಈ ಹೆಸರಿನ ದುಷ್ಟರಾಜನು ಇತಿಹಾಸ–ಪುರಾಣಗಳಲ್ಲಿ ಪ್ರಸಿದ್ಧನಾಗಿಲ್ಲ.

निमि – ಇವನು ಅಯೋಧ್ಯೆಯ ಇಕ್ಷ್ವಾಕುವಿನ ಹನ್ನೆರಡನೆಯ ಮಗ. ಇವನು ಕಟ್ಟಿಸಿದ 'ವೈಜಯಂತ' ಎಂಬ ನಗರವು ದಂಡಕಾರಣ್ಯದಲ್ಲಿತ್ತೆಂದು ರಾಮಾಯಣದಲ್ಲಿ ಹೇಳಿದೆ. (ಅಯೋಧ್ಯಾ ಕಾಂಡ ೯, ೧೨). ನಿಮಿಯು ಒಮ್ಮೆ ತನ್ನ ಸ್ತ್ರೀಯರ ಜೊತೆಗೆ ಜೂಜಾಡುತ್ತ ಕುಳಿತಿದ್ದಾಗ ವಸಿಷ್ಠರು ಅಲ್ಲಿಗೆ ಬಂದರು. ಅವನಾಗ ಎದ್ದು ನಿಲ್ಲಲಿಲ್ಲ ಮತ್ತು ಅವರನ್ನು ಸತ್ಕರಿಸಲಿಲ್ಲ. ಆದ್ದರಿಂದ ವಸಿಷ್ಠರು ಶಾಪ ಕೊಟ್ಟು ಅವನಿಗೆ ದೇಹವಿಲ್ಲದಂತೆ ಮಾಡಿದರು (ಪದ್ಮಪುರಾಣ, ಪಾತಾಲಖಂಡ ೫, ೨೨). ಅನಂತರ ಇವನು ಎಲ್ಲರ ಕಣ್ಣುಗಳಲ್ಲಿ ಇರತೊಡಗಿದನು. ಅದರಿಂದಲೇ ನಮ್ಮ ಕಣ್ಣುಗಳು ಮೇಲಿಂದ ಮೇಲೆ ಮುಚ್ಚುತ್ತವೆಯಂತೆ (ನಿಮಿಷ – ಮುಚ್ಚುವುದು) – ಭಾಗವತ ೯, ೧೩; ವಿಷ್ಣು ಪುರಾಣ ೪, ೫; ರಾಮಾಯಣ, ಉತ್ತರಕಾಂಡ ೫೫, ೫೭).

पृथुस्तु विनयाद्राज्यं प्राप्तवान्मनुरेव च ।
कुबेरश्च धनैश्वर्यं ब्राह्मण्यं चैव गाधिजः ॥ ४२ ॥
**ಪೃಥುಸ್ತು ವಿನಯಾದ್ರಾಜ್ಯಂ ಪ್ರಾಪ್ತವಾನ್ ಮನುರೇವ ಚ ।**
**ಕುಬೇರಶ್ಚ ಧನೈಶ್ವರ್ಯಂ ಬ್ರಾಹ್ಮಣ್ಯಂ ಚೈವ ಗಾಧಿಜಃ ॥ ೪೨ ॥**

೪೨. ಪೃಥುವೂ ಮನುವೂ (ತಮ್ಮ) ವಿನಯದಿಂದಲೇ ರಾಜ್ಯಗಳನ್ನು ಪಡೆದರು; ಕುಬೇರನು ಧನಾಧಿಪತಿಯಾದನು ಮತ್ತು ಗಾಧಿಯ ಮಗ (ವಿಶ್ವಾಮಿತ್ರನು) ಬ್ರಾಹ್ಮಣಿಕೆಯನ್ನು ಪಡೆದನು.

೪೨. पृथु – ವೇನನನ್ನು ಕೊಂದ ಮೇಲೆ ಅವನ ಬಲಗೈಯನ್ನು ಕಡೆದು ಋಷಿಗಳು ಪೃಥು ರಾಜನನ್ನು ಸೃಷ್ಟಿಸಿದರು. ಅವನು ರಾಜನಾದಾಗ ಭೂಮಿಯಲ್ಲಿ ಚೆನ್ನಾಗಿ ಬೆಳೆ ಬರುತ್ತಿರಲಿಲ್ಲ. ಆದ್ದರಿಂದ ಅವನು ತನ್ನ ಬಿಲ್ಲನ್ನು ತೆಗೆದುಕೊಂಡು ಭೂಮಿಯನ್ನು ಶಿಕ್ಷಿಸಲು ಹೊರಟ. ಆಗ ಭೂಮಿತಾಯಿಯು ಗೋವಿನ ರೂಪವನ್ನು ಧರಿಸಿ ಅವನನ್ನು ಕುರಿತು – "ನನಗೆ ಒಂದು ಕರುವನ್ನು ಕೊಟ್ಟರೆ ಅದರ ಮೂಲಕ ಲೋಕದ ಎಲ್ಲ ಅವಶ್ಯಕತೆಗಳನ್ನೂ ಪೂರೈಸುವೆನು"– ಎಂದಿತು. ಪೃಥುವು ಆಗ (೧೪ ಮನುಗಳಲ್ಲಿ ಮೊದಲನೆಯವನಾದ) ಸ್ವಾಯಂಭುವ ಮನುವಿಗೆ ಕರುವಿನ ರೂಪವನ್ನು ಕೊಟ್ಟನು. ಆಮೇಲೆ ಭೂಮಿಯು ಎಲ್ಲ ಬಗೆಯ ಬೆಳೆಗಳಿಂದ ಸಮೃದ್ಧವಾಯ್ತು. ಪೃಥು ಅಭಯ ನೀಡಿದ್ದರಿಂದ ಭೂಮಿಗೆ **'ಪೃಥ್ವೀ'** ಎಂಬ ಹೆಸರು ಬಂತು (ವಿಷ್ಣುಪುರಾಣ ೧, ೧೩; ಪದ್ಮಪುರಾಣ, ಭೂಮಿಖಂಡ ೨೮; ಭಾಗವತ ೪, ೧೮; ಮಹಾಭಾರತ, ಶಾಂತಿಪರ್ವ ೨೮–೧೪೦; ಬ್ರಹ್ಮಾಂಡ ಪುರಾಣ ೨, ೩೭; AV. viii-28.11; ರಘುವಂಶ).

मनु – ಪುರಾಣಗಳಲ್ಲಿ ೧೪ ಮನುಗಳ ಉಲ್ಲೇಖವಿದೆ; ಅವರೆಲ್ಲರ ಮತ್ತು ಅವರವರ ಸಂಧಿಕಾಲಗಳ ಒಟ್ಟು ಮೊತ್ತ ೪೩೨ ಕೋಟಿ ವರ್ಷಗಳಾಗುತ್ತದೆ. ಪ್ರತಿಯೊಬ್ಬ ಮನುವೂ ಅವನವನ ಹೆಸರಿನ ಮನ್ವಂತರದ ಅಧಿಪತಿ. ಮನುಗಾಲ ೩೦,೬೭,೨೦,೦೦೦ ವರ್ಷಗಳು. ಈಗ ನಡೆಯುತ್ತಿರುವ ಮನ್ವಂತರದ ಅಧಿಪತಿ ವೈವಸ್ವತ; ಅವನು ಸೂರ್ಯಪುತ್ರ., ಅವನು ಒಂದು ಸಣ್ಣ ಮೀನನ್ನು ಸಂರಕ್ಷಿಸಿ ಬೆಳೆಸಿದನು. ಮುಂದೆ ಜಲಪ್ರಲಯ ಆರಂಭವಾದಾಗ ಆ ಮೀನು ಮನು ಕುಳಿತುಕೊಂಡಿದ್ದ ನೌಕೆಯನ್ನು ಹಿಮಾಲಯದ ಶಿಖರಕ್ಕೆ ಒಯ್ದು ಅವನ ರಕ್ಷಣೆ ಮಾಡಿತು. ಈ ಮನುವಿನಿಂದ (ಈ ಮನ್ವಂತರದ) ಮನುಷ್ಯಕುಲ ಹುಟ್ಟಿತು (ಶತಪಥ ಬ್ರಾಹ್ಮಣ ೧, ೮, ೧, ೧; ಹರಿವಂಶ ೧, ೭; ವಿಷ್ಣುಪುರಾಣ ೩, ೧–೨; ಭಾಗವತ ೮, ೧–೧೩).

कुबेर – ವಿಶ್ರವಸ್ ಋಷಿಯ ಮಗನಾದ ಇವನು ಧನಪತಿ ಪದವಿಗಾಗಿ ತಪಸ್ಸು ಮಾಡಿದನು. ಬ್ರಹ್ಮನ ವರದಿಂದ ಇವನಿಗೆ ಲಂಕಾ ಪಟ್ಟಣ, ಪುಷ್ಪಕವಿಮಾನ, ಯಕ್ಷರ ಆಧಿಪತ್ಯ, ಧನಪತಿತ್ವ ಮತ್ತು ನಲಕೂಬರರೆಂಬ ಮಕ್ಕಳು ದೊರೆತವು (ಮಹಾಭಾರತ, ಶಲ್ಯಪರ್ವ ೪೭; ಪದ್ಮಪುರಾಣ, ಸ್ವರ್ಗಖಂಡ ೧೬).

विश्वामित्र – ಗಾಧಿಪುತ್ರನಾದ ಇವನು ಜನ್ಮತಃ ಕ್ಷತ್ರಿಯ; ವಸಿಷ್ಠರಂತೆ ತಾನೂ ಬ್ರಹ್ಮರ್ಷಿಯಾಗಬೇಕೆಂದು ಬಹಳ ಕಾಲ ತಪಸ್ಸು ಮಾಡಿದ. ಆಮೇಲೆ ಅವನ ಆಸೆ ಪೂರ್ತಿಯಾಯಿತು (ರಾಮಾಯಣ, ಬಾಲಕಾಂಡ ೫೧–೫೬, ೬೩–೬೬; ಸ್ಕಂದಪುರಾಣ ೬.೧.೧೬೭–೧೬೮).

ವೇನನಿಂದ ನಿಮಿಯವರೆಗಿನ ರಾಜರು ಅವಿನೀತರು; ಪೃಥುವಿನಿಂದ ವಿಶ್ವಾಮಿತ್ರನವರೆಗಿನ ರಾಜರು ವಿನೀತರು.

त्रैविद्येभ्यस्त्रयीं विद्यां दण्डनीतिं च शाश्वतीम् ।
आन्वीक्षिकीं चात्मविद्यां वार्तारम्भांश्च लोकतः ॥ ४३ ॥
**ತ್ರೈವಿದ್ಯೇಭ್ಯಸ್ತ್ರಯೀಂ ವಿದ್ಯಾಂ ದಂಡನೀತಿಂ ಚ ಶಾಶ್ವತೀಮ್ ।**
**ಆನ್ವೀಕ್ಷಿಕೀಂ ಚಾತ್ಮವಿದ್ಯಾಂ ವಾರ್ತಾರಂಭಾಂಶ್ಚ ಲೋಕತಃ ॥ ೪೩ ॥**

೪೩. ಮೂರು ವೇದಗಳನ್ನು ಬಲ್ಲವರಿಂದ ಆ ವೇದಗಳನ್ನೂ ಪರಂಪರಾಗತವಾದ ರಾಜಧರ್ಮಶಾಸ್ತ್ರವನ್ನೂ ತರ್ಕಶಾಸ್ತ್ರವನ್ನೂ ಬ್ರಹ್ಮವಿದ್ಯೆಯನ್ನೂ ವ್ಯಾವಹಾರಿಕರಿಂದ ಕೃಷಿ–ಗೋರಕ್ಷೆ–ವಾಣಿಜ್ಯಗಳನ್ನೂ ರಾಜನು ಕಲಿತುಕೊಳ್ಳಬೇಕು.

೪೩. त्रयीं विद्याम् – ಋಗ್, ಯಜುಸ್, ಸಾಮ ವೇದಗಳು ಜ್ಞಾನ. ಅಥರ್ವಣ ವೇದದಲ್ಲಿ ಮಾರಣ–ಸಂಮೋಹನಾದಿಗಳ ಬಗೆಗಿನ ಮಂತ್ರಗಳಿರುವುದರಿಂದ ಅದರ ಅಧ್ಯಯನಕ್ಕೆ ಮೊದಲು ಮನ್ನಣೆ ದೊರಕಿರಲಿಲ್ಲ.

शाश्वती दण्डनीति – ಪರಂಪರಾಗತ ರಾಜಧರ್ಮಶಾಸ್ತ್ರ.
आन्वीक्षिकी – ತರ್ಕಶಾಸ್ತ್ರ.
आत्मविद्या – ಸುಖ–ದುಃಖ ಸಮಾನತೆಯನ್ನು ಬೋಧಿಸುವ ತತ್ವಜ್ಞಾನ.
वार्तारम्भान् – ಕೃಷಿ–ಗೋರಕ್ಷೆ–ವಾಣಿಜ್ಯಗಳನ್ನು –
अन्वीक्शिकि त्रयी वार्ता दण्डनीतिश्च शाश्वती ।
विद्या ह्येताश्चतस्रस्तु लोकसंस्थितिहेतवः ॥
आन्वीक्षिक्यांतु विज्ञानं धर्माधर्मौ त्रयीस्थितौ ।
अर्थानर्थौ तु वार्तायां दण्दनीत्यां नयानयौ ॥
– कामन्दकीयनीतिसार २.२, ७.

इन्द्रियाणां जये योगं समातिष्ठेद्दिवानिशम् ।
जितेन्द्रियो हि शक्नोति वशे स्थापयितुं प्रजाः ॥ ४४ ॥

**ಇಂದ್ರಿಯಾಣಾಂ ಜಯೇ ಯೋಗಂ ಸಮಾತಿಷ್ಠೇದ್ದಿವಾನಿಶಮ್ ।**
**ಜಿತೇಂದ್ರಿಯೋ ಹಿ ಶಕ್ನೋತಿ ವಶೇ ಸ್ಥಾಪಯಿತುಂ ಪ್ರಜಾಃ ॥ ೪೪ ॥**

೪೪. (ರಾಜನು) ಹಗಲಿರುಳೂ ಇಂದ್ರಿಯಗಳನ್ನು ಗೆಲ್ಲಲು ಯತ್ನಿಸುತ್ತಿರಬೇಕು. ಏಕೆಂದರೆ, ಪ್ರಜೆಗಳನ್ನು ತನ್ನಂಕೆಯಲ್ಲಿಟ್ಟುಕೊಳ್ಳಲು ಜಿತೇಂದ್ರಿಯನು (ಮಾತ್ರ) ಸಮರ್ಥನಾಗುತ್ತಾನೆ.

೪೪. योगं समातिष्ठेत् – ಇಂದ್ರಿಯಜಯಕ್ಕಾಗಿ ಯೋಗಾಭ್ಯಾಸವನ್ನು ಮಾಡಬೇಕು – ಎಂದೂ ಅರ್ಥ ಮಾಡಬಹುದು. जितेन्द्रियो हि– ತನ್ನನ್ನು ವಶದಲ್ಲಿಟ್ಟುಕೊಳ್ಳಲಾರದವನು ಬೇರೆಯವರನ್ನು ತನ್ನ ವಶದಲ್ಲಿಟ್ಟುಕೊಳ್ಳಲಾರ.

दश कामसमुत्थानि तथाष्टौ क्रोधजानि च ।
व्यसनानि दुरन्तानि प्रयत्नेन विवर्जयेत् ॥ ४५ ॥
**ದಶ ಕಾಮಸಮುತ್ಥಾನಿ ತಥಾಷ್ಟೌ ಕ್ರೋಧಜಾನಿ ಚ ।**
**ವ್ಯಸನಾನಿ ದುರಂತಾನಿ ಪ್ರಯತ್ನೇನ ವಿವರ್ಜಯೇತ್ ॥ ೪೫ ॥**

೪೫. ಅಂತ್ಯದಲ್ಲಿ (ರಾಜನನ್ನು) ದುರ್ಗತಿಗೀಡುಮಾಡುವ ಹತ್ತು ಕಾಮಜನ್ಯ ದುರಭ್ಯಾಸಗಳನ್ನೂ ಎಂಟು ಕ್ರೋಧಜನ್ಯ ದುರಭ್ಯಾಸಗಳನ್ನೂ ಪ್ರಯತ್ನಪೂರ್ವಕವಾಗಿ (ಅವನು) ಬಿಡಬೇಕು.

೪೫. दुरन्तानि – ದುರ್ವ್ಯಸನಗಳಿಂದ ಮೊದಲು ಸುಖ ಬಂದರೂ ಅದು ಕೊನೆಯಲ್ಲಿ ದುಃಖಕ್ಕೆ ಕಾರಣವಾಗುವುದು. ಹೋಲಿಸಿರಿ:

विषयेन्द्रियसंयोगात् यत्तदग्रेऽमृतोपमम् ।
परिणामे विषभिव तत्सुखं राजसं स्मृतम् ॥
– भगवद्गीता १८, ३८.

ದುರ್ವ್ಯಸನಗಳ ವಿವರಣೆ ಮುಂದೆ ಶ್ಲೋಕ ೪೭–೪೮ರಲ್ಲಿ ಬಂದಿದೆ.

कामजेषु प्रसक्तो हि व्यसनेषु महीपतिः ।
वियुज्यतेऽर्थधर्माभ्यां क्रोधजेष्वात्मनैव तु ॥ ४३ ॥
**ಕಾಮಜೇಷು ಪ್ರಸಕ್ತೋ ಹಿ ವ್ಯಸನೇಷು ಮಹೀಪತಿಃ ।**
**ವಿಯುಜ್ಯತೇಽರ್ಥಧರ್ಮಾಭ್ಯಾಂ ಕ್ರೋಧಜೇಷ್ವಾತ್ಮನೈವ ತು ॥ ೪೬ ॥**

೪೬. ಕಾಮಜನ್ಯ ದುರ್ವ್ಯಸನದಲ್ಲಿ ಅರ್ಥ–ಧರ್ಮಗಳೆಂಬ ತನ್ನ ಪುರುಷಾರ್ಥಗಳನ್ನು ಕಳೆದುಕೊಳ್ಳುತ್ತಾನೆ; ಕ್ರೋಧಜನ್ಯ ದುರ್ವ್ಯಸನದಲ್ಲಿ ಬಿದ್ದವನು ತನ್ನನ್ನೇ ತಾನು ಕಳೆದುಕೊಳ್ಳುತ್ತಾನೆ.

೪೬. आत्मना – श्रीरेण वियुज्यते, म्रियते इति यावत् (ನಂ)– ಸಾಯುತ್ತಾನೆ ಎಂದು ತಾತ್ಪರ್ಯ.

मृगयाक्षो दिवास्वप्नः परिवादः स्त्रियो मदः ।
तौर्यत्रिकं वृथाट्या च कामजो दशको गणः ॥ ४७ ॥
**ಮೃಗಯಾಕ್ಷೋ ದಿವಾಸ್ವಪ್ನಃ ಪರಿವಾದಃ ಸ್ತ್ರಿಯೋ ಮದಃ ।**
**ತೌರ್ಯತ್ರಿಕಂ ವೃಥಾಟ್ಯಾ ಚ ಕಾಮಜೋ ದಶಕೋ ಗಣಃ ॥ ೪೭ ॥**

೪೭. ಬೇಟೆ, ಜೂಜು, ಹಗಲುನಿದ್ದೆ, ಪರನಿಂದೆ, ಸ್ತ್ರೀಲೋಲುಪತೆ, ಕುಡಿತದ ಅಮಲು, ನೃತ್ಯ–ಗಾಯನ–ವಾದನ ಮತ್ತು ವ್ಯರ್ಥ ಓಡಾಟಗಳು ಎಂಬೀ ಹತ್ತು ಕಾಮಜನ್ಯ ದುರ್ವ್ಯಸನಗಳ ಗುಂಪು.

೪೭. परिवाद :– ಪರನಿಂದೆ; ಬೇರೆಯವರ ದೋಷಗಳನ್ನೇ ಹೇಳುತ್ತ ಹೋಗುವುದು. मद– ಸೆರೆ ಕುಡಿಯುವುದರಿಂದ ಬಂದ ಅಮಲು. तौर्यत्रिक – ನೃತ್ಯ, ಗೀತ ಮತ್ತು ವಾದ್ಯಗಳಿಂದ ಕೂಡಿದ ನಾಟಕ ಮುಂತಾದ ಮನೋರಂಜನೆ. वृथाट्या– ಸುಮ್ಮನೆ ಅಲೆದಾಡುವುದು – ಇವುಗಳಲ್ಲಿ ಅತ್ಯಾಸಕ್ತಿ ತೋರುವುದು ದುರ್ವ್ಯಸನವೆನ್ನಿಸುತ್ತದೆ.

पैशुन्यं साहसं द्रोह ईर्ष्यासूयार्थदूषणम् ।
वाग्दण्डजं च पारुष्यं क्रोधजोऽपि गणोऽष्टकः ॥ ४८ ॥
**ಪೈಶುನ್ಯಂ ಸಾಹಸಂ ದ್ರೋಹ ಈರ್ಷ್ಯಾಽಸೂಯಾರ್ಥದೂಷಣಂ ।**
**ವಾಗ್ದಂಡಜಂ ಚ ಪಾರುಷ್ಯಂ ಕ್ರೋಧಜೋಽಪಿ ಗಣೋಽಷ್ಟಕಃ ॥ ೪೮ ॥**

೪೮. ಚಾಡಿಕೋರತನ, ಸಜ್ಜನಹಿಂಸೆ, ದ್ರೋಹ, ಹೊಟ್ಟೆಕಿಚ್ಚು, ಅಸೂಯೆ, ಪರಸ್ವಾಪಹಾರ ಮತ್ತು ಪರರಿಗೆ ಕೊಡಬೇಕಾದುದನ್ನು ಕೊಡದಿರುವುದು, ಕಟೂಕ್ತಿ, ಅತಿದಂಡನೆಗಳು ಎಂಬೀ ಎಂಟು ಕ್ರೋಧಜನ್ಯ ದುರ್ವ್ಯಸನಗಳ ಸಮೂಹ.

೪೮. पैशुन्य – ಚಾಡಿಕೋರತನ. ईर्ष्या– ಬೇರೆಯವರ ಗುಣಗಳನ್ನು ಸಹಿಸದಿರುವುದು. असूया – ಬೇರೆಯವರ ಸದ್ಗುಣಗಳನ್ನು ದುರ್ಗುಣಗಳೆಂದು ತಿಳಿಯುವುದು.

द्वयोरप्येतयोर्मूलं यं सर्वे कवयो विदुः ।
तं यत्नेन जयेल्लोभं तज्जावेतावुभौ गणौ ॥ ४९ ॥
**ದ್ವಯೋರಪ್ಯೇತಯೋರ್ಮೂಲಂ ಯಂ ಸರ್ವೇ ಕವಯೋ ವಿದುಃ ।**
**ತಂ ಯತ್ನೇನ ಜಯೇಲ್ಲೋಭಂ ತಜ್ಜಾವೇತಾವುಭೌ ಗಣೌ ॥ ೪೯ ॥**

೪೯. (ದುರ್ವ್ಯಸನಗಳ) ಈ ಎರಡು ಗುಂಪುಗಳಿಗೂ ಲೋಭವೇ ಮೂಲವೆಂಬುದು ವಿದ್ವಾಂಸರ ಮತ. (ಆದ್ದರಿಂದ) ಆ ಲೋಭವನ್ನು ಪ್ರಯತ್ನಪೂರ್ವಕವಾಗಿ ಗೆಲ್ಲಬೇಕು; ಈ ಇಬ್ಬಗೆಯ ದುರ್ವ್ಯಸನಗಳೂ ಲೋಭಜನ್ಯವಾದಂತವು.

೪೯. ಲೋಭವು ಎಲ್ಲ ಪಾಪಗಳಿಗೂ ಮೂಲ ಕಾರಣ. ಹೋಲಿಸಿರಿ :

लोभमूलानि पापानि (सुभाषित).
लोभश्चेदगुणेन किम् (भर्तृहरि) – ಅತ್ಯಾಶೆ, ದುರಾಶೆ; ಧರ್ಮಕ್ಕೆ ವಿರುದ್ಧವಾಗಿ ದ್ರವ್ಯಸಂಗ್ರಹ ಮಾಡುವ ಅತ್ಯಾಶೆ.

पानमक्षाः स्त्रियश्चैव मृगया च यथाक्रमम् ।
एतत्कष्टतमं विद्याच्चतुष्कं कामजे गणे ॥ ५० ॥
**ಪಾನಮಕ್ಷಾಃ ಸ್ತ್ರಿಯಶ್ಚೈವ ಮೃಗಯಾ ಚ ಯಥಾಕ್ರಮಂ ।**
**ಏತತ್ಕಷ್ಟತಮಂ ವಿದ್ಯಾಚ್ಚತುಷ್ಕಂ ಕಾಮಜೇ ಗಣೇ ॥ ೫೦ ॥**

೫೦. ಕಾಮಜನ್ಯ ದುರ್ವ್ಯಸನಗಳಲ್ಲಿ ಮದ್ಯಪಾನ, ಜೂಜು, ಸ್ತ್ರೀಲೋಲುಪತೆ ಮತ್ತು ಬೇಟೆಗಳು ಕ್ರಮವಾಗಿ (ಉಳಿದವುಗಳಿಂದ) ಹೆಚ್ಚು ಕಷ್ಟನಷ್ಟಗಳನ್ನುಂಟು ಮಾಡತಕ್ಕವು.

೫೦. दिवास्वप्नादिभ्योऽस्य चतुष्कस्य गणस्य बहुदोषतरत्वं प्रसिद्धमेव (मे०) – ಹಗಲುನಿದ್ದೆ ಮೊದಲಾದ ಮಿಕ್ಕ ದುರ್‌ವ್ಯಸನಗಳಿಗಿಂತ ಈ ನಾಲ್ಕು ಹೆಚ್ಚು ಕೆಟ್ಟ ಪರಿಣಾಮವನ್ನುಂಟು ಮಾಡುವುದು ಸುವಿದಿತ.

दण्डस्य पातनं चैव वाक्पारुष्यार्थदूषणे ।
क्रोधजेऽपि गणे विद्यात्कष्टमेतत्त्रिकं सदा ॥ ५१ ॥
**ದಂಡಸ್ಯ ಪಾತನಂ ಚೈವ ವಾಕ್ಪಾರುಷ್ಯಾರ್ಥದೂಷಣೇ ।**
**ಕ್ರೋಧಜೇಽಪಿ ಗಣೇ ವಿದ್ಯಾತ್ಕಷ್ಟಮೇತತ್ತ್ರಿಕಂ ಸದಾ ॥ ೫೧ ॥**

೫೧. ಕ್ರೋಧಜನ್ಯ ದುರ್ವ್ಯಸನ ಸಮೂಹದಲ್ಲಿ ಅತಿದಂಡನೆ, ಕಟುವಚನ ಮತ್ತು ಪರಸ್ವಾಪಹಾರಗಳು ಯಾವಾಗಲೂ ಹೆಚ್ಚು ಕಷ್ಟ ತಂದೊಡ್ಡತಕ್ಕವು.

೫೧. अयमपि त्रिकः पैशुन्यादिभ्यः पापीयानिति सुप्रतीतम् (ಲೆ೦ ) – ಈ ಮೂರು ಚಾಡಿಕೋರತನ ಮುಂತಾದ ದುರ್ವ್ಯಸನಗಳಿಗಿಂತ ಹೆಚ್ಚು ದುರ್ಗತಿಗೆ ಕಾರಣಗಳಾಗುತ್ತವೆಯೆಂಬುದು ಸುಪ್ರಸಿದ್ಧ.

सप्तकस्यास्य वर्गस्य सर्वत्रैवानुषङ्गिणः ।
पूर्वं पूर्वं गुरुतरं विद्याद्व्यसनमात्मवान् ॥ ५२ ॥
**ಸಪ್ತಕಸ್ಯಾಸ್ಯ ವರ್ಗಸ್ಯ ಸರ್ವತ್ರೈವಾನುಷಂಗಿಣಃ ।**
**ಪೂರ್ವಂ ಪೂರ್ವಂ ಗುರುತರಂ ವಿದ್ಯಾದ್ವ್ಯಸನಮಾತ್ಮವಾನ್ ॥ ೫೨ ॥**

೫೨. ಪ್ರಶಸ್ತಾತ್ಮನಾದ (ರಾಜನು) ಎಲ್ಲೆಲ್ಲೂ ಬೆನ್ನಟ್ಟಿ ಬರುವ ಈ ಏಳು ಕಾಮ–ಕ್ರೋಧಜನ್ಯ ದುರ್ವ್ಯಸನಗಳಲ್ಲಿ ಮೊದಮೊದಲು ಉಲ್ಲೇಖಿಸಲಾದ ದುರ್ವ್ಯಸನವು ಆಮೇಲೆ ಉಲ್ಲೇಖಿಸಲಾದ ದುರ್ವ್ಯಸನಕ್ಕಿಂತ ಹೆಚ್ಚು ಕಷ್ಟಕರವೆಂದು ತಿಳಿಯಬೇಕು.

೫೨. ಕಾಮಜ ದುರ್ವ್ಯಸನಗಳು ಹತ್ತು ಮತ್ತು ಅವುಗಳಲ್ಲಿ ನಾಲ್ಕು ಬಹಳ ದುರ್ಗತಿಕಾರಕಗಳೆಂದು ಈ ಮೊದಲೇ ಹೇಳಲಾಗಿದೆ (ಶ್ಲೋಕ ೪೭ ಮತ್ತು ೫೦). ಇವುಗಳಲ್ಲಿ ಕೂಡ ಬೇಟೆಗಿಂತ ಸ್ತ್ರೀವ್ಯಸನ, ಸ್ತ್ರೀವ್ಯಸನಕ್ಕಿಂತ ಜೂಜು ಮತ್ತು ಜೂಜಿಗಿಂತ ಮದ್ಯಪಾನ – ಹೆಚ್ಚು ದುಷ್ಪರಿಣಾಮಕರವೆಂದು ತಿಳಿಯಬೇಕು. ಹಾಗೇ ಕ್ರೋಧಜನ್ಯವಾದ ಎಂಟು ದುರ್ವ್ಯಸನಗಳಲ್ಲಿ (ಶ್ಲೋಕ ೪೮) ಮೂರು ಹೆಚ್ಚು ದುಷ್ಪರಿಣಾಮಕರವೆಂದು ಹೇಳಲಾಗಿದೆ (ಶ್ಲೋಕ ೫೧). ಇವುಗಳಲ್ಲಿಯೂ ಧನಾಪಹರಣಕ್ಕಿಂತ ಕಠೋರ ಮಾತು (ಕಟುನುಡಿ) ಮತ್ತು ಅದಕ್ಕಿಂತ ಹೆಚ್ಚಾಗಿ ಉಗ್ರದಂಡನೆ ಹೆಚ್ಚು ದುಷ್ಪರಿಣಾಮಕರವೆಂದು ತಿಳಿಯಬೇಕು.

व्यसनस्य च मृत्योश्च व्यसनं कष्टमुच्यते ।
व्यसन्यधोऽधो व्रजति स्वर्यात्यव्यसनी मृतः ॥ ५३ ॥
**ವ್ಯಸನಸ್ಯ ಚ ಮೃತ್ಯೋಶ್ಚ ವ್ಯಸನಂ ಕಷ್ಟಮುಚ್ಯತೇ ।**
**ವ್ಯಸನ್ಯಧೋಽಧೋ ವ್ರಜತಿ ಸ್ವರ್ಯಾತ್ಯವ್ಯಸನೀ ಮೃತಃ ॥ ೫೩ ॥**

೫೩. ದುರ್ವ್ಯಸನ ಮತ್ತು ಮರಣಗಳಲ್ಲಿ ದುರ್ವ್ಯಸನವೇ ಹೆಚ್ಚು ಕಷ್ಟದಾಯಕವೆಂದು ಹೇಳಲಾಗಿದೆ. (ಏಕೆಂದರೆ) ದುರ್ವ್ಯಸನಿಯು ಕೆಳಕೆಳಗೆ (ನರಕಕ್ಕೆ) ಹೋಗುತ್ತಾನೆ; ದುರ್ವ್ಯಸನಗಳಿಲ್ಲದವನು ಸತ್ತ ಮೇಲೆ ಸ್ವರ್ಗಕ್ಕೆ ಹೋಗುತ್ತಾನೆ.

೫೩. अधोऽधः – ನರಕಗಳು ಒಂದರ ಕೆಳಗೆ ಒಂದರಂತಿವೆ ಎಂದು ಪುರಾಣಗಳಲ್ಲಿ ಪ್ರಸಿದ್ಧ; ಕೆಳಕೆಳಗಿನವು ಹೆಚ್ಚು ಹೆಚ್ಚು ಅಸಹ್ಯ.

मौलाञ्छास्त्रविदः शूराँल्लब्धलक्षान्कुलोद्भवान् ।
सचिवान्सप्त चाष्टौ वा प्रकुर्वीत परीक्षितान् ॥ ५४ ॥
**ಮೌಲಾನ್‌ಶಾಸ್ತ್ರವಿದಃ ಶೂರಾನ್ ಲಬ್ಧಲಕ್ಷಾನ್‌ಕುಲೋದ್ಭವಾನ್ ।**
**ಸಚಿವಾನ್‌ಸಪ್ತ ಚಾಷ್ಟೌ ವಾ ಪ್ರಕುರ್ವೀತ ಪರೀಕ್ಷಿತಾನ್ ॥ ೫೪ ॥**

೫೪. ಕುಲಪರಂಪರೆಯಿಂದ ಸೇವಕರಾದ, ಶಾಸ್ತ್ರವನ್ನು ಬಲ್ಲ, ಶೂರರಾದ, ಶಸ್ತ್ರವಿದ್ಯೆಯಲ್ಲಿ ನಿಪುಣರಾದ, ಸತ್ಕುಲದಲ್ಲಿ ಹುಟ್ಟಿದ ಮತ್ತು ಚೆನ್ನಾಗಿ ಪರೀಕ್ಷಿಸಲ್ಪಟ್ಟ ಏಳು ಅಥವಾ ಎಂಟು ಜನ ಮಂತ್ರಿಗಳನ್ನು (ರಾಜನು) ನೇಮಿಸಿಕೊಳ್ಳಬೇಕು.

೫೪. लब्धलक्षान्–दृष्टखड्गव्यापारा, कृतार्थाधिकाराः (मे०); लक्षाद्प्रच्युतशरीरशल्यादीन् आयुधविदः (कु०); सर्वकालेषु सिद्धफलान् (न०).

सुपरीक्षितान्–देवतादि स्पर्शकृतशपथान्, स्त्रीधनादिलोभोत्तीर्णान् वा (राघ) ಪ್ರಲೋಭನಕ್ಕೆ ಒಳಗಾಗದವರು.

अपि यत्सुकरं कर्म तदप्येकेन दुष्करम् ।
विशेषतोऽसहायेन किंतु राज्यं महोदयम् ॥ ५५ ॥
**ಅಪಿ ಯತ್ಸುಕರಂ ಕರ್ಮ ತದಪ್ಯೇಕೇನ ದುಷ್ಕರಮ್ ।**
**ವಿಶೇಷತೋಽಸಹಾಯೇನ ಕಿಂತು ರಾಜ್ಯಂ ಮಹೋದಯಮ್ ॥ ೫೫ ॥**

೫೫. ಸುಲಭವಾಗಿ ಮಾಡಲು ಸಾಧ್ಯವಾದ ಕೆಲಸವನ್ನು ಕೂಡ ಒಬ್ಬನೇ ಮಾಡಲಾರ. (ಎಂದ ಮೇಲೆ) ಮಹಾಫಲ ಕೊಡುವ ರಾಜ್ಯಭಾರವನ್ನು ವಿಶೇಷವಾಗಿ ಬೆಂಬಲವಿಲ್ಲದವನು ಹೇಗೆ ಮಾಡಬಲ್ಲ?

೫೫. महोदयम् – महत्कार्य, महदैश्वर्यादेः शत्रुजयादेर्वा उदयो यस्मात् तत् (राघ०) – ಮಹತ್ಕಾರ್ಯ ಸಾಧನೆ.

तैः सार्धं चिन्तयेन्नित्यं सामान्यं संधिविग्रहम् ।
स्थानं समुदयं गुप्तिं लब्धप्रशमनानि च ॥ ५६ ॥

**ತೈಃ ಸಾರ್ಧಂ ಚಿಂತಯೇನ್ನಿತ್ಯಂ ಸಾಮಾನ್ಯಂ ಸಂಧಿವಿಗ್ರಹಮ್ ।**
**ಸ್ಥಾನಂ ಸಮುದಯಂ ಗುಪ್ತಿಂ ಲಬ್ಧಪ್ರಶಮನಾನಿ ಚ ॥ ೫೬ ॥**

೫೬. ಅವರೊಡನೆ (ರಾಜನು ) ದಿನವೂ ಸಾಮಾನ್ಯವಾದ ಸಂಧಿ, ಯುದ್ಧ, ಸ್ಥಾನ (ದಂಡ, ಕೋಶ, ಪುರ, ರಾಷ್ಟ್ರಗಳು), ಆಯಮೂಲ, ಸಂರಕ್ಷಣೆ ಮತ್ತು ವಸೂಲು ಮಾಡಲಾದ ವಿತ್ತದ ಸತ್‌ಪಾತ್ರ ವಿನಿಯೋಗಗಳ ಬಗೆಗೆ ಪರ್ಯಾಲೋಚಿಸಬೇಕು.

೫೬ स्थानम्–दण्डकोशपुरराष्ट्रात्मकं चतुर्विधम् – ಇಲ್ಲಿ ದಂಡವೆಂದರೆ ಆನೆ, ಕುದುರೆ, ರಥ ಮತ್ತು ಕಾಲಾಳುಗಳಿಂದ ಕೂಡಿದ ಚತುರಂಗಬಲ, ಕೋಶವೆಂದರೆ ಬೊಕ್ಕಸ. ಇವುಗಳ ಪೋಷಣೆ ಮತ್ತು ವರ್ಧನೆಗಳ ಬಗ್ಗೆ ಹಾಗೂ ರಾಜಧಾನಿಯ ಮತ್ತು ರಾಜ್ಯದ ರಕ್ಷಣೆಯ ಬಗ್ಗೆ ರಾಜನು ಆಲೋಚಿಸಬೇಕು.

समुदयम् – ಧಾನ್ಯ, ಸುವರ್ಣ ಮುಂತಾದ ಸಂಪತ್ತು ಹುಟ್ಟುವ ಆಕರಗಳು, ಸಂಪನ್ಮೂಲಗಳು.

गुप्तिम् – ಸ್ವಂತದ ಹಾಗೂ ರಾಷ್ಟ್ರದ ರಕ್ಷಣೆ.

लब्धप्रशमनानि – ದೊರೆತ ಸಂಪತ್ತನ್ನು ತಕ್ಕ ಜನರಿಗೆ ವಿತರಣೆ ಮಾಡುವುದು (सत्पात्रप्रतिपादनानि – राघ०).

तेषां स्वं स्वमभिप्रायमुपलभ्य पृथक् पृथक् ।
समस्तानां च कार्येषु विदध्याद्धितमात्मनः ॥ ५७ ॥
**ತೇಷಾಂ ಸ್ವಂ ಸ್ವಮಭಿಪ್ರಾಯಂ ಉಪಲಭ್ಯ ಪೃಥಕ್ ಪೃಥಕ್ ।**
**ಸಮಸ್ತಾನಾಂ ಚ ಕಾರ್ಯೇಷು ವಿದಧ್ಯಾದ್ಧಿತಮಾತ್ಮನಃ ॥ ೫೭ ॥**

೫೭. (ಮಂತ್ರಿಗಳಲ್ಲಿ) ಅವರವರ ಅಭಿಪ್ರಾಯಗಳನ್ನು ಪ್ರತ್ಯೇಕವಾಗಿ (ಏಕಾಂತದಲ್ಲಿ) ತಿಳಿದುಕೊಂಡು (ರಾಜನು), ಅವರೆಲ್ಲರ ಒಟ್ಟಭಿಪ್ರಾಯವನ್ನೂ ಏಕಕಾಲದಲ್ಲಿ ಗ್ರಹಿಸಿ ತನಗೆ ಹಿತಕಾರಿಯಾದುದನ್ನು ಕಾರ್ಯಗತಗೊಳಿಸಬೇಕು.

೫೭. पृथक् पृथक्–कश्चित् पुरुषः परिषदि अप्रतिभानवान् भवति रहसि प्रगल्भः (मे०) – ಕೆಲವರು ಸಭೆಯಲ್ಲಿ ಅಪ್ರತಿಭರಾಗಿ ಸುಮ್ಮನಿರುತ್ತಾರೆ; ಅಂಥವರು ಏಕಾಂತದಲ್ಲಿ ಬಿಚ್ಚು ಮನಸ್ಸಿನಿಂದ ಮಾತಾಡುತ್ತಾರೆ.

सर्वेषां तु विशिष्टेन ब्राह्मणेन विपश्चिता ।
मन्त्रयेत्परमं मन्त्रं राजा षाड्गुण्यसंयुतम् ॥ ५८ ॥

**ಸರ್ವೇಷಾಂ ವಿಶಿಷ್ಟೇನ ಬ್ರಾಹ್ಮಣೇನ ವಿಪಶ್ಚಿತಾ ।**
**ಮಂತ್ರಯೇತ್ಪರಮಂ ಮಂತ್ರಂ ರಾಜಾ ಷಾಡ್ಗುಣ್ಯಸಂಯುತಮ್ ॥ ೫೮ ॥**

೫೮. ಎಲ್ಲ ಮಂತ್ರಿಗಳಲ್ಲಿ ವಿಶೇಷವಾಗಿ ವಿದ್ವಾಂಸನಾಗಿರುವ ಬ್ರಾಹ್ಮಣ ಮಂತ್ರಿಯೊಡನೆ ರಾಜನು (ಸಂಧಿ, ವಿಗ್ರಹ ಮುಂತಾದ) ಷಡ್ಗುಣಗಣದಿಂದ ಕೂಡಿದ ಅತ್ಯಂತ ಗುಪ್ತವಾದ ವಿಷಯಗಳನ್ನು ಸಮಾಲೋಚಿಸಬೇಕು

೫೮. विशिष्टेन – ಧಾರ್ಮಿಕತ್ವಾದಿ ಗುಣಗಳಿಂದ ಕೂಡಿದೆ.
मन्त्रम् – ರಹಸ್ಯವಾದ ವಿಚಾರ.
ಷಾಡ್ಗುಣ್ಯದ ವಿವರಣೆ ಮುಂದೆ ಶ್ಲೋಕ ೧೬೦ರಲ್ಲಿ ಬರುತ್ತದೆ.

नित्यं तस्मिन्समाश्वस्तः सर्वकार्याणि निःक्षिपेत् ।
तेन सार्धं विनिश्चित्य ततः कर्म समारभेत् ॥५९ ॥
**ನಿತ್ಯಂ ತಸ್ಮಿನ್ ಸಮಾಶ್ವಸ್ತಃ ಸರ್ವಕಾರ್ಯಾಣಿ ನಿಃ ಕ್ಷಿಪೇತ್ ।**
**ತೇನ ಸಾರ್ಧಂ ವಿನಿಶ್ಚಿತ್ಯ ತತಃ ಕರ್ಮ ಸಮಾರಭೇತ್ ॥ ೫೯ ॥**

೫೯. ಅವನಲ್ಲಿ ಯಾವಾಗಲೂ ವಿಶ್ವಾಸವಿಟ್ಟು ರಾಜನು ಎಲ್ಲ ಕಾರ್ಯಗಳನ್ನೂ ಅವನಿಗೊಪ್ಪಿಸಬೇಕು; ಅವನೊಡನೆ (ಚರ್ಚಿಸಿ) ನಿರ್ಣಯಿಸಿದ ಮೇಲೆಯೇ ರಾಜನು (ತಕ್ಕ) ಕಾರ್ಯವನ್ನು ಆರಂಭಿಸಬೇಕು.

೫೯. कर्म संमारभेत्–यानासनादि कर्मव्यवहारसंग्रहादि समाचरेन् । (ಮೇ೦) ಯಾನ, ಆಸನ ಇತ್ಯಾದಿಗಳನ್ನು ಕುರಿತು ಮುಂದೆ ಶ್ಲೋಕ ೧೬೦ನ್ನು ನೋಡಿರಿ.

अन्यानपि प्रकुर्वीत शुचीन्प्राज्ञानवस्थितान् ।
सम्यगर्थसमाहर्तृनमात्यान्सुपरीक्षितान् ॥ ६० ॥
**ಅನ್ಯಾನಪಿ ಪ್ರಕುರ್ವೀತ ಶುಚೀನ್ಪ್ರಾಜ್ಞಾನವಸ್ಥಿತಾನ್ ।**
**ಸಮ್ಯಗರ್ಥಸಮಾಹರ್ತೄನಮಾತ್ಯಾನ್ಸುಪರೀಕ್ಷಿತಾನ್ ॥ ೬೦ ॥**

೬೦. ಶುದ್ಧಶೀಲರೂ ಬುದ್ಧಿವಂತರೂ ಸ್ಥಿರಚಿತ್ತರೂ ಯೋಗ್ಯರೀತಿಯಿಂದ ಧನಧಾನ್ಯಾದಿಗಳನ್ನು (ರಾಜನಿಗಾಗಿ) ವಸೂಲು ಮಾಡುವವರೂ ಚೆನ್ನಾಗಿ ಪರೀಕ್ಷಿಸಲ್ಪಟ್ಟವರೂ ಆದ ಇತರ ಕರ್ಮಸಚಿವರನ್ನು ಕೂಡ (ರಾಜನು) ನೇಮಿಸಿಕೊಳ್ಳಬೇಕು.

೬೦. शुचीन् – ವಂಶದಲ್ಲಿ ಶುದ್ಧರಾದ, ಲಂಚ ತೆಗೆದುಕೊಳ್ಳದ ಶುದ್ಧಾಚರಣೆಯುಳ್ಳವರು. अवस्थितान्–स्थिरस्वभावान् –(म०) – ಆಪತ್ಕಾಲದಲ್ಲಿ ಹೆದರದೆ ಅಥವಾ ಪ್ರಲೋಭನಕ್ಕೆ ಒಳಗಾಗದೆ ರಾಜನ ಹಿತವನ್ನೇ ಬಯಸುವವರು. सम्यगर्थसमाहर्तॄन् – ರಾಜನಿಗಾಗಿ ಸರಿಯಾದ ಕ್ರಮದಲ್ಲಿ ತೆರಿಗೆಯನ್ನು ಸಂಗ್ರಹಿಸಿ ಕೊಡುವವರು.

निर्वर्तेतास्य यावद्भिरितिकर्तव्यता नृभिः ।
तावतोऽतन्द्रितान्दक्षान्प्रकुर्वीत विचक्षणान् ॥ ६१ ॥
**ನಿರ್ವರ್ತೇತಾಸ್ಯ ಯಾವದ್ಭಿರಿತಿಕರ್ತವ್ಯತಾ ನೃಭಿಃ ।**
**ತಾವತೋಽತಂದ್ರಿತಾನ್ ದಕ್ಷಾನ್ ಪ್ರಕುರ್ವೀತ ವಿಚಕ್ಷಣಾನ್ ॥ ೬೧ ॥**

೬೧. (ರಾಜನಾದ) ಇವನ ಎಲ್ಲ ಕಾರ್ಯಗಳೂ ಪೂರಯಿಸಲ್ಪಡಲು ಬೇಕಾದಷ್ಟು ಆಲಸ್ಯರಹಿತರೂ ದಕ್ಷರೂ ಚತುರರೂ ಆದ ಜನರನ್ನು (ಸಚಿವರನ್ನಾಗಿ) ನಿಯಮಿಸಿಕೊಳ್ಳಬೇಕು.

೬೧. ಹೋಲಿಸಿರಿ :

बुद्धिमाननुरक्तश्च युक्तो धर्मार्थकोविदः ।
शुचिर्दक्षः कुलीनश्च मन्त्री यस्य स राज्यभाक् ॥
–नीतिसार, अध्यक्षप्रचार

तेषामर्थे नियुञ्जीत शूरान्दक्षान्कुलोद्भवान् ।
शुचीनाकरकर्मान्ते भीरूनन्तर्निवेशने ॥ ६२ ॥
**ತೇಷಾಮರ್ಥೇ ನಿಯುಂಜೀತ ಶೂರಾನ್ ದಕ್ಷಾನ್ ಕುಲೋದ್ಭವಾನ್ ।**
**ಶುಚೀನಾಕರಕರ್ಮಾಂತೇ ಭೀರೂನಂತರ್ನಿವೇಶನೇ ॥ ೬೨ ॥**

೬೨. ಆ ಸಚಿವರಲ್ಲಿ ಶೂರರೂ ದಕ್ಷರೂ ಕುಲೀನರೂ ಶುದ್ಧಶೀಲರೂ ಆದವರನ್ನು ಧನ–ಧಾನ್ಯಾದಿಗಳನ್ನು ವಸೂಲಿಗಾಗಿ ಮತ್ತು ಅಂಜುಬುರುಕರನ್ನು ಅರಮನೆಯೊಳಗಿನ ಕೆಲಸಗಳಿಗಾಗಿ (ರಾಜನು) ನಿಯಮಿಸಬೇಕು. (ಧನೋತ್ಪತ್ತಿಸ್ಥಾನಗಳಿಗೆ ಬಂಗಾರ ಮುಂತಾದ ಲೋಹಗಳ ಗಣಿಗಳೂ ಧಾನ್ಯೋತ್ಪತ್ತಿ ಸ್ಥಾನಗಳಿಗೆ ಕೃಷಿಕ್ಷೇತ್ರಗಳೂ ಉದಾಹರಣೆಗಳು.)

೬೨. आकरकर्मान्ते–आकरेषु सुवर्णाद्युत्पत्तिस्थानेषु, कर्मान्तेषु च इक्षुधान्यादिसंग्रहस्थानेषु (कु०).

भीरूनन्तर्निवेशने– ಅಂಜುಕುಳಿಗಳನ್ನು ಅಂತಃಪುರ ಮುಂತಾದ ಸ್ಥಾನದಲ್ಲಿಡಬೇಕು; ಶೂರರು ಅಲ್ಲಿ ರಾಜನನ್ನು ಕೊಲ್ಲಬಹುದು ಎಂಬುದರಿಂದ.

दूतं चैव प्रकुर्वीत सर्वशास्त्रविशारदम् ।
इङ्गिताकारचेष्टज्ञं शुचिं दक्षं कुलोद्गतम् ॥ ६३ ॥
**ದೂತಂ ಚೈವ ಪ್ರಕುರ್ವೀತ ಸರ್ವಶಾಸ್ತ್ರವಿಶಾರದಮ್ ।**
**ಇಂಗಿತಾಕಾರಚೇಷ್ಟಜ್ಞಂ ಶುಚಿಂ ದಕ್ಷಂ ಕುಲೋದ್ಗತಂ ॥ ೬೩ ॥**

೬೩. ಎಲ್ಲ ಶಾಸ್ತ್ರಗಳನ್ನು ಬಲ್ಲವನೂ (ಪರರ) ಇಂಗಿತ, ಭಾವ ಮತ್ತು ಚಲನವಲನಗಳನ್ನು (ಸೂಕ್ಷ್ಮವಾಗಿ) ಗ್ರಹಿಸಬಲ್ಲವನೂ ಶುದ್ಧಶೀಲ, ದಕ್ಷ ಮತ್ತು ಕುಲೀನನೂ ಆದವನನ್ನು ರಾಜದೂತನನ್ನಾಗಿ (ರಾಜನು) ನೇಮಿಸಿಕೊಳ್ಳಬೇಕು.

೬೩. इंगितज्ञ – ಮಾತು ಮತ್ತು ಸ್ವರಗಳಿಂದ ಅಭಿಪ್ರಾಯವನ್ನು ತಿಳಿದುಕೊಳ್ಳಬಲ್ಲವನು. आकारज्ञ – ಮುಖವನ್ನು ನೋಡಿ ಪ್ರಸನ್ನತೆ, ಕೋಪ ಮುಂತಾದ ಭಾವನೆಗಳನ್ನು ಅರಿಯಬಲ್ಲವನು. चेष्टज्ञ – ಕೈಕಾಲುಗಳ ಚಲನೆ ಮುಂತಾದ ಕ್ರಿಯೆಗಳಿಂದ ಭೀತಿ ಮುಂತಾದ ಭಾವನೆಗಳನ್ನು ತಿಳಿಯಬಲ್ಲವನು.

अनुरक्तः शुचिर्दक्षः स्मृतिमान्देशकालवित् ।
वपुष्मान्वीतभीर्वाग्मी दूतो राज्ञः प्रशस्यते ॥ ६४ ॥
**ಅನುರಕ್ತಃ ಶುಚಿರ್ದಕ್ಷಃ ಸ್ಮೃತಿಮಾನ್ ದೇಶಕಾಲವಿತ್ ।**
**ವಪುಷ್ಮಾನ್ ವೀತಭೀರ್ವಾಗ್ಮೀ ದೂತೋ ರಾಜ್ಞಃ ಪ್ರಶಸ್ಯತೇ ॥ ೬೪ ॥**

೬೪. (ರಾಜನಲ್ಲಿ) ಅನುರಕ್ತ, ಶುದ್ಧಶೀಲ, ದಕ್ಷ, ಸ್ಮರಣಶಕ್ತಿಸಂಪನ್ನ, ದೇಶಕಾಲಜ್ಞ, ಆಕರ್ಷಕ ವ್ಯಕ್ತಿತ್ವಸಂಪನ್ನ, ನಿರ್ಭೀತ ಮತ್ತು ವಾಗ್ಮಿ ಎನ್ನಿಸಿದವನು ರಾಜದೂತನಾಗುವುದು ಪ್ರಶಸ್ತ.

೬೪. अनुरक्तः– जनेषु अनुरागवान्, तेन प्रतिराजादेरपि अद्वेषविषयः (कु०) – ರಾಜದೂತನು ಜನಪ್ರಿಯನಾಗಿದ್ದರೆ ಪ್ರತಿರಾಜರು ಅವನನ್ನು ದ್ವೇಷಿಸುವುದಿಲ್ಲ ಎಂಬ ವಿವರಣೆಯೂ ಇದೆ.

वीतभीः– विगतभयः तेन अप्रियसंदेशस्यापि वक्ता (कु) –ಅಪ್ರಿಯವಾದದ್ದನ್ನು ಸಹ ನಿರ್ಭಯವಾಗಿ ಹೇಳಬಲ್ಲವನು.

अमात्ये दण्ड आयत्तो दण्डे वैनयिकी क्रिया ।
नृपतौ कोशराष्ट्रे च दूते संधिविपर्ययौ ॥ ६५ ॥
**ಅಮಾತ್ಯೇ ದಂಡ ಆಯತ್ತೋ ದಂಡೇ ವೈನಯಿಕೀ ಕ್ರಿಯಾ ।**
**ನೃಪತೌ ಕೋಶರಾಷ್ಟ್ರೇ ಚ ದೂತೇ ಸಂಧಿವಿಪರ್ಯಯೌ ॥ ೬೫ ॥**

೬೫. ದಂಡಾಧಿಕಾರವು ರಕ್ಷಣಾಸಚಿವನ ಅಧೀನವಾಗಿರುತ್ತದೆ; ಪ್ರಜೆಗಳ ನಿಯಂತ್ರಣವು ದಂಡದ (ಸೈನ್ಯದ) ಅಧೀನ; ಕೋಶ (ಖಜಾನೆ) ಮತ್ತು ರಾಜ್ಯಗಳು ರಾಜಾಧೀನ; ಸಂಧಿ–ಯುದ್ಧಗಳು ರಾಜದೂತಾಧೀನ.

೬೫. दण्डः– हस्त्यश्वरथपदाताद्यात्मकः (राघ) – ಚತುರಂಗಬಲ.
वैनयिकी क्रिया – ಜನರನ್ನು ವಿಧೇಯರನ್ನಾಗಿ ಇಡುವ ಕಾರ್ಯ.

दूत एव हि संधत्ते भिनत्त्येव च संहतान् ।
दूतस्तत्कुरुते कर्म भिद्यन्ते येन मानवाः ॥६६ ॥
**ದೂತ ಏವ ಹಿ ಸಂಧತ್ತೇ ಭಿನತ್ತ್ಯೇವ ಚ ಸಂಹತಾನ್ ।**
**ದೂತಸ್ತತ್ಕುರುತೇ ಕರ್ಮ ಭಿದ್ಯಂತೇ ಯೇನ ಮಾನವಾಃ ॥ ೬೬ ॥**

೬೬. ನಿಜವಾಗಿ ರಾಜದೂತನೇ ಒಡೆದ ರಾಜರನ್ನು ಕೂಡಿಸುತ್ತಾನೆ, ಕೂಡಿದ್ದವರನ್ನು ಒಡೆಯುತ್ತಾನೆ. ಜನರನ್ನು ಒಡೆಯುವ ಕೆಲಸವನ್ನು ರಾಜದೂತ ಮಾಡುತ್ತಾನೆ.

೬೬. ರಾಜದೂತನು ಭೇದೋಪಾಯಚತುರನಾಗಿರುತ್ತಾನೆ; ರಾಷ್ಟ್ರಗಳಲ್ಲಿ ಯುದ್ಧವಾಗುವುದು ಅಥವಾ ಸಂಧಿಯಾಗುವುದು ಅವನನ್ನೇ ಅವಲಂಬಿಸಿರುತ್ತದೆ– ಎಂದು ತಾತ್ಪರ್ಯ.

स विद्यादस्य कृत्येषु निगूढेङ्गितचेष्टितैः ।
आकारमिङ्गितं चेष्टां भृत्येषु च चिकीर्षितम् ॥ ६७ ॥
**ಸ ವಿದ್ಯಾದಸ್ಯ ಕೃತ್ಯೇಷು ನಿಗೂಢೇಂಗಿತಚೇಷ್ಟಿತೈಃ ।**
**ಆಕಾರಮಿಂಗಿತಂ ಚೇಷ್ಟಾಂ ಭೃತ್ಯೇಷು ಚ ಚಿಕೀರ್ಷಿತಮ್ ॥ ೬೭ ॥**

೬೭. ಅವನು ಶತ್ರುರಾಜನ (ರಾಜದೂತರನ್ನು ಪ್ರಲೋಭಿಸುವ) ಕೃತ್ಯಗಳಲ್ಲಿ (ಅವನ) ಭಾವ, ಇಂಗಿತ, ಚಲನವಲನಗಳನ್ನು ಅರಿತುಕೊಳ್ಳಬೇಕು; ಆ ರಾಜನ ಗೂಢಚಾರರ (ಹತ್ತಿರದಲ್ಲೇ ಇದ್ದಾಗಲೂ) ಮತ್ತು ಅವನ (ಕ್ಷುಬ್ಧ ಅಥವಾ ಲುಬ್ಧ) ಸೇವಕರ ಇಂಗಿತ–ಚಲನವಲನಗಳ ಮೂಲಕ ಅವನು ಮಾಡಬೇಕೆಂದಿರುವ ಕಾರ್ಯವನ್ನು (ರಾಜದೂತನು) ಅರಿತುಕೊಳ್ಳಬೇಕು.

೬೭. ರಾಜದೂತನು ತನ್ನ ಇಂಗಿತ ಮತ್ತು ಚಲನವಲಗಳನ್ನು ಗುಪ್ತವಾಗಿಟ್ಟುಕೊಂಡು ಅವನ (ಶತ್ರುರಾಜನ) ಕೃತ್ಯಗಳಲ್ಲಿ ಭಾವ, ಇಂಗಿತ, ಚಲನವಲನಗಳನ್ನು ಮತ್ತು ಅವನ ಸೇವಕರಿಂದ ಮಾಡಿಸಬಯಸುವ ಕಾರ್ಯಗಳನ್ನು ತಿಳಿದುಕೊಳ್ಳಬೇಕು– ಎಂಬುದು ಸರ್ವಜ್ಞ ನಾರಾಯಣನ ವ್ಯಾಖ್ಯೆಯನ್ನಾಧರಿಸಿದ ಭಾಷಾಂತರ. ಕುಲ್ಲೂಕನ ಪ್ರಕಾರ; ರಾಜದೂತನು ಶತ್ರುರಾಜನ ಅನುಚರರ ನಡುವೆ ಇದ್ದು, ಅವರ ಇಂಗಿತ ಚೇಷ್ಟೆಗಳಿಂದ ಅವರ ರಾಜನಿಷ್ಠೆಯನ್ನು ತಿಳಿದುಕೊಳ್ಳಬೇಕು; ಅವರಲ್ಲಿರುವ ಕುಪಿತ, ಲೋಭಿ, ಅಪಮಾನಿತರವನ್ನು ಗುರುತಿಸಿ ತಕ್ಕ ಕ್ರಮಗಳಿಂದ ಅವರನ್ನು ತನ್ನ ರಾಜಕಾರ್ಯಕ್ಕೆ ಬಳಸಿಕೊಳ್ಳಬೇಕು.

निगूढेङ्गितचेष्टितैः– निगूढा अनुचराः प्रतिपक्षनृपस्य एव परिजनाः तस्मिन् युक्ताः, तत्सन्निधौ अपि तेषा इङ्गितचेष्टितैः (कु०, राघ०); स्वयं निगूढैः इङ्गितचेष्टितैः उपलक्षितः (स०); निगूढेङ्गितचेष्टितैः पुरुषैः विद्यात् (न०).

भृत्येषु–क्षुभितावमानितेषु (राघ०).

बुद्ध्वा च सर्वं तत्त्वेन परराजचिकीर्षितम् ।
तथा प्रयत्नमातिष्ठेद्यथात्मानं न पीडयेत् ॥ ६८ ॥
**ಬುಧ್ವಾ ಚ ಸರ್ವಂ ತತ್ತ್ವೇನ ಪರರಾಜಚಿಕೀರ್ಷಿತಮ್ ।**
**ತಥಾ ಪ್ರಯತ್ನಮಾತಿಷ್ಠೇದ್ಯಥಾತ್ಮಾನಂ ನ ಪೀಡಯೇತ್ ॥ ೬೮ ॥**

೬೮. ಶತ್ರುರಾಜನು ಮಾಡಲೆಳಸಿದ ಎಲ್ಲವನ್ನೂ (ರಾಜನು) ರಾಜದೂತನಿಂದ ಸರಿಯಾಗಿ ತಿಳಿದುಕೊಂಡು ಅವನು ತನಗೆ ತೊಂದರೆ ಕೊಡದಂತೆ ಪ್ರಯತ್ನ ಮಾಡಬೇಕು.

೬೮. परराजचिकीर्षितं–'मद्राजः यदि अत्र आगन्तुं शक्नोति, तदा भवादृशानां क्षोभादि नङ्क्ष्यति' इति विश्वासं संपादयेत् (राघ०)

जाङ्गलं सस्यसंपन्नमार्यप्रायमनाविलम् ।
रम्यमानतसामन्तं स्वाजीव्यं देशमावसेत् ॥ ६९ ॥
**ಜಾಂಗಲಂ ಸಸ್ಯಸಂಪನ್ನಮಾರ್ಯಪ್ರಾಯಮನಾವಿಲಮ್ ।**
**ರಮ್ಯಮಾನತಸಾಮಂತಂ ಸ್ವಾಜೀವ್ಯಂ ದೇಶಮಾವಸೇತ್ ॥ ೬೯ ॥**

೬೯. ಬಿಸಿಲು ಗಾಳಿಗಳು ಹೆಚ್ಚಾಗಿರುವ, ಧಾನ್ಯಸಮೃದ್ಧವಾದ, ಸಜ್ಜನರಿರುವ, ರೋಗ ಮತ್ತು ಪೀಡೆಗಳಿರದ, (ಫಲ–ಪುಷ್ಪ–ವೃಕ್ಷಾದಿಗಳಿಂದ) ಸುಂದರವಾದ,

ಸುತ್ತುಮುತ್ತಲೂ ನಮ್ರರಾದ ಜನರಿರುವ ಮತ್ತು ಉಪಜೀವನ ಸುಲಭಸಾಧ್ಯವಾಗಿರುವ ಪ್ರದೇಶದಲ್ಲಿ (ರಾಜನು) ವಾಸಮಾಡಬೇಕು.

೬೯. ಜಾಙ್ಗಲ – ಎಲ್ಲಿ ಮಳೆ ಹಾಗೂ ಹುಲ್ಲು ಕಡಿಮೆ ಮತ್ತು ಗಾಳಿ ಹಾಗೂ ಬಿಸಿಲು ಹೆಚ್ಚಿವೆಯೋ ಅಂತಹ ಪ್ರದೇಶ (अल्पोदकतृणो यस्तु प्रवातः प्रचुरातपः।).

धन्वदुर्गं महीदुर्गमब्दुर्गं वार्क्षमेव वा ।
नृदुर्गं गिरिदुर्गं वा समाश्रित्य वसेत्पुरम् ॥ ७० ॥
**ಧನ್ವದುರ್ಗಂ ಮಹೀದುರ್ಗಮಬ್ದುರ್ಗಂ ವಾರ್ಕ್ಷಮೇವ ವಾ ।**
**ನೃದುರ್ಗಂ ಗಿರಿದುರ್ಗಂ ವಾ ಸಮಾಶ್ರಿತ್ಯ ವಸೇತ್ಪುರಮ್ ॥ ೭೦ ॥**

೭೦. 'ಧನ್ವದುರ್ಗ', 'ಮಹೀದುರ್ಗ', 'ಅಬ್ದುರ್ಗ', 'ವೃಕ್ಷದುರ್ಗ', 'ನೃದುರ್ಗ' ಮತ್ತು 'ಗಿರಿದುರ್ಗ'ಗಳಲ್ಲಿ ಒಂದನ್ನು (ರಾಜನು) ಆಶ್ರಯಿಸಿರಬೇಕು.

೭೦. धन्वदुर्ग – ಸುತ್ತುಮುತ್ತಲೂ ಐದು ಯೋಜನಗಳವರೆಗೆ ಮರುಭೂಮಿ ಇರುವದರಿಂದ ದುರ್ಗಮವಾದ ಪ್ರದೇಶ.

महीदुर्ग – ಕಲ್ಲು, ಇಟ್ಟಿಗೆಗಳಿಂದ ಕಟ್ಟಿದ ಕೋಟೆ.
अब्दुर्ग – ಸುತ್ತುಮುತ್ತಲೂ ಆಳವಾದ ನೀರಿನಿಂದ ಆವರಿಸಲ್ಪಟ್ಟ ಕೋಟೆ.
वार्क्षदुर्ग – ಸುತ್ತುಮುತ್ತ ದಟ್ಟವಾಗಿ ಗಿಡಮರಗಳು ಬೆಳೆದದ್ದರಿಂದ ದುರ್ಗಮವಾದ ಪ್ರದೇಶ.
नृदुर्ग – ಸುತ್ತಲೂ ಜನರ ಕಾವಲು ಇರುವುದರಿಂದ ಸುರಕ್ಷಿತವಾದ ಸ್ಥಾನ.
गिरिदुर्ग – ಎತ್ತರವಾದ ಪರ್ವತದ ಮೇಲೆ ಕಟ್ಟಿದ ಕೋಟೆ; ಅದು ಶತ್ರುಗಳಿಗೆ ದುರ್ಗಮ.

सर्वेण तु प्रयत्नेन गिरिदुर्गं समाश्रयेत् ।
एषां ही बाहुगुण्येन गिरिदुर्गं विशिष्यते ॥ ७१ ॥
**ಸರ್ವೇಣ ತು ಪ್ರಯತ್ನೇನ ಗಿರಿದುರ್ಗಂ ಸಮಾಶ್ರಯೇತ್ ।**
**ಏಷಾಂ ಹಿ ಬಾಹುಗುಣ್ಯೇನ ಗಿರಿದುರ್ಗಂ ವಿಶಿಷ್ಯತೇ ॥ ೭೧ ॥**

೭೧. ಎಲ್ಲ ಪ್ರಯತ್ನದಿಂದಲೂ (ರಾಜನು) ಗಿರಿದುರ್ಗವನ್ನು ಆಶ್ರಯಿಸಬೇಕು; ಏಕೆಂದರೆ, ಅನೇಕ ಗುಣಗಳಿರುವದರಿಂದ ಗಿರಿದುರ್ಗವು ಮಿಕ್ಕವುಗಳಿಗಿಂತ ಹೆಚ್ಚು ಶ್ರೇಷ್ಠವಾಗಿದೆ.

೭೧. ಪರ್ವತವನ್ನು ಹತ್ತಿ ಹೋಗುವುದು ಕಠಿನ ಮತ್ತು ಮೇಲೆ ನಿಂತು ಕೆಳಗಿನ ಶತ್ರುಗಳನ್ನು ಸಹಜವಾಗಿ ಕೊಲ್ಲಬಹುದು – ಇವು ಗಿರಿದುರ್ಗದ ವಿಶೇಷಗಳು.

त्रीण्याद्यान्याश्रितास्त्वेषां मृगगर्ताश्रयाप्सराः ।
त्रीण्युत्तराणि क्रमशः प्लवङ्गमनरामराः ॥ ७२ ॥
**ತ್ರೀಣ್ಯಾದ್ಯಾನ್ಯಾಶ್ರಿತಾಸ್ತ್ವೇಷಾಂ ಮೃಗಗರ್ತಾಶ್ರಯಾಪ್ಸರಾಃ ।**
**ತ್ರೀಣ್ಯುತ್ತರಾಣಿ ಕ್ರಮಶಃ ಪ್ಲವಂಗಮನರಾಮರಾಃ ॥ ೭೨ ॥**

೭೨. ಇವುಗಳಲ್ಲಿ ಮೊದಲನೆಯ ಮೂರನ್ನು ಚಿಗರೆ, ಹುತ್ತದಲ್ಲಿರುವ ಪ್ರಾಣಿಗಳು ಹಾಗೂ ಜಲಚರ ಪ್ರಾಣಿಗಳು ಮತ್ತು ಆಮೇಲಿನ ಮೂರನ್ನು ಕ್ರಮವಾಗಿ, ಮಂಗ, ಮನುಷ್ಯ ಮತ್ತು ದೇವತೆಗಳು ಆಶ್ರಯಿಸಿರುತ್ತಾರೆ.

೭೨. गर्ताश्रयाः – ಬಿಲ, ಹುತ್ತಗಳಲ್ಲಿರುವ ಇಲಿ, ಸರ್ಪ ಮುಂತಾದ ಪ್ರಾಣಿಗಳು.
अमरा – ದೇವತೆಗಳು ಕೈಲಾಸ ಪರ್ವತವನ್ನಾಶ್ರಯಿಸುವಂತೆ ರಾಜನು ಗಿರಿದುರ್ಗವನ್ನಾಶ್ರಯಿಸಬೇಕು.

यथा दुर्गाश्रितानेतान्नोपहिंसन्ति शात्रवः ।
तथारयो न हिंसन्ति नृपं दुर्गसमाश्रितम् ॥ ७३ ॥
**ಯಥಾ ದುರ್ಗಾಶ್ರಿತಾನೇತಾನ್ನೋಪಹಿಂಸಂತಿ ಶತ್ರವಃ ।**
**ತಥಾರಯೋ ನ ಹಿಂಸಂತಿ ನೃಪಂ ದುರ್ಗಸಮಾಶ್ರಿತಮ್ ॥ ೭೩ ॥**

೭೩. ಇಂತಹ ದುರ್ಗಗಳನ್ನು ಆಶ್ರಯಿಸಿದ (ಮೃಗಾದಿ) ಪ್ರಾಣಿಗಳನ್ನು (ವ್ಯಾಧಾದಿ) ಶತ್ರುಗಳು ಹಿಂಸಿಸುವುದಿಲ್ಲ. ಅದರಂತೆಯೇ ಕೋಟೆಯಲ್ಲಿ ಆಶ್ರಯಗೊಂಡ ರಾಜನನ್ನು ವೈರಿಗಳು ಕೊಲ್ಲಲಾರರು.

೭೩. ಮೃಗಾದಿ ಪ್ರಾಣಿಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಸುರಕ್ಷಿತವಾಗಿರುವಂತೆ ರಾಜನು ತನ್ನ ಕೋಟೆಯಲ್ಲಿ ಸುರಕ್ಷಿತನಾಗಿರುವನು.

एकः शतं योधयति प्राकारस्थो धनुर्धरः ।
शतं दशसहस्राणि तस्माद्दुर्गं विधीयते ॥ ७४ ॥
**ಏಕಃ ಶತಂ ಯೋಧಯತಿ ಪ್ರಾಕಾರಸ್ಥೋ ಧನುರ್ಧರಃ ।**
**ಶತಂ ದಶಸಹಸ್ರಾಣಿ ತಸ್ಮಾದ್ದುರ್ಗಂ ವಿಧೀಯತೇ ॥ ೭೪ ॥**

೭೪. ಕೋಟೆಯಲ್ಲಿದ್ದ ಒಬ್ಬ ಬಿಲ್ಲುಗಾರನು (ಹೊರಗಿನ) ನೂರು ಯೋಧರ ಜೊತೆಗೆ ಯುದ್ಧ ಮಾಡಬಲ್ಲನು; ನೂರು ಧನುರ್ಧಾರಿಗಳು ಹತ್ತು ಸಾವಿರ ಯೋಧರ ಜೊತೆಗೆ ಯುದ್ಧ ಮಾಡಬಹುದು. ಆದ್ದರಿಂದ ಕೋಟೆಯನ್ನು ರಚಿಸಬೇಕೆಂದು ಹೇಳಿದ್ದಾರೆ.

೭೪. प्राकार – ಕೋಟೆಯ ಗೋಡೆ, ಅದರೊಳಗೆ ನಿಂತು ತನ್ನ ಸಂರಕ್ಷಣೆ ಮಾಡಿಕೊಳ್ಳುವುದು ಸುಲಭ.

तत्स्यादायुधसंपन्नं धनधान्येन वाहनैः ।
ब्राह्मणैः शिल्पिभिर्यन्त्रैर्यवसेनोदकेन च ॥ ७५ ॥
**ತತ್ಸ್ಯಾದಾಯುಧಸಂಪನ್ನಂ ಧನಧಾನ್ಯೇನ ವಾಹನೈಃ ।**
**ಬ್ರಾಹ್ಮಣೈಃ ಶಿಲ್ಪಿಭಿರ್ಯಂತ್ರೈರ್ಯವಸೇನೋದಕೇನ ಚ ॥ ೭೫ ॥**

೭೫. ಶಸ್ತ್ರಾಸ್ತ್ರಗಳು, ಸಂಪತ್ತು, ಧಾನ್ಯ, (ಆನೆ, ಕುದುರೆ ಮುಂತಾದ) ವಾಹನಗಳು, ಬ್ರಾಹ್ಮಣರು, ಶಿಲ್ಪಿಗಳು, ಯಂತ್ರಗಳು, ಮೇವು ಮತ್ತು ನೀರು ಇವುಗಳಿಂದ ಆ ಕೋಟೆಯು ಸುಸಜ್ಜಿತವಾಗಿರಬೇಕು.

೭೫. यन्त्रैः – ಅಸ್ತ್ರಗಳನ್ನು ಬಿಡುವ ಸಾಧನಗಳಿಂದ.

तस्य मध्ये सुपर्याप्तं कारयेद्गृहमात्मनः ।
गुप्तं सर्वर्तुकं शुभ्रं जलवृक्षसमन्वितम् ॥ ७६ ॥
**ತಸ್ಯ ಮಧ್ಯೇ ಸುಪರ್ಯಾಪ್ತಂ ಕಾರಯೇದ್ಗೃಹಮಾತ್ಮನಃ ।**
**ಗುಪ್ತಂ ಸರ್ವರ್ತುಕಂ ಶುಭ್ರಂ ಜಲವೃಕ್ಷಸಮನ್ವಿತಮ್ ॥ ೭೬ ॥**

೭೬. ಅದರ ಮಧ್ಯದಲ್ಲಿ (ರಾಜನು) ವಿಶಾಲವಾದ, ಸುರಕ್ಷಿತವಾದ, ಎಲ್ಲ ಋತುಗಳಲ್ಲಿಯೂ ಅನುಕೂಲವಾದ, ಸ್ವಚ್ಛವಾದ ಮತ್ತು ನೀರು ಹಾಗೂ ಮರಗಿಡಗಳಿಂದ ಕೂಡಿದ ತನ್ನ ಅರಮನೆಯನ್ನು ಕಟ್ಟಿಸಬೇಕು.

೭೬. सुपर्याप्तम् – ದೇವಗೃಹ, ಅಂತಃಪುರ, ಶಸ್ತ್ರಾಗಾರ, ಕೋಶಾಗಾರ ಮುಂತಾದವುಗಳನ್ನು ಹೊಂದಿದ್ದರಿಂದ ವಿಶಾಲವಾದ.

गुप्तं – ಪ್ರಾಕಾರ, ಕಂದಕಗಳಿಂದ ಸುರಕ್ಷಿತವಾದ.
सर्वर्तुकं – ಬೇರೆ ಬೇರೆ ಋತುಗಳಲ್ಲಿ ಹಣ್ಣು ಕೊಡುವ ವೃಕ್ಷಗಳಿಂದ ಸಂಪನ್ನವಾದ.

तदध्यास्योद्वहेद्भार्यां सवर्णां लक्षणान्विताम् ।
कुले महति संभूतां हृद्यां रूपगुणान्विताम् ॥ ७७ ॥
**ತದಧ್ಯಾಸ್ಯೋದ್ವಹೇದ್ಭಾರ್ಯಾಂ ಸವರ್ಣಾಂ ಲಕ್ಷಣಾನ್ವಿತಾಮ್ ।**
**ಕುಲೇ ಮಹತಿ ಸಂಭೂತಾಂ ಹೃದ್ಯಾಂ ರೂಪಗುಣಾನ್ವಿತಾಮ್ ॥ ೭೭ ॥**

೭೭. ಆ ಅರಮನೆಯಲ್ಲಿದ್ದು ಸಮಾನ ವರ್ಣದ, ಸುಲಕ್ಷಣಗಳುಳ್ಳ, ಮಹಾಕುಲದಲ್ಲಿ ಹುಟ್ಟಿದ, ಪ್ರಿಯಳಾದ ಮತ್ತು ಸೌಂದರ್ಯ ಹಾಗೂ ಸದ್ಗುಣಗಳಿಂದ ಕೂಡಿದ ಕನ್ಯೆಯನ್ನು (ರಾಜನು) ವಿವಾಹ ಮಾಡಿಕೊಳ್ಳಬೇಕು.

೭೭. सवर्णाम् – ಕ್ಷತ್ರಿಯ ವರ್ಣದವಳು.

लक्षणान्विताम् – ಮೈಮೇಲೆ ಒಳ್ಳೆಯ ಸಾಮುದ್ರಿಕ ಚಿಹ್ನೆಗಳುಳ್ಳವಳು.

पुरोहितं च कुर्वीत वृणुयादेव चर्त्विजः ।
तेऽस्य गृह्याणि कर्माणि कुर्युर्वैतानिकानि च ॥ ७८ ॥
**ಪುರೋಹಿತಂ ಚ ಕುರ್ವೀತ ವೃಣುಯಾದೇವ ಚರ್ತ್ವಿಜಃ ।**
**ತೇऽಸ್ಯ ಗೃಹ್ಯಾಣಿ ಕರ್ಮಾಣಿ ಕುರ್ಯುರ್ವೈತಾನಿಕಾನಿ ಚ ॥ ೭೮ ॥**

೭೮. (ರಾಜನು) ಪುರೋಹಿತನನ್ನು ನೇಮಿಸಿಕೊಳ್ಳಬೇಕು ಮತ್ತು ಋತ್ವಿಜರನ್ನು ಆರಿಸಿಕೊಳ್ಳಬೇಕು. ಅವರು ಅವನ ಗೃಹಕರ್ಮಗಳನ್ನು ಮತ್ತು ಯಜ್ಞಕರ್ಮಗಳನ್ನು ಮಾಡಬೇಕು.

೭೮. ಪುರೋಹಿತನು ಅಥರ್ವ ವೇದದವನಿರಬೇಕೆಂದು ಹೇಳಿದ್ದಾರೆ. ಏಕೆಂದರೆ, ಆಥರ್ವಣಿಕನು ರಾಜನ ಸೇನಾಬಲಕ್ಕೆ ಪೂರಕವಾದ ದೇವತಾಬಲವನ್ನು ಅವನಿಗೆ ಒದಗಿಸುತ್ತಾನೆ; ಅದರಿಂದ ಶತ್ರುನಾಶ ಸುಲಭವಾಗುತ್ತದೆ.

गृह्याणि कर्माणि – ಶಾಂತಿ, ಸ್ವಸ್ತ್ಯಯನ ಮುಂತಾದ ಧಾರ್ಮಿಕ ಕಾರ್ಯಗಳು.

यजेत राजा क्रतुभिर्विविधैराप्तदक्षिणैः ।
धर्मार्थं चैव विप्रेभ्यो दद्याद्भोगान्धनानि च ॥ ७९ ॥
**ಯಜೇತ ರಾಜಾ ಕ್ರತುಭಿರ್ವಿವಿಧೈರಾಪ್ತದಕ್ಷಿಣೈಃ ॥**
**ಧರ್ಮಾರ್ಥಂ ಚೈವ ವಿಪ್ರೇಭ್ಯೋ ದದ್ಯಾದ್ಭೋಗಾನ್ಧನಾನಿ ಚ ॥ ೭೯ ॥**

೭೯. ರಾಜನು ವಿವಿಧ ಯಜ್ಞಗಳನ್ನು ಮಾಡಿ ಸಾಕಷ್ಟು ದಕ್ಷಿಣೆಯನ್ನು ಕೊಡಬೇಕು; ಮತ್ತು ಪುಣ್ಯದ ಸಲುವಾಗಿ ಬ್ರಾಹ್ಮಣರಿಗೆ ಭೋಗ್ಯ ವಸ್ತುಗಳನ್ನು ಹಾಗೂ ಧನವನ್ನು ಕೊಡಬೇಕು.

೭೯. भोगान् – वस्त्रगन्धविलेपनादयो भोजनशेषाश्च भोगाः (मे०); भोग्यान् गोमहिषादीन् (न०).

सांवत्सरिकमाप्तैश्च राष्ट्रादाहारयेद्बलिम् ।
स्याच्चाम्नायपरो लोके वर्तेत पितृवन्नृषु ॥ ९० ॥

**ಸಾಂವತ್ಸರಿಕಮಾಪ್ತೈಶ್ಚ ರಾಷ್ಟ್ರಾದಾಹಾರಯೇದ್ಬಲಿಮ್ ।**
**ಸ್ಯಾಚ್ಚಾಮ್ನಾಯಪರೋ ಲೋಕೇ ವರ್ತೇತ ಪಿತೃವನ್ನೃಷು ॥ ೮೦ ॥**

೮೦. ವಿಶ್ವಾಸಯೋಗ್ಯ (ಅಮಾತ್ಯ)ರಿಂದ ರಾಜನು ವಾರ್ಷಿಕ ಕರಗಳನ್ನು ರಾಜ್ಯದಿಂದ ವಸೂಲು ಮಾಡಬೇಕು. ಅವನು ಈ ಜಗತ್ತಿನಲ್ಲಿ ಶಾಸ್ತ್ರದಂತೆ ನಡೆಯಬೇಕು ಮತ್ತು ಜನರಲ್ಲಿ ತಂದೆಯಂತೆ ವರ್ತಿಸಬೇಕು.

೮೦. आम्नायपर :– ಶಾಸ್ತ್ರದಲ್ಲಿ ಹೇಳಿದಷ್ಟೇ ಕರಗಳನ್ನು ರಾಜನು ತೆಗೆದುಕೊಳ್ಳಬೇಕು; ಮನಸ್ಸಿಗೆ ಬಂದ ಕರಗಳನ್ನು ಪ್ರಜೆಗಳ ಮೇಲೆ ಹೇರುತ್ತ ಹೋಗಬಾರದು; ಹಾಗೆ ಮಾಡಿದರೆ ಅವನಿಗೆ ಪ್ರಜಾಶೋಷಣೆಯ ಪಾಪ ಬರುತ್ತದೆ.

अध्यक्षान्विविधान्कुर्यात्तत्र तत्र विपश्चितः ।
तेऽस्य सर्वाण्यवेक्षेरन्नृणां कार्याणि कुर्वताम् ॥ ८१ ॥

**ಅಧ್ಯಕ್ಷಾನ್ವಿವಿಧಾನ್ ಕುರ್ಯಾತ್ತತ್ರ ತತ್ರ ವಿಪಶ್ಚಿತಃ ।**
**ತೇಽಸ್ಯ ಸರ್ವಾಣ್ಯವೇಕ್ಷೇರನ್ನೃಣಾಂ ಕಾರ್ಯಾಣಿ ಕುರ್ವತಾಮ್ ॥ ೮೧ ॥**

೮೧. (ರಾಜನು) ಅಲ್ಲಲ್ಲಿ ವಿವಿಧ ಅಧಿಕಾರಿಗಳನ್ನು ನೇಮಿಸಬೇಕು. ಅವರು ಎಲ್ಲ ಕಾರ್ಯಗಳನ್ನು ಮಾಡುತ್ತಿರುವ ಜನರನ್ನು ವೀಕ್ಷಿಸಬೇಕು.

೮೧. तत्र तत्र – ಸೈನ್ಯ, ಕೋಶ, ರಾಜದೌತ್ಯ ಮುಂತಾದವುಗಳಿಗೆ ಸಂಬಂಧಿಸಿದ ವ್ಯವಹಾರಗಳಲ್ಲಿ.

आवृत्तानां गुरुकुलाद्विप्राणां पूजको भवेत् ।
नृपाणामक्षयो ह्येष निधिर्ब्राह्मोऽभिधीयते ॥ ८२ ॥

**ಆವೃತ್ತಾನಾಂ ಗುರುಕುಲಾದ್ವಿಪ್ರಾಣಾಂ ಪೂಜಕೋ ಭವೇತ್ ।**
**ನೃಪಾಣಾಮಕ್ಷಯೋ ಹ್ಯೇಷ ನಿಧಿರ್ಬ್ರಾಹ್ಮೋಽಭಿಧೀಯತೇ ॥ ೮೨ ॥**

೮೨. ಗುರುಕುಲದಿಂದ (ವೇದಾಭ್ಯಾಸ ಮುಗಿಸಿ) ಬಂದ ಬ್ರಾಹ್ಮಣರನ್ನು ಪೂಜಿಸಬೇಕು; ಏಕೆಂದರೆ ಅವರನ್ನು ರಾಜರ ಅಕ್ಷಯವಾದ ಬ್ರಾಹ್ಮ ನಿಧಿಯೆಂದು ಕರೆಯಲಾಗಿದೆ.

೮೨. पूजको भवेत् – ಧನಧಾನ್ಯಾದಿಗಳನ್ನು ಕೊಟ್ಟು ಸತ್ಕರಿಸಬೇಕು. 'ಬ್ರಾಹ್ಮನಿಧಿ' ಎಂದರೆ ಬ್ರಾಹ್ಮಣರಲ್ಲಿ ಇಟ್ಟ ಐಶ್ವರ್ಯ. ಬ್ರಾಹ್ಮಣರು ಅಂದು ನಿಃಸ್ಪೃಹರಾದ ಸಾಮಾಜಿಕ ಮುಖಂಡರೂ ಸಾಂಸ್ಕೃತಿಕ

ನೇತೃಗಳೂ ಆಗಿದ್ದರು; ಅವರೇ ಪ್ರಜಾಭಿಪ್ರಾಯವನ್ನು ರೂಪಿಸುವವರು ಮತ್ತು ಪ್ರತಿನಿಧಿಸುವವರು ಎನ್ನಿಸಿದ್ದರು. ನಿಜವಾದ ಪ್ರಜಾಪ್ರತಿನಿಧಿಗಳೆನ್ನಿಸಿದ್ದ ಅವರ ಬೆಂಬಲ ರಾಜನಿಗಿದ್ದರೆ ಅಂದು ಎಲ್ಲ ಪ್ರಜೆಗಳ ಬೆಂಬಲವೂ ಅವನಿಗೆ ಇದ್ದಂತೆಯೇ ಎಂದು ತಿಳಿದುಕೊಳ್ಳಬಹುದಾಗಿತ್ತು.

न तं स्तेना न चामित्रा हरन्ति न च नश्यति ।
तस्माद्राज्ञा निधातव्यो ब्राह्मणेष्वक्षयो निधिः ॥ ८३ ॥
**ನ ತಂ ಸ್ತೇನಾ  ನ ಚಾಮಿತ್ರಾ ಹರಂತಿ ನ ಚ ನಶ್ಯತಿ ।**
**ತಸ್ಮಾದ್ರಾಜ್ಞಾ ನಿಧಾತವ್ಯೋ ಬ್ರಾಹ್ಮಣೇಷ್ವಕ್ಷಯೋ ನಿಧಿಃ ॥ ೮೩ ॥**

೮೩. ಅದನ್ನು ಕಳ್ಳರು ಹಾಗೂ ಶತ್ರುಗಳು ಅಪಹರಿಸುವುದಿಲ್ಲ; ಅದು ನಾಶವಾಗುವುದಿಲ್ಲ. ಆದ್ದರಿಂದ ರಾಜನು ಬ್ರಾಹ್ಮಣರಲ್ಲಿ ಅಕ್ಷಯವಾದ ನಿಧಿಯನ್ನಿಡಬೇಕು.

೮೩. न च नश्यति–न भूमिष्ठमिव विस्मृत्य प्रातिभाव्येन वा नश्यति (मे०) – ಬ್ರಹ್ಮಸ್ವಾಪಹಾರವನ್ನು ಅಂದು ಯಾರೂ ಮಾಡುತ್ತಿದ್ದಿಲ್ಲ; ಹಾಗೆ ಮಾಡುವುದು ಅತ್ಯಂತ ಪಾಪವೆಂದು ಪ್ರಜೆಗಳು ನಂಬಿದ್ದರು. ಆದುದರಿಂದ ಬ್ರಾಹ್ಮಣರಲ್ಲಿಟ್ಟ ಧನವು ಯಾವಾಗಲೂ ಸುರಕ್ಷಿತ. ಆಪತ್ಕಾಲದಲ್ಲಿ ಅಂಥ ಬ್ರಾಹ್ಮಣರ ನೆರವು ರಾಜನಿಗೆ ದೊರೆತರೆ ಅವನಿಗೆ ಜಯ ಕಟ್ಟಿಟ್ಟದ್ದು.

न स्कन्दते न व्यथते न विनश्यति कर्हिचित् ।
वरिष्ठमग्निहोत्रेभ्यो ब्राह्मणस्य मुखे हुतम् ॥ ८४ ॥
**ನ ಸ್ಕಂದತೇ ನ ವ್ಯಥತೇ ನ ವಿನಶ್ಯತಿ ಕರ್ಹಿಚಿತ್ ।**
**ವರಿಷ್ಠಮಗ್ನಿಹೋತ್ರೇಭ್ಯೋ ಬ್ರಾಹ್ಮಣಸ್ಯ ಮುಖೇ ಹುತಮ್ ॥ ೮೪ ॥**

೮೪. ಅಗ್ನಿಯಲ್ಲಿ ಹಾಕಿದ ಹವಿಸ್ಸಿಗಿಂತ ಬ್ರಾಹ್ಮಣನ ಮುಖದಲ್ಲಿ ಮಾಡಿದ ಹವನವು ಶ್ರೇಷ್ಠವಾದುದು (ಏಕೆಂದರೆ ಅದು) ಕೆಳಗೆ ಬೀಳುವದಿಲ್ಲ; ಬತ್ತಿ ಹೋಗುವದಿಲ್ಲ ಅಥವಾ  ನಾಶವಾಗುವದಿಲ್ಲ.

೮೪. ಅಗ್ನಿಯಲ್ಲಿ ಹಾಕುವ ಆಹುತಿಯು ಬೇರೆಡೆ ಬಿದ್ದು ಹೋಗಬಹುದು. ಹಾಗೇ ಇಂಗಿ ಹೋಗಬಹುದು ಅಥವಾ ನಶಿಸಬಹುದು. ಸತ್ಪಾತ್ರನಿಗೆ ಕೊಟ್ಟ ದಾನವು ಹಾಗೆ ಆಗುವುದಿಲ್ಲ. ಅದರ ಒಳ್ಳೆಯ ಫಲವು ನಿಶ್ಚಿತವಾಗಿ ದೊರಕುವುದು. ವಿದ್ಯಾವಿನಯಗಳಿಂದ ಕೂಡಿದ ಬ್ರಾಹ್ಮಣನು ಸತ್ಪಾತ್ರ; ಲೋಕಸಂಗ್ರಹವು ಅವನ ವಿದ್ಯಾಫಲವಾಗಿತ್ತು. ಆದುದರಿಂದ ಸರ್ವೋದಯವಾದಿಯಾದ ಆ ವಿದ್ವಾಂಸನು ರಾಜ–ಪ್ರಜೆಗಳಿಬ್ಬರ ಹಿತವನ್ನೂ ಸಾಧಿಸುವ ಕ್ರಮಗಳನ್ನು ಬೋಧಿಸಬಲ್ಲ ಸತ್ಪಾತ್ರ. ಅವನ ಬೆಂಬಲ ರಾಜನ ರಾಜ್ಯಭಾರದ ಆಸ್ತಿವಾರ.

सममब्राह्मणे दानं द्विगुणं ब्राह्मणब्रुवे ।
प्राधीते शतसाहस्रमनन्तं वेदपारगे ॥ ८५ ॥
**ಸಮಮಬ್ರಾಹ್ಮಣೇ ದಾನಂ ದ್ವಿಗುಣಂ ಬ್ರಾಹ್ಮಣಬ್ರುವೇ ।**
**ಪ್ರಾಧೀತೇ ಶತಸಾಹಸ್ರಮನಂತಂ ವೇದಪಾರಗೇ ॥ ೮೫ ॥**

೮೫. ಬ್ರಾಹ್ಮಣೇತರರಿಗೆ ಕೊಟ್ಟ ದಾನವು ಸಮವಾದ ಫಲವನ್ನು ಕೊಡುವದು. (ಕ್ರಿಯಾಶೂನ್ಯವಾಗಿ) 'ನಾನು ಬ್ರಾಹ್ಮಣನು' ಎಂದುಕೊಳ್ಳುವವನಿಗೆ ಕೊಟ್ಟರೆ ಅದು ಇಮ್ಮಡಿ ಫಲವನ್ನು ಕೊಡುವದು; ವಿದ್ವಾಂಸನಿಗೆ ಕೊಟ್ಟರೆ ಲಕ್ಷ ಪಟ್ಟು ಫಲವನ್ನು ಕೊಡುವದು ಮತ್ತು ವೇದಪಾರಂಗತನಿಗೆ ಕೊಟ್ಟರೆ ಅನಂತ ಫಲವನ್ನು ಕೊಡುವುದು.

೮೫. **प्राधीते** – ಅಧ್ಯಯನವನ್ನು ಮಾಡಿದವನು. **'सहस्रगुणमाचार्ये'** ಎಂದೂ ಮೂರನೆಯ ಪಾದದ ಪಾಠವಿದೆ. ವೇದವು ಸರ್ವಧರ್ಮಮೂಲ. ಧರ್ಮವು ಸರ್ವಪುರುಷಾರ್ಥಗಳ ನ್ಯಾಯವಾದ ಸಾಧನ. ಆದುದರಿಂದ ವೇದಪಾರಂಗತನು ಆದರ್ಶ ಭಾರತೀಯ, ಜಗತ್ಕುಟುಂಬಿ. ಜಗದ್ಧಿತವಾದಿಗಳ ಪ್ರಾಮುಖ್ಯವನ್ನು ಪ್ರತಿಯೊಬ್ಬ ರಾಜನೂ ಮನ್ನಿಸಬೇಕೆಂಬುದು ತಾತ್ಪರ್ಯ. ಅಪರಾಷ್ಟ್ರೀಯತೆ, ಅರಾಷ್ಟ್ರೀಯತೆಗಳೆರಡರ ಪ್ರಾಬಲ್ಯವನ್ನು ದಮಿಸಲೂ ಜಗದ್ಧಿತವಾದಿಗಳಿರುವುದು ಅಗತ್ಯವೆಂಬ ಮನುಧ್ವನಿಯಲ್ಲಿ ವೇದ್ಯ.

पात्रस्य हि विशेषेण श्रद्दधानतयैव च ।
अल्पं वा बहु वा प्रेत्य दानस्य फलमश्नुते ॥ ८६ ॥
**ಪಾತ್ರಸ್ಯ ಹಿ ವಿಶೇಷೇಣ ಶ್ರದ್ದಧಾನತಯೈವ ಚ ।**
**ಅಲ್ಪಂ ವಾ ಬಹು ವಾ ಪ್ರೇತ್ಯ ದಾನಸ್ಯ ಫಲಮಶ್ನುತೇ ॥ ೮೬ ॥**

೮೬. ಪಾತ್ರನ ಯೋಗ್ಯತೆಯಂತೆ ಮತ್ತು (ದಾನ ಕೊಡುವವನ) ಶ್ರದ್ಧೆಯಂತೆ ಪರಲೋಕದಲ್ಲಿ ಅಲ್ಪವಾದ ಮತ್ತು ಅಧಿಕವಾದ ಫಲವನ್ನು (ದಾತಾರನು) ಪಡೆಯುತ್ತಾನೆ.

೮೬. **पात्रस्य विशेषेण** – ದಾನವನ್ನು ಸ್ವೀಕರಿಸುವ ಮನುಷ್ಯನ ವಿದ್ಯೆ, ತಪಸ್ಸು, ಚಾರಿತ್ರ ಮುಂತಾದ ವೈಶಿಷ್ಟ್ಯದಿಂದ. ಪರಲೋಕದ ಅನುಭವವು ಭೂಲೋಕದ ಹೊರಗಲ್ಲವೆಂದು ಸ್ವಾಮಿ ರಾಮತೀರ್ಥರು ಸಮರ್ಥವಾಗಿ ಪ್ರತಿಪಾದಿಸಿರುವುದರಿಂದ ಅದನ್ನು ಅವೈಜ್ಞಾನಿಕ ಅಥವಾ ಮೂಢನಂಬಿಗೆ ಎಂದು ಹೇಳಲು ಸಾಧ್ಯವಿಲ್ಲ. ಅವಿಜ್ಞಾತ ಪ್ರಜ್ಞೆಯ ಮನೋವಿಜ್ಞಾನವನ್ನು ಬೇಕಾದವರು ಓದಿ ಸಮಾಧಾನ ಹೊಂದಬಹುದು.

समोत्तमाधमे राजा त्वाहूतः पालयन्प्रजाः ।
न निवर्तेत संग्रामात्क्षात्रं धर्ममनुस्मरन् ॥ ८७ ॥

**ಸಮೋತ್ತಮಾಧಮೇ ರಾಜಾ ತ್ವಾಹೂತಃ ಪಾಲಯನ್ ಪ್ರಜಾಃ ।**
**ನ ನಿವರ್ತೇತ ಸಂಗ್ರಾಮಾತ್ಕ್ಷಾತ್ರಂ ಧರ್ಮಮನುಸ್ಮರನ್ ॥ ೮೭ ॥**

೮೭. ಸಮಬಲ, ಅದಿಕಬಲ ಅಥವಾ ನ್ಯೂನಬಲವುಳ್ಳ ಅರಸನು ಯಕುದ್ಧಕ್ಕಾಗಿ ಆಹ್ವಾನ ಕೊಟ್ಟರೆ ಪ್ರಜಾಪಾಲಕನಾದ ರಾಜನು ಕ್ಷಾತ್ರಧರ್ಮವನ್ನು ಸ್ಮರಿಸಿ ಯುದ್ಧದಿಂದ ನಿವೃತ್ತನಾಗಬಾರದು. (ಯುದ್ಧಾಹ್ವಾನವನ್ನು ಸ್ವೀಕರಿಸಬೇಕು).

೮೭. ಪ್ರತಿಪಕ್ಷದ ರಾಜನು ಯುದ್ಧಕ್ಕಾಗಿ ಆಹ್ವಾನಿಸಿದರೆ ಆ ಆಹ್ವಾನವನ್ನು ಸ್ವೀಕರಿಸಬೇಕೆಂಬುದು ಕ್ಷಾತ್ರಧರ್ಮದ ಒಂದು ಅಂಶ.

संग्रामेष्वनिर्तित्वं प्रजानां चैव पालनम् ।
शुश्रूषा ब्राह्मणानां च राज्ञां श्रेयस्करं परम् ॥ ८८ ॥

**ಸಂಗ್ರಾಮೇಷ್ವನಿವರ್ತಿತ್ವಂ ಪ್ರಜಾನಾಂ ಚೈವ ಪಾಲನಮ್ ।**
**ಶುಶ್ರೂಷಾ ಬ್ರಾಹ್ಮಣಾನಾಂ ಚ ರಾಜ್ಞಾಂ ಶ್ರೇಯಸ್ಕರಂ ಪರಮ್ ॥ ೮೮ ॥**

೮೮. ಯುದ್ಧದಿಂದ ನಿವೃತ್ತನಾಗದೆ ಇರುವದು, ಪ್ರಜೆಗಳನ್ನು ಪಾಲಿಸುವದು ಮತ್ತು ಬ್ರಾಹ್ಮಣರ ಶುಶ್ರೂಷೆಯನ್ನು ಮಾಡುವದು – ಇವು ರಾಜನಿಗೆ ಬಹಳ ಶ್ರೇಯಸ್ಕರವಾಗಿವೆ.

आहवेषु मिथोऽन्योन्यं जिघांसन्तो महीक्षितः ।
युध्यमानाः परं शक्त्या स्वर्ग यान्त्यपराङ्मुखाः ॥ ८९ ॥

**ಆಹವೇಷು ಮಿಥೋಽನ್ಯೋನ್ಯಂ ಜಿಘಾಂಸಂತೋ ಮಹೀಕ್ಷಿತಃ ।**
**ಯುಧ್ಯಮಾನಾಃ ಪರಂ ಶಕ್ತ್ಯಾ ಸ್ವರ್ಗಂ ಯಾಂತ್ಯಪರಾಙ್ಮುಖಾಃ ॥ ೮೯ ॥**

೮೯. ಒಬ್ಬರು ಇನ್ನೊಬ್ಬರನ್ನು ಕೊಲ್ಲುವ ಇಚ್ಛೆಯುಳ್ಳ ರಾಜರು ಪರಸ್ಪರರಲ್ಲಿ ಸರ್ವಶಕ್ತಿಯಿಂದ ಯುದ್ಧದಲ್ಲಿ ಪರಾಙ್ಮುಖರಾಗದೆ ಹೋರಾಡಿ ಸ್ವರ್ಗವನ್ನು ಹೊಂದುತ್ತಾರೆ.

೮೯. स्वर्गं यान्ति–निश्चिते पराजये निराशस्य यदि युद्धावतारः, तत् स्वर्गाय ऐव (मे ) ಹೋಲಿಸಿರಿ :–

द्वाविमौ पुरुषौ लोके सूर्यमण्डलभेदिनौ ।
परिव्राट् योगयुक्तश्च शूरश्चाभिमुखो हतः ॥

न कूटैरायुधैर्हन्याद्युध्यमानो रणे रिपून् ।
न कर्णिभिर्नापि दिग्धैर्नाग्निज्वलिततेजनैः ॥ ९० ॥
**ನ ಕೂಟೈರಾಯುಧೈರ್ಹನ್ಯಾದ್ಯುಧ್ಯಮಾನೋ ರಣೇ ರಿಪೂನ್ ।**
**ನ ಕರ್ಣಿಭಿರ್ನಾಪಿ ದಿಗ್ಧೈರ್ನಾಗ್ನಿಜ್ವಲಿತತೇಜನೈಃ ॥ ೯೦ ॥**

೯೦. ರಣಾಂಗಣದಲ್ಲಿ ಯುದ್ಧ ಮಾಡುವಾಗ ಗೂಢವಾದ ಆಯುಧಗಳಿಂದ ಮತ್ತು ಕರ್ಣಾಕಾರದ ತುದಿಯುಳ್ಳ, ವಿಷಲಿಪ್ತವಾದ ಅಥವಾ ಸುಡುವ ಆಯುಧಗಳಿಂದ ಶತ್ರುಗಳನ್ನು ಹೊಡೆಯಬಾರದು.

೯೦. कूटैः आयुधै – ಹೊರಗೆ ಕಾಣಲು ಕಟ್ಟಿಗೆಯಂತಿದ್ದು ಒಳಗೆ ತೀಕ್ಷ್ಣವಾದ ಶಸ್ತ್ರವಿರುವ ಆಯುಧಗಳಿಂದ. कर्णी – ಕರ್ಣಾಕಾರದ (ಚಂದ್ರಾಕಾರದ) ತುದಿಯುಳ್ಳ ಬಾಣವು. ಅದು ಶರೀರದಲ್ಲಿ ಹೊಕ್ಕರೆ ಅದನ್ನು ಹೊರಗೆ ತೆಗೆಯುವದು ಬಹಳ ಕಷ್ಟವಾಗುತ್ತದೆ. ಅಣುಬಾಂಬಿನ ಪ್ರಯೋಗವನ್ನು ನಿಲ್ಲಿಸಬೇಕೆಂಬ ಇಂದಿನ ಜಗದ್ಧಿತೈಷಿಗಳು ಮನೂಕ್ತವಾದ ಈ ಧರ್ಮಯುದ್ಧ ವಿಧಾನದ ವಿವರಗಳನ್ನು ಅಭ್ಯಸಿಸಿದರೊಳಿತು.

न च हन्यात्स्थलारूढं न क्लीबं न कृताञ्जलिम् ।
न मुक्तकेशं नासीनं न तवास्मीति वादिनम् ॥ ९१ ॥
**ನ ಚ ಹನ್ಯಾತ್ ಸ್ಥಲಾರೂಢಂ ನ ಕ್ಲೀಬಂ ನ ಕೃತಾಂಜಲಿಮ್ ।**
**ನ ಮುಕ್ತಕೇಶಂ ನಾಸೀನಂ ನ ತವಾಸ್ಮೀತಿ ವಾದಿನಂ ॥ ೯೧ ॥**

೯೧. (ತಾನು ರಥದಲ್ಲಿದ್ದಾಗ) ಭೂಮಿಯ ಮೇಲೆ ನಿಂತ ಶತ್ರುವನ್ನು ಹೊಡೆಯಬಾರದು. ನಪುಂಸಕನಾದ, ಕೈಯನ್ನು ಮುಗಿದ, ಕೂದಲುಗಳನ್ನು ಬಿಚ್ಚಿಕೊಂಡಿರುವ, ಕೆಳಗೆ ಕುಳಿತುಕೊಂಡ ಮತ್ತು 'ನಾನು ನಿನ್ನವನಿದ್ದೇನೆ' ಎಂದು ಹೇಳುವ ಶತ್ರುವನ್ನು (ಯಾವಾಗಲೂ) ಹೊಡೆಯಬಾರದು.

೯೧. स्थलारूढं – युद्धभूमिं त्यक्त्वा स्थले अन्यैः अप्राप्त्यर्थं स्थितं (स०) ಅಂತಾರಾಷ್ಟ್ರೀಯ ಯುದ್ಧನೀತಿಗಳನ್ನು ಸುಧಾರಿಸಬಯಸುವವರು ಈ ಮನೂಕ್ತಿಯನ್ನು ಆಚರಣೆಗೆ ತರಲು ಪ್ರಯತ್ನಿಸುವುದೊಳಿತು. ಅದರಿಂದ ಬರ್ಬರತೆಯಿಂದ ಮಾನವಕುಲವು ಮುಕ್ತವಾದೀತು, ನಾಗರಿಕತೆಯ ಅರ್ಥವು ಸಂಪೂರ್ಣವಾಗಿ ಸಿದ್ಧಿಸೀತು.

न सुप्तं न विसन्नाहं न नग्नं न निरायुधम् ।
नायुध्यमानं पश्यन्तं न परेण समागतम् ॥ ९२ ॥
**ನ ಸುಪ್ತಂ ನ ವಿಸನ್ನಾಹಂ ನ ನಗ್ನಂ ನ ನಿರಾಯುಧಮ್ ।**
**ನಾಯುಧ್ಯಮಾನಂ ಪಶ್ಯನ್ತಂ ನ ಪರೇಣ ಸಮಾಗತಮ್ ॥ ೯೨ ॥**

೯೨. ಯಾವನು ಮಲಗಿದ್ದಾನೋ, ಕವಚವನ್ನು ತೆಗೆದಿಟ್ಟಿದ್ದಾನೋ, ಯಾವನ ವಸ್ತ್ರವು ಕಳಚಿ ಬಿದ್ದಿದೆಯೋ, ಯಾವನು ಆಯುಧರಹಿತನಾಗಿದ್ದಾನೋ, ಯುದ್ಧ ಮಾಡದೆ (ಕೇವಲ) ಯಾವನು ನೋಡುತ್ತಿದ್ದಾನೋ ಅಥವಾ ಯಾವನು ಬೇರೆಯವನ ಜೊತೆಗೆ ಯುದ್ಧ ಮಾಡುತ್ತಿದ್ದಾನೋ (ಅವನನ್ನು ಹೊಡೆಯಬಾರದು.)

೯೨. न नग्नं–न भग्नमिति वा पाठः (मे०).

नायुधव्यसनप्राप्तं नार्तं नातिपरिक्षतम् ।
न भीतं न परावृत्तं सतां धर्मनुस्मरन् ॥ ९३ ॥
**ನಾಯುಧವ್ಯಸನಪ್ರಾಪ್ತಂ ನಾರ್ತಂ ನಾತಿಪರಿಕ್ಷತಮ್ ।**
**ನ ಭೀತಂ ನ ಪರಾವೃತ್ತಂ ಸತಾಂ ಧರ್ಮಮನುಸ್ಮರನ್ ॥ ೯೩ ॥**

೯೩. ಆಯುಧವು (ಮುರಿದು ಹೋದದ್ದರಿಂದ) ಸಂಕಟದಲ್ಲಿದ್ದವನನ್ನು, ಶೋಕಾರ್ತನಾಗಿರುವವನನ್ನು, ಬಹಳ ಗಾಯಗೊಂಡವನನ್ನು, ಹೆದರಿದವನನ್ನು ಮತ್ತು ಯುದ್ಧದಿಂದ ಪರಾಙ್ಮುಖನಾದವನನ್ನು (ರಾಜನು) ಸುಕ್ಷತ್ರಿಯರ ಧರ್ಮವನ್ನು ಸ್ಮರಿಸಿ ಹೊಡೆಯಬಾರದು.

೯೩. आयुधव्यसनप्राप्तं–आयुधव्यसनम् आयुधकृछ्रम् आयुधभङ्गः कुण्डलिभावः खङ्गस्य, ज्याच्छेदः इत्येवमादिः तं प्राप्तम् (मे०)

यस्तु भीतः परावृत्तः संग्रामे हन्यते परैः ।
भर्तुर्यद्दुष्कृतं किंचित्तत्सर्वं प्रतिपद्यते ॥ ९४ ॥
**ಯಸ್ತು ಭೀತಃ ಪರಾವೃತ್ತಃ ಸಂಗ್ರಾಮೇ ಹನ್ಯತೇ ಪರೈಃ ।**
**ಭರ್ತುರ್ಯದ್ದುಷ್ಕೃತಂ ಕಿಂಚಿತ್ತತ್ಸರ್ವಂ ಪ್ರತಿಪದ್ಯತೇ ॥ ೯೪ ॥**

೯೪. ಯಾವನು ಹೆದರಿ ಹಿಂದಿರುಗುವಾಗ ಯುದ್ಧದಲ್ಲಿ ಶತ್ರುಗಳಿಂದ ಕೊಲ್ಲಲ್ಪಡುತ್ತಾನೋ, ಅವನಿಗೆ ರಾಜನು ಮಾಡಿದ ಎಲ್ಲ ಪಾಪವೂ ತಟ್ಟುತ್ತದೆ.

೯೪. ಯುದ್ಧದಲ್ಲಿ ಭಯದಿಂದ ಪರಾವೃತ್ತನಾಗುವದು ಮಹಾಪಾಪ. ಆದ್ದರಿಂದ ಕ್ಷತ್ರಿಯನು ಯಾವಾಗಲೂ ಯುದ್ಧಪರಾಙ್ಮುಖನಾಗಬಾರದು.

यच्चास्य सुकृतं किंचिदमुत्रार्थमुपार्जितम् ।
भर्ता तत्सर्वमादत्ते परावृत्तहतस्य तु ॥ ९४ ॥
**ಯಚ್ಚಾಸ್ಯ ಸುಕೃತಂ ಕಿಂಚಿದಮುತ್ರಾರ್ಥಮುಪಾರ್ಜಿತಂ।**
**ಭರ್ತಾ ತತ್ಸರ್ವಮಾದತ್ತೇ ಪರಾವೃತ್ತಹತಸ್ಯ ತು ॥ ೯೫ ॥**

೯೫. ಹಿಂದಿರುಗುವಾಗ ಹತನಾದವನು ಪರಲೋಕಕ್ಕಾಗಿ ಯಾವ ಪುಣ್ಯವನ್ನು ಸಂಪಾದಿಸಿದ್ದಾನೋ ಅದೆಲ್ಲವೂ ರಾಜನಿಗೆ ಸೇರುತ್ತದೆ.

೯೫. ಯುದ್ಧಪರಾಙ್ಮುಖನಾಗದೆ ಇರುವದಕ್ಕಾಗಿ ಇದು ಇನ್ನೊಂದು ಕಾರಣ.

रथाश्वं हस्तिनं छत्रं धनं धान्यं पशून्स्त्रियः ।
सर्वद्रव्याणि कुप्यं च यो यज्जयति तस्य तत् ॥ ९३ ॥
**ರಥಾಶ್ವಂ ಹಸ್ತಿನಂ ಛತ್ರಂ ಧನಂ ಧಾನ್ಯಂ ಪಶೂನ್ ಸ್ತ್ರಿಯಃ।**
**ಸರ್ವದ್ರವ್ಯಾಣಿ ಕುಪ್ಯಂ ಚ ಯೋ ಯಜ್ಜಯತಿ ತಸ್ಯ ತತ್ ॥ ೯೬ ॥**

೯೬. ರಥ, ಕುದುರೆ, ಆನೆ, ಛತ್ರ, ಧನ, ಧಾನ್ಯ, ಪಶು, ಸ್ತ್ರೀ, ಎಲ್ಲ ದ್ರವ್ಯಗಳು ಮತ್ತು ಕಡಿಮೆ ಬೆಲೆಯ ಧಾತುಗಳು– ಇವುಗಳಲ್ಲಿ ಯಾವನು ಯಾವುದನ್ನು ಗೆಲ್ಲುತ್ತಾನೋ ಅದು ಅವನಿಗೆ ಸೇರುತ್ತದೆ.

೯೬. ಕುಪ್ಯ – ಬಂಗಾರ ಮತ್ತು ಬೆಳ್ಳಿ ಬಿಟ್ಟು ಉಳಿದ ಧಾತುಗಳು ಬೆಲೆ ಬಾಳುವ ವಸ್ತುಗಳು ಮತ್ತು ಭೂಮಿ ರಾಜನಿಗೆ ಸೇರುತ್ತವೆ; ಉಳಿದ ವಸ್ತುಗಳು ಅವುಗಳನ್ನು ಗೆಲ್ಲುವ ಯೋಧನಿಗೆ.

राज्ञश्च दद्युरुद्धारमित्येषा वैदिकी श्रुतिः ।
राज्ञा च सर्वयोधेभ्यो दातव्यमपृथग्जितम् ॥ ९७ ॥
**ರಾಜ್ಞಾಶ್ಚ ದದ್ಯುರುದ್ಧಾರಮಿತ್ಯೇಷಾ ವೈದಿಕೀ ಶ್ರುತಿಃ।**
**ರಾಜ್ಞಾ ಚ ಸರ್ವಯೋಧೇಭ್ಯೋ ದಾತವ್ಯಮಪೃಥಗ್ಜಿತಮ್ ॥ ೯೭ ॥**

೯೭. ಗೆದ್ದು ತಂದ ಹೆಚ್ಚಿನ ಬೆಲೆಯ ವಸ್ತುಗಳನ್ನು ರಾಜನಿಗೆ ಕೊಡಬೇಕೆಂದು ವೇದವಚನವಿದೆ. ಎಲ್ಲರೂ ಕೂಡಿ ಗೆದ್ದ ಧನವನ್ನು ರಾಜನು ಎಲ್ಲ ಯೋಧರಿಗೆ (ಅವರವರ ಪರಾಕ್ರಮದಂತೆ) ಹಂಚಿ ಕೊಡಬೇಕು.

೯೭. उद्धारं=सुवर्णरजतभूम्यादि उत्कृष्टं (राघ०). ಆನೆ, ಕುದುರೆ, ರಥಗಳನ್ನು ಸಹ ರಾಜನಿಗೆ ಕೊಡಬೇಕು. (ಗೌತಮ–ಧರ್ಮಸೂತ್ರ ೧೦–೨೧). वैदिकी श्रुति– 'इन्द्रो वै वृत्रं हत्वा...... स महान् भूत्वा देवता अब्रवित् उद्धारम् इति' (मानवश्रौतसुत्र १–६–९).

एषोऽनुपस्कृतः प्रोक्तो योधधर्मः सनातनः ।
अस्माद्धर्मान्न च्यवेत क्षत्रियो ध्नन्रणे रिपून् ॥ ९८ ॥
**ಏಷೋಽನುಪಸ್ಕೃತಃ ಪ್ರೋಕ್ತೋ ಯೋಧಧರ್ಮಃ ಸನಾತನಃ ।**
**ಅಸ್ಮಾದ್ಧರ್ಮಾನ್ನ ಚ್ಯವೇತ ಕ್ಷತ್ರಿಯೋ ಘ್ನನ್ರಣೇ ರಿಪೂನ್ ॥ ೯೮ ॥**

೯೮. ಈ ಅನಿಂದ್ಯ ಮತ್ತು ಸನಾತನವಾದ ಯೋಧಧರ್ಮವನ್ನು (ನಾನು) ಹೇಳಿದ್ದೇನೆ. ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುವ ಕ್ಷತ್ರಿಯನು ಈ ಧರ್ಮದಿಂದ ಚ್ಯುತನಾಗಬಾರದು. (ಈ ಧರ್ಮವನ್ನು ಬಿಡಬಾರದು.)

೯೮. अनुपस्कृत – अगर्हितः अविकृतो वा (मे० ).
अकृतप्रयत्नः स्वभावसिद्ध इत्यर्थः (न०).

अलब्धं चैव लिप्सेत लब्धं रक्षेत्प्रयत्नतः ।
रक्षितं वर्धयेच्चैव वृद्धं पात्रेषु निःक्षिपेत् ॥ ९९ ॥
**ಅಲಬ್ಧಂ ಚೈವ ಲಿಪ್ಸೇತ ಲಬ್ಧಂ ರಕ್ಷೇತ್ಪ್ರಯತ್ನತಃ ।**
**ರಕ್ಷಿತಂ ವರ್ಧಯೇಚ್ಚೈವ ವೃದ್ಧಂ ಪಾತ್ರೇಷು ನಿಃಕ್ಷಿಪೇತ್ ॥ ೯೯ ॥**

೯೯. ಅಪ್ರಾಪ್ತವಾದ ವಸ್ತುಗಳ ಪ್ರಾಪ್ತಿಯನ್ನು ಬಯಸಬೇಕು. ಪ್ರಾಪ್ತವಾದುದನ್ನು ಯತ್ನದಿಂದ ರಕ್ಷಿಸಬೇಕು. ರಕ್ಷಿಸಿದ ಧನವನ್ನು ಬೆಳೆಸಬೇಕು ಮತ್ತು (ಹೀಗೆ) ಬೆಳೆದ ಸಂಪತ್ತನ್ನು ಯೋಗ್ಯ ಜನರಿಗೆ ದಾನ ಮಾಡಬೇಕು

೯೯. ರಾಜನು ಅಲ್ಪದಿಂದ ಸಂತುಷ್ಟನಾಗದೆ ಪ್ರಾಪ್ತವಾಗದಿರುವ ಭೂಮಿಯನ್ನು ಹಾಗೂ ಸಂಪತ್ತನ್ನು ಪಡೆಯಲು ಯತ್ನಿಸಬೇಕು. ಇದು ರಾಜನು ಜಾಗತಿಕ ಸರಕಾರವನ್ನು ರಚಿಸುವ ಮಹಾದರ್ಶವನ್ನು ಧ್ವನಿಸುತ್ತದೆ. ಜಗತ್ತನ್ನು ಏಕಚ್ಛತ್ರಾಧಿಪತ್ಯಕ್ಕೊಳಪಡಿಸಿದಾಗ ಮಾತ್ರ ಹಿಂಸಾಮಯವಾದ ಯುದ್ಧಗಳು ನಿಂತಾವು. ಆದ್ದರಿಂದ ಜಗತ್ಸಾರ್ವಭೌಮತೆಯೇ ರಾಜನ ಪರಮಾದರ್ಶ.

एतच्चतुर्विधं विद्यात्पुरुषार्थप्रयोजनम् ।
अस्य नित्यमनुष्ठानं सम्यक्कुर्यादतन्द्रितः ॥ १०० ॥
**ಏತಚ್ಚತುರ್ವಿಧಂ ವಿದ್ಯಾತ್ಪುರುಷಾರ್ಥಪ್ರಯೋಜನಮ್ ।**
**ಅಸ್ಯ ನಿತ್ಯಮನುಷ್ಠಾನಂ ಸಮ್ಯಕ್ಕುರ್ಯಾದತಂದ್ರಿತಃ ॥ ೧೦೦ ॥**

೧೦೦. ಪುರುಷಾರ್ಥಗಳನ್ನು ಪಡೆಯಲು ನಾಲ್ಕು ವಿಧವಾದ ಸಾಧನವಿದೆಯೆಂದು ತಿಳಿಯಬೇಕು. (ಆದ್ದರಿಂದ ರಾಜನು) ಆಲಸ್ಯವನ್ನು ಬಿಟ್ಟು ನಿತ್ಯವೂ ಇದರ ಅನುಷ್ಠಾನವನ್ನು ಸರಿಯಾಗಿ ಮಾಡಬೇಕು. (ಇದನ್ನು ಆಚರಿಸಬೇಕು.)

೧೦೦. पुरुषार्थ – ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ– ಎಂಬಿವು ನಾಲ್ಕು ಪುರುಷಾರ್ಥಗಳು. ಇವುಗಳ ಸಾಧನೆಗಾಗಿ ನಾಲ್ಕು ವಿಧದ ಮಾರ್ಗವನ್ನು ಮೇಲಿನ ಶ್ಲೋಕದಲ್ಲಿ ಹೇಳಲಾಗಿದೆ.

अलब्धमिच्छेद्दण्डेन लब्धं रक्षेदवेक्षया ।
रक्षितं वर्धयेद्वृद्ध्या वृद्धं पात्रेषु निः क्षिपेत् ॥ १०१ ॥
**ಅಲಬ್ಧಮಿಚ್ಛೇದ್ದಂಡೇನ ಲಬ್ಧಂ ರಕ್ಷೇದವೇಕ್ಷಯಾ ।**
**ರಕ್ಷಿತಂ ವರ್ಧಯೇದ್ವೃಧ್ಯಾ ವೃದ್ಧಂ ಪಾತ್ರೇಷು ನಿಃಕ್ಷಿಪೇತ್ ॥ ೧೦೧ ॥**

೧೦೧. ಅಪ್ರಾಪ್ತವಾದುದನ್ನು ದಂಡದಿಂದ (ಜಯಿಸಲು) ಇಚ್ಛಿಸಬೇಕು. ಪ್ರಾಪ್ತವಾದುದನ್ನು ಜಾಗರೂಕತೆಯಿಂದ ರಕ್ಷಿಸಬೇಕು. ರಕ್ಷಿಸಿದ ಧನವನ್ನು ವ್ಯಾಪಾರದಿಂದ ಬೆಳೆಸಬೇಕು. ಬೆಳೆದ ಧನವನ್ನು ಸತ್ಪಾತ್ರರಿಗೆ ದಾನ ಮಾಡಬೇಕು.

೧೦೧ वृद्धि – ಜಲಮಾರ್ಗದಿಂದ ಅಥವಾ ಸ್ಥಲಮಾರ್ಗದಿಂದ ಮಾಡುವ ವ್ಯಾಪಾರ. ಸತ್ಪಾತ್ರದಾನವು ರಾಜಧರ್ಮದ ಅಂತಿಮ ಆದರ್ಶ, ಪರಮಧ್ಯೇಯ, ಉಳಿದೆಲ್ಲವೂ ಅದಕ್ಕೆ ಸಾಧನ. ಅದೇ ರಾಜ್ಯಹಿತ. ಜಗದ್ಧಿತ. ಅಶಿಷ್ಟರು ಅಸತ್‌ಪಾತ್ರರು, ಶಿಕ್ಷಾರ್ಹರು; ಅವರು ದಾನಾರ್ಹರಲ್ಲ. ಬಹುಸಂಖ್ಯಾತತೆಯು ಶಿಷ್ಟತ್ವಕ್ಕೆ ನಿಕಷವಲ್ಲ– ಎಂಬುದಿಲ್ಲಿ ಸ್ಮರಣೀಯ.

नित्यमुद्यतदण्डः स्यान्नित्यं विवृतपौरुषः ।
नित्यं संवृतसंवार्यो नित्यं छिद्रानुसार्यरेः ॥ १०२ ॥
**ನಿತ್ಯಮುದ್ಯತದಂಡಃ ಸ್ಯಾನ್ನಿತ್ಯಂ ವಿವೃತಪೌರುಷಃ ।**
**ನಿತ್ಯಂ ಸಂವೃತಸಂವಾರ್ಯೋ ನಿತ್ಯಂ ಛಿದ್ರಾನುಸಾರ್ಯರೇಃ ॥ ೧೦೨ ॥**

೧೦೨. (ರಾಜನು) ಯಾವಾಗಲೂ ಎತ್ತಿದ ದಂಡದವನಾಗಿರಬೇಕು. ಅವನು ಯಾವಾಗಲೂ ತನ್ನ ಪೌರುಷವನ್ನು ಪ್ರಕಟಿಸಬೇಕು; ಗುಪ್ತವಾಗಿಡುವ ಸಂಗತಿಗಳನ್ನು ಯಾವಾಗಲೂ ಮುಚ್ಚಿಡಬೇಕು ಮತ್ತು ಶತ್ರುವಿನ ದೋಷವನ್ನು ಯಾವಾಗಲೂ ಶೋಧಿಸುತ್ತಿರಬೇಕು.

೧೦೨. उद्यतदण्ड – ಆನೆ, ಕುದುರೆ, ಶಸ್ತ್ರಾಸ್ತ್ರ ಮುಂತಾದ ಯುದ್ಧ ಸಾಧನಗಳನ್ನು ಯಾವಾಗಲೂ ಸಿದ್ಧವಾಗಿಡಬೇಕು.

संवृतसंवार्य – ಮಂತ್ರಿಗಳ ಮಾತುಕತೆ, ಅದರಂತೆ ಮಾಡುವ ಕಾರ್ಯಾಚರಣೆ ಮುಂತಾದ ವಿಷಯಗಳ ಬಗೆಗೆ ಗುಪ್ತತೆಯನ್ನು ಕಾಯ್ದಿಡಬೇಕು.

छिद्रानुसारी – ಶತ್ರುವಿನ ದುರ್ಬಲತೆ, ಅವನ ಮೇಲೆ ಬಂದ ಸಂಕಟ, ಅವನ ಪ್ರಜೆಗಳಲ್ಲಿದ್ದ ಅಸಂತೋಷ ಇತ್ಯಾದಿ ನ್ಯೂನತೆಗಳನ್ನು ವೀಕ್ಷಿಸುತ್ತಿರಬೇಕು.

नित्यमुद्यतदण्डस्य कृत्स्नमुद्विजते जगत् ।
तस्मात्सर्वाणि भूतानि दण्डेनैव प्रसाधयेत् ॥ १०३ ॥
**ನಿತ್ಯಮುದ್ಯತದಂಡಸ್ಯ ಕೃತ್ಸ್ನಮುದ್ವಿಜತೇ ಜಗತ್ ।**
**ತಸ್ಮಾತ್ಸರ್ವಾಣಿ ಭೂತಾನಿ ದಂಡೇನೈವ ಪ್ರಸಾಧಯೇತ್ ॥ ೧೦೩ ॥**

೧೦೩. ಯಾವಾಗಲೂ ದಂಡವನ್ನು ಎತ್ತಿದ ರಾಜನಿಗೆ ಇಡೀ ಜಗತ್ತು ಹೆದರುತ್ತದೆ. ಆದ್ದರಿಂದ ಎಲ್ಲ ಜೀವಿಗಳನ್ನೂ ದಂಡದಿಂದಲೇ ವಶದಲ್ಲಿಡಬೇಕು.

೧೦೩. उद्विग्नं सत् जगत् अस्वातन्त्र्यात् न अनिष्टाय समर्थम् इति नित्यदण्डः प्रशस्तः (राघ० ).

अमाययैव वर्तेत न कथंचन मायया ।
बुद्ध्येतारिप्रयुक्तां च मायां नित्यं स्वसंवृतः ॥ १०४ ॥
**ಅಮಾಯಯೈವ ವರ್ತೇತ ನ ಕಥಂಚನ ಮಾಯಯಾ ।**
**ಬುಧ್ಯೇತಾರಿಪ್ರಯುಕ್ತಾಂ ಚ ಮಾಯಾಂ ನಿತ್ಯಂ ಸ್ವಸಂವೃತಃ ॥ ೧೦೪ ॥**

೧೦೪. ಯಾವಾಗಲೂ ನಿಷ್ಕಪಟ ರೀತಿಯಿಂದ (ರಾಜನು) ವರ್ತಿಸಬೇಕು; ಮೋಸದಿಂದ ವರ್ತಿಸಬಾರದು. ತನ್ನ ವ್ಯವಹಾರಗಳನ್ನು ಗುಪ್ತವಾಗಿಟ್ಟುಕೊಂಡು ಶತ್ರುಗಳು ಮಾಡುತ್ತಿರುವ ಕಪಟವನ್ನು (ದೂತರಿಂದ) ತಿಳಿದುಕೊಳ್ಳಬೇಕು.

೧೦೪. ರಾಜನು ಕಪಟ ವರ್ತನೆಗಿಳಿದರೆ ಯಾರೂ ಅವನನ್ನು ನಂಬಲಿಕ್ಕಿಲ್ಲ. ಆದ್ದರಿಂದ ಅಮಾತ್ಯಾದಿಗಳ ಜೊತೆಗೆ ರಾಜನು ನಿಷ್ಕಪಟವಾಗಿ ನಡೆದುಕೊಳ್ಳಬೇಕು.

– अरिप्रयुक्तां मायां ತನ್ನ ಅಮಾತ್ಯಾದಿಗಳಲ್ಲಿ ಭೇದಭಾವವನ್ನು ಉಂಟು ಮಾಡುವ ಶತ್ರುವಿನ ಕಪಟವನ್ನು ರಾಜನು ತಿಳಿಯಬೇಕು.

नास्य छिद्रं परो विद्याद्विद्याच्छिद्रं परस्य तु ।
गूहेत्कूर्म इवाङ्गानि रक्षेद्विवरमात्मनः ॥ १०५ ॥
**ನಾಸ್ಯ ಛಿದ್ರಂ ಪರೋ ವಿದ್ಯಾದ್ವಿದ್ಯಾಚ್ಛಿದ್ರಂ ಪರಸ್ಯ ತು ।**
**ಗೂಹೇತ್ಕೂರ್ಮ ಇವಾಂಗಾನಿ ರಕ್ಷೇದ್ವಿವರಮಾತ್ಮನಃ ॥ ೧೦೫ ॥**

೧೦೫. ತನ್ನ ದೋಷವು ಬೇರೆಯವರಿಗೆ ಗೊತ್ತಾಗಬಾರದು; ಆದರೆ (ರಾಜನು ಮಾತ್ರ) ಬೇರೆಯವರ ದೋಷಗಳನ್ನು ತಿಳಿದುಕೊಳ್ಳಬೇಕು. ಆಮೆಯು ತನ್ನ ಅಂಗಗಳನ್ನು ಮುಚ್ಚಿಟ್ಟುಕೊಂಡಿರುವಂತೆ ರಾಜನು (ಅಮಾತ್ಯ, ಕೋಶ ಆದಿ) ಅಂಗಗಳನ್ನು ಕಾಪಾಡಿಕೊಳ್ಳಬೇಕು. ಮತ್ತು ತನ್ನ ನ್ಯೂನತೆಗಳನ್ನು (ಬೇರೆಯವರಿಗೆ ಗೊತ್ತಾಗದಂತೆ) ಬಚ್ಚಿಟ್ಟುಕೊಳ್ಳಬೇಕು.

೧೦೫. छिद्र – ಅಮಾತ್ಯರಲ್ಲಿದ್ದ ವೈಮನಸ್ಸು ಮುಂತಾದ ದೋಷಗಳು.

अङ्गानि – 'स्वाम्यमात्यश्च राष्ट्रं च दुर्गं कोशो बलं सुहृत् ।
परस्परोपकारीदं सप्ताङ्गं राज्यमुच्यते ॥
– कामन्दकीय नीतिसार ४–१.

बकवच्चिन्तयेदर्थान्सिंहवच्च पराक्रमेत् ।
वृकवच्चावलुम्पेत शशवच्च विनिष्पतेत् ॥ १०६ ॥
**ಬಕವಚ್ಚಿಂತಯೇದರ್ಥಾನ್ ಸಿಂಹವಚ್ಚ ಪರಾಕ್ರಮೇತ್ ।**
**ವೃಕವಚ್ಚಾವಲುಂಪೇತ ಶಶವಚ್ಚ ವಿನಿಷ್ಪತೇತ್ ॥ ೧೦೬ ॥**

೧೦೬. ಬಕಪಕ್ಷಿಯಂತೆ ಅರ್ಥಚಿಂತನ ಮಾಡಬೇಕು; ಸಿಂಹದಂತೆ ಪರಾಕ್ರಮವನ್ನು ತೋರಿಸಬೇಕು; ತೋಳದಂತೆ (ದ್ರವ್ಯವನ್ನು) ಅಪಹರಿಸಬೇಕು ಮತ್ತು ಮೊಲದಂತೆ ರಾಜನು (ಶತ್ರುಗಳು ಸುತ್ತುಗಟ್ಟಿದಾಗ) ಪಾರಾಗಿ ಹೋಗಬೇಕು.

೧೦೬. ಬಕವು ಚಂಚಲವಾದ ಮೀನುಗಳನ್ನು ಏಕಾಗ್ರಚಿತ್ತದಿಂದ ಹಿಡಿಯುವಂತೆ ಸುರಕ್ಷಿತವಾದ ಶತ್ರುಪ್ರದೇಶವನ್ನು ಕಬಳಿಸಲು ರಾಜನು ಚಿಂತನ ನಡೆಸಬೇಕು. ಸಿಂಹವು ಸಣ್ಣದಾಗಿದ್ದರೂ ಸ್ಥೂಲವಾದ ಆನೆಯ ಮೇಲೆ ಆಕ್ರಮಣ ಮಾಡುವಂತೆ ರಾಜನು ಬಲಾಢ್ಯ ಶತ್ರುವಿನ ಮೇಲೆ ದಾಳಿ ಮಾಡಬೇಕು. ಕುರುಬನು ಅಜಾಗರೂಕನಿದ್ದಾನೆಂದು ನೋಡಿ ತೋಳವು ಮೇಕೆಯನ್ನು ಕೊಲ್ಲುವಂತೆ ರಾಜನು ಶತ್ರುವಿನ ಸಂಪತ್ತನ್ನು ಅಪಹರಿಸಬೇಕು. ಅನೇಕ ವ್ಯಾಧರು ನಾಯಿಗಳ ಸಮೇತವಾಗಿ ಸುತ್ತುವರಿದಿದ್ದರೂ ಮೊಲವು ಹೇಗೋ ತಪ್ಪಿಸಿಕೊಂಡು ಓಡಿ ಹೋಗುವಂತೆ ರಾಜನು ಸಹ ಶತ್ರುಗಳು ಸುತ್ತುಗಟ್ಟಿದಾಗ ಅವರನ್ನು ಮೋಸಗೊಳಿಸಿ ಪಾರಾಗಿ ಹೋಗಬೇಕು.

एवं विजयमानस्य येऽस्य स्युः परिपन्थिनः ।
तानानयेद्वशं सर्वान्सामादिभिरुपक्रमैः ॥ १०७ ॥
**ಏವಂ ವಿಜಯಮಾನಸ್ಯ ಯೇಽಸ್ಯ ಸ್ಯುಃ ಪರಿಪಂಥಿನಃ ।**
**ತಾನಾನಯೇದ್ವಶಂ ಸರ್ವಾನ್ ಸಾಮಾದಿಭಿರುಪಕ್ರಮೈಃ ॥ ೧೦೭ ॥**

೧೦೭. ಹೀಗೆ ವಿಜಯಿಯಾಗಲು ಪ್ರವೃತ್ತನಾದ ರಾಜನ ವಿರುದ್ಧವಾಗಿ ಯಾರು ನಿಲ್ಲುತ್ತಾರೋ, ಅವರನ್ನು ಸಾಮಾದಿ ಉಪಾಯಗಳಿಂದ ವಶಪಡಿಸಿಕೊಳ್ಳಬೇಕು.

೧೦೭. सामादिभिः – ಸಾಮ, ದಾನ, ಭೇದ ಮತ್ತು ದಂಡ ಎಂಬ ನಾಲ್ಕು ಉಪಾಯಗಳಿಂದ.

यदि ते तु न तिष्ठेयुरुपायैः प्रथमैस्त्रिभिः ।
दण्डेनैव प्रसह्यैतांश्छनकैर्वशमानयेत् ॥ १०८ ॥
**ಯದಿ ತೇ ತು ನ ತಿಷ್ಠೇಯುರುಪಾಯೈಃ ಪ್ರಥಮೈಸ್ತ್ರಿಭಿಃ ।**
**ದಂಡೇನೈವ ಪ್ರಸಹ್ಯೈತಾನ್ ಶನಕೈರ್ವಶಮಾನಯೇತ್ ॥ ೧೦೮ ॥**

೧೦೮. ಅವರು (ಸಾಮ, ದಾನ ಮತ್ತು ಭೇದ ಎಂಬ) ಮೊದಲಿನ ಮೂರು ಉಪಾಯಗಳಿಂದ ವಶರಾಗಿ ನಿಲ್ಲದಿದ್ದರೆ, ದಂಡದಿಂದಲೇ ಅವರನ್ನು ಆಕ್ರಮಿಸಿ ಕ್ರಮವಾಗಿ ಅವರನ್ನು ವಶಪಡಿಸಿಕೊಳ್ಳಬೇಕು.

೧೦೮. ಬೇರೆ ಉಪಾಯಗಳಿಲ್ಲದಾಗ ಮಾತ್ರ ದಂಡಪ್ರಯೋಗವನ್ನು ಮಾಡಬೇಕು.

सामादीनामुपायानां चतुर्णामपि पण्डिताः ।
सामदण्डौ प्रशंसन्ति नित्यं राष्ट्राभिवृद्धये ॥ १०९ ॥
**ಸಾಮಾದೀನಾಮುಪಾಯಾನಾಂ ಚತುರ್ಣಾಮಪಿ ಪಂಡಿತಾಃ ।**
**ಸಾಮದಂಡೌ ಪ್ರಶಂಸಂತಿ ನಿತ್ಯಂ ರಾಷ್ಟ್ರಾಭಿವೃದ್ಧಯೇ ॥ ೧೦೯ ॥**

೧೦೯. ಸಾಮಾದಿ ನಾಲ್ಕು ಉಪಾಯಗಳಿದ್ದರೂ ವಿದ್ವಾಂಸರು ರಾಷ್ಟ್ರದ ಅಭಿವೃದ್ಧಿಗಾಗಿ ಸಾಮವನ್ನು ಮತ್ತು ದಂಡವನ್ನು (ಮಾತ್ರ) ಪ್ರಶಂಸಿಸುತ್ತಾರೆ.

೧೦೯. प्रशंसन्ति – ಸಾಮ ದಂಡಗಳಿಂದ ಪ್ರಯಾಸ, ಧನವ್ಯಯ ಮತ್ತು ಸೈನ್ಯ ನಾಶವಾಗುವದಿಲ್ಲ– ಇದು ಪ್ರಶಂಸೆಗೆ ಕಾರಣ.

यथोद्धरति निर्दाता कक्षं धान्यं च रक्षति ।
तथा रक्षेन्नृपो राष्ट्रं हन्याच्च परिपन्थिनः ॥ ११० ॥
**ಯಥೋದ್ಧರತಿ ನಿರ್ದಾತಾ ಕಕ್ಷಂ ಧಾನ್ಯಂ ಚ ರಕ್ಷತಿ ।**
**ತಥಾ ರಕ್ಷೇನ್ನೃಪೋ ರಾಷ್ಟ್ರಂ ಹನ್ಯಾಚ್ಚ ಪರಿಪಂಥಿನಃ ॥ ೧೧೦ ॥**

೧೧೦. ಕೃಷಿಕನು ಹೇಗೆ (ಹೊಲದಲ್ಲಿ ಬೆಳೆದ) ಕಳೆಯನ್ನು ಕಿತ್ತೊಗೆಯುತ್ತಾನೋ ಮತ್ತು ಧಾನ್ಯವನ್ನು ರಕ್ಷಿಸುತ್ತಾನೋ, ಹಾಗೇ ರಾಜನು (ಸಜ್ಜನಸಹಿತವಾದ) ರಾಜ್ಯವನ್ನು ರಕ್ಷಿಸಬೇಕು ಮತ್ತು ದುರ್ಜನರನ್ನು ಸಂಹರಿಸಬೇಕು.

೧೧೦. ರಾಜನು ಸಜ್ಜನರನ್ನು ರಕ್ಷಿಸಬೇಕು ಮತ್ತು ದುಷ್ಟರನ್ನು ದಂಡಿಸಬೇಕು.
(परित्राणाय साधूनाम् विनाशाय च दुष्कृकृताम् । गीता ४–८).

मोहाद्राजा स्वराष्ट्रं यः कर्षयत्यनवेक्षया ।
सोऽचिराद्भ्रश्यते राज्याज्जीविताच्च सबान्धवः ॥ १११ ॥
**ಮೋಹದ್ರಾಜಾಸ್ವರಾಷ್ಟ್ರಂ ಯಃ ಕರ್ಷಯತ್ಯನವೇಕ್ಷಯಾ ।**
**ಸೋಽಚಿರಾದ್ಭ್ರಶ್ಯತೇ ರಾಜ್ಯಾಜ್ಜೀವಿತಾಚ್ಚ ಸಬಾಂಧವಃ ॥ ೧೧೧ ॥**

೧೧೧. ಯಾವ ರಾಜನು ಅಜ್ಞಾನದಿಂದ ತನ್ನ ರಾಜ್ಯದಲ್ಲಿರುವ ಜನರನ್ನು ವಿಚಾರ ಮಾಡದೆ ಪೀಡಿಸುತ್ತಾನೋ ಅವನು ಶೀಘ್ರವಾಗಿಯೇ ರಾಜ್ಯ ಮತ್ತು ಜೀವಿತಗಳನ್ನು ಕಳೆದುಕೊಳ್ಳುತ್ತಾನೆ.

೧೧೧. अनवेक्षया–दुष्टशिष्टाज्ञानेन (कु०).
कर्षयति–लोभेन अधिकदण्डादिना पीडयति (राघ०).
ಜನತೆಯನ್ನು ಪೀಡಿಸುವ ರಾಜನು ಜನರಿಂದಲೇ ಹತನಾಗುತ್ತಾನೆ; ಹಾಗೆ ಹತಗೊಳಿಸಲು ಜನರು ಸದಾ ಸಂಘಟಿತರಾಗಿರುವುದಗತ್ಯ ಎಂಬುದಿಲ್ಲಿ ಸ್ಪಷ್ಟವಾಗಿ ಸೂಚಿಸಲ್ಪಟ್ಟಿದೆ.

शरिरकर्षणात्प्राणाः क्षीयन्ते प्राणिनां यथा ।
तथा राज्ञामपि प्राणाः क्षीयन्ते राष्ट्रकर्षणात् ॥ ११२ ॥
**ಶರೀರಕರ್ಷಣಾತ್ ಪ್ರಾಣಾಃ ಕ್ಷೀಯಂತೇ ಪ್ರಾಣಿನಾಂ ಯಥಾ ।**
**ತಥಾ ರಾಜ್ಞಾಮಪಿಪ್ರಾಣಾಃ ಕ್ಷೀಯಂತೇ ರಾಷ್ಟ್ರಕರ್ಷಣಾತ್ ॥ ೧೧೨ ॥**

೧೧೨. ಶರೀರವು ಕ್ಷೀಣವಾದರೆ ಹೇಗೆ ಪ್ರಾಣಿಗಳ ಜೀವವು ನಶಿಸುವದೋ, ಹಾಗೇ ರಾಜ್ಯವನ್ನು ಕ್ಷೀಣ ಮಾಡಿದರೆ ರಾಜರ ಪ್ರಾಣಗಳು ನಶಿಸುತ್ತವೆ.

೧೧೨. ಆಹಾರ ಕೊಡದಿರುವದರಿಂದ ಶರೀರವು ಕ್ಷೀಣವಾಗಿ ಪ್ರಾಣಹೋಗುವಂತೆ ಜನರನ್ನು ಪೀಡಿಸುವದರಿಂದ ರಾಜನ ಪ್ರಾಣವು ಹೋಗುತ್ತದೆ. ಆದ್ದರಿಂದ ರಾಜನು ತನ್ನ ದೇಹದಂತೆ ಜನರನ್ನು ಕಾಪಾಡಬೇಕು. ಇಲ್ಲವಾದರೆ ಅವರು ದಂಗೆಯೆದ್ದು ಅವನನ್ನು ಕೊಲ್ಲುತ್ತಾರೆ.

राष्ट्रस्य संग्रहे नित्यं विधामिदमाचरेत ।
सुसंगृहीतराष्ट्रो हि पार्थिवः सुखमेधते ॥ ११३ ॥
**ರಾಷ್ಟ್ರಸ್ಯ ಸಂಗ್ರಹೇ ನಿತ್ಯಂ ವಿಧಾಮಿದಮಾಚರೇತ್ ।**
**ಸುಸಂಗೃಹೀತರಾಷ್ಟ್ರೋ ಹಿ ಪಾರ್ಥಿವಃ ಸುಖಮೇಧತೇ ॥ ೧೧೩ ॥**

೧೧೩. ರಾಜ್ಯದ ರಕ್ಷಣೆಗಾಗಿ ರಾಜನು ಯಾವಾಗಲೂ ಈ (ಮುಂದೆ ಹೇಳಿದ) ಉಪಾಯವನ್ನು ಮಾಡಬೇಕು; ಏಕೆಂದರೆ ರಾಜ್ಯವನ್ನು ಸರಿಯಾಗಿ ಸ್ವಾಧೀನದಲ್ಲಿಟ್ಟುಕೊಂಡ ರಾಜನು ಸಮೃದ್ಧನಾಗಿ ಸುಖಪಡುತ್ತಾನೆ.

೧೧೩. ರಾಜ್ಯದ ಸುರಕ್ಷಿತತೆಗಾಗಿ ಮಾಡಬೇಕಾದ ವಿಧಾನವನ್ನು ೧೧೪ ರಿಂದ ೧೨೪ನೆಯ ವರೆಗಿನ ಶ್ಲೋಕಗಳಲ್ಲಿ ಹೇಳಲಾಗಿದೆ.

सुसंगृहीत–संग्रहः आत्मीयताकरणे (स०).

द्वयोस्त्रयाणां पञ्चानां मध्ये गुल्ममधिष्टितम् ।
तथा ग्रामशतानां च कुर्याद्राष्ट्रस्य संग्रहम् ॥ ११४ ॥
**ದ್ವಯೋಸ್ತ್ರಯಾಣಾಂ ಪಂಚಾನಾಂ ಮಧ್ಯೇ ಗುಲ್ಮಮಧಿಷ್ಠಿತಮ್ ।**
**ತಥಾ ಗ್ರಾಮಶತಾನಾಂ ಚ ಕುರ್ಯಾದ್ರಾಷ್ಟ್ರಸ್ಯ ಸಂಗ್ರಹಮ್ ॥ ೧೧೪ ॥**

೧೧೪. ಎರಡು, ಮೂರು, ಐದು ಅಥವಾ ನೂರು ಹಳ್ಳಿಗಳ ಮಧ್ಯದಲ್ಲಿ ಒಂದು ರಕ್ಷಕ ಪಡೆಯನ್ನು ಅಧಿಕಾರಿ ಸಮೇತವಾಗಿಡಬೇಕು. ಹೀಗೆ ರಾಜ್ಯದ ರಕ್ಷಣೆಯನ್ನು ಮಾಡಬೇಕು.

೧೧೪. ಹಳ್ಳಿಗಳು ಸಣ್ಣವು ಅಥವಾ ದೊಡ್ಡವು ಇದ್ದಂತೆ ಮತ್ತು ಅಲ್ಲಿ ಕಳ್ಳರ ಉಪದ್ರವ ಕಡಿಮೆ ಅಥವಾ ಹೆಚ್ಚು ಇದ್ದದ್ದನ್ನು ನೋಡಿ ಅವಶ್ಯಕತೆಯಿದ್ದಂತೆ ಅಲ್ಲಲ್ಲಿ ರಕ್ಷಕರ ಪಡೆಯನ್ನು (ಗುಲ್ಮವನ್ನು) ಇಡಬೇಕು.

अधिष्ठितम् – सत्यप्रधानपुरुषाधिष्ठित् (कु०).

ग्रामस्याधिपतिं कुर्याद्दशग्रामपतिं तथा ।
विंशतीशं शतेशं च सहस्रपतिमेव च ॥ ११५ ॥
**ಗ್ರಾಮಸ್ಯಾಧಿಪತಿಂ ಕುರ್ಯಾದ್ದಶಗ್ರಾಮಪತಿಂ ತಥಾ ।**
**ವಿಂಶತೀಶಂ ಶತೇಶಂ ಚ ಸಹಸ್ರಪತಿಮೇವ ಚ ॥೧೧೫ ॥**

೧೧೫. ರಾಜನು ಒಂದು ಹಳ್ಳಿಯ ಅಧಿಕಾರಿಯನ್ನು, ಹತ್ತು ಹಳ್ಳಿಗಳ ಅಧಿಕಾರಿಯನ್ನು, ಇಪ್ಪತ್ತು ಹಳ್ಳಿಗಳ ಅಧಿಕಾರಿಯನ್ನು ನೂರು ಹಳ್ಳಿಗಳ ಅಧಿಕಾರಿಯನ್ನು ಹಾಗೂ ಸಾವಿರ ಹಳ್ಳಿಗಳ ಅಧಿಕಾರಿಯನ್ನು ನೇಮಿಸಬೇಕು.

೧೧೫. ग्रामस्यधिपतिं करग्रहाद्यर्थम् (स०).

ग्रामदोषान्समुत्पन्नान् ग्रामिकः शनकैः स्वयम् ।
शंसेद्ग्रामदशेशाय दशेशो विंशतीशिने ॥ ११६ ॥
**ಗ್ರಾಮದೋಷಾನ್ಸಮುತ್ಪನ್ನಾನ್ಗ್ರಾಮಿಕಃ ಶನಕೈಃ ಸ್ವಯಮ್ ।**
**ಶಂಸೇದ್ಗ್ರಾಮದಶೇಶಾಯ ದಶೇಶೋ ವಿಂಶತೀಶಿನೇ ॥ ೧೧೬ ॥**

೧೧೬. ಹಳ್ಳಿಯಲ್ಲಿ ಉಂಟಾದ ಉಪದ್ರವದ ಬಗೆಗೆ ಹಳ್ಳಿಯ ಅಧಿಕಾರಿಯು ಹತ್ತು ಹಳ್ಳಿಗಳ ಅಧಿಕಾರಿಗೆ ಮತ್ತು ಹತ್ತು ಹಳ್ಳಿಗಳ ಅಧಿಕಾರಿಯು ಇಪ್ಪತ್ತು ಹಳ್ಳಿಗಳ ಅಧಿಕಾರಿಗೆ ಕ್ರಮವಾಗಿ ತಿಳಿಸಬೇಕು.

विंशतीशस्तु तत्सर्वं शतेशाय निवेदयेत् ।
शंसेद् ग्रामशतेशस्तु सहस्रपतये स्वयम् ॥ ११७ ॥
**ವಿಂಶತೀಶಸ್ತು ತತ್ಸರ್ವಂ ಶತೇಶಾಯ ನಿವೇದಯೇತ್ ।**
**ಶಂಸೇದ್ಗ್ರಾಮಶತೇಶಸ್ತು ಸಹಸ್ರಪತಯೇ ಸ್ವಯಮ್ ॥ ೧೧೭ ॥**

೧೧೭. ಇಪ್ಪತ್ತು ಹಳ್ಳಿಗಳ ಅಧಿಕಾರಿಯು ಅದೆಲ್ಲವನ್ನೂ ನೂರು ಹಳ್ಳಿಗಳ ಅಧಿಕಾರಿಗೆ ತಿಳಿಸಬೇಕು ಮತ್ತು ನೂರು ಹಳ್ಳಿಗಳ ಅಧಿಕಾರಿಯು ತಾನಾಗಿ ಅದನ್ನು ಸಾವಿರ ಹಳ್ಳಿಗಳ ಅಧಿಕಾರಿಗೆ ತಿಳಿಸಬೇಕು.

೧೧೬–೧೧೭. ಗ್ರಾಮದಲ್ಲಿ ಕಳ್ಳರ ಹಾಗೂ ಪುಂಡರ ಉಪದ್ರವವನ್ನು ತಡೆಯುವದು ಅಸಾಧ್ಯವಾದರೆ ಗ್ರಾಮದ ಮುಖ್ಯಸ್ಥನು ಹತ್ತು ಹಳ್ಳಿಗಳ ಮುಖ್ಯಸ್ಥನಿಗೆ, ಅವನು ಅವನ ಮೇಲಿನ ಅಧಿಕಾರಿಗೆ, ತಿಳಿಸಿ ಸಮಾಜ ಕಂಟಕರ ಕಾಟವನ್ನು ಪರಿಹರಿಸಬೇಕು.

यानि राजप्रदेयानि प्रत्यहं ग्रामवासिभिः ।
अन्नपानेन्धनादीनि ग्रामिकस्तान्यवाप्नुयात् ॥ ११८ ॥
**ಯಾನಿ ರಜಪ್ರದೇಯಾನಿ ಪ್ರತ್ಯಹಂ ಗ್ರಾಮವಾಸಿಭಿಃ ।**
**ಅನ್ನಪಾನೇಂಧನಾದೀನಿ ಗ್ರಾಮಿಕಸ್ತಾನ್ಯವಾಪ್ನುಯಾತ್ ॥ ೧೧೮ ॥**

೧೧೮. ಗ್ರಾಮವಾಸಿಯಾದವರು ಪ್ರತಿನಿತ್ಯವೂ ರಾಜನಿಗೆ ಕೊಡಬೇಕಾದ ಅನ್ನ, ಪಾನ, ಕಾಷ್ಠ ಮುಂತಾದವುಗಳನ್ನು ಗ್ರಾಮಾಧಿಪತಿಯು (ತನ್ನ ವೃತ್ತಿಗಾಗಿ) ತೆಗೆದುಕೊಳ್ಳಬೇಕು.

೧೧೮. राजाप्रदेयानि – एतावत् अत्र प्रत्यहं राजाधिकृतपुरुषाय भुक्तार्थं देयम् इति प्रागेव नियमितानि (स०).

दशी कुलं तु भुञ्जीत विंशी पञ्च कुलानि च ।
ग्रामं ग्रामशताध्यक्षः सहस्राधिपतिः पुरम् ॥ ११९ ॥
**ದಶೀ ಕುಲಂ ತು ಭುಂಜೀತ ವಿಂಶೀ ಪಂಚಕುಲಾನಿ ಚ ।**
**ಗ್ರಾಮಂ ಗ್ರಾಮಶತಾಧ್ಯಕ್ಷಃ ಸಹಸ್ರಾಧಿಪತಿಃ ಪುರಮ್ ॥ ೧೧೯ ॥**

೧೧೯. ಹತ್ತು ಹಳ್ಳಿಗಳ ಅಧಿಕಾರಿಯು (ಹನ್ನೆರಡು ಎತ್ತುಗಳಿಂದ ಸಾಗಿಸಲು ಯೋಗ್ಯವಾದ) ಕುಲವನ್ನು ಉಪಯೋಗಿಸಬೇಕು. ಇಪ್ಪತ್ತು ಹಳ್ಳಿಗಳ ಅಧಿಕಾರಿಯು ಐದು 'ಕುಲ'ಗಳನ್ನು, ನೂರು ಹಳ್ಳಿಗಳ ಅಧಿಕಾರಿಯು ಒಂದು ಗ್ರಾಮವನ್ನು ಮತ್ತು ಸಾವಿರ ಹಳ್ಳಿಗಳ ಮುಖ್ಯಸ್ಥನು ಒಂದು ಪುರವನ್ನು ಉಪಭೋಗಿಸಬೇಕು.

೧೧೯. कुलं–षड्गावं मध्यमं हलमिति तथाविधहलद्वयेन यावति भूमिः वाह्यते तत् कुलमिति वदति । (कु० ). ಶತಗ್ರಾಮಾಧಿಪತಿಯು ಒಂದು ಮಧ್ಯಮ ಆಕಾರದ ಹಳ್ಳಿಯಿಂದ ಪ್ರಾಪ್ತವಾಗುವ ಕರವನ್ನು ಮತ್ತು ಸಹಸ್ರ ಗ್ರಾಮಾಧಿಪತಿಯು ಒಂದು ಮಧ್ಯಮ ಆಕಾರದ ನಗರದಿಂದ ಪ್ರಾಪ್ತವಾಗುವ ಕರವನ್ನು ಉಪಭೋಗಿಸಬೇಕು.

तेषां ग्राम्याणि कार्याणि पृथक्कार्याणि चैव हि ।
राज्ञोऽन्यः सचिवः स्निग्धस्तानि पश्येदतन्द्रितः ॥ १२० ॥
**ತೇಷಾಂ ಗ್ರಾಮ್ಯಾಣಿ ಕಾರ್ಯಾಣಿ ಪೃಥಕ್ಕಾರ್ಯಾಣಿ ಚೈವ ಹಿ ।**
**ರಾಜ್ಞೋಽನ್ಯಃ ಸಚಿವಃ ಸ್ನಿಗ್ಧಸ್ತಾನಿ ಪಶ್ಯೇದತಂದ್ರಿತಃ ॥ ೧೨೦ ॥**

೧೨೦. ಗ್ರಾಮಗಳಿಗೆ ಸಂಬಂಧಿಸಿದ ಅವರ ಕಾರ್ಯಗಳನ್ನು ಮತ್ತು ಬೇರೆ ಕಾರ್ಯಗಳನ್ನು ರಾಜನ ಹಿತೈಷಿಯಾದ ಬೇರೊಬ್ಬ ಸಚಿವನು ಆಲಸ್ಯವಿಲ್ಲದೆ ನೋಡಿಕೊಳ್ಳಬೇಕು.

೧೨೦. पृथक्कार्याणि–अन्योन्यकलहादीनि (ना०).

नगरे नगरे चैकं कुर्यात्सर्वार्थचिन्तकम् ।
उच्चैः स्थानं घोररूपं नक्षत्राणामिव ग्रहम् ॥ १२१ ॥
**ನಗರೇ ನಗರೇ ಚೈಕಂ ಕುರ್ಯಾತ್ಸರ್ವಾರ್ಥಚಿಂತಕಮ್ ।**
**ಉಚ್ಚೈಃಸ್ಥಾನಂ ಘೋರರೂಪಂ ನಕ್ಷತ್ರಾಣಾಮಿವ ಗ್ರಹಮ್ ॥ ೧೩೧ ॥**

೧೨೧. ರಾಜನು ಪ್ರತಿಯೊಂದು ನಗರದಲ್ಲಿ ಎಲ್ಲ ಕಾರ್ಯದ ಬಗೆಗೆ ಆಲೋಚಿಸುವ, ನೋಡಲು ಕ್ರೂರನಾದ ಮತ್ತು ನಕ್ಷತ್ರಗಳಲ್ಲಿ ಗ್ರಹವಿದ್ದಂತೆ ತೇಜಸ್ವಿಯಾದ ಉಚ್ಚ ಪದಾಧಿಕಾರಿಯನ್ನು ನೇಮಿಸಬೇಕು.

೧೨೧. उच्चैः स्थानं–प्रधानबूतं (मे० राघ०) कुलादिना महान्तं (कु०). महाप्रभावम् (नं), उच्चस्थानस्थितं (राम०).

स ताननुपरिक्रामेत्सर्वानेव सदा स्वयम् ।
तेषा वृत्तं परिणयेत्सम्यग्राष्ट्रेषु तच्चरैः
**ಸ ತಾನನುಪರಿಕ್ರಾಮೇತ್ಸರ್ವಾನೇವ ಸದಾ ಸ್ವಯಮ್ ।**
**ತೇಷಾಂ ವೃತ್ತಂ ಪರಿಣಯೇತ್ ಸಮ್ಯಗ್ರಾಷ್ಟ್ರೇಷು ತಚ್ಚರೈಃ ॥ ೧೨೨ ॥**

೧೨೨. ಆ ಅಧಿಕಾರಿಯು ಯಾವಾಗಲೂ ಆ ಎಲ್ಲರನ್ನೂ ತಾನಾಗಿ ಭೇಟಿಯಾಗಬೇಕು (ಮತ್ತು ರಾಜನು) ಅವರ ವರ್ತನೆಯನ್ನು ರಾಜ್ಯದಲ್ಲಿರುವ ತನ್ನ ಗುಪ್ತಚಾರರಿಂದ ತಿಳಿದುಕೊಳ್ಳಬೇಕು.

೧೨೨. सदा – असति प्रयोजने (कु०).

राज्ञो हि रक्षाधिकृताः परस्वादायिनः शठाः ।
भृत्या भवन्ति प्रायेण तेभ्यो रक्षेदिमाः प्रजाः ॥ १२३ ॥
**ರಾಜ್ಞೋ ಹಿ ರಕ್ಷಾಧಿಕೃತಾಃ ಪರಸ್ವಾಧಾಯಿನಃ ಶಠಾಃ ।**
**ಭೃತ್ಯಾ ಭವಂತಿ ಪ್ರಾಯೇಣ ತೇಭ್ಯೋ ರಕ್ಷೇದಿಮಾಃ ಪ್ರಜಾಃ ॥ ೧೨೩ ॥**

೧೨೩. ಏಕೆಂದರೆ, ರಾಜನ ರಕ್ಷಣಾಧಿಕಾರಿಗಳಾದ ಸೇವಕರು ಸಾಮಾನ್ಯವಾಗಿ ಪರಧನವನ್ನು ಅಪಹರಿಸುವ ವಂಚಕರಾಗಿರುತ್ತಾರೆ. ಆದ್ದರಿಂದ ರಾಜನು ತನ್ನ ಪ್ರಜೆಗಳನ್ನು ಅವರಿಂದ ರಕ್ಷಿಸಬೇಕು.

೧೨೩. रक्षेत्–न केवलं राजार्थनाशः, अनवेक्षया यावत् प्रजा अपि निर्धनीकुर्वन्ति (मे०).

ये कार्यिकेभ्योऽमेव गृह्णियुः पापचेतसः ।
तेषां सर्वस्वमादाय राजा कुर्यात्प्रवासनम् ॥ १२४ ॥
**ಯೇ ಕಾರ್ಯಿಕೇಭ್ಯೋಽರ್ಥಮೇವ ಗೃಹ್ಣೀಯುಃ ಪಾಪಚೇತಸಃ ।**
**ತೇಷಾಂ ಸರ್ವಸ್ವಮಾದಾಯ ರಾಜಾಕುರ್ಯಾತ್ಪ್ರವಾಸನಮ್ ॥ ೧೨೪ ॥**

೧೨೪. ಪಾಪಬುದ್ಧಿಯಿಂದ ಅಧಿಕಾರಿಗಳು ಕಾರ್ಯಾರ್ಥಿಯಾದ ಜನರಿಂದ (ಅನುಚಿತವಾದ) ಧನವನ್ನು ತೆಗೆದುಕೊಂಡರೆ, ಅವರ ಸರ್ವಸ್ವವನ್ನೂ ಅಪಹರಿಸಿ ರಾಜನು ಅವರನ್ನು ರಾಜ್ಯದ ಹೊರಗೆ ಕಳಿಸಬೇಕು. (ಪ್ರಜಾಪ್ರಭುತ್ವಕ್ಕಿದು ಮಹಾಪಾಠ.)

೧೨೪. कार्यिकेभ्यः– कर्यार्थिभ्यः (कु०) व्यवहर्तृभ्यः (मे०).
– वादिप्रतिवादिभ्यः (राघ० राम०).

राजा कर्मसु युक्तानां स्त्रीणां प्रेष्यजनस्य च ।
प्रत्यहं कल्पयेद्वृत्तिं स्थानं कर्मानुरूपतः ॥ १२५ ॥
**ರಾಜಾ ಕರ್ಮಸು ಯುಕ್ತಾನಾಂ ಸ್ತ್ರೀಣಾಂ ಪ್ರೇಷ್ಯಜನಸ್ಯ ಚ ।**
**ಪ್ರತ್ಯಹಂ ಕಲ್ಪಯೇದ್ವೃತ್ತಿಂ ಸ್ಥಾನಂ ಕರ್ಮಾನುರೂಪತಃ ॥ ೧೨೫ ॥**

೧೨೫. ರಾಜನು ಕೆಲಸದಲ್ಲಿ ನಿಯುಕ್ತರಾದ ದಾಸಿಯರ ಹಾಗೂ ಸೇವಕರ ಪ್ರತಿದಿನದ ವೇತನವನ್ನು ಮತ್ತು ಅವರ ಸ್ಥಾನವನ್ನು ಅವರ ಕಾರ್ಯದ ಅನುಸಾರವಾಗಿ ನಿಶ್ಚಯಿಸಬೇಕು.

೧೨೫. स्त्रीणां–अन्तःपुरदास्यादीनाम् (मे०).
स्थानकर्मानुरूपतः–प्रधाने स्थाने स्वल्पेऽपि कर्मणि महती वृत्तिः, निकृष्टे स्थाने महत्यपि कर्मणि स्वल्पा (मे०).

पणो देयोऽवकृष्टस्य षडुत्कृष्टस्य वेतनम् ।
षाण्मासिकस्तथाच्छादो धान्यद्रोणस्तु मासिकः ॥ १२६ ॥

**ಪಣೋ ದೇಯೋಽವಕೃಷ್ಟಸ್ಯ ಷಡುತ್ಕೃಷ್ಟಸ್ಯ ವೇತನಮ್ ।**
**ಷಾಣ್ಮಾಸಿಕಸ್ತಥಾಽಚ್ಛಾದೋ ಧಾನ್ಯದ್ರೋಣಸ್ತು ಮಾಸಿಕಃ ॥ ೧೨೬ ॥**

೧೨೬. ಸಣ್ಣಪುಟ್ಟ ಕೆಲಸಗಳನ್ನು ಮಾಡುವವನಿಗೆ (ಪ್ರತಿದಿನ) ಒಂದು ಪಣವನ್ನು ವೇತನವೆಂದು ಕೊಡಬೇಕು. ಉತ್ತಮ ಕೆಲಸಗಳನ್ನು ಮಾಡುವವನಿಗೆ ಆರು ಪಣಗಳನ್ನು ಕೊಡಬೇಕು. ಆರು ತಿಂಗಳಿಗೊಮ್ಮೆ ಅವರಿಗೆ ವಸ್ತ್ರಗಳನ್ನು ಕೊಡಬೇಕು; ಮತ್ತು ಪ್ರತಿ ತಿಂಗಳು ಒಂದು 'ದ್ರೋಣ' ಧಾನ್ಯವನ್ನು ಕೊಡಬೇಕು.

೧೨೬. अवकृष्टस्य – ಕಸ ತೆಗೆಯುವದು, ನೀರು ತುಂಬುವದು–ಇಂತಹ ಕೆಲಸಗಳನ್ನು ಮಾಡುವವನಿಗೆ. द्रोणः–(೮ x ೮ x ೪ x ೪ = ೧೦೨೪ ಮುಷ್ಟಿಗಳು).

अष्टमुष्टिर्भवेत् किंचित् किंचिदष्टौ च पुष्कलम् ।
पुष्कलानि तु चत्वारि आढकः परिकीर्तितः ॥ चतुराढको भवेद् द्रोणः
ಉತ್ತಮ ತರಗತಿಯ ಕೆಲಸಗಾರರಿಗೆ ಆರು ಪಟ್ಟು ವೇತನ, ವಸ್ತ್ರ ಮತ್ತು ಧಾನ್ಯಗಳನ್ನು ಮತ್ತು ಮಧ್ಯಮ ತರಗತಿಯ ಕೆಲಸಗಾರರಿಗೆ ಮೂರು ಪಟ್ಟು ವೇತನ, ವಸ್ತ್ರ ಹಾಗೂ ಧಾನ್ಯಗಳನ್ನು ಕೊಡಬೇಕೆಂದು ಹಲವು ಟಿಪ್ಪಣಿಕಾರರ ಅಭಿಪ್ರಾಯ.

क्रयविक्रयमध्वानं भक्तं च सपरिव्ययम् ।
योगक्षेमं च संप्रेक्ष्य वणिजो दापयेत्करान् ॥ १२७ ॥
**ಕ್ರಯವಿಕ್ರಯಮಧ್ವಾನಂ ಭಕ್ತಂ ಚ ಸಪರಿವ್ಯಯಮ್ ।**
**ಯೋಗಕ್ಷೇಮಂ ಚ ಸಂಪ್ರೇಕ್ಷ್ಯ ವಣಿಜೋ ದಾಪಯೇತ್ ಕರಾನ್ ॥ ೧೨೭ ॥**

೧೨೭. ಕ್ರಯ, ವಿಕ್ರಯ, ಪ್ರವಾಸ, ಊಟ ಹಾಗೂ ತಿನಿಸು ಮತ್ತು ರಕ್ಷಣೆಯ ವ್ಯವಸ್ಥೆ – ಇವುಗಳನ್ನು ಗಮನಿಸಿ ರಾಜನು ವ್ಯಾಪಾರಸ್ಥರಿಂದ ಕರಗಳನ್ನು ತೆಗೆದುಕೊಳ್ಳಬೇಕು.

೧೨೭. ಮಾರುವ ವಸ್ತುಗಳನ್ನು ಎಷ್ಟು ಬೆಲೆಗೆ ತೆಗೆದುಕೊಂಡಿದ್ದಾರೆ, ಎಷ್ಟು ಬೆಲೆಗೆ ಮಾರುತ್ತಾರೆ, ಎಷ್ಟು ದೂರದಿಂದ ತಂದಿದ್ದಾರೆ, ಊಟ ತಿಂಡಿಗಳಿಗೆ ಮತ್ತು ಆ ವಸ್ತುಗಳ ರಕ್ಷಣೆಗೆ ಎಷ್ಟು ವ್ಯಯವಾಗಿದೆ ಎಂಬ ಎಲ್ಲ ಸಂಗತಿಗಳನ್ನೂ ತಿಳಿದು ರಾಜನು ಕರಗಳನ್ನು ವಿಧಿಸಬೇಕು.

परिव्ययः– परितो व्ययः शुल्कादिकः (न०).

यथा फलेन युज्येत राजा कर्ता च कर्मणाम् ।
तथावेक्ष्य नृपो राष्ट्रे कल्पयेत्सततं करान् ॥ १२८ ॥

**ಯಥಾ ಫಲೇನ ಯುಜ್ಯೇತ ರಾಜಾ ಕರ್ತಾ ಚ ಕರ್ಮಣಾಮ್ ।**
**ತಥಾವೇಕ್ಷ್ಯ ನೃಪೋ ರಾಷ್ಟ್ರೇ ಕಲ್ಪಯೇತ್ಸತತಂ ಕರಾನ್ ॥ ೧೨೮ ॥**

೧೨೮. (ವ್ಯಾಪಾರ, ಕೃಷಿ ಮುಂತಾದ) ಕರ್ಮಗಳನ್ನು ಮಾಡುವವರು (ತಮ್ಮ ತಮ್ಮ ಕಾರ್ಯದ) ಫಲವನ್ನು ಪಡೆಯುವ ಹಾಗೆ ವಿವೇಕದಿಂದ ರಾಜನು ರಾಜ್ಯದ ಜನರ ಮೇಲೆ ಯಾವಾಗಲೂ ಕರವನ್ನು ವಿಧಿಸಬೇಕು.

೧೨೮. ರಾಜನಿಗೆ ರಕ್ಷಣೆ ಮಾಡಿದ್ದರ ಫಲ ಮತ್ತು ಕಾರ್ಮಿಕರಿಗೆ ಅವರು ಮಾಡಿದ ಕೆಲಸದ ಫಲ ಸಿಗುವಂತೆ ಕರಗಳ ಬಗೆಯಿರಬೇಕು.

यथाल्पाल्पमदन्त्याद्यं वार्योकोवत्सषट्पदाः ।
तथाल्पाल्पो ग्रहीतव्यो राष्ट्राद्राज्ञाब्दिकः करः ॥ १२९ ॥
**ಯಥಾಲ್ಪಾಲ್ಪಮದಂತ್ಯಾದ್ಯಂ ವಾರ್ಯೋಕೊವತ್ಸಷಟ್‌ಪದಾಃ ।**
**ತಥಾಲ್ಪಾಲ್ಪೋ ಗ್ರಹೀತವ್ಯೋ ರಾಷ್ಟ್ರಾದ್ರಾಜ್ಞಾಬ್ದಿಕಃ ಕರಃ ॥ ೧೨೯ ॥**

೧೨೯. ಹೇಗೆ ಜಿಗುಳೆ, ಕರು ಮತ್ತು ಜೇನುಹುಳುಗಳು ಆಹಾರವನ್ನು (ಕ್ರಮವಾಗಿ ರಕ್ತ, ಹಾಲು ಮತ್ತು ಜೇನು) ಸ್ವಲ್ಪ ಸ್ವಲ್ಪ ತಿನ್ನುವುವೋ, ಹಾಗೆ ರಾಜನು ರಾಜ್ಯದಿಂದ ಸ್ವಲ್ಪ ಸ್ವಲ್ಪ ವಾರ್ಷಿಕ ಕರವನ್ನು ತೆಗೆದುಕೊಳ್ಳಬೇಕು.

೧೨೯. ವ್ಯಾಪಾರಸ್ಥರ ಮೂಲಧನ ನಾಶವಾಗದಂತೆ ಮತ್ತು ಅವರಿಗೆ ತೊಂದರೆಯಾಗದಂತೆ ರಾಜನು ಕರಗಳನ್ನು ತೆಗೆದುಕೊಳ್ಳಬೇಕು.

पञ्चाशद्भाग आदेयो राज्ञा पशुहिरण्ययोः ।
धान्यानामष्टमो भागः षष्ठो द्वादश एव वा ॥ १३० ॥
**ಪಂಚಾಶತ್ ಭಾಗ ಆದೇಯೋ ರಾಜ್ಞಾ ಪಶುಹಿರಣ್ಯಯೋಃ ।**
**ಧಾನ್ಯಾನಾಮಷ್ಟಮೋ ಭಾಗಃ ಷಷ್ಠೋ ದ್ವಾದಶ ಏವ ವಾ ॥ ೧೩೦ ॥**

೧೩೦. ಪಶು ಮತ್ತು ಸುವರ್ಣ ಇವುಗಳಿಂದಾದ ಲಾಭದ ಐವತ್ತನೆಯ ಭಾಗವನ್ನು ರಾಜನು ತೆಗೆದುಕೊಳ್ಳಬೇಕು. ಧಾನ್ಯದ ಆರನೆಯ, ಎಂಟನೆಯ ಅಥವಾ ಹನ್ನೆರಡನೆಯ ಭಾಗವನ್ನು ತೆಗೆದುಕೊಳ್ಳಬೇಕು.

೧೩೦. द्वादश एव वा – भूम्युत्कर्षापकर्षापेक्षया कर्मक्लेशलाघवगौरवापेक्षया वा धान्यानां भागविकल्पः (राघ०).

आददीताथ षड्भागं द्रुमांसमधुसर्पिषाम् ।
गन्धौषाधिरसानां च पुष्पमूलफलस्य च ॥ १३१ ॥
**ಆದದೀತಾಥ ಷಡ್ಭಾಗಂ ದ್ರುಮಾಂಸಮಧುಸರ್ಪಿಷಾಮ್ ।**
**ಗಂಧೌಷಧಿ ರಸಾನಾಂ ಚ ಪುಷ್ಪಮೂಲ ಫಲಸ್ಯ ಚ ॥ ೧೩೧ ॥**

पत्रशाकतृणानां च चर्मणां वैदलस्य च ।
मृण्मयानां च भाण्डानां सर्वस्याश्ममयस्य च ॥ १३२ ॥
**ಪತ್ರಶಾಕತೃಣಾನಾಂ ಚ ಚರ್ಮಣಾಂ ವೈದಲಸ್ಯ ಚ ।**
**ಮೃಣ್ಮಯಾನಾಂ ಚ ಭಾಂಡಾನಾಂ ಸರ್ವಸ್ಯಾಶ್ಮಮಯಸ್ಯ ಚ ॥ ೧೩೨ ॥**

೧೩೧–೧೩೨. ಗಿಡ, ಮಾಂಸ, ಜೇನು, ತುಪ್ಪ, ಗಂಧ, ಔಷಧಿ, ರಸ, ಹೂ, ಬೇರು, ಹಣ್ಣು, ಎಲೆ, ಕಾಯಿಪಲ್ಯ, ಹುಲ್ಲು, ಚರ್ಮ–ಬಿದಿರಿನ, ಮಣ್ಣಿನ ಹಾಗೂ ಕಲ್ಲಿನ ಪಾತ್ರೆಗಳು– ಇವುಗಳ ಆರನೆಯ ಭಾಗವನ್ನು (ಕರವೆಂದು) ತೆಗೆದುಕೊಳ್ಳಬೇಕು.

೧೩೧–೨. षड्भागं–तदुत्पादकेभ्यः तद्विक्रयिभ्यश्च षड्भागमेव आददीत (राघ०).

म्रियमाणोऽप्याददीत न राजा श्रोत्रियात्करम् ।
न च क्षुधास्य संसीदेच्छ्रोत्रियो विषये वसन् ॥ १३३ ॥
**ಮ್ರಿಯಮಾಣೋಪ್ಯಾದದೀತ ನ ರಾಜಾ ಶ್ರೋತ್ರಿಯಾತ್ಕರಮ್ ।**
**ನ ಚ ಕ್ಷುಧಾಽಸ್ಯ ಸಂಸೀದೇಚ್ಛ್ರೋತ್ರಿಯೋ ವಿಷಯೇ ವಸನ್ ॥ ೧೩೩ ॥**

೧೩೩. ಮರಣದ ಪ್ರಸಂಗ ಬಂದರೂ ರಾಜನು ಶ್ರೋತ್ರಿಯನಿಂದ ಕರವನ್ನು ತೆಗೆದುಕೊಳ್ಳಬಾರದು. ಹಾಗೆಯೇ ಅವನ ರಾಜ್ಯದಲ್ಲಿ ವಾಸಿಸುವ ಯಾವ ಶ್ರೋತ್ರಿಯನೂ ಹಸಿವಿನಿಂದ ಪೀಡಿತನಾಗಬಾರದು.

೧೩೩. ಶ್ರೋತ್ರಿಯನು ಹಸಿವಿನಿಂದ ಪೀಡಿತನಾಗದಂತೆ ರಾಜನು ನೋಡಿಕೊಳ್ಳಬೇಕು. ಶ್ರೋತ್ರಿಯನೆಂದರೆ ಒಳ್ಳೆಯ ಸಂಸ್ಕಾರವುಳ್ಳ ಹಾಗೂ ವಿದ್ಯಾವಂತನಾದ ಬ್ರಾಹ್ಮಣನು:–

जन्मना ब्राह्मणो ज्ञेयः संस्कारैर्द्विज उच्यते ।
विद्याभ्यासी भवेद्विप्रः श्रोत्रियस्त्रिभिरेव हि ॥

यस्य राज्ञस्तु विषये श्रोत्रियः सीदति क्षुधा ।
तस्यापि तत्क्षुधा राष्ट्रमचिरेणैव सीदति ॥ १३४ ॥
**ಯಸ್ಯ ರಾಜ್ಞಸ್ತು ವಿಷಯೇ ಶ್ರೋತ್ರಿಯಃ ಸೀದತಿ ಕ್ಷುಧಾ ।**
**ತಸ್ಯಾಪಿ ತತ್ ಕ್ಷುಧಾ ರಾಷ್ಟ್ರಮಚಿರೇಣೈವ ಸೀದತಿ ॥ ೧೩೪ ॥**

೧೩೪. ಯಾವ ರಾಜನ ರಾಜ್ಯದಲ್ಲಿ ಶ್ರೋತ್ರಿಯನು ಹಸಿವಿನಿಂದ ತಳಮಳಿಸುತ್ತಾನೋ ಅವನ ರಾಜ್ಯವು ಶೀಘ್ರವಾಗಿಯೇ ಹಸಿವಿನಿಂದ (ಕ್ಷಾಮದಿಂದ) ನಾಶವಾಗುತ್ತದೆ.

೧೩೪. ಶ್ರೋತ್ರಿಯನು ಬಡತನದಿಂದ ಬಳಲುತ್ತಿದ್ದರೆ ರಾಜ್ಯದಲ್ಲಿ ಬರಗಾಲವುಂಟಾಗುವದು.

श्रुतवृत्ते विदित्वास्य वृत्तिं धर्म्यां प्रकल्पयेत् ।
संरक्षेत्सर्वतश्चैनं पिता पुत्रमिवौरसम् ॥ १३५ ॥
**ಶ್ರುತವೃತ್ತೇ ವಿದಿತ್ವಾಸ್ಯ ವೃತ್ತಿಂ ಧರ್ಮ್ಯಾಂ ಪ್ರಕಲ್ಪಯೇತ್ ।**
**ಸಂರಕ್ಷೇತ್ಸರ್ವತಶ್ಚೈನಂ ಪಿತಾ ಪುತ್ರಮಿವೌರಸಮ್ ॥ ೧೩೫ ॥**

೧೩೫. (ರಾಜನು) ಶ್ರೋತ್ರಿಯನ ಜ್ಞಾನವನ್ನು ಮತ್ತು ಆಚರಣೆಯನ್ನು ತಿಳಿದುಕೊಂಡು ಅವನಿಗೆ ಯೋಗ್ಯವಾದ ವೇತನವನ್ನು ಕೊಡಬೇಕು. ತಂದೆಯು ಔರಸ ಮಗನ ರಕ್ಷಣೆ ಮಾಡುವಂತೆ ರಾಜನು ಅವನನ್ನು ಎಲ್ಲ ಸಂಕಟದಿಂದಲೂ ರಕ್ಷಿಸಬೇಕು.

೧೩೫. सर्वतः– चौरादिभ्यः (मे० कु०)

वृत्ति– दद्यात् तां लिखितदिव्यादियुक्तताम्रपटादिना ।
रक्षेदेवं च श्रोत्रियं यथा तामन्यो न हरेत् ॥ (राघ०).

संरक्ष्यमाणो राज्ञा यं कुरुते धर्ममन्वहम् ।
तेनायुर्वर्धते राज्ञो द्रविणं राष्ट्रमेव च ॥ १३६ ॥
**ಸಂರಕ್ಷ್ಯಮಾಣೋ ರಾಜ್ಞಾ ಯಂ ಕುರುತೇ ಧರ್ಮಮನ್ವಹಮ್ ।**
**ತೇನಾಯುರ್ವರ್ಧತೇ ರಾಜ್ಞೋ ದ್ರವಿಣಂ ರಾಷ್ಟ್ರಮೇವ ಚ ॥ ೧೩೬ ॥**

೧೩೬. ರಾಜನಿಂದ ಸಂರಕ್ಷಿತನಾಗಿರುವ ಶ್ರೋತ್ರಿಯನು ಪ್ರತಿದಿನ ಯಾವ ಧರ್ಮಾಚರಣೆಯನ್ನು ಮಾಡುತ್ತಾನೋ, ಅದರಿಂದ ರಾಜನ ಆಯುಷ್ಯ, ಸಂಪತ್ತು ಮತ್ತು ರಾಜ್ಯ ಹೆಚ್ಚಾಗುತ್ತದೆ.

೧೩೬. धार्मिकश्रोत्रियरक्षायाः फलमेतत् आयुर्द्रविणराष्ट्रवृद्धिः (मे०).

यत्किंचिदपि वर्षस्य दापयेत्करसंज्ञितम् ।
व्यवहारेण जीवन्तं राजा राष्ट्रे पृथग्जनम् ॥ १३७ ॥
**ಯತ್ಕಿಂಚಿದಪಿ ವರ್ಷಸ್ಯ ದಾಪಯೇತ್ಕರಸಂಜ್ಞಿತಮ್ ।**
**ವ್ಯವಹಾರೇಣ ಜೀವನ್ತಂ ರಾಜಾ ರಾಷ್ಟ್ರೇ ಪೃಥಗ್ಜನಮ್ ॥ ೧೩೭ ॥**

೧೩೭. ತನ್ನ ರಾಜ್ಯದಲ್ಲಿ (ಕಾಯಿಪಲ್ಯದ ಮಾರಾಟ ಮುಂತಾದ ಸಾಧಾರಣ) ವ್ಯವಹಾರದಿಂದ ಜೀವಿಸುವ ಸಾಮಾನ್ಯ ಜನರಿಂದ ರಾಜನು ಪ್ರತಿವರ್ಷ ಅತ್ಯಲ್ಪ ಧನವನ್ನು ಕರವೆಂದು ತೆಗೆದುಕೊಳ್ಳಬೇಕು.

೧೩೭. शाकदिक्रयविक्रयादिना जीवतः निकृष्टस्य अल्पः शुल्कः ग्राहयः (राघ०).

कारुकाञ्छिल्पिनश्चैव शूद्रांश्चात्मोपजीविनः
एकैकं कारयेत्कर्म मासि मासि महीपतिः ॥ १३८ ॥
**ಕಾರುಕಾಞ್ಛಿಲ್ಪಿನಶ್ಚೈವ ಶೂದ್ರಾಂಶ್ಚಾತ್ಮೋಪಜೀವಿನಃ ।**
**ಏಕೈಕಂ ಕಾರಯೇತ್ಕರ್ಮ ಮಾಸಿ ಮಾಸಿ ಮಹೀಪತಿಃ ॥ ೧೩೮ ॥**

೧೩೮. ಬಡಿಗರು, ಶಿಲ್ಪಿಗಳು ಮತ್ತು (ಭಾರವನ್ನು ಹೊರುವದು ಮುಂತಾದ) ಶಾರೀರಿಕ ಕಷ್ಟಗಳಿಂದ ಬಾಳುವ ಶೂದ್ರರು–ಇವರಲ್ಲಿ ಪ್ರತಿಯೊಬ್ಬರಿಂದ ಪ್ರತಿ ತಿಂಗಳಲ್ಲಿ ಒಂದು ದಿನ ರಾಜನು (ತನಗಾಗಿ) ಕೆಲಸ ಮಾಡಿಸಬೇಕು.

೧೩೮. कारुकान्–शूर्पादिकारिणः (राघ). **ಮೊರ, ಬುಟ್ಟಿ ಮುಂತಾದ ಸಣ್ಣವಸ್ತುಗಳನ್ನು ಮಾಡುವವರು.**

शिल्पिनः–चित्रलोहकारादीन् (राघ०). **ಚಿತ್ರಗಳನ್ನು ಬರೆಯುವವರು, ಗುಡಿಗಾರರು ಮುಂತಾದ ಕುಶಲ ಕೆಲಸಗಾರರು.**

नोच्छिन्द्यादात्मनो मूलं परेषां चातितृष्णया ।
उच्छिन्दन्ह्यात्मनो मूलमात्मानं तांश्च पीडयेत् ॥ १३९ ॥
**ನೋಚ್ಛಿಂದ್ಯಾದಾತ್ಮನೋ ಮೂಲಂ ಪರೇಷಾಂ ಚಾತಿತೃಷ್ಣಯಾ ।**
**ಉಚ್ಛಿಂದನ್ಹ್ಯಾತ್ಮನೋ ಮೂಲಮಾತ್ಮಾನಂ ತಾಂಶ್ಚ ಪೀಡಯೇತ್ ॥ ೧೩೯ ॥**

೧೩೯. ರಾಜನು (ಕರವನ್ನು ತೆಗೆದುಕೊಳ್ಳದೆ ಇದ್ದದ್ದರಿಂದ) ತನ್ನ ಮೂಲವನ್ನು ಮತ್ತು ಹೆಚ್ಚಿನ ಆಸೆಯಿಂದ ಬೇರೆಯವರ ಮೂಲವನ್ನು ಕಡಿಯಬಾರದು; ಏಕೆಂದರೆ ತನ್ನ ಮೂಲವನ್ನು ಕಡಿದರೆ ತನಗೆ ಮತ್ತು (ಬೇರೆಯವರ ಮೂಲವನ್ನು ಕಡಿದರೆ) ಅವರಿಗೆ ಪೀಡೆಯಾಗುವದು.

೧೩೯. ಪ್ರಜಾವಾತ್ಸಲ್ಯದಿಂದ ಕರಗಳನ್ನು ತೆಗೆದುಕೊಳ್ಳದೆ ಇದ್ದರೆ ರಾಜನಿಗೆ ತೊಂದರೆ; ಬಹಳ ಹೆಚ್ಚು ಕರಗಳನ್ನು ತೆಗೆದುಕೊಂಡರೆ ಪ್ರಜೆಗಳಿಗೆ ತೊಂದರೆ–ಆದ್ದರಿಂದ ಈ ಎರಡು ಅತಿರೇಕಗಳನ್ನೂ ಬಿಡಬೇಕು.

तीक्ष्णश्चैव मृदुश्च स्यात्कार्यं वीक्ष्य महीपतिः ।
तीक्ष्णश्चैव मृदुश्चैव राजा भवति संमतः ॥ १४० ॥
**ತೀಕ್ಷ್ಣಶ್ಚೈವ ಮೃದುಶ್ಚ ಸ್ಯಾತ್ಕಾರ್ಯಂ ವೀಕ್ಷ್ಯ ಮಹೀಪತಿಃ ।**
**ತೀಕ್ಷ್ಣಶ್ಚೈವ ಮೃದುಶ್ಚೈವ ರಾಜಾ ಭವತಿ ಸಂಮತಃ ॥ ೧೪೦ ॥**

೧೪೦. ಕಾರ್ಯವನ್ನು ಗಮನಿಸಿ ರಾಜನು ಕಠೋರ ಅಥವಾ ಮೃದು ಆಗಬೇಕು. (ಏಕೆಂದರೆ ಸಮಯಾನುಸಾರವಾಗಿ) ಕಠೋರ ಅಥವಾ ಮೃದು ಆಗುವ ರಾಜನು ಎಲ್ಲರಿಗೂ ಪ್ರಿಯನಾಗುತ್ತಾನೆ.

೧೪೦. मार्दवेनैव साध्यं यत् तत्र मृदुः, अन्यत्र तीक्ष्णः (स०).

अमात्यमुख्यं धर्मज्ञं प्राज्ञं दान्तं कुलोद्गतम् ।
स्थापयेदासने तस्मिन् खिन्नः कार्येक्षणे नृणाम् ॥ १४१ ॥
**ಅಮಾತ್ಯಮುಖ್ಯಂ ಧರ್ಮಜ್ಞಂ ಪ್ರಾಜ್ಞಂ ದಾನ್ತಂ ಕುಲೋದ್ಗತಮ್ ।**
**ಸ್ಥಾಪಯೇದಾಸನೇ ತಸ್ಮಿನ್ ಖಿನ್ನಃ ಕಾರ್ಯೇಕ್ಷಣೇ ನೃಣಾಮ್ ॥ ೧೪೧ ॥**

೧೪೧. ಜನರ ಕಾರ್ಯವನ್ನು ನೋಡುವುದರಲ್ಲಿ ಬೇಸರವುಂಟಾದರೆ ರಾಜನು ಧರ್ಮಜ್ಞ, ವಿದ್ವಾಂಸ, ಜಿತೇಂದ್ರಿಯ ಮತ್ತು ಕುಲೀನನಾದ ಮುಖ್ಯ ಅಮಾತ್ಯನನ್ನು ಆ ಸ್ಥಾನದಲ್ಲಿ ನೇಮಿಸಬೇಕು.

೧೪೧. खिन्नः– ज्वरादिना युक्तः चेत् (राम०).
आसने–कार्येक्षणे नियुञ्जीत न पुनः तस्मिन्नेव सिंहासने (मे०).

एवं सर्वं विधायेदमितिकर्तव्यमात्मनः ।
युक्तश्चैवाप्रमत्तश्च परिरक्षेदिमाः प्रजाः ॥ १४२ ॥
**ಏವಂ ಸರ್ವಂ ವಿಧಾಯೇದಮಿತಿಕರ್ತವ್ಯಮಾತ್ಮನಃ ।**
**ಯುಕ್ತಶ್ಚೈವಾಪ್ರಮತ್ತಶ್ಚ ಪರಿರಕ್ಷೇದಿಮಾಃ ಪ್ರಜಾಃ ॥ ೧೪೨ ॥**

೧೪೨. ಹೀಗೆ ತನ್ನ ಈ ಎಲ್ಲ ಕರ್ತವ್ಯವನ್ನು ಮಾಡಿ ಉದ್ಯೋಗಿಯೂ ಸಾವಧಾನನೂ (ಪ್ರಮಾದರಹಿತನೂ) ಆಗಿ ರಾಜನು ತನ್ನ ಪ್ರಜೆಗಳ ರಕ್ಷಣೆಯನ್ನು ಮಾಡಬೇಕು.

೧೪೨. युक्तः–तत्परः (मे०). उद्युक्तः (स०).

विक्रोशन्त्यो यस्य राष्ट्राद्ध्रियन्ते दस्युभिः प्रजाः ।
संपश्यतः सभृत्यस्य मृतः स न तु जीवति ॥ २४३
**ವಿಕ್ರೋಶನ್ತ್ಯೋ ಯಸ್ಯ ರಾಷ್ಟ್ರಾದ್ಧ್ರಿಯಂತೇ ದಸ್ಯುಭಿಃ ಪ್ರಜಾಃ ॥**
**ಸಂಪಶ್ಯತಃ ಸಭೃತ್ಯಸ್ಯ ಮೃತಃ ಸ ನ ತು ಜೀವತಿ ॥ ೧೪೩ ॥**

೧೪೩. ಮಂತ್ರಿಗಳ ಸಹಿತವಾಗಿ ನೋಡುತ್ತಿರುವಾಗಲೇ (ಆಳುತ್ತಿರುವಾಗಲೇ) ದರೋಡೆಗಾರರು ಯಾವನ ರಾಜ್ಯದಲ್ಲಿಯ ಆಕ್ರೋಶ ಮಾಡುತ್ತಿರುವ ಜನರನ್ನು ಲೂಟಿ ಮಾಡುತ್ತಿರುವರೋ, ಅಂಥ ರಾಜನು ಜೀವಿಸಿದ್ದರೂ ಸತ್ತಂತೆಯೇ ಸರಿ.

೧೪೩. ತನ್ನ ಕರ್ತವ್ಯವಾದ ಪ್ರಜಾರಕ್ಷಣೆಯನ್ನು ರಾಜನು ಮಾಡದಿದ್ದರೆ ಅವನು ಜೀವಿಸಿದ್ದರೂ ಸತ್ತಂತೆ.

क्षत्रियस्य परो धर्मः प्रजानामेव पालनम् ।
निर्दिष्टफलभोक्ता हि राजा धर्मेण युज्यते ॥ १४४ ॥
**ಕ್ಷತ್ರಿಯಸ್ಯ ಪರೋ ಧರ್ಮಃ ಪ್ರಜಾನಾಮೇವ ಪಾಲನಮ್ ।**
**ನಿರ್ದಿಷ್ಟಫಲಭೋಕ್ತಾ ಹಿ ರಾಜಾ ಧರ್ಮೇಣ ಯುಜ್ಯತೇ ॥ ೧೪೪ ॥**

೧೪೪. ಪ್ರಜೆಗಳ ಪಾಲನೆಯೇ ರಾಜನ ಶ್ರೇಷ್ಠವಾದ ಧರ್ಮ. ಏಕೆಂದರೆ, ಮೇಲೆ ಹೇಳಿದಷ್ಟೇ ಕರಗಳನ್ನು ಉಪಭೋಗಿಸುವ ರಾಜನು (ಪ್ರಜಾರಕ್ಷಣೆಯಿಂದ) ಧರ್ಮಯುಕ್ತನಾಗುತ್ತಾನೆ.

೧೪೪. ಶಾಸ್ತ್ರದಲ್ಲಿ ಹೇಳಿದಷ್ಟೇ ಕರವನ್ನು ತೆಗೆದುಕೊಳ್ಳುವದು ಮತ್ತು ಪ್ರಜಾಪಾಲನೆಯನ್ನು ಮಾಡುವದು ರಾಜನ ಧರ್ಮ. ಹೆಚ್ಚು ಕರವನ್ನು ತೆಗೆದುಕೊಳ್ಳುವದು ಮತ್ತು ಪ್ರಜಾರಕ್ಷಣೆಯನ್ನು

ಮಾಡದೆ ಇರುವದು ಅಧರ್ಮ. निर्दिष्टफलभोक्ता–प्रजापालनार्थं वेतनीकृतस्य षड्भागादिकस्य फलस्य भोक्ता (न०).

उत्थाय पश्चिमे यामे कृतशौचः समाहितः ।
हुताग्निर्ब्राह्मणांश्चार्च्य प्रविशेत्स शुभां सभाम् ॥ १४५ ॥
**ಉತ್ಥಾಯ ಪಶ್ಚಿಮೇ ಯಾಮೇ ಕೃತಶೌಚಃ ಸಮಾಹಿತಃ ।**
**ಹುತಾಗ್ನಿರ್ಬ್ರಾಹ್ಮಣಾಂಶ್ಚಾರ್ಚ್ಯ ಪ್ರವಿಶೇತ್ಸ ಶುಭಾಂ ಸಭಾಮ್ ॥ ೧೪೫ ॥**

೧೪೫. ರಾತ್ರಿಯ ಕೊನೆಯ ಪ್ರಹರದಲ್ಲೆದ್ದು, ಶೌಚವನ್ನು ಮುಗಿಸಿ, ಸ್ಥಿರಚಿತ್ತನಾಗಿ ಅಗ್ನಿಯಲ್ಲಿ ಹವನ ಮಾಡಿ, ಬ್ರಾಹ್ಮಣರನ್ನು ಸತ್ಕರಿಸಿ ರಾಜನು ಶುಭವಾದ ಸಭೆಯಲ್ಲಿ ಪ್ರವೇಶ ಮಾಡಬೇಕು.

೧೪೫. हुताग्निः– ಸೂರ್ಯೋದಯದ ಸಮಯದಲ್ಲಿ ಹೋಮವನ್ನು ಮಾಡಬೇಕು. (व्युष्टायां रात्रौ–मे०).

शुभां सभाम्– ವಾಸ್ತುಲಕ್ಷಣಗಳಿಂದ ಯುಕ್ತವಾದ ಮತ್ತು ಅಮಾತ್ಯರ ಜೊತೆಗೆ ಆಪ್ತಾಲೋಚನೆ ಮಾಡಲು ಯೋಗ್ಯವಾದ ಸ್ಥಾನ.

तत्र स्थितः प्रजाः सर्वाः प्रतिनन्द्य विसर्जयेत् ।
विसृज्य च प्रजाः सर्वा मन्त्रयेत्सह मन्त्रिभिः ॥ १४६ ॥
**ತತ್ರ ಸ್ಥಿತಃ ಪ್ರಜಾಃ ಸರ್ವಾಃ ಪ್ರತಿನನ್ದ್ಯ ವಿಸರ್ಜಯೇತ್ ।**
**ವಿಸೃಜ್ಯ ಚ ಪ್ರಜಾಃ ಸರ್ವಾ ಮಂತ್ರಯೇತ್ಸಹ ಮಂತ್ರಿಭಿಃ ॥ ೧೪೬ ॥**

೧೪೬. ರಾಜನು ಅಲ್ಲಿ ನಿಂತು (ಅಲ್ಲಿದ್ದ) ಎಲ್ಲ ಜನರನ್ನೂ ಸಂತೈಸಿ ಕಳಿಸಬೇಕು. ಎಲ್ಲ ಜನರನ್ನು ಕಳಿಸಿದ ಅನಂತರ ರಾಜನು ಮಂತ್ರಿಗಳೊಡನೆ (ಗುಪ್ತವಾಗಿ) ಮಂತ್ರಾಲೋಚನೆ ನಡೆಸಬೇಕು.

೧೪೬. ರಾಜನ ದರ್ಶನಕ್ಕಾಗಿ ಬಂದ ಜನರನ್ನು ರಾಜನು ಭೇಟಿ ಮಾಡಿ ಸಂಭಾಷಣೆಯಿಂದ ಸಂತೈಸಬೇಕು.

मन्त्रयेत्–ಸಂಧಿವಿಗ್ರಹಾದಿಗಳ ಬಗೆಗೆ ವಿಚಾರವಿನಿಮಯ ಮಾಡಬೇಕು.

गिरिपृष्ठं समारूह्य प्रासादं वा रहोगतः ।
अरण्ये निःशलाके वा मन्त्रयेदविभावितः ॥ १४७ ॥
**ಗಿರಿಪೃಷ್ಠಂ ಸಮಾರುಹ್ಯ ಪ್ರಾಸಾದಂ ವಾ ರಹೋಗತಃ ।**
**ಅರಣ್ಯೇ ನಿಃಶಲಾಕೇ ವಾ ಮಂತ್ರಯೇದವಿಭಾವಿತಃ ॥ ೧೪೭ ॥**

೧೪೭. ಗುಡ್ಡದ ಮೇಲೇರಿ ಅಥವಾ ಅರಮನೆಯನ್ನೇರಿ ಏಕಾಂತದಲ್ಲಿ ಅಥವಾ ಗುಪ್ತಚರರಿಲ್ಲದಂತಹ ಅರಣ್ಯದಲ್ಲಿ (ಬೇರೆಯವರಿಗೆ) ಗೊತ್ತಾಗದ ಹಾಗೆ ಮಂತ್ರಾಲೋಚನೆಯನ್ನು ನಡೆಸಬೇಕು.

೧೪೭. निःशलाके–शलाका इषीकाः, यत्र तृणमपि नास्ति, येन न कश्चित् तिष्ठति इति संभावना अस्ति (मे०).

यस्य मन्त्रं न जानन्ति समागम्य पृथग्जनाः ।
स कृत्स्नां पृथिवीं भुङ्क्ते कोशहीनोऽपि पार्थिवः ॥१४८॥
**ಯಸ್ಯ ಮಂತ್ರಂನ ಜಾನಂತಿ ಸಮಾಗಮ್ಯ ಪೃಥಗ್ಜನಾಃ ।**
**ಸ ಕೃತ್ಸ್ನಾಂ ಪೃಥಿವೀಂ ಭುಂಕ್ತೇ ಕೋಶಹೀನೋಽಪಿ ಪಾರ್ಥಿವಃ ॥ ೧೪೮ ॥**

೧೪೮. ಯಾವನ ಮಂತ್ರಾಲೋಚನೆಯು ಕೂಡಿದ ಬೇರೆ ಜನರಿಗೆ ತಿಳಿಯುವದಿಲ್ಲವೋ ಆ ರಾಜನು ಧನಹೀನನಾದರೂ ಇಡೀ ಪೃಥ್ವಿಯನ್ನು ಉಪಭೋಗಿಸುತ್ತಾನೆ.

೧೪೮. पृथग्जनाः – ಮಂತ್ರಿಗಳನ್ನು ಬಿಟ್ಟು ಬೇರೆ ಜನರಿಂದ ಮಂತ್ರವನ್ನು ಅತ್ಯಂತ ಗುಪ್ತವಾಗಿಡಬೇಕೆಂದು ಶ್ಲೋಕದ ತಾತ್ಪರ್ಯ.

जडमूकान्धबधिरांस्तैर्यग्योनान्वयोतिगान् ।
स्त्रीम्लेच्छव्याधितव्यङ्गान्मन्त्रकालेऽपसारयेत् ॥ १४९ ॥
**ಜಡಮೂಕಾಂಧಬಧಿರಾಂಸ್ತಿರ್ಯಗ್ಯೋನಾನ್ವಯೋತಿಗಾನ್ ।**
**ಸ್ತ್ರೀಮ್ಲೇಚ್ಛವ್ಯಾಧಿತವ್ಯಂಗಾನ್ಮಂತ್ರಕಾಲೇಽಪಸಾರಯೇತ್ ॥ ೧೪೯ ॥**

೧೪೯. ಬುದ್ಧಿಹೀನ, ಮೂಕ, ಕುರುಡ ಮತ್ತು ಕಿವುಡರು, (ಶುಕಸಾರಿಕಾದಿ) ಪಕ್ಷಿಗಳು, ಬಹಳ ಹಳೆಯವರು, ಸ್ತ್ರೀಯರು, ಮ್ಲೇಚ್ಛರು, ರೋಗಿಗಳು ಮತ್ತು ಅಂಗಹೀನರು– ಇಂತಹವರನ್ನು ಮಂತ್ರಾಲೋಚನೆಯ ಸಮಯದಲ್ಲಿ ದೂರವಿಡಬೇಕು.

೧೪೯. ಮೂಕಾದಿ ಜನರನ್ನು ಮಂತ್ರಿಮಂಡಲದಲ್ಲಿಡಬಾರದು. एवंविधा मन्त्रिणो न कर्तव्याः, बुद्धिविभ्रमसंभवात् (मे०).

भिन्दन्त्यवमता मन्त्रं तैर्यग्योनास्तथैव च ।
स्त्रियश्चैव विशेषेण तस्मात्तत्रादृतो भवेत् ॥ १५० ॥
**ಭಿನ್ದಂತ್ಯವಮತಾ ಮಂತ್ರಂ ತೈರ್ಯಗ್ಯೋನಾಸ್ತಥೈವ ಚ ।**
**ಸ್ತ್ರಿಯಶ್ಚೈವ ವಿಶೇಷೇಣ ತಸ್ಮಾತ್ತತ್ರಾದೃತೋ ಭವೇತ್ ॥ ೧೫೦ ॥**

೧೫೦. ಅಪಮಾನವಾದವರು, ಹಾಗೇ ಪಕ್ಷಿಗಳು ಮತ್ತು ವಿಶೇಷವಾಗಿ ಸ್ತ್ರೀಯರು, ಮಂತ್ರವನ್ನು (ರಾಜರಹಸ್ಯವನ್ನು) ಭೇದ ಮಾಡುತ್ತಾರೆ. (ಶತ್ರುವಿಗೆ ತಿಳಿಸುತ್ತಾರೆ) ಆದ್ದರಿಂದ ಅವರ ಬಗೆಗೆ ಎಚ್ಚರಿಕೆಯಿಂದಿರಬೇಕು.

೧೫೦. तत्र आदृतो भवेत् – ಅಂತಹ ಜನರನ್ನು ಮತ್ತು ಪ್ರಾಣಿಗಳನ್ನು ದೂರವಿಡುವ ಬಗೆಗೆ ಜಾಗ್ರತೆ ವಹಿಸಬೇಕು.

मध्यंदिनेऽर्धरात्रे वा विश्रान्तो विगतक्लमः ।
चिन्तयेद्धर्मकामार्थान्सार्धं तैरेक एव वा ॥ १५१ ॥
**ಮಧ್ಯಂದಿನೇऽರ್ಧರಾತ್ರೇ ವಾ ವಿಶ್ರಾಂತೋ ವಿಗತಕ್ಲಮಃ ।**
**ಚಿಂತಯೇದ್ಧರ್ಮಕಾಮಾರ್ಥಾನ್ಸಾರ್ಧಂ ತೈರೇಕ ಏವ ವಾ ॥ ೧೫೧ ॥**

೧೫೧. ಮಧ್ಯಾಹ್ನದಲ್ಲಿ ಅಥವಾ ಮಧ್ಯರಾತ್ರಿಯಲ್ಲಿ ವಿಶ್ರಾಂತಿ ತೆಗೆದುಕೊಂದು ಖೇದರಹಿತನಾದಾಗ ರಾಜನು ಮಂತ್ರಿಗಳ ಜೊತೆಯಲ್ಲಿ ಅಥವಾ ಒಬ್ಬನೇ ಇದ್ದು ಧರ್ಮ, ಕಾಮ ಮತ್ತು ಅರ್ಥಗಳನ್ನು ಕುರಿತು ಚಿಂತಿಸಬೇಕು.

೧೫೧. विश्रान्तो विगतक्लमः– ಶರೀರದ ಆಯಾಸ ಮತ್ತು ಮನಸ್ಸಿನ ಖೇದ ಇಲ್ಲದಾಗ.

परस्परविरुद्धानां तेषां च समुपार्जनम् ।
कन्यानां संप्रदानं च कुमाराणां च रक्षणम् ॥ १५२ ॥
**ಪರಸ್ಪರವಿರುದ್ಧಾನಾಂ ತೇಷಾಂ ಚ ಸಮುಪಾರ್ಜನಮ್ ।**
**ಕನ್ಯಾನಾಂ ಸಂಪ್ರದಾನಂ ಚ ಕುಮಾರಾಣಾಂ ಚ ರಕ್ಷಣಮ್ ॥ ೧೫೨ ॥**

೧೫೨. ಪರಸ್ಪರ ವಿರುದ್ಧವಾಗಿರುವಂತೆ ತೋರುವ ಅವುಗಳ (ಧರ್ಮಾರ್ಥ ಕಾಮಗಳ) ಸಂಪಾದನೆ, ಕನ್ಯೆಯರ (ವಿವಾಹದಲ್ಲಿ) ದಾನ ಮತ್ತು ರಾಜಕುಮಾರರ ರಕ್ಷಣೆ– (ಇವುಗಳ ಬಗೆಗೆ ಯೋಚನೆ ಮಾಡಬೇಕು.)

೧೫೨. परस्परविरुद्धानां–अतिदण्डादिना अर्थे जन्ये धर्मो हीयेत । अतिक्लेशेन धर्मे जन्ये कामो विषयभोगः कृतस्त्य इति विरोधपरिहारेण (राघ०).

कन्यानां संप्रदानं –ರಾಜಕೀಯ ಉದ್ದೇಶಗಳು ಪೂರ್ಣವಾಗುವ ದೃಷ್ಟಿಯಿಂದ ಕನ್ಯೆಯರ ವಿವಾಹದ ಬಗೆಗೆ ವಿಚಾರ ಮಾಡಬೇಕು.

कुमारणां रक्षणम् –ರಾಜಕುಮಾರರಿಗೆ ವಿನಯದ ಹಾಗೂ ರಾಜನೀತಿಯ ಶಿಕ್ಷಣವನ್ನು ಕೊಡುವದೇ ಅವರ ರಕ್ಷಣೆ.

दूतसंप्रेषणं चैव कार्यशेषं तथैव च ।
अन्तःपुरप्रचारं च प्रणिधीनां च चेष्टितम् ॥ १५३ ॥
**ದೂತಸಂಪ್ರೇಷಣಂ ಚೈವ ಕಾರ್ಯಶೇಷಂ ತಥೈವ ಚ ।**
**ಅಂತಃಪುರಪ್ರಚಾರಂ ಚ ಪ್ರಣಿಧೀನಾಂ ಚ ಚೇಷ್ಟಿತಮ್ ॥ ೧೫೩ ॥**

೧೫೩. ರಾಜದೂತರನ್ನು ಕರೆಸುವದು, ಉಳಿದ ಕಾರ್ಯಗಳು, ಅಂತಃಪುರದಲ್ಲಿರುವ ಸ್ತ್ರೀಯರ ವರ್ತನೆ ಹಾಗೂ ಗುಪ್ತಚರರ ಚಟುವಟಿಕೆಗಳು– (ಇವುಗಳನ್ನು ವಿಚಾರಿಸಬೇಕು).

೧೫೩. दूतसंप्रेषणं – ಗುಪ್ತವಾದ ಪತ್ರಗಳನ್ನು ಕೊಟ್ಟು ರಾಜದೂತರನ್ನು ಬೇರೆ ರಾಜರೆಡೆಗೆ ಕಳಿಸುವದು.

कार्यशेषं – ಪ್ರಾರಂಭ ಮಾಡಿದ ಕಾರ್ಯವನ್ನು ಪೂರ್ಣಗೊಳಿಸುವ ಬಗೆಗೆ (ಆಲೋಚನೆ).
अंतःपुरप्रचारं–

शस्त्रेण वेणी विनिगूहितेन विदूरथं वै महिषी जधान ।
विषप्रदिग्धेन च नूपुरेण देवी विरक्ता किल केशिराजम् ॥ (कु०) ಆದ್ದರಿಂದ ರಾಣಿಯರ ವರ್ತನೆಯನ್ನು ರಾಜನು ದಾಸಿಯರಿಂದ ತಿಳಿದುಕೊಳ್ಳಬೇಕು.

प्रणिधीनां चेष्टितं – ಶತ್ರುರಾಜನ ವೃತ್ತವನ್ನು ತಿಳಿಯಲು ನೇಮಿಸಿದ ಗೂಢಚಾರರು ತಮ್ಮ ಕರ್ತವ್ಯವನ್ನು ಸರಿಯಾಗಿ ಮಾಡುತ್ತಾರೋ ಎಂಬುದನ್ನು ರಾಜನು ವಿಚಾರಿಸಬೇಕು.

कृत्स्नं चाष्टविधं कर्म पञ्चवर्गं च तत्त्वतः ।
अनुरागापरागौ च प्रचारं मण्डलस्य च ॥ १५४ ॥

**ಕೃತ್ಸ್ನಂ ಚಾಷ್ಟವಿಧಂ ಕರ್ಮ ಪಂಚವರ್ಗಂ ಚ ತತ್ತ್ವತಃ ।**
**ಅನುರಾಗಾಪರಾಗೌ ಚ ಪ್ರಚಾರಂ ಮಂಡಲಸ್ಯ ಚ ॥ ೧೫೪ ॥**

೧೫೪. ಎಂಟು ಪ್ರಕಾರದ ಎಲ್ಲ ಕರ್ಮಗಳು, ಪಂಚವರ್ಗಗಳು, ಪ್ರೀತಿ ಹಾಗೂ ದ್ವೇಷ ಮತ್ತು ರಾಜಮಂಡಲದ ವರ್ತನೆ– ಇವುಗಳ ಬಗೆಗೆ ತಾತ್ವಿಕವಾಗಿ (ಸರಿಯಾಗಿ ಆಲೋಚಿಸಬೇಕು).

೧೫೪. अष्टविधं कर्म – १) आदान – ಕರಗಳನ್ನು ತೆಗೆದುಕೊಳ್ಳುವದು. २) विसर्ग – ಸೇವಕರಿಗೆ ವೇತನವನ್ನು ಕೊಡುವದು. ३) प्रेषण – ರಾಜದೂತರನ್ನು ಮತ್ತು ಅಮಾತ್ಯರನ್ನು ಯೋಗ್ಯವಾದ ಕೆಲಸಗಳನ್ನು ಮಾಡಲು ಕಳಿಸುವದು. ४) निषेध – ಶಾಸ್ತ್ರ ವಿರುದ್ಧವಾದ ಕೆಲಸವನ್ನು ನಿಷೇಧಿಸುವದು. ५) अर्थवचनं – ಸೇವಕರಲ್ಲಿ ಕಾರ್ಯದ ಬಗೆಗೆ ಸಂದೇಹವುಂಟಾದಾಗ ಆಜ್ಞೆಯನ್ನು ಮಾಡುವದು. ६) व्यवहार – ಸಾಲವನ್ನು ಕುರಿತು ವಿವಾದವು ಉಂಟಾದಾಗ ಅದರ ಬಗೆಗೆ ನಿರ್ಣಯವನ್ನು ಕೊಡುವುದು. ७) दण्डग्रहणं – ಸೋತ ಶತ್ರುವಿನಿಂದ ಯೋಗ್ಯವಾದ ದಂಡವನ್ನು ಸ್ವೀಕರಿಸುವದು. ८) शुद्धि – ಪಾಪಾಚರಣವಾದಾಗ ಪ್ರಾಯಶ್ಚಿತ್ತವನ್ನು ವಿಧಿಸುವದು. (गो० कु० न० राघ०).

ಮೇಧಾತಿಥಿಯು ಅಷ್ಟವಿಧ ಕರ್ಮವನ್ನು ಹೀಗೆ ವಿವರಿಸುತ್ತಾನೆ:– १) अकृतारम्भ २) कृतानुष्ठान ३) अनुष्ठितविशेषण ४) कर्मफलसंग्रह ५) साम ६) भेद ७) दान ८) दण्ड.

१) वणिक्पथः २) उदकसेतुबन्धनं ३) दुर्गकरणं ४) कृतस्य वा तत्संस्कारनियमः ५) हस्तिबंधनं ६) खनिखननं ७) शून्यनिवेशनं ८) दारुवनच्छेदनं

पञ्चवर्ग – ಐದು ಪ್ರಕಾರದ ಗುಪ್ತಚರರು:– १) कापटिक– ಕಪಟವ್ಯವಹಾರದಲ್ಲಿ ನಿಪುಣನಾದ ಪ್ರೌಢವಿದ್ಯಾರ್ಥಿಗೆ ಧನವನ್ನು ಕೊಟ್ಟು ಸತ್ಕರಿಸಿ ಅವನಿಗೆ ರಾಜ್ಯದಲ್ಲಿ ನಡೆಯುವ ದುರಾಚಾರದ ಬಗೆಗೆ ತಿಳಿಸಲು ರಾಜನು ಹೇಳಬೇಕು. २) उदास्थित – ಸಂನ್ಯಾಸದಿಂದ ಚ್ಯುತನಾದವನನ್ನು ರಾಜನು ಮಠದಲ್ಲಿಟ್ಟು ಫಲವತ್ತಾದ ಭೂಮಿಯನ್ನು ಕೊಟ್ಟು ಅವನಿಂದ ಗುಪ್ತ ವಾರ್ತೆಯನ್ನು ತರಿಸಬೇಕು. ಅವನು ಬೇರೆ ಸಂನ್ಯಾಸಿಗಳಿಗೂ ಹಾಗೇ ಅನ್ನ–ವಸ್ತ್ರಗಳನ್ನು ಕೊಟ್ಟು ಅವರಿಂದ ಗುಪ್ತಚರರ ಕಾರ್ಯವನ್ನು ಮಾಡಿಸಬೇಕು. ३) गृहपति – ದರಿದ್ರನಾದ ಗೃಹಸ್ಥನಿಗೆ ಹೊಲವನ್ನು ಕೊಟ್ಟುಅವನಿಂದ ತನ್ನ (ಗೂಢಚರ್ಯದ) ಕೆಲಸವನ್ನು ಮಾಡಿಸಬೇಕು. ४) वैदेहिक– ಬಡವನಾದ ವ್ಯಾಪಾರಸ್ಥನಿಗೆ ಹಣವನ್ನು ಕೊಟ್ಟು ಅವನ ಮುಖಾಂತರ ಅಪೇಕ್ಷಿತ ಸ್ಥಾನದಲ್ಲಿ ಗುಪ್ತ ವಾರ್ತಾ ಸಂಗ್ರಹವನ್ನು ಮಾಡಿಸಬೇಕು. ५) तापस – ಜಟಾಧಾರಿಯಾದ ತಾಪಸನು ಆಶ್ರಮದಲ್ಲಿದ್ದು ತನ್ನ

ಪ್ರತಿಷ್ಠೆಯನ್ನು ಬೆಳೆಸಿಕೊಳ್ಳಬೇಕು. ಆಗ ಜನರು ಬಂದು ಅವನಿಗೆ ಶ್ರದ್ಧೆಯಿಂದ ಎಲ್ಲ ಸಂಗತಿಗಳನ್ನು ಹೇಳುತ್ತಾರೆ. ಅವುಗಳನ್ನು ಆ ತಾಪಸನು ರಾಜನಿಗೆ ತಿಳಿಸಬೇಕು. ಹೀಗೆ ರಾಜನು ಐದು ಪ್ರಕಾರದ ಗುಪ್ತಚರರನ್ನು ಬೇರೆ ಬೇರೆ ಸ್ಥಾನಗಳಲ್ಲಿ ನೇಮಿಸಬೇಕು.

अनुरागापरागौ – ಅಮಾತ್ಯಾದಿಗಳ ಪ್ರೀತಿ ಹಾಗೂ ಅಪ್ರೀತಿ.

प्रचारं मण्डलस्य – ರಾಜಮಂಡಲದಲ್ಲಿ ಯಾರು ಯುದ್ಧವನ್ನು ಮತ್ತು ಯಾರು ಸಂಧಿಯನ್ನು ಬಯಸುತ್ತಾರೆ ಎಂಬುದನ್ನು ಚಿಂತಿಸಬೇಕು.

मध्यमस्य प्रचारं च विजिगीषोश्च चेष्टितम् ।
उदासीनप्रचारं च शत्रोश्चैव प्रयत्नतः ॥ १५५ ॥
**ಮಧ್ಯಮಸ್ಯ ಪ್ರಚಾರಂ ಚ ವಿಜಿಗೀಷೋಶ್ಚ ಚೇಷ್ಟಿತಮ್ ।**
**ಉದಾಸೀನಪ್ರಚಾರಂ ಚ ಶತ್ರೋಶ್ಚೈವ ಪ್ರಯತ್ನತಃ ॥ ೧೫೫ ॥**

೧೫೫. 'ಮಧ್ಯಮ' ರಾಜನ ವರ್ತನೆಯನ್ನು, 'ವಿಜಿಗೀಷು' ರಾಜನ ಚಟುವಟಿಕೆಯನ್ನು ಮತ್ತು 'ಉದಾಸೀನ' ರಾಜನ ಹಾಗೂ ಶತ್ರುರಾಜನ ವರ್ತನೆಯನ್ನು ಪ್ರಯತ್ನಪೂರ್ವಕವಾಗಿ ತಿಳಿದುಕೊಳ್ಳಬೇಕು.

೧೫೫. १) मध्यम – ಶತ್ರುರಾಜನ ಮತ್ತು ವಿಜಿಗೀಷು ರಾಜನ ನಡುವಿದ್ದು ಅವನನ್ನು ಪ್ರತ್ಯೇಕವಾಗಿ ಸೋಲಿಸಲು ಶಕ್ತನಾದ ರಾಜನು.

२) विजिगीषु – ಪ್ರಜ್ಞೆ ಮತ್ತು ಉತ್ಸಾಹ ಇವುಗಳಿಂದ ಸಮರ್ಥನಾಗಿರುವುದರಿಂದ ಜಯಿಸಲು ಬಯಸುವವನು.

३) उदासीन – ಮಧ್ಯಮ ಹಾಗೂ ವಿಜಿಗೀಷು ರಾಜ್ಯದಲ್ಲಿ ಒಮ್ಮತವಾದರೆ ಅವರನ್ನು ಅನುಗ್ರಹಿಸಲು ಮತ್ತು ಭಿನ್ನಮತವಾದರೆ ನಿಗ್ರಹಿಸಲು ಶಕ್ತನಾದ ರಾಜನು.

४) शत्रु– ಶತ್ರುವಿನಲ್ಲಿ ಮೂರು ಪ್ರಕಾರಗಳು:– ೧) ಸಹಜ (ಚಿಕ್ಕಪ್ಪನ ಮಗ ಮುಂತಾದ ದಾಯಾದ). ೨) ಕೃತ್ರಿಮ (ಅಪಮಾನ, ರಾಜ್ಯಾಪಹರಣ ಇತ್ಯಾದಿ ಕಾರಣಗಳಿಂದ ಶತ್ರುತ್ವವನ್ನು ಹಿಡಿದವನು). ೩) ಪಾರ್ಶ್ವವರ್ತಿ (ತನ್ನ ರಾಜ್ಯಕ್ಕೆ ಹತ್ತಿರ ಯಾವನ ರಾಜ್ಯವಿದೆಯೋ ಅವನು).

एताः प्रकृतयो मूलं मण्डलस्य समासतः ।
अष्टौ चान्याः समाख्याता द्वादशैव तु ताः स्मृताः ॥ १५६ ॥
**ಏತಾಃ ಪ್ರಕೃತಯೋ ಮೂಲಂ ಮಂಡಲಸ್ಯ ಸಮಾಸತಃ ।**
**ಅಷ್ಟೌ ಚಾನ್ಯಾಃ ಸಮಾಖ್ಯಾತಾ ದ್ವಾದಶೈವ ತು ತಾಃ ಸ್ಮೃತಾಃ ॥ ೧೫೬ ॥**

೧೫೬. ರಾಜಮಂಡಲದ ಮೂಲ ಪ್ರಕೃತಿಗಳು ಸಂಕ್ಷೇಪವಾಗಿ (ಹೀಗೆ ನಾಲ್ಕೆನ್ನಿಸಿ) ಇರುವವು. ಬೇರೆ ಎಂಟು (ಪ್ರಕೃತಿಗಳು) ಹೇಳಲ್ಪಟ್ಟಿವೆ. (ಒಟ್ಟಿನಲ್ಲಿ) ಹನ್ನೆರಡು ಪ್ರಕೃತಿಗಳು ಪರಿಗಣಿತವಾಗಿವೆ.

೧೫೬. अष्टौ च अन्याः– 'ಶಾಖಾ ಪ್ರಕೃತಿಗಳು' ಇಂತಿವೆ:– (೧) ಮಿತ್ರ (೨) ಅರಿಮಿತ್ರ (೩) ಮಿತ್ರ–ಮಿತ್ರ (೪) ಅರಿ–ಮಿತ್ರ–ಮಿತ್ರ– ಎಂಬ ನಾಲ್ಕು ಜನರು ಶತ್ರುವಿನ ರಾಜ್ಯದ ಮುಂದೆ ಇರುವರು. (೫) ಪಾರ್ಷ್ಣಗ್ರಾಹ (೬) ಆಕ್ರಂದ (೭) ಪಾರ್ಷ್ಣಗ್ರಾಹಾಸಾರ (೮) ಆಕ್ರಂದಾಸಾರ – ಎಂಬ ನಾಲ್ಕು ಜನರು ಶತ್ರುವಿನ ರಾಜ್ಯದ ಹಿಂದೆ ಇರುವವರು. ಮೇಲಿನ ನಾಲ್ಕು ಮೂಲ ಪ್ರಕೃತಿಗಳು ಮತ್ತು ಈ ಎಂಟು ಶಾಖಾಪ್ರಕೃತಿಗಳು ಕೂಡಿ ಹನ್ನೆರಡು ಜನ ಪ್ರಕೃತಿಗಳಾಗುತ್ತಾರೆ.

अमात्यराष्ट्रदुर्गार्थदण्डाख्याः पञ्च चापरः ।
प्रत्येकं कथिता ह्येताः संक्षेपेण द्विसप्ततिः ॥ १५७ ॥
**ಅಮಾತ್ಯರಾಷ್ಟ್ರದುರ್ಗಾರ್ಥದಂಡಾಖ್ಯಾಹ ಪಂಚ ಚಾಪರಾಃ ।**
**ಪ್ರತ್ಯೇಕಂ ಕಥಿತಾ ಹ್ಯೇತಾಃ ಸಂಕ್ಷೇಪೇನ ದ್ವಿಸಪ್ತತಿಃ ॥ ೧೫೭ ॥**

೧೫೭. ರಾಜಮಂಡಲದ (ಮೂಲ ಪ್ರಕೃತಿಗಳಲ್ಲಿ) ಪ್ರತಿಯೊಬ್ಬನಿಗೂ ಮಂತ್ರಿ, ರಾಜ್ಯ, ಕೋಟೆ, ಸಂಪತ್ತು ಮತ್ತು ದಂಡ ಎಂಬ ಐದು ಪ್ರಕೃತಿಗಳನ್ನು ಹೇಳಲಾಗಿದೆ. ಹೀಗೆ ಸಂಕ್ಷಿಪ್ತವಾಗಿ (ಕಟ್ಟಕಡೆಗೆ) ಎಪ್ಪತ್ತೆರಡು ಪ್ರಕೃತಿಗಳಾಗುತ್ತವೆ.

೧೫೭. द्विसत्पतिः– ಮೇಲಿನ ಹನ್ನೆರಡು ಪ್ರಕೃತಿಗಳಿಗೆ ಪ್ರತ್ಯೇಕವಾಗಿ–ಮಂತ್ರಿ, ರಾಷ್ಟ್ರ, ಕೋಟೆ, ಸಂಪತ್ತು ಮತ್ತು ದಂಡ ಎಂಬ ಐದು 'ದಿವ್ಯ ಪ್ರಕೃತಿಗಳು' ಸೇರಿದ್ದರಿಂದ ಒಟ್ಟು (೧೨ x ೫ = ೬೦ + ೧೨ =) ೭೨ ಪ್ರಕೃತಿಗಳಾಗುವದು.

अनन्तरमरिं विद्यादरिसेविनमेव च ।
अरेरनन्तरं मित्रमुदासीनं तयोः परम् ॥ १५८ ॥
**ಅನಂತರಮರಿಂ ವಿದ್ಯಾದರಿಸೇವಿನಮೇವ ಚ ।**
**ಅರೇರನಂತರಂ ಮಿತ್ರಮುದಾಸೀನಂ ತಯೋಃ ಪರಮ್ ॥ ೧೫೮ ॥**

೧೫೮. ತನ್ನ ರಾಜ್ಯಕ್ಕೆ ತಾಗಿದ ರಾಜ್ಯದ ರಾಜರನ್ನು ಮತ್ತು ಅವನಿಗೆ ಸಹಾಯ ಮಾಡುವವರನ್ನು 'ಅರಿ'ಯೆಂದು ಭಾವಿಸಬೇಕು. ಅರಿಯ ಆಚೆಗಿರುವವನು ಮಿತ್ರನು ಮತ್ತು ಅವರಿಬ್ಬರ ಆಚೆಗಿರುವವನು "ಉದಾಸೀನ".

೧೫೮. ವಿಜಯಯಾತ್ರೆಗಾಗಿ ರಾಜನು ಯಾವ ದಿಕ್ಕಿನಲ್ಲಿ ಹೋಗುತ್ತಾನೋ ಆ ದಿಕ್ಕಿನಲ್ಲಿ ಅರಸರಿಗೆ ಅರಿ, ಮಿತ್ರ ಮುಂತಾದ ಹೆಸರುಗಳಿವೆ. ಅವನ ಹಿಂಭಾಗದಲ್ಲಿದ್ದ ಅರಸರಿಗೆ ಪಾರ್ಷ್ಣಿಗ್ರಾಹ ಆಕ್ರಂದ ಮುಂತಾದ ಹೆಸರುಗಳಿವೆ.

तान्सर्वानभिसंदध्यात्सामादिभिरूपक्रमैः ।
व्यस्तैश्चैव समस्तैश्च पौरुषेण नयेन च ॥ १५९ ॥
**ತಾನ್ಸರ್ವಾನಭಿಸಂದಧ್ಯಾತ್ಸಾಮಾದಿಭಿರುಪಕ್ರಮೈಃ ।**
**ವ್ಯಸ್ತೈಶ್ಚೈವ ಸಮಸ್ತೈಶ್ಚ ಪೌರುಷೇಣ ನಯೇನ ಚ ॥ ೧೫೯ ॥**

೧೫೯. ಸಾಮಾದಿ ಉಪಾಯಗಳನ್ನು ಪ್ರತ್ಯೇಕವಾಗಿ ಅಥವಾ ಸಮಸ್ತವಾಗಿ ಉಪಯೋಗಿಸಿ ತನ್ನ ವೀರತ್ವದಿಂದ ಅಥವಾ ನೀತಿಯಿಂದ ಆ ಎಲ್ಲ ರಾಜರನ್ನೂ ವಶೀಕರಿಸಿಕೊಳ್ಳಬೇಕು.

೧೫೯. ಸಾಮ, ದಾನ, ಭೇದ, ದಂಡ– ಎಂಬ ಉಪಾಯಗಳನ್ನು ಆವಶ್ಯಕತೆ ಇದ್ದ ಹಾಗೆ ಉಪಯೋಗಿಸಬೇಕು. ಈ ಎಲ್ಲವನ್ನೂ ಅಥವಾ ಕೇವಲ ಸಾಮ, ದಾನಗಳನ್ನು ಉಪಯೋಗಿಸಿ ಶತ್ರುವನ್ನು ಅಧೀನದಲ್ಲಿಡಬೇಕು.

संधिं च विग्रहं चैव यानमासनमेव च ।
द्वैधीभावं संश्रयं च षड्गुणांश्चिन्तयेत्सदा ॥ १६० ॥
**ಸಂಧಿಂ ಚ ವಿಗ್ರಹಂ ಚೈವ ಯಾನಮಾಸನಮೇವ ಚ ।**
**ದ್ವೈಧೀಭಾವಂ ಸಂಶ್ರಯಂ ಚ ಷಡ್ಗುಣಾಂಶ್ಚಿಂತಯೇತ್ಸದಾ ॥ ೧೬೦ ॥**

೧೬೦. ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ ಮತ್ತು ಸಂಶ್ರಯ ಎಂಬ ಷಡ್ಗುಣಗಳ ಬಗೆಗೆ ಯಾವಾಗಲೂ ಆಲೋಚಿಸುತ್ತಿರಬೇಕು.

೧೬೦. षड्गुण – १) संधि – ಪರಸ್ಪರರಿಗೆ ಸಹಾಯ ಮಾಡಬೇಕೆಂಬ ಒಡಂಬಡಿಕೆಯನ್ನು ಮಾಡಿಕೊಳ್ಳುವುದು.

२) विग्रह – ಯುದ್ಧವನ್ನು ಮಾಡುವದು.

३) यान – ಶತ್ರುವಿನ ಮೇಲೆ ಏರಿ ಹೋಗುವದು.

४) आसन – ಶತ್ರುವನ್ನು ಉಪೇಕ್ಷಿಸಿ ಕೋಟೆ ಮುಂತಾದ ಸಂರಕ್ಷಿತವಾದ ಸ್ಥಾನದಲ್ಲಿ ಸುಮ್ಮನೆ ಕುಳಿರುವುದು.

೫) द्वैधीभाव – ಕಾರ್ಯಸಿದ್ಧಿಗಾಗಿ ತನ್ನ ಸೈನ್ಯದಲ್ಲಿ ಎರಡು ಭಾಗಗಳನ್ನು ಮಾಡುವದು.

೬) संश्रय – ಶತ್ರುವಿನಿಂದ ಪೀಡಿತನಾದಾಗ ಪ್ರಬಲನಾದ ಅರಸನ ಆಶ್ರಯವನ್ನು ಪಡೆಯುವದು.

आसनं चैव यानं च संधिं विग्रहमेव च ।
कार्यं वीक्ष्य प्रयुञ्जीत द्वैधं संश्रयमेव च ॥ १६१ ॥
**ಆಸನಂ ಚೈವ ಯಾನಂ ಚ ಸಂಧಿಂ ವಿಗ್ರಹಮೇವ ಚ ।**
**ಕಾರ್ಯಂ ವೀಕ್ಷ್ಯ ಪ್ರಯುಂಜೀತ ದ್ವೈಧಂ ಸಂಶ್ರಯಮೇವ ಚ ॥ ೧೬೧ ॥**

೧೬೧. ಆಸನ, ಯಾನ, ಸಂದಿ, ವಿಗ್ರಹ, ದ್ವೈಧ ಮತ್ತು ಸಂಶ್ರಯಗಳನ್ನು (ಪ್ರಸ್ತುತ) ಕಾರ್ಯವನ್ನು ನೋಡಿ ಉಪಯೋಗಿಸಬೇಕು.

೧೬೧. ಮೇಲಿನ ಷಡ್ಗುಣಗಳಲ್ಲಿ ಯಾವುದನ್ನು ಅವಲಂಬಿಸಿದರೆ ತನಗೆ ಅನುಕೂಲವಾಗುವದು ಮತ್ತು ಶತ್ರುವಿಗೆ ಪ್ರತಿಕೂಲವಾಗುವದು– ಎಂಬುದನ್ನು ಯೋಚಿಸಿ, ಒಬ್ಬ ರಾಜನ ಜೊತೆಗೆ ಸಂಧಿ ಅಥವಾ ಇನ್ನೊಬ್ಬ ರಾಜನ ಕೂಡ ಯುದ್ಧ– ಹೀಗೆ ಮಾಡಬೇಕು.

संधिं तु द्विविधं विद्याद्राजा विग्रहमेव च ।
उभे यानासने चैव द्विविधः संश्रयः स्मृतः ॥ १६२ ॥
**ಸಂಧಿಂ ತು ದ್ವಿವಿಧಂ ವಿದ್ಯಾದ್ರಾಜಾ ವಿಗ್ರಹಮೇವ ಚ ।**
**ಉಭೇ ಯಾನಾಸನೇ ಚೈವ ದ್ವಿವಿಧಃ ಸಂಶ್ರಯಃ ಸ್ಮೃತಃ ॥ ೧೬೨ ॥**

೧೬೨. ಸಂಧಿ ಮತ್ತು ವಿಗ್ರಹಗಳು ಎರಡು ಪ್ರಕಾರದವುಗಳಾಗಿವೆ ಎಂಬುದನ್ನು ರಾಜನು ತಿಳಿಯಬೇಕು. ಯಾನ ಮತ್ತು ಆಸನಗಳಲ್ಲಿ ಎರಡು ಪ್ರಕಾರಗಳಿವೆ. ಸಂಶ್ರಯ (ಕೂಡ) ದ್ವಿವಿಧವಿದೆಂದು (ಸ್ಮೃತಿಯಲ್ಲಿ) ಹೇಳಲಾಗಿದೆ.

೧೬೨. सन्ध्यादिषट्कं प्रत्येक द्विविधम् इत्यर्थः (राघ०).

समानयानकर्मा च विपरीतस्तथैव च ।
तदात्वायतिसंयुक्तः संधिर्ज्ञेयो द्विलक्षणः ॥ १६३ ॥
**ಸಮಾನಯಾನ ಕರ್ಮಾ ಚ ವಿಪರೀತಸ್ತಥೈವ ಚ ।**
**ತದಾತ್ವಾಯತಿಸಂಯುಕ್ತಃ ಸಂಧಿರ್ಜ್ಞೇಯೋದ್ವಿಲಕ್ಷಣಃ ॥ ೧೬೩ ॥**

೧೬೩. ತತ್ಕಾಲಕ್ಕೆ ಅಥವಾ ಭವಿಷ್ಯತ್ಕಾಲಕ್ಕೆ ಸಂಬಂಧಿಸಿದ 'ಸಮಾನಯಾನ ಕರ್ಮ' ಮತ್ತು 'ಅಸಮಾನಯಾನಕರ್ಮ' ಎಂಬ ಎರಡು ಪ್ರಕಾರದ ಸಂಧಿಯಿರುವದು.

೧೬೩. समानयानकर्म – ಇಬ್ಬರು ಕೂಡಿಕೊಂಡು ಶತ್ರುವಿನ ಮೇಲೆ ದಾಳಿಯನ್ನು ನಡೆಸುವದು.

विपरीतः– 'ನೀನು ಈ ದಿಕ್ಕಿನಿಂದ ಶತ್ರುವಿನ ಮೇಲೆ ಏರಿ ಹೋಗು; ನಾನು ಆ ದಿಕ್ಕಿನಿಂದ ಅವನ ಮೇಲೆ ದಾಳಿ ಮಾಡುತ್ತೇನೆ' ಎಂದು ನಿಶ್ಚಯಿಸುವದು.

तदात्व–आयतिसंयुक्तः– ತತ್ಕಾಲಕ್ಕೆ ಅಥವಾ ಭವಿಷ್ಯತ್ಕಾಲಕ್ಕೆ ಸಂಬಂಧಿಸಿದ (ಸಂಧಿ).

स्वयंकृतश्च कार्यार्थमकाले काल एव वा ।
मित्रस्य चैवापकृते द्विविधो विग्रहः स्मृतः ॥ १६४ ॥
**ಸ್ವಯಂಕೃತಶ್ಚ ಕಾರ್ಯಾರ್ಥಮಕಾಲೇ ಕಾಲ ಏವ ಚ ।**
**ಮಿತ್ರಸ್ಯ ಚೈವಾಪಕೃತೇ ದ್ವಿವಿಧೋ ವಿಗ್ರಹಃ ಸ್ಮೃತಃ ॥ ೧೬೪ ॥**

೧೬೪. ಕಾರ್ಯಸಿದ್ಧಿಗಾಗಿ ಶತ್ರು ಸಂಕಟದಲ್ಲಿದ್ದಾಗ ಅಥವಾ ಬೇರೆ ಸಮಯದಲ್ಲಿ ತಾನಾಗಿ ಯುದ್ಧವನ್ನು ಪ್ರಾರಂಭಿಸುವದು ಮತ್ತು ಮಿತ್ರನ ಮೇಲೆ ಅಕ್ರಮಣವಾದಾಗ (ಅವನಿಗಾಗಿ ಹೋರಾಡುವದು)– ಹೀಗೆ ಯುದ್ಧವು ಎರಡು ತರಹದ್ದೆಂದು (ಸ್ಮೃತಿಯಲ್ಲಿ) ಹೇಳಲಾಗಿದೆ.

೧೬೪. अकाले – ಶತ್ರು ಕಠಿನ ಪರಿಸ್ಥಿತಿಯಲ್ಲಿರುವಾಗ, – ಮಾರ್ಗಶೀರ್ಷ ಮಾಸದಲ್ಲಿ (ಕೆಳಗೆ ಶ್ಲೋಕ ೧೮೦ ನೋಡಿರಿ);

द्विविधः– स्वकार्यार्थं मित्रकार्यार्थं च (मे०). मित्रस्य चैवापकृते–मित्रेण चैवापकृते इति पाठभेदः ''यः परस्य शत्रुः, स विजिगीषोः मित्रं, तेनापकारे क्रियमाणे व्यसनिनि शत्रौ इति'' (कु०).

एकाकिनश्चात्ययिके कार्ये प्राप्ते यदृच्छया ।
संहतस्य च मित्रेण द्विविधं यानमुच्यते ॥ १६५ ॥
**ಏಕಾಕಿನಶ್ಚಾತ್ಯಯಿಕೇ ಕಾರ್ಯೇ ಪ್ರಾಪ್ತೇ ಯದೃಚ್ಛಯಾ ।**
**ಸಂಹತಸ್ಯ ಚ ಮಿತ್ರೇಣ ದ್ವಿವಿಧಂ ಯಾನಮುಚ್ಯತೇ ॥ ೧೬೫ ॥**

೧೬೫. (ಶತ್ರುವಿಗೆ ಆಕಸ್ಮಿಕವಾಗಿ ಸಂಕಟ ಪ್ರಾಪ್ತವಾದಾಗ (ಸಮರ್ಥನಾದ) ಒಬ್ಬ ರಾಜನು ದಾಳಿ ಮಾಡುವದು ಅಥವಾ (ಅಸಮರ್ಥನಾದವನು) ಮಿತ್ರನ ಜೊತೆಗೆ ಹೋಗುವದು ಎಂಬುದಾಗಿ ಯಾನವು ಎರಡು ವಿಧವೆಂದು ಹೇಳಲಾಗಿದೆ.

೧೬೫. आत्ययिकं–तत्कालप्रतीकारे अनर्थहेतुं (स०).

शत्रोः व्यसनादिकं (कुं).

क्षीणस्य चैव क्रमशो दैवात्पूर्वकृतेन वा ।
मित्रस्य चानुरोधेन द्विविधं स्मृतमासनम् ॥ १६६ ॥
**ಕ್ಷೀಣಸ್ಯ ಚೈವ ಕ್ರಮಶೋ ದೈವಾತ್ ಪೂರ್ವಕೃತೇನ ವಾ ।**
**ಮಿತ್ರಸ್ಯ ಚಾನುರೋಧೇನ ದ್ವಿವಿಧಂ ಸ್ಮೃತಮಾಸನಮ್ ॥ ೧೬೬ ॥**

೧೬೬. ದುರ್ದೈವದಿಂದ ಅಥವಾ ಹಿಂದೆ ಮಾಡಿದ ಕಾರ್ಯದಿಂದ (ಸೈನ್ಯ, ಸಂಪತ್ತುಗಳಲ್ಲಿ) ಕ್ಷೀಣನಾದಾಗ ಸುಮ್ಮನೆ ಇರುವದು ಮತ್ತು (ಸಮೃದ್ಧನಾಗಿದ್ದರೂ) ಮಿತ್ರನ ವಿನಂತಿಯಂತೆ ಸುಮ್ಮನೆ ಕುಳಿತಿರುವುದು– ಎಂಬುದಾಗಿ 'ಆಸನ' ಎರಡು ಪ್ರಕಾರದ್ದೆಂದು (ಸ್ಮೃತಿ ಯಲ್ಲಿ) ಹೇಳಲಾಗಿದೆ.

೧೬೬. दैवात्–मारकादिना (सं).

पूर्वकृतेन–ऐहिकेन, बलवच्छत्रुपीडादिकर्मणा व (राघ). अस्मिन् जन्मनि पूर्वसंवत्सरादिषु कृतेन (न०).

बलस्य स्वामिनश्चैव स्थितिः कार्यार्थसिद्धये ।
द्विविधं कीर्त्यते द्वैधं षाड्गुण्यगुणवेदिभिः ॥ १६७ ॥
**ಬಲಸ್ಯ ಸ್ವಾಮಿನಶ್ಚೈವ ಸ್ಥಿತಿಃ ಕಾರ್ಯಾರ್ಥಸಿದ್ಧಯೇ ।**
**ದ್ವಿವಿಧಂ ಕೀರ್ತ್ಯತೇ ದ್ವೈಧಂ ಷಾಡ್ಗುಣ್ಯಗುಣವೇದಿಭಿಃ ॥ ೧೬೭ ॥**

೧೬೭. ಕಾರ್ಯಸಿದ್ಧಿಗಾಗಿ ಸೈನ್ಯವು ಮತ್ತು ರಾಜನು ಭಿನ್ನ ಭಿನ್ನ ಸ್ಥಳದಲ್ಲಿರುವದು ದ್ವೈಧವೆಂದು ಷಾಡ್ಗುಣ್ಯದ ಪ್ರಯೋಜನವನ್ನು ಬಲ್ಲವರು ಹೇಳುತ್ತಾರೆ.

೧೬೭. ಸೇನಾಪತಿಯ ನಾಯಕತ್ವದಲ್ಲಿ ಚತುರಂಗ ಸೈನ್ಯವನ್ನು ಶತ್ರುಪೀಡಾ ಪರಿಹಾರಕ್ಕಾಗಿ ಕಳಿಸುವದು ಮತ್ತು ರಾಜನು ಅಲ್ಪ ಸೈನ್ಯದ ಜೊತೆಗೆ ಕೋಟೆಯಲ್ಲಿರುವದು– ಇದು ಒಂದು ತರಹದ ದ್ವೈಧ. ಸೈನ್ಯದ ಕೆಲಭಾಗವನ್ನು ತನ್ನ ರಕ್ಷಣೆಗಾಗಿಟ್ಟುಕೊಂಡು ಇನ್ನೊಂದು ಭಾಗವನ್ನು ಮಿತ್ರನ ಸಹಾಯಕ್ಕೆ ಕಳಿಸುವದು– ಇದು ಇನ್ನೊಂದು ತರಹದ ದ್ವೈಧ (ಮೇ.). ಹೋಲಿಸಿರಿ–ಕಾಮಂದಕೀಯ ನೀತಿಸಾರ ೧೧–೨೪.

अर्थसंपादनार्थं च पीड्यमानस्य शत्रुभिः ।
साधुषु व्यपदेशार्थं द्विविधः संश्रयः स्मृतः ॥ १६८ ॥
**ಅರ್ಥಸಂಪಾದನಾರ್ಥಂ ಚ ಪೀಡ್ಯಮಾನಸ್ಯ ಶತ್ರುಭಿಃ ।**
**ಸಾಧುಷು ವ್ಯಪದೇಶಾರ್ಥಂ ದ್ವಿವಿಧಃ ಸಂಶ್ರಯಃ ಸ್ಮೃತಃ ॥ ೧೬೮ ॥**

೧೬೮. ಶತ್ರುಗಳಿಂದ ಪೀಡಿತನಾದಾಗ ತನ್ನ ಉದ್ದೇಶವನ್ನು ಪೂರ್ಣಗೊಳಿಸಲೆಂದು ಮತ್ತು ಒಳ್ಳೆಯ ಜನರ ಆಧಾರ ತಮಗಿದೆಯೆಂದು ಪ್ರಕಟಿಸಲೆಂದು ಮಾಡುವ ಸಂಶ್ರಯವು ದ್ವಿವಿಧವಾಗಿದೆಯೆಂದು ಸ್ಮೃತಿಯಲ್ಲಿ ಹೇಳಲಾಗಿದೆ.

೧೬೮. ಪರಚಕ್ರದ ಭಯ ತತ್ಕಾಲದಲ್ಲಿರದಿದ್ದರೂ ಬಲಾಢ್ಯ ಹಾಗು ಧರ್ಮನಿಷ್ಠ ಅರಸರ ಆಶ್ರಯವನ್ನು ಪಡೆದಿರಬೇಕು. ಇದರಿಂದ ಶತ್ರುವಿನ ಮನಸ್ಸಿನಲ್ಲಿ ಭಯವುಂಟಾಗುವದು.

यदावगच्छेदायत्यामाधिक्यं ध्रुवमात्मनः ।
तदात्वे चाल्पिकां पीडां तदा संधिं समाश्रयेत् ॥ १६९ ॥
**ಯದಾವಗಚ್ಛೇದಾಯತ್ಯಾಮಾಧಿಕ್ಯಂ ಧ್ರುವಮಾತ್ಮನಃ ।**
**ತದಾತ್ವೇ ಚಾಲ್ಪಿಕಾಂ ಪೀಡಾಂ ತದಾ ಸಂಧಿಂ ಸಮಾಶ್ರಯೇತ್ ॥ ೧೬೯ ॥**

೧೬೯. ಭವಿಷ್ಯತ್ಕಾಲದಲ್ಲಿ ತನಗೆ ಖಂಡಿತವಾಗಿ ಉತ್ಕರ್ಷವಾಗುವದೆಂದು ತಿಳಿದು ಬಂದಾಗ, ತತ್ಕಾಲದಲ್ಲಿ ಸ್ವಲ್ಪ ಹಾನಿಯಾದರೂ ಸಂಧಿಯನ್ನು ಆಶ್ರಯಿಸಬೇಕು.

೧೬೯. आयत्याम् – ಭವಿಷ್ಯತ್ತಿನಲ್ಲಿ
अल्पिकां पीडाम् – ಅಲ್ಪ ಧನಹಾನಿ

यदा प्रहृष्टा मन्येत सर्वास्तु प्रकृतिर्भृशम् ।
अत्युच्छ्रितं तथात्मानं तदा कुर्वीत विग्रहम् ॥ १७० ॥
**ಯದಾ ಪ್ರಹೃಷ್ಟಾ ಮನ್ಯೇತ ಸರ್ವಾಸ್ತು ಪ್ರಕೃತೀರ್ಭೃಶಮ್ ।**
**ಅತ್ಯುಚ್ಛ್ರಿತಂ ತಥಾತ್ಮಾನಂ ತದಾ ಕುರ್ವೀತ ವಿಗ್ರಹಮ್ ॥ ೧೭೦ ॥**

೧೭೦. ತನ್ನ ಎಲ್ಲ ಪ್ರಕೃತಿಗಳೂ ಅತ್ಯಂತ ಸಂತುಷ್ಟವಾಗಿವೆ ಮತ್ತು ತಾನು ಅತ್ಯಂತ ಬಲಶಾಲಿಯಾಗಿದ್ದೇನೆ ಎಂದು ತಿಳಿದು ಬಂದರೆ ಆಗ ಯುದ್ಧವನ್ನು ಮಾಡಬೇಕು.

೧೭೦. प्रहृष्टाः प्रकृतिः– ಮೇಲೆ ಶ್ಲೋಕ ೧೫೬–೧೫೭ರಲ್ಲಿ ಹೇಳಿದ ಅಮಾತ್ಯಾದಿ ಪ್ರಕೃತಿಗಳು–ದಾನ ಸಂಮಾನ ಮುಂತಾದುವುಗಳಿಂದ ಸಂತುಷ್ಟರಾಗಿದ್ದಾಗ.

अत्युच्छ्रित – ಆನೆ, ಕುದುರೆ ಕೋಶ ಮುಂತಾದ ಶಕ್ತಿಗಳಿಂದ ತಾನು ಬಲಿಷ್ಠನಾಗಿದ್ದೇನೆಂದು ತಿಳಿದು ಬಂದಾಗ ಮಾತ್ರ ಯುದ್ಧವನ್ನು ಪ್ರಾರಂಭಿಸಬೇಕು.

यदा मन्येत भावेन हृष्टं पुष्टं बलं स्वकम् ।
परस्य विपरीतं च तदा यायाद्रिपुं प्रति ॥ १७१ ॥
**ಯದಾ ಮನ್ಯೇತ ಭಾವೇನ ಹೃಷ್ಟಂ ಪುಷ್ಟಂ ಬಲಂ ಸ್ವಕಮ್ ।**
**ಪರಸ್ಯ ವಿಪರೀತಂ ಚ ತದಾ ಯಾಯಾದ್ರಿಪುಂ ಪ್ರತಿ ॥ ೧೭೧ ॥**

೧೭೧. ತನ್ನ ಸೈನ್ಯವು (ಮನಸ್ಸಿನಲ್ಲಿ) ಹರ್ಷಯುಕ್ತ ಮತ್ತು (ಧನಾದಿಗಳಿಂದ) ಪುಷ್ಟವಾಗಿದೆಯೆಂದು ಹಾಗೂ ಶತ್ರುವಿನ ಸೈನ್ಯವು ಏತದ್ವಿರುದ್ಧವಾಗಿದೆಯೆಂದು ನಿಜವಾಗಿ ಯಾವಾಗ ತಿಳಿದುಬರುತ್ತದೋ, ಆಗ ಶತ್ರುವಿನ ಮೇಲೇರಿ ಹೋಗಬೇಕು.

೧೭೧. हृष्टं पुष्टं = हृष्टं हर्षितम् अत्युत्साहयुक्तं, मांसौदनादिना पुष्टं (राघ०).

यदा तु स्यात्परिक्षीणो वाहनेन बलेन च ।
तदासीत प्रयत्नेन शनकैः सान्त्वयन्नरीन् ॥ १७२ ॥
**ಯದಾ ತು ಸ್ಯಾತ್ಪರಿಕ್ಷೀಣೋ ವಾಹನೇನ ಬಲೇನ ಚ ।**
**ತದಾಸಿತ ಪ್ರಯತ್ನೇನ ಶನಕೈಃ ಸಾಂತ್ವಯನ್ನರೀನ್ ॥ ೧೭೨ ॥**

೧೭೨. ವಾಹನಗಳಲ್ಲಿ ಹಾಗೂ ಸೈನ್ಯಗಳಲ್ಲಿ ಅತ್ಯಂತ ಕ್ಷೀಣನಾದಾಗ ರಾಜನು ಶತ್ರುಗಳನ್ನು (ಸಾಮದಾನಗಳಿಂದ) ಸಾಂತ್ವನ ಮಾಡುತ್ತ ಇರಬೇಕು.

೧೭೨. वाहनेन – ಆನೆ, ಕುದುರೆ, ರಥ ಮುಂತಾದ ವಾಹನಗಳು.
बलेन – ಮಂತ್ರಿ, ಸೈನ್ಯ, ಕೋಶ ಮುಂತಾದ ರಾಜಶಕ್ತಿಗಳು.

मन्येतारिं यदा राजा सर्वथा बलवत्तरम् ।
तदा द्विधा बलं कृत्वा साधयेत्कार्यमात्मनः ॥ १७३ ॥
**ಮನ್ಯೇತಾರಿಂ ಯದಾ ರಾಜಾ ಸರ್ವಥಾ ಬಲವತ್ತರಮ್ ।**
**ತದಾದ್ವಿಧಾ ಬಲಂ ಕೃತ್ವಾ ಸಾಧಯೇತ್ಕಾರ್ಯಮಾತ್ಮನಃ ॥ ೧೭೩ ॥**

೧೭೩. ಶತ್ರು ಎಲ್ಲ ಪ್ರಕಾರದಿಂದಲೂ ಅತ್ಯಂತ ಬಲಶಾಲಿಯಾಗಿದ್ದಾನೆಂದು ತಿಳಿದು ಬಂದರೆ, ರಾಜನು ತನ್ನ ಸೈನ್ಯವನ್ನು ಎರಡು ಭಾಗಗಳನ್ನಾಗಿ ಮಾಡಿ ತನ್ನ ಕಾರ್ಯವನ್ನು ಸಾಧಿಸಬೇಕು.

೧೭೩. ರಾಜನು ಕೆಲವು ಸೈನಿಕರ ಜೊತೆಗೆ ಕೋಟೆಯಲ್ಲಿರಬೇಕು ಮತ್ತು ಉಳಿದ ಸೈನ್ಯವನ್ನು ಶತ್ರುವಿನ ಕೂಡ ಹೋರಾಡಲು ಕಳಿಸಬೇಕು.

यदा परबलानां तु गमनीयतमो भवेत् ।
तदा तु संश्रयेत्क्षिप्रं धार्मिकं बलिनं नृपम् ॥ १७४ ॥
**ಯದಾ ಪರಬಲಾನಾಂ ತು ಗಮನೀಯತಮೋ ಭವೇತ್ ।**
**ತದಾ ತು ಸಂಶ್ರಯೇತ್ಕ್ಷಿಪ್ರಂ ಧಾರ್ಮಿಕಂ ಬಲಿನಂ ನೃಪಮ್ ॥ ೧೭೪ ॥**

೧೭೪. ಶತ್ರುವಿನ ಸೈನಿಕರು ತನ್ನನ್ನು ಖಂಡಿತವಾಗಿ ಸೆರೆಹಿಡಿಯುತ್ತಾರೆಂದೆನ್ನಿಸಿದರೆ ಕೂಡಲೇ ಧಾರ್ಮಿಕ ಹಾಗೂ ಬಲಿಷ್ಠನಾದ ಅರಸನ ಆಶ್ರಯವನ್ನು ಪಡೆಯಬೇಕು.

೧೭೪. ತನ್ನ ರಾಜ್ಯದಲ್ಲಿ ತನ್ನ ರಕ್ಷಣೆಯಾಗಲಿಕ್ಕಿಲ್ಲ ಎಂದು ತಿಳಿದು ಬಂದರೆ ಅವನು ಸಮರ್ಥ ಅರಸನ ಆಶ್ರಯಕ್ಕೆ ಹೋಗಬೇಕು. ಆ ಅರಸನು ಧರ್ಮನಿಷ್ಠನಾಗಿರಬೇಕು; ಇಲ್ಲದಿದ್ದರೆ ಅವನೇ ಈ ರಾಜನಿಗೆ ಅಪಾಯ ಮಾಡಬಹುದು.

निग्रहं प्रकृतीनां च कुर्याद्योऽरिबलस्य च ।
उपसेवेत तं नित्यं सर्वयत्नैर्गुरुं यथा ॥ १७५ ॥
**ನಿಗ್ರಹಂ ಪ್ರಕೃತೀನಾಂ ಚ ಕುರ್ಯಾದ್ಯೋಽರಿಬಲಸ್ಯ ಚ ।**
**ಉಪಸೇವೇತ ತಂ ನಿತ್ಯಂ ಸರ್ವಯತ್ನೈರ್ಗುರುಂ ಯಥಾ ॥ ೧೭೫ ॥**

೧೭೫. ಯಾವನು ಪ್ರಕೃತಿಗಳ ಹಾಗೂ ಶತ್ರು ಸೈನ್ಯದ ನಿಗ್ರಹ ಮಾಡುವದಕ್ಕೆ ಸಮರ್ಥನಾಗಿರುವನೋ, ಅವನಿಗೆ ಯಾವಾಗಲೂ ಗುರುವಿಗೆ ಸೇವೆ ಸಲ್ಲಿಸುವಂತೆ ಸರ್ವಪ್ರಯತ್ನದಿಂದ ಸೇವೆ ಸಲ್ಲಿಸಬೇಕು.

೧೭೫. प्रकृतीनां – ಮೇಲೆ ಶ್ಲೋಕ ೧೫೭ರಲ್ಲಿ ಹೇಳಿದಂತೆ ಅಮಾತ್ಯ, ರಾಷ್ಟ್ರ, ದುರ್ಗ, ಅರ್ಥ ಮತ್ತು ದಂಡ ಈ ಐದು ಪ್ರಕೃತಿಗಳು.

यदि तत्रापि सम्पश्येद्दोषं संश्रयकारितम् ।
सुयुद्धमेव तत्रापि निर्विशङ्कः समाचरेत् ॥ १७६ ॥
**ಯದಿ ತತ್ರಾಪಿ ಸಂಪಶ್ಯೇದ್ದೋಷಂ ಸಂಶ್ರಯಕಾರಿತಮ್ ।**
**ಸುಯುದ್ಧಮೇವ ತತ್ರಾಪಿ ನಿರ್ವಿಶಂಕಃ ಸಮಾಚರೇತ್ ॥ ೧೭೬ ॥**

೧೭೬. (ಬೇರೆ ಅರಸನ) ಆಶ್ರಯ ಪಡೆಯುವದರಲ್ಲಿ ಏನಾದರೂ ದೋಷವಿದೆಯೆಂದು ಕಂಡು ಬಂದರೆ, ಆ (ದುರ್ಬಲ) ಸ್ಥಿತಿಯಲ್ಲಿ ಸಹ ನಿರ್ಭಯತೆಯಿಂದ ಚೆನ್ನಾಗಿ ಯುದ್ಧ ಮಾಡಬೇಕು.

೧೭೬. ಆದರೆ ಅರಸನು ಆಶ್ರಯ ಪಡೆದರೂ ತನ್ನ ರಕ್ಷಣೆಯಾಗಲಿಕ್ಕಿಲ್ಲ ಎಂದು ತಿಳಿದು ಬಂದರೆ ಅವನು ತನ್ನ ಎಲ್ಲ ಸಾಮರ್ಥ್ಯದಿಂದ ಹೋರಾಡಬೇಕು. ಏಕೆಂದರೆ ದೈವವು ಅನುಕೂಲವಾಗಿದ್ದರೆ ದುರ್ಬಲನೂ ಬಲಾಢ್ಯ ಶತ್ರುವನ್ನು ಪರಾಜಯಗೊಳಿಸುತ್ತಾನೆ. ಯುದ್ಧದಲ್ಲಿ ಮರಣ ಬಂದರೆ ಸ್ವರ್ಗಪ್ರಾಪ್ತಿಯಾಗುತ್ತದೆ. ಹೋಲಿಸಿರಿ:–

हतो वा प्राप्स्यसि स्वर्गं जित्वा वा भोक्ष्यसे महीम् ।
तस्मादुत्तिष्ठ कौन्तेय युद्धाय कृतनिश्चयः ॥ – भगवद्गीता २.३७.

सर्वोपायैस्तथा कुर्यान्नीतिज्ञः पृथिवीपतिः ।
यथास्याभ्यधिका न स्युर्मित्रोदासीनशत्रवः ॥ १७७ ॥
**ಸರ್ವೋಪಾಯೈಸ್ತಥಾ ಕುರ್ಯಾನ್ನೀತಿಜ್ಞಃ ಪೃಥಿವೀಪತಿಃ ।**
**ಯಥಾಸ್ಯಾಭ್ಯಧಿಕಾ ನ ಸ್ಯುರ್ಮಿತ್ರೋದಾಸೀನಶತ್ರವಃ ॥ ೧೭೭ ॥**

೧೭೭. ನೀತಿಯನ್ನು ಬಲ್ಲ ರಾಜನು ಮಿತ್ರ, ಉದಾಸೀನ ಹಾಗೂ ಶತ್ರುಗಳು ತನಗಿಂತ ಹೆಚ್ಚು (ಬಲಶಾಲಿಗಳು) ಆಗಬಾರದೆಮದು ಎಲ್ಲ ಉಪಾಯಗಳಿಂದ ಪ್ರಯತ್ನ ಮಾಡಬೆಕು.

೧೭೭. उपायै :– ಸಾಮ, ದಾನ, ಭೇದ, ದಂಡ ಎಂಬ ಉಪಾಯಗಳಿಂದ स्वार्थगतिवशात् च मित्रमप्यरिर्भवति (मे०).. ಹೋಲಿಸಿರಿ:–

न कश्चित् कस्य चिन्मित्रं न कश्चित् कस्यचिद्रिपुः ।
सामर्थ्ययोगाद्विज्ञेया मित्राणि रिपवस्तथा ॥

आयतिं सर्वकार्याणां तदात्वं च विचारयेत् ।
अतीतानां च सर्वेषां गुणदोषौ च तत्त्वतः ॥ १७८ ॥
**ಆಯತಿಂ ಸರ್ವಕಾರ್ಯಾಣಾಂ ತದಾತ್ವಂ ಚ ವಿಚಾರಯೇತ್ ।**
**ಅತೀತಾನಾಂ ಚ ಸರ್ವೇಷಾಂ ಗುಣದೋಷೌ ಚ ತತ್ತ್ವತಃ ॥ ೧೭೮ ॥**

೧೭೮. ಎಲ್ಲ ಕಾರ್ಯಗಳ ಭವಿಷ್ಯ ಹಾಗೂ ವರ್ತಮಾನವನ್ನು ಕುರಿತು ವಿಚಾರ ಮಾಡಬೇಕು. ಆಗಿ ಹೋದ ಎಲ್ಲ ಕಾರ್ಯಗಳ ಗುಣದೋಷದ ಬಗೆಗೂ ಆಲೋಚಿಸಬೇಕು.

೧೭೮. ಕಾರ್ಯವು ಸಣ್ಣದೇ ಇರಲಿ, ದೊಡ್ಡದೇ ಆಗಿರಲಿ; ಅದರಿಂದ ವರ್ತಮಾನ ಕಾಲದಲ್ಲಿ ಅಥವಾ ಭವಿಷ್ಯತ್ತಿನಲ್ಲಿ ಯಾವ ಲಾಭ ಅಥವಾ ಹಾನಿಯಾಗಬಹುದೆಂದು ಚಿಂತಿಸಬೇಕು. ಹಿಂದೆ ಮಾಡಿದ ಯಾವ ಕಾರ್ಯದಿಂದ ಲಾಭವಾಯಿತೋ, ಅದನ್ನು ಮತ್ತೆ ಮಾಡಲು ಯೋಚಿಸಬೇಕು.

आयत्यां गुणदोषज्ञस्तदात्वे क्षिप्रनिश्चयः ।
अतीते कार्यशेषज्ञः शत्रुभिर्नाभिभूयते ॥ १७९ ॥

**ಆಯತ್ಯಾಂ ಗುಣದೋಷಜ್ಞಸ್ತದಾತ್ವೇ ಕ್ಷಿಪ್ರನಿಶ್ಚಯಃ ।**
**ಅತೀತೇ ಕಾರ್ಯಶೇಷಜ್ಞಃ ಶತ್ರುಭಿರ್ನಾಭಿಭೂಯತೇ ॥ ೧೭೯ ॥**

೧೭೯. ಯಾವನು ಭವಿಷ್ಯತ್ತಿನಲ್ಲಿ ಬರುವ ಗುಣದೋಷಗಳನ್ನು ಬಲ್ಲನೋ, ತತ್ಕಾಲದಲ್ಲಿ ಮಾಡುವ ಕಾರ್ಯದ ಬಗೆಗೆ ಕೂಡಲೇ ನಿಶ್ಚಯಿಸುತ್ತಾನೋ ಮತ್ತು ಹಿಂದೆ ಮಾಡಿದ ಕಾರ್ಯದ ಶೇಷಭಾಗವನ್ನು (ಫಲವನ್ನು) ತಿಳಿಯುತ್ತಾನೋ ಅವನು ಶತ್ರುವಿನಿಂದ ಪರಾಜಿತನಾಗುವದಿಲ್ಲ.

೧೭೯. कार्यशेषज्ञः– कार्यशेषस्य तदेकदेशोद्धारोपयस्यापि ज्ञाता (स) राम०), तत्कार्यसमाप्तौ तत्फलं लभते (कु०).

यथैनं नाभिसंदध्युर्मित्रोदासीनशात्रवः ।
तथा सर्वं संविदध्यादेष सामासिको नयः ॥ १८० ॥

**ಯಥೈನಂ ನಾಭಿಸಂದಧ್ಯುರ್ಮಿತ್ರೋದಾಸೀನಶತ್ರವಃ ।**
**ತಥಾ ಸರ್ವಂ ಸಂವಿದಧ್ಯಾದೇಷ ಸಾಮಾಸಿಕೋ ನಯಃ ॥ ೧೮೦ ॥**

೧೮೦. ಮಿತ್ರ, ಉದಾಸೀನ ಮತ್ತು ಶತ್ರುಗಳು ಯಾವದರಿಂದ ಅವನಿಗೆ ಪೀಡೆ ಮಾಡದೆ ಇರಬಹುದೋ, ಆ ಎಲ್ಲವನ್ನೂ ಮಾಡುವದು–ಇದು ಸಂಕ್ಷೇಪದಲ್ಲಿ (ರಾಜ) ನೀತಿಯಾಗಿದೆ.

೧೮೦. अभिसंदध्युः वञ्चयेयुः

सामासिकः – संक्षिप्तः

यदा तु यानमातिष्ठेदरिराष्ट्रं प्रति प्रभुः ।
तदानेन विधानेन यायदरिपुरं शनैः ॥ १८१ ॥
**ಯದಾ ತು ಯಾನಮಾತಿಷ್ಠೇದರಿರಾಷ್ಟ್ರಂ ಪ್ರತಿ ಪ್ರಭುಃ ।**
**ತದಾನೇನ ವಿಧಾನೇನ ಯಾಯಾದರಿಪುರಂ ಶನೈಃ ॥ ೧೮೧ ॥**

೧೮೧. ರಾಜನು ಶತ್ರುರಾಜ್ಯದ ಮೇಲೆ ದಂಡೆತ್ತಿ ಹೋಗುವಾಗ ಈ (ಮುಂದೆ ಹೇಳಿದ) ವಿಧಾನದಂತೆ ನಿಧಾನವಾಗಿ ಶತ್ರುವಿನ ನಗರದೆಡೆ ಪ್ರಯಾಣ ಮಾಡಬೇಕು.

೧೮೧. शनैः– ಸಾವಧಾನವಾಗಿ, ಇಷ್ಟಾನಿಷ್ಟವನ್ನು ತಿಳಿದುಕೊಂಡು.

मार्गशीर्षे शुभे मासि यायाद्यात्रां महीपतिः ।
फाल्गुनं वाथ चैत्रं वा मासौ प्रति यथाबलम् ॥ १८२ ॥
**ಮಾರ್ಗಶೀರ್ಷೇ ಶುಭೇ ಮಾಸಿ ಯಾಯಾದ್ಯಾತ್ರಾಮ ಮಹೀಪತಿಃ ।**
**ಫಾಲ್ಗುನಂ ವಾಥ ಚೈತ್ರಂ ವಾ ಮಾಸೌ ಪ್ರತಿ ಯಥಾ ಬಲಮ್ ॥ ೧೮೨ ॥**

೧೮೨. ಶುಭವಾದ ಮಾರ್ಗಶೀರ್ಷ ಮಾಸದಲ್ಲಿ ರಾಜನು ದಂಡಯಾತ್ರೆಗೆ ಹೊರಡಬೇಕು; ಅಥವಾ ತನ್ನ ಸಾಮರ್ಥ್ಯವನ್ನು ನೋಡಿಕೊಂಡು ಫಾಲ್ಗುನ ಅಥವಾ ಚೈತ್ರ ಮಾಸದಲ್ಲಿ ಹೋಗಬೇಕು.

೧೮೨. रथप्रधानो पार्थिवः मार्गशीर्षे गच्छेत्, चक्रवाताद्यभावात् । अश्वप्रधानः फाल्गुने, पदातिप्रधानः चैत्रें । (राघ०)

अन्येष्वपि तु कालेषु यदा पश्येद्ध्रुवं जयम् ।
तदा यायाद्विगृह्यैव व्यसने चोत्थिते रिपोः ॥ १८३ ॥
**ಅನ್ಯೇಷ್ವಪಿ ತು ಕಾಲೇಷು ಯದಾ ಪಶ್ಯೇದ್ಧ್ರುವಂ ಜಯಮ್ ।**
**ತದಾ ಯಾಯಾದ್ವಿಗೃಹ್ಯೈವ ವ್ಯಸನೇ ಚೋತ್ಥಿತೇ ರಿಪೋಃ ॥ ೧೮೩ ॥**

೧೮೩. ನಿಶ್ಚಿತವಾಗಿ ತನ್ನ ವಿಜಯವಾಗುವುದೆಂದು ಕಂಡು ಬಂದರೆ ಬೇರೆ ಸಮಯಗಳಲ್ಲಿಯೂ ಯುದ್ಧ ಮಾಡುವೆನೆಂದು ಘೋಷಿಸಿ ಮತ್ತು ಶತ್ರುವಿಗೆ ಸಂಕಟ ಉತ್ಪನ್ನವಾದಾಗ (ಅದನ್ನು ನೋಡಿಕೊಂಡು) ರಾಜನು ದಾಳಿ ನಡೆಸಬೇಕು.

೧೮೩. विगृह्य– यातव्यमेव अवष्टभ्य आहूय (मे०). विग्रहं भाविनम् उद्घुष्य, कथंचित् विग्रहज्ञानमात्रेण परस्य प्रणातिसंभवत् (स० राम०).

कृत्वा विधानं मूले तु यात्रिकं च यथाविधि ।
उपगृह्यास्पदं चैव चारान्सम्यग्विधाय च ॥ १८४ ॥
**ಕೃತ್ವಾ ವಿಧಾನಂ ಮೂಲೇ ತು ಯಾತ್ರಿಕಂ ಚ ಯಥಾವಿಧಿ ।**
**ಉಪಗೃಹ್ಯಾಸ್ಪದಂ ಚೈವ ಚಾರಾನ್ಸಮ್ಯಗ್ವಿಧಾಯ ಚ ॥ ೧೮೪ ॥**

संशोध्य त्रिविधं मार्गं षड्विधं च बलं स्वकम् ।
सांपरायिककल्पेन यायादरिपुरं शनैः ॥ १८५ ॥
**ಸಂಶೋಧ್ಯ ತ್ರಿವಿಧಂ ಮಾರ್ಗಂ ಷಡ್ವಿಧಂ ಚ ಬಲಂ ಸ್ವಕಮ್ ।**
**ಸಾಂಪರಾಯಿಕಕಲ್ಪೇನ ಯಾಯಾದರಿಪುರಂ ಶನೈಃ ॥ ೧೮೫ ॥**

೧೮೪–೮೫. ತನ್ನ ಸ್ಥಾನದಲ್ಲಿ (ರಕ್ಷಣೆಯ) ವ್ಯವಸ್ಥೆಯನ್ನೂ ದಂಡಯಾತ್ರೆಯ ವ್ಯವಸ್ಥೆಯನ್ನೂ ಮಾಡಿ, ಶಿಬಿರ ಸ್ಥಾನವನ್ನು ನಿರ್ಮಿಸಿ, ತನ್ನ ಗೂಢಚಾರರನ್ನು ಸರಿಯಾದ ಸ್ಥಾನಗಳಲ್ಲಿಟ್ಟು ಮೂರು ಪ್ರಕಾರದ ಮಾರ್ಗವನ್ನು ಸರಿಪಡಿಸಿ, ತನ್ನ ಆರು ತರಹದ ಸೈನ್ಯವನ್ನು ಸಿದ್ಧಮಾಡಿ ಸಂಗ್ರಾಮನಿಯಮದಂತೆ ನಿಧಾನವಾಗಿ ಶತ್ರುವಿನ ನಗರದೆಡೆ ಹೋಗಬೇಕು.

೧೮೪. मूले विधानं – ಶತ್ರು ಹಿಂದುಗಡೆಯಿಂದ ದಾಳಿ ಮಾಡಬಾರದೆಂದು ಕೆಲವು ಸೈನ್ಯ ವಿಭಾಗಗಳನ್ನು ಅಲ್ಲಿಡಬೇಕು. (पार्ष्णिग्राहसंविधान).

यात्रिकं विधानं – ಸೈನ್ಯ, ಶಸ್ತ್ರ, ಕವಚ, ವಾಹನಗಳ ಸಿದ್ಧತೆ, ಹಾಗೂ ಅನ್ನವಸ್ತ್ರಾದಿಗಳ ಸಿದ್ಧತೆ.

उपगृह्य आस्पदं – ಶತ್ರುಪ್ರದೇಶದಲ್ಲಿ ತನ್ನ ಸೈನ್ಯದ ಶಿಬಿರವನ್ನು ನಿರ್ಮಿಸಿ.

चारान् विधाय – ಮೇಲೆ ಹೇಳಿದ ಕಾಪಟಿಕಾದಿ ಗೂಢಚಾರರನ್ನು ಶತ್ರುವಿನ ಬಗೆಗೆ ವಾರ್ತೆಯನ್ನು ತರಲು ಕಳಿಸಬೇಕು.

೧೮೫. त्रिविध मार्ग – ಊರಿನಲ್ಲಿ, ಅರಣ್ಯದಲ್ಲಿ ಮತ್ತು ನೀರಿನಲ್ಲಿ ಇರುವ ಮಾರ್ಗ.

संशोध्य – ಮಾರ್ಗದಲ್ಲಿ ಅಡ್ಡಿಮಾಡುವ ಗಿಡಗಂಟೆಗಳನ್ನು ಕಡಿದು, ತಗ್ಗುದಿನ್ನೆಗಳನ್ನು ಸರಿಪಡಿಸಿ.

षड्विधं बलं–हस्ति–अश्व–रथ–पदाति–सेना–कोश–कर्मकरात्मकं (मे०). ಹೋಲಿಸಿರಿ:–

मौलं भृतं श्रेणिसुहृद्द्विषदाटविकं बलम् ।
षड्विधं तु बलं व्यूह्य द्विषतोऽभिमुखं व्रजेत् ॥
–कामांदकीय नीतिसार

सांपरायिककल्पेन–संग्रामयोग्येन विधानेन (स०).

शत्रुसेविनि मित्रे च गूढे युक्ततरो भवेत् ।
गतप्रत्यागते चैव स हि कष्टतरो रिपुः ॥ १८६ ॥
**ಶತ್ರುಸೇವಿನಿ ಮಿತ್ರೇ ಚ ಗೂಢೇ ಯುಕ್ತತರೋ ಭವೇತ್ ।**
**ಗತಪ್ರತ್ಯಾಗತೇ ಚೈವ ಸ ಹಿ ಕಷ್ಟತರೋ ರಿಪುಃ ॥ ೧೮೬ ॥**

೧೮೬. ಗುಪ್ತವಾಗಿ ಶತ್ರುವಿಗೆ ಸೇವೆ ಸಲ್ಲಿಸುತ್ತಿರುವ ತನ್ನ ಮಿತ್ರನ ಬಗೆಗೆ ಮತ್ತು (ಸಿಟ್ಟಾಗಿ) ಹೋಗಿ ತಿರುಗಿ ಬಂದವನ ಬಗೆಗೆ ಅತ್ಯಂತ ಸಾವಧಾನತೆಯಿಂದಿರಬೇಕು. ಏಕೆಂದರೆ ಅವನು ಅತ್ಯಂತ ಕಷ್ಟಕರವಾದ ಶತ್ರುವಾಗಿರುತ್ತಾನೆ.

೧೮೬. गतप्रत्यागते – ಸಿಟ್ಟಿನಿಂದ ಹೋದವನು ಸೇಡು ತೀರಿಸಿಕೊಳ್ಳುವದಕ್ಕಾಗಿ ತಿರುಗಿ ಬಂದು ಮಿತ್ರನಂತೆ ಇರುತ್ತಾನೆ. ಅವನನ್ನು ನಿಗ್ರಹ ಮಾಡುವದು ಬಹಳ ಕಠಿನ.

दण्डव्यूहेन तन्मार्गं यायात्तु शकटेन वा ।
वराहमकराभ्यां वा सूच्या वा गरुडेन वा ॥ १८७ ॥
**ದಂಡವ್ಯೂಹೇನ ತನ್ಮಾರ್ಗಂ ಯಾಯಾತ್ತು ಶಕಟೇನ ವಾ ।**
**ವರಾಹಮಕರಾಭ್ಯಾಂ ವಾ ಸೂಚ್ಯಾ ವಾ ಗರುಡೇನ ವಾ ॥ ೧೮೭ ॥**

೧೮೭. ರಾಜನು ದಂಡವ್ಯೂಹ, ಶಕಟವ್ಯೂಹ, ವರಾಹವ್ಯೂಹ, ಮಕರವ್ಯೂಹ, ಸೂಚೀವ್ಯೂಹ ಅಥವಾ ಗರುಡವ್ಯೂಹದಲ್ಲಿ (ತನ್ನ ಸೈನ್ಯವನ್ನು) ನಿಲ್ಲಿಸಿ ಆ ಮಾರ್ಗದಲ್ಲಿ ಹೋಗಬೇಕು.

೧೮೭. दण्डव्यूह – ಮುಂದೆ ಬಲಾಧ್ಯಕ್ಷ, ನಡುವಿನಲ್ಲಿ ರಾಜನು, ಹಿಂದೆ ಸೇನಾಪತಿ ಮತ್ತು ಎರಡೂ ಬದಿಗೂ ಆನೆಗಳು, ಅವುಗಳ ಹತ್ತಿರ ಕುದುರೆಗಳು, ಅವುಗಳ ಹತ್ತಿರ ಕಾಲಾಳುಗಳು– ಹೀಗೆ ಉದ್ದವಾದ ಸೈನ್ಯದ ರಚನೆ ಮಾಡಿದರೆ ಅದಕ್ಕೆ 'ದಂಡವ್ಯೂಹ' ಎಂದು ಹೆಸರು. ಎಲ್ಲ ದಿಕ್ಕಿನಿಂದಲೂ ಶತ್ರುವಿನ ಭಯವಿದ್ದರೆ ಈ ವ್ಯೂಹರಚನೆಯನ್ನು ಮಾಡಬೇಕು.

शकटव्यूह – ಸೈನ್ಯದ ಮುಂದಿನ ಭಾಗ ಚಿಕ್ಕದಾಗಿದ್ದು ಹಿಂದಿನ ಭಾಗ ವಿಶಾಲವಾಗಿದ್ದರೆ ಅದಕ್ಕೆ 'ಶಕಟವ್ಯೂಹ' ಎಂದು ಹೆಸರು. ಹಿಂದಿನಿಂದ ಶತ್ರುವಿನ ಭಯವಿದ್ದರೆ ಈ ವ್ಯೂಹವನ್ನು ರಚಿಸಬೇಕು.

वराहव्यूह – ಸೈನ್ಯದ ಮುಂದಿನ ಹಾಗೂ ಹಿಂದಿನ ಭಾಗಗಳು ಸಣ್ಣದಾಗಿದ್ದು ನಡುವಿನ ಭಾಗ ವಿಸ್ತೀರ್ಣವಾಗಿದ್ದರೆ ಅದಕ್ಕೆ 'ವರಾಹವ್ಯೂಹ' ಎಂದು ಹೆಸರು. ಎರಡೂ ಬದಿಗೂ ಶತ್ರುವಿನ ಭಯವಿದ್ದರೆ ಈ ವ್ಯೂಹವನ್ನು ರಚಿಸಿ ಮುಂದೆ ಹೋಗಬೇಕು.

मकरव्यूह – ಸೈನ್ಯದ ಮುಂದಿನ ಹಾಗೂ ಹಿಂದಿನ ಭಾಗಗಳು ವಿಶಾಲವಾಗಿದ್ದು, ನಡುವಿನ ಭಾಗ ಚಿಕ್ಕದಾಗಿದ್ದರೆ ಅದಕ್ಕೆ 'ಮಕರವ್ಯೂಹ' ಎಂದು ಹೆಸರು. ಮುಂದಿನಿಂದ ಮತ್ತು ಹಿಂದಿನಿಂದ ಭಯವಿದ್ದರೆ ಈ ವ್ಯೂಹವನ್ನು ರಚಿಸಬೇಕು.

सूचीव्यूह – ಇರುವೆಗಳ ಸಾಲಿನಂತೆ ಸೈನಿಕರು ಒಬ್ಬರ ಹಿಂದೆ ಒಬ್ಬರಂತೆ ಹೋಗುವದು, ಮುಂದಿನ ಭಾಗದಲ್ಲಿ ಶೂರ ಸೈನಿಕರಿರುವದು– ಇದಕ್ಕೆ 'ಸೂಚೀವ್ಯೂಹ' ಎಂದು ಹೆಸರು. ಮುಂದಿನಿಂದ ಭಯವಿದ್ದಾಗ (ಪರ್ವತ–ಅರಣ್ಯಗಳ ಚಿಕ್ಕ ದಾರಿಗಳಲ್ಲಿ) ಈ ವ್ಯೂಹರಚನೆ ಮಾಡಬೇಕು.

गरुडव्यूह – ವರಾಹವ್ಯೂಹದಂತೆ ಮುಂದಿನ ಹಾಗೂ ಹಿಂದಿನ ಭಾಗಗಳು ಸಣ್ಣದಾಗಿದ್ದು ನಡುವಿನ ಭಾಗ ಬಹಳ ವಿಸ್ತಾರವಾಗಿದ್ದರೆ ಅದಕ್ಕೆ 'ಗರುಡವ್ಯೂಹ' ಎಂದು ಹೆಸರು. ಎರಡು ಬದಿಗೂ ಅತ್ಯಂತ ಪ್ರಬಲ ಶತ್ರುಗಳಿದ್ದರೆ ಈ ವ್ಯೂಹವನ್ನು ರಚಿಸಿ ಮುಂದೆ ಹೋಗಬೇಕು.

समायां भूमौ दण्डगरुडसूचिभिः यायात्, विषमायां संकटायां शकटमकरवराहैरिति (मे० राघ०).

यतश्च भयमाशङ्केत्ततो विस्तारयेद्बलम् ।
पद्मेन चैव व्यूहेन निविशेत सदा स्वयम् ॥ १८८ ॥
**ಯತಶ್ಚ ಭಯಮಾಶಂಕೇತ್ತತೋ ವಿಸ್ತಾರಯೇದ್ ಬಲಮ್ ।**
**ಪದ್ಮೇನ ಚೈವ ವ್ಯೂಹೇನ ನಿವಿಶೇತ ಸದಾ ಸ್ವಯಮ್ ॥ ೧೮೮ ॥**

೧೮೮. ಯಾವ ದಿಕ್ಕಿನಿಂದ (ಶತ್ರುವಿನ) ಭಯವಿದೆಯೆಂದು ಅನಿಸುತ್ತದೆಯೋ, ಅಲ್ಲಿ ಸೈನ್ಯವನ್ನು ಹೆಚ್ಚಿಸಬೇಕು. ತಾನು ಮಾತ್ರ ಯಾವಾಗಲೂ ಪದ್ಮವ್ಯೂಹದಲ್ಲಿಯೇ ಇರಬೇಕು.

೧೮೮. पद्मव्यूह – ಸುತ್ತುಮುತ್ತಲೂ ಮಂಡಲಾಕಾರದ ಸೈನ್ಯರಚನೆ ಮಾಡಿ ಅದರ ಮಧ್ಯದಲ್ಲಿ ರಾಜನಿರಬೇಕು. ಇದಕ್ಕೆ 'ಪದ್ಮವ್ಯೂಹ' ಎಂದು ಹೆಸರು. ಹೀಗಿದ್ದರೆ ರಾಜನಿಗೆ ಯಾವ ದಿಕ್ಕಿನಿಂದಲೂ ಶತ್ರುವಿನ ಭಯವಿರುವುದಿಲ್ಲ.

सेनापतिबलाध्यक्षौ सर्वदिक्षु निवेशयेत् ।
यतश्च भयमाशङ्केत्प्राचीं तां कल्पयेद्दिशम् ॥ १८९ ॥

**ಸೇನಾಪತಿಬಲಾಧ್ಯಕ್ಷೌ ಸರ್ವದಿಕ್ಷು ನಿವೇಶಯೇತ್ ।**
**ಯತಶ್ಚ ಭಯಮಾಶಂಕೇತ್ಪ್ರಾಚೀಂ ತಾಂ ಕಲ್ಪಯೇದ್ದಿಶಮ್ ॥ ೧೮೯ ॥**

೧೮೯. ಸೇನಾಪತಿ ಹಾಗೂ ಬಲಾಧ್ಯಕ್ಷರನ್ನು ಎಲ್ಲ ದಿಕ್ಕುಗಳಲ್ಲೂ ಇಡಬೇಕು. ಯಾವ ದಿಕ್ಕಿನಿಂದ (ಶತ್ರುವಿನ) ಭಯವಿದೆಯೆಂದು ಅನಿಸುತ್ತದೆಯೋ, ಅದನ್ನು ಪೂರ್ವವೆಂದು ತಿಳಿದುಕೊಳ್ಳಬೇಕು (ಮತ್ತು ಸೈನ್ಯವನ್ನು ಆ ದಿಕ್ಕಿಗೆ ಮುಖಮಾಡಿ ನಿಲ್ಲಿಸಬೇಕು.)

೧೮೯. सेनापतिबलाध्यक्षौ – ಹತ್ತು ಆನೆಗಳ, ಹತ್ತು ಕುದುರೆಗಳ, ಹತ್ತು ರಥಗಳ ಮತ್ತು ಹತ್ತು ಪದಾತಿಗಳ ನಾಯಕನಿಗೆ 'ಪತ್ತಿಕ' ಎಂದು ಹೆಸರು. ಇಂತಹ ಹತ್ತು ಪತ್ತಿಕರ ನಾಯಕನು 'ಸೇನಾಪತಿ' ಮತ್ತು ಇಂತಹ ಹತ್ತು ಸೇನಾಪತಿಗಳ ಮೇಲಿನ ಅಧಿಕಾರಿಯು 'ಬಲಾಧ್ಯಕ್ಷ.'

गुल्मांश्च स्थापयेदाप्तान्कृतसंज्ञान्समन्ततः ।
स्थाने युद्धे च कुशलानभीरूनविकारिणः ॥ १९० ॥
**ಗುಲ್ಮಾಂಶ್ಚ ಸ್ಥಾಪಯೇದಾಪ್ತಾನ್ಕೃತಸಂಜ್ಞಾನ್ಸಮಂತತಃ ।**
**ಸ್ಥಾನೇ ಯುದ್ಧೇ ಚ ಕುಶಲಾನಭೀರೂನವಿಕಾರಿಣಃ ॥ ೧೯೦ ॥**

೧೯೦. ಆಪ್ತರಂತಿರುವ, ಸಂಜ್ಞೆಗಳನ್ನು ಬಲ್ಲ, ಸ್ಥಿರವಾಗಿ ನಿಲ್ಲುವುದರಲ್ಲಿ ಮತ್ತು ಯುದ್ಧದಲ್ಲಿ ಕುಶಲರಾದ, ಹೆದರಿಕೆಯಿಲ್ಲದ ಮತ್ತು ವಿಕಾರವಿಲ್ಲದ ಪಡೆಗಳನ್ನು ಸುತ್ತುಮುತ್ತ ಇರಿಸಬೇಕು.

೧೯೦. आप्तान् – ಆಪ್ತರಂತೆ ವಿಶ್ವಾಸಾರ್ಹರಾದ, कृतसंज्ञान् – ಶಂಖ, ಭೇರಿ, ಡೋಲು ಮುಂತಾದ ರಣವಾದ್ಯಗಳ ಅಥವಾ ಧ್ವಜಗಳ ಸಂಕೇತಗಳನ್ನು ಬಲ್ಲವರು, ವಿಶಿಷ್ಟವಾದ ಸಂಕೇತ ಶಬ್ದವನ್ನು ಹೇಳುವವನಿಗೆ ಮಾತ್ರ ಒಳಗೆ ಪ್ರವೇಶ ಕೊಡಬೇಕೆಂದು ತಿಳಿದವರು.

अविकारिण– ಧನಲೋಭದಿಂದ ಶತ್ರುವಿಗೆ ವಶವಾಗದಿರುವವರು. ಶತ್ರುವಿನ ಪ್ರವೇಶವನ್ನು ತಡೆಯುವದಕ್ಕಾಗಿ ಈ ಪಡೆಗಳನ್ನು ಮುಖ್ಯ ಸೈನ್ಯದಿಂದ ಸ್ವಲ್ಪ ಅಂತರದಲ್ಲಿಡಬೇಕು.

संहतान्योधयेदल्पान्कामं विस्तारयेद्बहून् ।
सूच्या वज्रेण चैवैतान्व्यूहेन व्यूह्य योधयेत् ॥ १९१ ॥
**ಸಂಹತಾನ್ ಯೋಧಯೇದಲ್ಪಾನ್ ಕಾಮಂ ವಿಸ್ತಾರಯೇದ್ ಬಹೂನ್ ।**
**ಸೂಚ್ಯಾ ವಜ್ರೇಣ ಚೈವೈತಾನ್ ವ್ಯೂಹೇನ ವ್ಯೂಹ್ಯ ಯೋಧಯೇತ್ ॥೧೯೧॥**

೧೯೧. ತನ್ನಲ್ಲಿ ಸೈನಿಕರು ಅಲ್ಪ ಸಂಖ್ಯೆಯಲ್ಲಿದ್ದರೆ ಅವರನ್ನು ಕೂಡಿಸಿ ಯುದ್ಧ ಮಾಡಿಸಬೇಕು, ಹೆಚ್ಚು ಸಂಖ್ಯೆಯಲ್ಲಿದ್ದರೆ ಅವರನ್ನು ಸಾಕಷ್ಟು ವಿಸ್ತಾರ ಮಾಡಬೇಕು. ಸೂಚೀವ್ಯೂಹದಲ್ಲಿ ಅಥವಾ ವಜ್ರವ್ಯೂಹ್ಯದಲ್ಲಿ ಅವರನ್ನು ನಿಲ್ಲಿಸಿ ಅವರಿಂದ (ರಾಜನು) ಯುದ್ಧ ಮಾಡಿಸಬೇಕು.

೧೯೧. वज्रव्यूह – ಸೈನ್ಯವನ್ನು ಮೂರು ಭಾಗಗಳಲ್ಲಿ ನಿಲ್ಲಿಸುವದಕ್ಕೆ 'ವಜ್ರವ್ಯೂಹ' ಎಂದು ಹೆಸರು. (कु० राघ०).

स्यन्दनाश्वैः समे युद्ध्येदनूपे नौद्विपैस्तथा ।
वृक्षगुल्मावृते चापैरसिचर्मायुधैः स्थले ॥ १९२ ॥
**ಸ್ಯಂದನಾಶ್ವೈಃ ಸಮೇ ಯುದ್ಧ್ಯೇದನೂಪೇ ನೌದ್ವಿಪೈಸ್ತಥಾ ।**
**ವೃಕ್ಷಗುಲ್ಮಾವೃತೇ ಚಾಪೈರಸಿಚರ್ಮಾಯುಧೈಃ ಸ್ಥಲೇ ॥ ೧೯೨ ॥**

೧೯೨. ಸಮವಾದ ಯುದ್ಧಭೂಮಿಯಲ್ಲಿ ರಥ ಮತ್ತು ಕುದುರೆಗಳಿಂದ, ಜಲಮಯ ಪ್ರದೇಶದಲ್ಲಿ ನೌಕೆ ಮತ್ತು ಆನೆಗಳಿಂದ, ಗಿಡಗಂಟೆಗಳಿಂದ ತುಂಬಿದ ಪ್ರದೇಶದಲ್ಲಿ ಬಿಲ್ಲುಗಳಿಂದ ಮತ್ತು (ಕಲ್ಲು ಮುಳ್ಳು ತೆಗೆದ ಸ್ವಚ್ಛ) ನೆಲದ ಮೇಲೆ ಖಡ್ಗ, ಭರ್ಚಿ ಮುಂತಾದ ಶಸ್ತ್ರಗಳಿಂದ ಯುದ್ಧ ಮಾಡಬೇಕು.

೧೯೨. असिचर्मायुधैः– आसन्नयुद्धत्वात् एवं सामर्थ्यप्रदर्शनार्थत्वात् ।

कुरुक्षेत्रांश्च मत्स्यांश्च पञ्चालाञ्शूरसेनजान् ।
दिर्घांल्लंघूश्चैव नरानग्रानीकेषु योजयेत् ॥ १९३ ॥
**ಕುರುಕ್ಷೇತ್ರಾಂಶ್ಚ ಮತ್ಸ್ಯಾಂಶ್ಚ ಪಂಚಾಲಾನ್ ಶೂರಸೇನಜಾನ್ ।**
**ದೀರ್ಘಾಂಲ್ಲಘೂಂಶ್ಚೈವ ನರಾನಗ್ರಾನೀಕೇಷು ಯೋಜಯೇತ್ ॥ ೧೯೩ ॥**

೧೯೩. ಕುರುಕ್ಷೇತ್ರ, ಮತ್ಸ್ಯ, ಪಂಚಾಲ ಮತ್ತು ಶೂರಸೇನ ಪ್ರದೇಶಗಳಲ್ಲಿ ಹುಟ್ಟಿದ, ಎತ್ತರವಾದ ಹಾಗೂ ಚುರುಕಾದ ಜನರನ್ನು ಸೈನ್ಯದ ಮುಂಭಾಗದಲ್ಲಿ ಇರಿಸಬೇಕು.

೧೯೩. मत्स्य – ವಿರಾಟ ನಗರದ ಸುತ್ತುಮುತ್ತಿರುವ ಪ್ರದೇಶ

पाञ्चाल – ಕಾನ್ಯಕುಬ್ಜ ನಗರದ ಹತ್ತಿರವಿರುವ ಪ್ರದೇಶ.

शूरसेन– ಮಥುರಾ ನಗರದ ಸುತ್ತಮುತ್ತಿರುವ ಪ್ರದೇಶ. ಈ ಕುರುಕ್ಷೇತ್ರಾದಿ ಪ್ರದೇಶಗಳು ಗಂಗಾನದಿಯ ಸುತ್ತುಮುತ್ತಿವೆ.

प्रहर्षयेद्बलं व्यूह्य तांश्च सम्यक्परीक्षयेत्
चेष्टाश्चैव विजानीयादरीन्योधयतामपि ॥ १९४ ॥
**ಪ್ರಹರ್ಷಯೇದ್ಬಲಂ ವ್ಯೂಹ್ಯ ತಾಂಶ್ಚ ಸಮ್ಯಕ್ಪರೀಕ್ಷಯೇತ್ ।**
**ಚೇಷ್ಟಾಶ್ಚೈವ ವಿಜಾನೀಯಾದರೀನ್ ಯೋಧಯತಾಮಪಿ ॥ ೧೯೪ ॥**

೧೯೪. ವ್ಯೂಹರಚನೆ ಮಾಡಿ (ರಾಜನು) ಸೈನ್ಯವನ್ನು ಹರ್ಷಗೊಳಿಸಬೇಕು ಮತ್ತು ಆ ಸೈನಿಕರನ್ನು ಸರಿಯಾಗಿ ಪರೀಕ್ಷಿಸಬೇಕು. ಶತ್ರುವಿನ ಕೂಡ ಅವರು ಹೋರಾಡುತ್ತಿರುವಾಗ ಸಹ ಅವರ ವರ್ತನೆಯನ್ನು ತಿಳಿದುಕೊಳ್ಳಬೇಕು.

೧೯೪. प्रहर्षयेत्– यदृच्छया चोपपन्नं स्वर्गद्वारमपावृतम् ।

सुखिनः क्षत्रियाः पार्थ लभन्ते युद्धमीदृशम् । (गीता २.३२)

ಇಂತಹ ಉದಾಹರಣೆಗಳಿಂದ ಮತ್ತು "ನಮ್ಮ ಜಯವಾದರೆ ದೊಡ್ಡ ರಾಜ್ಯ ಸಿಗುವದು, ಯುದ್ಧದಲ್ಲಿ ಮರಣ ಬಂದರೆ ಸ್ವರ್ಗಪ್ರಾಪ್ತಿಯಾಗುವದು"– ಎಂಬಂತಹ ಮಾತುಗಳಿಂದ ಸೈನ್ಯವನ್ನು ಪ್ರೋತ್ಸಾಹಿಸಬೇಕು.

परीक्षयेत् – ಯಾವ ಕಾರಣದಿಂದ ಸೈನಿಕರು ಉತ್ಸಾಹಿತರಾಗುತ್ತಾರೆ ಮತ್ತು ಯಾವ ಕಾರಣದಿಂದ ಅವರು ಖಿನ್ನರಾಗುತ್ತಾರೆ– ಎಂಬುದನ್ನು ವೀಕ್ಷಿಸಬೇಕು.

चेष्टान् विजानीयात् – ಯುದ್ಧ ಮಾಡುವಾಗ ಸೈನಿಕರು ಕಪಟದಿಂದ ವರ್ತಿಸುತ್ತಾರೋ, ಅಥವಾ ನಿಷ್ಕಪಟದಿಂದಲೋ ಎಂಬುದನ್ನು ಗಮನಿಸಬೇಕು.

उपरुध्यारिमासीत राष्ट्रं चास्योपपीडयेत् ।
दूषयेच्चास्य सततं यवसान्नोदकेन्धनम् ॥ १९५ ॥
**ಉಪರುಧ್ಯಾರಿಮಾಸೀತ ರಾಷ್ಟ್ರಂ ಚಾಸ್ಯೋಪಪೀಡಯೇತ್ ।**
**ದೂಷಯೇಚ್ಚಾಸ್ಯ ಸತತಂ ಯವಸಾನ್ನೋದಕೇಂಧನಮ್ ॥ ೧೯೫ ॥**

೧೯೫. (ರಾಜನು) ಶತ್ರುವನ್ನು ಸುತ್ತುಗಟ್ಟಿ ನಿಲ್ಲಬೇಕು; ಅವನ ರಾಜ್ಯವನ್ನು ಪೀಡಿಸಬೇಕು; ಮತ್ತು ಅವನ ಹುಲ್ಲು, ಅನ್ನ, ನೀರು ಮತ್ತು ಕಟ್ಟಿಗೆಗಳನ್ನು ಹಾಳು ಮಾಡಬೇಕು.

೧೯೫. उपपीडयेत् – ಲೂಟಿ ಮಾಡಿ ಶತ್ರುವಿನ ದೇಶವನ್ನು ನಾಶಗೊಳಿಸಬೇಕು.

दूषयेत् – ವಿಷ ಮುಂತಾದ ದೂಷಿತ ದ್ರವ್ಯಗಳಿಂದ ಅವನ ಆಹಾರ ಮುಂತಾದವುಗಳನ್ನು ಕೆಡಿಸಬೇಕು ಮತ್ತು ಕಟ್ಟಿಗೆಯನ್ನು (ಇಂಧನವನ್ನು) ಸುಟ್ಟು ಬಿಡಬೇಕು.

भिन्द्याच्चैव तडागानि प्राकारपरिखाँस्तथा ।
समवस्कन्दयेच्चैनं रात्रौ वित्रासयेत्तथा ॥ १९६ ॥
**ಭಿಂದ್ಯಾಚ್ಚೈವ ತಡಾಗಾನಿ ಪ್ರಾಕಾರಪರಿಖಾಂಸ್ತಥಾ ।**
**ಸಮವಸ್ಕಂದಯೇಚ್ಚೈನಂ ರಾತ್ರೌ ವಿತ್ರಾಸಯೇತ್ತಥಾ ॥ ೧೯೬ ॥**

೧೯೬. (ರಾಜನು) ಕೆರೆಗಳನ್ನೂ ಕೋಟೆಯ ಗೋಡೆಗಳನ್ನೂ ಕಂದಕಗಳನ್ನೂ ಒಡೆಯಬೇಕು. ಅವನ ಮೇಲೆ ದಾಳಿ ನಡೆಸಬೇಕು ಮತ್ತು ರಾತ್ರಿಯಲ್ಲಿ ಅವನನ್ನು ಹೆದರಿಸಬೇಕು.

೧೯೬. परिखाः– ಕೋಟೆಯನ್ನು ಸುತ್ತಿರುವ ಕಂದಕಗಳು. ಕಲ್ಲು, ಮಣ್ಣು ಹಾಕಿ ಅವುಗಳನ್ನು ಮುಚ್ಚಬೇಕು. ಇದರಿಂದ ಕೋಟೆಯಲ್ಲಿ ಪ್ರವೇಶಿಸುವುದು ಸುಲಭವಾಗುವದು.

वित्रासयेत् – ರಾತ್ರಿಯ ಸಮಯದಲ್ಲಿ ನಗಾರಿ ಮುಂತಾದ ರಣವಾದ್ಯಗಳನ್ನು ಬಾರಿಸಿ ಶತ್ರುವನ್ನು ಹೆದರಿಸಬೇಕು.

उपजप्यानुपजपेद्बुध्येतैव च तत्कृतम् ।
युक्ते च दैवे युध्येत जयप्रेप्सुरपेतभीः ॥ १९७ ॥
**ಉಪಜಪ್ಯಾನುಪಜಪೇದ್ಬುಧ್ಯೇತೈವ ಚ ತತ್ಕೃತಮ್ ।**
**ಯುಕ್ತೇ ಚ ದೈವೇ ಯುಧ್ಯೇತ ಜಯಪ್ರೇಪ್ಸುರಪೇತಭೀಃ ॥ ೧೯೭ ॥**

೧೯೭. (ಶತ್ರುಪಕ್ಷದಲ್ಲಿ) ಭೇದನೀತಿಗೆ ಒಳಗಾಗುವವರನ್ನು ವಶಪಡಿಸಿಕೊಳ್ಳಬೇಕು. ಅವರ ಕೃತಿಯನ್ನು ತಿಳಿದುಕೊಳ್ಳಲೇಬೇಕು. ವಿಜಯವನ್ನು ಬಯಸುವ ರಾಜನು ನಿರ್ಭಯನಾಗಿ ಶುಭ ಮುಹೂರ್ತದಲ್ಲಿ (ದೈವವು ಅನುಕೂಲವಿದ್ದಾಗ) ಯುದ್ಧ ಮಾಡಬೇಕು.

೧೯೭. उपजप्यान् उपजपेत् – ಶತ್ರುವಿನ ಕುಲದಲ್ಲಿ ಹುಟ್ಟಿ ಯಾರು ಅವನ ರಾಜ್ಯವನ್ನು ಬಯಸುತ್ತಿದ್ದಾರೋ, ಅಥವಾ ಯಾವ ಅಮಾತ್ಯಾದಿಗಳು ಆ ಶತ್ರುವಿನ ಮೇಲೆ ಸಿಟ್ಟಾಗಿದ್ದಾರೋ ಅವರನ್ನು ರಾಜ್ಯ ಧನಾದಿ ಪ್ರಲೋಭನಗಳಿಂದ ವಶೀಕರಿಸಿಕೊಳ್ಳಬೇಕು.

युक्ते च दैवे–शुबफलदानानुकूले दैवे ग्रहनक्षत्रादौ (राघ).

साम्ना दानेन भेदेन सामस्तैरथवा पृथक् ।
विजेतुं प्रयतेतारीन्न युद्धेन कदाचन ॥ १९८ ॥

**ಸಾಮ್ನಾ ದಾನೇನ ಭೇದೇನ ಸಮಸ್ತೈರಥವಾ ಪೃಥಕ್ ।**
**ವಿಜೇತುಂ ಪ್ರಯತೇತಾರೀನ್ನ ಯುದ್ಧೇನ ಕದಾಚನ ॥ ೧೯೮ ॥**

೧೯೮. ಸಾಮ, ದಾನ ಭೇದ ಎಂಬ ಎಲ್ಲ ಉಪಾಯಗಳನ್ನೂ ಒಟ್ಟಿಗೆ ಅಥವಾ ಪ್ರತ್ಯೇಕವಾಗಿ ಬಳಸಿ (ರಾಜನು) ಶತ್ರುಗಳನ್ನು ಜಯಿಸಲು ಪ್ರಯತ್ನ ಮಾಡಬೇಕು; ಯಾವಾಗಲೂ ಯುದ್ಧದಿಂದಲ್ಲ.

೧೯೮. ಆದರದಿಂದ ವರ್ತಿಸುವುದು, ಹಿತೋಕ್ತಿಯನ್ನು ಹೇಳುವದು ಸಾಮ; ಆನೆ, ಕುದುರೆ, ರಥ, ಸುವರ್ಣ ಮುಂತಾದವುಗಳನ್ನು ಕೊಡುವುದು ದಾನ; ಶತ್ರುವಿನ ಅಮಾತ್ಯಾದಿಗಳನ್ನು ಪ್ರಲೋಭನೆಗಳಿಂದ ವಶೀಕರಿಸಿಕೊಳ್ಳುವುದು ಭೇದ. ಈ ಉಪಾಯಗಳ ಪ್ರಯೋಗವನ್ನು ಮೊದಲು ಮಾಡಬೇಕು. ಒಮ್ಮೆಲೇ ಯುದ್ಧವನ್ನು ಹೂಡಬಾರದು.

अनित्यो विजयो यस्माद्दृश्यते युध्यमानयोः ।
पराजयश्च संग्रामे तस्माद्युद्धं विवर्जयेत् ॥ १९९ ॥
**ಅನಿತ್ಯೋ ವಿಜಯೋ ಯಸ್ಮಾದ್ದೃಶ್ಯತೇ ಯುಧ್ಯಮಾನಯೋಃ ।**
**ಪರಾಜಯಶ್ಚ ಸಂಗ್ರಾಮೇ ತಸ್ಮಾದ್ಯುದ್ಧಂ ವಿವರ್ಜಯೇತ್ ॥ ೧೯೯ ॥**

೧೯೯. ಇಬ್ಬರು ಯುದ್ಧ ಮಾಡುತ್ತಿದ್ದಾಗ ಯುದ್ಧದಲ್ಲಿ ವಿಜಯವು ಹಾಗೂ ಪರಾಜಯವು ಯಾರದೆಂಬುದು ಅನಿಶ್ಚಿತವೆಂದು ತೋರುತ್ತದೆ. ಆದ್ದರಿಂದ ಯುದ್ಧವನ್ನು ಬಿಡಬೇಕು.

೧೯೯. ಯಾವ ರಾಜನ ಹತ್ತಿರ ಹೆಚ್ಚು ಸೈನ್ಯ ಇರುವದೋ, ಅವನು ಗೆಲ್ಲುತ್ತಾನೆಂದು ನಿಶ್ಚಿತವಾಗಿ ಹೇಳುವದು ಸಾಧ್ಯವಿಲ್ಲ. ಆದ್ದರಿಂದ ಶಕ್ಯವಾದಷ್ಟು ಯುದ್ಧವನ್ನು ಬಿಡಬೇಕು.

त्रयाणामप्युपायानां पूर्वोक्तानामसंभवे ।
तथायुध्येत संपन्नो विजयेत रिपून्यथा ॥ २०० ॥
**ತ್ರಯಾಣಾಮಪ್ಯುಪಾಯಾನಾಂ ಪೂರ್ವೋಕ್ತಾನಾಮಸಂಭವೇ ।**
**ತಥಾಯುಧ್ಯೇತ ಸಂಪನ್ನೋ ವಿಜಯೇತ ರಿಪೂನ್ಯಥಾ ॥ ೨೦೦ ॥**

೨೦೦. ಮೇಲೆ ಹೇಳಿದ ಮೂರು ಉಪಾಯಗಳೂ ಫಲಕಾರಿಗಳಾಗದಿದ್ದರೆ, (ಸೈನ್ಯ) ಸಂಪನ್ನನಾದ ರಾಜನು ಶತ್ರುಗಳನ್ನು ಗೆಲ್ಲುವಂತೆ (ಪರಾಕ್ರಮದಿಂದ) ಯುದ್ಧ ಮಾಡಬೇಕು.

೨೦೦. विजयेत–जये अर्थलाभः, अभिमुखमरणे च स्वर्गप्राप्तिः ।

निःसंदिग्धे तु पराजये युद्धादपसरणं साधीयः (कु०).

जित्वा संपूजयेद्देवान्ब्राह्मणांश्चैव धार्मिकान् ।
प्रदद्यात्परिहारांश्च ख्यापयेदभयानि च ॥ २०१ ॥
**ಜಿತ್ವಾ ಸಂಪೂಜಯೇದ್ದೇವಾನ್ ಬ್ರಾಹ್ಮಣಾಂಶ್ಚೈವ ಧಾರ್ಮಿಕಾನ್ ।**
**ಪ್ರದದ್ಯಾತ್ಪರಿಹಾರಾಂಶ್ಚ ಖ್ಯಾಪಯೇದಭಯಾನಿ ಚ ॥ ೨೦೧ ॥**

೨೦೧. ಜಯವನ್ನು ಗಳಿಸಿ (ಶತ್ರು ರಾಜ್ಯದೊಳಗಿನ) ದೇವರನ್ನು ಹಾಗೂ ಧರ್ಮನಿಷ್ಠ ಬ್ರಾಹ್ಮಣರನ್ನು (ಗೆದ್ದ ರಾಜನು) ಪೂಜಿಸಬೇಕು; (ಯುದ್ಧದಿಂದ ನೊಂದ ಜನರಿಗೆ) ಪರಿಹಾರಗಳನ್ನು ಕೊಡಬೇಕು ಮತ್ತು ಅಭಯವನ್ನು ಘೋಷಿಸಬೇಕು.

೨೦೧. संपूजयेत् – ಯುದ್ಧದಲ್ಲಿ ಗಳಿಸಿದ ಸಂಪತ್ತಿನ ಒಂದು ಭಾಗವನ್ನು ಕೊಟ್ಟು ಸತ್ಕರಿಸಬೇಕು. ಹೋಲಿಸಿರಿ:–

नातः परतरो धर्मो नृपाणां यद्रणार्जितम् ।
विप्रेभ्यो दीयते द्रव्यं प्रजाभ्यश्चाभयं सदा ॥ –याज्ञवल्क्यस्मृति.
परिहारान्–करपरित्यागान् (न०).
–अग्रहारान् (स० राम०).

ख्यापयेत् अभयानि – ಸೋತ ಶತ್ರುರಾಜನ ರಾಜ್ಯದಲ್ಲಿ ಯಾರು ಸ್ವಾಮಿಭಕ್ತಿಯಿಂದ ಶತ್ರುರಾಜನಿಗೆ ಸಹಾಯ ಮಾಡಿದರೋ, ಅವರೂ ನಿರ್ಭಯತೆಯಿಂದ ತಮ್ಮ ತಮ್ಮ ವ್ಯವಹಾರಗಳನ್ನು ನಡೆಸಲೆಂದು ಗೆದ್ದ ರಾಜನು ನಗಾರಿಗಳ ಧ್ವನಿಸಹಿತವಾಗಿ ಜನರಿಗೆ ಗೊತ್ತಾಗುವಂತೆ ಪ್ರಕಟಗೊಳಿಸಬೇಕು.

सर्वेषां तु विदित्वैषां समासेन चिकीर्षितम् ।
स्थापयेत्तत्र तद्वंश्यं कुर्याच्च समयक्रियाम् ॥ २०२ ॥
**ಸರ್ವೇಷಾಂ ತು ವಿದಿತ್ವೈಷಾಂ ಸಮಾಸೇನ ಚಿಕೀರ್ಷಿತಮ್ ।**
**ಸ್ಥಾಪಯೇತ್ತತ್ರ ತದ್ವಂಶ್ಯಂ ಕುರ್ಯಾಚ್ಚ ಸಮಯಕ್ರಿಯಾಮ್ ॥ ೨೦೨ ॥**

೨೦೨. ಅವರೆಲ್ಲರ ಅಭಿಲಾಷೆಯನ್ನು ತಿಳಿದುಕೊಂಡು ಆ (ಶತ್ರುವಿನ) ವಂಶದವನಿಗೆ ಅಲ್ಲಿ (ರಾಜನು) ಪಟ್ಟಗಟ್ಟಬೇಕು ಮತ್ತು ಅವನಿಗೆ ನಿಯಮಗಳನ್ನು ಹಾಕಿಕೊಡಬೇಕು.

೨೦೨. सर्वेषां चिकीर्षितम् – ಆ ಶತ್ರುರಾಜನ, ಅವನ ಅಮಾತ್ಯರ ಹಾಗೂ ಪ್ರಜೆಗಳ ಅಭಿಪ್ರಾಯವನ್ನು (ತಿಳಿದುಕೊಳ್ಳಬೇಕು).

समयक्रियाम् – "ನೀನು ಇಂತಹ ಕಾರ್ಯಗಳನ್ನು ಮಾಡಬೇಕು, ಇಂತಹ ಕಾರ್ಯಗಳನ್ನು ಮಾಡಬಾರದು" ಎಂಬ ಶರ್ತಗಳನ್ನು ಅವನಿಗೆ ಹಾಕಬೇಕು. ಜನಾಭಿಪ್ರಾಯವನ್ನು ಗ್ರಹಿಸಬೇಕೆಂಬ ಪ್ರಜಾರಾಜ್ಯ ತತ್ವಾಂಶವಿಲ್ಲಿ ಉಕ್ತವಾಗಿರುವುದು ಗಮನಾರ್ಹ.

प्रमाणानि च कुर्वीत तेषां धर्म्यान्यथोदितान् ।
रत्नैश्च पूजयेदेनं प्रधानपुरुषैः सह ॥ २०३ ॥
**ಪ್ರಮಾಣಾನಿ ಚ ಕುರ್ವೀತ ತೇಷಾಂ ಧರ್ಮ್ಯಾನ್ಯಥೋದಿತಾನ್ ।**
**ರತ್ನೈಶ್ಚ ಪೂಜಯೇದೇನಂ ಪ್ರಧಾನ ಪುರುಷೈಃ ಸಹ ॥ ೨೦೩ ॥**

೨೦೩. ಅವರ ಶಾಸ್ತ್ರಗಳಲ್ಲಿ ಹೇಳಿದ ಧಾರ್ಮಿಕ ಆಚಾರಗಳನ್ನು ಪ್ರಮಾಣಗಳೆಂದು (ಗೆದ್ದರಾಜನು) ಸ್ವೀಕರಿಸಬೇಕು. (ಪಟ್ಟಾಭಿಷಿಕ್ತನಾದ) ಆ ರಾಜನನ್ನು ಅಮಾತ್ಯಾದಿ ಮುಖ್ಯ ಜನರ ಜೊತೆಗೆ ರತ್ನಗಳಿಂದ ಸತ್ಕರಿಸಬೇಕು.

೨೦೩. ಆ ದೇಶದಲ್ಲಿ ಪ್ರಚಲಿತವಿದ್ದ ಧರ್ಮಕಾರ್ಯಗಳಿಗೆ 'ದೇಶಧರ್ಮ'ವೆಂದು ಮನ್ನಣೆ ಕೊಡಬೇಕು. ಹೊಸ ರಾಜನಿಗೆ ರತ್ನಾದಿಗಳನ್ನು ಕೊಟ್ಟು ಗೌರವಿಸಬೇಕು. ವರ್ಣಾಶ್ರಮ ಧರ್ಮಗಳಷ್ಟೇ ದೇಶಧರ್ಮ, ಕುಲಧರ್ಮಗಳೂ ಪಾಲನೀಯವೆಂಬ ಅಂತಾರಾಷ್ಟ್ರೀಯ ನೀತಿ ಮನೂಕ್ತ.

आदानमप्रियकरं दानं च प्रियकारकम् ।
अभीप्सितानामर्थानां काले युक्तं प्रशस्यते ॥ २०४ ॥
**ಆದಾನಮಪ್ರಿಯಕರಂ ದಾನಂ ಚ ಪ್ರಿಯಕಾರಕಮ್ ।**
**ಅಭೀಪ್ಸಿತಾನಾಮರ್ಥಾನಾಂ ಕಾಲೇ ಯುಕ್ತಂ ಪ್ರಶಸ್ಯತೇ ॥ ೨೦೪ ॥**

೨೦೪. (ಯಾರಿಂದಾಗಲಿ) ಅವರಿಗೆ ಪ್ರಿಯ ಎನ್ನಿಸಿದ ವಸ್ತುಗಳನ್ನು ತೆಗೆದುಕೊಳ್ಳುವುದು ಅಪ್ರಿಯಕರ; ಅಂಥ ವಸ್ತುಗಳನ್ನು ಅವರಿಗೆ ಕೊಡುವುದು ಪ್ರಿಯಕರ. ಆದರೆ (ವಿಶೇಷ ಸಂದರ್ಭಗಳಲ್ಲಿ ಅವರವರಿಗೆ) ಇಷ್ಟವಾದದ್ದನ್ನು ಆಯಾ ಕಾಲದಲ್ಲಿ ಯೋಗ್ಯ ರೀತಿಯಿಂದ ಕೊಡುವುದು ಪ್ರಶಸ್ತ.

೨೦೪. ಯುದ್ಧಮಾಡಿ ಶತ್ರುರಾಜ್ಯವನ್ನು ಗೆಲ್ಲುವದೂ ಯೋಗ್ಯ; ಮತ್ತು ಅಲ್ಲಿಯ ಹೊಸ ರಾಜನನ್ನು ರತ್ನಾದಿಗಳಿಂದ ಸತ್ಕರಿಸುವದೂ ಯೋಗ್ಯ.

सर्वं कर्मेदमायत्तं विधाने दैवमानुषे ।
तयोर्दैवमचिन्त्यं तु मानुषे विद्यते क्रिया ॥ २०५ ॥
**ಸರ್ವಂ ಕರ್ಮೇದಮಾಯತ್ತಂ ವಿಧಾನೇ ದೈವಮಾನುಷೇ ।**
**ತಯೋರ್ದೈವಮಚಿಂತ್ಯಂ ತು ಮಾನುಷೇ ವಿದ್ಯತೇ ಕ್ರಿಯಾ ॥ ೨೦೫ ॥**

೨೦೫. ಈ ಎಲ್ಲ ಕೆಲಸವೂ ದೈವದ ಹಾಗೂ ಮನುಷ್ಯನ ಕಾರ್ಯವನ್ನು ಅವಲಂಬಿಸಿರುವುದು. ಇವುಗಳಲ್ಲಿ ದೈವವು ಅಚಿಂತ್ಯವಾಗಿದೆ; ಆದರೆ ಮನುಷ್ಯನ ಕ್ರಿಯೆಯ ಬಗೆಗೆ ಪರ್ಯಾಲೋಚನೆ ಮಾಡಬಹುದು.

೨೦೫. ದೈವವು ಪೂರ್ವಜನ್ಮದ ಕರ್ಮವನ್ನವಲಂಬಿಸಿರುವದರಿಂದ ಯಾವಾಗ ಏನಾಗಬಹುದೆಂಬುದನ್ನು ಹೇಳುವದು ಸಾಧ್ಯವಾಗುವದಿಲ್ಲ. ಆದ್ದರಿಂದ ಸ್ವಕಾರ್ಯದಿಂದಲೇ ಸಿದ್ಧಿಯನ್ನು ಪಡೆಯಲು ಪ್ರಯತ್ನಿಸಬೇಕು.

सह वाऽपि व्रजेद्युक्तः संधिं कृत्वा प्रयत्नतः ।
मित्रं हिरण्यं भूमिं वा संपश्यंस्त्रिविधं फलम् ॥ २०६ ॥
**ಸಹ ವಾಪಿ ವ್ರಜೇದ್ಯುಕ್ತಃ ಸಂಧಿಂ ಕೃತ್ವಾ ಪ್ರಯತ್ನತಃ ।**
**ಮಿತ್ರಂ ಹಿರಣ್ಯಂ ಭೂಮಿಂ ವಾ ಸಂಪಶ್ಯಂಸ್ತ್ರಿವಿಧಂ ಫಲಮ್ ॥ ೨೦೬ ॥**

೨೦೬. (ಯುದ್ದಕ್ಕೆ) ಉದ್ಯುಕ್ತನಾದ ರಾಜನು (ಶತ್ರುವಿನ) ಜೊತೆಗೆ ಪ್ರಯತ್ನದಿಂದ ಸಂಧಿಯನ್ನು ಮಾಡಿಕೊಂಡು ಮಿತ್ರ, ಸುವರ್ಣ ಮತ್ತು ಭೂಮಿಗಳು (ಯುದ್ಧದ) ಮೂರು ವಿಧದ ಫಲಗಳೆಂದು ಭಾವಿಸಿ (ತನ್ನ ರಾಜ್ಯಕ್ಕೆ) ಹೋಗಬೇಕು.

೨೦೬. ಶತ್ರುರಾಜನು ಸಂಪತ್ತು ಮತ್ತು ತನ್ನ ರಾಜ್ಯದ ಒಂದು ಭಾಗವನ್ನು ಕೊಟ್ಟು ಸಂಧಿ ಮಾಡಲು ಬಯಸುತ್ತಿದ್ದರೆ ರಾಜನು ಯುದ್ಧಮಾಡುವ ಹಟ ಹಿಡಿಯದೆ ಮಿತ್ರತ್ವವನ್ನು ಕಾಯ್ದುಕೊಳ್ಳಬೇಕು. (ಕು.ಸ.ಗೋ.)

ಮೇಧಾತಿಥಿಯ ಭಾಷ್ಯದಲ್ಲಿ ೨೦೬ರಿಂದ ೨೧೧ರವರೆಗಿನ ಶ್ಲೋಕಗಳಿಲ್ಲ.

पार्ष्णिग्राहं च संप्रेक्ष्य तथाक्रन्दं च मण्डले ।
मित्रादथाप्यमित्राद्वा यात्राफलमवाप्नुयात् ॥ २०७ ॥
**ಪಾರ್ಷ್ಣಿಗ್ರಾಹಂ ಚ ಸಂಪ್ರೇಕ್ಷ್ಯ ತಥಾಕ್ರಂದಂ ಚ ಮಂಡಲೇ ।**
**ಮಿತ್ರಾದಥಾಪ್ಯಮಿತ್ರಾದ್ವಾ ಯಾತ್ರಾಫಲಮವಾಪ್ನುಯಾತ್ ॥ ೨೦೭ ॥**

೨೦೭. ರಾಜಮಂಡಲದಲ್ಲಿ 'ಪಾರ್ಷ್ಣಿಗ್ರಾಹ' ಮತ್ತು 'ಆಕ್ರಂದ'ರ ಬಗೆಗೆ ಎಚ್ಚರಿಕೆಯನ್ನು ವಹಿಸಿ ರಾಜನು ಮಿತ್ರನಾದ ಅರಸನಿಂದ ಅಥವಾ ಶತ್ರುವಾಗಿಯೇ ಉಳಿದಿರುವ ಅರಸನಿಂದ ಯುದ್ಧಯಾತ್ರೆಯ ಫಲವನ್ನು ಪಡೆಯಬೇಕು.

೨೦೭. ರಾಜನು ಯುದ್ಧಯಾತ್ರೆಗಾಗಿ ಹೋದಾಗ ಹಿಂದಿನಿಂದ ಅವನ ರಾಜ್ಯದ ಮೇಲೆ, ಯಾವ ಶತ್ರು ಅರಸನು ದಾಳಿ ಮಾಡುತ್ತಾನೋ, ಅವನು 'ಪಾರ್ಷ್ಣಿಗ್ರಾಹ'; ಮತ್ತು ಇವನನ್ನು ಯಾವ ಮಿತ್ರರಾಜ ತಡೆಯುತ್ತಾನೋ ಅವನು 'ಆಕ್ರಂದ'. ರಾಜನು ಯುದ್ಧಕ್ಕಾಗಿ ಹೊರಡುವ ಮುನ್ನ ಪಾರ್ಷ್ಣಿಗ್ರಾಹನು ತನ್ನ ರಾಜ್ಯದ ಮೇಲೆ ದಾಳಿ ನಡೆಸಲಿಕ್ಕಿಲ್ಲ ಮತ್ತು ಅವನು ದಾಳಿ ಮಾಡಬೇಕೆಂದು ಯೋಚಿಸಿದರೂ ಆಕ್ರಂದನು ಅವನನ್ನು ತಡೆಯಬಹುದು– ಎಂಬುದನ್ನು ನಿಶ್ಚಯಿಸಿಕೊಂಡಿರಬೇಕು.

हिरण्यभूमिसंप्राप्त्या पार्थिवो न तथैधते ।
यथा मित्रं ध्रुवं लब्ध्वा कृशमप्यायतिक्षमम् ॥ २०८ ॥
**ಹಿರಣ್ಯಭೂಮಿ–ಸಂಪ್ರಾಪ್ತ್ಯಾ ಪಾರ್ಥಿವೋ ನ ತಥೈಧತೇ ।**
**ಯಥಾ ಮಿತ್ರಂ ಧ್ರುವಂ ಲಬ್ಧ್ವಾ ಕೃಶಮಪ್ಯಾಯತಿಕ್ಷಮಮ್ ॥ ೨೦೮ ॥**

೨೦೮. (ತತ್ಕಾಲದಲ್ಲಿ) ದುರ್ಬಲನಾಗಿದ್ದರೂ ಯಾವನು ಭವಿಷ್ಯತ್ತಿನಲ್ಲಿ ಶಕ್ತಿವಂತನಾಗಬಹುದೋ, ಅಂತಹ ಸ್ಥಿರ ಮಿತ್ರನ ಪ್ರಾಪ್ತಿಯಿಂದ ರಾಜನಿಗೆ ಯಾವ ಸಮೃದ್ಧಿಯು ಪ್ರಾಪ್ತವಾಗುತ್ತದೆಯೋ, ಅದು ಸುವರ್ಣ ಹಾಗೂ ಭೂಮಿಯ ಪ್ರಾಪ್ತಿಯಿಂದಾಗುವದಿಲ್ಲ.

೨೦೮. ಹೆಚ್ಚು ಧನವನ್ನು ಹಾಗೂ ಭೂಮಿಯನ್ನು ಬಯಸದೆ ರಾಜನು ಸ್ಥಿರರಾದ ಮಿತ್ರರನ್ನು ಗಳಿಸಬೇಕು. ಹೋಲಿಸಿರಿ:–

हिरन्यभूमिलाभेभ्यो मित्रलब्धिर्वरा यतः ।
अतो यतेत तत्प्राप्त्यै रक्षेत्सत्यं समाहितः ॥ –याज्ञवल्क्यस्मृति १:३५२.

धर्मज्ञं च कृतज्ञं च तुष्टप्रकृतिमेव च ।
अनुरक्तं स्थिरारम्भं लघु मित्रं प्रशस्यते ॥ २०९ ॥
**ಧರ್ಮಜ್ಞಂ ಚ ಕೃತಜ್ಞಂ ಚ ತುಷ್ಟಪ್ರಕೃತಿಮೇವ ಚ ।**
**ಅನುರಕ್ತಂ ಸ್ಥಿರಾರಂಭಂ ಲಘುಮಿತ್ರಂ ಪ್ರಶಸ್ಯತೇ ॥ ೨೦೯ ॥**

೨೦೯. ಧರ್ಮವನ್ನು ತಿಳಿದಿರುವ ಮಾಡಿದ ಉಪಕಾರವನ್ನು ಸ್ಮರಿಸುವ, ಸಂತುಷ್ಟ ಸ್ವಭಾವವುಳ್ಳ, ಪ್ರಿಯನಾದ, ದೃಢನಿಶ್ಚಯದಿಂದ ಕಾರ್ಯವನ್ನು ಪ್ರಾರಂಭಿಸುವ ಹಾಗೂ ಚುರುಕಾದ ಮಿತ್ರನು ಪ್ರಶಂಸನೀಯನಾಗಿರುತ್ತಾನೆ.

೨೦೯. लघुः– शीघ्रकारी, स्वस्मात् न्यूनम् इति वा (न०).
क्षुद्रम् अपि इत्यर्थः (स०).
लघु इति अनायाससाध्यता (राघ०).

प्राज्ञं कुलीनं शूरं च दक्षं दातारमेव च ।
कृतज्ञं धृतिमन्तं च कष्टमाहुररिं बुधाः ॥ २१० ॥
**ಪ್ರಾಜ್ಞಂ ಕುಲೀನಂ ಶೂರಂ ಚ ದಕ್ಷಂ ದಾತಾರಮೇವ ಚ ।**
**ಕೃತಜ್ಞಂ ಧೃತಿಮಂತಂ ಚ ಕಷ್ಟಮಾಹುರರಿಂ ಬುಧಾಃ ॥ ೨೧೦ ॥**

೨೧೦. ವಿದ್ವಾಂಸನೂ ಕುಲೀನನೂ ಶೂರನೂ ದಕ್ಷನೂ ದಾತಾರನೂ ಉಪಕಾರವನ್ನು ಸ್ಮರಿಸುವವನೂ ಧೈರ್ಯಶೀಲನೂ ಆದ ಶತ್ರುವನ್ನು (ಗೆಲ್ಲುವುದು) ಬಹಳ ಕಷ್ಟಕರವೆಂದು ಜ್ಞಾನಿಗಳು ಹೇಳುತ್ತಾರೆ.

೨೧೦. ಸದ್ಗುಣ ಪರಿಪೂರ್ಣನಾದ ಇಂತಹ ಶತ್ರುವಿನ ಜೊತೆಗೆ ಯುದ್ಧ ಮಾಡದೆ ರಾಜನು ಸಂಧಿಯನ್ನು ಮಾಡಿಕೊಳ್ಳಬೇಕು.

आर्यता पुरुषज्ञानं शौर्यं करुणवेदिता ।
स्थौललक्ष्यं च सततमुदासीनगुणोदयः ॥ २११ ॥
**ಆರ್ಯತಾ ಪುರುಷಜ್ಞಾನಂ ಶೌರ್ಯಂ ಕರುಣವೇದಿತಾ ।**
**ಸ್ಥೌಲಲಕ್ಷ್ಯಂ ಚ ಸತತಮುದಾಸೀನಗುಣೋದಯಃ ॥ ೨೧೧ ॥**

೨೧೧. ಸಾಧುತ್ವ, (ವಿಶಿಷ್ಟರಾದ) ಪುರುಷರನ್ನು ಗುರುತಿಸುವ ಶಕ್ತಿ, ಶೌರ್ಯ, ದಯಾಮಯ ಸ್ವಭಾವ ಮತ್ತು ಹೆಚ್ಚಿನ ದಾನಶೂರತನ– ಇದು ಉದಾಸೀನನ ಗುಣ ಸಮೂಹ ಇರುವದು.

೨೧೧. स्थौललक्ष्यं–दातृत्वं (स० कु० राघ० न० राम०); असूक्ष्मदर्शित्वं (मे० गो०). ಇಂತಹ ಗುಣವುಳ್ಳ 'ಉದಾಸೀನ' ರಾಜನನ್ನು ಆಶ್ರಯಿಸಬೇಕು.

क्षेम्यां सस्यप्रदां नित्यं पशुवृद्धिकरीमपि ।
परित्यजेन्नृपो भूमिमात्मार्थमविचारयन् ॥ २१२ ॥
**ಕ್ಷೇಮ್ಯಾಂ ಸಸ್ಯಪ್ರದಾಂ ನಿತ್ಯಂ ಪಶುವೃದ್ಧಿಕರೀಮಪಿ ।**
**ಪರಿತ್ಯಜೇನ್ನೃಪೋ ಭೂಮಿಮಾತ್ಮಾರ್ಥಮವಿಚಾರಯನ್ ॥ ೨೧೨ ॥**

೨೧೨. ಕ್ಷೇಮಕರವಾದ, ಯಾವಾಗಲೂ (ಒಳ್ಳೆಯ) ಬೆಳೆಯನ್ನು ಕೊಡುವ ಪಶುಗಳನ್ನು ವೃದ್ಧಿಗೊಳಿಸುವ (ಸಮೃದ್ಧವಾದ) ಭೂಮಿಯನ್ನು ಕೂಡ ರಾಜನು ವಿಚಾರ ಮಾಡದೆ ತನ್ನ ರಕ್ಷಣೆಗಾಗಿ (ಕೊಟ್ಟು) ಬಿಡಬೇಕು.

आपदर्थं धनं रक्षेद्दारान्रक्षेद्धनैरपि ।
आत्मानं सततं रक्षेद्दारैरपि धनैरपि ॥ २१३ ॥
**ಆಪದರ್ಥಂ ಧನಂ ರಕ್ಷೇದ್ದಾರಾನ್ರಕ್ಷೇದ್ಧನೈರಪಿ ।**
**ಆತ್ಮಾನಂ ಸತತಂ ರಕ್ಷೇದ್ದಾರೈರಪಿ ಧನೈರಪಿ ॥ ೨೧೩ ॥**

೨೧೩. ಆಪತ್ತಿನ ನಿವಾರಣೆಗಾಗಿ ಧನವನ್ನು ರಕ್ಷಿಸಬೇಕು. ಧನಗಳನ್ನು ಸಹ ಕೊಟ್ಟು ಪತ್ನಿಯನ್ನು ರಕ್ಷಿಸಬೇಕು. (ಆದರೆ ಅತ್ಯಂತ ಕಠಿನ ಪ್ರಸಂಗ ಬಂದಾಗ) ಧನವನ್ನು ಹಾಗೂ ಪತ್ನಿಯನ್ನು ಸಹ ತ್ಯಜಿಸಿ ಯಾವಾಗಲೂ ತನ್ನನ್ನು ರಕ್ಷಿಸಿಕೊಳ್ಳಬೇಕು.

೨೧೨–೩. ತನ್ನ ರಕ್ಷಣೆಯನ್ನು ಮಾಡಿಕೊಳ್ಳುವದು. ಇದು ಅತ್ಯಂತ ಮಹತ್ವದ್ದು. ಇದಕ್ಕಾಗಿ ಭೂಮಿ, ದ್ರವ್ಯ ಮುಂತಾದವುಗಳನ್ನು ಬಿಟ್ಟು ಬಿಡಬೇಕಾಗಬಹುದು. ಅಶಾಸ್ತ್ರೀಯ ಮರಣವುಂಟಾಗುವ ಸಂದರ್ಭ ಬಂದಲ್ಲಿ ಅದರಿಂದ ತಪ್ಪಿಸಿಕೊಳ್ಳಲು, ಅಗತ್ಯವಾದರೆ, ಇಂಥ ತ್ಯಾಗ ಮಾಡಬೇಕು. (ಕು.).

सह सर्वाः समुत्पन्नाः प्रसमीक्ष्यापदो भृशम् ।
संयुक्तांश्च वियुक्तांश्च सर्वोपायान्सृजेद्बुधः ॥ २१४ ॥
**ಸಹ ಸರ್ವಾಃ ಸಮುತ್ಪನ್ನಾಃ ಪ್ರಸಮೀಕ್ಷ್ಯಾಪದೋ ಭೃಶಮ್ ।**
**ಸಂಯುಕ್ತಾಂಶ್ಚ ವಿಯುಕ್ತಾಂಶ್ಚ ಸರ್ವೋಪಾಯಾನ್ಸೃಜೇದ್ಬುಧಃ ॥ ೨೧೪ ॥**

೨೧೪. ಎಲ್ಲ ಆಪತ್ತುಗಳೂ ಒಮ್ಮೆಲೇ ಉಂಟಾದುದನ್ನು ನೋಡಿ ಜಾಣನಾದ ರಾಜನು ಎಲ್ಲ ಉಪಾಯಗಳನ್ನೂ ಸಂಯುಕ್ತವಾಗಿ ಅಥವಾ ಪ್ರತ್ಯೇಕವಾಗಿ ಯೋಜಿಸಬೇಕು.

೨೧೪. ಕೋಶವು ಕ್ಷೀಣವಾಗುವುದು, ಪ್ರಜೆಗಳು ಹಾಗೂ ಅಮಾತ್ಯರು ಅಸಂತುಷ್ಟರಾಗುವದು, ಶತ್ರುಗಳ ಪೀಡೆ ಉದ್ಭವಿಸುವುದು– ಇಂತಹ ಅನೇಕ ಆಪತ್ತುಗಳು ಒಮ್ಮೆಲೇ ಉಂಟಾದಾಗ ರಾಜನು ಹೆದರಬಾರದು. ಸಾಮಾದಿ ಉಪಾಯಗಳ ಪ್ರಯೋಗವನ್ನು ಮಾಡಬೇಕು.

उपेतारमुपेयं च सर्वोपायांश्च कृत्स्नशः ।
एतत्त्रयं समाश्रित्य प्रयतेतार्थसिद्धये ॥ २१५ ॥

**ಉಪೇತಾರಮುಪೇಯಂ ಚ ಸರ್ವೋಪಯಾಂಶ್ಚ ಕೃತ್ಸ್ನಶಃ ।**
**ಏತತ್ತ್ರಯಂ ಸಮಾಶ್ರಿತ್ಯ ಪ್ರಯತೇತಾರ್ಥಸಿದ್ಧಯೇ ॥ ೨೧೫ ॥**

೨೧೫. ಉಪಾಯಗಳನ್ನು ಯೋಜಿಸುವ (ರಾಜನು), ಮಾಡಬೇಕಾದ ಕಾರ್ಯ ಮತ್ತು ಎಲ್ಲ ಉಪಾಯಗಳು– ಇವುಗಳನ್ನು ಸಮಗ್ರವಾಗಿ ಆಶ್ರಯಿಸಿ ಕಾರ್ಯಸಿದ್ಧಿಗಾಗಿ ಪ್ರಯತ್ನವನ್ನು ಮಾಡಬೇಕು.

೨೧೫. उपेतारम्– उद्यमफलयुक्तम् आत्मानम् (गो० कु० स० राघ० मे० राम०).
– अमात्यादिकं वर्गं (न०).

समाश्रित्य – मनसा बलाबलादिद्वारा निश्चित्य (स० राम०).
– अवलम्ब्य (कु० गो०).

एवं सर्वमिदं राजा सह समन्त्र्य मन्त्रिभिः ।
व्यायम्याप्लुत्य मध्याह्ने भोक्तुमन्तःपुरं विशेत् ॥ २१६ ।\

**ಏವಂ ಸರ್ವಮಿದಂ ರಾಜಾ ಸಹ ಸಂಮಂತ್ರ್ಯ ಮಂತ್ರಿಭಿಃ ।**
**ವ್ಯಾಯಮ್ಯಾಪ್ಲುತ್ಯ ಮಧ್ಯಾಹ್ನೇ ಭೋಕ್ತುಮಂತಃಪುರಂ ವಿಶೇತ್ ॥ ೨೧೬ ॥**

೨೧೬. ಹೀಗೆ ಇದೆಲ್ಲವನ್ನು ಮಂತ್ರಿಗಳೊಡನೆ ಚಿಂತಿಸಿ ರಾಜನು ವ್ಯಾಯಾಮವನ್ನು ಮಾಡಿ ಮಧ್ಯಾಹ್ನದಲ್ಲಿ (ಮತ್ತೊಮ್ಮೆ) ಸ್ನಾನ ಮಾಡಿ ಊಟಕ್ಕಾಗಿ ಅಂತಃಪುರವನ್ನು ಪ್ರವೇಶಿಸಬೇಕು.

೨೧೬. संमन्त्र्य–कस्यामवस्थायां किं कर्तव्यमिति विचार्य (मे०).
व्यायाम्य–आयुधाभ्यासादिना व्यायामं कृत्वा (फु०).

तत्रात्मभूतैः कालज्ञैरहार्यैः परिचारकैः ।
सुपरीक्षितमन्नाद्यमद्यान्मन्त्रैर्विषापहैः ॥ २१७ ॥

**ತತ್ರಾತ್ಮಭೂತೈಃ ಕಾಲಜ್ಞೈರಹಾರ್ಯೈಃ ಪರಿಚಾರಕೈಃ ।**
**ಸುಪರೀಕ್ಷಿತಮನ್ನಾದ್ಯಮದ್ಯಾನ್ಮಂತ್ರೈರ್ವಿಷಾಪಹೈಃ ॥ ೨೧೭ ॥**

೨೧೭. ಅಲ್ಲಿ ಆತ್ಮೀಯರಾದ, (ಊಟದ) ಸಮಯವನ್ನು ಬಲ್ಲ ಮತ್ತು ಪ್ರಲೋಭನಕ್ಕೆ ಒಳಗಾಗದ ಸೇವಕರು (ತಯಾರಿಸಿದ), ಸರಿಯಾಗಿ ಪರೀಕ್ಷಿಸಿದ ಮತ್ತು ವಿಷನಾಶಕ ಮಂತ್ರಗಳಿಂದ ಮಂತ್ರಿತವಾದ ಅನ್ನಾದಿಗಳನ್ನು (ರಾಜನು) ಉಣ್ಣಬೇಕು.

೨೧೭. सुपरीक्षितम्–परीक्षाकुशलैः वैद्यैः अग्निचकोरादिभिः कर्तव्या (मे०). सविषमन्नं दृष्ट्वा चकोराक्षिणी रक्ते भवतः (कु०).

विषघ्नैरगदैश्चास्य सर्वद्रव्याणि योजयेत् ।
विषघ्नानि च रत्नानि नियतो धारयेत्सदा ॥ २१८ ॥
**ವಿಷಘ್ನೈರಗದೈಶ್ಚಾಸ್ಯ ಸರ್ವದ್ರವ್ಯಾಣಿ ಯೋಜಯೇತ್ ।**
**ವಿಷಘ್ನಾನಿ ಚ ರತ್ನಾನಿ ನಿಯತೋ ಧಾರಯೇತ್ಸದಾ ॥ ೨೧೮ ॥**

೨೧೮. ವಿಷನಾಶಕ ಔಷಧಿಗಳನ್ನು ಅವನ ಎಲ್ಲ ವಸ್ತುಗಳಿಗೆ ಹಚ್ಚಬೇಕು. ಪ್ರಯತ್ನಶೀಲನಾದ ರಾಜನು ಯಾವಾಗಲೂ ವಿಷನಾಶಕ ರತ್ನಗಳನ್ನು ಧರಿಸಬೇಕು.

೨೧೮. सर्वद्रव्याणि–राजौपयिकानि वस्त्रादीनि

योजयेत्–नेजयेत् ಎಂದು ಪಾಠಾಂತರ (ಮೇ.ಗೋ.ಸ.ನ.) ಅರ್ಥ–ಶುದ್ಧೀಕರಿಸಬೇಕು.

परीक्षिताः स्त्रियश्चैनं व्यजनोदकधूपनैः ।
वेषाभरणसंशुद्धाः स्पृशेयुः सुसमाहिताः ॥ २१९ ॥
**ಪರೀಕ್ಷಿತಾಃ ಸ್ತ್ರಿಯಶ್ಚೈನಂ ವ್ಯಜನೋದಕಧೂಪನೈಃ ।**
**ವೇಷಾಭರಣಸಂಶುದ್ಧಾಃ ಸ್ಪೃಶೇಯುಃ ಸುಸಮಾಹಿತಾಃ ॥ ೨೧೯ ॥**

೨೧೯. ಪರೀಕ್ಷೆಗೆ ಒಳಪಟ್ಟ, ಶುದ್ಧವಾದ ವೇಷ ಹಾಗೂ ಆಭರಣಗಳನ್ನು ಧರಿಸಿದ ಮತ್ತು ಸ್ಥಿರಚಿತ್ತರಾದ ಸ್ತ್ರೀಯರು ರಾಜನಿಗೆ ಗಾಳಿ ಬೀಸುವದು, ನೀರು ಕೊಡುವದು, ಧೂಪ ಹಾಕುವದು ಮುಂತಾದ ಸೇವೆಯನ್ನು ಸಲ್ಲಿಸಬೇಕು.

೨೧೯. परीक्षिताः– ದಾಸಿಯರು ವೇಷಭೂಷಣಗಳಲ್ಲಿ ಶಸ್ತ್ರ, ವಿಷ ಮುಂತಾದವುಗಳನ್ನು ಅಡಗಿಸಿದ್ದಾರೆಯೇ ಎಂಬುದನ್ನು ಚೆನ್ನಾಗಿ ಪರೀಕ್ಷಿಸಬೇಕು.

स्पृशेयु– उपचरेयुः (मे०) समीपमागच्छेयुः (स०).

एवं प्रयत्नं कुर्वीत यानशय्यासनाशने ।
स्नाने प्रसाधने चैव सर्वालंकारकेषु च ॥ २२० ॥

**ಏವಂ ಪ್ರಯತ್ನಂ ಕುರ್ವೀತ ಯಾನಶಯ್ಯಾಸನಾಶನೇ ।**
**ಸ್ನಾನೇ ಪ್ರಸಾಧನೇ ಚೈವ ಸರ್ವಾಲಂಕಾರಕೇಷು ಚ ॥ ೨೨೦ ॥**

೨೨೦. ಹೀಗೆ ವಾಹನ, ಹಾಸಿಗೆ, ಆಸನ, ಭೋಜನ, ಸ್ನಾನ, ಅನುಲೇಪನ ಮತ್ತು ಎಲ್ಲ ಅಲಂಕಾರ– ಇವೆಲ್ಲವುಗಳನ್ನು ಪ್ರಯತ್ನದಿಂದ ಪರೀಕ್ಷಿಸಬೇಕು.

೨೨೦. ರಾಜನಿಗೆ ಶತ್ರುಗಳಿಂದ ವಿವಿಧ ರೀತಿಯಲ್ಲಿ ವಿಷಪ್ರಯೋಗವಾಗುವ ಸಂಭವವು ಬಹಳ ಹೆಚ್ಚು. ಆದ್ದರಿಂದ ರಾಜನು ಪ್ರತಿಯೊಂದು ವಸ್ತುವಿನ ಬಗೆಗೆ ಅತ್ಯಂತ ಎಚ್ಚರಿಕೆಯಿಂದಿರಬೇಕು.

भुक्तवान्विहरेच्चैव स्त्रीभिरन्तःपुरे सह ।
विहृत्य तु यथाकालं पुनः कार्याणि चिन्तयेत् ॥ २२१ ॥
**ಭುಕ್ತವಾನ್ವಿಹರೇಚ್ಚೈವ ಸ್ತ್ರೀಭಿರಂತಃಪುರೇ ಸಹ ।**
**ವಿಹೃತ್ಯ ತು ಯಥಾಕಾಲಂ ಪುನಃ ಕಾರ್ಯಾಣಿ ಚಿಂತಯೇತ್ ॥ ೨೨೧ ॥**

೨೨೧. ರಾಜನು ಊಟವಾದ ಮೇಲೆ ಆ ಅಂತಃಪುರದಲ್ಲಿ ಸ್ತ್ರೀಯರ ಜೊತೆಗೆ ವಿಹರಿಸಬೇಕು. ವಿಹಾರ ಮುಗಿದ ಮೇಲೆ ಅವನು ಮತ್ತೆ ಕಾರ್ಯಗಳ ಬಗೆಗೆ ಚಿಂತನೆಯನ್ನು ನಡೆಸಬೇಕು.

೨೨೧. यथाकालम्– यावद्विहरनकालम् (मे०).
पुनः– अष्टमे भागे (कु०).

अलङ्कृतश्च सम्पश्येदायुधीयं पुनर्जनम् ।
वाहनानि च सर्वाणि शस्त्राण्याभरणानि च ॥ २२२ ॥
**ಅಲಂಕೃತಶ್ಚ ಸಂಪಶ್ಯೇದಾಯುಧೀಯಂ ಪುನರ್ಜನಮ್ ।**
**ವಾಹನಾನಿ ಚ ಸರ್ವಾಣಿ ಶಸ್ತ್ರಾಣ್ಯಾಭರಣಾನಿ ಚ ॥ ೨೨೨ ॥**

೨೨೨. ಅಲಂಕಾರಗಳನ್ನು ಧರಿಸಿ ರಾಜನು ಮತ್ತೆ ಶಸ್ತ್ರಧಾರಿ ಸೈನಿಕರನ್ನೂ, ಎಲ್ಲ ವಾಹನಗಳನ್ನೂ, ಶಸ್ತ್ರಗಳನ್ನೂ, ಆಭರಣಗಳನ್ನೂ ವೀಕ್ಷಿಸಬೇಕು.

೨೨೨. आयुधीयं जनम् – ಶಸ್ತ್ರಗಳಿಂದ ಉಪಜೀವನ ಮಾಡುವ ಜನರು.
पुनः– पूर्वाह्णे दृष्टमपि (मे०).

संध्यां चोपास्य शृणुयादन्तर्वेश्मनि शस्त्रभृत् ।
रहस्याख्यायिनां चैव प्रणिधीनां च चेष्टितम् ॥ २२३ ॥
**ಸಂಧ್ಯಾಂ ಚೋಪಾಸ್ಯ ಶೃಣುಯಾದಂತರ್ವೇಶ್ಮನಿ ಶಸ್ತ್ರಭೃತ್ ।**
**ರಹಸ್ಯಾಖ್ಯಾಯಿನಾಂ ಚೈವ ಪ್ರಣಿಧೀನಾಂ ಚ ಚೇಷ್ಟಿತಮ್ ॥ ೨೨೩ ॥**

गत्वा कक्षान्तरंत्वन्यत्समनुज्ञाप्य तं जनम् ।
प्रविशेद्भोदनार्थं च स्त्रीवृतोऽन्तःपुरं पुनः ॥ २२४ ॥
**ಗತ್ವಾ ಕಕ್ಷಾಂತರಂ ತ್ವನ್ಯತ್ಸಮನುಜ್ಞಾಪ್ಯ ತಂ ಜನಮ್ ।**
**ಪ್ರವಿಶೇದ್ಭೋಜನಾರ್ಥಂ ಚ ಸ್ತ್ರೀವೃತೋಽಂತಃಪುರಂ ಪುನಃ ॥ ೨೨೪ ॥**

೨೨೩–೨೪. ಸಂಧ್ಯೋಪಾಸನೆಯನ್ನು ಮುಗಿಸಿ ರಾಜನು ಶಸ್ತ್ರಸಹಿತವಾಗಿ ಮನೆಯೊಳಗೆ (ಏಕಾಂತವಾದ) ಬೇರೆ ಕೋಣೆಯಲ್ಲಿ ಹೋಗಿ ರಹಸ್ಯಗಳನ್ನು ಹೇಳುವ ಜನರ ಹಾಗೂ ಗುಪ್ತಚಾರರ ಸಮಾಚಾರವನ್ನು ಕೇಳಬೇಕು. ಆಮೇಲೆ ಆ ಜನರಿಗೆ (ಹೋಗಲು) ಅನುಮತಿಯನ್ನು ನೀಡಿ ದಾಸಿಯರ ಜೊತೆಗೆ ಊಟಕ್ಕಾಗಿ ಮತ್ತೆ ಅಂತಃಪುರವನ್ನು ಪ್ರವೇಶಿಸಬೇಕು.

೨೨೩. अन्तर्वेश्मनि–रहसि प्रासादादौ (मे०).
चेष्टितं–चेष्टा, व्यवहारः, किं दृष्टं श्रुतं कृतं चेति (मे०).

೨೨೪. कक्षान्तरं–विविक्तप्रकोष्ठावकाशं (कु० राघ.).

तत्र भुक्त्वा पुनः किंचित्तूर्यघोषैः प्रहर्षितः ।
संविशेत्तु यथाकालमुत्तिश्ठेच्च गतक्लमः ॥ २२५ ॥
**ತತ್ರ ಭುಕ್ತ್ವಾ ಪುನಃ ಕಿಂಚಿತ್ತೂರ್ಯಘೋಷೈಃ ಪ್ರಹರ್ಷಿತಃ ।**
**ಸಂವಿಶೇತ್ತು ಯಥಾಕಾಲಮುತ್ತಿಷ್ಠೇಚ್ಚ ಗತಕ್ಲಮಃ ॥ ೨೨೫ ॥**

೨೨೫. ಅಲ್ಲಿ ಮತ್ತೆ ಸ್ವಲ್ಪ ಊಟಮಾಡಿ ಮಂಗಲವಾದ್ಯಗಳಿಂದ ಆನಂದಪಟ್ಟು ರಾಜನು ಸಕಾಲದಲ್ಲಿ ಮಲಗಬೇಕು. ಮತ್ತು (ರಾತ್ರಿಯ ಕೊನೆಯ ಜಾವದಲ್ಲಿ) ಆಯಾಸರಹಿತನಾಗಿ ಏಳಬೇಕು.

೨೨೫. तूर्यघोषैः– तूर्याणि वेणुवीणापणवमृदङ्ग शङ्खादीनि (मे०).
यथाकाल्म्– कालानतिक्रमेण गतार्धप्रहरायां रात्रौ (कु०).

एतद्विधानमातिष्ठेदरोगः पृथिवीपतिः ।
अस्वस्थः सर्वमेतत्तु भृत्येषु विनियोजयेत् ॥ २२६ ॥
**ಏತದ್ವಿಧಾನಮಾತಿಷ್ಠೇದರೋಗಃ ಪೃಥಿವೀಪತಿಃ ।**
**ಅಸ್ವಸ್ಥಃ ಸರ್ವಮೇತತ್ತು ಭೃತ್ಯೇಷು ವಿನಿಯೋಜಯೇತ್ ॥ ೨೨೬ ॥**

೨೨೬. ರೋಗರಹಿತನಾದ ರಾಜನು ಈ (ಎಲ್ಲ) ಕಾರ್ಯವನ್ನು (ತಾನೇ) ಮಾಡಬೇಕು; ಅಸ್ವಸ್ಥನಾದರೆ ಅವನು ಈ ಎಲ್ಲವನ್ನೂ (ಅಮಾತ್ಯ ಮುಂತಾದ) ಸೇವಕರಿಗೆ ಒಪ್ಪಿಸಬೇಕು.

೨೨೬. एतत् विधानम्– यथोक्तप्रकारप्रजारक्षणादिकम् (कु०).
अनुष्ठेयं दृष्टादष्टार्थं षाड्गुण्याग्निहोत्रादिकम् (राघ.).

## ಪರಿಶಿಷ್ಟ
# ಹೋಲಿಸಿ ನೋಡಬಹುದಾದ ಕೌಟಿಲ್ಯ ಸಿದ್ಧಾಂತಗಳು

ವಾರ್ತೆ: ವಾಣಿಜ್ಯಾದಿ ಅರ್ಥವ್ಯವಹಾರ ಶಾಸ್ತ್ರ.

ದಂಡನೀತಿ: ಅಪರಾಧಿಗಳನ್ನು ದಂಡಿಸುವ ಶಾಸ್ತ್ರ.

ಆನ್ವೀಕ್ಷಿಕಿ: ಸಾಂಖ್ಯ, ಯೋಗ ಮತ್ತು ಲೋಕಾಯತ ದರ್ಶನಗಳು.

ವಿದ್ಯೆಃ ತ್ರಯಿ, ವಾರ್ತೆ, ದಂಡನೀತಿ ಮತ್ತು ಆನ್ವೀಕ್ಷಿಕಿ.

ಸಾಮಾನ್ಯಧರ್ಮ: ಅಹಿಂಸೆ, ಸತ್ಯ, ಶಾಂತಿ ಅನಸೂಯೆ, ಅನಿಷ್ಠುರತೆ ಮತ್ತು ಕ್ಷಮೆ.

ವರ್ಣಧರ್ಮ ತ್ಯಾಗದಿಂದ ಕರ್ಮಸಂಕರ, ಕರ್ಮಸಂಕರದಿಂದ ಲೋಕನಾಶ.

ವಾರ್ತೆಯನ್ನಾಧರಿಸಿದ ಕೋಶ–ದಂಡಗಳಿಂದ ರಾಜನು ಸ್ವಪಕ್ಷ–ಪರಪಕ್ಷಗಳನ್ನು ವಶದಲ್ಲಿಟ್ಟುಕೊಳ್ಳಬಲ್ಲ.

ಆನ್ವೀಕ್ಷಿಕಿ, ವೇದತ್ರಯ ಮತ್ತು ವಾರ್ತೆಗಳ ಯೋಗಕ್ಷೇಮವು ದಂಡಾಧೀನ.

ಶಾಸ್ತ್ರ ಓದಿ ತಿಳಿದು ವಿಧಿಸುವ ಶಿಕ್ಷೆ ಮಾತ್ರ ಪ್ರಜೆಗಳಿಗೆ ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳನ್ನು ದೊರಕಿಸಿಕೊಡಬಲ್ಲದು.

ವಿದ್ಯಾತ್ರಯವು ದಂಡಮೂಲ; ವಿದ್ಯಾಲಬ್ಧವಿನಯಾಧೀನವಾದ ದಂಡವು ಪ್ರಜೆಗಳ ಯೋಗಕ್ಷೇಮಕ್ಕೆ ಕಾರಣ.

ಶುಶ್ರೂಷೆ, ಶ್ರವಣ, ಗ್ರಹಣ, ಧಾರಣ, ವಿಜ್ಞಾನ, ಊಹಾಪೋಹ ಮತ್ತು ತತ್ವಾಭಿನಿವೇಶಗಳೆಂಬ ಅಷ್ಟಗುಣಗಳಿಂದ ಕೂಡಿದ ಬುದ್ಧಿಯುಳ್ಳವನನ್ನು ಮಾತ್ರ ವಿದ್ಯೆಯು ವಿನಯಸಂಪನ್ನನನ್ನಾಗಿ ಮಾಡಬಲ್ಲದು.

ಆಯಾ ವಿದ್ಯೆಗೆ ಆಯಾ ಗುರುವೇ ಪ್ರಮಾಣ; ಆದ್ದರಿಂದ ಗುರ್ವಾಜ್ಞೆಯನ್ನು ಅತಿಕ್ರಮಿಸದಿರುವುದೇ ವಿನಯ ಅಥವಾ ಶಾಸ್ತ್ರಸಂಸ್ಕಾರ.

ಇತಿಹಾಸ: ಪುರಾಣ, ಇತಿವೃತ್ತ, ಆಖ್ಯಾಯಿಕೆ, ಉದಾಹರಣ, ಧರ್ಮಶಾಸ್ತ್ರ ಮತ್ತು ಅರ್ಥಶಾಸ್ತ್ರ.

ಶ್ರವಣ, ಮನನ, ನಿದಿಧ್ಯಾಸಗಳಿಂದ ಪ್ರಜ್ಞೋದಯ; ಪ್ರಜ್ಞೆಯಿಂದ ಯೋಗ ಮತ್ತು ಯೋಗದಿಂದ ಆತ್ಮವಂತಿಕೆ ಲಭ್ಯ.

ಇಂದ್ರಿಯಜಯವು ಸರ್ವಶಾಸ್ತ್ರೋಪದೇಶಗಳಲ್ಲಿ ಅಗ್ರಗಣ್ಯ; ಶಾಸ್ತ್ರಾಧೀನವಾಗಿ ನಡೆದುಕೊಳ್ಳುವಂತೆ ಇಂದ್ರಿಯಗಳನ್ನು ತರಬೇತುಗೊಳಿಸುವುದೇ ಇಂದ್ರಿಯಜಯ. ದಾಂಡಕ್ಯ, ಕರಾಲ, ಜನಮೇಜಯ, ತಾಲಜಂಘ, ಪುರೂರವ, ಅಜಬಿಂದು, ರಾವಣ, ದುರ್ಯೋಧನ, ದಂಭೋದ್ಭವ, ಕಾರ್ತವೀರ್ಯ ಮತ್ತು ಯಾದವಕುಲ ಅಶಾಸ್ತ್ರೀಯ ವರ್ತನೆಗಿಳಿದು ಇಂದ್ರಿಯಗಳಿಂದ ಹಾಳಾದರು. ಪರಶುರಾಮ, ಅಂಬರೀಷ, ನಾಭಾಗರು ಜಿತೇಂದ್ರಿಯರಾದುದರಿಂದ ಉದ್ಧಾರ ಹೊಂದಿದರು.

ರಾಜರ್ಷಿವೃತ್ತ: ಅರಿಷಡ್ವರ್ಗತ್ಯಾಗದಿಂದ ಇಂದ್ರಿಯಜಯ; ವಿದ್ಯಾವೃದ್ಧ ಶುಶ್ರೂಷೆಯಿಂದ ಪ್ರಜ್ಞೋದಯ; ಗೂಢಚಾರನಿಯೋಗದಿಂದ ಸರ್ವವೃತ್ತಜ್ಞಾನ; ಉತ್ಥಾನದಿಂದ ಯೋಗಕ್ಷೇಮಸಾಧನೆ; ಕಾರ್ಯಾನುಶಾಸನದಿಂದ ಸ್ವಧರ್ಮಸ್ಥಾಪನೆ; ವಿದ್ಯೋಪದೇಶದಿಂದ ವಿನಯ; ಅರ್ಥಸ್ವೀಕಾರ ಮತ್ತು ಸತ್ಪಾತ್ರದಾನಗಳಿಂದ ಜನಪ್ರಿಯತೆ; ತತ್ಕಾಲ ಮತ್ತು ಕಾಲಾಂತರಗಳಲ್ಲಿ ಪಥ್ಯವಾದುದನ್ನು ಮಾಡುವುದರಿಂದ ವ್ಯವಹಾರಸಿದ್ಧಿ.

ಧರ್ಮಕಾಮಗಳಿಗೆ ಅರ್ಥವು ಸಾಧನ.

ಗುರು–ಮಂತ್ರಿಗಳು ರಾಜರಕ್ಷಕರು; ಅವರ ಅಭಿಪ್ರಾಯವನ್ನು ಕೇಳುವುದು ರಾಜಧರ್ಮ.

ಮಹಾಮಾತ್ಯನ ಅರ್ಹತೆ: ಸ್ವರಾಷ್ಟ್ರ (ರಾಜನ ರಾಷ್ಟ್ರ) ಜಾತತೆ; ಶಿಷ್ಟ ಬಾಂಧವಯುಕ್ತತೆ; ಯುದ್ಧವಿದ್ಯಾವಿಚಕ್ಷಣತೆ; ಗಾಂಧರ್ವಾದಿ ವಿದ್ಯಾಜ್ಞಾನ; ರಾಜಧರ್ಮಜ್ಞತೆ; ಸಹಜ ಬುದ್ಧಿಸಂಪನ್ನತೆ; ಸ್ಮೃತಿ ದಾರ್ಢ್ಯ; ದಕ್ಷತೆ; ವಾಗ್ಮಿತ್ವ; ಪ್ರೌಢತೆ; ಪ್ರತ್ಯುತ್ಪನ್ನಮತಿತ್ವ; ಉತ್ಸಾಹ; ಪ್ರಭಾವ; ಕಷ್ಟಸಹಿಷ್ಣುತೆ; ಚತುರ್ವಿಧಶೀಲಶುದ್ಧಿ; ಸ್ನೇಹಪರತೆ; ಅಚಲ ರಾಜಭಕ್ತಿ; ಸುಶೀಲ; ದೇಹಬಲ; ಆರೋಗ್ಯ; ಧೈರ್ಯ; ನಿಗರ್ವಿತ್ವ; ಚಾಪಲ್ಯರಹಿತತೆ; ಸೌಮ್ಯಾಕೃತಿ; ಹೆಣ್ಣು–ಹೊನ್ನುಗಳಿಗಾಗಿ ಬಡಿದಾಡುವುದನ್ನು ನಿಲ್ಲಿಸುವ ಪ್ರವೃತ್ತಿ. ಇಷ್ಟು ಗುಣಗಳುಳ್ಳವನೆಂಬುದು ಪರೀಕ್ಷೆಯಿಂದ ಗೊತ್ತಾದ ಮೇಲೆಯೇ ಒಬ್ಬನನ್ನು ಮಹಾಮಾತ್ಯ ಪಟ್ಟಕ್ಕೇರಿಸಬೇಕು. ಉಪಧೆ ಅಥವಾ ಛಲಪ್ರಯೋಗವು ಅಂಥ ಪರೀಕ್ಷೆ. ಕರ್ಮಸಚಿವರ ಆಯ್ಕೆಗೂ ಈ ಪರೀಕ್ಷೆಗಳು ಅನ್ವಯಿಸುತ್ತವೆ.

ಪರೀಕ್ಷೆಗಳು: ಧರ್ಮೋಪಧೆ, ಅರ್ಥೋಪಧೆ, ಕಾಮೋಪಧೆ ಮತ್ತು ಭಯೋಪಧೆಗಳು; ಇವು ಶುದ್ಧಿ ಚತುಷ್ಟಯದ ಸಾಧನಗಳು. ದೂಷ್ಯವಾದ ಬಾಹ್ಯಕ್ಷೇತ್ರಗಳಲ್ಲೇ

ಚತುರ್ವಿಧ ಪರೀಕ್ಷೆಗಳನ್ನು ನಡೆಸಿ, ಬೇಹಿನವರ ಮೂಲಕ ಮಂತ್ರಿಗಳ ಶೀಲಶುದ್ಧಿಯನ್ನು ರಾಜ ತಿಳಿದುಕೊಳ್ಳಬೇಕು.

ಗೂಢಚಾರವರ್ಗ: ಕಾಪಟಿಕ, ಉದಾಸ್ಥಿತ, ಗೃಹಪತಿಕ, ವೈದೇಹಿಕ, ತಾಪಸ, ಸತ್ರಿ, ತೀಕ್ಷ್ಣ, ರಸದ ಮತ್ತು ಭಿಕ್ಷುಕಿಯರು ನವವರ್ಗೀಯ ಗೂಢಚಾರರು. ಮೊದಲಿನ ಐದು ವರ್ಗಗಳೊಡನೆ ರಾಜ್ಯವ್ಯವಹಾರ ನಡೆಯುವುದು ಮಂತ್ರಿಗಳ ಮೂಲಕ; ಕೊನೆಯ ನಾಲ್ಕು ವರ್ಗಗಳನ್ನು ಅಮಾತ್ಯಾದಿ ಮಹಾಧಿಕಾರಿಗಳ ಶೀಲಶೋಧಕ್ಕಾಗಿ ರಾಜನು ನೇರವಾಗಿ ತನ್ನ ಅಂಕೆಯಲ್ಲಿಟ್ಟುಕೊಳ್ಳಬೇಕು. ಮೊದಲಿನ ಐದು ವರ್ಗಗಳು ಸ್ಥಾಯಿಗಳು ಮತ್ತು ಎರಡನೆಯ ನಾಲ್ಕು ವರ್ಗಗಳು ಸಂಚಾರಿಗಳು. ಅಶುಭ ಸಂಭವಿಸಬಹುದಾದ ಜನದಟ್ಟಣೆಯ ಸ್ಥಳವು ಕಾಪಟಿಕ ವಾಸಸ್ಥಾನ; ವಸ್ತುಗಳ ಉತ್ಪಾದನೆ ಹೆಚ್ಚಾಗಿರುವ ದೊಡ್ಡ ವ್ಯಾಪಾರ ಸ್ಥಳವುಉದಾಸ್ಥಿತನ ನೆಲೆ. ಅಶುಭವನ್ನು ವರದಿ ಮಾಡುವುದು ಕಾಪಟಿಕನ ಕೆಲಸವಾದರೆ, ಪರರಾಜರ ರಹಸ್ಯಗಳನ್ನು ರಾಜನಿಗೆ ನಿವೇದಿಸುವುದು ಉದಾಸ್ಥಿತನ ಕರ್ತವ್ಯ. ದೊಡ್ಡ ಪ್ರಮಾಣದ ಕೃಷಿಕಾರ್ಯ ನಡೆಯುವ ಸ್ಥಳವು ಗೃಹಪತಿಕನು ನೆಲೆಸಿರಬೇಕಾದ ನಿಯತಸ್ಥಾನ; ಕೃಷಿ ವ್ಯವಹಾರದಲ್ಲಿ ರಾಜಪುರುಷರಿಂದ ಅಥವಾ ಪ್ರಜೆಗಳಿಂದ ನಡೆಯುವ ವಂಚನೆಗಳನ್ನು ಅವನು ವರದಿ ಮಾಡತಕ್ಕವ. ಅಧಿಕ ವಾಣಿಜ್ಯ ನಡೆಯುವ ಸ್ಥಳದಲ್ಲಿರುವ ಬೇಹುಗಾರ ವೈದೇಹಿಕ; ಅಲ್ಲಿ ನಡೆಯುವ ಅಧರ್ಮ ಕೃತ್ಯಗಳನ್ನು ವರದಿ ಮಾಡುವುದು ಆ ಬಡ ವ್ಯಾಪಾರಿಯ ಪಾಲಿನ ಕೆಲಸ. ತಾಪಸನು ನಗರದ ಸಮೀಪವಾಸಿ; ವೈದೇಹಿಕರು ಅವನ ಶಿಷ್ಯರು. ಪಟ್ಟಣಿಗರನ್ನಾಕರ್ಷಿಸಿ ಅವರ ವರ್ತನೆಗಳನ್ನು ಪರೀಕ್ಷಿಸಿ ಕಾಲಕಾಲಕ್ಕೆ ತಿಳಿಸುವುದು ಅವನ ಕರ್ತವ್ಯ. ಸಾಮುದ್ರಿಕಾದಿ ಶಾಸ್ತ್ರಗಳನ್ನು ಕಲಿಯುತ್ತಿರುವ ರಾಜರಕ್ಷಿತ ರಾಜಬಂಧುಗಳು ಸತ್ರಿಗಳು. ಕ್ರೂರ ಪ್ರಾಣಿಗಲೊಡನೆ ಹೋರಿ ತೋರಿಸಿ ಹಣ ಸಂಪಾದಿಸುವ ವೃತ್ತಿಯವರು ತೀಕ್ಷ್ಣರು. ರಸದರು ಆತತಾಯಿಗಳು ಮತ್ತು ಭಿಕ್ಷುಕಿಯರೆಂದರೆ ಗೌರವಾರ್ಹ ಪರಿವ್ರಾಜಿಕೆಯರು.

## ಅಷ್ಟಾದಶ ಕರ್ಮಸಚಿವರು:

ಮಂತ್ರಿ (ರಾಜಕಾರ್ಯ ಪ್ರವೀಣನಾದ ಮಹಾಸಚಿವ)
ಪುರೋಹಿತ (ರಾಜಗುರು ಅಥವಾ ರಾಜಗೃಹ ಧರ್ಮಾಧಿಕಾರಿ)
ಸೇನಾಪತಿ ( ಚತುರಂಗ ಬಲದ ಉಚ್ಚಾಧಿಕಾರಿ)
ಯುವರಾಜ (ರಾಜಪ್ರತಿನಿಧಿ)
ದ್ವಾರಪಾಲಕ (ಪಹರೆಗಾರ)
ಕಂಚುಕಿ (ರಾಣೀವಾಸದ ಮೇಲ್ವಿಚಾರಕ)

ಪ್ರಶಾಸ್ತ (ಕೋಟೆಯ ಮೇಲಧಿಕಾರಿ)
ಸಮಾಹರ್ತ (ಕಂದಾಯ ಸಚಿವ)
ಸನ್ನಿಧಾತ (ದ್ರವ್ಯ ಸಚಿವ)
ಪ್ರದೇಷ್ಟ (ಗೃಹಸಚಿವ)
ನಾಯಕ (ಉಪಸೇನಾಪತಿ)
ಪೌರ ವ್ಯಾವಹಾರಿಕ (ನ್ಯಾಯಸಚಿವ, ವಿಧಿಸಚಿವ) ಅಥವಾ ಪುರಪ್ರಾಡ್ವಿವಾಕ
ಕಾರ್ಮಾಂತಿಕ (ಖನಿಜ ಸಚಿವ)
ಮಂತ್ರಿಪರಿಷದಧ್ಯಕ್ಷ (ಸಭಾಪತಿ; ಸಭೆ ಕರೆವ ಉಚ್ಚಾಧಿಕಾರಿ)
ದಂಡಪಾಲ (ಉಪಸೇನಾಪತಿ)
ದುರ್ಗಪಾಲ (ಕೋಟೆಯ ಮಹಾಕಾವಲುಗಾರ)
ಅಂತಪಾಲ (ಸೀಮಾರಕ್ಷಕ)
ಆಟವಿಕ (ಅರಣ್ಯ ಸಚಿವ)

## ರಾಜನ ದೈನಂದಿನ ವೇಳಾಪತ್ರಿಕೆ:

ಹಗಲಿನ ಮೊದಲ ಭಾಗದಲ್ಲಿ ವಿದ್ಯಾರ್ಥಿಯಾದ ರಾಜನು ಆನೆ, ಕುದುರೆ, ರಥ, ಆಯುಧಗಳ ಕಸರತ್ತುಗಳನ್ನು ಮಾಡಬೇಕು; ಉತ್ತರ ಭಾಗದಲ್ಲಿ ಇತಿಹಾಸವನ್ನು ಕೇಳಬೇಕು; ಹಗಲಿನ ಮಧ್ಯಭಾಗದಲ್ಲಿ ಮತ್ತು ರಾತ್ರಿಯಲ್ಲಿ ಹೊಸ ವಿಷಯಗಳನ್ನು ಕೇಳಬೇಕು; ಕೇಳಿ ಮನನ ಮಾಡಬೇಕು, ಮನನವಾದದ್ದನ್ನು ನಿದಿಧ್ಯಾಸಿಸಲು ಮತ್ತೆ ಮತ್ತೆ ಕೇಳಬೇಕು.

ವಿದ್ಯಾರ್ಥಿದಶೆಯನ್ನು ಮುಗಿಸಿ ರಾಜ್ಯಾಧಿಕಾರವನ್ನು ವಹಿಸಿಕೊಂಡ ರಾಜನು ದಿನದ ೨೪ ತಾಸುಗಳನ್ನು ೧೬ ಭಾಗ ಮಾಡಿ–

ಹಗಲಿನ ಮೊದಲ ಭಾಗದಲ್ಲಿ ರಕ್ಷಣಾಶಾಖೆಯ ಕಾರ್ಯ ವೃತ್ತಾಂತವನ್ನೂ ಹಿಂದಿನ ದಿನದ ಆಯ–ವ್ಯಯಗಳ ಲೆಕ್ಕವನ್ನೂ ಕೇಳಬೇಕು; ಎರಡನೆಯ ಭಾಗದಲ್ಲಿ ಪೌರರೂ ಜಾನಪದ ಪ್ರಜೆಗಳೂ ತಂದ ಪ್ರಕರಣಗಳನ್ನು ಪರಿಶೀಲಿಸಬೇಕು; ಮೂರನೆಯ ಭಾಗದಲ್ಲಿ ಸ್ನಾನ–ಭೋಜನಗಳನ್ನು ಮುಗಿಸಿ ತನ್ನ ಮನೆತನದ ಸ್ವಾಧ್ಯಾಯದ ಪಾರಾಯಣವನ್ನು ಮಾಡಬೇಕು; ನಾಲ್ಕನೆಯ ಭಾಗದಲ್ಲಿ ಬಂಗಾರದ ರೂಪದಲ್ಲಿ ಕಂದಾಯವನ್ನು ಸ್ವೀಕರಿಸಬೇಕು ಮತ್ತು ಕರ್ಮಸಚಿವರಿಗೆ ಅವರ ಕರ್ತವ್ಯಗಳ ಬಗೆಗೆ ಆಜ್ಞೆ ಕೊಡಬೇಕು; ಆಯಾ ಕರ್ತವ್ಯಗಳಲ್ಲಿ ಅವರನ್ನು ನಿಯೋಜಿಸಬೇಕು; ಐದನೆಯ ಭಾಗದಲ್ಲಿ ಪತ್ರಮುಖೇನ ಮಂತ್ರಿಗಳೊಡನೆ ಮಂತ್ರಾಲೋಚನೆ ನಡೆಸಬೇಕು ಮತ್ತು ಗೂಢಚಾರರ ವರದಿಗಳನ್ನು ಕೇಳಬೇಕು; ಆರನೆಯ ಭಾಗದಲ್ಲಿ ಬೇಸರ ಪರಿಹಾರಕ್ಕಾಗಿ

ವಿಹರಿಸಬಹುದು ಅಥವಾ ಗುಪ್ತಾಲೋಚನೆಗಳನ್ನು ಮಾಡಬಹುದು; ಏಳನೆಯ ಭಾಗದಲ್ಲಿ ಚತುರಂಗ ಬಲವನ್ನು ಪ್ರತ್ಯವೇಕ್ಷಣ ಮಾಡಬೇಕು; ಎಂಟನೆಯ ಭಾಗದಲ್ಲಿ ಸೇನಾಪತಿಯೊಡನೆ ವಿಜಯ ಯಾತ್ರೆಗಳ ಬಗೆಗೆ ಸಮಾಲೋಚಿಸಬೇಕು; ಸಂಜೆ ಸಂಧ್ಯೋಪಾಸನೆಗೆ ತೆರಳಬೇಕು.

ರಾತ್ರಿಯ ಮೊದಲ ಭಾಗದಲ್ಲಿ ರಾಜನು ಗೂಢಚಾರರನ್ನು ಸಂದರ್ಶಿಸಬೇಕು; ಎರಡನೆಯ ಭಾಗದಲ್ಲಿ ಸ್ನಾನ–ಭೋಜನಗಳನ್ನು ತೀರಿಸಿ ವೇದಾಭ್ಯಾಸ ಮಾಡಬೇಕು; ಮೂರನೆಯ ಭಾಗದಲ್ಲಿ ಕಹಳೆ ಕೂಗಿದೊಡನೆ ಮಲಗುವ ಮನೆಗೆ ಹೋಗಬೇಕು; ನಾಲ್ಕು–ಐದನೆಯ ಭಾಗಗಳಲ್ಲಿ ರಾಜನು ನಿದ್ರೆ ಮಾಡಬೇಕು; ಆರನೆಯ ಭಾಗದಲ್ಲಿ ಕಹಳೆ ಕೂಗಿದ ಕೂಡಲೆ ಎದ್ದು ರಾಜಧರ್ಮಶಾಸ್ತ್ರವನ್ನವಲೋಕಿಸಿ (ಮರುದಿನದ) ರಾಜಕೀಯ ಕಾರ್ಯಕ್ರಮಗಳನ್ನು ರೂಪಿಸಬೇಕು; ಏಳನೆಯ ಭಾಗದಲ್ಲಿ ಅವನು ಗುಪ್ತಾಲೋಚನೆಗಳನ್ನು ನಡೆಸಿ ಗುಪ್ತಚಾರರನ್ನು ಆಯಾ ಸ್ಥಳಗಳಿಗೆ ಕಳಿಸಬೇಕು; ಎಂಟನೆಯ ಭಾಗದಲ್ಲಿ ಋತ್ವಿಗಾಚಾರ್ಯ ಪುರೋಹಿತರೊಡನೆ ಸ್ವಸ್ತ್ಯಯನಗಳನ್ನು ಕೇಳಿ ರಾಜವೈದ್ಯ ಪಾಕಶಾಲಾಧ್ಯಕ್ಷ ಮತ್ತು ರಾಜಜ್ಯೋತಿಷಿಗಳನ್ನು ನೋಡಬೇಕು; ಅನಂತರ ಕರುವಿನೊಡನಿರುವ ಹಸುವಿಗೆ ಪ್ರದಕ್ಷಿಣೆ ಹಾಕಿ ರಾಜಸಭಾಭವನಕ್ಕೆ ತೆರಳಬೇಕು.

* * * * *

# ಪರಿವಿಡಿ

# ಶಿವ ಪುರಾಣದ ಬಗ್ಗೆ..

ಬಿ.ಎಚ್. ಶ್ರೀಧರರು ೮೦ರ ದಶಕದಲ್ಲಿ ಧರ್ಮಸ್ಥಳದ 'ಮಂಜುವಾಣಿ' ಮಾಸಿಕ ಪತ್ರಿಕೆಗಾಗಿ ಸಂಪಾದಕರ ಕೋರಿಕೆಯಂತೆ ಡಾ. ಪುಷ್ಪೇಂದ್ರಕುಮಾರ್ ಸಂಪಾದಿಸಿದ 'ಶಿವ ಪುರಾಣ'ದ ಸಾರವನ್ನು ಬಹಳ ಉಚಿತವಾಗಿ ಅಂದವಾಗಿ ಟಿಪ್ಪಣಿಗಳು, ಮಹತ್ವದ ವಿವರಗಳೊಂದಿಗೆ ಸಾರ ರೂಪದಲ್ಲಿ ಲೇಖನಗಳನ್ನು ನೀಡಿದ್ದರು. ಅವು ೧೯೮೪ ರಿಂದ ೧೯೮೮ರವರೆಗೆ ಜನಪ್ರಿಯ ಧಾರಾವಾಹಿಯಾಗಿ ಪ್ರಕಟವಾಯ್ತು.

ಪುರಾಣಗಳು ಜನಸಾಮಾನ್ಯರ ಪವಿತ್ರ ಗ್ರಂಥಗಳು. ರಂಜನೆಯ ಜೊತೆಗೆ ತೇಲಿಸಿ, ಹಗುರಾಗಿಸಿ ಕಥೆಗಳ ಮೂಲಕ ವಿವೇಕ ಹಾಗೂ ತತ್ವಜ್ಞಾನವನ್ನು ಹೇಳುತ್ತವೆ. ಹಿಂದು ಜನಾಂಗದ ಜೀವನ ಕ್ರಮ, ತತ್ವ ಪರಂಪರೆಗಳ ಅಭ್ಯಾಸಕ್ಕೆ ಸಹಾಯಕವಾಗುತ್ತವೆ. ಇವುಗಳನ್ನು ಮಧ್ಯ ಯುಗದ ಹಿಂದೂ ಧರ್ಮದ ವಿಶ್ವಕೋಶಗಳೆನ್ನಬಹುದು. ಇವುಗಳ ಅಭ್ಯಾಸದಿಂದ ಅಂದಿನ ಜನಗಳ ಮನಸ್ಸು, ಹೃದಯ, ವಿಚಾರಗಳ ಪರಿಚಯವಾಗುತ್ತದೆ. ಪುರಾಣಗಳು ಭಾರತೀಯ ಸಾಹಿತ್ಯ, ಜಾನಪದ ಕಲೆ, ಶಿಲ್ಪಕಲೆ, ಸಮಾಜ ರಾಜಕೀಯ ಇವೆಲ್ಲವುಗಳ ಮೇಲೆ ಸಾವಿರಾರು ವರ್ಷಗಳಿಂದ ಗಾಢ ಪ್ರಭಾವ ಬೀರಿದ್ದನ್ನು ಕಾಣಬಹುದು. ಪುರಾಣಗಳು ಕಥೆಗಳ ಜೊತೆಗೆ ಸೃಷ್ಟಿಶಾಸ್ತ್ರ, ಭೂಗರ್ಭಶಾಸ್ತ್ರ, ಖಗೋಳಶಾಸ್ತ್ರ, ಶರೀರ ಶಾಸ್ತ್ರ, ಮತ್ತು ಔಷಧಶಾಸ್ತ್ರಗಳನ್ನು ಕಲಿಸುತ್ತವೆ. ಶಿವ, ಅಥವಾ ವಿಷ್ಣುವನ್ನು ವೈಭವೀಕರಿಸುತ್ತವೆ. ಜೊತೆಗೆ ಅದ್ಭುತ ಕಲ್ಪನಾ ಶಕ್ತಿಯನ್ನು ಬೆಳೆಸುತ್ತವೆ. ಒಂದೇ ದೇವರೇ ಬೇರೆ ಬೇರೆ ರೂಪದಲ್ಲಿರುವುದನ್ನು ಪುರಾಣಗಳು ಸಮರ್ಥಿಸುತ್ತವೆ. ಪುರಾಣಗಳು ಊರ್ಜಿತವಾದದ್ದು ೧೦ನೇ ಶತಮಾನದಲ್ಲಿ. ಒಂದೇ ದೈವದಿಂದ ಎಲ್ಲವೂ ನಡೆಯುವುದರ ಮೂಲಕ ಅದ್ವೈತವನ್ನೇ ಬೋಧಿಸುತ್ತವೆ, ತತ್ವಜ್ಞಾನದ ಮೊದಲ ಮೆಟ್ಟಿಲನ್ನು ಕಲಿಯಲು ಮನಸ್ಸನ್ನು ಹದಗೊಳಿಸುತ್ತವೆ. ಪುರಾಣದಲ್ಲಿ ಪೂಜಾ ವಿಧಿಗಳು, ಯಾತ್ರಾಸ್ಥಳ, ಪಾಪ–ಪುಣ್ಯ, ಗುರುಗಳು, ಬ್ರಾಹ್ಮಣರು ಮುಂತಾದ ಹಿಂದುಗಳಲ್ಲಿ ಜನಪ್ರಿಯವಾದ ವಿಷಯಗಳಿರುತ್ತವೆ. ಹೆಚ್ಚಾಗಿ ಶಿವ, ವಿಷ್ಣು, ದುರ್ಗೆಯರ ಆರಾಧನೆಗಳಿರುತ್ತವೆ, ಮುಕ್ತಿ ಹೊಂದುವುದನ್ನು ವರ್ಣಿಸುತ್ತವೆ.

ಶಿವ ಪುರಾಣವು ವಿಶ್ವಕೋಶ ಸದೃಶವಾಗಿದ್ದು ಜನಪ್ರಿಯವೂ ಹೌದು. ಪಾರ್ವತಿ, ಗಣೇಶ, ಸ್ಕಂದರ ಹುಟ್ಟಿನಿಂದಾರಂಭಿಸಿ ಮದುವೆಗಳನ್ನು ಬಣ್ಣಿಸುವ ಕಥೆಗಳಿವೆ. ಭಕ್ತಿಯಿಂದ ಮುಕ್ತಿ ಎಂಬುದನ್ನು ಶಿವಧ್ಯಾನದ ಮೂಲಕ ಶಿವನೇ ಆಗುವುದನ್ನು ಬಣ್ಣಿಸುತ್ತದೆ. ಮಾಯೆಯ ಅಶುದ್ಧತೆಯು ಶಿವನಿಂದ ನಿವಾರಣೆಯಾಗಿ ಪುರುಷ ಶಿವನೇ ಆಗುತ್ತಾನೆ ಮುಕ್ತನಾಗುತ್ತಾನೆ. ಶಿವನು ಅವತಾರಗಳನ್ನೆತ್ತಿ ದುಷ್ಟಸಂಹಾರ

ನಡೆಸುವುದು ಪುರಾಣ ಕಥೆಗಳಲ್ಲಿ ಸಾಮಾನ್ಯ, ಕಾಲದ ಮಹಾತ್ಮೆ, ಶಕ್ತಿಯ ಮಹಾತ್ಮೆಗಳನ್ನು ಬಣ್ಣಿಸಿವೆ. ಶಿವನು ಸತ್+ಚಿತ್+ಆನಂದ, ಉಮಾ ಆತನ ಶಕ್ತಿಯು. ಆಕೆಯ ಬಾಯಿಯಿಂದ "ನಾನು ಸರ್ವಶಕ್ತೆ, ನಾನು ರೂಪ ರಹಿತೆಯೂ ಆಗಬಲ್ಲೆ, ರೂಪವನ್ನೂ ತಾಳಬಲ್ಲೆ, ನನ್ನ ಗುಣಗಳು ವಿಚಾರವನ್ನೂ ಮೀರಿವೆ. ನಾನು ಸರ್ವಕಾಲಿಕ, ಕಾರ್ಯಕಾರಣ ಎಲ್ಲವೂ ನಾನೇ" ಎಂದು ಹೇಳಿಸಿರುವ ಮೂಲಕ, ಉದಾತ್ತ ವಿಚಾರಗಳನ್ನು ಕಥೆಗಳ ಮೂಲಕ ಹೇಳುವ 'ಶಿವ ಪುರಾಣ' ಕನ್ನಡಿಗರಿಗೆ ಶ್ರೀಧರರಿಂದ ಸಾರ್ಥಕವಾಗಿ ಸಮರ್ಪಿತವಾಗಿದೆ.

**–ರಾಜಶೇಖರ ಹೆಬ್ಬಾರ**

# ಪೀಠಿಕೆ

"ಶೇತೇ ಅಸ್ಮಿನ್ ಸರ್ವಂ=ಇವನಲ್ಲಿ ಎಲ್ಲವೂ ಇರುತ್ತವೆ" – ಆದುದರಿಂದ ಇವನಿಗೆ ಶಿವ (ಉಣಾದಿ ೧–೧೫೧, ಅಷ್ಟಾಧ್ಯಾಯ) ಎನ್ನುತ್ತಾರೆ. ಈ ಸರ್ವೇಶ್ವರನು (ಸರ್ವಾಶ್ರಯನು) ಶುಭಕರ, ಅನುಗ್ರಹದಾಯಕ, ಪ್ರಸನ್ನ, ಭಕ್ತಾನುಕೂಲ, ಉದಾರ, ದಯಾಮಯ, ಸ್ನೇಹಪರ, ಸುಪ್ರಿಯ, ಸುಖಿ, ಭಾಗ್ಯವಂತ, ಯೋಗಕ್ಷೇಮಕರ ಅಥವಾ ಈತನ ಸ್ವರೂಪವೇ ಯೋಗಕ್ಷೇಮ ಇಲ್ಲವೇ ಮುಕ್ತಿ, ಆತ್ಯಂತಿಕ ನಿತ್ಯಸುಖ, ಆನಂದ. ಈತನು ಸೃಷ್ಟಿ, ಸ್ಥಿತಿ, ಪ್ರಳಯಗಳ ಆದಿಕಾರಣ. ಇವನು ಅಷ್ಟ ಶರೀರ. – ಕಾಳಿದಾಸನ "ಶಾಕುಂತಲ"ದ ಆದಿಶ್ಲೋಕ. ಇವನು absolute ಸರ್ವತಂತ್ರ ಸ್ವತಂತ್ರನಾದ ನಿರಪೇಕ್ಷ ಶಕ್ತಿ ಸ್ವರೂಪನೆಂಬುದು ಇತಿಹಾಸ–ಪುರಾಣಗಳ ಹಾಗೂ ಕಾಳಿದಾಸಾದಿಗಳು ಬರೆದ ಮಹಾಕಾವ್ಯಗಳ ತಾತ್ಪರ್ಯ. ಈತನು ಕೇವಲ ಪ್ರಳಯಂಕರ ಎಂಬ ಭಾವನೆ ಅಳಿಯುತ್ತಾ ಹೋಯಿತು, ಶಿವನು ಪರಬ್ರಹ್ಮ ವಸ್ತುವೆಂದು ಪರಿಗಣಿತನಾದನು. ಇವನ ಲಯಕರ ಸ್ವರೂಪಕ್ಕೆ ಕಾಲ (ಕಪ್ಪು, ವೇಳೆ) ಎಂದು ಹೆಸರು. ಈ ಸ್ವರೂಪವನ್ನು ಕ್ರಮೇಣ ಅವನ ಅರ್ಧಾಂಗಿ "ಕಾಳಿ" ಎಂದು ಭಾವಿಸಲಾಯಿತು.

ಐತಿಹಾಸಿಕವಾಗಿ ಮಹಾಭಾರತದಲ್ಲಿ ಅರ್ಜುನನು "ಸ್ಥಂಡಿಲ" ಅಥವಾ ಮಣ್ಣಿನ ಹೆಂಟೆಯನ್ನು ಶಿವನ ಸಂಕೇತ (ಗುರುತು) ಎಂದು ಪೂಜಿಸಿದ ಉಲ್ಲೇಖವಿದೆ. (ಕಿರಾತಾರ್ಜುನೀಯ ಪ್ರಕರಣ.)

ಲಿಂಗವೆಂದರೇ ನಿರಾಕಾರದ ಚಿಹ್ನೆ. ಆದ್ದರಿಂದ ಒಂದು ಕಾಲದಲ್ಲಿ (ಮೂರ್ತಿಪೂಜೆ ಬಳಕೆಯಲ್ಲಿರದಿದ್ದಾಗ) ಲಿಂಗವು ಸರ್ವ ಪುಂ–ಸ್ತ್ರೀ ದೇವತೆಗಳ ಸಂಕೇತ (Symbol) ವಾಗಿದ್ದರೂ ಕ್ರಮೇಣ ಅದು ಶಿವನಿಗೆ ವಿಶಿಷ್ಟವೆಂಬುದು ಹೆಚ್ಚು ಪ್ರಸಿದ್ಧವಾಯಿತು. ಶಿಲ್ಪಶಾಸ್ತ್ರಾನುಸಾರವಾಗಿ ಪೀಠದ ಒಳಗಿರುವ ಲಿಂಗ ಭಾಗ ಬ್ರಹ್ಮ, ಮಧ್ಯಭಾಗ ವಿಷ್ಣು ಮತ್ತು ಮೇಲ್ಭಾಗ ರುದ್ರ ಎಂಬ ಕಲ್ಪನೆ ರೂಢವಾಯಿತು. ಪಾಶ್ಚಾತ್ಯರು ಲಿಂಗವೂ ಯೋನಿಯೂ ಜನನೇಂದ್ರಿಯಗಳೆಂದು ಹೇಳಿದ್ದನ್ನು ಯೋನಿ (ಪೀಠ)ಯಲ್ಲಿ ನೆಟ್ಟಿರುವ ಲಿಂಗದ ಊರ್ಧ್ವಮುಖತೆಯು ಅಲ್ಲಗಳೆಯುತ್ತದೆ. (source, origin; spring, fountain- ಆಕರ, ಜನ್ಮಸ್ಥಳ.) ಯೋನಿ ಎಂಬುದು ಸರ್ವಾಕರ (Source of Everything); ಸರ್ವಾಧಾರ. ಆದ್ದರಿಂದ ಶಿವ ಸಂಕೇತ (ಅಥವಾ ಸರ್ವದೇವ ಸಂಕೇತಗಳೂ ಮೂರ್ತಿಗಳೂ) ಯೋನಿಯ ಅಥವಾ ಪೀಠದ ಮೇಲೆಯೇ ಸ್ಥಾಪಿತವಾಗಿವೆ. ಪೀಠವಿಲ್ಲದ ದೇವತಾಮೂರ್ತಿಗಳೇ (ಶಿವೇತರವೆಂದು ಕೆಲವರು

ಭಾವಿಸಿದ್ದ ವಿಷ್ಣು, ಲಕ್ಷ್ಮಿ, ಬ್ರಹ್ಮ, ಸರಸ್ವತಿ, ಈಶ್ವರ, ಪಾರ್ವತಿ ಎಂಬ ಪುಂ–ಸ್ತ್ರೀ ದೇವತೆಗಳೇ) ಇಲ್ಲ. ಆದುದರಿಂದ ಲಿಂಗಪೂಜೆಯನ್ನು Phallus worship ಪುಂಜನನೇಂದ್ರಿಯ ಪೂಜೆಯೆಂದೂ ಯೋನಿಯನ್ನು (ಅಂಥದ್ದೆಲ್ಲಾದರೂ ಈ ದೇಶದಲ್ಲಿ ಇದ್ದರೆ) ಸ್ತ್ರೀ ಜನನೇಂದ್ರಿಯ ಪೂಜೆಯೆಂದೂ "ಸಂಶಯಿಸಲು" ಅಪಸಂಶೋಧನೆ ಮಾಡಿ ಹೇಳಲು ಸಾಧ್ಯವಿಲ್ಲ. ಶಿವನು ಸರ್ವ ದೇವತಾ ಪರ್ಯಾಯ. ಶಿವಲಿಂಗ (p 1074 Skt. Eng. Dict. by M.M.W:P. 858.)

ಮಣ್ಣುಗುಡ್ಡೆ ಯಾ ಮಣ್ಣುಂಡೆ, ಸಾಲಿಗ್ರಾಮ, ಲಿಂಗಗಳ ಕಾಲದ ಅನಂತರ ಕ್ರಿ.ಪೂ. ಸುಮಾರು ೩ನೆಯ ಶತಮಾನದಲ್ಲಿ ಅವುಗಳ ಜೊತೆಗೇ ಮೂರ್ತಿಪೂಜಾ ಕಲ್ಪನೆ ಮೂಡಿತು; ಯಜ್ಞಸಂಸ್ಥೆಗೆ ಪೂಜಾಸಂಸ್ಥೆ ಪರ್ಯಾಯವಾಯಿತು ಎಂಬುದು ಸುರೇಂದ್ರನಾಥ ದಾಸಗುಪ್ತ, ಸ್ಟೆಲ್ಲಾಕ್ರಮರಿಸ್ಕ್ ಮೊದಲಾದ ವಿದ್ವಾಂಸರ ಅಭಿಪ್ರಾಯ. ಮೃತ್ + ಶಿಲ್ಪ, ದಾರುಶಿಲ್ಪ, ಶಿಲಾಶಿಲ್ಪ, ಲೋಹ ಶಿಲ್ಪಗಳು ಪುರಾಣ ಪ್ರಭಾವದ ಅವಧಿ ಆರಂಭವಾದಂದಿನಿಂದ ಆರಂಭವಾದವು. ಎಲ್ಲ ಅಭಿವ್ಯಕ್ತಿಗಳಿಗೂ ಸಂಕೇತ, ಚಿಹ್ನ, ಗುರುತು, ಲಿಂಗ–ಎಂಬುದೇ ಮೂಲ. ಭಾಷಾಶಾಸ್ತ್ರದ ಚರಿತ್ರೆಯಲ್ಲಿ ಈ ಮಾತಿಗೆ ಉದಾಹರಣೆಗಳು ಹೇರಳವಾಗಿವೆ. ಚಿತ್ರ ಮುದ್ರಾಲಿಪಿ, ಇಂದಿನ ಅಕ್ಷರ ಲಿಪಿ ಮೊದಲಾದ ಎಲ್ಲ ಲಿಪಿಗಳೂ ಸಂಕೇತಾರ್ಥ ತಂತ್ರವನ್ನು ಆಧರಿಸಿವೆ. ಭಾರತದಲ್ಲಿ ಯಾವ ಜಡ ಪದಾರ್ಥವೂ ದೇವತ್ವ ಸಂಕೇತವಾಗಬಹುದು. ಆದ್ದರಿಂದ ಮಂಜುನಾಥ ಲಿಂಗ, ಮಧುಕೇಶ್ವರ ಲಿಂಗ, ಮಹಾಬಲೇಶ್ವರಲಿಂಗ ಮುಂತಾದ ಲಿಂಗಗಳು ಜಗತ್ತಿನ ನಿತ್ಯಸತ್ಯವೆಂಬ ದೇವರ ಗುರುತುಗಳು. ದೇಶಕಾಲ ಸಂಪ್ರದಾಯ ಪರಿವರ್ತನಗಳಿಂದ ಅವು ಹಿಂದೂ ತ್ರಿಮೂರ್ತಿಗಳಲ್ಲಿ ಒಂದಾದ ಈಶ್ವರನ ಪ್ರತಿನಿಧಿಗಳೆಂಬ ಅರ್ಥವನ್ನು ಪಡೆದುಕೊಂಡವು. ಈ ತ್ರಿಮೂರ್ತಿಗಳೂ ಮೂಲತಃ ಪರಬ್ರಹ್ಮ, ಪರಶಿವ, ಎಂದು ಆದಿಯಲ್ಲಿ ತಿಳಿದುಕೊಂಡ ಒಂದೇ ಒಂದಾದ ನಿತ್ಯಸತ್ಯದ ತ್ರಿಮುಖಗಳು. ಇವುಗಳಲ್ಲಿ ತಾರತಮ್ಯ ಮಾಡ ಹೋದ ಪಂಥಗಳ ಅಭಿಪ್ರಾಯಗಳು ಆಯಾ ಪಂಥದ ಮೂಲ ಪುರುಷರ ಸಮರ್ಥನಾಭಾಸವುಳ್ಳ, ಭಿನ್ನೋದ್ದೇಶ ಪ್ರೇರಿತವಾದ ಮತ್ತು ಕವಿ ಕಲ್ಪನಾವಿಲಾಸ ಜನ್ಯವಾದ ವ್ಯಾಖ್ಯೆಗಳು. "Religious Thought and Life in India" ಎಂಬ ಹೆಸರಿನಲ್ಲಿ ಮಹಾವಿದ್ವಾಂಸ ಎಂ.ಎಂ. ವಿಲಿಯಂಸ್ "ವೀರಭದ್ರ, ೮ ಜನ ಭೈರವರು, ಖಂಡೋಬಾ ಮುಂತಾದವರನ್ನು ಶಿವಸ್ವರೂಪರು (ಶಿವಾವತಾರಗಳು) ಎಂಬ ರೂಢಿಯಿದೆ" ಎನ್ನುತ್ತಾನೆ. ಈ ಶಿವನಿಗೆ ವಿಷ್ಣುವಿಗಿಂತ ಹೆಚ್ಚು ನಾಮಧೇಯಗಳಿವೆ. ಶಿವಪುರಾಣದ ೬೯ನೆಯ ಅಧ್ಯಾಯದಲ್ಲಿಯೂ ಮಹಾಭಾರತದ ಅನುಶಾಸನ ಪರ್ವದ ೧೭ನೆಯ ಅಧ್ಯಾಯದಲ್ಲಿಯೂ ಶಿವನನ್ನು ಮಹಾದೇವ, ಶಂಭು, ಶಂಕರ, ಈಶ, ಈಶ್ವರ, ಮಹೇಶ್ವರ, ಹರ ಎಂದು ಬಹಳ ಸಲ ಕರೆಯಲಾಗಿದೆ ಮತ್ತು ಕಾರ್ತಿಕೇಯನೂ ಗಣೇಶನೂ ಅವನ ಮಕ್ಕಳೆನ್ನಲಾಗಿದೆ. ಕೋಶಾಂತರದಲ್ಲಿ ಶಿವನನ್ನು "ವಿಷ್ಣು"ವೆಂದೂ ಕರೆಯಲಾಗಿದೆ. ಜೈನರ ಪ್ರಕಾರ ಕಳೆದು ಹೋದ ಉತ್ ಸರ್ಪಿಣಿಯಲ್ಲಿದ್ದ ೨೪

ಅರ್ಹತ್ತುಗಳ ಹೆಸರು "ಶಿವಗತಿ" ಎಂದಿದ್ದಾನೆ ಮೊನಿಯರ್ ಎಂ. ವಿಲಿಯಂಸ್.

ಪಾಶ್ಚಾತ್ಯರು ವರ್ಗೀಕರಿಸಿದ ಸತ್ಯ, ಸೌಂದರ್ಯ, ಸೌಜನ್ಯ ಮತ್ತು ಸದುಪಯೋಗ ಎಂಬ ಚತುರ್ವಿಧ ಪುರುಷಾರ್ಥಗಳಲ್ಲಿ ಶಿವತ್ವವು (ಸೌಜನ್ಯ, ಒಳಿತು, ಆತ್ಯಂತಿಕ ಸಾತ್ವಿಕತೆ) ಭಾರತೀಯ ಸಂಸ್ಕೃತಿಯಲ್ಲಿ ಪ್ರಧಾನ–ಅದೇ ಪರಮಸತ್ಯ. ಧರ್ಮಾರ್ಥಕಾಮಮೋಕ್ಷಗಳೆಂಬ ಭಾರತೀಯ ಪುರುಷಾರ್ಥಗಳಲ್ಲಿ ಧರ್ಮಾವಿನಾಭಾವಿಯಾದ ಮೋಕ್ಷವೆಂಬ ಆನಂದರಸ, ಆನಂದಾನುಭವ ಎಂಬುದು ಶಿವಪದದಿಂದ ಗಣ್ಯವಾಗಿ ಸೂಚಿತವಾಗುತ್ತದೆ. ಶಿವನು "ಅಟ್ಟಹಾಸ"ಕ್ಕೆ ಹೆಸರಾದುದು ಇದರಿಂದಲೇ ಎಂದು ತೋರುತ್ತದೆ. ಅವನ ಹೆಸರೇ ಅಟ್ಟಹಾಸ. (೧೧ನೆಯ ಪುಟ M.M. Williams ರ ಸಂಸ್ಕೃತ–ಇಂಗ್ಲೀಷ್ ಕೋಶ.)

ಪುರಾಣದ (ಹಳೆಗಾಲದ ಪರಂಪರಾಗತ ಚರಿತ್ರೆ ಅಥವಾ ವ್ಯಾಸಕೃತ ಅಷ್ಟಾದಶ ಪವಿತ್ರ ಗ್ರಂಥಗಳು. ಅವುಗಳನ್ನು ಮೂರು, ನಾಲ್ಕು ಅಥವಾ ಆರು ವಿಧದವುಗಳೆಂದು ವರ್ಗೀಕರಿಸುವುದುಂಟು.) ಮುಖ್ಯ ವಿಷಯಗಳೆಂದರೆ ಸರ್ಗ, ಪ್ರತಿಸರ್ಗ, ವಂಶ ಮತ್ತು ಮನ್ವಂತರ ಹಾಗೂ ವಂಶಾನುಚರಿತ; ಅಂದರೆ (೧) ಪ್ರಥಮ ಹಂತದ ಜಗತ್ ಸೃಷ್ಟಿ (ಭಾಗವತ ಪುರಾಣದಲ್ಲಿ ೯ ಭಿನ್ನ ಸೃಷ್ಟಿಗಳನ್ನು ಹೇಳಲಾಗಿದೆ); (೨) ದ್ವಿತೀಯ ಅಥವಾ ಗೌಣಸೃಷ್ಟಿ; (೩) ಅರಮನೆ–ಗುರುಮನೆಗಳ ವಂಶಾವಳಿ; (೪) ಮನ್ವಂತರ–೪೩,೨೦,೦೦೦ ವರ್ಷಗಳು; (೫) ಹಳೆ ಹೊಸ ಗಣ್ಯ ಮನೆತನಗಳ ಚರಿತ್ರೆ. ಪುರಾಣಗಳು ಐತಿಹ್ಯಗಳು (MYTHS AND LEGENDS) = ವ್ಯಾವಹಾರಿಕ, ಪ್ರಾತಿಭಾಸಿಕ ಮತ್ತು ಪಾರಮಾರ್ಥಿಕ ಎಂಬ ಸಂಗತಿಗಳ ಸಂಮಿಶ್ರಣ.

ಶಿವತಾಂಡವವೆಂಬ ನೃತ್ಯವು ಪ್ರಸಿದ್ಧ. ಅದು ಶಿವನೂ ಅವನ ಅನುಯಾಯಿಗಳೂ ಮಾಡುವ ದುರ್ಜನ ಭಯಂಕರವಾದ ಕುಣಿತ; ತಾಮಸರ ಸಂಹಾರವು ಪ್ರಳಯತಾಂಡವದಿಂದ ಆಗುತ್ತದೆ, ಅನಂತರ ಹೊಸಯುಗದ ಸೃಷ್ಟಿಯ ಆರಂಭ. ಅದರಿಂದ ಶಿವನು ನಾಟ್ಯದೇವತೆ ಎಂದು ಪ್ರಸಿದ್ಧನಾದನು, ನಟರಾಜನೆನ್ನಿಸಿದನು. ಮಂಜ್ ಎಂದರೆ ತೊಳೆದು ಸ್ವಚ್ಛ ಮಾಡು ಅಥವಾ ಹೊಳೆಯುತ್ತಿರು ಎಂದು ಅರ್ಥ. ಮಂಜು ಎಂದರೆ ಸುಂದರ ಯಾ ಮಧುರ ಎಂದರ್ಥ. ಮಂಜುನಾಥ = ಮಂಜುಶ್ರೀ. ಶ್ರೀ=ಅಭಿವೃದ್ಧಿ, ಸುದೈವ, ಜಯ, ಶುಭ, ಐಶ್ವರ್ಯ (ಈಶ್ವರತ್ವ), ಶಕ್ತಿ, ಗಾಂಭೀರ್ಯ, ಉನ್ನತಪದ, ವಿಷ್ಣುಪತ್ನಿ, ಸರಸ್ವತಿ, ಕಮಲ, ಬುದ್ಧಿ, ಒಂದು ಬೌದ್ಧದೇವತೆ, ೧೭ನೆಯ ಅರ್ಹತ್ (ಅರ್ಹತ್=ನಿರ್ವಾಣಾರ್ಹನಾದ ಒಬ್ಬ ಬುದ್ಧ; ಜೈನರ ಉಚ್ಚ ದೇವತೆ; ಹಾಗೇ ಅರ್ಹಂತನೆಂದರೆ ಒಬ್ಬ ಬುದ್ಧ ಯಾ ಬೌದ್ಧ ಭಿಕ್ಷು ಅಥವಾ ಶಿವ.) ಎಂಬುವನ ತಾಯಿ ಮತ್ತು ಪ್ರಕಾಶಪ್ರಸಾರಕ ಶಕ್ತಿ. ಮಂಜುನಾಥೇಶ್ವರನು ಈ ಎಲ್ಲ ಅರ್ಥಗಳನ್ನುಳ್ಳ ಶಿವ!

ಡಾ। ಪುಷ್ಪೇಂದ್ರ ಕುಮಾರರು ಸಂಪಾದಿಸಿದ (ಅಷ್ಟಾದಶ ಮಹಾಪುರಾಣಗಳಲ್ಲೊಂದಾದ) ಶಿವ ಪುರಾಣವು "ಶೈವ ತತ್ವಜ್ಞಾನ"ವನ್ನು ಹೇಳುತ್ತದೆ ಎಂದದ್ದು ಚಿಂತ್ಯ. ಶಿವಪುರಾಣವು Philosophy ಎನ್ನುವುದಕ್ಕಿಂತ Theology ದೇವತಾ ಶಾಸ್ತ್ರ ಎಂದು ಹೇಳುವುದು ಉಚಿತ. ಏಕೆಂದರೆ ಅದರ ತುಂಬಾ ಇರುವುದು ಶಿವ ಮಹಿಮೆಯೇ. ಶಿವನಿಲ್ಲಿ ಓಂಕಾರ ಅಥವಾ ನಿರ್ಗುಣನೂ ಹೌದು, ಸಗುಣನೂ ಹೌದು, ನಿರಾಕಾರನೂ ಹೌದು, ಸಾಕಾರನೂ ಹೌದು; ನಿರಾಕಾರಕ್ಕೆ ಲಿಂಗವು ಗುರುತು, ಸಾಕಾರಕ್ಕೆ ಅವನ ವಿಗ್ರಹವು ಗುರುತು, ಶಿಲ್ಪದಲ್ಲಿ ಪ್ರತ್ಯೇಕ ಲಿಂಗ, ಲಿಂಗಸ್ಥ ಪಂಚಮುಖ ಪರಮೇಶ್ವರ ಮತ್ತು ಪ್ರತ್ಯೇಕ ಉಮಾಮಹೇಶ್ವರರನ್ನು ಕಾಣಬಹುದು. ಉಮಾಮಹೇಶ್ವರನು ಅರ್ಧನಾರೀಶ್ವರ. ಗಣಪತಿ, ವೀರಭದ್ರ, ಸ್ಕಂದ, ನಂದಿ, ಭೃಂಗಿ, ಭೈರವ, ರುದ್ರ, ಚಂಡಿ (ದುರ್ಗೆ) ಮುಂತಾದವು ಈಶ್ವರಗಣಗಳು. ಇವೆಲ್ಲಾ ಮಹಾದೇವನ ವ್ಯಕ್ತ ಶಕ್ತಿಗಳು.

ಶಿವ= ಪರಬ್ರಹ್ಮ = ಪರಮಸತ್ಯ




ವಿಷ್ಣು ಶಿವನ ಸ್ಥಿತಿಪಾಲಕ ಶಕ್ತಿ, ಬ್ರಹ್ಮನು ಸೃಷ್ಟಿ ಶಕ್ತಿ ಮತ್ತು ರುದ್ರನು ಲಯಶಕ್ತಿ. ಇಂಥ ಅನುಕೂಲ ಸಿಂಧು ನ್ಯಾಯವು ಸಾಮಾನ್ಯನಿಗಾಗಿ. ಈ ದೃಷ್ಟಿಯಿಂದಲೇ ಕಾಳಿದಾಸನು ಭೂಮಿ, ತೇಜಸ್ಸು (ಅಗ್ನಿ), ಯಾಜ್ಞಿಕ (ಪೂಜಕ), ಸೂರ್ಯ, ಚಂದ್ರ, ಆಕಾಶ, ವಾಯು (ಪ್ರಾಣ), ಜಲತತ್ವ (ಕ್ರಿಯಾಶಕ್ತಿ) ಎಂದು ಶಿವನ ಅಷ್ಟಮೂರ್ತಿಗಳನ್ನು ಹೇಳಿದ್ದಾನೆ. ಈ ಸಚ್ಚಿದಾನಂದ ಶಿವನಿಗೆ ಭಗವದ್ಗೀತೆಯಲ್ಲಿ ಭೂಮಿ, ಆಪ (ಜಲ), ಅನಲ (ಅಗ್ನಿ) ವಾಯು, ಬಾನು, ಮನಸ್ತತ್ವ, ಬುದ್ಧಿ ಮತ್ತು ಅಹಂಕಾರ ಎಂಬವು ಅಷ್ಟಪ್ರಕೃತಿಗಳೆಂದು ಉಲ್ಲೇಖಿಸಲಾಗಿದೆ. ಗೀತಾನುಸಾರವಾಗಿ ಶ್ರೀ ಕೃಷ್ಣನೆಂಬುದು ಪರಬ್ರಹ್ಮ, ಸಚ್ಚಿದಾನಂದ.

ಶಂಭು, ಈಶ, ಪಶುಪತಿ, ಶಿವ, ಶೂಲಿ, ಮಹೇಶ್ವರ, ಈಶ್ವರ, ಶರ್ವ, ಈಶಾನ, ಶಂಕರ, ಚಂದ್ರಶೇಖರ, ಭೂತೇಶ, ಖಂಡಪರಶು, ಗಿರೀಶ, ಗಿರಿಶ, ಮೃಡ, ಮೃತ್ಯುಂಜಯ, ಕೃತ್ತಿವಾಸ, ಪಿನಾಕ, ಪ್ರಮಥಾಧಿಪ, ಉಗ್ರ, ಕಪರ್ದಿ, ಶ್ರೀಕಂಠ, ಶಿತಿಕಂಠ, ಕಪಾಲಧಾರಿ, ವಾಮದೇವ, ಮಹಾದೇವ, ವಿರೂಪಾಕ್ಷ, ತ್ರಿಲೋಚನ, ಕೃಶಾನುರೇತ, ಸರ್ವಜ್ಞ, ಧೂರ್ಜಟಿ, ನೀಲಲೋಹಿತ, ಹರ, ಸ್ಮರಹರ, ಭರ್ಗ, ತ್ರ್ಯಂಬಕ, ತ್ರಿಪುರಾಂತಕ, ಗಂಗಾಧರ, ಅಂಧಕರಿಪು, ಕ್ರತುಧ್ವಂಸಿ, ವೃಷಧ್ವಜ, ವ್ಯೋಮಕೇಶ, ಭವ, ಭೀಮ,

ಸ್ಥಾಣು, ರುದ್ರ, ಉಮಾಪತಿ, ಅಹಿರ್ಬುಧ್ನ್ಯ, ಅಷ್ಟಮೂರ್ತಿ, ಗಜಾರಿ, ಮಹಾನಟ ಎಂಬೀ ೫೨ ಶಿವನಾಮಗಳೆಂದು ಪ್ರಸಿದ್ಧವಾದ ಅಮರಕೋಶದಲ್ಲಿ ಸುಪ್ರಸಿದ್ಧ. ಪಂಚಾನನನೂ ಶಿವನೇ!

ಉಮೆ, ಕಾತ್ಯಾಯನಿ, ಗೌರಿ, ಕಾಲಿ, ಹೈಮವತಿ, ಈಶ್ವರಿ, ಶಿವೆ, ಭವಾನಿ, ರುದ್ರಾಣಿ, ಶರ್ವಾಣಿ, ಸರ್ವಮಂಗಲೆ, ಅಪರ್ಣೆ, ಪಾರ್ವತಿ, ದುರ್ಗೆ, ಮೃಡಾನಿ, ಚಂಡಿಕೆ, ಅಂಬಿಕೆ, ಆರ್ಯೆ, ದಾಕ್ಷಾಯಿಣಿ, ಗಿರಿಜೆ, ಮೇನಕಾತ್ಮಜೆ–ಎಂಬೀ ೨೧ ಶಿವಪತ್ನಿಯ (ಶಿವ ಶಕ್ತಿಯ) ಹೆಸರುಗಳು. ಸತಿ ಮತ್ತು ನಾರಾಯಣಿ ಎಂಬವೂ ಉಮಾ ಪರ್ಯಾಯಗಳು. ಶಿವಶಿವೆಯರು ಅಭಿನ್ನರು. ನಾಮ–ರೂಪಗಳು ವ್ಯಾವಹಾರಿಕರಾದ ಪಂಚೇಂದ್ರಿಯಾಧೀನ ಮನುಷ್ಯರ ಅಭಿರುಚಿಗೆ ಮಾತ್ರ; ದೇವನು (ದಿವ್=ಪ್ರಕಾಶಿಸು) ಪ್ರಕಾಶ ಶರೀರನು (ಶರೀರಮಾದಿತ್ಯ ಲೋಕೇ–ತರ್ಕಸಂಗ್ರಹ). ಪ್ರಕಾಶವು (LIGHT) ಪರಮಜ್ಞಾನದ ಸಂಕೇತ, ಪರಬ್ರಹ್ಮ ಸೂಚಕ.

ದೇವತಾ ಶಾಸ್ತ್ರವನ್ನು MYTHOLOGY=ನಡೆದುಬಂದ ದಿವ್ಯ ಕಥಾವಳಿ ಎಂದು ಹೇಳುವುದುಂಟು. ಏಕೆಂದರೆ ಅಧಿಷ್ಠಾನ (ಆಧಾರ), ಕರ್ಮ, ಕರಣ, ಚೇಷ್ಟೆ (ವಿಶಿಷ್ಟ ಚಟುವಟಿಕೆಗಳು) ಮತ್ತು ದೈವ (THE LAW OF DIVINE INTERFERENCE) ಎಂಬೀ ಐದು ಕಾರಣ ಸಾಮಗ್ರಿಗಳಲ್ಲಿ ಐದನೆಯದರ ಪ್ರಾಧಾನ್ಯವನ್ನು (ಮಹಿಮೆಯನ್ನು) ಎತ್ತಿ ಹೇಳುವುದು ಶಿವಾದಿ ಪುರಾಣಗಳ ಮುಖ್ಯ ಧ್ಯೇಯ, ಪುರಾಣಗಳಲ್ಲಿ ಐತಿಹ್ಯ ಅಂಶಗಳು (Semi-historical Elements) ಬರುವುದು ಸಹಜ.

ಗಯೆ ಯಾ ಪ್ರಯಾಗ ಯಾ ಅಲಹಾಬಾದ್ ಎಂಬ ಸ್ಥಳದಲ್ಲಿ ಸೂತನು ಮುನಿಗಳಿಗೆ ಶಿವ ಮಾಹಾತ್ಮ್ಯವನ್ನು ಸಿದ್ಧಮಾಡುವ ಕಥಾನಕಗಳನ್ನು ಇತರರಿಂದ ತಾನು ಕೇಳಿದ್ದೆಂದು ಹೇಳತೊಡಗಿದನು. ಮುನಿಗಳು ಅವನನ್ನು ಹೇಳಲು ಒತ್ತಾಯಿಸಿದ್ದು ಈ ಯುಗದ ಮೂಢ, ಮೂರ್ಖ ವರ್ಗಗಳು ವೇದೋಕ್ತ ಧರ್ಮಾಚಾರವನ್ನು ಬಿಟ್ಟಿರುವುದರಿಂದ, ಅವರಿಗೆ ಪಾಪಪರಿಹಾರ ಮತ್ತು ಸದ್ಗತಿಲಾಭಗಳಿಗೆ ವಿಕಲ್ಪ ಮಾರ್ಗವಾವುದೆಂದು ತಿಳಿದುಕೊಂಡು ತಿಳಿಸುವುದಕ್ಕಾಗಿ. ಅವರು ಕೊಟ್ಟ ದುರಾಚಾರ (ಭ್ರಷ್ಟಾಚಾರ) ವರ್ಗ ಹೀಗಿದೆ: ನಾಸ್ತಿಕತೆ, ಪಶುವರ್ತನೆ, ಮಾತಾಪಿತೃದ್ವೇಷ, ಸ್ತ್ರೀಮಾಂಸಾರಾಧನೆ (sex worship) ಪರಸ್ವಾಪಹಾರ, ವಿದ್ಯಾವಿಕ್ರಯ, ನಿರ್ದಯತ್ವ, ಪಂಡಿತಂಮನ್ಯತೆ, ಬೇಶಿಸ್ತು, ಕೊಳಕು ಆಸೆಗಳನ್ನು ತಾಳಿರುವುದು, ದುರ್ಜನ ಸಹವಾಸ, ವ್ಯಭಿಚಾರ, ಹೇಡಿತನ, ಹೊಣೆಗೇಡಿತನ, ಢಕಾಯತಿ, ಸ್ವಪರರಕ್ಷಣೆ ಮಾಡಲಾಗದಿರುವ ದೌರ್ಬಲ್ಯ, ಸತ್ಪ್ರಜಾ ತಿರಸ್ಕಾರ, ಸ್ವಚ್ಛಂದ ಭೋಗ, ಜೀವಹಿಂಸೆ, ವ್ಯಾಪಾರದಲ್ಲಿ ವಂಚನೆ, ಗುರು–ಹಿರಿಯರಲ್ಲಿ (ಅನುಭವ ವಿವೇಕವುಳ್ಳವರ ಬಗ್ಗೆ) ಅನಾದರ, ಕಾಸುಗಳ್ಳತನ, ವಿಟ–ವಿಟೀ ಪುರಸ್ಕಾರ, ಲೋಕಹಿತ ವಿಮುಖತೆ, ಕುಲಕಸುಬುಗಳನ್ನು ಬಿಟ್ಟು ಪರಕುಲಕಸುಬುಗಳ ಬೆನ್ನು ಹತ್ತಿ ಅದರಲ್ಲಿ ಪ್ರಾವೀಣ್ಯ ಪಡೆಯಲಾರದೆ ಲಂಚ

ವಂಚನೆಗಿಳಿದು ಹಣಗಳಿಸುವುದು, ಮಕ್ಕಳು ಬೇಗ ಸಾಯುವಂಥ ಗೃಹಸ್ಥ ನಡವಳಿಕೆ ಇಟ್ಟುಕೊಳ್ಳುವುದು ವ್ಯವಹಾರ ಮಾಡುವುದು; ಹಣದಾಸೆಗಾಗಿ ಹರಕೆ ಹಾಡಿ ಹೊತ್ತು ತಿರುಗುವುದು, ಸುಸಂಸ್ಕೃತರನ್ನು ನಿಂದಿಸುವುದು; ಸ್ತ್ರೀಯರನ್ನು ದುರ್ಮಾರ್ಗಕ್ಕೆ ತಿರುಗಿಸುವುದು, ದುಷ್ಕರ್ಮನಿರತ ಶ್ರೀಮಂತಿಕೆ, ಬುದ್ಧಿಜೀವಿಗಳು ಅಸಂಸ್ಕೃತ ಆಚಾರ, ವಿಚಾರ, ಉಚ್ಚಾರಗಳಲ್ಲಿ ತೊಡಗುವುದು; ಹೇಳುವುದು ಶಾಸ್ತ್ರವನ್ನು ಹಾಕುವುದು ಗಾಳವನ್ನು; ಅಜ್ಞಾನವನ್ನು ವಿಜ್ಞಾನವೆಂದು ಓದುವುದು ಮತ್ತು ಓದಿಸುವುದು. ಈ ಭ್ರಷ್ಟಾಚಾರಗಳನ್ನು ಬಿಡಿಸಲು ಶಿವಮಾಹಾತ್ಮ್ಯದ ಶ್ರವಣ, ಮನನ, ನಿದಿ ಧ್ಯಾಸಗಳನ್ನು ರೂಢಿಗೆ ತರುವುದೊಂದೇ ಉಪಾಯ. ಏಕೆಂದರೆ ಶಿಷ್ಟರಕ್ಷಣ–ದುಷ್ಟದಂಡನ ಎಂಬುದೇ ಶಿವಮಾಹಾತ್ಮ್ಯ ಸಾರ; ಅದೇ ನಿಜವಾದ ಪರೋಪಕಾರ. ಅದರಿಂದಲೇ ಪುರುಷಾರ್ಥಗಳ ಸಿದ್ಧಿಯು ಅಬಾಧಿತ. ಅದರಲ್ಲಿ ಕ್ರಮವಿಕಾಸದ ಮಾರ್ಗದ ಪ್ರಕಾರ ಶಿವೈಕ್ಯ ಸಿದ್ಧಿಯು ಪರಮಾರ್ಥ, ಜೀವನ್ಮುಕ್ತತೆ (Ideal Manhood or Godliness) ಅಥವಾ ದೇವಮಾನವತೆ.

ಸತ್ ಪ್ರಜಾತ್ವಸಿದ್ಧಿಗೆ ಶಿವಾಚಾರವೇ ಸಾಧನ. ಶಿವಾಚಾರವು ಸತ್ಕರ್ಮ. ಸತ್ಕರ್ಮಿಯಾದ ಸಾಧಕನು ಪ್ರತಿದಿನವೂ ಯಥಾಶಕ್ತಿ ಶಿವಮಾಹಾತ್ಮ್ಯ ಪಾರಾಯಣವನ್ನಿಟ್ಟುಕೊಳ್ಳಬೇಕು. ಸಮಾಹಿತತ್ವವು, ಸಮಾಧಾನವು (ಮನಃಸ್ಥಿರತೆ) ಸಾಧಕನ (ಭಕ್ತನ) ಪ್ರಥಮ ಲಕ್ಷಣ. ಅದೇ ಧ್ಯೇಯನಾದ ಶಿವನಲ್ಲಿ ನಿಷ್ಠೆ. ಶಿವನು ಸರ್ವಸಜ್ಜನ ಹಿತದ ಸಂಕೇತ. ಪ್ರಿಯವು ತಾತ್ಕಾಲಿಕ ಸಂತೋಷಕರವಾದ ಕಾರ್ಯ; ಹಿತವು ಸಾರ್ವಕಾಲಿಕ ಯಾ ಸುದೀರ್ಘಕಾಲಿಕ ಸಂತೋಷ, ಸುಖ, ಅನುಕೂಲವೇದನೆ. ಅದು ಧರ್ಮ್ಯ; ಧರ್ಮಾವಿರುದ್ಧ ಪ್ರಿಯವೂ ಹಾಗೇ. ಧರ್ಮವು ನ್ಯಾಯ; ತನಗೆ ಯಾವುದು ಬೇಕೆನ್ನಿಸುವುದೋ ಅದೆಲ್ಲಾ ಪರನಿಗೂ ತತ್ತದ್ಯೋಗ್ಯತಾನುಸಾರ ದೊರಕುವಂತೆ ಪ್ರಯತ್ನಿಸುವುದು–ಎಂಬುದು ಸೂತನ ಗುರು ವ್ಯಾಸನ ತಾತ್ಪರ್ಯ. ಸಮಾಧಾನಕ್ಕೆ ಚಿತ್ತಶುದ್ಧಿಯು ಆಧಾರ. ಚಿತ್ತದ ಕೊಳೆಗಳೆಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯ.

ಶಿವನಿಷ್ಠೆಯ ಸದಾಚಾರದಿಂದ ಗತಪಾಪಗಳು ನಶಿಸಿ ಹೋಗುತ್ತವೆ; ಹೊಸಪಾಪ ಕರ್ಮಗಳಲ್ಲಿ ಸಾಧಕನಿಗೆ ಅಭಿರುಚಿಯುಂಟಾಗದು. ಪಾಪವು ಅಧರ್ಮ, ಅನ್ಯಾಯ; ಶಿಷ್ಟರಿಗೆ ಕೊಡುವ ಹಿಂಸೆ. ನಿಷ್ಠೆಗೆ ಚತುರ್ದಶಿಯ ದಿನದಂದು ಉಪವಾಸ ಮಾಡುವುದು ಪ್ರೇರಕ. ಉಪವಾಸವು ಅಕ್ಷರಶಃ ನಿರಾಹಾರ. ರಾಮಾಯಣದಷ್ಟೇ ಶ್ಲೋಕಗಳಲ್ಲಿ ವ್ಯಾಸರು ಶಿವಪುರಾಣವನ್ನು ಭಟ್ಟಿ ಇಳಿಸಿದರಂತೆ. ಇದು ಸಂಮಿತ (Summary). ಇಂಥ ೭ ಸಂಮಿತಗಳು ಇಲ್ಲಿವೆ. ಋಗ್ವೇದದಿಂದ ಹಿಡಿದು ಉಪನಿಷತ್ತುಗಳವರೆಗಿನ ಶ್ರುತಿಗ್ರಂಥಗಳಿಗಿದು ಪರ್ಯಾಯ. ಇಲ್ಲಿ ಬಿತ್ತರಿಸಿರುವುದು "ವಿಕೈತವ=ಮೋಸವಿಲ್ಲದ" ಧರ್ಮ; ಸಮ್ಯಗ್ ಜೀವನ ವ್ಯವಸ್ಥಾಪಕ ಸಂಹಿತೆ.

–೧–

# ಬ್ರಹ್ಮ–ವಿಷ್ಣು ವಿವಾದ ಪರಿಹಾರ

“ದೇವರು ತನ್ನಂತೆಯೇ ಮಾನವನನ್ನು ಸೃಷ್ಟಿಸಿದರೆ ಮಾನವನು ತನ್ನ ಹಾಗೇ ದೇವರನ್ನು ಕಲ್ಪಿಸಿಕೊಂಡನು” ಎಂಬ ಗಾದೆಯ ಸತ್ಯವನ್ನು ಶಿವಪುರಾಣವು ಸಾರುತ್ತದೆ. ಹೇಗೆ? ಬ್ರಹ್ಮ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳನ್ನು ಮೀರಿದ ಶಿವನು ಕಲ್ಪನಾತೀತನು. ಆದುದರಿಂದ ಅವನಿಗೆ ಬೇಕಾದ ನಾಮರೂಪಗಳನ್ನು ಹೊತ್ತು ಅವತರಿಸುವ ಶಕ್ತಿಯನ್ನು ಆಧಾರವನ್ನಾಗಿ ತೆಗೆದುಕೊಂಡು ತ್ರಿಮೂರ್ತಿಗಳನ್ನು ಮಾನವನು ಕಲ್ಪಿಸಿದನು. ಅವರಲ್ಲಿ ರುದ್ರನು ಶಿವನ ನೇರವಾದ ಅವತಾರವೆಂದು ಬದಿಗಿಟ್ಟು, ಈ ಪುರಾಣವು ಮಾನವ ಸಹಜವಾದ ಸ್ಪರ್ಧಾಲುತ್ವವನ್ನು ಬ್ರಹ್ಮ–ವಿಷ್ಣುಗಳಲ್ಲಿ ಕಾಣುತ್ತದೆ. ಸರ್ವ ಪದಾರ್ಥಗಳ ಸೃಷ್ಟಿ ತನ್ನಿಂದಾದುದರಿಂದ ತಾನು ವಿಷ್ಣುವಿನ ತಂದೆಯೆಂದರೆ, ವಿಷ್ಣುವು ತನ್ನ ನಾಭಿ ಕಮಲದಲ್ಲಿ ಬ್ರಹ್ಮ ಹುಟ್ಟಿದ್ದರಿಂದ ತಾನೇ ಬ್ರಹ್ಮನ ತಂದೆ ಎಂದು ಹೇಳಿದನು. ವಿಷ್ಣುವು ಬ್ರಹ್ಮನ ತಂದೆ ಎಂದದ್ದು ಹರಿಪ್ರಧಾನ ಭಾವನೆಯ ವೈಷ್ಣವರು. ಬ್ರಹ್ಮನು ವಿಷ್ಣುವಿನ ತಂದೆ ಎಂದದ್ದು ಬ್ರಹ್ಮ ಪ್ರಧಾನ ಭಾವನೆಯ ಬ್ರಾಹ್ಮಣರು. ತಂದೆಯು ಮಗನಿಗಿಂತ ಶ್ರೇಷ್ಠ ಎಂಬ ಸಾಮಾನ್ಯ ನಂಬಿಕೆಯನ್ನಾಧರಿಸಿ ಬ್ರಹ್ಮ ವಿಷ್ಣುಗಳು ಜಗಳಕ್ಕಾರಂಭಿಸಿದರಂತೆ! ಜಗಳ ಹೋಗಿ ಮಹಾ ದ್ವಂದ್ವ ಯುದ್ಧವಾಯಿತು. ಆ ಯುದ್ಧವು ದೇವತೆಗಳಿಗೆ “ಯುದ್ಧಸ್ಯ ದೃಶ್ಯಂ ರಮ್ಯಂ ಭಯಂಕರಂ ಚ” ಎನ್ನಿಸಿತು. ಬ್ರಹ್ಮನ ಮೇಲೆ ಗರುಡ ವಾಹನ ವಿಷ್ಣುವು ಮಾಹೇಶ್ವರಾಸ್ತ್ರವನ್ನು ಬಿಟ್ಟರೆ, ವಿಷ್ಣುವಿನ ಮೇಲೆ ಹಂಸವಾಹನ ಬ್ರಹ್ಮನು ಪಾಶುಪತಾಸ್ತ್ರವನ್ನು ಬಿಟ್ಟನು. ಈ ಅಸ್ತ್ರಗಳು ಜಗತ್ ಪ್ರಳಯಕಾರಕಗಳು. ಇವನ್ನು ಇಂದು ಪರಮಾಣು ಬಾಂಬು, ನೈಟ್ರೋಜನ್ ಬಾಂಬು ಮುಂತಾದ ಮಹಾ ಮಾರಕಾಸ್ತ್ರಗಳಿಗೆ ಹೋಲಿಸಬಹುದು. ಜಗತ್ತಿನಲ್ಲಿ ಝುಂಝಾವಾತವೆದ್ದಿತು. ಪ್ರಳಯವಾದೀತೆಂದು ದೇವತೆಗಳು ವಿಷಣ್ಣರಾದರು. ಅನಂತರ ಅಂಥ ಸಂಭವವನ್ನು ತಪ್ಪಿಸಲು ಅವರು ಚಂದ್ರಶೇಖರನಾದ ಶಿವನಿದ್ದ ಕೈಲಾಸಕ್ಕೆ ಧಾವಿಸಿದರು. ಆ ಚಂದ್ರಶೇಖರನು ಓಂಕಾರ ಸ್ವರೂಪದಲ್ಲಿದ್ದನು. ಅವನಿಗವರು ನಮಸ್ಕಾರ ಮಾಡಿದರು. ಆಗ ಮಣಿಮಂಟಪದಲ್ಲಿ ಉಮೆಯೊಡನೆ ಒಡ್ಡೋಲಗ ನಡೆಯಿಸುತ್ತಿದ್ದ ಶಿವನು ತನ್ನ ಗಣಗಳ ಮೂಲಕ ಹತ್ತಿರಕ್ಕೆ ಕರೆಯಿಸಿಕೊಂಡು ದೇವತೆಗಳನ್ನು ಕುರಿತು–

"ನನ್ನ ಆಜ್ಞೆಯಂತೆ ನೀವೆಲ್ಲರೂ ಸುಖವಾಗಿದ್ದೀರಾ? ಜಗತ್ತೂ ದೇವ ವಂಶೀಯರೂ ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದಾರೆಯೇ? ಬ್ರಹ್ಮ–ವಿಷ್ಣುಗಳು ಯುದ್ಧ ಮಾಡುತ್ತಿರುವುದು ನನಗೆ ಮೊದಲೇ ಗೊತ್ತಾಗಿತ್ತು. ನಿಮ್ಮ ಅಭಿತಾಪವೀಗ ಅದನ್ನು ಪುನಃ ನನಗೆ ನೆನಪು ಮಾಡಿಕೊಡುತ್ತಿದೆ"–ಹೇಳಿದನು. ಅನಂತರ ಅವನು ರಣರಂಗಕ್ಕೆ ನೂರು ಜನ ಗಣೇಶರನ್ನು ಕಳುಹಿಸಿದನು. ನಾನಾರಣ ವಾದ್ಯಗಳು ಮೊಳಗಿದವು. ಗಣನಾಯಕರು ನಾನಾ ವೇಷ, ಭೂಷೆ ವಾಹನಗಳಿಂದ ಸಾಗಿದರು. ಅಂಬಿಕಾಪತಿಯಾದ ಈಶ್ವರನು ಪಂಚಮಂಡಲ ಮಂಡಿತವಾದ ಆದ್ಯ ಪ್ರಣವ ಸ್ವರೂಪದ ತೇರನ್ನೇರಿ ಹೊರಟನು. ದೇವತೆಗಳೆಲ್ಲಾ ಹಿಂಬಾಲಿಸಿದರು. ಈಶ್ವರ–ಪಾರ್ವತಿಯರ ಮಹಾಸೇನೆಯಲ್ಲಿ ಚಿತ್ರ–ವಿಚಿತ್ರವಾದ ಧ್ವಜಗಳು, ಬೀಸಣಿಗೆಗಳು, ಚಾಮರಗಳು, ಹೂಮಳೆ ಮತ್ತು ದಿವ್ಯನರ್ತಕರು ಕಂಡುಬಂದರು. ಮೋಡಗಳ ಮರೆಯಲ್ಲಿದ್ದು ವಿಧಿ–ಹರಿಗಳ ಯುದ್ಧವನ್ನು ನೋಡಿರಿ ಎಂದು ಶಿವನು ಗಣ ದೇವತೆಗಳಿಗೆ ಹೇಳಿದನು. ಆಗ ವಾದ್ಯಗಳನ್ನು ನಿಲ್ಲಿಸಲಾಯಿತು: ಗಣನಾಯಕರೂ ಗಣಾನುಯಾಯಿಗಳೂ ಸದ್ದು ಮಾಡದೆ ನಿಂತರು. ವೀರರಾದ ಬ್ರಹ್ಮನೂ ಅಚ್ಯುತನೂ ಪರಸ್ಪರರನ್ನು ಕೊಲ್ಲಲು ಬಯಸಿ ಪಾಶುಪತ–ಮಾಹೇಶ್ವರಾಸ್ತ್ರಗಳನ್ನು ಬಿಟ್ಟಿದ್ದನ್ನು ಎಲ್ಲರೂ ನೋಡಿದರು. ಅಸ್ತ್ರಜ್ವಾಲೆಯಿಂದ ಬ್ರಹ್ಮ ವಿಷ್ಣುಗಳ ಜಗತ್ರಯವು ಸುಟ್ಟು ಹೋಯಿತು. ಅದನ್ನು ನೋಡಿದ ಶಿವನು "ಇದು ಅಕಾಲ ಪ್ರಲಯ" ಎಂದು ತಿಳಿದು ತಾನು ಹೆಗ್ಗಿಚ್ಚಿನ ಭಯಂಕರವಾದ ಒಂದು ಕಂಬದ ರೂಪವನ್ನು ತಾಳಿ (ನಿಷ್ಕಲತ್ವ ಬಿಟ್ಟು ಸಕಲತ್ವವನ್ನು ತಾಳಿ) ಅವರಿಬ್ಬರ ನಡುವೆ ನಿಂತು ಬಿಟ್ಟನು! ಆ ಕ್ಷಣದಲ್ಲಿ ಅವರು ಬಿಟ್ಟಿದ್ದ ಪಾಶುಪಾತ–ಮಾಹೇಶ್ವರಾಸ್ತ್ರಗಳು ತಣ್ಣಗಾಗಿ ನೆಲಕ್ಕುರುಳಿ ದಳ್ಳುರಿಯಲ್ಲಿ ಬಿದ್ದವು. ಅಣ್ವಸ್ತ್ರ ಸ್ಫೋಟನ ನಿರೋಧದ ಪ್ರತ್ಯಸ್ತ್ರ ಬಿಟ್ಟಂತಾಯಿತೆನ್ನಬಹುದು. ಈಶ್ವರನ ಆ ಮಹಾಜ್ವಾಲಾ ಸ್ತಂಭ ಸ್ವರೂಪವು ಶಾಂತಿ ಸ್ಥಾಪನೆ ಮಾಡಿದ್ದು ಅತ್ಯಾಶ್ಚರ್ಯಕರವೂ ಮಂಗಲಕರವೂ ಆಗಿ ತೋರಿತು. "ಇದೆಂಥಾ ಅದ್ಭುತಾಕಾರ?" ಎಂದು ಹರಿ–ವಿಧಿಗಳು ಪರಸ್ಪರ ನೋಡಿ ಕಣ್ಣು ಕಣ್ಣು ಬಿಟ್ಟರು! "ಈ ಸ್ತಂಭವು ಅತೀಂದ್ರಿಯ; ಅಗ್ನಿರೂಪದ ಇದು ಏಕೆ ಎದ್ದು ನಿಂತಿತು? ಇದರ ತುದಿ–ಬುಡಗಳನ್ನು ನಾವು ನೋಡಲೇಬೇಕು" ಎಂದು ಆ ವೀರರು ತಾವು ವೀರರೆಂದು ತಮ್ಮಷ್ಟಕ್ಕೇ ತಿಳಿದುಕೊಂಡು ವಿಷ್ಣುವು ವರಾಹ ರೂಪದಿಂದ ಅದರ ತಳವನ್ನೂ ಹಂಸರೂಪತಾಳಿ ಬ್ರಹ್ಮನು ಅದರ ತುದಿಯನ್ನೂ ಸಂಶೋಧಿಸಲೆಂದು ಹೊರಟರು.

ಪಾತಾಳ ಲೋಕವನ್ನೊಡೆದು ಒಳಹೊಕ್ಕು ಹಂದಿಯ ರೂಪದ ಹರಿಯು ಆ ಮಹಾಸ್ತಂಭದ ನೆಲೆಯನ್ನು ಕಾಣಲಾರದೆ ಸುಸ್ತಾಗಿ ರಣಾಂಗಣಕ್ಕೆ ಹಿಂದಿರುಗಿದನು. ಆಕಾಶದಲ್ಲಿ ಹಂಸರೂಪದಿಂದ ಮೇಲೆ ಮೇಲೆ ಹಾರಿಹೋಗುತ್ತಿದ್ದ ಶಾರದಾ ಪತಿಯು ಸ್ವಲ್ಪ ವಿಚ್ಯುತವಾಗಿ ಬೀಳುತ್ತಿದ್ದ ಅದ್ಭುತವಾದ ಕೇದಿಗೆಯೊಂದನ್ನು ಕಂಡನು. ಆ ಕೇದಿಗೆ ಅತಿ ಪರಿಮಳವುಳ್ಳದ್ದೂ ಬಾಡದೆ ಪ್ರಫುಲ್ಲವಾಗಿಯೂ ಇತ್ತು. ಈ ಎಲ್ಲ

ಸಂಗತಿಗಳನ್ನು ಪರಮೇಶ್ವರನು ನೋಡುತ್ತಲೇ ಇದ್ದನು. ಪರಿಹಾಸಮಾಡಿದನು. ಅದರಿಂದ ಕಂಪಿತವಾದ ಅವನ ತಲೆಯು ಅಲ್ಲಾಡಿತು. ಅದು ಶಂಕರನ ಲೀಲೆ. ರಮಾಕಾಂತನನ್ನೂ ಸರಸ್ವತೀಕಾಂತನನ್ನು ಅನುಗ್ರಹಿಸಲೆಂದೇ ಆ ಅನುತ್ತಮವಾದ ಕೇದಿಗೆಯನ್ನವನು ಬೀಳಿಸಿದ್ದು. "ಎಲೈ ಹೂವಿನರಸ, ನೀನೇಕೆ ಬೀಳುತ್ತಿದ್ದೀಯೆ? ಯಾರು ನಿನ್ನನ್ನು ಧರಿಸಿದ್ದರು?" ಎಂದು ಬ್ರಹ್ಮಕೇಳಿದಾಗ "ನಾನು ಬೀಳುತ್ತಿರುವುದು ಆದಿಯ ಅಪ್ರಮೇಯವಾದ ಕಂಬದ ನಡುವಿನಿಂದ; ಆದುದರಿಂದ ನಾನು ಅದನ್ನು ನೋಡಲಾರದಾಗಿದ್ದೇನೆ. ನೀನೂ ಅದರ ತುದಿಯನ್ನು ನೋಡುವ ಆಶೆಯನ್ನು ಬಿಡು"–ಎಂದು ಕೇದಿಗೆ ಹೇಳಿತು.

ಆಗ ಬ್ರಹ್ಮನು, "ತಾನು ಅದರ ತುದಿಯನ್ನು ಸೇವಿಸಲೆಂದೇ ಬಂದವನು; ಹಂಸ ರೂಪ ತಾಳಿದ್ದು ಅದಕ್ಕಾಗಿಯೇ. ಆದುದರಿಂದ ಎಲೈ ಗೆಳೆಯನೇ. ನೀನೀಗ ನನಗೊಂದು ಉಪಕಾರ ಮಾಡಬೇಕು. ಅದೇನೆಂದರೆ, ನನ್ನೊಡನೆ ಹರಿಯಿರುವೆಡೆಗೆ ಹೋಗಿ ನೀನು "ಕಂಬದ ತುದಿಯನ್ನು ಬ್ರಹ್ಮನು ನೋಡಿದನು. ಅದಕ್ಕೆ ಅಚ್ಯುತನೇ, ನಾನೇ ಸಾಕ್ಷಿ." ಎಂದು ಹೇಳತಕ್ಕದ್ದು–ಎಂದು ಹೂವಿಗೆ ಉಪದೇಶಿಸಿದನು. ಹೀಗೆ ಬೇಡಿಕೊಂಡ ಬ್ರಹ್ಮನು ಆ ಕೇದಿಗೆಗೆ ಪುನಃ ಪುನಃ ನಮಸ್ಕಾರ ಮಾಡಿದನು.

"ಆಪತ್ಕಾಲದಲ್ಲಿ ಸುಳ್ಳು ಹೇಳಬಹುದು ಎಂಬುದು ಅಪದ್ಧರ್ಮ" ಎಂಬುದು ಬ್ರಹ್ಮನ ತರ್ಕ. ಹಾಗೆಂದುಕೊಂಡ ಆತನು ಕೇದಿಗೆಯೊಡನೆ ರಣಾಂಗಣಕ್ಕೆ ಹೋದಾಗ ಅಲ್ಲಿ ಸಪ್ಪೆಮೋರೆ ಮಾಡಿಕೊಂಡು ಸುಸ್ತಾಗಿ ನಿಂತಿದ್ದ ಶ್ರೀಪತಿಯನ್ನು ಕಂಡು ಸಂತೋಷದಿಂದ ಕುಣಿದನು. ಮತ್ತು ಹೇಡಿಯಂತೆ ಸುಳ್ಳನ್ನು ಸತ್ಯ ಸಂಗತಿಯೆಂದು ಅಚ್ಯುತನಿಗೆ ಹೇಳಿದನು: "ಎಲೈ ಹರಿಯೆ, ಸ್ತಂಭಾಗ್ರವನ್ನು ನಾನು ನೋಡಿಬಂದೆ; ಇದಕ್ಕೆ ಈ ಕೇದಿಗೆ ಸಾಕ್ಷಿ" ಎಂದು. ಆ ಕೇದಿಗೆ ಬ್ರಹ್ಮನಿಗೆ ಮಾತು ಕೊಟ್ಟ ಪ್ರಕಾರ ಸಾಕ್ಷಿ ಹೇಳಿತು. ವಿಷ್ಣುವು ಅದನ್ನು ಸತ್ಯವೆಂದು ನಂಬಿ ಬ್ರಹ್ಮನಿಗೆ ನಮಸ್ಕಾರ ಮಾಡಿದನು. ಷೋಡಶೋಪಚಾರ ಪೂಜೆ ಮಾಡಿದನು. ಆಗ ಬ್ರಹ್ಮನಿಗೆ ಅವನ ಶಾಠ್ಯಕ್ಕೆ ತಕ್ಕ ಬುದ್ಧಿ ಕಲಿಸಬೇಕೆಂದು ಪರ ಶಿವನು ತನ್ನ ಅಗ್ನಿಲಿಂಗ ಸ್ವರೂಪದ ಸ್ತಂಭತ್ವವನ್ನು (ಲಿಂಗವು ಪುರುಷ ಜನನೇಂದ್ರಿಯವೆಂಬ ಕಲ್ಪನೆ ಕುಹಕ ಎಂಬುದಕ್ಕೆ ಈ ಮಾತು ದೊಡ್ಡ ಆಧಾರ. ಅದೊಂದು ಅಗ್ನಿಮಯವಾದ Cylinder- ರೂಲು ದೊಣ್ಣೆ (ಸ್ಥಾಣು= Post Piller) ಕಂಬ ಎಂಬ ಹೆಸರು ಶಿವನಿಗಿದೆ. ಅದು ಲಿಂಗ ಪದದ ಅರ್ಥವನ್ನು ಚೆನ್ನಾಗಿ ಬಿಂಬಿಸುತ್ತದೆ. ಸಾಲಿಗ್ರಾಮ ಗೋಲಿಯಂತಿದ್ದರೆ, ಲಿಂಗ ದೊಣ್ಣೆಯಂತಿದೆ ಎನ್ನಬಹುದು. cf: ball & bat. ಶಿಶ್ನಾರ್ಥವು ಲಿಂಗಕ್ಕೆ ಬಂದದ್ದು ಕುಹಕ ತಲೆದೋರಿದಾಗ. "ಪ್ರಜಾಪತಿ" ಎಂಬ ಪದಕ್ಕೆ ಆ ಅರ್ಥ ಹೇಳುವುದೂ ಕುಹಕ. ಪ್ರಜಾಪತಿಯು ಸಂವತ್ಸರ ಎಂದಿದೆ ಬ್ರಾಹ್ಮಣ ಗ್ರಂಥ. ಕ್ರಮೇಣ ಸಂದರ್ಭಾನುಸಾರ ಲಿಂಗವು ಜನನೇಂದ್ರಿಯಕ್ಕೂ ಹೆಸರಾದದ್ದು ಪ್ರಸಿದ್ಧವಾಗಿದೆ (Sign of gender) ಎಂಬುದು

ವಿದಿತ. ಇದಕ್ಕೆ ಸಂಸ್ಕೃತದ Euphemistic Tendency ಅಶ್ಲೀಲ (unparliamentary) ವನ್ನು ಸುಶೀಲ (ಸಭ್ಯ) ಸ್ವರೂಪದಿಂದ ನಿರ್ದೇಶಿಸುವ ಪ್ರವೃತ್ತಿಯೇ ಕಾರಣ ಎನ್ನಬಹುದು. ಅಷ್ಟೆ) ಬಿಟ್ಟು ಮೂರ್ತಿಮತ್ತಾಗಿ ಅವತರಿಸಿದನು. ಆ ಕೂಡಲೇ ಒಡೆಯನಾದ ಪರಶಿವನು ಸಮುತ್ಥಿತನಾದುದನ್ನು ಕಂಡು ಲಕ್ಷ್ಮೀ–ಸರಸ್ವತಿಯರ ಗಂಡಂದಿರು ಗಡಗಡನೆ ನಡುಗುವ ಕೈಗಳನ್ನು ಎತ್ತಿ ಪರಶಿವನ ಮೂರ್ತಿಯ ಪಾದಗಳನ್ನು ಹಿಡಿದುಕೊಂಡು ಬ್ರಹ್ಮನೂ ವಿಷ್ಣುವೂ "ಆದ್ಯಂತಗಳಿಲ್ಲದ ನಿನ್ನ ಶರೀರದಲ್ಲಿ ಮುಗ್ಧ ಬುದ್ಧಿಯನ್ನು ತಾಳಿ ನಾವು ಆದ್ಯಂತಗಳನ್ನು ಹುಡುಕ ಹೋದೆವು. ಅದು ನಮ್ಮ ಅತ್ಯಾಸೆ. ಜಗತ್ತನ್ನೇ ಲೀಲಾ ಮಾತ್ರವೆಂದು ನೋಡುವ ನೀನು ನಮ್ಮ ಮನಃ ಕಶ್ಮಲವನ್ನು ತೊಳೆದು ಶುದ್ಧ ಮಾಡಿ ಇದನ್ನೆಲ್ಲಾ ಲೀಲೆಯೆಂದೇ ಎಣಿಸಿ ನಮ್ಮನ್ನು ಕ್ಷಮಿಸುವುದು ವಿಹಿತ." ಎಂದು ಬೇಡಿಕೊಂಡರು.

ಆಗ ಪರಮೇಶ್ವರನು "ಮಗು ವಿಷ್ಣು, ನಾನು ಪ್ರಸನ್ನನಾಗಿದ್ದೇನೆ. ಈಶತ್ವವನ್ನು ಬಯಸಿಯೂ ನೀನು ಸತ್ಯವನ್ನೇ ಹೇಳಿದೆ. ಆದ್ದರಿಂದ ಇನ್ನು ಮುಂದೆ ಜನರು ನಿನ್ನನ್ನು ನನ್ನ ಸಮಾನನೆಂದು ಸತ್ಕರಿಸುವಂತಾಗಲಿ– ಎಂದು ದೇವತೆಗಳಿದಿರು ವರವನ್ನು ಕೊಟ್ಟನು. "ಕ್ಷೇತ್ರ, ಪ್ರತಿಷ್ಠೆ, ಉತ್ಸವ, ಪೂಜೆಗಳು ನಿನ್ನ ಹೆಸರಿನಲ್ಲಿ ನಡೆಯಲಿ" ಎಂದು ಕೂಡಾ ಆಶೀರ್ವಾದ ಮಾಡಿದನು. ಆಮೇಲೆ ಬ್ರಹ್ಮನ ದರ್ಪವನ್ನು ಇಳಿಸಲೆಂದು ಭ್ರೂಮಧ್ಯದಿಂದ ಈಶ್ವರನು ಭೈರವನೆಂಬ ಅದ್ಭುತ ಪುರುಷನನ್ನು ಸೃಷ್ಟಿಸಿ ನಿಲ್ಲಿಸಿದನು ಮತ್ತು "ಬ್ರಹ್ಮನ ಐದು ತಲೆಗಳಲ್ಲಿ ಒಂದಕ್ಕೆ ಖಡ್ಗ ಪೂಜೆಯನ್ನು ಮಾಡು (ಕಡಿದು ಹಾಕು)" ಎಂದು ಆಜ್ಞಾಪಿಸಿದನು. ಅವನು ಹಾಗೇ ಮಾಡಿದನು. ಅಂದರೆ, ಸುಳ್ಳು ಹೇಳಿದ ತಲೆಯನ್ನೇ ಆಯ್ದು ಕ್ಷಣಾರ್ಧದಲ್ಲಿ ಕಡಿದು ಹಾಕಿದನು. ಆ ತಲೆಯು ಸಕೇಶವಾಗಿ ಸಾಲಂಕಾರವಾಗಿ ಆಗ ಗಾಳಿಗೆ ಸಿಕ್ಕಿದ ಬಾಳೆಯಂತೆ ಭೈರವನ ಪಾದದ ಮೇಲೆ ಬಿದ್ದಿತು. ಅದನ್ನು ಕಂಡು ಮರುಗಿದ ಹರಿಯು "ತಂದೆಯೇ, ನೀನೇ ಬ್ರಹ್ಮನಿಗೆ ಹಿಂದೆ ಒಡೆತನವನ್ನು ಕೊಟ್ಟಿದ್ದೆ. ಅದರ ಗುರುತೇ ಐದು ಮುಖಗಳು. ಆದ್ದರಿಂದ ಅವನನ್ನು ಕ್ಷಮಿಸಿ ದಯಮಾಡಿ ಅನುಗ್ರಹಿಸು" ಎಂದು ಪ್ರಾರ್ಥಿಸಿದನು.

ಆಗ ಶಿವನು ಬ್ರಹ್ಮದಂಡವನ್ನೆತ್ತಿ ಭೈರವನು ಅದೃಶ್ಯನಾಗುವಂತೆ ಮಾಡಿ ಮೋಸಗಾರನೂ ತಲೆ ಕಳೆದುಕೊಂಡವನೂ ಆದ ಬ್ರಹ್ಮನಿಗೆ ಹೇಳಿದನು: "ಬ್ರಹ್ಮನೇ, ನೀನೂ ಪೂಜಾರ್ಥಿ, ಶಠ, ಈಶತ್ವವನ್ನು ಏರಿದವನು. ಆದ್ದರಿಂದ ಇನ್ನು ಮುಂದೆ ಲೋಕದಲ್ಲಿ ನಿನಗೆ ಸತ್ಕಾರ ದೊರೆಯದೆ ಹೋಗಲಿ ಸ್ಥಾನ ಉತ್ಸವ ಮುಂತಾದವು ಇಲ್ಲದಂತಾಗಲಿ" ಎಂದು. ಅದನ್ನು ಕೇಳಿ ಬ್ರಹ್ಮನು, "ಒಡೆಯ, ಪ್ರಸನ್ನನಾಗು' ನೀನು ಆದ್ಯ ಮಹಾ ವಿಭೂತಿ. ನನ್ನ ತಲೆ ಕಡಿದದ್ದನ್ನು ಒಂದು ವರವೆಂದೇ ನಾನು ಭಾವಿಸುತ್ತೇನೆ. ವಿಶ್ವ ಮೂಲನಾದ ಬಂಧುವೇ ನಿನಗೆ ನಮನ" ಎಂದು ಪ್ರತ್ಯುತ್ತರವನ್ನಿತ್ತನು. "ಪರ್ವತವನ್ನೇ ಧನುಸ್ಸನ್ನಾಗಿ ಮಾಡಿಕೊಂಡ ಶಂಭುವೇ,

ಸರ್ವದೋಷ ಸಹಿಷ್ಣು ನೀನು" ಎಂದೂ ಸ್ತುತಿಸಿದನು. ಆಗ ಈಶ್ವರನು – "ಜಗತ್ತು ಕಾಯುವವನಿಲ್ಲದ ಭಯದಿಂದ ತತ್ತರಿಸಿ ನಾಶವಾದೀತು. ಆದ್ದರಿಂದ ಮಗು, ನೀನು ಅಪರಾಧಿಗಳನ್ನು ದಂಡಿಸು; ಲೋಕದ ರಾಜ್ಯಭಾರವನ್ನು ವಹಿಸಿಕೋ ಶ್ರೇಷ್ಠವೂ ದುರ್ಲಭವೂ ಆದ ವರವೊಂದನ್ನು ನಿನಗೆ ನಾನು ನೀಡುತ್ತೇನೆ. ನೀನು ಅದನ್ನು ತೆಗೆದುಕೋ. ವಿತಾನಾಗ್ನಿಗೆ ಸಂಬಂಧಿಸಿದ, ಗೃಹ್ಯ ಸೂತ್ರಗಳಂತೆ ಮಾಡುವ ಕರ್ಮಗಳ ಹಾಗೂ ಯಜ್ಞ ಯಾಗಾದಿಗಳ ಗುರು ನೀನಾಗು. ನೀನಿಲ್ಲದ ಯಜ್ಞಗಳು ವ್ಯರ್ಥ. ನೀನಿದ್ದು ದಕ್ಷಿಣಾಯುಕ್ತವಾಗಿ ಮಾಡಿಸಿದ ಯಜ್ಞಗಳು ಮಾತ್ರ ಸಫಲವಾಗುವುದು–" ಎಂದು ಹೇಳಿದನು. ಆಮೇಲೆ ಸುಳ್ಳು ಸಾಕ್ಷಿದಾರ ಕೇದಿಗೆಯತ್ತ ತಿರುಗಿ ಪರಮಾತ್ಮನು "ಎಲೈ ಕೇದಿಗೆಯೇ, ನೀನು ದುಷ್ಟ, ಶಠ, ಇಲ್ಲಿಂದ ನೀನು ದೂರ ಹೋಗು. ಇನ್ನು ಮೇಲೆ ಪೂಜಾಕಾಲಗಳಲ್ಲಿ ನನ್ನೊಲವು ಕೂಡಾ ನಿನಗೆ ದೊರಕದಂತಾಗಲಿ"– ಎಂದು ಶಾಪ ಕೊಟ್ಟನು. ಆ ಕೂಡಲೇ ದೇವತೆಗಳೆಲ್ಲರೂ ಅದನ್ನು ಹೊರಗೆ ಹಾಕತೊಡಗಿದರು. ಆಗ ಕೇದಿಗೆ ಹೂವು "ಒಡೆಯಾ, ನಿನ್ನಾಜ್ಞೆಯಿಂದ ನನ್ನ ಬಾಳು ನಿಷ್ಫಲವಾಗುವುದು, ತಂದೆಯೇ, ನನ್ನ ತಪ್ಪುಗಳೆಲ್ಲವನ್ನೂ ಕ್ಷಮಿಸು; ನನ್ನ ಬಾಳನ್ನು ಸಾರ್ಥಕಗೊಳಿಸು– ನಿನ್ನ ಸ್ಮರಣೆಯಿಂದ ತಿಳಿದು ಹಾಗೂ ತಿಳಿಯದೆ ಮಾಡಿದ ಪಾಪಗಳೆಲ್ಲಾ ನಾಶ ಹೊಂದುವುದಿಲ್ಲವೆ? ಅಂಥ ನಿನ್ನ ಕೃಪಾಕಟಾಕ್ಷಕ್ಕೆ ಪಾತ್ರನಾದ ನನ್ನಲ್ಲಿ ಸುಳ್ಳು ಸಾಕ್ಷಿ ಹೇಳಿದ ಪಾಪ ಎಲ್ಲಿ ಉಳಿಯಲು ಸಾಧ್ಯ?" ಎಂದು ಅಂಗಲಾಚಿತು. ಅನಂತರ ದೇವದೇವನಾದ ಶಿವನು ಆ ದೇವ ಸಭೆಯಲ್ಲಿ– "ನೋಡು ಕೇದಿಗೆಯೇ, ನಾನು ಮುಡಿಯಲು ನೀನು ಅರ್ಹನಾಗಲಾರೆ, ಏಕೆಂದರೆ, ನಾನು ಒಮ್ಮೆ ನುಡಿದ ಮಾತು ಸುಳ್ಳಾಗದು. ಆದರೆ ನನ್ನವರು ನಿನ್ನನ್ನು ಮುಡಿದುಕೊಳ್ಳುವರು. ಆಗ ನಿನ್ನ ಜನ್ಮವು ಸಫಲವಾಗುವುದು. ಅಷ್ಟಲ್ಲದೆ, ವಿತಾನಾಗ್ನಿಗಳ ಯಜ್ಞದಲ್ಲಿ ನೀನು ನನ್ನನ್ನು ಅಲಂಕರಿಸುವೆ" ಎಂದು ಅನುಗ್ರಹಿಸಿದನು. ಹರಿಯನ್ನೂ ಬ್ರಹ್ಮನನ್ನೂ ಕೇದಿಗೆಯನ್ನೂ ಹೀಗೆ ಅನುಗ್ರಹಿಸಿದ ಪರಶಿವನು ಎಲ್ಲ ದೇವತೆಗಳಿಂದ ಸ್ತುತನಾಗಿ ಆ ದೇವಸಭೆಯಲ್ಲಿ ಅಂದು ರಾರಾಜಿಸಿದನು.

–೨–

# ಶಿವಪೂಜಾ ವಿಧಾನ

"Ritual Punctuate the long and dreary sameness of life-'' ಧರ್ಮಾಚರಣೆಯು (ಸಮಾರಂಭ, ಹಬ್ಬ, ವ್ರತ, ನಿಯಮ, ಉಪವಾಸ, ಪಾರಾಯಣ, ಪಾರಣೆಗಳ ರೂಪದಲ್ಲಿ) ಬಾಳಿನ ಏಕತಾನದ ನಾದಸಂತಾನದ ಬರಡುತನದ, ಬೇಸರದ ಭಾವನೆಯನ್ನು ಪರಿಹರಿಸುತ್ತದೆ" ಎಂದು ರಾಬರ್ಟ್ ನಿಸ್‌ಬೆತ್ ಹೇಳುತ್ತಾನೆ. (A.R.P. 60. winter 1984). ಇದಕ್ಕೆ ಈಗಲೂ ಭಾರತ ಹೆಸರಾಗಿದೆ, ಶಿವಪುರಾಣವು ವಿದ್ಯೇಶ್ವರ ಸಂಹಿತೆಯ ೯ನೆಯ ಅಧ್ಯಾಯದಲ್ಲಿ ಶಿವಾರಾಧನೆಯನ್ನು ವೈವಿಧ್ಯಪೂರ್ಣವಾಗಿ ವಿವರಿಸುತ್ತದೆ; ಬ್ರಹ್ಮ–ವಿಷ್ಣುಗಳೇ ಶಿವಪೂಜೆಗೆ ಮಾದರಿ ಹಾಕಿಕೊಡುತ್ತಾರೆ:–

ವಿಧಿ–ಹರಿಗಳು ಶಿವನ ಬಲ–ಎಡಗಳಲ್ಲಿ ಕೈ ಮುಗಿದು ನಿಂತರು. ಶಿವನನ್ನು ಅವರು ಸಕುಟುಂಬವಾಗಿ ಸ್ಥಾಪಿಸಿಕೊಂಡಿದ್ದರು, ಶಿವನಿಗವರು ಮಾಡಿಸಿದ್ದು ಶ್ರೇಷ್ಠವಾದ ಆಸನ. ಮಾನವೋಪಯೋಗಿಯಾದ ಪುಣ್ಯ ವಸ್ತುಗಳಿಂದ ಅವರು ಅವನನ್ನು ಪೂಜಿಸಿದರು. ಆ ವಸ್ತುಗಳಲ್ಲಿ ಮನುಷ್ಯ ಕೃತ ಹಾಗೂ ಪ್ರಕೃತಿದತ್ತ ಎಂಬ ಎರಡು ಬಗೆಗಳೂ ಇದ್ದವು; ಬಹಳ ಕಾಲ ಉಳಿಯುವಂಥವು ಕೆಲವು; ಕೆಲವು (ಅವುಗಳಲ್ಲಿ) ಅಲ್ಪಕಾಲಿಕವಾಗಿದ್ದವು.

ಹಾರ, ನೂಪುರ, ಕೇಯೂರ, (ತೋಳುಬಂದಿ, ಭುಜಕೀರ್ತಿ, ವಂಕಿ ಅಥವಾ ನಾಗಮುರಿಗೆ), ಕಿರೀಟ ಮತ್ತು ಮಣಿಮಯ ಕರ್ಣಕುಂಡಲಗಳು ಅವನಿಗೆ ಬ್ರಹ್ಮ–ವಿಷ್ಣುಗಳು ತೊಡಿಸಿದ ಆಭರಣಗಳು. ಜನಿವಾರ, ಉತ್ತರೀಯ, ಹೂಮಾಲೆ, ಅಗಸೆನಾರಿನ ವಸ್ತ್ರ ಮತ್ತು ಹೂವುಂಗುರ ಮುಂತಾದವನ್ನು ಶಿವನಿಗೆ ತೊಡಿಸಲಾಯಿತು; ಬಿಡಿಹೂ, ತಾಂಬೂಲ, ಕರ್ಪೂರದ ಸುಣ್ಣ, ಗಂಧ, ಲೋಬಾನದ ಹೊಗೆ, ದೀಪ, ಬೆಳ್ಗೊಡೆ, ಬೀಸಣಿಗೆ, ಧ್ವಜ, ಚಾಮರಗಳಲ್ಲದೆ, ಇತರ ದಿವ್ಯವಾದ ಉಪಹಾರಗಳಿಂದಲೂ ಮಾತು–ಮನಗಳಿಗೆ ನಿಲುಕದ ನೈವೇದ್ಯಗಳಿಂದಲೂ (ಆತ್ಮ ನಿವೇದನದಿಂದಲೂ) ಅವರು ಶಿವನನ್ನು ಅರ್ಚಿಸಿದರು. ಅವರು ಅರ್ಪಿಸಿದ ಪದಾರ್ಥಗಳಲ್ಲಿ ದೇವರಿಗೆ ಯೋಗ್ಯ ಆದರೆ ಜೀವರಿಗೆ ಯೋಗ್ಯವಲ್ಲ ಎಂಬಂಥವುಗಳಿದ್ದವು. ಅವೆಲ್ಲವನ್ನೂ ಶಿವನು ಸಂಪ್ರದಾಯಾನುಸಾರವಾಗಿ ಸಂತೋಷದಿಂದ ತನ್ನ ಸಭಾಸದರಿಗೆ ಹಂಚಿದನು. ಆ ಹಂಚುವಿಕೆ ಅವರವರ ಯೋಗ್ಯತಾನುಕ್ರಮವನ್ನು ಅನುಸರಿಸಿದ್ದಾಗಿತ್ತು. ಶಿವ ಕೊಟ್ಟದ್ದನ್ನು

ತೆಗೆದುಕೊಳ್ಳಲು ಲವಲವಿಕೆಯಿಂದ ಮುಂಬಂದವರ ಗದ್ದಲ ಗಣ್ಯವಾಯಿತು. ಆ ಪೂಜೆ ನಡೆದದ್ದು ಪ್ರಯಾಗದಲ್ಲಿ.

ಶಿವ ಪೂಜಕರು ಶಿವನನ್ನು ಸಕಲ–ನಿಷ್ಕಲ (ಸಗುಣ–ನಿರ್ಗುಣ) ಎಂದು ಅರಿತಿರಬೇಕು. ಈ ಅರ್ಥವು "ಬ್ರಹ್ಮ" ಪದೋಕ್ತವೆಂದು ತಿಳಿದಿರಬೇಕು ಇಲ್ಲಿ. ಕ್ರಮ ಮುಕ್ತಿ, ಜೀವನ್ಮುಕ್ತಿಗಳೆರಡೂ ಶಿವಪುರಾಣಕ್ಕೆ ಗ್ರಾಹ್ಯ. ಅವು ಶಿವಪೂಜೆಯ ಆತ್ಯಂತಿಕ ಧ್ಯೇಯಗಳು (ಶ್ರೇಯಸ್ಸು–ಪ್ರೇಯಸ್ಸಲ್ಲ). ಶಿವ ಸಾತ್ಮ್ಯವು (ಸಾಯುಜ್ಯವೇ) ಮುಕ್ತಿ; ಮರು ಹುಟ್ಟಿಲ್ಲದಾಗಿ ಶಿವನಲ್ಲಿ ಕ್ಷೀರ–ಕ್ಷೀರ ಸಾಮರಸ್ಯ ಹೊಂದುವುದು. ಶಿವನು ಶಿವನು ಸತ್ (Existence), ಚಿತ್ (Consciousness) ಮತ್ತು ಆನಂದ (Bliss: Ecstatic state of pure Eternal supreme Joy Divine) ಶ್ರೀ ಅರವಿಂದಾಶ್ರಮದ ಶ್ರೀ ಎಂ.ಪಿ. ಪಂಡಿತರು ಬರೆದ "Mystic Approach to the Vedas and the Upanishads'' ಎಂಬ ಗ್ರಂಥದ ೮೭, ೮೮, ೮೯ನೆಯ ಪುಟಗಳು ಆಧಾರದ ಆಕರ. ಏಕೆಂದರೆ ಶಿವ ಪುರಾಣದ ಹೇಳಿಕೆಯಂತೆ ಶಿವನು ವೇದ ವೇದಾಂತ ಸಾರ ಸ್ವರೂಪನು: "ಸತ್ಯಂ, ಜ್ಞಾನಂ, ಅನಂತಂ" ಮತ್ತು "ಏವಂ ಬುದ್ಧೇಃ ಪರಂ." ಇಂಥ ಅಪೂರ್ವ ಪೂರ್ಣ ಸತ್ಯನನ್ನು ಕೌಟುಂಬಿಕನನ್ನಾಗಿ ಭಾವಿಸಿಕೊಂಡು ಪೂಜಿಸುವುದು ಮನುಷ್ಯ ಸಹಜವಾದುದರಿಂದ ಅದು ಶಿವ ಸಾಯುಜ್ಯದ ಸಾಧನೆಯ ಮೊದಲನೆಯ ಮೆಟ್ಟಲು; "ಶಿವೋಽಹಂ" ಎಂಬುದು ಕೊನೆಯ ದಿವ್ಯಾನುಭವ–ಮಾನುಷ್ಯ ಅನುಭವವಲ್ಲ! ಇದು ಶ್ರೀ ಅರವಿಂದರ ಭಾಷೆಯಲ್ಲಿ Divinisation ದಿವ್ಯೀಕರಣ, ದಿವ್ಯ ಜೀವನಾವಾಪ್ತಿ. ಭಾರತೀಯ ಮಹಾಪುರಾಣಗಳದ್ದು ಇದೇ ವೈದಿಕ ಧಾಟಿ. ಶಿವನ ಸರಿಯಾದ ಕಲ್ಪನೆಯನ್ನು ಶ್ರುತಿಗಳಿಂದ, ಸ್ಮೃತಿಗಳಿಂದ, ಪುರಾಣಗಳಿಂದ ಮತ್ತು ಬ್ರಹ್ಮಾತ್ಮರಾದ ಗುರುಗಳಿಂದ ಮಾಡಿಕೊಳ್ಳದೆ ಪೂಜಿಸುವುದು ಮೂಢ ನಂಬಿಕೆ. ಅದನ್ನು ಪರಿಹರಿಸಲೆಂದೇ ಶಿವ ಪುರಾಣವು ಶಿವನ ತಾತ್ವಿಕ ಸ್ವರೂಪವನ್ನು ಉಪಾಸಕನಿಗೆ, ಭಕ್ತನಿಗೆ, ಕರ್ಮಯೋಗಿಗೆ ಮಾಡಿ ಕೊಡುತ್ತದೆ. ಜಗತ್ತಿನ ಸರ್ವಧರ್ಮಗಳ Mystics ಯೋಗಿಗಳ ಆತ್ಯಂತಿಕ ಅನುಭವವು "ಶಿವ" ಎನ್ನುತ್ತಾರೆ ಅಂತಾರಾಷ್ಟ್ರೀಯ ವಿದ್ವಾಂಸರು (Mysticism-East and west, by Rudolf Otto)

(೧) ಪಶು=ಪ್ರಮಥಗಣ; ಪತಿ=ಅದರ ಒಡೆಯ (ಕ.ಸಾ.ಪ. ನಿಘಂಟು, ಪು ೫೧೪) ೨) ವ್ಯಕ್ತ್ಯಾತ್ಮ, ಜೀವಾತ್ಮ; ದಿವ್ಯಾತ್ಮಯಾ ವಿಶ್ವಾತ್ಮ (ವಿಶ್ವೇಶ್ವರ) ತದ್ವಿರುದ್ಧಾರ್ಥವುಳ್ಳ ಪದ (M.M.W. skt.-Eng Dict; p. 611) (೩) ಪರಶಿವೇತರರೆಲ್ಲಾ ಅಬ್ರಹ್ಮರು, ಜೀವತ್ವ ಉಳ್ಳವರು; ಅವರಿಗೆ ನಿಷ್ಕಲತ್ವವಿಲ್ಲ (ಶಿ.ಪು. Nag publication. p. 9, stanza ೧೩) ಲಿಂಗವು ನಿಷ್ಕಲ, ಮೂರ್ತಿಯು ಸಕಲ. ಲಿಂಗೋತ್ಥಿತಾಕಾರದ ಮೂರ್ತಿಯು ಸಕಲ+ನಿಷ್ಕಲ. ಉದಾ: ಅಚಿಂತ್ಯಾವ್ಯಕ್ತರೂಪಾಯ ನಿರ್ಗುಣಾಯ ಗುಣಾತ್ಮನೇ, ಸಮಸ್ತ ಜಗದಾಧಾರ ಮೂರ್ತಯೇ ಬ್ರಹ್ಮಣೇ ನಮಃ ॥ ಇಲ್ಲಿ ಬ್ರಹ್ಮ= ಪರಬ್ರಹ್ಮ=ಪರಶಿವ=The one Absolute Conscious Being

–೩–

# ಶಿವರಾತ್ರಿ ಮಾಹಾತ್ಮ್ಯ

ಹರಿ–ವಿಧಿಗಳು ಶಿವಪೂಜೆ ಮಾಡಿದ ದಿನವೇ ಶಿವರಾತ್ರಿ. ಶಿವರಾತ್ರಿಯಲ್ಲಿ ಉಪವಾಸ ಮಾಡಬೇಕು. ಪೂಜೆಗೆ ಲಿಂಗವಾದರೂ ಸರಿಯೆ, ಮೂರ್ತಿಯಾದರೂ ಸರಿಯೆ. ಉಪವಾಸವೆಂದರೆ ಅಹೋರಾತ್ರೆ ನಿರಾಹಾರ. ಪೂಜಕರು ಜಿತೇಂದ್ರಿಯರಾಗಿರತಕ್ಕದ್ದು; ಅಂದರೆ, ಕಾಮ ಕ್ರೋಧಾದಿ ಆರು ವೈರಿಗಳಿಂದ ಮುಕ್ತರಾಗಿರತಕ್ಕದ್ದು; ತ್ರಿಕರಣ ಶುದ್ಧಿಯನ್ನು ಪಾಲಿಸಬೇಕು. ಒಂದು ಶಿವರಾತ್ರಿಯ ಪೂಜೆಯ ಫಲ ಒಂದು ಇಡೀ ವರ್ಷದವರೆಗೆ ದೊರಕುತ್ತಿರುತ್ತದೆ. ಶಿವರಾತ್ರಿ ಕಾಲವು ಕಡಲಿಗೆ ಶುಕ್ಲಪಕ್ಷವಿದ್ದಂತೆ ಶಿವನಿಗೆ ಶಿವಧರ್ಮವೃದ್ಧಿಕಾಲ. ಲಿಂಗಪ್ರತಿಷ್ಠೆ ಮುಂತಾದ ಮಂಗಲ ಕಾರ್ಯಕ್ಕದು ಸಕಾಲ. ಮಾರ್ಗಶಿರ ಮಾಸದ ಆರ್ದ್ರಾ ನಕ್ಷತ್ರದ ಉದಯದಲ್ಲಿ ಉಮಾಕಾಂತತ್ವದ ಕಲೆ ಶಿವನಿಗಿರುತ್ತದೆ. ಆ ಕಾಲದಲ್ಲೇ ಅವನು ಬ್ರಹ್ಮ ವಿಷ್ಣುಗಳು ಬಿಟ್ಟ ಅಸ್ತ್ರಗಳ ನಡುವೆ ಆಕಾಶ–ಪಾತಾಳಗಳನ್ನು ಮೀರಿದ ಮಹಾಗ್ನಿ ಸ್ತಂಭವಾಗಿ ನಿಂತದ್ದು. ಶಿವರಾತ್ರಿಯಲ್ಲಿ ಮಾಡುವ ಲಿಂಗದರ್ಶನ ಮಹಾಪುಣ್ಯದಾಯಕ. ಆ ಲಿಂಗವೇ ಅನಾದ್ಯನಂತ ಸ್ತಂಭ. ಅದು ಅಣು ಕೂಡಾ ಆಗಬಲ್ಲುದು. ಅದು ಚಿಕ್ಕದಾಗಿರುವುದು ಜನದರ್ಶನಕ್ಕೆ ತಕ್ಕದ್ದಾಗಿರಬೇಕೆಂದು, ಅಂದರೆ ನಿಜವಾಗಿ ಲಿಂಗವು ವಿಶ್ವವ್ಯಾಪಕವಾದ ಬೆಳಕಿನ ಆಕಾರದ ಪ್ರತಿನಿಧಿ; ವಿಶ್ವವನ್ನು ಮೀರಿದ ಮಹಾದ್ಭುತ ಚೈತನ್ಯ =The Force of Life. Consciousness and Intelligence. ಆತ್ಮಜಾಗರದ ತಿಳಿವುಳ್ಳ ನಿತ್ಯ ಅನಿರುದ್ಧ ಶಕ್ತಿಯ ಅಸ್ತಿತ್ವ=ಪರಬ್ರಹ್ಮ; ಅಕ್ಷಯವಾದ ಚಿದ್ಬಲ, ಸರ್ವಾತಿರಿಕ್ತ ಸಾರ, ಸರ್ವಜ್ಞ, ಸರ್ವಭಕ್ಷಕ, ಸರ್ವವ್ಯಾಪಕ= omnipotent. omniscient, omnivorous. omnipresent, Being=God: The Supreme Source of all the known and unknown energies-whether latent or manifest. ಶಕ್ತಿಯ ಚಿಹ್ನೆ (Immanent and Transcendent) ಅರ್ಚನೆಯು ಯಥಾಬಲ. ಯಥಾ ನ್ಯಾಯ, ಯಥಾ ನಿರ್ವಂಚಕ ಆಗಿರಬೇಕು. ಅರುಣಾಚಲ ಲಿಂಗದ ಪೂಜೆ ಶಿವರಾತ್ರಿಯಲ್ಲಿ ಪ್ರಶಸ್ತ. ಅದು ಭುಕ್ತಿ–ಮುಕ್ತಿಪ್ರದ, ಶ್ರೇಯಃ ಪ್ರೇಯಸ್ಕರ.

ಅನುಕ್ರಮವಾಗಿ ಕ್ರಮ ಮುಕ್ತಿಗಳು ಐದು; ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾರ್ಷ್ಟಿ; ಸಾಯುಜ್ಯ–ಎಂದು (ಶಿವಲೋಕವಾಸ, ಶಿವಸಮೀಪಸ್ಥಿತಿ, ಶಿವರೂಪಲಾಭ, ಶಿವಶಕ್ತಿಯುಕ್ತತೆ ಮತ್ತು ಶಿವೈಕ್ಯ). ಸಕಲನು ಈಶ, ನಿಷ್ಕಲನು ಬ್ರಹ್ಮ ಎಂದು ಶಿವನ

ಸಂಕೇತಗಳು. ಈ ಪದಗಳು ಶಿವೇತರ ದೇವರುಗಳಿಗಲ್ಲ. ಆದ್ದರಿಂದ ಹರಿವಿಧಿಗಳಿಗೆ ಇವುಗಳಿಲ್ಲ. ಇದು ಬ್ರಹ್ಮ ತತ್ವದ ರಹಸ್ಯ. ಇದರಿಂದ ಹರಿವಿಧಿಗಳ ಮೌಢ್ಯ ಪರಿಹಾರವಾಯಿತು. ಅವರ ಬೇಡಿಕೆಯಂತೆ ಅಮೃತಧಾರೆ ಸುರಿಸಿ ಶಿವನು ಅವರಿಬ್ಬರ ಮಡಿದ ಸೈನಿಕರನ್ನು ಬದುಕಿಸಿದನು. ಬೃಹತ್ವ–ಬೃಂಹಣತ್ವಗಳು ಪರಬ್ರಹ್ಮನಾದ ಶಿವನ ಹೆಸರಿನ ಅರ್ಥ. ಬೃಹತ್ವ=ಅತ್ಯುನ್ನತ, ಅತಿ ವಿಶಾಲ, ಅತ್ಯಂತ ಶಕ್ತ ಎನ್ನುವ ಸ್ಥಿತಿ; ಬೃಂಹಣತ್ವ=ಆನೆಯಂತೆ ಘೀಳಿಡುವ ಶಕ್ತಿ. ಶಿವೋಪಾಸನ ಭಕ್ತಿಯು ಈ ಜ್ಞಾನದಿಂದ ಪ್ರೇರಿತವಾಗಿರಬೇಕು.

–೪–

# ಶಿವಕ್ಷೇತ್ರಗಳು

ಗಂಗೆಯಿಂದ ಕಾವೇರಿಯವರೆಗಿನ ಅನೇಕಾನೇಕ ಸ್ಥಳಗಳಲ್ಲಿ ಶಿವಕ್ಷೇತ್ರಗಳಿವೆ. ಆಯಾ ನದೀತೀರಗಳಲ್ಲಿಯ ಶಿವಸ್ಥಳವು ಉಪಾಸನೆಗೆ ಯೋಗ್ಯ. ಸಹ್ಯಾದ್ರಿಯಲ್ಲಿ ಹುಟ್ಟಿದ ಕಾವೇರಿಗೆ ಗಂಗಾ ಸಮಾನತೆಯಿದೆ. ಶಿವಭಕ್ತನು ಹಾಗೇ ವಿಂಧ್ಯ ಹಿಮಾಚಲಗಳಲ್ಲಿ ಹುಟ್ಟಿದ ಯಾವ ನದಿಯದಂಡೆಯಲ್ಲೂ ಸಾಧನೆ ಮಾಡಬಹುದು. ಸಾಧಕನು ಜೀವಬ್ರಹ್ಮೈಕ್ಯಭಾವದಿಂದ ಓಂಕಾರ ಮಂತ್ರವನ್ನು ಜಪಿಸಬೇಕು. ಉಳಿದ ಯೋಗಾಸನ ಸಮಾನವಾದ ಭಂಗಿಗಳನ್ನು ಗುರುಮುಖದಿಂದ ತಿಳಿದುಕೊಳ್ಳಬೇಕು. ಅವು ವಿಸ್ತಾರವಾಗಿವೆ, ಹಾಗೇ ಲಿಂಗಾಕಾರಗಳೂ ಲಿಂಗದ ಉಪಾದಾನಗಳೂ ವಿವಿಧವಾಗಿವೆ. ಮಣ್ಣು ಹೆಂಟೆಯೂ ಲಿಂಗವಾಗಬಹುದು. ಅದೂ ಶಿವಕ್ಷೇತ್ರತ್ವದಾಯಕ.

ಗಂಗೆ, ಸಿಂಧು, ಸರಸ್ವತಿ, ಯಮುನೆ, ಗೋದಾವರಿ, ನರ್ಮದೆ, ಕೃಷ್ಣೆ, ಭೀಮರಥಿ, ಫಲ್ಗು, ಸರಯು, ಶ್ರೀಗಂಡಕಿ, ಗೋಮತಿ, ಕಾವೇರಿ, ಕಪಿಲೆ, ನೇತ್ರಾವತಿ ಎಂಬ ನದಿಗಳು ಮಂಗಲಾಷ್ಟಕ ಪ್ರಸಿದ್ಧ. ಇವುಗಳಲ್ಲದೆ ಇತರ ನದಿಗಳನ್ನೂ ಈ ಪುರಾಣವು ಉಲ್ಲೇಖಿಸುತ್ತದೆ. ಅವುಗಳ ತಟಗಳು ಶಿವಪೂಜೆಗೆ ಪ್ರಶಸ್ತ, ಶಿವಧ್ಯಾನಕ್ಕೆ ಯೋಗ್ಯ. ಶಿವ ಜಪಕ್ಕೆ ತಕ್ಕದ್ದಾದವುಗಳು. ದ್ವಿಜತ್ವಾನುಸಾರ ನಿತ್ಯನೈಮಿತ್ತಿಕಕರ್ಮಗಳನ್ನು ಸಾಧಕನು ಮಾಡುತ್ತಿರಬೇಕು. ಯಾವ ದೇವತೆಯ ಉಪಾಸನೆ ಮಾಡುತ್ತಾನೋ ಆ ದೇವತೆ ಆ ಭಕ್ತನಿಗೆ ಇಷ್ಟಾರ್ಥವನ್ನು ಕೊಡುತ್ತದೆ. ಇಂದು ವೃತ್ತಿಯೇ ನಿರ್ಣಯಿಸುವ ವರ್ಣಗಳ (ಜಾತಿಗಳ) ಕರ್ತವ್ಯಗಳನ್ನು ಮಾಡಬೇಕು. ತಪ್ಪಿದರೆ ಶಿವನು ಪ್ರೀತನಾಗನು. ಆಶ್ರಮ ಧರ್ಮಗಳನ್ನು ಚಾಚೂ ತಪ್ಪದೆ ಪಾಲಿಸುವುದು ಸರ್ವ ಶಿವಭಕ್ತರ ಕರ್ತವ್ಯ. ಕ್ಷೇತ್ರದಲ್ಲೂ ಮಾಡುವುದು ಮಂತ್ರಜಪ, ಪೂಜೆ, ಧ್ಯಾನ, ಹೋಮ, ದಾನಗಳನ್ನು. ಅವುಗಳಿಂದ ಆಧಿವ್ಯಾಧಿಗಳೆಲ್ಲಾ ಪರಿಹಾರವಾಗುವುವು. ಶಿವೋಪಾಸನೆಗೆ ಜಗದ್ಧಿತ ಕಾರಿಯಾದ ವರ್ತನೆ ಅವಿನಾಭಾವಿ ಎಂಬುದನ್ನು ಯಾರೂ ಮರೆಯಬಾರದು; ಮರೆತರೆ ಶಿವಪೂಜೆಯು ನಿಷ್ಫಲ ಯಾ ದುಷ್ಫಲಕೊಡುತ್ತದೆ– ಎಂಬ ತಾತ್ಪರ್ಯವು ಉಲ್ಲೇಖ್ಯ.

–೫–

# ಶಿವಪೂಜಾಸ್ಥಳ, ಕಾಲ ಇತ್ಯಾದಿ

ಶುದ್ಧವಾದ ಮನೆ, ಕೊಟ್ಟಿಗೆ, ಜಲತೀರ, ಬಿಲ್ವತುಲಸ್ಯಶ್ವತ್ಥ ವೃಕ್ಷಗಳ ಕಟ್ಟೆಗಳು, ದೇವಾಲಯ, ತೀರ್ಥತೀರ, ನದೀತೀರ ತೀರ್ಥನದೀ ತೀರಗಳು ಪುಣ್ಯದಾಯಕಗಳು. ಗ್ರಹಣಕಾಲ, ಸಂಕ್ರಮಣ ಕಾಲಗಳು ಶಿವಪೂಜೆಗೆ ಹೆಚ್ಚು ಪ್ರಶಸ್ತ. ಮನಮೆಚ್ಚಿದ ದಿನ ಅತ್ಯುತ್ತಮ. ಶಿವನ ಹೆಸರಿನಲ್ಲಿ ಅಂದು ಯಜ್ಞ (ಅಹಿಂಸಾತ್ಮಕ) ದಾನಾದಿಗಳನ್ನು ಮಾಡಬೇಕು. ಪೂಜಾಕಾಲದಲ್ಲಿ ಆತ್ಮಶುದ್ಧಿ ಇರಲೇಬೇಕು. ದುರಾಲೋಚನೆ, ದುರ್ವರ್ತನೆಗಳ ಸೋಂಕು ಇರಬಾರದು. ತಪೋನಿಷ್ಠೆ, ಜ್ಞಾನನಿಷ್ಠೆ, ಯೋಗ–ಎಲ್ಲಾ ಶಿವಪೂಜೆಗಳೇ ಸರಿ. ಅವುಗಳಿಂದ ಪಾಪ ಪರಿಹಾರವಾಗುತ್ತದೆ. ಚತುರ್ವಿಂಶತಿ ಲಕ್ಷ ಗಾಯತ್ರಿ ಜಪಮಾಡಬಹುದು. ಬ್ರಹ್ಮವೇತ್ತನು ಬ್ರಾಹ್ಮಣ. ಅಧಃಪಾತದಿಂದ ಉದ್ಧರಿಸುವುದರಿಂದ ಪಾತ್ರತ್ವ; ದಾನಿಯನ್ನು ಪಾಪಮುಕ್ತನನ್ನಾಗಿ ಮಾಡುವುದರಿಂದ ಪಾತ್ರತ್ವ–ಪಾತ್ರತ್ವವಿಲ್ಲದ ಶಿವಭಕ್ತನಿಗೆ ಉದ್ಧಾರವಿಲ್ಲ, ಮುಕ್ತಿ ಇಲ್ಲ, ಶಿವಭಕ್ತಿಯ ಪಾರಮ್ಯದಿಂದ ಪಾತ್ರತ್ವವು ಲಭ್ಯ. ಅಧಃಪಾತದಿಂದ ಮಂತ್ರಗಾಯಕನನ್ನು ರಕ್ಷಿಸುವುದು ಗಾಯತ್ರಿ, ದಾನ ಮಾಡದವನೂ ಅಪಾತ್ರ. ದಾನ+ಜಪ+ಹೋಮ=ಪೂಜೆ. ದಾನಕ್ಕೆ ಪಾತ್ರಾಪಾತ್ರ ವಿವೇಕ ಅಗತ್ಯ. ನಾವೇ ಹಸಿದವರನ್ನು ಗುರುತಿಸಿ ಅನ್ನ ಹಾಕಬೇಕು. ಅವರು ಬೇಡುವವರೆಗೆ ಕಾಯಬಾರದು. ವಿಷ್ಣು ಭಕ್ತ, ಶಿವಭಕ್ತ ಎಂಬ ಭಕ್ತರೆಲ್ಲಾ ಪಾತ್ರರು. ಆಯಾ ದೇವತಾ ಭಕ್ತರಿಗೆ ದಾನ ಮಾಡಿದರೆ ಆಯಾ ದೇವತಾ ಲೋಕವು ಪ್ರಾಪ್ತವಾಗುವುದು. ಬ್ರಹ್ಮಚಾರಿ (ವಿದ್ಯಾರ್ಥಿ) ಬ್ರಹ್ಮೋಪಾಸಕನಾದ್ದರಿಂದ ಪಾತ್ರ; ಗೃಹಸ್ಥ ವಿಷ್ಣುಸ್ಥಾನೀಯನಾದ್ದರಿಂದ ಪಾತ್ರ; ವೃದ್ಧರು ರುದ್ರಸ್ಥಾನವುಳ್ಳ ಪಾತ್ರರು. ಬಾಲ ಸ್ತ್ರೀಯರು ಸರಸ್ವತಿಯರು; ಮಧ್ಯ ವಯಸ್ಕ ಸ್ತ್ರೀಯರು ಲಕ್ಷ್ಮೀ ಸದೃಶರು; ವೃದ್ಧೆಯರು ಪಾರ್ವತೀಸಮಾನರು. ಆದ್ದರಿಂದ ಈ ಬಡವರೆಲ್ಲಾ ದಾನಪಾತ್ರರು. ಗೋವು, ಎಳ್ಳು, ಬಂಗಾರ, ತುಪ್ಪ, ಬಟ್ಟೆ, ಧಾನ್ಯ, ಬೆಲ್ಲಗಳು ದೇಯಗಳು. ಹಾಗೇ ಬೆಳ್ಳಿ, ಉಪ್ಪು, ಕುಂಬಳಕಾಯಿ ಮುಂತಾದ ತರಕಾರಿಗಳು, ಪ್ರಾಪ್ತ ವಯಸ್ಕ ಕನ್ಯೆ ಇವರೂ ದೇಯಾರ್ಹರು. ಹಾಲು, ಮೊಸರು, ಭೂಮಿಗಳೂ ದೇಯವಸ್ತುಗಳು. ಹಣ್ಣುಗಳೂ ಈ ಪಟ್ಟಿಗೆ ಸೇರುತ್ತವೆ. ಬಂಧುಗಳೇನೆಂದಾರು? ಸರಕಾರ ಏನು ಮಾಡೀತು? ಎಂದು ಮುಂತಾಗಿ ಹೆದರಿ ಮಾಡುವ ದಾನವು ಕನಿಷ್ಠ. ಕೊಡಲು ಯಾವ ವಸ್ತುವೂ ಇಲ್ಲದವನು ಒಳ್ಳೆಯ ಮಾತಿನಿಂದಾದರೂ ಅತಿಥಿಯನ್ನು ಸಂತರ್ಪಿಸಬೇಕು. ಮಂತ್ರ,

ಸ್ತೋತ್ರ, ಜಪಗಳು ವಾಚಿಕ ಯಜ್ಞಗಳು. ತೀರ್ಥಯಾತ್ರೆ, ವ್ರತಾದಿಗಳು ಕಾಯಿಕ ಯಜ್ಞಗಳು. ತಪಶ್ಚರ್ಯ ಮತ್ತು ದಾನಗಳು ನಿತ್ಯಧರ್ಮಗಳು. ತಿಥಿ, ನಕ್ಷತ್ರ, ವಾರಾದಿಗಳನ್ನು ನೋಡಿ ಶಿವಪೂಜೆ ಮಾಡುವವರು ಪ್ರೇಯಸ್ಕಾಮಿಗಳು; ದೇಶ ಕಾಲಾದಿಗಳನ್ನು ಗಣಿಸದೆ ಶಿವಧ್ಯಾನ ತತ್ಪರರಾಗುವವರು ಶ್ರೇಯಃಕಾಂಕ್ಷಿಗಳು; ಅರ್ಥ ತಿಳಿದುಕೊಂಡು ವೇದಮಂತ್ರಗಳನ್ನು ಹೇಳಿ ಶಿವನನ್ನು ಪೂಜಿಸುವುದು ಅಗತ್ಯ. ಅದರಿಂದ ಮಾತ್ರ ಪೂರ್ಣಫಲ ಸಿದ್ಧಿ.

ಕೃಷ್ಣಪಕ್ಷದ ಚತುರ್ಥಿಯಲ್ಲಿ ಮಹಾಗಣಪತಿ ಪೂಜೆ ಯುಕ್ತ. ದ್ವಾದಶಿಯಲ್ಲಿ ವಿಷ್ಣು ಪೂಜೆ ಯುಕ್ತ, ಹೀಗೆ ಬ್ರಹ್ಮಾದಿಗಳ ಪೂಜೆಗಳಿಗೂ ಕಾಲವನ್ನು ಹೇಳಲಾಗಿದೆ. ಕರ್ಕಾಟಕ ಸೋಮವಾರದಲ್ಲಿ, ಮಾರ್ಗಶಿರ ನವಮಿಯಲ್ಲಿ ಅಂಬಾಪೂಜೆ ಪ್ರಶಸ್ತ ಇತ್ಯಾದಿ. ಈ ದೇವರೆಲ್ಲಾ ಶಿವಾಂಶ ಸಾಕಾರಗಳು, ಶಿವವಿಭೂತಿಗಳು, ಸಕಲಗಳು. ಸ್ಕಂದ ಶಿವಾದಿಗಳ ಪ್ರತ್ಯೇಕ ಪೂಜೆಗಳಿಗೂ ಇಂಥ ನಿಯಮಗಳನ್ನು ಹೇಳಲಾಗಿದೆ. ಅಷ್ಟದಿಕ್ಪಾಲಕರ ಪೂಜೆಗೆ ಕೃತ್ತಿಕಾ ಶನಿವಾರವು ಯೋಗ್ಯ ಎಂಬುದು ಇನ್ನೊಂದು ಉದಾಹರಣೆ. ಪೂಜಾಕಾಲದಲ್ಲಿ ಮಾನವೋಪಯೋಗಿಯಾದ ಯಾವ ವಸ್ತುವನ್ನೂ ಸತ್‌ಪಾತ್ರನಿಗೆ ದಾನ ಕೊಡಬಹುದು. ಎಲ್ಲಾ ನೈವೇದ್ಯಗಳಲ್ಲಿ ಜನ್ಮ ನೈವೇದ್ಯ ಉತ್ತಮ. ಜನ್ಮ ನೈವೇದ್ಯವೆಂದರೆ ಜನ್ಮಾರ್ಪಣ (Dedication of one's whole life to the service of Shiva=service of all those that are shiva-conscious) ಅದರಿಂದ ಪುನರ್ಜನ್ಮದಿಂದ ಭಕ್ತನು ಮುಕ್ತನಾಗುವನು.

ಭಗ ಯಾ ಭರ್ಗ ಎಂದರೆ ಶಿವ. ಭಗನು ಭಗವಾನ್. ಜೀವಿಗಳ ಉತ್ಪತ್ತಿ, ವಿನಾಶ, ಅಗತಿ, ಗತಿ, ವಿದ್ಯೆ, ಅವಿದ್ಯೆಗಳನ್ನು ಬಲ್ಲವನು ಭಗವಾನ್. ಅನ್ಯರು ಭಗವಂತರಲ್ಲ. ಭಗವೆಂದರೆ ಭಾಗ್ಯ. ಅದು ಸರ್ವಾಸ್ತಿತ್ವಾಧಾರ, ಶಿವಪೀಠ. ಶಿವನು ಲಿಂಗ, ಮಹಾದೇವ ಚಿಹ್ನ. "ಲಿಂಗಾರ್ಥ ಗಮಕಂ ಚಿಹ್ನಂ ಲಿಂಗಮಿತ್ಯಭಿಧೀಯತೇ. ಲಿಂಗಮರ್ಥಂ ಹಿ ಪುರುಷಂ ಶಿವಂ ಗಮಯತೀತ್ಯದಃ। ಶಿವಶಕ್ತ್ಯೋಶ್ಚ ಚಿಹ್ನಸ್ಯ ಮೇಲನಂ ಲಿಂಗಮುಚ್ಯತೇ॥ (P. 18, Shivapurana, Nag Publication, Delhi) ಶಿವನು ಊರ್ಧ್ವರೇತನು. ಆದ್ದರಿಂದ ಶಿವಲಿಂಗನು ಪೀಠದಲ್ಲಿ ಊರ್ಧ್ವಮುಖವಾಗಿದೆ. ಪೀಠವು ಚತುಷ್ಕೋನ (ಯಾ ತ್ರಿಕೋನ) ಎಂಬುದು ದೃಶ್ಯ; ಅದು ವೃತ್ತಾಕಾರವಾಗಿರುವುದೂ ಉಂಟು. ಶಿವ ಶಕ್ತಿಗಳು ಅಭಿನ್ನ, ಲಿಂಗ ಪೀಠಗಳು ಅಭಿನ್ನ ಎಂಬುದು ಭಾವ್ಯ. ಗೋಮಯ, ಗೋಜಲ, ಗೋಕ್ಷೀರ, ತತ್ಕ್ಷೀರ ಜನ್ಯ ದಧಿ, ತಜ್ಜನ್ಯ ಆಜ್ಯ–ಎಂಬಿವು ಪಂಚಗವ್ಯ. ಶಿವಲಿಂಗಕ್ಕೆ ಪಂಚಗವ್ಯಾಭಿಷೇಕ ಮಾಡುವುದು ಶ್ರೇಷ್ಠ, ಪಂಚಗವ್ಯವು ಬ್ರಾಹ್ಮಯಜ್ಞ ಸಾಧನವೆಂಬುದು ವ್ಯಾಸೋಕ್ತ. ಬ್ರಾಹ್ಮಯಜ್ಞವು (ಪೂಜೆಯು) ಕ್ಷಾತ್ರಾದಿ ಯಜ್ಞಗಳಿಂದ ಭಿನ್ನ. ಅದು ಅಧ್ವರ (ಅಹಿಂಸಾತ್ಮಕ). ಸರ್ವಾರಾಧನೆಗೂ ಓಂಕಾರವು ಆದ್ಯೋಚ್ಚಾರ್ಯ. ಓಂಕಾರ ನಾದಬಿಂದು ಕಲೆಗಳದ್ದೊಂದು ಸೃಷ್ಟಿಸಿದ್ಧಾಂತವಿದೆ. ಅವು ಶಿವನ ಸಕಲ ಸ್ವರೂಪದ ಸಂಕೇತ. ಅಥವಾ ಪ್ರಣವವನ್ನು

ಧ್ವನಿಲಿಂಗವೆನ್ನಲಾಗಿದೆ. ಅದು ಸ್ವಯಂಭುವಿನ ನಾದಲಿಂಗ. ಬಿಂದುಲಿಂಗವು ಯಂತ್ರದ್ದು. ಯಂತ್ರ ಮಕಾರವು ಕಲಾಪತಿ ಸ್ಥಾಪಕ. ಅ,ಉ,ಮ್=ಓಂ. ಕಂಠ್ಯದಿಂದ ಓಷ್ಠ್ಯದವರೆಗೆ ಇರುವ ಮನೋಷ್ಠ್ಯೋಚ್ಚಾರ್ಯ ನಾದಗಳೆಲ್ಲವುಗಳಿಗೂ ಓಂ ಎಂಬುದು ಪ್ರತ್ಯಾಹಾರ. ಅದರಲ್ಲಿ ಜೀವಿಗಳ ಬಾಯಿಂದ ಬರುವ ಎಲ್ಲ ನಾದಗಳೂ ಅಡಕವಾಗುತ್ತವೆ. ಆ ನಾದಗಳ ಮಾನುಷ ಸಂಖ್ಯೆ ೬೩ ಯಾ ೬೫. (See International phonetic Transcription ಮತ್ತು ಋಗ್ವೇದ ಪ್ರಾತಿಶಾಖ್ಯ) ಪ್ರಣವವನ್ನೊಂದು ಪ್ರತ್ಯೇಕಲಿಂಗವೆಂದು ಗ್ರಹಿಸಿದ ಈ ಪುರಾಣವು ಪ್ರಣವಲಿಂಗ, ಧ್ವನಿಲಿಂಗ, ನಾದಲಿಂಗ, ಬಿಂದುಲಿಂಗ, ಚರಲಿಂಗ ಮತ್ತು ಗುರುಲಿಂಗ (ಉಕಾರ–ಅಕಾರಗಳು ಕೊನೆಯ ಎರಡು ಲಿಂಗಗಳು) ಎಂದೋ ಧ್ವನಿಲಿಂಗ, ನಾದಲಿಂಗ, ಸ್ವಯಂಭೂ ಲಿಂಗ, ಬಿಂದುಲಿಂಗ, ಚರಲಿಂಗ ಮತ್ತು ಗುರುಲಿಂಗ ಎಂದೋ ಆರುಲಿಂಗಗಳನ್ನಾಗಿ ವರ್ಣಿಸುತ್ತದೆ. ಈ ಆರು ಲಿಂಗಗಳ ಪೂಜೆಯಿಂದ ಜೀವನ್ಮುಕ್ತಿಯು ಲಭ್ಯ. ಈ ಪ್ರಕಾರ ಪೌರಾಣಿಕವಾಗಿ ಪ್ರೇಯಃ ಶ್ರೇಯಸ್ಸುಗಳ ಸಾಧನೆಗೆ ಬೇಕಾದ ಶಿವಪೂಜಾ ಯೋಗಗಳು ವಿವಿಧ. ಇದು ಗೀತಾ ಸಮರ್ಥಿತ ತಾತ್ಪರ್ಯಃ

**"ಯೇ ಯಥಾ ಮಾಂ ಪ್ರಪದ್ಯಂತೇ**
**ತಾಂಸ್ತಥೈವ ಭಜಾಮ್ಯಹಂ॥** (೪–೧೧ ಭ. ಗೀ.)
**ಯೋ ಯೋ ಯಾಂ ಯಾಂ ತನುಂ ಭಕ್ತ:**
**ಶ್ರದ್ಧಯಾರ್ಚಿತುಮಿಚ್ಛತಿ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ**
**ತಾಮೇವ ವಿದಧಾಮ್ಯಹಂ"** (೭–೨೧)

ಶಿವಪೂಜಾ ಸ್ಥಲ–ಕಾಲಾದಿಗಳ ಪ್ರಕಾರಗಳೂ ವಿವಿಧ. ಆದರೆ ಎಲ್ಲವೂ ಯೋಗ್ಯ ಅಲ್ಲ ಎಂಬುದು ಕಾಮ್ಯಕರ್ಮಿಗಳಿಗೆ ಹೇಳಿದ್ದು ಎಂಬುದು ಗಣ್ಯ. ನಿಷ್ಕಾಮಕರ್ಮಿಗಳ ನಿಷ್ಕಲ ಲಿಂಗ ಪೂಜೆಗೆ "ಅಕಾಲೋ ನಾಸ್ತಿ ಧರ್ಮಸ್ಯ" ಎಂಬುದು ಅನ್ವಯಿಸುತ್ತದೆ. ಏಕೆಂದರೆ ಶಿವನ ನಿಷ್ಕಲರೂಪಕ್ಕೆ (Poise) ಕಾಲಾತೀತ ಭಾವವಿದೆ (ಶಿ. ಪು. ಪು ೧೯ ಶ್ಲೋಕ ೬೪).

ಸ್ಥಲ ವಿಚಾರದಲ್ಲಿ ಚತುರ್ದಶ ಲೋಕಗಳು ಉಲ್ಲಿಖಿತಃ–ಭೂಃ, ಭುವಃ, ಸುವಃ, ಮಹಃ, ಜನಃ, ತಪಃ ಮತ್ತು ಸತ್ಯಂ ಎಂಬಿವು ಸಪ್ತ ಊರ್ಧ್ವ ಲೋಕಗಳು; ಅತಲ, ವಿತಲ, ಸುತಲ, ಮಹಾತಲ, ರಸಾತಲ, ತಲಾತಲ ಮತ್ತು ಪಾತಾಲಗಳು ಅಧೋ ಲೋಕಗಳು. ಸ್ವಾಮಿ ರಾಮತೀರ್ಥರ ತಾತ್ಪರ್ಯದಂತೆ ಇವೆಲ್ಲಾ ಮಾನವ ಮನೋಬುದ್ಧಿಮಯವಾದ ಸ್ಥಿತಿಗಳು. ಮನಸ್ಸಿಲ್ಲದಿದ್ದರೆ ಈ ಯಾವುವೂ ಮಾನವನ ಪಾಲಿಗಿಲ್ಲ. Knowledge by Identity ಐಕಾತ್ಮ್ಯವೇ ಪೂರ್ಣಸತ್ಯ ಸಾಕ್ಷಾತ್ಕಾರ ಎಂಬ ಪ್ರಮಾಣಶಾಸ್ತ್ರದ ಮಾತಿನಂತೆ Subject-object ನೋಟಕ ಮತ್ತು ನೋಡಲ್ಪಡುವ

ವಸ್ತುಗಳ ಐಕ್ಯವೊಂದೇ ಆ ವಸ್ತುವಿನ ಯಾ ವಿಷಯದ ಅನುಭವವನ್ನು ನೂರಕ್ಕೆ ನೂರರಷ್ಟು ಪೂರ್ಣತೆಗೆ ಮುಟ್ಟಿಸಬಲ್ಲುದು. ಮನಃಶಾಸ್ತ್ರಜ್ಞ (Adler) ಯಾಡ್ಲರನ ಪ್ರಕಾರ ಯಾವುದೂ ಸಂಪೂರ್ಣವಾಗಿ ವೈಯಕ್ತಿಕವೂ ಅಲ್ಲ ಸಾಮಷ್ಟಿಕವೂ ಅಲ್ಲ; ವಸ್ತುನಿಷ್ಠತೆ ವ್ಯಕ್ತಿನಿಷ್ಠತೆಗಳು ಸರ್ವಲೌಕಿಕಾನುಭವಗಳಲ್ಲೂ ಸಂಮಿಶ್ರ. ಲೋಕಾತೀತ (ಬುಧ್ಯತೀತ) ಅನುಭವದಲ್ಲಿ ವಿಭಜನೆ ಇಲ್ಲ. Intellect ಬುದ್ಧಿಯೊಂದೇ ವಿಷಯ ವಿಭಾಜಕ ಧರ್ಮವುಳ್ಳದ್ದು.

**"ಇಂದ್ರಿಯಾಣಿ ಪರಾಣ್ಯಾಹು–**
**ರಿಂದ್ರಿಯೇಭ್ಯಃ ಪರಂ ಮನಃ॥**
**ಮನಸಸ್ತು ಪರಾಬುದ್ಧಿರ್**
**ಯೋ ಬುದ್ಧೇಃ ಪರತಸ್ತು ಸಃ॥"** (೪.೪೨–ಭ.ಗೀ.)

ಆದುದರಿಂದ ಸಕಲ ಪ್ರಪಂಚದಲ್ಲಿ ಮಾತ್ರ Degrees of Truth ಸತ್ಯ ತಾರತಮ್ಯವಿರಬಲ್ಲುದು. ಈ ಪ್ರಪಂಚ ಪ್ರದರ್ಶಕವಾದ ಶಕ್ತಿಯು ಮಾಯೆ:

**ಮಾ ಲಕ್ಷ್ಮೀಃ ಕರ್ಮ ಭೋಗೋ ವೈ**
**ಯಾತಿ ಮಾಯೇತಿ ಕಥ್ಯತೇ।**
**ಮಾ ಲಕ್ಷ್ಮೀರ್ಜ್ಞಾನಭೋಗೋವೈ**
**ಯಾತಿ ಮಾಯೇತಿ ಕಥ್ಯತೇ॥**

(ಶಿ.ಪು. ಪುಟ ೧೯, ಶ್ಲೋಕ ೬೯ (ನಾಗಪ್ರಕಾಶನ, ದಿಲ್ಲಿ) ಈ ಪುರಾಣದ ಪ್ರಕಾರ–

ಬ್ರಹ್ಮ ಸೃಷ್ಟಿಸಿದ ಲೋಕಗಳು ೧೪ ವಿಷ್ಣು ಸೃಷ್ಟಿಸಿದ ಲೋಕಗಳು ೧೪ (ಇವು ಬ್ರಹ್ಮನ ಸತ್ಯಲೋಕದ ಮೇಲಿನವು) ರುದ್ರ ಸೃಷ್ಟಿಸಿದ ಲೋಕಗಳು ೨೮ (ಇವು ವಿಷ್ಣುವಿನ ೧೪ ಲೋಕಗಳ ಮೇಲಿನವು) ಒಟ್ಟು ೫೬ ಲೋಕಗಳಾಗುತ್ತವೆ.

ನಿಷ್ಕಲನು ನಾದಬಿಂದು ಕಲಾತೀತ, ನಿರಾಕಾರ, ನಿರ್ಗುಣ, ನಿರಂಜನ, ಸಕಲ=ಶಕ್ತಿ (Potency) ಗಾಯತ್ರಿಯು ಪ್ರಣವದ ಅಭಿವ್ಯಕ್ತಿ, ಗಾಯತ್ರಿಯಿಂದ ವೇದತ್ರಯದ ಆವಿರ್ಭಾವ. ವೇದತ್ರಯದಿಂದ ಸರ್ವನಾಮರೂಪಮಯ ಸೃಷ್ಟಿಗಳಾದವು. ಪ್ರಣವವೆಂದರೆ ಅಕ್ಷರ. ಕ್ಷರವಲ್ಲದ್ದು, ನಾಶವಿಲ್ಲದ್ದು, ವೇದದಲ್ಲಿ ಅದನ್ನು "ಉದ್ಗೀಥ" ಎನ್ನುವುದುಂಟು. ಗೀತೋಕ್ತವಾದ ಪುರುಷೋತ್ತಮೇಶ್ವರನನ್ನು ಅದು ಪ್ರತಿನಿಧಿಸುತ್ತದೆ. ಪ್ರಣವವು ಬ್ರಹ್ಮ ಹೃದಯಜನ್ಯ. ಅದರ ಅ.ಉ, ಮಕಾರಗಳು ವಿಷ್ಣು, ರುದ್ರ, ಬ್ರಹ್ಮರೆಂಬ ತ್ರಿಮೂರ್ತಿಗಳ ಧ್ವನಿಗಳು. ಈ ತ್ರಿಮೂರ್ತಿಗಳೇ ಪ್ರಕೃತಿ ಯಾ ಶಕ್ತಿ. ಬಿಂದುವು ತ್ರಿಗುಣಮಯ; ಸೂಕ್ಷ್ಮತಮ ರೂಪದಲ್ಲದು ಸರ್ವ ಶಕ್ತಿಗಳನ್ನು ಒಳಗೊಂಡಿದೆ.

–೬–

# ಶಕ್ತಿ ತತ್ವ (Energy Par Excellence)



ಬೀಜ (ಅಚಿತ್) ನಾದ (ಚಿದಚಿತ್) ಬಿಂದು (ಚಿತ್)

ಬಿಂದು ಶಬ್ದ ಬ್ರಹ್ಮ ಯಾ ವೇದ, ವೇದದ ಸೂಕ್ಷ್ಮತಮ ರೂಪವು ಬ್ರಹ್ಮ. ಅದು ವರ್ಣಾದಿ ವಿಶೇಷ ರಹಿತ, ಜ್ಞಾನಪ್ರಧಾನ, ಸೃಷ್ಟ್ಯುಪಯೋಗಿಯಾದ ಅವಸ್ಥಾ ವಿಶೇಷ; ಚೇತನ ಮಿಶ್ರವಾದಾಗ ನಾದ. ಇದು ಜಗತ್ತಿನ ಉಪಾದಾನ ಕಾರಣ. ಮೂಲಾಧಾರ ಅದಕ್ಕೆ ಆಧಾರ. ಅಲ್ಲಿ ಅದು ಪರಾವಾಕ್. ನಾಭಿಗೇರಿದಾಗ ಮನೋವಿಷಯವಾದ ಪಶ್ಯಂತೀ ವಾಕ್. ಇವೆರಡೂ ಯೋಗಿಗಳ ನಿರ್ವಿಕಲ್ಪ ಜ್ಞಾನಕ್ಕೆ ಗಮ್ಯ. ಇವಕ್ಕೆ ಈಶ್ವರನು ಅಧಿದೈವ. ಪಶ್ಯಂತಿಯು ಹೃದಯಸ್ಥಲಕ್ಕೇರಿದಾಗ ಮದ್ಯಮಾ ವಾಕ್. ಮಧ್ಯಮೆಯು ಬುದ್ಧಿಗ್ರಾಹ್ಯ. ಅದು ಕಂಠಕ್ಕೇರಿದಾಗ ವೈಖರೀವಾಕ್. = ಇತರರ ಕಿವಿಗಳಿಗೆ ಕೇಳಿಸುವ ವಿವಿಧ ಮಾನವ ಭಾಷೆಗಳು.

"ಕರ್ಮಭೋಗವು ಲಕ್ಷ್ಮೀ ಅಥವಾ ಮಾಯೆ. ಜ್ಞಾನಭೋಗವು ಲಕ್ಷ್ಮೀ ಅಥವಾ ಮಾಯೆ" – ಪುರಾಣವು ಹೇಳುವ "ಮಾ" ಎಂಬ ಶಬ್ದದ ಅರ್ಥವಿದು. ಈ ೫೬ ಭೋಗರಾಜ್ಯಗಳನ್ನು ಶಿವದೂತನಾದ ಕಾಲಚಕ್ರೇಶ್ವರನು ನೋಡಿಕೊಳ್ಳುತ್ತಾನೆ. ಬ್ರಹ್ಮ, ವಿಷ್ಣು, ರುದ್ರರು ತದಧೀನರು. ಕರ್ಮಜ್ಞಾನ ಭೋಗಗಳ ಕೆಳಮಟ್ಟದಲ್ಲಿ ಕಾಮಭೋಗ ಕ್ರೋಧಭೋಗಗಳು ಇರುತ್ತವೆ. ಕ್ಷಮಾಲೋಕವು ೨೮ನೆಯದಾದರೆ, ಅಹಿಂಸಾಲೋಕವು ೫೬ನೆಯದು. ಬ್ರಹ್ಮನ ಲೋಕಗಳು ಅಧಮ, ವಿಷ್ಣು ಲೋಕಗಳು ಮಧ್ಯಮ ಮತ್ತು ರುದ್ರಲೋಕಗಳು ಉತ್ತಮ. (ತಾಮಸ, ರಾಜಸ, ಸಾತ್ವಿಕಗಳಂತೆ) ಅವನ್ನು ಆಸುರಿ, ಮಾನುಷಿ, ದೈವಿಗಳೆನ್ನಬಹುದು. ಮುಂದೆ ಮುಕ್ತಿ, ಶಿವ, ಸಚ್ಚಿದಾನಂದ!

ಮಾಯಾಲೋಕ ಭೋಗಗಳು ನಶ್ವರ, ಅತ್ಯಲ್ಪ ಕಾಲಿಕ. ಮಾಯೋತ್ತರ ಲೋಕಭೋಗಗಳು ದೀರ್ಘಕಾಲಿಕ. ಮಾಯೆಯ ಕೆಳಗೆ ತಿರೋಧಾನ; ಮಾಯೋತ್ತರದ ಮೇಲೆ ನಿತ್ಯ, ಶುದ್ಧ, ಬುದ್ಧ, ಸಚ್ಚಿದಾನಂದ, ಕಾಲದೇಶಾತೀತ ಅನುಭವ. ಸಂಸಾರಿಗಳು

ಪ್ರಾಕೃತಿಕ ದ್ರವ್ಯಗಳ ಪೂಜಕರು. ಅವರಿಗಿಂತ ಮುಕ್ತರು ಮೇಲಿನವರು. ಪ್ರಾಕೃತ ದ್ರವ್ಯ ಪೂಜಕರು, ಪೌರುಷ ದ್ರವ್ಯ ಪೂಜಕರು, ಒಬ್ಬರು ಶಕ್ತಿಲಿಂಗ ಪೂಜಕರಾದರೆ, ಇನ್ನೊಬ್ಬರು ಶಿವಲಿಂಗ ಪೂಜಕರು. ಸಕಾಮರಿಗಿಂತ ನಿಷ್ಕಾಮರು ಶ್ರೇಷ್ಠರು; ಹಿಂಸಾಚಾರಿಗಳಿಗಿಂತ ಅಹಿಂಸಾಚಾರಿಗಳು ಉತ್ತಮರು. ಶಕ್ತಿಲಿಂಗ, ಶಿವಲಿಂಗ, ಆವೃತಲಿಂಗ, ಅನಾವೃತಲಿಂಗ, ಕಲ್ಪಿತಲಿಂಗ, ಅಕಲ್ಪಿತಲಿಂಗ, ಬಾಹ್ಯಲಿಂಗ, ಅಂತರಲಿಂಗಗಳನ್ನು ಉತ್ತರೋತ್ತರ ಉತ್ತಮ ಎಂಬಂತೆ ಪುರಾಣ ಹೇಳುತ್ತದೆ. ಹಾಗೇ ಶಕ್ತಿರೂಪ, ಬಿಂದು ರೂಪ, ನಾದರೂಪ, ಕರ್ಮರೂಪ, ಜ್ಞಾನರೂಪ (ರೂಪ=ಲೋಕ=ಮಾನಸಾನುಭವ ಸ್ಥಿತಿ) ಎಂಬ ವಿವರವನ್ನೂ ಆ ಎರಡೆರಡರಲ್ಲಿ ಮೊದಲಿನದಕ್ಕಿಂತ ಎರಡನೆಯದು ಉತ್ತಮ ಎಂಬಂಥ "ಉತ್ತರೋತ್ತರತೆ"ಯಿಂದಲೇ ಹೇಳುತ್ತಾ ಹೋಗಿದೆ. ತಿರೋಧಾನ (ಶೂನ್ಯತೆ) ಜ್ಞಾನದಿಂದ (ಶಿವಜ್ಞಾನದಿಂದ) ನಿವಾರಿಸಲ್ಪಡುತ್ತದೆ. ಶೂನ್ಯತೆ, ನಾಶ, ಪಾಶ, ಬಂಧ, ನರಕಗಳು ದೀರ್ಘ ದುಃಖಾನುಭವಗಳು.

ಇನ್ನೂ ಒಂದು ವಿಧದಿಂದ ಪೂಜಕರು ವಿಭಕ್ತರಾಗುತ್ತಾರೆ: ಆದಿಭೌತಿಕ, ಆಧ್ಯಾತ್ಮಿಕ ಎಂದು. ಅಧರ್ಮ ಮಹಿಷಾರೂಢರು ಕಾಲಚಕ್ರವಶರು. ಸತ್ ಧರ್ಮಗಳ ಅನುಯಾಯಿಗಳು, ಬ್ರಹ್ಮಚರ್ಯಸ್ಥರು, ಶಿವಲೋಕಾಗ್ರಸ್ಥರು.

ವೃಷ=ವೃಷಭ=ನಂದಿ=ಧರ್ಮ. ಆ ವೃಷಭಕ್ಕೆ ಕ್ಷಮೆ ಕೋಡು, ಶಮ ಕಿವಿ, ಆ ಕಿವಿ ವೇದಧ್ವನಿ ವಿಭೂಷಿತ. ಅದಕ್ಕೆ ಆಸ್ತಿಕ್ಯವು ಕಣ್ಣು, ಅದರ ನಿಶ್ವಾಸವು ಗುರುಬುದ್ಧಿಮನ. ವೃಷಭವೆಂಬ ಧರ್ಮವು ಕ್ರಿಯಾದಿ–ಸರ್ವಕಾರಣಗಳಲ್ಲೂ. ಆ ವೃಷಭವು ಕಾಲಾತೀತ ಶಿವನಲ್ಲಿ ಅಧಿಷ್ಠಿತವಾಗಿದೆ.

ಬ್ರಹ್ಮ, ವಿಷ್ಣು, ಮಹೇಶ್ವರ (ರುದ್ರ)ರಿಗೆ ಆಯುರ್ದಾಯಗಳಿವೆ. ಅವರ ಸ್ಥಿತಿಗಳ ಮೇಲೆ ದಿನ, ರಾತ್ರಿ, ಮರಣಾದಿಗಳಿಲ್ಲ. ಅವರೂ ಕೂಡಿ ಅವರವರೆಗಿನ ಎಲ್ಲ ಚರಾಚರಗಳಿಗೂ ಕಾಲಮಾನದ ಪರಾಧೀನತೆ ಇದೆ. ಅಂದರೆ ಅವರದೆಲ್ಲಾ ಪರಿವರ್ತನ ಸಂಸಾರ. ಅವರು ಶಿವನ ಅನುಲ್ಲಂಘನೆಯ ಆಜ್ಞಾನುಸಾರ ತಮ್ಮ ಕರ್ತವ್ಯಗಳನ್ನು ಮಾಡಿ ಉಳಿದವರಿಗೆ ಮಾದರಿ ಹಾಕಿಕೊಡತಕ್ಕಂತವರು. ಪರಶಕ್ತಿಯುತನಾದ ಶಿವನು ಮಾಡುವುದು ಅಥವಾ ಮಾಡಿಸುವುದು (೧) ಸೃಷ್ಟಿ, (೨) ಸ್ಥಿತಿ, (೩) ಸಂಹಾರ, (೪) ತಿರೋಭಾವ ಮತ್ತು (೫) ಅನುಗ್ರಹ ಎಂಬ ಐದನ್ನು. ಈ ಪಂಚಕೃತ್ಯಗಳ ಕರ್ತನಾದ ಪಂಚಾನನ ಅವನು. ಮೂಲತಃ ಅವನು ದಿಕ್ಕಾಲಾದ್ಯನವಚ್ಛಿನ್ನ, ಅವನ ಜ್ಞಾನ ಕೈಲಾಸವು ಪಂಚಾವರಣ ಯುಕ್ತವಾದದ್ದು; ಪಂಚಮಂಡಲ ಸಂಯುಕ್ತ; ಪಂಚಬ್ರಹ್ಮ ಕಲಾಯುಕ್ತ; ಆದಿಶಕ್ತಿ ಸಮನ್ವಿತ. ಆದಿಲಿಂಗ ಅಲ್ಲದೆ ಅದೇ ಶಿವಾಲಯ. ಶಿವನು ಪರಮಾತ್ಮನು. ಅವನು ಧ್ಯಾನಶೀಲ, ಸದಾನುಗ್ರಹಕಾರಕ, ಸಮಾಧ್ಯಾಸನಸ್ಥ ಮತ್ತು ಸ್ವಾತ್ಮಾರಾಮ (ತನ್ನಲ್ಲೇ ತಾನು ತೃಪ್ತನಾಗಿರುವ ಸ್ವತಂತ್ರನು) ಕರ್ಮಧ್ಯಾನಾದಿಗಳಿಂದ

ಅವನ ದರ್ಶನವು ಸಾಧ್ಯ. ಅವನು ಸಾಧಕನಿಗೆ ಶಿವಮತಿಯನ್ನೀಯುತ್ತಾನೆ. ಮುಕ್ತಿ=ಆತ್ಮ ಸ್ವರೂಪೇಣ ಸ್ವಾತ್ಮಾರಾಮ ಸ್ಥಿತಿಯಲ್ಲಿರುವುದು.

ಸ್ತ್ರೀತ್ವದ ನೈಚ್ಯಾನುಸಂಧಾನಕ್ಕೆ, ಕ್ಷತ್ರಿಯತ್ವದ ತತ್ಸಮ ಭಾವನೆಗೆ, ವೈಶ್ಯತೆಯ ತತ್ತುಲ್ಯ ಮನೋರೋಗಕ್ಕೆ ಶೂದ್ರರ ಸ್ವಹೀನತಾ ಭಾವನೆಗೆ ಈ ಪುರಾಣ ಪರಿಹಾರ ಹೇಳಿದ್ದು ಗಮನಾರ್ಹ. ಅನುಕ್ರಮವಾಗಿ ಅವರವರಿಗೆ ಪಂಚಾಕ್ಷರ ಮಂತ್ರ ಜಪವನ್ನು ಪಂಚಲಕ್ಷ ಸಾರಿ ಮಾಡಿದರೆ ಅನುಕ್ರಮವಾಗಿ ಪುರುಷತ್ವ ಮನೋಧರ್ಮ, ವಿಪ್ರತ್ವದ ಪಾವಿತ್ರ್ಯ, ಕ್ಷಾತ್ರ ದಿಟ್ಟತನ, ವೈಶ್ಯತ್ವದ ದಾನಶೀಲ–ಇವು ಪ್ರಾಪ್ತವಾಗುತ್ತವೆ. ಹುಟ್ಟುಲಿಂಗವನ್ನೂ ವರ್ಣವನ್ನೂ ಯಾರಿಗೂ ಮರಣಾಂತವಾಗಿ ಗಂಟುಹಾಕಲಾರದು ಎಂಬ ವ್ಯಾಸಾಭಿಪ್ರಾಯವನ್ನು ಇದು ಎತ್ತಿ ಹಿಡಿದದ್ದು ಆಚರಣೀಯವಾಗಿದೆ.

**"ಶೂದ್ರಯೋನೌ ಹಿ ಜಾತಸ್ಯ**
**ಸದ್ ಗುಣಾನುಪತಿಷ್ಠತಃ।**
**ವೈಶ್ಯತ್ವಂ ಲಭ್ಯತೇ ತಾತ**
**ಕ್ಷತ್ರಿಯತ್ವಂ ತಥೈವಚ॥**

ಹಿಂದು ಧರ್ಮ ಪ್ರವರ್ತಕರೆಂದುಕೊಳ್ಳುವವರು ಸಾಮೂಹಿಕವಾಗಿ ಈ ಪುರಾಣ ಹೇಳಿದ ಕ್ರಮವನ್ನು ಜಾರಿಗೆ ತರಬೇಕು. ಅಂದರೆ ಜಪಕ್ಕೆ ಅವಿನಾಭಾವಿಯಾದ ದೇಹ–ಮನಃಪಾವಿತ್ರ್ಯಗಳ ವ್ರತಾಚಾರದ ಅನುಷ್ಠಾನವನ್ನು ವಿಧಿವತ್ತಾಗಿ ಸರ್ವಧರ್ಮ ಸಂಮ್ಮೇಳನಾದಿ ಸಂದರ್ಭಗಳಲ್ಲಿ ಸಾರ್ವಜನಿಕವಾಗಿ ಆಚರಿಸುವಂತೆ ಮಾಡಬೇಕೆಂದು ಪ್ರಾಮಾಣಿಕ ವಿಶ್ವ ಹಿಂದು ಹೇಳದಿರಲಾರನು.

–೭–

## ಬಂಧ ಮೋಕ್ಷಗಳು

"World existence is the ecstatic dance of Shiva= ಜಗದ ಅಸ್ತಿತ್ವವು ಶಿವತಾಂಡವ. Shiva and Kali, Brahman and Shakti, are one (see P 74 and 78, "The Life Divine" of Sri Aurobindo)= ಶಿವ ತಾಂಡವವು ಜಗತ್ತಿನ ಇರವಿನ ಸಂಕೇತ. ಶಿವಕಾಳಿ (ಬ್ರಹ್ಮ+ಶಕ್ತಿ) ಯರೊಂದೇ ಎಂದಿದೆ ಶ್ರೀ ಅರವಿಂದರ "ದಿವ್ಯ ಜೀವನ" ಹೇಗೆ? one constant and other Variable ನಿತ್ಯ, ಅನಿತ್ಯ ಎಂಬ ಎರಡು ಶಾಶ್ವತ ಶಕ್ತಿಗಳು ಶಿವನಿಗಿರುವುದರಿಂದ. ನಿತ್ಯಬಿಂದುವು ಪರಮ ಆತ್ಮ, ಶಿವೈಕ್ಯ ಸ್ಥಿತಿ; ಅದು ಅಚಲ, ಅವೈಕಲ್ಪಕ; ಅನಿತ್ಯ ಕರ್ಮ ತಾಂಡವವು ಅಸಂಖ್ಯೆಯ. ಅಗಣನೀಯ. ಜೀವಾತ್ಮನು ಕೇಂದ್ರಕ್ಕೆ ಬೇಕಾದರೆ ಹೋಗಬಹುದು. ಇಲ್ಲವಾದರೆ ಇರುವಲ್ಲಿಯೇ (ಪ್ರಾಂತದಲ್ಲಿಯೇ) ಇರಬಹುದು. ಶಿವಪುರಾಣವು ಕೇಂದ್ರೋನ್ಮುಖತೆಯನ್ನು ಬೋಧಿಸುವುದು. ಇಂಥ ಯಾವ ಬೋಧನೆಯಾದರೂ ಭಾರತದಲ್ಲಿ ಐಚ್ಛಿಕ, ಪಾತ್ರಾನುಗುಣ, ಯೋಗ್ಯತಾನುಸಾರ, ಒಲವಿನಂತೆ–ಇಲ್ಲಿ ಬಲಾತ್ಕಾರವಿಲ್ಲ. ಆದರೆ ಆಷಾಢಭೂತಿತನ ಆಗೀಗ ತಲೆಹಾಕಿದ್ದುಂಟು. ಆ ಬಗ್ಗೆ ಮಾತ್ರ ಜಿಜ್ಞಾಸುಗಳು ಜಾಗರೂಕರಾಗಿರಬೇಕು; ಸಾಧಕರು ಕಾಪಟಿಕರ ಕುರಿತು ಇನ್ನಷ್ಟು ಎಚ್ಚರದಿಂದಿರಬೇಕು; ಗುರುಗಳ ಶಿಷ್ಯಯೋಗ್ಯತಾ ಶೋಧಕಶಕ್ತಿಯು ಗೃಹೀತ. ತದ್ವಿರುದ್ಧ ಸಂದರ್ಭವೂ ಈಗ ಅನಿವಾರ್ಯ.

Bondage - ಬಂಧನ ಎಂಬುದರ ಅನುಭವದಿಂದ ಬೇಸತ್ತವರಿಗೆ ನಿಃಸ್ವಾರ್ಥತೆ, ನಿರ್ಲಿಪ್ತತೆ, ಸ್ವಸುಖ ದುಃಖ ವಿಮುಖತೆ, ಅಥವಾ ಪರರಾದ ಸಜ್ಜನರ ಸೇವೆಯಲ್ಲಿ (ಅದೇ ಈಶ್ವರ ಸೇವೆ ಎಂದು ಶಿವಪೂಜಾಕಾಲದಲ್ಲೂ ಮರೆಯದೆ) ಇರುವುದು– ಎಂಬ ವಿಚಾರಗಳು ಸ್ವಾಗತಾರ್ಹ; ಮಿಕ್ಕವರಿಗಲ್ಲ. ಶಿವಪುರಾಣವು ಬದ್ಧರಿಗೆ (ಮನಃಶಾಂತಿಯ ಸಿದ್ಧಿಗೆ) ಆವಶ್ಯಕವಾದ ಬಂಧ–ಮುಕ್ತಿಗಳ ವಿವರಗಳನ್ನು ಹೇಳ ಹೊರಟಿತು; ತನ್ನ ವಿದ್ಯೇಶ್ವರ ಸಂಹಿತೆಯ ೧೮ನೆಯ ಅಧ್ಯಾಯದಲ್ಲಿ ಬಂಧ ಪ್ರಕಾರಗಳನ್ನು ಎಂಟೆಂದು ವರ್ಣಿಸುತ್ತದೆ:–

೧) ಪ್ರಕೃತಿ ಬಂಧ; (೨) ಬುದ್ಧಿ ಬಂಧ; ೩) ಅಹಂಕಾರ ಬಂಧ; (೪) ಪೃಥಿವೀತನ್ಮಾತ್ರ ಬಂಧ; (೫) ಆಪ್ತನ್ಮಾತ್ರ ಬಂಧ; (೬) ತೇಜಸ್ತನ್ಮಾತ್ರ ಬಂಧ; (೭) ವಾಯುತನ್ಮಾತ್ರ ಬಂಧ; (೮) ಆಕಾಶತನ್ಮಾತ್ರ ಬಂಧ–ಎಂಬಿವೇ ಆ ೮ ಬಂಧಗಳು. ಈಯೆಂಟರ ಮಗುವು ದೇಹ; ದೇಹದ ಮಗುವು ಕರ್ಮ. ಈಯೆಂಟೂ ಜೀವಿಯ

ಪೂರ್ವಕರ್ಮಾನುಸಾರವಾಗಿ ಅದಕ್ಕೆ ಮತ್ತೆ ಮತ್ತೆ ದೇಹಗಳನ್ನು ಮಾಡಿಕೊಡುತ್ತಿರುತ್ತವೆ. ಆದುದರಿಂದ ನಮ್ಮ ದೇಹವೊಂದು ಅಷ್ಟಬಂಧ. ಅದರ ಬಂಧ ನಮಗೆ, ಶಿವನಿಗಲ್ಲ. [ನಾವು ಅಥವಾ ನಾನು ಎಂಬ ಜೀವ ಯಾರು? ಅಹಂಕಾರ ಪರಿಬದ್ಧ ಚೇತನೆ. ಚೇತನೆಗೆ (for the Absolute Consciousness of God) ನಿಜವಾದ ಬಂಧ (ಪರಿಬಂಧ, ಪರಿಮಿತಿ) ಇಲ್ಲವಾದುದರಿಂದ ಅದು ತೋರಿಕೆಯ ಬಂಧ. ಜೀವನು ತೋರಿಕೆಯ ಬದ್ಧ ಶಿವ. ಶಿವನಿಗಿದು ತೋರಿಕೆ ನಮಗೋ? ನನಗೋ? ನನಗಿದು ನಿಜವಾದ ಬಂಧ. ಈ ನಿಜವು ತೋರಿಕೆ ಎಂದೆನ್ನಿಸಿದ ದಿನವೇ ನಾನು ಮುಕ್ತ. ಹಾಗೆನ್ನಿಸಬೇಕಾದರೆ ಶಿವಕೃಪೆ ನನಗೆ ಅಗತ್ಯ. ಅದಕ್ಕೆ ಭಕ್ತಿಯುಕ್ತ ಜ್ಞಾನ ಅಥವಾ ಜ್ಞಾನಯುಕ್ತ ಭಕ್ತಿ ಎಂಬುದೊಂದೇ ಸಾಧನ ಸಾರ. "ಜ್ಞಾನಿ ಎಂದರೆ ನಾನೇ" ಎಂದು ಗೀತೆ ಹೇಳುವುದರ ಅರ್ಥವಿದು.

"The quality of uniqueness and persistence through chages by virtue of which any person calls himself "I" is called self or soul" p. 287-288 of the Dictionary of Philosophy (Jaico pub 1956) ಕರ್ಮದಿಂದ ದೇಹ, ದೇಹದಿಂದ ಕರ್ಮ–ಎಂಬುದು ಅನ್ಯೋನ್ಯಾಶ್ರಯ – ನಮಗೆ.

ಒಂದು ಜೀವಿಗೆ ಮೂರು ದೇಹಗಳು–ಸ್ಥೂಲ, ಸೂಕ್ಷ್ಮ, ಕಾರಣ–ಎಂದು. ಸ್ಥೂಲ ಶರೀರವು ಕೆಲಸಕ್ಕೆ, ಸೂಕ್ಷ್ಮ ಶರೀರವು ಇಂದ್ರಿಯ ಭೋಗಕ್ಕೆ, ಕಾರಣವು ಕರ್ಮಾನುಸಾರವಾದ ಆತ್ಮ ಭೋಗಕ್ಕೆ ಪಾತ್ರ. ಸುಖ, ದುಃಖ, ಪುಣ್ಯ, ಪಾಪಗಳು ಕರ್ಮಫಲಗಳು. ಪ್ರಕೃತಿ ಮುಂತಾದ ಎಂಟನ್ನು ಚಕ್ರಗಳೆನ್ನುತ್ತಾರೆ–ಅವುಗಳ ಪುನರಾವರ್ತನದ ದೆಸೆಯಿಂದ. ಈ ಚಕ್ರಭ್ರಮ ನಿವೃತ್ತಿಗಾಗಿ ಚಕ್ರಕರ್ತನನ್ನು ಸ್ತುತಿಸಬೇಕು. ಅವನೇ ಶಿವ. ಶಿವನ ಗುರುತುಗಳು ಯಾವುವು?

೧) ಸರ್ವಜ್ಞತೆ, ೨) ತೃಪ್ತಿ; ೩) ಅನಾದಿಯಾದ ಜಾಗರ; ೪) ಸ್ವತಂತ್ರತೆ; (೫) ನಿತ್ಯವಾಗಿ ಇರುವ ಶಕ್ತಿ; (೬) ಅನಂತ ಶಕ್ತಿ; (೭) ಮನಸ್ಸಿನ ಮೇಲೆ ಹತೋಟಿ; (೮) ಸರ್ವಪ್ರಭುತ್ವ – ಎಂಬೀ ಎಂಟು ಗುರುತುಗಳು.

ಕರ್ಮದೇಹ ವಶವಾದ ಬಳಿಕ ಶಿವಲೋಕವಾಸವು ಸಾಲೋಕ್ಯ; ಪಂಚತನ್ಮಾತ್ರಗಳು ಸಾಧಕನಿಗೆ ವಶವಾದ ಮೇಲೆ ಸಾಂಬ ಸಾಮೀಪ್ಯವು ಲಭ್ಯ; ಬುದ್ಧಿಯು ಸ್ವವಶವಾದ ಅನಂತರ ಸಾರೂಪ್ಯ ಮುಕ್ತಿಯು ದೊರಕುತ್ತದೆ. ಕಾರ್ಯಪ್ರಕೃತಿಯ ಮೇಲೆ ಪ್ರಭುತ್ವ ಪಡೆದ ಮೇಲೆ ಸಾರ್ಷ್ಟಿಯು ವಶ್ಯವಾಗುವುದು; ಕೊನೆಗೆ ಕಾರಣ ಪ್ರಕೃತಿಯ ಮೇಲಿನ ನಿಯಂತ್ರಣ ಸಿದ್ಧಿಸಿದ ಬಳಿಕ ಸಾಯುಜ್ಯ ಮುಕ್ತಿಯು ಲಭಿಸುತ್ತದೆ. ಸ್ವತಃ ಶಾಸ್ತ್ರೋಕ್ತವಾಗಿ ಶಿವಲಿಂಗದ ಪೂಜೆ ಮಾಡುತ್ತ ಹೋದರೆ ಶಿವಪ್ರಸಾದದಿಂದ ಅಥವಾ ಅನುಗ್ರಹದಿಂದ ಅನುಕ್ರಮವಾಗಿ ಇಲ್ಲಿ ಹೇಳಿದ ಮುಕ್ತ ಸ್ಥಿತಿಗಳನ್ನು ಶಿವಭಕ್ತನು ಪಡೆದು ನಿತ್ಯಾನಂದದಲ್ಲಿರುವನು. ಶಿವಕರುಣೆಗೆ ಪಾತ್ರನಾಗಲು ಮನುಷ್ಯನು ಹೆಣಗಲೇಬೇಕು–ಎಂಬುದು ಪುರಾಣಾದಿಗಳು ಕೊಡುವ ದೊಡ್ಡ ಎಚ್ಚರಿಕೆ!

–೮–

# ಶಿವಪೂಜೆಯ ಬಗೆಗಳು ಮತ್ತು ತಾತ್ವಿಕ ಹಿನ್ನೆಲೆ

ಶಿವಪೂಜೆಯ ಐದು ಬಗೆಗಳು: (೧) ಶಿವಕ್ರಿಯೆ. (೨) ಶಿವತಪಸ್ಸು (೩) ಶಿವಮಂತ್ರಜಪ, (೪) ಶಿವಜ್ಞಾನ ಮತ್ತು (೫) ಶಿವಧ್ಯಾನ. ಶಿವ=ಶುಭ=ಪುರುಷೋತ್ತಮನಾದ ಪರಮಶಿವ. ಪರಮಸತ್ಯದ ಪರಮ ಲಕ್ಷಣವಾದ ಶುಭತ್ವವಿಲ್ಲಿ ಧ್ವನಿತ (ಲಕ್ಷಿತ). ಶುಭವು ಆಹ್ಲಾದಕರ, ಸಚ್ಚಿದಾನಂದದ ಪ್ರಭಾವಲಯ. ಪೂಜೆಯು ಯಜ್ಞ, ಯಜ್ಞವು ದಾನ (ತ್ಯಾಗ) ಪ್ರಧಾನವಾದದ್ದು. ತ್ಯಾಗವೇ ಮುಕ್ತಿಗೆ ಅಗತ್ಯವಾದ ಮಾನಸ ಶಾಸ್ತ್ರೀಯ ದೃಢ ಪ್ರವೃತ್ತಿ. ಅದು ಆವರಣ ಭಂಗದ ಉಸಿರು. ನಿರಾವರಣವೇ ನಿರುಪಾಧಿಕ ಸಾಯುಜ್ಯ, ಪರಶಿವತ್ವ.

ಲಿಂಗಗಳು ಭೂವಿಕಾರಗಳು. ಸ್ವಯಂಭೂಲಿಂಗ, ಬಿಂದುಲಿಂಗ, ಪ್ರತಿಷ್ಠಿತಚರಲಿಂಗ ಮತ್ತು ಗುರುಲಿಂಗ ಎಂದು ಲಿಂಗಗಳ ಬಗೆ ಐದು. ಭೂಮಿಯಲ್ಲಿ ಅಂತರ್ಗತನಾದ ಶರ್ವನು ನಾದರೂಪದಿಂದ ಬೀಜಸ್ವರೂಪನು; ಅದು ಉದ್ಭವಲಿಂಗ. ಅದು ತಾನೇ ಉದ್ಭವಿಸಿದ್ದರಿಂದ ಸ್ವಯಂಭುವೆನ್ನಿಸಿಕೊಳ್ಳುತ್ತದೆ. ಅದು ಸ್ಥಾವರ. ಆ ಲಿಂಗಪೂಜೆಯಿಂದ ಜ್ಞಾನವು ತಾನಾಗಿ ಹೆಚ್ಚಾಗುತ್ತದೆ. ಚಿನ್ನ, ಬೆಳ್ಳಿ, ಮಣ್ಣು ಹೆಂಟೆ ಅಥವ ಸ್ವಹಸ್ತಲಿಖಿತಲಿಂಗ ಯಾ ಶುದ್ಧ ಪ್ರಣವಲಿಂಗ. ಪ್ರತಿಷ್ಠೆ ಮಾಡಿದ ಯಂತ್ರಲಿಂಗ (ಅದು ಬಿಂದುನಾದಮಯವಾದ ಸ್ಥಾವರ ಯಾ ಜಂಗಮ) ಅದು ಭಾವನಾಮಯ– ಅಸಂದಿಗ್ಧವಾಗಿ ಅದು ಶಿವದೃಷ್ಟಲಿಂಗ. ವಿಶ್ವಾಸವು ಫಲದಾಯಕ. ಶುಭವನ್ನು ಆವಾಹಿಸಿಕೊಂಡು ಈ ಯಾವ ಲಿಂಗವನ್ನಾದರೂ ಪೂಜಿಸಬೇಕು. ಅದರಿಂದ ಈಶತ್ವವು ತಾನಾಗಿ ಬರುತ್ತದೆ; ಅಭ್ಯಾಸದಿಂದ ಜ್ಞಾನವು ಲಭಿಸುತ್ತದೆ.

ಆತ್ಮಸಿದ್ಧಿಗಾಗಿ ದೇವತೆಗಳೂ ಋಷಿಗಳೂ ಮಂತ್ರದಿಂದ ಶುದ್ಧಮಂಡಲದಲ್ಲಿ ನಿರ್ಮಿಸಿದ ಶುದ್ಧ ಭಾವನೆಯ ಲಿಂಗವು ಪೌರುಷ ಲಿಂಗವೆನ್ನಿಸಿಕೊಳ್ಳುತ್ತದೆ; ಅದು ಪ್ರತಿಷ್ಠಿತ, ಅದರ ಪೂಜೆಯಿಂದ ಪೌರುಷವೂ ಈಶತ್ವವೂ (ಐಶ್ವರ್ಯವೂ) ಲಭಿಸುತ್ತವೆ. ಮಹಾಬ್ರಾಹ್ಮಣರೂ ರಾಜರೂ ಬಹಳ ಖರ್ಚುಮಾಡಿ ಶಿಲ್ಪಿಗಳಿಂದ ಮಾಡಿಸಿದ ಮಂತ್ರಸ್ಥಾಪಿತ ಲಿಂಗವು ಪ್ರತಿಷ್ಠಿತ ಮತ್ತು ಪ್ರಾಕೃತ. ಅದರ ಪೂಜೆಯಿಂದ ಪ್ರಾಕೃತೈಶ್ವರ್ಯವು ಲಭ್ಯ. ಊರ್ಜಿತವೂ ನಿತ್ಯವೂ ಆದುದು ಪೌರುಷಲಿಂಗ; ದುರ್ಬಲವೂ ಅನಿತ್ಯವೂ ಆದುದು ಪ್ರಾಕೃತಲಿಂಗ. ಹೊಕ್ಕುಳು, ನಾಲಿಗೆ, ಮೂಗಿನ ತುದಿ, ಜುಟ್ಟು, ಸೊಂಟ

ಮುಂತಾದುವುಗಳಲ್ಲಿರುವ ಲಿಂಗವು ಆಧ್ಯಾತ್ಮಿಕ ಚರಲಿಂಗ. ಪರ್ವತಲಿಂಗವು ಪೌರುಷ, ಭೂತಲಲಿಂಗವು ಪ್ರಾಕೃತ. ವೃಕ್ಷಾದಿಕೃತಲಿಂಗವು ಪೌರುಷ, ಗುಲ್ಮಾದಿ ಕೃತಲಿಂಗವು ಪ್ರಾಕೃತ; ಷಾಷ್ಟಿಕವು ಪ್ರಾಕೃತ, ಶಾಲಿಗೋಧೂಮಕೃತ ಲಿಂಗವು ಪೌರುಷ. ಅರುವತ್ತು ವರ್ಷ ತುಂಬಿದ್ದು ಷಾಷ್ಟಿಕ. ಅದರ ಪೂಜೆಯಿಂದ ಐಶ್ವರ್ಯ. ಪೌರುಷ, ವಿದ್ಯೆ, ಅಣಿಮಾದ್ಯಷ್ಟ ಸಿದ್ಧಿಗಳು ದೊರಕುತ್ತವೆ. ಸುಸ್ತ್ರೀಧನಾದಿಗಳಿಗಾಗಿ ಪೂಜಿಸುವ ಲಿಂಗವು ಪ್ರಾಕೃತ. ಈಶತ್ವವು ಒಡೆಯತನ. ಅಣಿಮಾದ್ಯಷ್ಟ ಸಿದ್ಧಿಗಳಲ್ಲಿಯ ಈಶತ್ವವು ಜಗತ್ ಪ್ರಭುತ್ವ, ಚಿಲ್ಲರೆ ಪ್ರಭುತ್ವವಲ್ಲ.

ಚರಲಿಂಗಗಳಲ್ಲಿ ರಸಲಿಂಗವು ಪ್ರಥಮ; ಅದು ಬ್ರಾಹ್ಮಣೇಷ್ಟಪ್ರದ. ಬಾಣಲಿಂಗವು ಕ್ಷತ್ರಿಯೇಷ್ಟಪ್ರದ, ಸ್ವರ್ಣಲಿಂಗವು ವೈಶ್ಯೇಷ್ಟಪ್ರದ, ಶಿಲಾಲಿಂಗವು ಶೂದ್ರರಿಗೆ ಶುದ್ಧಿಪ್ರದ. ಸ್ಫಟಿಕದ ಬಾಣಲಿಂಗವು ಎಲ್ಲರಿಗೂ ಎಲ್ಲ ಇಷ್ಟಾರ್ಥಗಳನ್ನೂ ಕೊಡುವಂಥದು. ಸ್ವಲಿಂಗವಿಲ್ಲದಲ್ಲಿ ಪರಲಿಂಗವು ಪೂಜನೀಯವಾಗುವುದು. ಮುತ್ತೈದೆಯರು ಪಾರ್ಥಿವ ಲಿಂಗವನ್ನು ಪೂಜಿಸಬೇಕು. ವಿಧವೆಯರು ಸ್ಫಟಿಕಲಿಂಗವನ್ನು ಪೂಜಿಸಬೇಕು. ನಿವೃತ್ತಿಮಾರ್ಗಹಿಡಿದ ವಿಧವೆಯರು ರಸಲಿಂಗವನ್ನು ಅರ್ಚಿಸಬೇಕು. ಪ್ರವೃತ್ತರು ಪೀಠಪೂಜೆ ಮಾಡಿದರೆ ಎಲ್ಲಾ ಬಯಕೆಗಳು ಕೈಗೂಡುತ್ತವೆ. ಪೂಜೆಯಿಲ್ಲಿ ಷೋಡಶೋಪಚಾರ ಪೂಜೆಯೇ.

ಲೋಕ–ವೇದ–ಶಿವಾಗ್ನಿಗಳಿಂದಾಗುವ ವಿಭೂತಿಗಳು ಮೂರು. ಲೋಕಾಗ್ನಿಜನ್ಯವು ಭಸ್ಮ; ಅದರಿಂದ ದ್ರವ್ಯಶುದ್ಧಿಯಾಗುತ್ತದೆ. ವೇದಾಗ್ನಿಜನ್ಯ ಭಸ್ಮದಿಂದ ಅವನವನ ಕರ್ಮ ಅವನವನಲ್ಲಿ ಆರೋಪಿತವಾಗುತ್ತದೆ. ಶಿವಾಗ್ನಿಯಿಂದ ಲಬ್ಧವಾದ ಬೂದಿಯಿಂದ ದೀಪ್ತಿ ಯಾ ತೇಜಸ್ಸು ಲಭ್ಯ. ಭಸ್ಮಕ್ಕೆ ಆಯುರ್ವೈದಿಕ ಅರ್ಥವಿದೆ. ಮಣ್ಣು, ಲೋಹ, ಧಾನ್ಯಾದಿಗಳನ್ನು ಸುಟ್ಟು ಮಾಡಿದ್ದು ಲೌಕಿಕ; ವಸ್ತ್ರ ಸುಟ್ಟು ಮಾಡಿದ್ದೂ ಅದೇ ವರ್ಗಕ್ಕೆ ಸೇರುತ್ತದೆ. ವೈದಿಕ ಅಗ್ನಿಯ ಮಂತ್ರದಿಂದ ಆದುದು ವೇದಾಗ್ನಿಜನ್ಯ ಭಸ್ಮ. ಆತ್ಮ ಮಂತ್ರವಾದ ಅಘೋರದಿಂದ (ಅದರ ಜಪದಿಂದ) ಬಿಲ್ವದ (ಸಮಿತ್ತನ್ನು) ಸೌದೆಯನ್ನು ಸುಟ್ಟುಮಾಡಿದ ವಿಭೂತಿಯು ಶಿವಾಗ್ನಿಜನ್ಯಭಸ್ಮ. ವಿಭೂತಿಯು ಪೂಜನೀಯ, ಶುದ್ಧಿಕರ. ಭಸ್ಮವು ವಸ್ತುಸಾರ; ನಷ್ಟ ವಸ್ತುಸಾರವಲ್ಲ. ಪ್ರಪಂಚವನ್ನೇ ಸ್ಫುಟಮಾಡಿ ಸುಟ್ಟು ಅದರ ವಿಭೂತಿಯನ್ನು ಶಿವನು ಧರಿಸುತ್ತಾನೆ. ಪ್ರಪಂಚವು ಶಿವಾಧಿಷ್ಠಾನ, ಶಿವಾಧಾರ. ಹಣೆಯ ಮೇಲೆ ಹಚ್ಚಿಕೊಳ್ಳುವ ಮೂರು ಭಸ್ಮರೇಖೆಗಳು ಬ್ರಹ್ಮ, ವಿಷ್ಣು, ರುದ್ರರನ್ನು ಪ್ರತಿನಿಧಿಸುತ್ತವೆ. ಲಲಾಟಾಂತದಲ್ಲಿ ಹಚ್ಚಿಕೊಳ್ಳುವ ಮಣ್ಣಿನ ಅಕ್ಷತೆಯು ಮಹೇಶ್ವರ, ಪರಶಿವ–ಎಂಬುದರ ಕುರುಹು. ಪುಂಡ್ರ=ವಿಭೂತಿಯ ಪಟ್ಟೆ; ತ್ರಿಪುಂಡ್ರ=ಮೂರು ಅಡ್ಡಪಟ್ಟೆ. ಪೂಜಾಕಾಲದಲ್ಲಿ ಸಜಲ ಭಸ್ಮಾಧಾರಣ; ಉಳಿದ ಕಾಲಗಳಲ್ಲಿ ಶುದ್ಧಿಗಾಗಿ ನಿರ್ಜಲಭಸ್ಮಧಾರಣ. ಶಿವಾಶ್ರಮವು ಅತ್ಯಾಶ್ರಮ (ಅವಧೂತತೆ). ಆ ಆಶ್ರಮಿಗೆ ಅಶುಚಿಯಿಲ್ಲ, ಸೂತಕವಿಲ್ಲ, ಅಸ್ಪೃಶ್ಯತೆಯಿಲ್ಲ. ಅವನು ನಿರಂತರ

ಶಿವಧ್ಯಾನಿಯಾದ ಅಂತರ್ಮುಖಿ. He is all Shiva-conscious. ಅವನು ಗುಣತ್ರಯಾತೀತನು. ಅವನಲ್ಲಿ ವಿಶ್ವಾಸವಿರುವವರಿಗೆ ಅವನು ಗುರು. ಅವನ ಶರೀರವೇ ಗುರುಲಿಂಗ. ಈ ಜೀವನ್ಮುಕ್ತತೆ ಲೋಕವಾಸಿ ಶರೀರವೆಂದು ತೋರುವ ಶಿವಭಕ್ತನ ಶಿವಾವತಾರ. ಗುರುಶುಶ್ರೂಷೆಯೇ ಗುರುಪೂಜೆ. ಗುರುವಿನ ಬಾಯಿಂದ ಕೇಳಿಬಂದ ಪ್ರಕಾರ ತ್ರಿಕರಣಗಳಿಂದ ವರ್ತಿಸುವುದು ಗುರುಶುಶ್ರೂಷೆ, ಇಲ್ಲಿ "ಯಥಾಶಕ್ತಿ" ಎಂಬ ನಿಯಮಕ್ಕೆ ಅವಕಾಶವಿಲ್ಲ. ಅವನು ಶಾಸನಯೋಗ್ಯತೆಯ ದೆಸೆಯಿಂದ "ಶಿಷ್ಯ". ಪ್ರಾಣಪಣದಿಂದ ಆತನು ಗುರ್ವಾಜ್ಞೆಯನ್ನು ಪಾಲಿಸಲು ಧುಮ್ಮಿಕ್ಕುವನು. ಅಂಥ ಶಿಷ್ಯನು ಗುರುವಿಗೆ ಪುತ್ರನು. ಜಿಹ್ವಾಲಿಂಗದಿಂದ ಗುರುವು ಶಿಷ್ಯನ ಕರ್ಣದಲ್ಲಿ ಮಂತ್ರವೆಂಬ ಶುಕ್ರವನ್ನು (ವೀರ್ಯವನ್ನು)–ಬ್ರಹ್ಮ ರಹಸ್ಯವನ್ನು ಹೊಯ್ಯುತ್ತಾನೆ. ಶಿಷ್ಯಕರ್ಣವೀ ಸಂದರ್ಭದಲ್ಲಿ ಸರ್ಜನಯೋಗ್ಯವಾದ ಯೋನಿಗೆ (ಗರ್ಭಕ್ಕೆ) ಸರಿದೊರೆ. (ಯೋನಿ=Womb, uterus, female organ of generation, divine Creative energy-all combined in one in its relevance to ನಿರ್ಗುಣಲಿಂಗ, ನಿರಾಕಾರಲಿಂಗ, ನಿರ್ವಿಕಾರ ಲಿಂಗ) as a metaphor. ಆದ್ದರಿಂದ ಶಿಷ್ಯನು ಗುರುವಿನ ಮಂತ್ರಪುತ್ರನು. ಲಿಂಗವನ್ನು Super positive Supreme ಪದಾರ್ಥದ ಗುರುತೆಂದೂ ಯೋನಿಯನ್ನು Positive instrument of Creative Energy that is responsible for the manifestation of the Sensuous world- ಎನ್ನುವುದಿಲ್ಲಿ ಯೋಗ್ಯ, ಮೂರ್ತಿಗಳ ಪೀಠಕ್ಕೆ "ಯೋನಿ" ಎಂದಾಗ ಇದರ ಸಮರ್ಥನೆ ದೊರಕುತ್ತದೆ. Generation Power ಉತ್ಪಾದಕತೆ Male organ of generation ಎಂಬುದಕ್ಕಿದೆಯಲ್ಲದೆ Female generative organ ಎಂಬುದಕ್ಕಿಲ್ಲ– ಇದ್ದರೂ ಅದು ಪ್ರತ್ಯಕ್ಷಗೌಣ. ["ವೃಷಣಗಳ ಕರ್ತವ್ಯ" ಎಂದು ಜೀವಶಾಸ್ತ್ರದಲ್ಲಿ ಬರುವುದರ ಸಭ್ಯತೆ ಹೇಗೆ ಪ್ರಶ್ನಾತೀತವೋ] ಹಾಗೇ ಇಲ್ಲಿ ಜನನೇಂದ್ರಿಯಾದಿ ಸೂಚಕತ್ವದ ಧ್ವನಿಯು ಒಮ್ಮೆ ಇದೆ ಎಂದು ವಾದಿಸಿದರೂ ಅದರ ಅಸಭ್ಯತೆಯು ಸಮರ್ಥನೀಯವಾಗದು. ಅಲ್ಲಿ ವಿಜ್ಞಾನೋನ್ಮುಖತೆ ಪ್ರಧಾನವಾಗಿರುವಂತೆ ಇಲ್ಲಿ ಲೋಕಾತೀತ ದಿವ್ಯ (of Light) ಶರೀರ ಶಾಸ್ತ್ರದ ಸಂದರ್ಭವು ಪ್ರಧಾನ. ಅಸಭ್ಯತೆಗೆ ಅತ್ಯಂತ ದೊಡ್ಡ ಉದಾಹರಣೆ ಅಮೇರಿಕದ CIA. ಅದು ಪ್ಯಾಟ್ರಿಸ್‌ಲುಮುಂಬನನ್ನು ಕೊಲ್ಲಿಸಿದ್ದನ್ನು ಓದಿರಿ ("New Times" Jan. 1984. No. 4)

## ವಿವರಣೆ:

ಶ್ರೀ ಎ.ಎನ್. ಮೂರ್ತಿರಾಯರು ಶ್ರೀ ಶಂಕರರು ಜಗತ್ತಿಗೆ ಕಟ್ಟಿದ ಬೆಲೆಯಲ್ಲಿ "ಸ್ವಲ್ಪ ಸತ್ಯ (ಮಾತ್ರ) ಇದೆ" ಎಂದದ್ದು ಚಿಂತ್ಯ. ಆದರೆ ತಮ್ಮ ಅನ್ನಿಸಿಕೆಯ ಪ್ರಕಾರ ಜೀವನಕ್ಕೆ (ಜಗತ್ತಿಗೆ) ತಾವು ನಿಗದಿ ಪಡಿಸಿದ ಬೆಲೆಯಂತೆ ನಡೆದುಕೊಳ್ಳಲು ಸಾಧ್ಯವಾಗಲಿಲ್ಲ" ಎಂಬ ತಾತ್ಪರ್ಯವನ್ನು ("Until I close the gap between knowl-

edge on the one side and action in the light of that knowledge on the other. I cannot claim to have learnt the lesson Deccan Herald, 5-2-1984) ಹೇಳಿದ್ದರಿಂದ ಶಿವ ಪುರಾಣ ಹಾಗೂ ಶಂಕರಾಚಾರ್ಯರು. ಈ ನಶ್ವರ ಜೀವನಕ್ಕೆ ಕಟ್ಟಿದ ಬೆಲೆಯ ಬಗೆಗೆ ಅಂಥ ಅನುಭವದ ಆಧಾರವುಳ್ಳ ಯಾವನೂ ತಕರಾರು ತೆಗೆಯಲಾರ. ಪಾಶ್ಚಾತ್ಯರು ಎಂದೋ ಮಾಡಿದ ಆಪಾದನೆಯಿದು. "ಹಿಂದುಗಳು ಪರದೇಶದ ದಾಳಿಗೆ ಪದೇ ಪದೇ ತುತ್ತಾದದ್ದು ಅವರ ಜೀವನವಿಮುಖತೆಯ ದೆಸೆಯಿಂದ–ಎಂದು" ಇದು ಶುದ್ಧ ಸುಳ್ಳು ಎನ್ನುವುದು ಜಗತ್ತಿನ ಹಾಗೂ ಭಾರತದ ಸುದೀರ್ಘವಾದ ಇತಿಹಾಸಕಾರರಿಗೆ ಚೆನ್ನಾಗಿ ಗೊತ್ತಿದೆ. ಹಿಂದೆ ಎಲ್ಲ ದೇಶಗಳಲ್ಲೂ ಚಕ್ರಾಧಿಪತ್ಯವನ್ನು ನಡೆಸಿದವರಿದ್ದರು–ಭಾರತದಲ್ಲೂ –ಎಂಬುದೇ ಪ್ರತಿದೃಷ್ಟಾಂತ. Electicism ತಮಗೆ ಅನುಕೂಲವಾಗುವ ಅಂಶಗಳಷ್ಟನ್ನೇ ವಿವಿಧ ಮಹಾತ್ಮರ ಗ್ರಂಥಗಳಿಂದ ಆಯ್ದು ತಮ್ಮ ಅಭಿಪ್ರಾಯವನ್ನು ಸಮರ್ಥಿಸಿಕೊಳ್ಳುವುದು ೯೦ರ ಹರೆಯದವರಿಂದ ಯಾರೂ ನಿರೀಕ್ಷಿಸಲಾರರು.

ಶ್ರೀ ಶಂಕರರ ಅಪಾರ ಭಾಷ್ಯಗಳನ್ನೂ ಅವರ ಅಧಿಕಾರಿ ವಾದವನ್ನೂ ತಿಳಿದವರು ಶಿವಪುರಾಣ ಕರ್ತರು. ಆದುದರಿಂದ ಹಿಂದು ಧರ್ಮದ ವಿಶ್ವ ವಿಶಾಲ ಔದಾರ್ಯವನ್ನದು ಎಲ್ಲೂ ಬಿಟ್ಟಿಲ್ಲ. ಕರ್ಮ, ಉಪಾಸನೆ, ಜ್ಞಾನಮಾರ್ಗಗಳಲ್ಲಿ ಮತ್ತು ಚತುರ್ವಿಧ ಪುರುಷಾರ್ಥಗಳಲ್ಲಿ (The four Major Ideals of life) ಅವರು ತಾರತಮ್ಯವನ್ನು ಹೇಳಿದ್ದಾರಲ್ಲದೆ, ಪಾತ್ರಾ ಪಾತ್ರ ವಿವೇಕವನ್ನೂ ಒತ್ತಿ ಹೇಳಿದ್ದಾರೆ. ಈ ವ್ಯಾಸಾವಲೋಕವನ್ನು ಮರೆತಾಗ, ಮೀಸಲು ಪದ್ಧತಿಯನ್ನು (Reservation system) ಹಿಡಿದಾಗ ಸಾಧಕ ಯೋಗ್ಯತಾಂಶವನ್ನು ನಮ್ಮ ಹಿರಿಯರು ಮರೆತು ಮುಕ್ತಿಯನ್ನು ಬೋಧಿಸಿದರೆಂಬ ಅನ್ಯಾಯದ ಆರೋಪವನ್ನು ಹೊರಿಸುವ ಪ್ರವೃತ್ತಿಯು ಮೂಡುತ್ತದೆ. ಭಾರತದ ಆಧ್ಯಾತ್ಮಿಕ ಬೋಧಗಳು ಅಂದಿನಿಂದ ಇಂದಿನವರೆಗೂ ಐಚ್ಛಿಕತೆಯನ್ನೂ ಪಾತ್ರತ್ವವನ್ನೂ ಒತ್ತಿ ಹೇಳುತ್ತಲೇ ಬಂದಿವೆ.

ಶಿವಪುರಾಣದ ಸಾಧ್ಯಸಾಧನ ಖಂಡದ ೧೮ನೆಯ ಅಧ್ಯಾಯದಲ್ಲಿ ೧೩೨ನೆಯ ಶ್ಲೋಕವು ಸಾಧಕರ ದೌರ್ಬಲ್ಯಗಳನ್ನು ಗಮನಿಸಿ "ಯಥಾ ಶಕ್ತಿ" ಧರ್ಮಾಚಾರವನ್ನು ಹೇಳಿದೆ. "ಶಕ್ತಿ ಮೀರಿ" ಏನನ್ನು ಮಾಡಲೂ (ಒಳಿತನ್ನು ಮಾಡಲೂ) ಯಾರಿಗೂ ಸಾಧ್ಯವಿಲ್ಲವೆಂಬುದನ್ನು ಎತ್ತಿ ತೋರಿಸಿ ಸುಲಭ, ಸುಲಭತರ ಶಿವಪೂಜಾ ವಿಧಾನಗಳನ್ನು ಪುರಾಣವು ಹೇಳಿದೆ. ಆದರೆ ಶ್ರೇಷ್ಠತೆಯ ತಾರತಮ್ಯವನ್ನು ಮಹಾಧ್ಯೇಯಗಳ ಸಾಧನೆಗೆ ಹೊರಟ ಯಾರೂ ಮರೆಯದಿರಬೇಕೆಂಬುದು ಅತ್ಯಂತ ನ್ಯಾಯವಾದ ಸಾಮಾಜಿಕ ಮನಃಶಾಸ್ತ್ರ ವಿಚಾರ. ಏಕೆಂದರೆ ಉಕ್ತಜ್ಞಾನವಿಲ್ಲದ ಧ್ಯೇಯವಾದಿಯು ಆಷಾಢಭೂತಿಯಾಗದೆ ಹೋಗನು. ಧ್ಯೇಯವಿಲ್ಲದ ಬಾಳಂತೂ ಬಾಳೇ ಅಲ್ಲ– ಅದೂ ಕೇವಲ ಜಡಪದಾರ್ಥಗಳ ಮೌಲ್ಯಗಳನ್ನೇ ಮಹಾ ಎಂದು ತಿಳಿದವರಲ್ಲಿ.

## ವಿಶಿಷ್ಟ ಮಹಿಮೆ ಮತ್ತು ವಿವರಣೆ

ಶಿವಪುರಾಣದ ೧೯ನೆಯ ಅಧ್ಯಾಯವು (ಪುಟ ೨೩) ಶಿವಪಾರ್ಥಿವ ಲಿಂಗದ ಮಹಿಮೆಯನ್ನು ಹೇಳುತ್ತದೆ. ಹಿಂದೆ ಶಿವಲಿಂಗದ ಸಾಮಾನ್ಯ ಮಹಿಮೆಯನ್ನು ಹೇಳಿ ಮುಗಿಸಿದ್ದರಿಂದ ವಿದ್ಯೇಶ್ವರ ಸಂಹಿತೆಯ ಈ ಅಧ್ಯಾಯವು ಅದರ ವಿಶಿಷ್ಟಸ್ವರೂಪದ ಮಹಿಮೆಯನ್ನು ಹೇಳಿದೆ. ಹರಿ, ಬ್ರಹ್ಮ, ಋಷಿಗಳು, ಪ್ರಜಾಪತಿ, ದೇವತೆಗಳು, ಅಸುರರು, ಮತ್ತೂ ಇತರರು ಲಿಂಗಪೂಜೆಯಿಂದ ಇಷ್ಟಾರ್ಥಗಳನ್ನು ಪಡೆದರೆಂದು ಹೇಳಿ ಪುರಾಣವು ಕೃತಯುಗದಲ್ಲಿ ರತ್ನಮಯ ಲಿಂಗ, ತ್ರೇತಾಯುಗದಲ್ಲಿ ಚಿನ್ನದ ಲಿಂಗ ದ್ವಾಪರಯುಗದಲ್ಲಿ ಪಾದರಸದ ಲಿಂಗ ಎಂಬಿವು ಶ್ರೇಷ್ಠವಾದರೆ ಕಲಿಯುಗದಲ್ಲಿ ಪಾರ್ಥಿವ ಲಿಂಗವೇ ಪೂಜೆಗೆ ಶ್ರೇಷ್ಠವೆಂದು ಹೇಳಿದೆ.

"ಗುಡ್ಡ ಗುಡ್ಡ ಸ್ಥಾವರ ಲಿಂಗ ಅವಕ ಅಭ್ಯಂಗ ಮಾಡ್ತಾವನ್ನೋ ಹಂಗ"

ಎಂಬ ಅಂಬಿಕಾತನಯದತ್ತರ ವರವಾಣಿ ಈ ಪುರಾಣೋಕ್ತಿಯನ್ನು ಸಮರ್ಥಿಸುತ್ತದೆ. ಅಖಂಡ. ವಿಖಂಡ, ದ್ವಿಖಂಡ–ಎಂದು ಲಿಂಗತ್ರಯ ವಿಭಾಗ. ಮೊದಲನೆಯದನ್ನು ರತ್ನ, ಚಿನ್ನ, ಪಾದರಸ, ಸ್ಫಟಿಕ, ಪುಷ್ಪರಾಗಗಳಿಂದ ರಚಿಸಬೇಕು; ಅದು ಚರ, ಜಂಗಮ, ಯಾ ಸ್ಥಾವರ. ಎರಡನೆಯದನ್ನು ತದಿತರ ಭೌಮ ಪದಾರ್ಥಗಳಿಂದ (ಹೆಚ್ಚಾಗಿ ಕಲ್ಲಿನಿಂದ) ಮಾಡುವುದು ನಿಗಮನೀಯ. ಮೂರನೆಯದು ಪೂಜಾನರ್ಹ, ಅದನ್ನು ಮಾಡಬಾರದು.

ಈ ಪಾರ್ಥಿವ ಲಿಂಗಾರ್ಚನೆ ವೈದಿಕ ಮಾರ್ಗದಿಂದ ನಡೆಯಬೇಕು. ಇದು ಕಾಮ್ಯವಾಗಿರಬಹುದು. ನಿಷ್ಕಾಮವೂ ಆಗಿರಬಹುದು. ಕಾಮ್ಯಪೂಜಾ ವಿಧಾನಗಳು ವಿವಿಧ. ಕಾಮ್ಯ (ಸಕಾಮ ಪೂಜೆ) ನಿಷ್ಫಲದಾಯಕವಾಗುವುದು ಅನ್ಯದೇವತೆಗಳನ್ನರ್ಚಿಸಿದರೆ; ಅಂಥ ಕಾಮ್ಯಕರ್ಮದ ಜೊತೆಗೆ ಶಮದಮಾದಿ ನಿಯಮಪಾಲನ, ದಾನಾದಿ ಉದಾರತಾ ಪ್ರದರ್ಶನ ಎಲ್ಲಾವ್ಯರ್ಥ.

ವಿದ್ವಾಂಸನು ಮಾಡುವ ನಿಷ್ಕಾಮ ಪೂಜೆಗೆ ಪೂರ್ವೋಕ್ತ ನಿಯಮಗಳಿಲ್ಲ. ಪರಾಭಕ್ತಿಯೊಂದೇ ಅಲ್ಲಿ ಪ್ರಧಾನ. ಏಕೆಂದರೆ ಪರಾಭಕ್ತಿಯಲ್ಲಿ ಸಾಧನ ಚತುಷ್ಟಯವು ಅಡಕವಾಗಿರುತ್ತದೆ–ಎಂಬುದು ತಾತ್ಪರ್ಯ.

ಈ ಸಂಹಿತೆಯ ೨೧ನೆಯ ಅಧ್ಯಾಯವು ಪೀಠವನ್ನು "ವೇದಿಕೆ"ಯೆಂದೂ ಕರೆದಿರುವುದು ಗಮನಾರ್ಹ. ಡಾ। ಸುರೇಂದ್ರನಾಥ ದಾಸಗುಪ್ತಾದಿಗಳು ಕ್ರಿ.ಪೂ. ೩ ಯಾ ೪ನೆಯ ಶತಮಾನದಲ್ಲಿ ಅಸ್ಫುಟವಾಗಿ ಯಜ್ಞಯುಗ ಮುಗಿದು ಪುರಾಣಯುಗ ಪ್ರಾರಂಭವಾಯ್ತೆಂದುದನ್ನು ಶಿಲ್ಪಶಾಸ್ತ್ರಜ್ಞರು ಸಮರ್ಥಿಸಿದ್ದಾರೆ. ಇದು ಕರ್ಮಕಾಂಡವನ್ನು ಮುಗಿಸಿ ನಮ್ಮ ದೇಶವು ಉಪಾಸನೆ–ಜ್ಞಾನಕಾಂಡಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡತೊಡಗಿದ ವ್ಯಾಸಯುಗ ಎನ್ನಬಹುದು. ನಾವಿರುವುದೀಗ ವ್ಯಾಸ ಭಾರತ ರಚನೆಯ ಯುಗದಲ್ಲಿ,

ಇನ್ನೂ ಅದೇ ನಡೆದಿದೆ. ಇದು ಸಾಂಸ್ಕೃತಿಯ ದೃಷ್ಟಿಯ ವಿಶ್ಲೇಷಣೆ. ಇಂದ್ರಾದಿ ದೇವತೆಗಳ ಮಹತ್ವ, ವೇದಾದಿಯಜ್ಞ ವಿಧಾನ ಮಹತ್ವ, ಪುರೋಹಿತ ಶಾಹಿಗಳು ಹಿಂದೆ ಬಿದ್ದು ತ್ರಿಮೂರ್ತಿಗಳ, ಲಿಂಗಾದಿಗಳ, ಸರ್ವಭಕ್ತರ ಅರ್ಚನಾ ಪಾತ್ರತ್ವದ ಮಹತ್ವವು ಹೆಚ್ಚಾಯಿತು. ಆದರಿದು ಕ್ರಾಂತಿಯಲ್ಲ ಉತ್ಕ್ರಾಂತಿ (Evolution ವಿಕಾಸ). ಬಾಹ್ಯಪರಿವರ್ತನವಲ್ಲದೆ, ಅಂತಸ್ಥಮಹಾಧ್ಯೇಯಗಳ ಪರಿವರ್ತನೆ ಇಲ್ಲಿಲ್ಲ. ಅವು ಅಜರಾಮರ. ವೇದಿಕೆಯು ಲಿಂಗಮೂರ್ತಿಗಳ ಪೀಠವಾಯಿತು. ಗರ್ಭಗೃಹದ ಆಯದಲ್ಲಿ ವೈದಿಕ ದೇವತೆಗಳ ಸ್ಥಾನಗಳನ್ನು ಸಾಂಕೇತಿಕವಾಗಿ ವಿಧಿಸಲಾಯಿತು. ಇಂದ್ರಾದಿಗಳು ಅಷ್ಟದಿಕ್ಪಾಲಕರಾಗಿ ಗರ್ಭಗುಡಿಯ ಹೊರಗೆ ಬಂದರು; ಗರ್ಭಗುಡಿಯಲ್ಲಿ (ಪರಮಪವಿತ್ರ ಸ್ಥಾನದಲ್ಲಿ) ಹರಿ (ತ್ರಿಮೂರ್ತಿಗಳಲ್ಲಿ ಒಬ್ಬನಾದ ಬ್ರಹ್ಮನಿಗೆ ಪೂಜೋತ್ಸವಾದಿಗಳಿಲ್ಲವೆಂಬುದು ಪುರಾಣೋಕ್ತವಾಗಿದ್ದರೆ ಆ ಮಾತಿಗೆ ಅಪವಾದವೆನ್ನುವಂತೆ ದ.ಕ. ಜಿಲ್ಲೆಯ ಕುಂದಾಪುರ ತಾಲೂಕಿನ ಬವಲಾಡಿ ಮತ್ತು ಉಳ್ಳೂರು ಗ್ರಾಮಗಳಲ್ಲಿ "ಚಿತ್ತಾರಿ ಮಠ" ಎಂಬ ಹೆಸರಿನಲ್ಲಿ ಬ್ರಹ್ಮ ಪೂಜೆ ನಡೆಯುತ್ತಾ ಬಂದಿದೆ. ಅಲ್ಲಿ ಒರಳು "ಪೀಠ" ಮತ್ತು ಒರಳು ಕಲ್ಲಿನ ಗುಂಡು "ಬ್ರಹ್ಮಲಿಂಗ" ಆಗಿರುವುದು ಪ್ರತ್ಯಕ್ಷ) ಯಾ ಹರ – ಇಲ್ಲವೆ – ಅವರ ಶಕ್ತಿ (ಪತ್ನೀ) ದೇವತೆಗಳು ಒಟ್ಟಿಗೋ ಬೇರೆಯಾಗಿಯೋ ಸ್ಥಾಪಿತರಾದರು. ಅವರ ಕುಟುಂಬ ಹಾಗೂ ಗಣಗಳ ಸ್ಥಾನಮಾನಗಳು ನಿರ್ಧರಿಸಲ್ಪಟ್ಟು ಮೃದ್‌ದಾರು–ಶಿಲಾ–ಲೋಹಾದಿ ಶಿಲ್ಪ ಪ್ರಾಚುರ್ಯ ಶುರುವಾಯಿತು. ಈ ಅಂಶವು ಸ್ಪಷ್ಟವಾದದ್ದು ಕ್ರಿ.ಶ. ೪ನೆಯ ಯಾ ೫ನೆಯ ಶತಮಾನದಲ್ಲಿ ಎಂಬುದು ಸಂಶೋಧಕರ ಮತ. ಈ ಶತಮಾನಗಳಿಗಿಂತ ಹಿಂದಿನ ದೇವಾಲಯಗಳು (ಶಿಲಾದಿ ನಿರ್ಮಿತವಾಗಿ) ಅನುಪಲಭ್ಯವೆಂದು ಅವರು ಆಧಾರ ನೀಡುತ್ತಾರೆ. ಪುರಾಣವಾಙ್ಮಯದ ಮಹಾರಂಭದ ಕಾಲವೂ ಅದೇ ಎಂದು ನಿಗಮಿಸಲಾಗಿದೆ. ಆರ್ಯಾನಾರ್ಯ ಪ್ರಶ್ನೆ ಇಲ್ಲಿರುವುದು ಪೂಜ್ಯಾಪೂಜ್ಯಾರ್ಥಗಳಲ್ಲಿ (The Gentlemen and the lesser people) ಮಾತ್ರ. ದಸ್ಯುಗಳು ಅನಾರ್ಯರಾದ ದ್ರಾವಿಡರೋ, ಕೋಲರೋ, ಮೂಡರೋ ಎಂಬುದಕ್ಕೆ ಅತಿ ಪ್ರಾಚೀನ ಗ್ರಂಥವಾದ ಋಗ್ವೇದದ ಭಾರತೀಯ ವ್ಯಾಖ್ಯಾತೃಗಳ ವಿವರಣೆಗಳಲ್ಲಿ (ಶಬ್ದಕೋಶಾನುಸಾರವಾಗಿ) ಬಂದಿಲ್ಲ. "ಆರ್ಯೋದ್ರವಿಡಿಯನ್" ಎಂಬುದನ್ನೂ ಡಾ. ಎಸ್.ಆರ್. ರಾವ್ ಈಗ ಮೊಹೆಂಜೋದಾರ–ಹರಪ್ಪ ಸಂಸ್ಕೃತಿಗೆ ಅನ್ವಯಿಸುವುದನ್ನು ಬಿಟ್ಟಿದ್ದಾರೆ. ಅದೆಲ್ಲಾ ಆರ್ಯ.

ಉಕ್ತ ಸಂಹಿತೆಯ ೨೨ನೆಯ ಅಧ್ಯಾಯ ಮೊದಲು ಹೇಳುವುದು ಬಿಲ್ವಮಾಹಾತ್ಮ್ಯವನ್ನು. ಇದರ ೩ನೆಯ ಶ್ಲೋಕವು ಪಾಟಾಳಿಗಳ ಅಸಮಾನ ಪಂಕ್ತಿತ್ವವನ್ನು ಕಿತ್ತು ಹಾಕಿದೆ:

ಅದು "ಭಕ್ಷಯೇಚ್ಛಿವನೈವೇದ್ಯಂ ತ್ಯಜೇದ ಗ್ರಾಹ್ಯಭಾವನಾಂ" ಎಂದಿರುವುದಲ್ಲದೆ, ಇದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ,

**"ದೃಷ್ಟ್ವಾಪಿ ಶಿವನೈವೇದ್ಯಂ ಯಾಂತಿ ಪಾಪಾನಿ ದೂರತಃ**
**ಭುಕ್ತೇತು ಶಿವನೈವೇದ್ಯೇ ಪುಣ್ಯಾನ್ ಯಾ ಯಾಂತಿ ಕೋಟಿಶಃ**

ಎಂದು ಘೋಷಿಸಿದೆ. ಪ್ರಾಸ್ತಾವಿಕವಾಗಿ ಅದು ನೈವೇದ್ಯದ ಸುದ್ದಿಯನ್ನೆತ್ತಿಕೊಂಡು ಯಾವ ಯಾವ ಬಗೆಯ ಲಿಂಗಗಳ ನೈವೇದ್ಯವನ್ನು ಕೂಡಲೇ (ಪೂಜೆ ಮುಗಿದ ಕೂಡಲೇ–ಆಗಿಂದಾಗ) ಭುಜಿಸುವುದು ಪ್ರಶಸ್ತ? ಎಂದು ವಿವರಿಸಿ ಹೇಳಿದೆ.

೧) ಸಾಲಿಗ್ರಾಮ (ಶಾಲಿಗ್ರಾಮ)ದ ಶಿಲೆಯಲ್ಲಿ ಉದ್ಭವಿಸಿದ ಲಿಂಗ; (೨) ರಸಲಿಂಗ; (೩) ಪಾಷಾಣ ಲಿಂಗ; (೪) ರಜತಲಿಂಗ; (೫) ಸುವರ್ಣಲಿಂಗ; (೬) ಸ್ಫಟಿಕಲಿಂಗ; (೭) ರತ್ನಲಿಂಗ; (೮) ಜ್ಯೋತಿರ್ಲಿಂಗ; (೯) ಬಾಣಲಿಂಗ; (೧೦) ಲೋಹ (ಕಬ್ಬಿಣ) ಲಿಂಗ; ಮತ್ತು ಶಿವನ ವಿವಿಧ ಪ್ರತಿಮೆಗಳು. ಚಂಡಾಧಿಕಾರವಿದ್ದಲ್ಲಿ ಮಾತ್ರ ಉಕ್ತನೈವೇದ್ಯವನ್ನು ಇತರರು ತೆಗೆದುಕೊಳ್ಳಬಾರದು. ಚಂಡೇಶ್ವರನು ಈಶ್ವರ ಗಣಗಳಲ್ಲಿ ಒಬ್ಬ.

ಶಿವನಾಮ ಮಾಹಾತ್ಮ್ಯವನ್ನು ಹೇಳಿದ ಮೇಲೆ ವಿಭೂತಿ ಮಾಹಾತ್ಮ್ಯವು ಬರುತ್ತದೆ. ಮುಂದಿನ ಅಧ್ಯಾಯವು ರುದ್ರಾಕ್ಷ ಮಹಾತ್ಮ್ಯವನ್ನು ಹೇಳುತ್ತದೆ ಶಿವಧ್ಯಾನಮಂತ್ರ:

೧) **ಕೈಲಾಸ ಪೀಠಾಸನ ಮಧ್ಯಸಂಸ್ಥಂ**
**ಭಕ್ತೈಃ ಸನಂದಾದಿಭಿರರ್ಚ್ಯಮಾನಂ।**
**ಭಕ್ತಾರ್ತಿದಾವಾನಲ ಮಪ್ರಮೇಯಂ**
**ಧ್ಯಾಯೇದುಮಾಲಿಂಗಿತ ವಿಶ್ವಭೂಷಂ॥**

೨) **ಧ್ಯಾಯೇನ್ನಿತ್ಯಂ ಮಹೇಶಂ ರಜತಗಿರಿನಿಭಂ**
**ಚಾರುಚಂದ್ರಾವತಂ ಸಂ**
**ರತ್ನಾಕಲ್ಪೋಜ್ವಲಾಂಗಂ ಪರಶುಮೃಗವರಾ**
**ಭೀತಿ ಹಸ್ತಂ ಪ್ರಸನ್ನಂ।**
**ಪದ್ಮಾಸೀನಂ ಸಮಂತಾತ್ ಸ್ಥಿತಮಮರ**
**ಗಣೈರ್ವ್ಯಾಘ್ರಕೃತ್ತಿಂ ವಸಾನಂ**
**ವಿಶ್ವಾದ್ಯಂ ವಿಶ್ವಬೀಜಂ ನಿಖಿಲ ಭಯಹರಂ**
**ಪಂಚವಕ್ತ್ರಂ ತ್ರಿಣೇತ್ರಂ॥**

ಮಾಹಾತ್ಮ್ಯಗಳಲ್ಲಿ ಪಾಪನಾಶನದ ಉದ್ದೇಶವನ್ನು ಹೇಳಲಾಗಿದೆ. "ಅಹಂಪಾಪೀ" ಎಂಬ ಪದದಿಂದ "ಅಹಂಕಾರವು ಪಾಪಮೂಲ" ಎಂಬುದು ಸೂಚಿತ. ಶ್ರೀ ರಮಣಮಹರ್ಷಿಗಳ ಪ್ರಕಾರ, ಕ್ರೈಸ್ತರ ಬೈಬಲ್ಲು ಹೇಳಿದ Original Sin ಮೂಲ

ಪಾಪ ಎಂಬುದು ಇದನ್ನೇ ಹೇಳುತ್ತದೆ. ದೇಹಾದಿಗಳ ಮೇಲಿನ ಅತ್ಯಭಿಮಾನದಿಂದ ಅಹಂಕಾರ ಮಮಕಾರಗಳು ಮನದಲ್ಲಿ ಉತ್ಪನ್ನವಾಗಿ ಮನುಷ್ಯನಿಂದ ತಿಳಿದೋ ತಿಳಿಯದೆಯೋ ಪಾಪಕಾರ್ಯಗಳು ನಡೆಯುವಂತೆ ಮಾಡುತ್ತವೆ. "ಪಾಪೋಽ ಹಂ!" ಏಕೆ? ನಾನು, ನನ್ನನ್ನು, ನನ್ನಿಂದ, ನನಗೆ, ನನ್ನದೆಸೆಯಿಂದ, ನನ್ನ ಮತ್ತು ನನ್ನಲ್ಲಿ ಎಂಬ ಏಳು ವಿಭಕ್ತ್ಯರ್ಥಗಳು ವ್ಯಕ್ತಮಾಡುವ ಅರ್ಥಗಳೂ ಮಾನವನ ಕರ್ತೃತ್ವಾದಿ ಆರೋಪಿತ ಭಾವಗಳನ್ನು ಪ್ರಕಟಿಸುತ್ತವೆ. ಈ ಭಾವಗಳಿಗೆಲ್ಲಾ ಈಶ್ವರನ ಶಕ್ತಿಯೇ ಆಧಾರ. ಅದನ್ನು ಮರೆತು ದೇಹಾದಿ ಬುಧ್ಯಂತವಾಗಿ ನಮ್ಮಲ್ಲಿರುವ ಜಡ (ಅಲ್ಪಚೈತನ್ಯಾಭಾಸ) ಸ್ವಭಾವದ ಅಂಗಗಳಲ್ಲಿ ತಲ್ಲೀನರಾಗುವುದು ಪಾಪಕರ. ತನ್ನ ತನ್ನ ಪ್ರತ್ಯೇಕತೆಯ ತಿಳಿವು ಭೌತದ ಸ್ಥೂಲ–ಸೂಕ್ಷ್ಮ–ಕಾರಣ ಪದಾರ್ಥ ನಿಷ್ಠವಾಗಿರುವವರೆಗೆ ಶಿವಪೂಜೆಯಲ್ಲಿ ಮಾಡುವ ಸರ್ವಸ್ವಾರ್ಪಣ, ಆತ್ಮಾರ್ಪಣ ಮುಂತಾದುವುಗಳೆಲ್ಲಾ ಅರಕೆಬೆರಕೆ; ಅವೆಂದೂ ಸಂಪೂರ್ಣವಲ್ಲ. ಶಿವತ್ವದ ಪರಿಪೂರ್ಣವಾದ ಆವಾಹನೆಯನ್ನು (ಪೂಜಾಕಾಲದಲ್ಲಿ) ಪೂಜಾಂತದಲ್ಲಿ ನೂರಕ್ಕೆ ತೊಂಬತ್ತೊಂಬತ್ತರಷ್ಟಾದರೂ ಮಾಡಿಕೊಂಡರೆ ಪೂಜೆಯು ಸಾರ್ಥಕ. ಭಕ್ತನಲ್ಲಿ ಇರಬೇಕಾದ ಶಿವತ್ವದಲ್ಲಿ ಸರ್ವಕರ್ತೃತ್ವವೊಂದು ನ್ಯೂನವಾಗಿರುತ್ತದೆ. "ಭಕ್ತಿರ್ಜ್ಞಾನಾಯ ಕಲ್ಪತೇ" ಎಂದಹಾಗೆ ಶಿವೈಕ್ಯನಾದ ಮೇಲೆ "ಶಿವೋಽಹಂ" ಪದವು ಬಂದು ಭಕ್ತನು ಮುಕ್ತ, ಪೂರ್ಣಜ್ಞಾನಿ ಆಗುತ್ತಾನೆ. ಭಕ್ತನಲ್ಲಿ ಅಲ್ಲಿಯವರೆಗೆ ಅಹಂಕಾರದಿಂದ ಉಪಾಹಿತವಾದ ಜೀವಸ್ವರೂಪದ ಭಕ್ತಚೇತನೆ ಭಕ್ತತ್ವದ "ನಾನು ಶಿವನ ಮುಂದೆ ಕ: ಪದಾರ್ಥ" ಎಂಬ ವಿನಮ್ರ, ವಿನೀತ, ವಿಗತಭೌತಾಭಿಮಾನ ಆವಿಷ್ಟವಾಗಿರುವುದು ಸಹಜ. ತದ್ವಿರುದ್ಧವಾದ ಭಾವನೆಯು ಭಕ್ತಿಯಲ್ಲ. ಇದು ತಾಮಸ, ರಾಜಸ, ಸಾತ್ವಿಕ ಗುಣವುಳ್ಳ ಎಲ್ಲವರಿಗೂ ಅನ್ವಯಿಸುತ್ತದೆ. ಭಕ್ತನು "ತನ್ನ ವಿಭಕ್ತತೆಯು ಕ್ರಮೇಣ ಕೊನೆಗೊಳ್ಳಲಿ–ಅದು ಶಿವನಲ್ಲಿ ಅವಿಭಕ್ತವಾಗಲಿ" ಎಂಬ ಆಧಾರಭೂತ ಪ್ರಾರ್ಥನೆಯನ್ನು ಅನುಸ್ಮರಿಸುತ್ತಿರುವುದು ಭಕ್ತಿಸಾರ.

–೬–

# "ದುರ್ಜ್ಞೇಯಾ ಶಾಂಭವೀ ಮಾಯಾ"

ವಿದ್ಯೇಶ್ವರ ಸಂಹಿತೆ ಮುಗಿದ ಮೇಲೆ ಬರುವುದು ರುದ್ರ ಸಂಹಿತೆ. ಸಾಂಖ್ಯರ ಪರಿಣಾಮವಾದವನ್ನು ಅಂಗೀಕರಿಸದೆ ಶಿವಪುರಾಣವಿಲ್ಲಿ ಭಗವದ್ಗೀತೆಯಂತೆ ಕೆಲವು ಸಾಂಖ್ಯ ಪದಗಳನ್ನು ಬಳಸಿ ತನ್ನದೇ ಆದ ಸೃಷ್ಟಿ ವಿನ್ಯಾಸವನ್ನು ಕೊಟ್ಟಿದೆ.

ಚಿದಾತ್ಮಕ ನಿರ್ವಿಕಲ್ಪ (ನಿರ್ಗುಣ) ಶಿವ ಯಾ ಶಂಭು ಶಿವಮಾಯಾ ಕಲ್ಪಿತ ಅವ್ಯಕ್ತ ಶರೀರದ ಸದಾಶಿವ ಶಕ್ತಿ. (ಸಗುಣ) ಸದಾಶಿವನು ಪಂಚಾನನ, ದಶಬಾಹು, ತ್ರಿಲೋಚನ; ಉತ್ತಮ ಪುರುಷನಾದ ಈಶ್ವರ. ಅವನ ಶಕ್ತಿಯು ಅಷ್ಟಭುಜಗಳನ್ನುಳ್ಳ ಅಂಬಿಕೆ, ಪ್ರಕೃತಿ ರೂಪದ ಮಾಯೆ. ಈ ಪಾರ್ವತೀ ಪರಮೇಶ್ವರರು ತ್ರಿಮೂರ್ತಿಗಳ ಹಾಗೂ ಮಹದಾದಿ ತ್ರಿಗುಣಜನ್ಯ ಪದಾರ್ಥಗಳ ಜನಕರು. ಪುರುಷನು ಜಡಪ್ರಕೃತಿಗೆ ಅವಿನಾಭಾವಿ. ಅವನೂ ಸೇರಿದರೆ ತತ್ವಗಳು ೨೫. ಈ ವಿವರ್ತ (Transformation) ಸಿದ್ಧಾಂತಕ್ಕೆ ಪುರುಷ ಸೂಕ್ತದ ಹಿನ್ನೆಲೆ ಇರುವುದು ಸ್ಪಷ್ಟ. ನಿತ್ಯಸತ್ಯವಾದ ಶಿವನು ತನ್ನ ಸ್ವರೂಪದ ಯಾವ ಶಕ್ತಿಯ ಯಾವ ಅಂಶವನ್ನೂ ಕಳೆದುಕೊಳ್ಳದೆ ಸೃಷ್ಟಿಸಿದ್ದರಿಂದ ಈ ಸೃಷ್ಟಿ ಮಾಯೆಯದಾಯ್ತು. (Inexplicable). ಈ Incomprehensibility ಅಚಿಂತ್ಯತೆಯೇ ಅನಿರ್ವಚನೀಯತೆ. ನ್ಯೂಟನ್ ಹೇಳಿದನಂತೆ: ದೇವರು ನಿಸರ್ಗನಿಯಮಗಳನ್ನು ಮಾಡಿ ಸುಮ್ಮನೆ ಕುಳಿತುಬಿಟ್ಟನು. ಆ ನಿಯಮಗಳು ಸೃಷ್ಟಿಯ ಕ್ರಮ ವಿನ್ಯಾಸವನ್ನು ಸಾಧಿಸಿದವು–ಎಂಬುದೊಂದು ಉಪಮೆ. It is all mystic, mysterious and miraculous ಈ ಬದಲಾವಣೆ (ರೂಪಾಂತರ–ನಾಮಾಂತರಗಳೆಲ್ಲಾ) ನಿಗೂಢ; ಬುದ್ಧಿಗೆ ಅಗೋಚರ. ನಿತ್ಯಾನಿತ್ಯವಿವೇಕವು ಇಲ್ಲಿ ಕಾರ್ಯ ಕಾರಣದ ಇಂದ್ರಿಯ ಪ್ರತ್ಯಕ್ಷದ ಆಧಾರವುಳ್ಳದ್ದು. ಇದರ "ಹೇಗೆ–ಏಕೆಗಳು" ಸಮರ್ಪಕ, ಸಂಪೂರ್ಣ ಉತ್ತರವನ್ನು ನಮ್ಮಿಂದ ದೊರಕಿಸಿಕೊಳ್ಳಲಾರವು. ಚಿತ್ತೆಂಬುದು Ever-consious Life-Force= ನಿತ್ಯ (ಕಾಲಾತೀತ, ದೇಶಾತೀತ, ಕಾಲ ವ್ಯಾಪಿ, ದೇಶವ್ಯಾಪಿ) ಜಾಗರ ಸ್ವರೂಪದ ಜೈವಿಕ ಶಕ್ತಿ; ಸದಸದಂತರ್ ಬಹಿರ್ವ್ಯಾಪಿ ("ಅಂತರ್ ಬಹಿಶ್ಚತತ್ಸರ್ವಂ ವ್ಯಾಪ್ಯ ನಾರಾಯಣ: ಸ್ಥಿತಃ" ಎಂಬ ನಾರಾಯಣೋಪನಿಷತ್ತಿನ ನಾರಾಯಣನಿಗೆ ಶಿವನೆಂದು ಹೆಸರಿಟ್ಟರೆ ಸರಿ)–ಇದು ತಾತ್ಪರ್ಯ.

–೧೦–

# ನಾರದನ ಕಥೆ

ರುದ್ರ ಸಂಹಿತೆಯ ಆದಿಯಲ್ಲಿಯ ಶಿವಮಾಹಾತ್ಮ್ಯವಿಂತಿದೆ–ಮಹಾದೇವರ್ಷಿ ನಾರದನು ಹಿಮಾಚಲದ ಗುಹೆಯೊಂದರಲ್ಲಿ ಶಿವನನ್ನು ಕುರಿತು ತಪಸ್ಸಿಗಾರಂಭಿಸಿದನು. ಇದು ಇಂದ್ರನಿಗೆ ತಿಳಿಯಿತು. ಈ ಮುನಿ ತನ್ನ ರಾಜ್ಯದ ಮೇಲಿನ ಪ್ರಭುತ್ವಕ್ಕಾಗಿ ತಪಸ್ಸಿಗೆ ಕುಳಿತಿದ್ದಾನೆಂದು ಊಹಿಸಿ, ಅವನು ಮನ್ಮಥನನ್ನು ಕರೆದು ನಾರದನ ತಪೋಭಂಗ ಮಾಡಲು ಆಜ್ಞಾಪಿಸಿದನು. ಅವನು ಕಾಮಪ್ರಚೋದಕವಾದ ವಸಂತಮಾಸವನ್ನಲ್ಲಿ ನಿರ್ಮಿಸಿದನು. ಅದರಿಂದ ಮುನಿಯ ಮನಸ್ಸು ಚಲಿತವಾಗಲೇ ಇಲ್ಲ. ಅಷ್ಟೇ ಅಲ್ಲ–ಶಿವಪ್ರಭಾವದಿಂದ ಸುಟ್ಟು ಭಸ್ಮವಾದನು. ರತಿಯೂ ಸುರರೂ ಪ್ರಾರ್ಥಿಸಿ ಶಿವಾನುಗ್ರಹವನ್ನು ಪಡೆದು ಮನ್ಮಥನನ್ನು ಬದುಕಿಸಿ ನಾರದನನ್ನು ಕೊಂಡಾಡಿದರು. ಏಕೆಂದರೆ ನಾರದನು ಶಿವನಿಗೆ ಆತ್ಮಾರ್ಪಣ ಮಾಡಿಕೊಂಡವನು. ಹಾಗೆ ಆತ್ಮಾರ್ಪಣ ಮಾಡಿಕೊಳ್ಳದವರನ್ನು ಮಾತ್ರ ಜಗತ್ತು ಮೋಹಿಸುತ್ತದೆ. ಜಗತ್ತು (ಲೋಕತ್ರಯ) ಶಂಭುವಿನ ಮಾಯೆಯಿಂದ ಆದದ್ದು. ಆ ಮಾಯೆ ದುರ್ಜ್ಞೇಯ. ನಾರದನನ್ನು ಮೆಚ್ಚಿದ ಶಿವನು “ನೀನು ವಿಷ್ಣುಭಕ್ತ; ವಿಷ್ಣುಭಕ್ತರು ನನಗೆ ಪ್ರಿಯರು. ಆದ್ದರಿಂದ ನಾನು ಸೂತಿಕರನಾದ ರುದ್ರತ್ವದಿಂದ ನಿನಗೆ ಆಜ್ಞಾಪಿಸುವೆನು. ನೀನು ಈಗ ನಡೆದ ಘಟನೆಯನ್ನು ಯಾರಿಗೂ ಹೇಳಬಾರದು” ಎಂದು ಹೇಳಿ ಕಳುಹಿಸಿಕೊಟ್ಟನು. ಆಗ ನಾರದನು ಶಾಂಕರೇಚ್ಛೆಯಿಂದಲೇ ಎಂಬಂತೆ ಬ್ರಹ್ಮನ ಹತ್ತಿರ ಹೋಗಿ ತಾನು ತನ್ನ ತಪೋಬಲದಿಂದ ಮನ್ಮಥನನ್ನು ಗೆದ್ದೆನು ಎಂದು ಹೇಳಿಬಿಟ್ಟನು. ಬ್ರಹ್ಮನು ತನ್ನ ಮಗ ಹಾಗೆ ಮಾಡಿದ್ದು ತಪ್ಪೆಂದನು. ಅನಂತರ ನಾರದನು ವಿಷ್ಣುವಿನ ಹತ್ತಿರ ಹೋಗಿ ಹೆಮ್ಮೆಯಿಂದ ತನ್ನ ತಪಃ ಪ್ರಭಾವದಿಂದ ಮನ್ಮಥ ಹತನಾದುದನ್ನು ಹೇಳಿಕೊಂಡನು. ಶಿವಧ್ಯಾನ ಮಾಡಿ ವಿಷ್ಣುವು “ಹುಟ್ಟಿನಿಂದಲೇ ಅವಿಕೃತ ಮತಿಯೂ ನೈಷ್ಠಿಕ ಬ್ರಹ್ಮಚಾರಿಯೂ ಜ್ಞಾನವೈರಾಗ್ಯವಂತನೂ ಆದ ನಿನ್ನನ್ನು ವಿಹ್ವಲಗೊಳಿಸಲು ಮನ್ಮಥನಿಗೆ ಎಲ್ಲಿ ಶಕ್ತಿಯಿದೆ?” ಎಂದು ಹೇಳಿದನು. ಅದನ್ನು ಕೇಳಿದ ನಾರದನು ನಕ್ಕು “ನಿನ್ನ ಕೃಪೆಯಿದ್ದಲ್ಲಿ ಮನ್ಮಥ ಯಾವ ಹಾರಾಟ ಮಾಡಿ ಗೆದ್ದಾನು?” ಎಂದು ನಮಸ್ಕರಿಸಿ ಹೊರಟು ಹೋದನು. ಆಗ ಶಿವೇಚ್ಛೆಯಂತೆ ವಿಷ್ಣುವು ಮಾಯೆ ಮಾಡಿದನು. ನಾರದ ಹೋಗುತ್ತಿದ್ದ ದಾರಿಯಲ್ಲಿ ಅವನಿಗೆ ಒಂದು ನಗರ ಕಾಣುವಂತೆ ಅವನು ಮಾಡಿದನು. ಅಲ್ಲಿಯ ರಾಜನು ಶೀಲನಿಧಿ.

ಅಲ್ಲಿ ಅವನು ತನ್ನ ಮಗಳ ಸ್ವಯಂವರದ ಸಿದ್ಧತೆಯನ್ನು ನಡೆಸಿದ್ದನು. ಅದನ್ನು ನೋಡಿದ ನಾರದನು ಮೋಹಕ್ಕೊಳಗಾದನು. ರಾಜನ ಹತ್ತಿರ ಹೋದಾಗ ರಾಜನು ತನ್ನ ಮಗಳು ಶ್ರೀಮತಿಯೆಂದೂ ಅವಳಿಗೆ ಎಂಥ ವರ ಸಿಕ್ಕುವನೆಂದು ನಾರದನನ್ನು ಕೇಳಿದನು. "ಕಾಮನನ್ನು ಜಯಿಸಿದ ಸುರಶ್ರೇಷ್ಠನು ಅವಳನ್ನು ವರಿಸುವನು" ಎಂದು ಹೇಳಿ ಹೊರಟು ಹೋಗಿ ವಿಷ್ಣುವಿನ ಹತ್ತಿರ ಶ್ರೀಮತಿಯನ್ನು ತಾನು ಹೇಗೆ ಮದುವೆಯಾಗಬಹುದೆಂದು ಕೇಳಿದನು; ಅಲ್ಲದೆ ರಾಜಪುತ್ರರಂಥ ರೂಪವನ್ನು ತನಗೆ ಕೊಡಬೇಕೆಂದು ಯಾಚಿಸಿದನು. ಶಿವಭಕ್ತನಾದ ವಿಷ್ಣುವಾಗ ನಕ್ಕನು. ಅವನಿಗೆ ಇದೆಲ್ಲಾ ಶಂಕರನ ಯಜಮಾನಿಕೆಯಿಂದಾದದ್ದು ಎಂದು ತಿಳಿದು, ನಾರದನಿಗೆ ರುಂಡವು ಮಂಗನಂತಾಗುವಂತೆಯೂ ಉಳಿದ ಮುಂಡವು ತನ್ನಂತಾಗುವಂತೆಯೂ ವರವನ್ನಿತ್ತನು. ನಾರದನು ಸಂತೋಷದಿಂದ ಹಿಗ್ಗಿ ಇಂದ್ರ ಸಭೆಯಂತಿದ್ದ ಆ ಸ್ವಯಂವರ ಸಭೆಗೆ ಹೋದನು. ರುದ್ರಗಣದ ಇಬ್ಬರು ಅಲ್ಲಿ ನಾರದನನ್ನು ಕುರಿತು "ನಿನ್ನ ಮುಖ ಮಂಗನ ಮುಖ" ಎಂದು ನಕ್ಕರು. ಆದರೂ ನಾರದ ಆ ಮಾತನ್ನು ನಂಬದೆ ತನಗೇ ರಾಜಪುತ್ರಿಯ ಮಾಲೆ ಬೀಳುತ್ತದೆ ಎಂದುಕೊಂಡನು. ಆದರೆ ನಾರದನನ್ನು ನೋಡಿ ಆಕೆಗೆ ಸಿಟ್ಟು ಬಂತಲ್ಲದೆ ಮಿಕ್ಕ ರಾಜಕುಮಾರರ ಮೇಲೆಯೂ ಮನಸ್ಸಾಗದೆ ಹಾರವನ್ನು ಸ್ವಯಂವರ ಮಂಟಪದ ಮಧ್ಯದಲ್ಲಿ ನಿಂತು ಮೇಲಕ್ಕೆಸೆದಳು. ಅದು ರಾಜಪುತ್ರನೊಬ್ಬನ ವೇಷದಿಂದ ಆ ಕೂಡಲೇ ಅಲ್ಲಿ ಅವತರಿಸಿದ ವಿಷ್ಣುವಿನ ಕೊರಳಿಗೆ ಬಿದ್ದಿತು. ಅವನನ್ನು ಕಂಡ ನಿಮಿಷಾರ್ಧದಲ್ಲಿ ಅವನತ್ತಲೇ ಅವಳು ಮಾಲೆಯನ್ನೆಸೆದಿದ್ದಳು. ಅದು ಅವನ ಕೊರಳಿಗೆ ಬಿದ್ದುದು ಅವಳಿಗೆ ಸಂತೋಷವನ್ನುಂಟುಮಾಡಿತು. ಆ ಕೂಡಲೇ ವಿಷ್ಣುವು ಅವಳೊಡನೆ ಅಂತರ್ಧಾನ ಹೊಂದಿದನು. ಎಲ್ಲ ರಾಜಕುಮಾರರಿಗಿಂತ ಹೆಚ್ಚು ನಿರಾಶನಾದ ನಾರದನನ್ನು ನೋಡಿ ಬ್ರಾಹ್ಮಣ ರೂಪದಿಂದ ಅಲ್ಲಿಗೆ ಬಂದಿದ್ದ ಇಬ್ಬರು (ಶಿವ) ರುದ್ರಗಣರು, "ನಾರದನೇ, ನಿನ್ನ ಮಂಗನ ಮುಖ ನೋಡಿ ರಾಜಕುಮಾರಿ ನಿನ್ನನ್ನು ವರಿಸಲಿಲ್ಲ" ಎಂದರು. ಆಗ ನಾರದನು ಕನ್ನಡಿಯಲ್ಲಿ ನೋಡಿಕೊಂಡಾಗ ಅವರ ಮಾತು ನಿಜವೆಂದು ತಿಳಿಯಿತು. ಅವನಿಗೆ ಸಿಟ್ಟು ಬಂದು ಆ ಶಿವಭಕ್ತರಿಗೆ ನಿಮಗೆ ರಾಕ್ಷಸ ರೂಪ ಬರಲಿ ಎಂದು ಶಾಪ ಕೊಟ್ಟನು. ಅವರು ಮನಸ್ಸಿನಲ್ಲಿ ಚಿಂತೆ ಮಾಡದೆ ಶಿವಸ್ತುತಿ ಮಾಡುತ್ತಾ ಅಲ್ಲಿಂದ ಹೊರಟು ಹೋದರು. ನಾರದನು ಸಿಟ್ಟಿನಿಂದ ವಿಷ್ಣುವಿನ ಹತ್ತಿರ ಹೋಗಿ "ನೀನು ಮೋಹಿನಿಯಾಗಿ ಪೂರ್ವಕಾಲದಲ್ಲಿ ಮೋಸ ಮಾಡಿದವನು, ಅಸುರರಿಗೆ ಅಮೃತವನ್ನು ಕೊಡದೆ ವಿಷ ಕೊಟ್ಟು ಬಿಟ್ಟೆ. ನೀನು ಸ್ವತಂತ್ರನಲ್ಲ; ಶಿವಕೃಪೆಯಿಂದ ಬದುಕಿದವನು. ಆದ್ದರಿಂದ ನನಗೆ ಮಾಡಿದಂಥ ಮೋಸವನ್ನು ನೀನು ಇನ್ನು ಮುಂದೆ ಮಾಡಲಾರದಂತೆ ಶಿವಬಲದಿಂದ ನಾನು–ನೀನು ಮನುಷ್ಯನಾಗಿ ಹುಟ್ಟಿ, ಹೆಂಡತಿಯನ್ನು ಕಳೆದುಕೊಂಡು, ಅಗಾಧ ದುಃಖ ಪಟ್ಟು, ಮಂಗಗಳ ನೆರವಿನಿಂದ ನಿನ್ನ ದುಃಖ ಹೋಗಲಿ ಎಂದು ಶಪಿಸುತ್ತೇನೆ" ಎಂದು ಹೇಳಿ ಶಾಪಕೊಟ್ಟು ಹೊರಟುಹೋದನು. ವಿಷ್ಣುವು ಶಿವಸ್ತುತಿ ಮಾಡಿ ಆ ಶಾಪವನ್ನು ಸ್ವೀಕರಿಸಿದನು.

ಅನಂತರ ಶಿವನು ನಾರದನ ಮೇಲೆ ಅಧ್ಯಾರೋಪಿಸಿದ ಮೋಹಿನೀ ಮಾಯೆಯನ್ನು ಹಿಂತೆಗೆದುಕೊಂಡನು. ಆಗ ನಾರದನಿಗೆ ಜ್ಞಾನೋದಯವಾಯಿತು. ಆಗ ಪಶ್ಚಾತ್ತಾಪದಿಂದ ಅವನು ತನ್ನನ್ನು ತಾನೇ ನಿಂದಿಸಿಕೊಂಡನು; ಶಂಭುವಿನ ಜ್ಞಾನಿ ಮೋಹಿನೀ ಶಕ್ತಿಯನ್ನು ಹೊಗಳಿದನು ಮತ್ತು ವಿಷ್ಣುವಿನೆಡೆಗೆ ಹೋಗಿ ಅವನ ಪಾದಗಳಿಗೆರಗಿದನು; ತಾನು ಅಜ್ಞಾನದಿಂದ ಕೊಟ್ಟ ಶಾಪವನ್ನು ನಿಷ್ಫಲಗೊಳಿಸೆಂದು ಬೇಡಿದನು. ಅದಕ್ಕೆ ಉತ್ತರವಾಗಿ ಹರಿಯು "ಶಿವಾಜ್ಞೆಯನ್ನು ಮೀರಿ ಆತನಿಗೆ ಮೋಸ ಮಾಡಿದ್ದರಿಂದ ಅವನ ಇಚ್ಛೆಯಂತೆ ನಿನಗೆ ನಿನ್ನ ಕರ್ಮಫಲ ಹೀಗೆ ದೊರಕಿತು. ಚಿಂತೆಮಾಡಬೇಡ. ನಿನ್ನ ಗರ್ವಾಪಹಾರವೀಗ ಆಗಿದೆ. ಶಿವನು ಯಾರೆಂಬುದು ಗೊತ್ತೇ? ಬ್ರಹ್ಮ–ವಿಷ್ಣು–ಮಹೇಶ ರೂಪತಾಳಿದ ನಿರ್ಗುಣಾನಿರ್ಗುಣನು. ನಿರ್ಗುಣತ್ವದಲ್ಲಿ ಅವನು ಶಿವನು, ಪರಮೇಶ್ವರನು, ಪರಮಾತ್ಮನು; ಅವನು ಪರಬ್ರಹ್ಮ, ಅವ್ಯಯ, ಅನಂತ, ಮಹಾದೇವ. ಅವನ ಸೇವೆಗಾಗಿ ಬ್ರಹ್ಮನೂ ನಾನೂ ಸೃಷ್ಟಿ ಸ್ಥಿತಿಕರ್ತರಾಗಿದ್ದೇವೆ; ರುದ್ರರೂಪದಲ್ಲಿ ಅವನು ಸಂಹಾರಿ. ಮಾಯೆಯನ್ನು ಅಂತರ್ಹಿತಗೊಳಿಸಿಕೊಂಡಾಗ (ಅದರಿಂದ ಬೇರೆಯಾದಾಗ) ಅವನು ನಿರ್ಗುಣ, ಸ್ವೇಚ್ಛಾಚಾರಿ ಮತ್ತು ಸ್ವೇಚ್ಛಾವಿಹಾರಿ ಹಾಗೂ ಭಕ್ತಾನುಗ್ರಹಕಾರಕ. ಅನನ್ಯಮತಿಯಿಂದ ನೀನು ಶಿವನ ನೂರು ಹೆಸರುಗಳನ್ನು ಜಪಿಸು. ಅದರಿಂದ ನಿನ್ನ ಪಾಪವು ಪರಿಹಾರವಾಗುತ್ತದೆ. ನನಗೆ ಶಿವನಷ್ಟು ಪ್ರಿಯನಾದ ಒಡೆಯನು ಇನ್ಯಾರೂ ಇಲ್ಲ. ನಿನ್ನಲ್ಲಿ ಕಾಮೋತ್ಪತ್ತಿಯಾದುದೂ, ಗರ್ವ ಹುಟ್ಟಿದ್ದೂ, ನೀನು ನನಗೆ ಶಾಪ ಕೊಟ್ಟದ್ದೂ, ನೀನು ಪಶ್ಚಾತ್ತಾಪ ಪಟ್ಟದ್ದೂ, ಈಗ ನಾನು ನಿನಗೆ ಹೇಳುತ್ತಿರುವುದೂ– ಎಲ್ಲಾ ಶಿವೇಚ್ಛೆಯಿಂದಲೇ. ಅವನೇ ನನಗೆ ಎಲ್ಲ ಶಕ್ತಿಗಳನ್ನೂ ಕೊಟ್ಟದ್ದು. ಶಿವಪೂಜೆ ಮಾಡಿ ಜೀವನ್ಮುಕ್ತನಾಗು, ನಿಜವಾದ ಪಂಡಿತನಾಗು. ಶಿವಪೂಜೆಯು ಸರ್ವಪಾಪಹರ" ಎಂದನು; "ರಾಗದ್ವೇಷಗಳನ್ನುಳ್ಳವರು ಶಿವಭಕ್ತರಲ್ಲ. ಅವನ್ನು ಬಿಡು." ಎಂದೂ ಅವನು ನಾರದನಿಗೆ ಉಪದೇಶಿಸಿದನು. ನಾರದನು ಅಲ್ಲಿಂದ ಹೊರಟು ಬರುತ್ತಿರುವಾಗ ಶಿವಗಣರಿಬ್ಬರು ತಮಗೆ ನಾರದ ಶಾಪಕೊಟ್ಟದ್ದು ಶಿವೇಚ್ಛೆಯಿಂದಲೇ, ಆದುದರಿಂದ ಆ ಶಾಪವನ್ನು ಹಿಂದೆಗೆದುಕೊಳ್ಳಬೇಕೆಂದು ಬೇಡಿಕೊಂಡರು. ಅದಕ್ಕೆ ಉತ್ತರವಾಗಿ ನಾರದನು "ಶಿವೇಚ್ಛೆಯಿಂದ ನಾನು ತಪ್ಪು ಮಾಡಿದೆ. ಅದಕ್ಕಾಗಿ ಪಶ್ಚಾತ್ತಾಪ ಪಡುತ್ತೇನೆ. ನನ್ನ ಶಾಪ ಹುಸಿಯಾಗದು. ಆದರೆ ನೀವಿಬ್ಬರೂ ಮಹಾಬಲ ಪರಾಕ್ರಮಶಾಲಿಗಳಾಗಿ ಹುಟ್ಟಿ ಸರ್ವಬ್ರಹ್ಮಾಂಡಕ್ಕೆ ರಾಜರಾಗಿ ಶಿವನನ್ನು ಭಜಿಸಿ ಮರಣಾ ನಂತರ ಶಿವಲೋಕದಲ್ಲಿಯ ನಿಮ್ಮ ಪೂರ್ವ ಸ್ಥಾನವನ್ನು ಪಡೆಯಿರಿ" ಎಂದು ಹರಸಿ ಅವರನ್ನು ಸಂತೋಷಗೊಳಿಸಿದನು. ಅನಂತರ ಬ್ರಹ್ಮನಲ್ಲಿಗೆ ಹೋಗಿ ನಾರದನು ಅವನನ್ನು ವಂದಿಸಿ, "ವಿಷ್ಣುಕೃಪೆಯಿಂದ ನಾನು ವಿಷ್ಣು ಮಹಾತ್ಮ್ಯವನ್ನೂ ಭಕ್ತಿ, ಜ್ಞಾನ, ತಪಸ್ಸು, ದಾನ ಮತ್ತು ತೀರ್ಥಮಾರ್ಗಗಳನ್ನೂ ತಿಳಿದುಕೊಂಡೆನು. ನೀನು ನನಗೆ ಶಿವತತ್ವವನ್ನೂ, ಶಿವಪೂಜಾವಿಧಿಯನ್ನೂ ವಿವರಿಸುವ ಕೃಪೆ ಮಾಡು. ನಿರ್ಗುಣನಾಗಿದ್ದೂ ಶಿವನು ಸಗುಣನಾದದ್ದು ಹೇಗೆ? ಎಂದು ಕೇಳಿದನು. ಅದಕ್ಕೆ ಉತ್ತರವಾಗಿ ಬ್ರಹ್ಮನು ಕೃಪೆಯಿಂದ

ಸ್ವಪುತ್ರನಾದ ನಾರದನಿಗೆ ಶಿವ ವಿವರ್ತವನ್ನು ಹಿಂದೆ ಹೇಳಿದಂತೆ ವಿವರಿಸಿದನು; ಅದಕ್ಕೂ ಹೆಚ್ಚಿನ ಶಿವ ತತ್ವಾರ್ಥವು ವಿಷ್ಣುವಿಗೂ ಗೊತ್ತಿಲ್ಲ–ತನಗೂ ಗೊತ್ತಿಲ್ಲ–ಎಂದು ಹೇಳಿದನು. ಈ ವಿವರ್ತ ಪರಿಭಾಷೆಯು (ಪುರಾಣ ಪ್ರಕಾರ) "ಸಂಜ್ಞಾಸಂಜ್ಞೋಕ್ತಿ" ಪ್ರಣವವಿದ್ದ ಹಾಗೆ. [೧) ಅಕಾರೊವಾಸುದೇವಃ ಸ್ಯಾದಾಕರಸ್ತು, ಪಿತಾಮಹಃ ಉಕಾರಃ ಶಂಕರಃ ಪ್ರೋಕ್ತ ಊಕಾರ ಶ್ವಾಪಿ ಲಕ್ಷಣೇ ಅಂ ಸ್ಯಾಚ್ಚ ಪರಮಂ ಬ್ರಹ್ಮ" ಏಕಾಕ್ಷರ ಕೋಶದ ಪ್ರಕಾರ (ಶ್ಲೋಕ ೧ ರಿಂದ ೫ರವರೆಗೆ) = ಸಗುಣಬ್ರಹ್ಮ+ ನಿರ್ಗುಣಬ್ರಹ್ಮ=ಓಂಕಾರ= ಅ+ಆ+ಉ+ಊ+ಅಮ್ ೨) ಏಕಾರ ಉಚ್ಯತೇವಿಷ್ಣುರೈಕಾರಃ ಸ್ಯಾನ್ಮಹೇಶ್ವರಃ ಓಕಾರಸ್ತು ಭವೇದ್ ಬ್ರಹ್ಮಾ ಓಂಕಾರೋನಂತ ಉಚ್ಯತೇ (ಏಕಾ... ಶ್ಲೋ–೫).] ವಿಷ್ಣುವು ಶಿವೇಚ್ಛೆಯಂತೆ ಬ್ರಹ್ಮರೂಪದ ನೀರಲ್ಲಿ ಈ ತತ್ವಗಳನ್ನೊಳಗೊಂಡು ಮಲಗಿರುತ್ತಾನೆ. ಇದು ವಿಷ್ಣೂತ್ಪತ್ತಿಯ ಕಾರಣ.

–೧೧–

# ಶಬ್ದಬ್ರಹ್ಮ ಸೃಷ್ಟಿ

ಶ್ರೀಮನ್ನಾರಾಯಣ ಯಾ ವಿಷ್ಣುವು ಮಲಗಿರುವಾಗ ಅವನ ಹೊಕ್ಕುಳಿನಲ್ಲಿ ಕಮಲವೊಂದು ಹುಟ್ಟಿತು. ಇದೂ ಶಿವನ ಯಾ ಶಂಕರನ ಸಂಕಲ್ಪ. ಅದರಿಂದ ಆ ಕಮಲದಲ್ಲಿ ಹಿರಣ್ಯ ಗರ್ಭನಾದ ಬ್ರಹ್ಮನು ಹುಟ್ಟಿದನು. ಇವನಿಗೆ ೪ ಮುಖಗಳು ಇದು ಬ್ರಹ್ಮೋತ್ಪತ್ತಿಯ ಕಾರಣ. ಇವರು ಸೃಷ್ಟಿ–ಸ್ಥಿತಿಗಳ ಕಾರಣ ಸ್ವರೂಪರು. ಶಿವ ಸೃಷ್ಟರು. ಹಾಗೇ ಲಯಕಾರಕ ರುದ್ರನೂ ಶಿವಸೃಷ್ಟನು; ಅವನು ಶಿವನ ತೃತೀಯ ಕರಣ. ಈ ಮೂರ್ತಿತ್ರಯವೇ ಶಿವನ ಶಕ್ತಿಯ ವ್ಯಕ್ತರೂಪಗಳು; ಶಿವಮಾಯಾಶಕ್ತಿ ಜಾತರು; ಸತ್ವ, ರಜಸ್ತಮಃ ಪ್ರಧಾನರು. ಅಲ್ಲದೆ, ಈ ಇಬ್ಬರೂ ಶಿವನ ಶಬ್ದಬ್ರಹ್ಮ ಸ್ವರೂಪವನ್ನು ಅವನ ಅನುಗ್ರಹದಿಂದ ತಿಳಿದುಕೊಂಡವರು.

ಅಕಾರವು ಶಬ್ದಬ್ರಹ್ಮನ ತಲೆ; ಆಕಾರವು ಹಣೆ; ಇಕಾರವು ಬಲಗಣ್ಣು, ಈಕಾರ ಎಡಗಣ್ಣು; ಉಕಾರವು ಬಲಗಿವಿ; ಊಕಾರವು ಎಡಗಿವಿ. ಋಕಾರವು ಬಲಗೆನ್ನೆ; ೠಕಾರವು ಎಡಗೆನ್ನೆ; ಲುಲೂಕಾರಗಳು ಮೂಗಿನ ಹೊಳ್ಳೆಗಳು. ಏ–ಐಕಾರಗಳು ಮೇಲ್ದುಟಿ–ಕೆಳದುಟಿಗಳು. ಓ–ಔಕಾರಗಳು ಮೇಲಿನ ಮತ್ತು ಕೆಳಗಿನ ಹಲ್ಲುಸಾಲುಗಳು. ಅಮ್ಕಾರವು ತಾಲುಗಳು (PALATES); ಕಾದಿ ಪಂಚಾಕ್ಷರಗಳು ಪಂಚ ದಕ್ಷಿಣಹಸ್ತಗಳು; ಚಾದಿ ಪಂಚಾಕ್ಷರಗಳು ಅವನ ವಾಮಹಸ್ತಗಳು. ಟಾದಿ ಪಂಚಾಕ್ಷರಗಳು ಬಲಪಾದಗಳು ಮತ್ತು ತಾದಿ ಪಂಚಾಕ್ಷರಗಳು ಎಡಪಾದಗಳು. ಪಕಾರವು ಅವನ ಹೊಟ್ಟೆ. ಫಕಾರ ಬಲಪಕ್ಕ, ಬಕಾರ ಎಡಪಕ್ಕ, ಭಕಾರವು ಕುತ್ತಿಗೆ; ಮಕಾರವು ಹೃದಯ. ಯಕಾರಾದಿ ಸಕಾರಾಂತ ಅಕ್ಷರಗಳು ಅವನ ಸಪ್ತಧಾತುಗಳು; ಹಕಾರವು ಹೊಕ್ಕುಳು ಮತ್ತು ಕ್ಷಕಾರವು ಮೂಗು. ಮಹಾಯೋಗಿಯಾದ ಶಂಭುವಿನ, ಮಹಾದೇವನ ಯಾ ಶಿವನ ಅಕ್ಷರ ರೂಪದ ಅವಯವಗಳು. ಇಲ್ಲಿ ಸಂಸ್ಕೃತ ಭಾಷೆಯ ಹಾಗೂ ಕನ್ನಡ ಭಾಷೆಯ ೫೫ ಅಕ್ಷರಗಳನ್ನು ಶಿವಾವಯವ ಸಂಕೇತಗಳನ್ನಾಗಿ ತೆಗೆದುಕೊಳ್ಳಲಾಗಿದೆ.

ಅವಾಙ್ಞನಸಗೋಚರನಾದ ಶಿವನು ಸತ್ಯ, ಆನಂದ, ಅಮೃತ, ಅವನ ಏಕಾಕ್ಷರವು ಪರಮಕಾರಣ. ಅದು ವಿಷ್ಣು, ಉಕಾರ, ಜಗದ್ಯೋನಿ, ಪ್ರಧಾನ ಪುರುಷೇಶ್ವರ. ಮಕಾರವು ನೀಲಲೋಹಿತ (ಹರ, ರುದ್ರ), ವಿಭು, ಅಕಾರವು ಸೃಷ್ಟಿಕರ್ತ, ಉಕಾರವು ಮೋಹಕನಾದಲಯಕರ್ತ; ಮಕಾರವು ಅನುಗ್ರಹಕಾರಕ, ಈ ಬೀಜಿಯಾದ

ಲಿಂಗಸಾಂಕೇತಿಕ ಶಿವನು ಅಕಾರವೆಂಬ ಅಂಡಜ ಬೀಜಕನು ಬೀಜಿ, ಬೀಜ ಮತ್ತು ಅದರ ಯೋನಿನಾದ. ಸಕಲ ಲಿಂಗಸ್ವರೂಪದ ಬೀಜಿಯು ತನ್ನನ್ನು ಎರಡು ಹೋಳಾಗಿ ವಿಭಜಿಸಿಕೊಂಡುದರಿಂದ ಅಕಾರ ಹುಟ್ಟಿದ್ದು. ಚತುರ್ಮುಖನು ಆ ಅಂಡ (ಮೊಟ್ಟೆಯಿಂದ) ದಿಂದ ಹುಟ್ಟಿದವನು. ಅದೇ ಹಿಂದೆ ಹೇಳಿದ ಬ್ರಹ್ಮ ಜಲಸುಪ್ತವಿಷ್ಣುತತ್ವ, ಅದೇ ತ್ರಿವಿಧಪ್ರಭು–ಸೃಷ್ಟಿ, ಸ್ಥಿತಿ, ಲಯಗಳ ಕಾರಕ (ತ್ರಿಮೂರ್ತಿ).

ಬೀಜವೆಂಬ ಅಕಾರದ ಶಕ್ತಿಯು ಯೋನಿಯೆಂಬ ಉಕಾರದಲ್ಲಿ ಸೇರಿದ್ದರಿಂದ ಹಿರಣ್ಯಗರ್ಭಾಖ್ಯ ಬ್ರಹ್ಮಾಂಡ ಹುಟ್ಟಿತು. ಆ ಅಂಡವನ್ನು ಶಿವನು ಒಡೆದನು. ಆ ಹೋಳುಗಳು ದ್ಯಾವಾ ಪ್ರಥಿವಿಗಳಾದುವು. ಕಕಾರವು ಏಕಾಕ್ಷರಕೋಶದ ಪ್ರಕಾರ, ಕ– ಪ್ರಜಾಪತಿ ಇತ್ಯಾದಿ.

**"ಅಂ" ಸ್ಯಾಚ್ಚ ಪರಮಂ ಬ್ರಹ್ಮ "ಅ" ಸ್ಯಾಚ್ಚೈವ ಮಹೇಶ್ವರಃ ॥**
**"ಕಃ" ಪ್ರಜಾಪತಿರುದ್ದಿಷ್ಟಃ "ಕೋऽ" ರ್ಕವಾಯ್ವನಲೇಷು ಚ ॥೬॥**
**'ಕ"ಶ್ಯಾತ್ಮನಿ ಮಯೂರೇ ಚ ಕಃ ಪ್ರಕಾಶ ಉದಾಹೃತಃ**
**"ಕಂ" ಶಿರೋ ಜಲಮಾಖ್ಯಾತಂ ಕಂ ಮುಖಂ ಚ ಪ್ರಕೀರ್ತಿತಂ ॥೭॥**

ಚತುರ್ಮುಖ ಅಂಡದ ಸಂಕೇತ. ಆ ಚಿನ್ನದ ತತ್ತಿ ಬಹುಕಾಲ ನೀರಲ್ಲಿದ್ದು ಬಳಿಕ ಒಡೆಯಲ್ಪಟ್ಟು ಸೃಷ್ಟಿಕರ್ತ ಬ್ರಹ್ಮ ಹುಟ್ಟಿದನು. ಅವನು ಮೊದಲು ತ್ರಿಮೂರ್ತಿ ಶಕ್ತಿಗಳನ್ನೊಳಗೊಂಡವನಾಗಿದ್ದನು. ಈ ಇಷ್ಟನ್ನೂ "ಓಂ" ಎಂಬ ಪ್ರಣವವು ಸಂಕೇತಿಸುತ್ತದೆ. ಇದು ಸತ್ಯದ (ಪರಶಿವದ) ಋತಸ್ವರೂಪ. ಈ ವಿಚಾರವು ಯಜುಃಸ್ಸಾರವು. ಋಕ್‌ಸಾಮಗಳಿದನ್ನು ಮೊದಲು ಕೇಳಿ ಸಾರ್ಥಕವಾದುವು. ಈ ಪುರಾಣವು ಅತಿಪ್ರಾಚೀನವಾದ ಛಾಂದೋಗ್ಯವು ಪ್ರಣವವು ಸಗುಣ–ನಿರ್ಗುಣ ಮೂಲ ಪರಬ್ರಹ್ಮದ ಸಂಕೇತವೆಂದಿರುವುದನ್ನು ಈಗ ವಿಸ್ತರಿಸ ಹೋಗಿ ಮೇಲಿನಂತೆ ಕಲ್ಪಿಸಿದೆ. "ತತೋ ವಿರಾಟಜಾಯತ" ಮುಂತಾದ ಪುರುಷ ಸೂಕ್ತೋಕ್ತಿಗಳಿಲ್ಲಿ ಸ್ಮರಣೀಯ–ಸಮನ್ವಯ ಸಾಧನವಾಗಬಹುದಾದ್ದರಿಂದ. ಐತರೇಯೋಪನಿಷತ್ತಿನ ಪ್ರಥಮ ಖಂಡವು ಸೃಷ್ಟಿವಿಕಾಸ ವಿವರಣೆಯಲ್ಲಿ ಎಲ್ಲವುದಕ್ಕಿಂತ ಸುಲಭ, ಸಂಗ್ರಾಹ್ಯ ಎಂಬುದು ವಾಚಕರ ಅನುಕೂಲಕ್ಕಾಗಿ. ಅದರಲ್ಲಿ ಗೊಂದಲಗೇಡಿತನವಿಲ್ಲ. ಪುರಾಣಗಳು ಇತ್ತೀಚಿನವು. ಅವುಗಳೆಂದೂ ವೇದೋಪನಿಷದ್ವಿರುದ್ಧವಾದ ಕಲ್ಪನೆಗಳನ್ನು ಎತ್ತಿಹಿಡಿಯುವುದಿಲ್ಲ. ಉಪನಿಷತ್ತುಗಳದು ವೇದಸ್ಥಾನ; ಪುರಾಣಗಳದು ಸ್ಮೃತಿಸ್ಥಾನ.

ಪಂಚಾನನ ಶಿವನು ವಿಷ್ಣುವಿಗೆ ಆತ್ಮಜ್ಞಾನವಿತ್ತನು. ವಿಷ್ಣುವು ಬ್ರಹ್ಮನಿಗೆ ಆತ್ಮಜ್ಞಾನವನ್ನು ಮಾಡಿಕೊಟ್ಟನು. ಅವನ ದಕ್ಷಿಣ ಪಾರ್ಶ್ವದಲ್ಲಿ ಬ್ರಹ್ಮನೂ ವಾಮಪಾರ್ಶ್ವದಲ್ಲಿ ವಿಷ್ಣುವೂ ಹುಟ್ಟಿದವರು. ಈ ಅಂಶವನ್ನು ಇತರ ಕೆಲವಂಶಗಳಂತೆಯೇ ಈ ಪುರಾಣವು ಪುನರ್ವಚನ ಮಾಡುತ್ತಾ ಹೋಗಿದೆ.

ತ್ರಿಮೂರ್ತಿಗಳಲ್ಲಿ ಹರ ಅಥವಾ ರುದ್ರನು ಶಿವನ ಪೂರ್ಣಾವತಾರನಾದ ಲಯಕರ್ತ. ಆದ್ದರಿಂದ ಅವನು ಬ್ರಹ್ಮ–ವಿಷ್ಣುಗಳಿಂದ ಸೇವ್ಯನಾಗಿದ್ದಾನೆ. "ಸರ್ವಂ ಖಲ್ವಿದಂ ಬ್ರಹ್ಮ; ತಜ್ಜಲಾನಿತಿ ಶಾಂತ ಉಪಾಸೀತ" ಎಂಬುದನ್ನು "ಸರ್ವಂ ಖಲ್ವಿದಂ ಶಿವಃ। ತಜ್ಜಲಾನಿತಿ ಶಾಂತ ಉಪಾಸೀತ" ಎಂದು ಬಿಟ್ಟರೆ, ಶಿವಪುರಾಣದ ಹೃದಯವನ್ನೇ ವಾಚಕರ ಮುಂದೆ ತೆರೆದಿಟ್ಟಂತಾಗುತ್ತದೆ.

–೧೨–

# ವಿಷ್ಣುವಿನ ಪಾಲಕತ್ವ

ರುದ್ರ ಸಂಹಿತೆಯ ದ್ವಿತೀಯ ಖಂಡದಲ್ಲಿ ಶಿವನು ಹರಿ–ವಿಧಿಗಳಿಗೆ ಹೀಗೆ ಆಜ್ಞೆ ಮಾಡಿದ್ದಾನೆ:

ಬ್ರಹ್ಮ ನಿರ್ಮಿಸಿದ ಲೋಕದಲ್ಲಿ ದುಃಖವುಂಟಾದರೆ, ಎಲೈ ಹರಿಯೇ ನೀನು ಅದನ್ನು ಪರಿಹರಿಸಬೇಕು. ಆ ಕೆಲಸದಲ್ಲಿ ನಾನು ಯಾವಾಗಲೂ ನಿನಗೆ ಸಹಾಯ ಮಾಡುತ್ತೇನೆ. ನಿನ್ನ ಶತ್ರುಗಳನ್ನು ನಾನು ನಾಶ ಮಾಡುತ್ತೇನೆ. ಅದಕ್ಕಾಗಿ ಅನೇಕ ಅವತಾರಗಳನ್ನು ಬೇಕಾದರೂ ತಾಳುತ್ತೇನೆ. ಜಗತ್ತಿನ ತುಂಬಾ ನೀನು ವ್ಯಾಪಿಸಿರು, ರುದ್ರ ರೂಪದಲ್ಲಿ ನಾನು ಸಗುಣನು; ನಿನಗಾಗದುದೆಲ್ಲವನ್ನೂ ಮಾಡುವೆನು. ನಿನಗೂ ರುದ್ರನಾದ ನನಗೂ ನಡುವೆ ಯಾವ ಅಂತರವೂ ಇಲ್ಲ. ವಸ್ತುತಃ ನಾವೆಲ್ಲಾ ಒಂದೇ–ಈ ನನ್ನ ವರದಿಂದ ಕೂಡಾ ನಾವು ಮೂಲತಃ ಒಂದೇ ಆಗಿರುತ್ತೇವೆ. ಇದು ಲೀಲೆಯಾದರೂ ಇದು ಸತ್ಯ, ಇದು ಸತ್ಯ. ರುದ್ರ ಭಕ್ತರು ನಿನ್ನನ್ನು ನಿಂದಿಸಿದರೆ ಅವರ ಪುಣ್ಯವೆಲ್ಲಾ ನಾಶವಾಗುವುದು. ನಿನಗೆ ನಿಗ್ರಹಾನುಗ್ರಹ ಶಕ್ತಿಯನ್ನು ದಯಪಾಲಿಸಿದ್ದೇನೆ. ನೀನು ಸವಾಧ್ಯಕ್ಷನಾಗಿ ಭಕ್ತಿ–ಮುಕ್ತಿಪ್ರದನಾಗು. ನನ್ನಾಜ್ಞೆಯಂತೆ ನೀನು ಸರ್ವರ ಪ್ರಾಣನಾಗು. ಸಂಕಟ ಕಾಲದಲ್ಲಿ ರುದ್ರಶರೀರಿಯಾದ ನನ್ನನ್ನು ಭಜಿಸು. ನಿನ್ನನ್ನು ಆಶ್ರಯಿಸಿದವರೆಲ್ಲರೂ ನನ್ನನ್ನು ಆಶ್ರಯಿಸಿದವರೇ ಆಗಿದ್ದಾರೆ. ಭೇದ ಮಾಡುವವರು ನರಕಕ್ಕೆ ಹೋಗುತ್ತಾರೆ.

ಬ್ರಹ್ಮನ ದಿನವು ಮನುಷ್ಯರ ಚತುರ್ಯುಗ ಸಹಸ್ರಕ್ಕೆ ಸರಿಸಮ; ಅಷ್ಟೇ ಕಾಲ ಅವನಿಗೆ ಒಂದು ರಾತ್ರಿ. ಅಂಥ ೩೦ ದಿನಗಳಿಗೆ ಅವನ ಒಂದು ತಿಂಗಳು. ಅಂಥ ೧೨ ತಿಂಗಳಿಗೆ ಅವನ ಒಂದು ವರುಷ. ಅಂಥ ನೂರು ವರ್ಷಗಳವರೆಗೆ ಬ್ರಹ್ಮನು ಬದುಕಿರುತ್ತಾನೆ. [ಪಂಚಾಂಗದಂತೆ ಬ್ರಹ್ಮನ ೨೪ ಗಂಟೆಗಳು ಮನುಷ್ಯ ಮಾನದ ೮೬೪ ಕೋಟಿ ವರ್ಷಗಳಾಗುತ್ತವೆ. ಈ ಬಗ್ಗೆ "ಅಮರ ಕೋಶವನ್ನು" ಓದಬಹುದು] ಬ್ರಹ್ಮನ ಒಂದು ವರ್ಷವು ವಿಷ್ಣುವಿಗೆ ಒಂದು ದಿನ. ವಿಷ್ಣುವಿನ ಆಯುಷ್ಯದಳತೆ ಅವನ ದಿನಗಳ ಪರಿಮಾಣದಂತೆ, ತಿಂಗಳು ವರ್ಷಗಳ ಪರಿಮಾಣದಂತೆ ನೂರು ವರ್ಷಗಳಷ್ಟು. ವಿಷ್ಣುವಿನ ಅಳತೆಯ ಒಂದು ವರ್ಷವು ಒಂದು ರುದ್ರ ದಿನಕ್ಕೆ ಸಮಾನ. ರುದ್ರ (ಹರ, ಸದಾಶಿವ) ಅಂಥ ನೂರು ವರ್ಷಗಳ ಕಾಲ ಆ

ರೂಪದಲ್ಲಿರುತ್ತಾನೆ. ರೂಪವೆಂದರೆ ಕಾಯ. ಅದು ದೇವಜಾತಿಗೆಲ್ಲಾ ಪ್ರಕಾಶಮಯ– ಪಾಂಚ ಭೌತಿಕವಲ್ಲ. ರುದ್ರನು ತನ್ನ ಆಯುಷ್ಯ ಮುಗಿದ ಮೇಲೆ ಶಿವ ಶಕ್ತಿಯಲ್ಲಿ ಒಂದಾಗಿ ಹೋಗುವನು.

ಶಿವನ ಆಜ್ಞೆಯನ್ನು ಸ್ವೀಕರಿಸಿದ ಬ್ರಹ್ಮ ವಿಷ್ಣುಗಳು, "ನೀನು ಹೇಳಿದಂತೆ ನಾವು ಮಾಡುತ್ತೇವೆ. ನೀನೇ ಧ್ಯೇಯ ನಮಗೆ. ನಮಗೆ ನಿನ್ನಿಂದಲೇ ಸಾಮರ್ಥ್ಯವು ದೊರಕಿದ್ದು. ಪ್ರತಿ ಕ್ಷಣವೂ ನಿನ್ನ ಧ್ಯಾನದಲ್ಲಿರುತ್ತೇವೆ. ನಮ್ಮ ಭಕ್ತರು ನಿನ್ನನ್ನು ನಿಂದಿಸಿದರೆ ನರಕಕ್ಕೆ ಹೋಗುವರು. ನಿನ್ನ ಭಕ್ತರು ನಮಗೆ ಯಾವಾಗಲೂ ಬೇಕಾದವರು, ಪ್ರಿಯರು, ಹೀಗೆ ತಿಳಿದವರಿಗೆ ಮುಕ್ತಿಯು ದುರ್ಲಭವಾಗದು, ನಮ್ಮ ಮಹಿಮೆ ನಿನ್ನಿಂದ ಹೆಚ್ಚಿದೆ, ಎಲ್ಲಾದರೂ ನಾವು ದುರ್ಗುಣಿಗಳಾದರೆ ಕ್ಷಮಿಸಬೇಕು" ಎಂದು ಬೇಡಿಕೊಂಡರು. ಅದಕ್ಕೆ ಶಿವನು ತಥಾಸ್ತು ಎಂದನು.

ಲಯನದಿಂದ "ಲಿಂಗ" ಎಂಬ ಹೆಸರು ಬಂತೆಂದು ಬ್ರಹ್ಮ ಹೇಳಿದ್ದಾನೆ. ಲಯಕಾರಕತೆ ರುದ್ರನಲ್ಲಿರುವುದು ಪೂರ್ವೋಕ್ತ. ಆದ್ದರಿಂದಲೇ ಶಿವನನ್ನು ಲಿಂಗರೂಪದಿಂದ ಪೂಜಿಸುವುದು ಪ್ರಸಿದ್ಧ. ಅಲ್ಲದೇ, ಶಿವಜ್ಞಾನಲೀನತೆ ಆತನ ಅನುಗ್ರಹದಿಂದಲೇ ಲಭಿಸುವುದು ಶಿವಪುರಾಣದ ಇಂಗಿತ. ಇಲ್ಲಿ ಈ ಅರ್ಥಕ್ಕೇ ಪ್ರಾಧಾನ್ಯ. ಶಿವಪೂಜೆಯನ್ನು ಯಾವ ವರ್ಣದವರೂ ಮಾಡಬಹುದೆಂಬುದು ಈ ಪುರಾಣದ ಉದಾರಧೋರಣೆ. ಅವರೆಲ್ಲರಿಗೂ ವೈದಿಕ ರೀತಿಯ ಪೂಜೆಯೇ ಗ್ರಾಹ್ಯ ಎಂಬುದು ಅವಿಸ್ಮರಣೀಯ.

–೧೩–

# ಬ್ರಾಹ್ಮೀ ಶಿವಪೂಜೆ

ಬೆಳಿಗ್ಗೆ ಬ್ರಾಹ್ಮೀ ಮುಹೂರ್ತದಲ್ಲಿ ಏಳಬೇಕು. ಮೊದಲು ಗುರುಸ್ಮರಣೆ, ಆಮೇಲೆ ಹರಸ್ಮರಣೆ ಮಾಡಬೇಕು. ಆಮೇಲೆ ಪುಣ್ಯತೀರ್ಥಸ್ಮರಣ, ಹರಿಧ್ಯಾನ, ಬ್ರಹ್ಮಧ್ಯಾನ, ಇಂದ್ರಾದಿದೇವತಾ ಧ್ಯಾನ, ಮಹರ್ಷಿಸ್ತುತಿಗಳನ್ನು ಮಾಡಿದ ಮೇಲೆ ಶೌಚ ವಿಧಿಯನ್ನು ಮುಗಿಸಬೇಕು; ಹಲ್ಲುಜ್ಜಬೇಕು. ಸ್ನಾನಮಾಡಬೇಕು; ತೀರ್ಥಸ್ನಾನ ಒಳ್ಳೆಯದು; ಮಂತ್ರ ಸ್ನಾನವು ಪುಣ್ಯಕರ. ಅನಂತರ ಆಚಮನ ಮಾಡಿ ಒಗೆದು ಶುದ್ಧಮಾಡಿದ ಬಟ್ಟೆಯನ್ನುಟ್ಟುಕೊಳ್ಳಬೇಕು. ಏಕಾಂತದಲ್ಲಿ ಸಂಧ್ಯಾರಾಧನೆಯನ್ನು ಮಾಡತಕ್ಕದ್ದು. ಆಮೇಲೆ ಪೂಜೆಯನ್ನಾರಂಭಿಸಬೇಕು. ಪೂಜಾಕಾಲದಲ್ಲಿ ಮನಸ್ಸು ಸ್ಥಿರವಾಗಿರಬೇಕು. ಕರವಿನ್ಯಾಸಾದಿಗಳಿಂದ ಪೂಜೆ ಮುಂದುವರಿಯಬೇಕು. ಇದು ಹರಪೂಜೆ (ಶಿವಾವತಾರನಾದ ರುದ್ರನ ಪೂಜೆ)ಯ ವಿವರ: ಪ್ರಥಮತಃ ಗಣಪತಿಯ ಅರ್ಚನೆ, ಆಮೇಲೆ ದ್ವಾರಪಾಲಾರ್ಚನೆ, ಬಳಿಕ ದಿಕ್ಪಾಲಕರ ಪೂಜೆ ಅನಂತರ ಅಷ್ಟದಲ ಪದ್ಮಪೀಠದ ಮೇಲೆ ಶಿವಮೂರ್ತಿಯನ್ನು ಇಟ್ಟು, ಆಚಮನ ಮಾಡಿ, ಪ್ರಾಣಾಯಾಮ ಮಾಡಿ, ತ್ರ್ಯಂಬಕನ ಧ್ಯಾನವನ್ನು ಮಾಡಬೇಕು. ಧ್ಯೇಯನ ಬಿಂಬವು ಪಂಚಮುಖ, ದಶಭುಜ, ಸ್ಫಟಿಕದಂತೆ ಪಾರದರ್ಶಕ ಸರ್ವಾಭರಣಯುಕ್ತ, ವ್ಯಾಘ್ರ ಚರ್ಮೋತ್ತರೀಯ ಎಂದು ಮನಸ್ಸಿನಲ್ಲಿ ಕಲ್ಪಿಸಿಕೊಂಡು ಪೀಠದ ಮೇಲೆ ವಿಗ್ರಹವನ್ನು (ಅಥವಾ ಲಿಂಗವನ್ನು) ಇಡಬೇಕು. ಷೋಡಶೋಪಚಾರ ಪೂಜೆ ಮಾಡಬೇಕು. ಆವಾಹನೆಯಿಂದ ಆರಂಭವಾದ ಪೂಜೆ ವಿಸರ್ಜನೆಯಿಂದ ಕೊನೆಗೊಳ್ಳುತ್ತದೆ. ಶಿವನ ಪಕ್ಕದಲ್ಲಿ ನಂದಿಯಿರಬೇಕು (ಒಂದೊಂದು ಪಕ್ಕದಲ್ಲಿ ಒಬ್ಬೊಬ್ಬ ನಂದಿ). ಶಿವನನ್ನಲಂಕರಿಸುವ ಕರ್ಣಿಕಾ ಪುಷ್ಪವು ಚಂದ್ರನ ಸಂಕೇತ. ಸೋಮನ ಕೆಳಗೆ ಸೂರ್ಯ, ಸೂರ್ಯನ ಕೆಳಗೆ ಅಗ್ನಿ, ಅಗ್ನಿಯ ಕೆಳಗೆ ಧರ್ಮರಾಜಾದಿಗಳು ಸಂಕೇತಿತವಾಗಿರಬೇಕು. ಈಶ, ತತ್ಪುರುಷ, ಅಘೋರ, ವಾಮದೇವ ಮತ್ತು ಸದ್ಯೋಜಾತ ಎಂಬ ಶಿವಮುಖ ಪಂಚಕದ ಮಂತ್ರಗಳನ್ನು ಹೇಳಿ ಗಾಯತ್ರಿಯನ್ನು ಜಪಿಸಬೇಕು.

"ಶಿವೇ ಭಕ್ತಿಃ ಶಿವೇ ಭಕ್ತಿಃ ಶಿವೇ ಭಕ್ತಿರ್ಭವೇ ಭವೇ, ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ" ಎಂಬುದು ಪೂಜೋಪಾಂತದಲ್ಲಿ ಮಾಡುವ ಪ್ರಾರ್ಥನೆ, ಪ್ರತಿಸಲ ಓಂ ಎನ್ನುತ್ತಿರುವುದು ಅಗತ್ಯ. (ಪೂಜೆಯಲ್ಲಿ) ಹೆಚ್ಚಾಗಿ ಲಿಂಗವನ್ನೇ ಮೂರ್ತಿಯೆಂದು ಭಾವಿಸಿಕೊಳ್ಳಲಾಗುತ್ತದೆ. ವಿಶ್ವಕರ್ಮನು ನಿರ್ಮಿಸಿದ ಲಿಂಗಗಳ

ಮೂಲ ದ್ರವ್ಯಗಳು: ಪದ್ಮರಾಗ, ಸುವರ್ಣ, ಪೀತರತ್ನ, ಶ್ಯಾಮಮಣಿ, ಇಂದ್ರನೀಲ, ರಜತ, ಆರಕೂಟ (ಹಿತ್ತಾಳೆ), ಪೃಥಿವಿ (ಮಣ್ಣು), ಸ್ಫಟಿಕ, ತಾಮ್ರ, ಮೌಕ್ತಿಕ (ಮುತ್ತು), ವಜ್ರ, ಚಂದನ (ಶ್ರೀಗಂಧ), ಪ್ರವಾಲ (ಹವಳ), ನವನೀತ (ಬೆಣ್ಣೆ), ಬೂದಿ, ದಧಿ (ಮೊಸರು), ಪಿಷ್ಟ (ಹಿಟ್ಟು), ಕೆಂಪು ರತ್ನ (Ruby), ಪಾದರಸ. ಬಾಣ (ನರ್ಮದೆಯಲ್ಲಿ ಸಿಕ್ಕುವ ಬಿಳಿಗಲ್ಲು). ಇವುಗಳನ್ನು ಹರಿಯು (ತನ್ನನೊಳಗೊಂಡು) ಶಿವೇತರ ದೇವತೆಗಳಿಗೆ ಮತ್ತು ಋಷಿಗಣಗಳಿಗೆ ಪೂಜೆಗೆಂದು ಕೊಟ್ಟನು.

ಕರ್ಮಯಜ್ಞಕ್ಕಿಂತ ತಪೋ ಯಜ್ಞವು ಸಾವಿರ ಪಾಲು ಮೇಲು. ತಪೋಯಜ್ಞಕ್ಕಿಂತ ಜಪಯಜ್ಞವು ಸಾವಿರಪಾಲು ಮೇಲು. ಅದಕ್ಕೂ ಮೇಲಿನದು ಧ್ಯಾನಯಜ್ಞ, ಅದರ ಮೇಲೆ ಇನ್ನಾವುದೂ ಇಲ್ಲ, ಏಕೆಂದರೆ, ಧ್ಯಾನದಿಂದ ಜ್ಞಾನಿಯಾದ ಯೋಗಿಯು ಸ್ವೇಷ್ಟದಂತೆ ಶಿವಸಾಮರಸ್ಯವನ್ನು ಹೊಂದುವನು. ಅವನೇ ಬ್ರಹ್ಮಜ್ಞಾನಿ, ವಿಶುದ್ಧ ವಿದ್ಯಾಮಯ, ನಿರ್ವಿಕಾರ, ದ್ವಂದ್ವಾತೀತ; ಅದೃಶ್ಯವಾದ ಅಧ್ಯಾತ್ಮಲಿಂಗದಲ್ಲಿ ಭಾವದೃಷ್ಟಿಯಿಂದ ಮನಸಾ ನಿಷ್ಕಲ–ಸಕಲ ಶಿವನ ಅಪರೋಕ್ಷಾನುಭೂತಿಯನ್ನವನು ಪಡೆಯುವನು; "ಕೋಽ ಹಂ?" ಎಂಬುದರಿಂದ "ಸೋಽ ಹಂ" ಎಂಬುದನ್ನು ತಲುಪಿದವನು. ಅವನು ವಿಧಿ–ನಿಷೇಧಮುಕ್ತನಾದ ತ್ರಿಗುಣಾತೀತನಾಗುವನು.

ದೇವತೆಗಳ ಪ್ರಕಾರ, ಲಿಂಗಗಳೆಲ್ಲಾ ಭಿನ್ನ ಪಾತ್ರೆಗಳಲ್ಲಿರುವ ಜಲದಂತೆ. ಏಕೆಂದರೆ "ಸರ್ವಂ ಶಿವಮಯಂ ಜಗತ್!" ಸಂಸಾರಿಗಳೆಲ್ಲರ ಹೃದಯದಲ್ಲೂ ಅವನಿದ್ದಾನೆ. ಬ್ರಹ್ಮಜ್ಞಾನಿಯ ಮಟ್ಟವನ್ನು ತಲುಪದವರು ಪ್ರತಿಮೆ–ಪ್ರತೀಕ (ಮೂರ್ತಿ–ಲಿಂಗ)ಗಳನ್ನು ತಮ್ಮ ಧ್ಯಾನಕ್ಕೆ ಆಧಾರವನ್ನಾಗಿ ಇಟ್ಟುಕೊಳ್ಳಬೇಕಾಗುತ್ತದೆ. ಇದು ಸಾಕಾರೋಪಾಸನೆ, ಇದರ ವಿವರಗಳು ಬಹಳ. ನಿರಾಕಾರಕ್ಕೆ ವಿವರಗಳೇ ಇಲ್ಲ. ಆದ್ದರಿಂದ ಅನೇಕಾನೇಕ ಪುನರುಕ್ತಿ– ಆ ಪುನರುಕ್ತಿಗಳಿಂದ ಪುರಾಣವು ಲಿಂಗ ಪೂಜಾ ವಿಧಾನಗಳನ್ನೂ ಸಾಕಾರ ಶಿವನ ಹಾಗೂ ಶಿವಭಕ್ತ ದೇವತೆಗಳ ಮಹಾತ್ಮ್ಯವನ್ನೂ ಪೂಜಾಫಲಗಳನ್ನೂ ಹೇಳುತ್ತಾ ಹೋಗಿದೆ. "ಯತ್ರ ತತ್ರ ಯಥಾ ಭಕ್ತಿ: ಕರ್ತವ್ಯಂ ಪೂಜನಾ ದಿಕಂ" ಎಲ್ಲೆಂದರಲ್ಲಿ ಮಾನವರು ತಮ್ಮ ಭಕ್ತಿಯ ಮಟ್ಟಕ್ಕೆ ತಕ್ಕಂತೆ ಶಕ್ತಿಯಿದ್ದಷ್ಟರ ಮಟ್ಟಿಗೆ ಶಿವಪೂಜೆಯನ್ನು ಪ್ರತಿದಿನವೂ ಮಾಡುತ್ತಿರಬೇಕು (ಪುಟ ೪೨, ಶಿವ ಮಹಾ ಪುರಾಣ; ಶ್ಲೋಕ ೬೯). ಶಿವಪೂಜೆಯ ವಿವಿಧ ಪ್ರಕಾರಗಳೆಲ್ಲಾ ಬ್ರಹ್ಮನ ಬಾಯಿಯಿಂದ ಬಂದದ್ದೇ ಹೆಚ್ಚು, ಅಂಥ ಪೂಜೆಗಳಲ್ಲಿ ವೈದಿಕ ಮಂತ್ರಯುಕ್ತ ಪೂಜೆ ಉತ್ತಮೋತ್ತಮ. ಮುನಿಗಳೂ ವಿವಿಧ ರೀತಿಗಳಲ್ಲಿ ಶಿವಪೂಜೆಯನ್ನು ಹೇಳಿದ್ದರೆಂಬುದು ಬ್ರಹ್ಮೋಕ್ತಿ. ಕಾಮ್ಯ ಪೂಜೆಗಳ ವೈವಿಧ್ಯ ಕಾಮ್ಯ ಪದಾರ್ಥಗಳಷ್ಟೇ ಬಹುಸಂಖ್ಯಾತ. ಅವುಗಳಲ್ಲಿ ಹೇಳಿದ ಹೂವುಗಳು ಇಂತಿವೆ:

ಜಾಜಿ, ಯೂಥಿಕೆ, ರಾಜಿಕೆ, ಮಲ್ಲಿಗೆ, ತಿಲಪುಷ್ಪ, ಕರವೀರ, ನಿರ್ಗುಂಡಿ, ಕರ್ಣಿಕಾರ, ಶಿರೀಷ, ಬಂಧು ಜೀವೆ ಎಂಬೀ ೧೧ ಹೂವುಗಳು ಗಣ್ಯ.

[ಯೂಥಿಕೆ=ಮಲ್ಲಿಗೆಯ ಒಂದು ಜಾತಿ.

ರಾಜಿಕೆ=ಕಪ್ಪು ಸಾಸಿವೆಯ ಹೂವು.

ತಿಲಪುಷ್ಪ=ಎಳ್ಳು ಹೂವು. ಕರವೀರ–ಕೆಂಪು ಕಣಗಿಲೆ. ಕರ್ಣಿಕಾರ=ಬೆಟ್ಟದಾವರೆ, ನೆಲದಾವರೆ, ಕೊಸಗು, ನಿರ್ಗುಂಡಿ=ಲೊಕ್ಕಿ, ಲಕ್ಕಿಯಾನುಕ್ಕಿ ಹೂವು. ಶಿರೀಷ=ಬಾಗಳ, ರಂಜಲ ಎಂಬ ಹೂವು (ಸುರಗಿಯಂತೆ ಆದರೆ ಬಣ್ಣ ಬಿಳಿಯದು, ವಾಸನೆ ಬೇರೆ). ಬಂಧುಜೀವೆ=ಬಂದುಗೆ.] ಮೃಗವ್ಯಾಧ, ಶರ್ವ, ನಿಯತಿ, ಅಜೈಕಪಾತ್, ಅಹಿರ್ಬುಧ್ನ್ಯ, ಪಿನಾಕಿ, ದಹನ, ಈಶ್ವರ, ಕಪಾಲಿ, ಸ್ಥಾಣು, ಭಗ ಎಂಬಿವರು ಏಕಾದಶರುದ್ರರು. ವಿಷ್ಣು ಪುರಾಣದಂತೆ–ಅಜೈಕಪಾತ್, ಆಹಿರ್ಬುಧ್ನ್ಯ ತ್ವಷ್ಟ್ಯ, ರುದ್ರ, ಹರ, ಬಹುರೂಪ, ತ್ರ್ಯಂಬಕ, ವೃಷಾಕಪಿ, ಶಂಭು, ಕಪರ್ದಿ ಮತ್ತು ರೈವತರು ಏಕಾದಶ ರುದ್ರರು. ಈ ಬೆಸಸಂಖ್ಯೆ ರುದ್ರಾವತಾರದ ಅಸಂಖ್ಯಾತತೆಯನ್ನು ಸೂಚಿಸುತ್ತದೆ. ೧೧ ಹೂವುಗಳೂ ಹಾಗೇ ಅವುಗಳ ಗುಣಿತ ಸಂಖ್ಯೆಯ ಹೂವುಗಳನ್ನು ಪ್ರತಿನಿಧಿಸುತ್ತವೆ. ಅಲ್ಲದೆ, ಮಂತ್ರಯುಕ್ತವಾಗಿ ಪೂಜಿಸಲಾಗದವರು ಜಲ ಅಥವಾ ಇತರ ದ್ರವ ಧಾರಾಯುಕ್ತವಾಗಿ ಪೂಜಿಸಬಹುದು. ಪೂಜಾ ದ್ರವ್ಯಗಳೆಲ್ಲಾ ಮೃತ್ಯುಂಜಯ ಸೃಷ್ಟವಾದವುಗಳು. ಆದ್ದರಿಂದ ಅವೆಲ್ಲಾ ಶಿವಪೂಜೆಗೆ ಬಳಸಲು ಯೋಗ್ಯ.

ಬ್ರಹ್ಮನ ಹಂಸ ರೂಪದಿಂದ ನಿಶ್ಚಲತ್ವ ದೊರಕದುದರಿಂದ ವಿಷ್ಣುವು ವರಾಹವತಾರ ತಾಳಿದನು. ಅದರಿಂದ ಶಿವಚೈತನ್ಯದ ನಿಶ್ಚಲತೆ ದೊರಕಿತು. ವರಾಹವೆಂದರೆ "ಕಲ್ಪ" ಯಾ "ವಿಷ್ಣು ದಿನ" ಎಂಬುದು ಸಾಂಕೇತಿಕ. ಬ್ರಹ್ಮನು ಶಿವಾಜ್ಞೆ–ವಿಷ್ಣು ಪ್ರೇರಣೆಗಳಂತೆ ಮಾಡಿದ ಸೃಷ್ಟಿಯ ಅನುಕ್ರಮ ಇಂತಿದೆ: ಜಲ, ಅಂಡ, ವಿರಾಟ್ (ಚತುರ್ವಿಂಶತಿ ಸಂಜ್ಞೆಗಳನ್ನುಳ್ಳದ್ದು); ಅನಂತರೂಪ ತಾಳಿ ವಿಷ್ಣು ಆ ಜಡ ಅಂಡವನ್ನು ಹೊಕ್ಕನು; ಹರಿಯೇ ವಿರಾಟ್. ಅವನು ಆ ಜಡಾಂಡವನ್ನು ಚೈತನ್ಯದಿಂದ ತುಂಬಿದನು. ಅನಂತರ ಬ್ರಹ್ಮನಿಂದ ಅವಿದ್ಯಾಪಂಚಕ ಜನಿಸಿತು. ಅದು ತಮಸ್ಸು, ಪಾಪ. ಆಮೇಲೆ ಸ್ಥಾವರಗಳು ಸೃಷ್ಟವಾದವು. ನಿಃಸಂಗವು ಮುಖ್ಯ; ಅದು ದೇವತಾ ಜನನ; ಅದು ಸಾತ್ವಿಕ. ಆದ್ದರಿಂದ ದೇವತೆಗಳೆಲ್ಲಾ ಸಾತ್ವಿಕರು. ಅವರೆಲ್ಲಾ ಸತ್ಯಲೋಕಕ್ಕೆ ಸೇರಿದವರು, ಸದಾ ಸುಖಿಗಳು. ಆಮೇಲಾದದ್ದು ರಾಜಸ ಸರ್ಗ. ಅದೇ ಮಾನವ ಸೃಷ್ಟಿ. ಭೂತಾದಿಗಳು ಆಮೇಲೆ ಸೃಷ್ಟವಾಗುತ್ತವೆ. ಇಂಥ ಸೃಷ್ಟಿಕ್ರಮಗಳ ಬಾಹುಲ್ಯದಿಂದ ಇವೆಲ್ಲಾ ಆಯಾ ಪೌರಾಣಿಕ ಕಂಡ Formulas ವಿಧಿ ವಿನ್ಯಾಸಗಳೆಂದು ನಾವು ಭಾವಿಸಬಹುದು. ಬರ್ಟ್ರೆಂಡ್ ರಸೆಲ್ ಕೂಡಾ ಒಂದೆಡೆ ಹೇಳಿದ್ದಾನೆ: "ಏಕಾರ್ಥಕವಾದ ಅನೇಕ ವಿಧಿ ವಿನ್ಯಾಸಗಳನ್ನು ಜಗತ್ತಿನ ಆ ಈ ವಾಸ್ತವಾಂಶದ ಪರಿಣಾಮದ ಬಗೆಗೆ ವಿವಿಧ ಬುದ್ಧಿಮತ್ತೆಯುಳ್ಳ ಗಣಿತ ವಿಜ್ಞಾನಿಗಳು ಹೇಳಬಹುದು" ಎಂದು. ಏಕತಾತ್ಪರ್ಯತೆ ಇದ್ದಾಗ ಅವೆಲ್ಲವೂ ಗ್ರಾಹ್ಯಗಳಾಗುತ್ತವೆ. ಹಾಗಲ್ಲದೆ ಅವುಗಳ ಭೇದವು ಅವೆಲ್ಲವುಗಳ ತಿರಸ್ಕಾರಕ್ಕೆ ಕಾರಣವಾಗುವುದಿಲ್ಲ. ಈ ಮಾತು ಸರ್ಗಾನುಸರ್ಗಗಳ ಪೌರಾಣಿಕ

ಹಾಗೂ ವೈದಿಕ ವಿವರಣೆಗಳಿಗೂ ಅನ್ವಯಿಸುತ್ತದೆ. ನಿತ್ಯ, ಅನಿತ್ಯ, ಸತ್ಯ, ಅಸತ್ಯ, ಕಾರಣ, ಕಾರ್ಯ ಮುಂತಾದ ಮೂಲಭೂತ ತಾತ್ವಿಕ ಪಾರಿಭಾಷಿಕಗಳ ಬಗೆಗೆ ಭಿನ್ನ ಭಿನ್ನ ಅರ್ಥವ್ಯಾಪ್ತಿಯನ್ನು ತಾಳುವವರಲ್ಲಿ ಮಾತ್ರ (ಭಿನ್ನ ಲಕ್ಷಣಗಳನ್ನು ಹೇಳುವವರಲ್ಲಿ ಮಾತ್ರ) ಭಿನ್ನಾಭಿಪ್ರಾಯ ಮೂಡುತ್ತದೆ. ಈ ಪುರಾಣ ಅಂಥ ಭಿನ್ನಾಭಿಪ್ರಾಯ ಬಾರದಂತೆ ಕೈಯಲ್ಲಾದಷ್ಟು ಜಾಗರೂಕತೆ ವಹಿಸಿದೆ.

–೧೪–

# ಪ್ರಪಂಚ ಸೃಷ್ಟಿ

ನೀಲಲೋಹಿತಾವತಾರದಿಂದ ಶಿವನು ಪ್ರತ್ಯಕ್ಷನಾಗಿ ಸೃಷ್ಟಿ ಮಾಡೆಂದು ಬ್ರಹ್ಮನಿಗೆ ಆಜ್ಞಾಪಿಸಿದನು. ಆಗ ಬ್ರಹ್ಮನು ಈ ಕೆಳಗೆ ಹೇಳಿದಂತೆ ಸೃಷ್ಟಿ ಮಾಡಿದನು:

ನೀಲಲೋಹಿತದತ್ತವಾದ ಪಂಚತನ್ಮಾತ್ರಗಳಿಂದ ಬ್ರಹ್ಮನು ಅನುಕ್ರಮವಾಗಿ ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿಗಳನ್ನು ನಿರ್ಮಿಸಿದನು. ಈ ಐದು ಭೂತ (Physical) ಪದಾರ್ಥಗಳಲ್ಲಿಯ ಒಂದೊಂದರಲ್ಲೂ ತನ್ನ ಅರ್ಧಾಂಶ ಮತ್ತು ಮಿಕ್ಕ ನಾಲ್ಕು ತನ್ಮಾತ್ರಗಳ ಎಂಟನೆಯ ಒಂದಶಗಳು ಅಭೇದ್ಯವಾಗಿ ಕೂಡಿರುತ್ತವೆ. ಅವುಗಳಿಂದ ಪರ್ವತ, ಸಮುದ್ರ, ವೃಕ್ಷಾದಿಗಳನ್ನೂ ಕಲಾದಿ ಯುಗಾಂತವಾದ ಕಾಲ ವಿಭಾಗಗಳನ್ನೂ ಅವನು ನಿರ್ಮಿಸಿದನು. ಇಷ್ಟರಿಂದ ತೃಪ್ತನಾಗದೆ ಅವನು, ತನ್ನ ಕಣ್ಣಿಳಿಂದ ಮರೀಚಿ ಎಂಬ ಹೃದಯದಿಂದ ಭೃಗುವೆಂಬ, ತಲೆಯಿಂದ ಅಂಗಿರಸ್ಸೆಂಬ, ಸಮಾನದಿಂದ ವಸಿಷ್ಠನೆಂಬ, ಪ್ರಾಣದಿಂದ ದಕ್ಷನೆಂಬ; ತೊಡೆಯಿಂದ ನಾರದನೆಂಬ ಮತ್ತು ನೆರಳಿನಿಂದ ಕರ್ದಮನೆಂಬ ಸಾಧಕರಾದ ಮುನಿಗಳನ್ನು ಸೃಷ್ಟಿಸಿದನು. ತನ್ನ ಸಂಕಲ್ಪದಿಂದ ಆತನು ಧರ್ಮನನ್ನು ಹುಟ್ಟಿಸಿದನು; ಅವನು ಸಾಧನಗಳ ಸಾಧನ. ಅವನ ಆಜ್ಞೆಯಂತೆ ಮಾನವ ರೂಪದ ಸಾಧಕರಿಂದ ಧರ್ಮನು ಪ್ರವರ್ತಿತನಾದನು. ಆಮೇಲೆ ಆ ಬ್ರಹ್ಮನು ತನ್ನ ಮೈಯಿಂದ ಅಸಂಖ್ಯಾತ ಮಕ್ಕಳನ್ನು ಹಡೆದನು; ಅವರೇ ಸುರಾಸುರರು. ಅನಂತರ ಶಿವನ ಅರ್ಧನಾರೀಶ್ವರಾವತಾರದಿಂದ ದ್ವಂದ್ವವು ಹುಟ್ಟಿತು. ಅದು ಬ್ರಹ್ಮನ ಸೃಷ್ಟಿಕರ್ಮಕ್ಕೆ ತಕ್ಕ ಸಾಧನವಾಯಿತು. ಅದರಿಂದ ಸ್ವಾಯಂಭುವ–ಶತರೂಪೆಯರೆಂಬ ಪುರುಷ ಮತ್ತು ಸ್ತ್ರೀ ಹುಟ್ಟಿದರು. ಸ್ವಾಯುಭುವನೆಂಬ ಮೊದಲ ಮನು ಅತ್ಯಂತ ಶ್ರೇಷ್ಠ ಪುರುಷನು. ಶತರೂಪೆಯು ದೊಡ್ಡ ಯೋಗಿನಿ ಹಾಗೂ ತಪಸ್ವಿನಿ. ಸ್ವಾಯಂಭುವನು ಅವಳನ್ನು ಮದುವೆಯಾದನು. ಈ ಜಗತ್ತಿನ ಮೈಥುನ (Sexual) ಸೃಷ್ಟಿಯು ಅವನಿಂದ ಆರಂಭವಾಯಿತು.

ಸ್ವಾಯಂಭುವ–ಶತರೂಪೆಯರಿಗೆ ಪ್ರಿಯವ್ರತ ಮತ್ತು ಉತ್ತಾನಪಾದ ಎಂಬ ಗಂಡುಮಕ್ಕಳೂ ಆಕೂತಿ, ದೇವಹೂತಿ ಮತ್ತು ಪ್ರಸೂತಿ ಎಂಬ ಹೆಣ್ಣುಮಕ್ಕಳು ಜನಿಸಿದರು. ಆ ಹೆಣ್ಣುಮಕ್ಕಳು ಅನುಕ್ರಮವಾಗಿ ರುಚಿ, ಕರ್ದಮ, ದಕ್ಷ ಎಂಬ ಮೂವರನ್ನು ಮದುವೆಯಾದರು. ಚರಾಚರಗಳೆಲ್ಲವೂ ಆ ಮೂವರ ಪೈಕಿ

ದಕ್ಷಪತ್ನಿಯಾದ ಪ್ರಸೂತಿಯ ಪ್ರಸವಗಳಿಂದ ತುಂಬಿಹೋದವು. ವ್ಯಾಪ್ತವಾದವು. ಯಜ್ಞ ಮತ್ತು ದಕ್ಷಿಣೆಯರು ರುಚಿ ಆಕೂತಿಗಳ ಮಕ್ಕಳು. ಅವರಿಗೆ ೧೨ ಜನ ಪುತ್ರರು ಹುಟ್ಟಿದರು. ಕರ್ದಮ–ದೇವಹೂತಿಗಳಿಗೆ ಅನೇಕ ಹೆಣ್ಣುಮಕ್ಕಳು ಹುಟ್ಟಿದರು. ಅವರ ಸಂಖ್ಯೆ ಹತ್ತು. ಆ ಹತ್ತರಿಂದ ೨೪ ಜನ ಕುವರಿಯರು ಉದಯಿಸಿದರು. ಅವರಲ್ಲಿ ಶ್ರದ್ಧೆ, ಲಕ್ಷ್ಮಿ, ಧೃತಿ, ತುಷ್ಟಿ, ಪುಷ್ಟಿ, ಮೇಧೆ, ಕ್ರಿಯೆ, ವಸು, ಬುದ್ಧಿ, ಲಜ್ಜೆ, ಶಾಂತಿ, ಸಿದ್ಧಿ ಮತ್ತು ಕೀರ್ತಿ ಎಂಬ ಹುಡುಗಿಯರನ್ನು ದಕ್ಷನು ಧರ್ಮನಿಗೆ ಮದುವೆ ಮಾಡಿಕೊಟ್ಟನು ಮತ್ತು ಖ್ಯಾತಿ, ಸತ್ಪಥೆ, ಸಂಭೂತಿ, ಸ್ಮೃತಿ, ಪ್ರೀತಿ, ಕ್ಷಮೆ, ಸನ್ನತಿ, ಅನುರೂಪೆ, ಊರ್ಜೆ, ಸ್ವಾಹೆ ಮತ್ತು ಸ್ವಧೆಯರನ್ನು ಅನುಕ್ರಮವಾಗಿ ಭೃಗು, ಭವ, ಮರೀಚಿ, ಅಂಗಿರಸ್, ಪುಲಸ, ಪುಲಹ, ಕ್ರತು, ಋಷ್ಟಿವರ, ಅತ್ರಿ, ವಸಿಷ್ಠ ಮತ್ತು ಅಗ್ನಿಗಳಿಗೆ ವಿವಾಹ ಮಾಡಿಕೊಟ್ಟನು. ಭೃಗ್ವಾದಿಗಳು ಖ್ಯಾತರಾದ ಸಾಧಕರು. ಆಗ ಚರಾಚರಗಳಿಂದ ಲೋಕತ್ರಯವು ತುಂಬಿ ಹೋಯಿತು. ಕರ್ಮಾನುರೂಪವಾಗಿ ಪ್ರಾಣಿಗಳು ಜನಿಸಿದವು. ಬ್ರಹ್ಮಾಜ್ಞೆಯಿಂದ ಅಸಂಖ್ಯಾತ ದ್ವಿಜ ಶ್ರೇಷ್ಠರು ಹುಟ್ಟಿದರು. ಕಲ್ಪಭೇದದಿಂದ ದಕ್ಷನಿಗೆ ೬೦ ಪುತ್ರಿಯರೆಂದು ಪ್ರತೀತಿಯಿದೆ. ಅವರಲ್ಲಿ ಹತ್ತು ಜನರನ್ನು ಧರ್ಮನಿಗೂ ಇಪ್ಪತ್ತೇಳು ಜನರನ್ನು ಚಂದ್ರನಿಗೂ, ಹದಿಮೂರು ಜನರನ್ನು ಕಶ್ಯಪನಿಗೂ, ನಾಲ್ವರನ್ನು ಪರರೂಪನಾದ ತಾರ್ಕ್ಷ್ಯನಿಗೂ ಇಬ್ಬರಿಬ್ಬರನ್ನು ಭೃಗು, ಅಂಗಿರಸ್ಸು, ಕೃಶಾಶ್ವರಿಗೂ ಧಾರೆಯೆರೆದು ಕೊಟ್ಟದ್ದರಿಂದ ಈ ಅಪಾರ ಚರಾಚರ ಸೃಷ್ಟಿಗಳೆಲ್ಲಾ ದಕ್ಷನ ಮೊಮ್ಮಕ್ಕಳಾದವು. ಅವರಲ್ಲೂ ಕಶ್ಯಪನಿಗಿತ್ತ ೧೩ ಜನ ಹೆಮ್ಮಕ್ಕಳಿಂದ ತ್ರೈಲೋಕ್ಯದಲ್ಲಿಯ ಸ್ಥಾವರ, ಜಂಗಮಗಳೆಲ್ಲಾ ವ್ಯಾಪ್ತವಾದವು; ದೇವತೆಗಳೂ ದೈತ್ಯರೂ ಋಷಿಗಳೂ ವೃಕ್ಷಗಳೂ ಪಕ್ಷಿಗಳೂ ಪರ್ವತಗಳೂ ಬೋಳುಬಳ್ಳಿಗಳೂ ಆ ಕಶ್ಯಪ ಪತ್ನಿಯರ ಮಕ್ಕಳೇ! ತ್ರೈಲೋಕ್ಯವು ಚತುರ್ದಶ ಲೋಕಗಳನ್ನು ಸಂಕೇತಿಸುತ್ತದೆ. ಅವೆಲ್ಲಾ ಬ್ರಹ್ಮಾಂಡದ ಅಂಗಗಳು. ಅವುಗಳಲ್ಲಿ ಖಾಲಿಜಾಗ ಇಲ್ಲವೇ ಇಲ್ಲ ಬ್ರಹ್ಮ ಹೀಗೆ ಮಾಡಿದ್ದು ಮತ್ತು ಮಾಡಿಸಿದ್ದು ಶಿವನಾಜ್ಞೆಯಿಂದ. "Nature abhors vacuum- ಪ್ರಕೃತಿಯು ಖಾಲಿ ಜಾಗವನ್ನು ಜುಗುಪ್ಸೆಯಿಂದ ದ್ವೇಷಿಸುತ್ತದೆ." ಎಂದ ಮೇಲೆ ಖಾಲಿ ಜಾಗ ಎಲ್ಲಾದರೂ ಇರಲು ಸಾಧ್ಯವೆ? ಚರ್ಮ ಚಕ್ಷುಸ್ಸಿಗೆ ಖಾಲಿ ಎಂದು ಕಾಣಿಸಿದಲ್ಲೂ ಸೂಕ್ಷ್ಮ ಜೀವಿಗಳು ಇದ್ದೇ ಇರುತ್ತವೆ!

–೧೫–

# ಶಿವ–ಶಿವೆಯರ ರೂಪತ್ರಯ ಮತ್ತು ಕಾರುಣ್ಯ ಲಕ್ಷಣ

ಸತಿ ಅಥವಾ ಪಾರ್ವತಿಯು ರುದ್ರನ ತ್ರಿಶೂಲಾಗ್ರದಿಂದ ಸದಾ ರಕ್ಷಿತೆಯಾಗಿದ್ದಾಳೆ. ಸರ್ವ ವಿಷ್ಣುವಾಗಿದ್ದ ಶಿವನಿಂದ ಹಿಂದೆ ಅವಳು ತಪಸ್ಸಿಗಾಗಿ ನಿರ್ಮಿಸಲ್ಪಟ್ಟಿದ್ದಳು. ಅವಳೂ ದಕ್ಷಸುತೆಯೇ. ಆ ರುದ್ರನ ಎಡಪಾರ್ಶ್ವವೇ ವೈಕುಂಠ. ಬಲಪಾರ್ಶ್ವವೇ ಬ್ರಹ್ಮ ಮತ್ತು ಹೃದಯವೇ ರುದ್ರ. ಈ ಪ್ರಕಾರ ಶಿವನು ತ್ರಿವಿಧನು. ಬ್ರಹ್ಮ ವಿಷ್ಣು ರುದ್ರರು ತ್ರಿಗುಣಗಳ ಸಂಕೇತರು. ಶಿವನು ಸ್ವತಃ ನಿರ್ಗುಣನು, ಪರಬ್ರಹ್ಮನು. ವಿಷ್ಣುವು ಸತ್ವ, ಬ್ರಹ್ಮನು ರಜಸ್ಸು, ರುದ್ರನು ತಮಸ್ಸು. ಲೋಕಾಚಾರದಂತೆ ಹೀಗೆ. ಆದರೆ ವಸ್ತುತಃ ಅವರ ಸ್ವರೂಪಗಳು ಬೇರೆ. ವಿಷ್ಣುವು ಅಂತಸ್ತಮನು, ರುದ್ರನು ಬಹಿಃ ಸತ್ವನು. ಬ್ರಹ್ಮನು ಅಂತಃಸತ್ವನೂ ಬಹಿಸ್ತಮನೂ ಆಗಿದ್ದಾನೆ.

ಬ್ರಹ್ಮಪತ್ನಿ ಸುರಾದೇವಿಯು ರಾಜಸಿ, ರುದ್ರಪತ್ನಿಯಾದ ಅವಳೇ ಸತ್ವರೂಪೆ ಮತ್ತು ವಿಷ್ಣುಪತ್ನೀತ್ವದಲ್ಲಿ ಅವಳು ತಾಮಸಿ. ಆ ಶಿವೆಗೆ ಈ ತ್ರಿರೂಪಗಳಿವೆ. ಶಿವೆಯ ಪತಿ ಶಿವ. ಬ್ರಹ್ಮಾಂಡ ನಾಶವಾದರೂ ನಿರ್ಗುಣ ಸಗುಣನಾದ ಅವನಿಗೆ ನಾಶವಿಲ್ಲ. ರುದ್ರ ಸಂಹಿತೆಯ ಪ್ರಥಮ ಖಂಡದಲ್ಲಿ ಈ ವಿಷಯ ವಿವರಣೆ ಇದೆ.

ಕಾಂಪಿಲ್ಯ ನಗರದಲ್ಲಿ ಯಜ್ಞದತ್ತನೆಂಬ ದೀಕ್ಷಿತನೊಬ್ಬನಿದ್ದನು. ಅವನ ಮಗನ ಹೆಸರು ಗುಣನಿಧಿ. ತಾಯಿಯಿಂದ ದುಡ್ಡನ್ನಿಸಿದುಕೊಂಡು ಅವನು ಜೂಜುಗಾರರ ಸಹವಾಸದಲ್ಲಿ ಸೇರಿ ಜೂಜಾಡುತ್ತಿದ್ದುದು ತಂದೆಗೆ ಗೊತ್ತೇ ಇರಲಿಲ್ಲ. ಗುಣನಿಧಿಯು ದುರ್ಗುಣನಿಧಿಯಾದನು. ಆಚಾರ ಹೀನನಾದನು, ದೇವ ಬ್ರಾಹ್ಮಣ ನಿಂದಕನಾದನು; ವಿಟನೂ ಆದನು. ಜನ ಎಷ್ಟು ಹೇಳಿದರೂ ಅವನು ತಂದೆಯ ಹತ್ತಿರ ಹೋಗಲಿಲ್ಲ. ಏಕಮಾತ್ರ ಪುತ್ರನೆಂದು ಅವನ ತಾಯಿಯು ಅವನ ದುರಾಚಾರಗಳನ್ನೆಲ್ಲಾ ಗಂಡನಿಂದ ಮರೆಮಾಚಿ ಇಟ್ಟುಕೊಂಡಿದ್ದಳು. ತಂದೆ ಕಾಲಕ್ಕೆ ಸರಿಯಾಗಿ ಮಗನಿಗೆ ಉಪನಯನವನ್ನು ಮಾಡಿದನು. ಆಗ ತಾಯಿ ಮಗನನ್ನು ಕರೆದು “ನೀನು ಮಾಡುವ ದುರಾಚಾರಗಳೆಲ್ಲಾ ನಿನ್ನ ತಂದೆಗೆ ಗೊತ್ತಾದರೆ ನಿನ್ನನ್ನೂ ನನ್ನನ್ನೂ ಬಡಿದು ಹಾಕುವನು; ಆದ್ದರಿಂದ ಅವುಗಳನ್ನು ಬಿಡು” ಎಂದಳು. “ನಿನ್ನ ತಂದೆ ಲೋಕಮಾನ್ಯನಾದದ್ದು ಸದಾಚಾರದಿಂದಲ್ಲದೆ ದುಡ್ಡಿನಿಂದಲ್ಲ. ಸದ್ವಿದ್ಯೆಯೂ ಸಾಧು ಸಹವಾಸವೂ ಬ್ರಾಹ್ಮಣರ ಧನ. ಅದರಿಂದಲೇ ನಿನ್ನ ಹಿರಿಯರು ಸೋಮಯಾಜಿಗಳೆನ್ನಿಸಿಕೊಂಡರು. ನೀನು

ನಿನ್ನ ದುರಾಚಾರಗಳನ್ನು ಬಿಟ್ಟು ತಂದೆಯಂತೆಯೇ ವಿದ್ಯೆಶೀಲಗಳ ಬಲದಿಂದ ಕೀರ್ತಿಶಾಲಿಯಾಗು" ಎಂದು ತಾಯಿ ಹೇಳಿದರೂ ಕೇಳದೆ ಪ್ರತಿದಿನವೂ ಮಗನು ಮನೆಯಲ್ಲಿದ್ದ ಸಾಮಾನುಗಳನೆಲ್ಲಾ ಜೂಜುಗಾರರಿಗೆ ಕೊಡುತ್ತಿದ್ದು, ಒಂದು ದಿನ ತನ್ನ ತಂದೆಯ ಮುದ್ರೆಯುಂಗುರವನ್ನೂ ಒಬ್ಬ ಜೂಜುಖೋರನಿಗೆ ಕೊಟ್ಟನು. ಅದು ಹೇಗೋ ತಂದೆಗೆ ಗೊತ್ತಾಯಿತು. ಅವನು ಆ ದ್ಯೂತಕಾರನಿಂದ ಮಗನ ಚರಿತ್ರೆಯನ್ನೆಲ್ಲಾ ತಿಳಿದುಕೊಂಡನು. ಆ ಕೂಡಲೇ ಮಗನ ನಡತೆಯನ್ನು ಮರೆಮಾಚಿದ್ದಕ್ಕಾಗಿ ಯಜ್ಞದತ್ತನು ತನ್ನ ಹೆಂಡತಿಯನ್ನು ತ್ಯಜಿಸಿ ಮತ್ತೊಬ್ಬಳು ವಧುವನ್ನು ಮದುವೆಯಾದನು. ಮಗನನ್ನು ಮನೆಯಿಂದ ಓಡಿಸಿದನು.

ಗುಣನಿಧಿಯು ದಿಕ್ಕುಗಾಣದೆ ಒಂದು ಶಿವಾಲಯದತ್ತ ಹೋದಾಗ ಅಲ್ಲಿ ಶಿವರಾತ್ರಿಯ ಪೂಜೆ ಮಾಡಿ ಇಟ್ಟಿದ್ದ ನೈವೇದ್ಯವನ್ನು ಕದ್ದು ಸಿಕ್ಕಿಬಿದ್ದು ನಗರ ರಕ್ಷಕರಿಂದ ಹೊಡೆತ ತಿಂದು ಬಂಧಿತನಾದನು. ಅವರು ಅವನನ್ನು ಯಮನ ಜೈಲಿಗೆ ಹಾಕಲು ಕರೆದುಕೊಂಡು ಹೋದರು. ಆಗ ಶಿವೇಚ್ಛೆಯಿಂದ ಬಂದ ಗಣಗಳು– "ಈ ಹುಡುಗ ದುಷ್ಟನಾದರೂ ಶಿವರಾತ್ರಿಯ ದಿನ ಶಿವಭಕ್ತರು ಮಾಡುತ್ತಿದ್ದ ಪೂಜೆಯನ್ನು ನೋಡಿದವನು ಮತ್ತು ಶಿವಲಿಂಗದ ಮೇಲೆ ಬೀಳುತ್ತಿದ್ದ ದೀಪದ ನೆರಳನ್ನು ತನ್ನ ಬಟ್ಟೆಯ ತುದಿಯಿಂದ ಮರೆಮಾಡಿದವನು. ಆದ್ದರಿಂದ ಇವನ ಪಾಪ ಪರಿಹಾರಕ್ಕಾಗಿ ಶಿವಲೋಕಕ್ಕೊಯ್ದು ಬಳಿಕ ಕಲಿಂಗರಾಜನನ್ನಾಗಿ ಮಾಡಿ ಆ ಮೂಲಕ ಇವನು ಶುದ್ಧನಾಗುವಂತೆ ಮಾಡುತ್ತೇವೆ– ನೀವು ಹಿಂದಿರುಗಿರಿ" ಎಂದು ಹೇಳಿ ಆ ಹುಡುಗನನ್ನು ಸಂಸ್ಕರಿಸಲು ಶಿವಲೋಕಕ್ಕೆ ಕರೆದೊಯ್ದರು. ಅಲ್ಲಿದ್ದ ಮೇಲೆ ಅವನು ದಮ ಎಂಬ ಹೆಸರಿನಿಂದ ಕಲಿಂಗರಾಜ ಅರಿಂದಮನ ಮಗನಾಗಿ ಜನಿಸಿದನು. ರಾಜ್ಯಭಾರ ಮಾಡಿದನು. ಕೈವಲ್ಯವನ್ನು ಕಂಡನು. ಅವನ ಶಿವಾರಾಧನೆ ಅವನಿಗದನ್ನು ಕೊಡಿಸಿತು. ಅವನ ಕೈವಲ್ಯ, ಕೈಲಾಸ ಅವನು ಪಡೆದ ದಿಕ್ಪಾಲ ಪದವಿ ಎಲ್ಲಿ? ಶಿವ ಲೋಕದಲ್ಲಿ!

–೧೬–

# ಶಿವನ ಕಾಲಾತೀತತೆ ಮತ್ತು ದೇವತಾಸೃಷ್ಟಿ

ಒಬ್ಬ ಬ್ರಹ್ಮನಿಗೆ ಬ್ರಹ್ಮನ ನೂರು ವರ್ಷಗಳು ಆಯುರ್ಮಾನ, ಬ್ರಹ್ಮನ ಒಂದು ವರ್ಷಕ್ಕೆ ಅವನ ೧೨ ತಿಂಗಳು. ಒಂದು ತಿಂಗಳಿಗೆ ಅವನ ೩೦ ಅಹೋ ರಾತ್ರಿಗಳು. ಆ ಒಂದು ಕಲ್ಪಕ್ಕೆ ಅಥವಾ ಹಗಲಿಗೆ ೪೩೨ ಕೋಟಿ ಮಾನುಷ ವರ್ಷಗಳು. ಅವನ ೩೦ ಕಲ್ಪಗಳಲ್ಲಿ ಪಾದ್ಮವೆಂಬುದು ೨ನೆಯದಾಗಿತ್ತು, ಅದರಲ್ಲಿ ಅವನ ಮಾನಸ ಪುತ್ರನು ಪುಲಸ್ತ್ಯ, ವಿಶ್ರವಸ್ ಎಂಬಾತ ಪುಲಸ್ತ್ಯನ ಮಗ. ವೈಶ್ರವಣನು ವಿಶ್ರವಸ್ಸಿನ ಮಗ. ವಿಶ್ವಕರ್ತ ನಿರ್ಮಿಸಿದ ಅಲಕಾವತಿಗೆ ಅವನು ರಾಜನಾದನು. ಅತ್ಯುಗ್ರ ತಪಸ್ಸಿನಿಂದ ಅವನು ತ್ರ್ಯಂಬಕನನ್ನು ಆರಾಧಿಸಿದನು. ಪೂರ್ವಜನ್ಮದಲ್ಲಿ ಅವನು ಗುಣನಿಧಿಯಾಗಿದ್ದನು. ಅವನೀಗ ಅಲಕೇಶ. ಅವನ ತಪಸ್ಸಿನಿಂದ ಪ್ರತ್ಯಕ್ಷನಾದ ಶ್ರೀಕಂಠನು ಅಲಕೆ ಯಾಚಿಸಿದಂತೆ ತನ್ನನ್ನು ನೋಡಲು ಶಿವನು ಅವಳಿಗೆ ದಿವ್ಯದೃಷ್ಟಿಯನ್ನಿತ್ತನು. ಅವಳು ತೃಪ್ತಳಾದಳು. ಅಲಕೇಶನಾದರೋ ಉಮೆಯನ್ನು ಗುರುತಿಸಲಾರದೆ ಅವಳನ್ನು ದುರು ದುರು ನೋಡತೊಡಗಿದನು. ಉಮೆ ಕೇಳಿದಾಗ ಉಮಾಪತಿಯು "ಅವನು ನಿನ್ನ ಮಗ" ಎಂದು ಅವನನ್ನು ಕುರಿತು "ನೀನು ಭೌತ ಸಂಪತ್ತಿನ ಒಡೆಯನಾಗು, ಯಕ್ಷರಾಜ್ಯವನ್ನಾಳು, ಕಿನ್ನರಾದಿಗಳು ನಿನ್ನ ಕಿಂಕರರಾಗಲಿ, ನೀನು ರಾಕ್ಷಸರಾಜನೂ ಆಗಿ ಅವರಿಗೆಲ್ಲಾ ಧನದಾನ ಮಾಡು. ನಾನು ನಿನ್ನ ಸ್ನೇಹಿತನಾಗಿ ನಿನ್ನೊಡನೆಯೇ ಯಾವಾಗಲೂ ಇರುವೆನು. ಈ ಆಲಕೆಯ ಪಾದಕ್ಕೆ ಬೀಳು. ಅವಳು ನಿನ್ನ ತಾಯಿ"– ಎಂದನು. ಆಮೇಲೆ ಉಮೆಯು "ಮಗು, ನೀನು ಶಿವನಲ್ಲಿ ನಿರ್ಮಲಭಕ್ತಿಯನ್ನಿಡು. ಒಡೆದ ನಿನ್ನ ಎಡಗಣ್ಣು ಕೆಂಪಾಗಿ ಇರಲಿ (ನನ್ನನ್ನು ದುರುದುರು ನೋಡಿದ್ದರಿಂದ). ನಿನ್ನ ಹೆಸರು ಕುಬೇರನೆಂದಾಗಲಿ" ಎಂದಳು. ಆಮೇಲೆ ಅವನಿಗಾಗಿ ಶಿವನು ವೈಶ್ವೇಶ್ವರವೆಂಬ ಮನೆಯನ್ನು ಹೊಕ್ಕನು. ಅವನ ನಿವಾಸಸ್ಥಾನವಾದ ಕೈಲಾಸವು ಅಲಕಾ ನಗರಿಗೆ ಹತ್ತಿರ. ಇದು ರುದ್ರ ಸಂಹಿತೆಯ ೧೯ನೆಯ ಅಧ್ಯಾಯದಲ್ಲಿ ಹೇಳಿದ ಕಥೆ. ಕೋಟಿ x ಕೋಟಿ ಸಹಸ್ರ x ಶತ x ವಿಂಶತಿ = ೨೦,೦೦,೦೦,೦೦,೦೦ ೦೦,೦೦೦೦೦೦೦೦೦ ವಿವಿಧ ಹೆಸರಿನ ಗಣಗಳಿಂದ ಕೂಡಿ, ಬ್ರಹ್ಮ – ವಿಷ್ಣಾದಿಗಳಿಂದ ಪೂಜಿತನಾಗಿ, ಅನಂತರ ಶಿವನು ಕೈಲಾಸಕ್ಕೆ ಹೋದನು. ಶಿವನು ಆಗ ಅವರೆದುರು ತಾಳಿದ್ದು ಅಸಂಖ್ಯಾತ, ಪ್ರಲಯಂಕರವಾದ, ಪೂರ್ಣ, ಅಂಗಜ ಸ್ವರೂಪದಲ್ಲಿ, ಆ ಗಣಗಳೂ ಅನೇಕ ರೂಪದ ವೃಷಭವೂ ನಕುಲೀಶನೂ ಲೋಕಾಂತಕನೂ

ದೈತ್ಯಾಂತಕನೂ ಭೃಂಗಿಯೂ, ರೀತಿಯೂ ಶಿವಾವತಾರಗಳೇ–ಎಲ್ಲಾ ವಿಕೃತಾವಿಕೃತ ಅವತಾರಗಳೂ ಸಹಸ್ರಹಸ್ತರು, ಜಟಾಜೂಟಯುಕ್ತರು, ಚಂದ್ರಚೂಡರು, ನೀಲಕಂಠರು, ತ್ರಿಲೋಚನರು ಎಂಬಂತಿದ್ದರು. ಮುಕುಟಾದಿಗಳಿಂದ ಅಲಂಕೃತರಾಗಿದ್ದರು. ಶಿವನ ಹಿಂಬಾಲಕರೆಲ್ಲರೂ ಅವನ ಅಂಗಜರು, ಮಕ್ಕಳು. ಅವನು ತಾಳಿದ ಸರ್ವೇಶ್ವರಾವತಾರವೂ ಅವನ ಅಂಗಜ ವಿಗ್ರಹವೇ. ಕೈಲಾಸದಲ್ಲಿ ಯೋಗಲೀನನಾಗಿ ಕುಳಿತಿರುವುದು ಶಿವನ ಸಹಜವಾದ ಮೂಲ ಸ್ವಭಾವ, ವಿಷ್ಣು–ಬ್ರಹ್ಮ–ರುದ್ರಾದಿ ದೇವತಾ ಗಣಗಳನ್ನು ಇಚ್ಛಾಮಾತ್ರದಿಂದ ನಿರ್ಮಿಸಿ ಅವರ ಮೂಲಕ ಅಖಿಲಾಂಡ ಕೋಟಿ–ಬ್ರಹ್ಮಾಂಡಗಳ ಆಗು–ಹೋಗುಗಳನ್ನು ಅವನು ಮಾಡಿಸುವನು.

–೧೭–

# ದಕ್ಷಾಧ್ವರಧ್ವಂಸ ಮತ್ತು ಮಾರದಹನ

ಪರಮೇಶ್ವರನೂ ಅವನ ಸತಿಯಾದ ಪಾರ್ವತಿಯೂ ಭಿನ್ನರಲ್ಲ. "ಶಕ್ತಿ–ಶಕ್ತಿಮತೋರಭೇದಃ" ಆದರೂ ಮಾನವ ಬುದ್ಧಿಗೆ ಗಮ್ಯವಾಗುವಂತೆ ಹೇಳುವಾಗ ನಾನಾತ್ವದ ಪರಿಭಾಷೆಯಿಲ್ಲಿ ಅನಿವಾರ್ಯವಾಗುತ್ತದೆ. ಆ ಪ್ರಕಾರ ಶಿವನನ್ನು ಗೃಹಸ್ಥನನ್ನಾಗಿ ಭಾವಿಸಿ ಕಥೆ ಹೇಳಲಾಗುತ್ತದೆ. ಪುನಃ ನಾರದ ಪ್ರಶ್ನೆಗೆ ಉತ್ತರವಾಗಿ ಬ್ರಹ್ಮನು ಶಿವಗಾರ್ಹಸ್ಥ್ಯವನ್ನು ವಿವರಿಸುತ್ತಾನೆ:

ಯೋಗಿಯೂ ವಿಷ್ಣ್ವಾದಿ ಸುರಸೇವ್ಯನೂ ಸದ್ಭಕ್ತರ ಸದ್ಗತಿಯೂ ನಿರ್ದ್ವಂದ್ವನೂ ನಿರ್ವಿಕಾರಿಯೂ ಮಹಾಪ್ರಭುವೂ ಆದ ಪರಮ ಸತ್ಯಸ್ವರೂಪಿ ಶಿವನು ವಿಷ್ಣುವಿನ ಪ್ರಾರ್ಥನೆಯ ಪ್ರಕಾರ ಮೊದಲು ದಕ್ಷಪುತ್ರಿಯಾಗಿದ್ದ ಶಿವೆಯನ್ನು ಮದುವೆಯಾದನು. ಅದು ಹೀಗೆ:

ಶಿವಶಕ್ತಿಯು ದಕ್ಷ ಸುತೆಯಾಗಿ ಜನಿಸಿ, ದುಃಸಹ ತಪಸ್ಸನ್ನು ಮಾಡಿದಳು. ಅದರಿಂದ ಅವಳು ರುದ್ರಪತ್ನಿಯಾದಳು. ಸೋಮನಾದ ರುದ್ರನು ಗೃಹಸ್ಥನಾಗಿ ತೋರಿಸಿಕೊಂಡನು. ಬಹಳ ಕಾಲ ಕಳೆದ ಮೇಲೆ ದಕ್ಷನಿಗೂ ರುದ್ರನಿಗೂ ಸ್ಪರ್ಧೆಯುಂಟಾಯಿತು. ಹಾಗಾದದ್ದು ಶಿವೇಚ್ಛೆಯಿಂದಲೇ. ಶಿವಮಾಯೆ ಬ್ರಹ್ಮ–ವಿಷ್ಣುಗಳನ್ನು ಮುಸುಕಿದಂತೆಯೇ ದಕ್ಷನನ್ನೂ ಮುಸುಕಿ ಮರುಳ್ಗೊಳಿಸಿತು. ಆಗ ಗರ್ವಿಯಾಗಿ ಅವನು ರುದ್ರನಿಂದೆ ಮಾಡಿದನು. ತನ್ನ ಯಜ್ಞಕ್ಕೆ ನನ್ನನ್ನೂ (ಬ್ರಹ್ಮ) ನನಗೆ ಆಗಾಗ ಸದ್ಬುದ್ಧಿಯನ್ನು ಹೇಳುತ್ತಾ ಬಂದ ವಿಷ್ಣುವನ್ನೂ, ಇತರ ದೇವತೆಗಳನ್ನೂ ದಕ್ಷನು ಆಮಂತ್ರಿಸಿದನು; ರುದ್ರನನ್ನು ಆಮಂತ್ರಿಸಲಿಲ್ಲ; ತನ್ನ ಸುತೆಯೂ ಅವನ ಹೆಂಡತಿಯೂ ಆಗಿದ್ದ ಸತಿಯನ್ನೂ ಆಮಂತ್ರಿಸಲಿಲ್ಲ. ಆದರೆ ಶಿವಾಜ್ಞೆಯನ್ನು ಪಡೆದು ಅವಳು ತನ್ನ ತಂದೆಯಾಗಿದ್ದ ದಕ್ಷನ ಯಜ್ಞಕ್ಕೆ ಹೋದಳು; ಶಿವನು (ರುದ್ರನು) ಹೋಗಲಿಲ್ಲ. ಯಜ್ಞಕ್ಕೆ ಹೋದ ಸತಿಯು ಅದರಲ್ಲಿ ರುದ್ರಭಾಗವನ್ನು ಮೀಸಲಿಡದಿರುವುದನ್ನು ಕಂಡು ಅವಮಾನಿತೆಯಾಗಿ ಆ ಯಜ್ಞ ಭಾಗಿಗಳೆಲ್ಲರನ್ನೂ ನಿಂದಿಸಿ ದೇಹತ್ಯಾಗ ಮಾಡಿದಳು. ಅದನ್ನು ಕೇಳಿ ದೇವರ ದೇವನಾದ ರುದ್ರನು ಸಿಟ್ಟಿನಿಂದ ತನ್ನ ಜಟೆಯಿಂದ ವೀರಭದ್ರನನ್ನು ಆಗಿಂದಾಗ ನಿರ್ಮಿಸಿದನು. ಅವನ ಜೊತೆಗೆ ಗಣಗಳನ್ನೂ ನಿರ್ಮಿಸಿದನು. "ನೀವು ಹೋಗಿ ದಕ್ಷನಿಗೆ ಎಲ್ಲ ಬಗೆಗಳಿಂದ

ಅವಮಾನ ಮಾಡಿ ಯಜ್ಞವನ್ನು ಧ್ವಂಸ ಮಾಡಿರಿ" ಎಂದು ಅವರಿಗೆ ಅವನು ಆಜ್ಞಾಪಿಸಿದನು. ಆ ಪ್ರಕಾರ ವೀರಭದ್ರ ಗಣಾಧೀಶನು ಯಜ್ಞ ಸ್ಥಲಕ್ಕೆ ಹೋದನು. ಅಲ್ಲಿ ಅವನ ಗಣಗಳು ಯಥೇಷ್ಟ ಉಪದ್ರವ ಕೊಟ್ಟರು. ವೀರಭದ್ರನು ಎಲ್ಲರನ್ನೂ ದಂಡಿಸಿ, ವಿಷ್ಣುವನ್ನೂ ಜಯಿಸಿ, ದಕ್ಷನ ರುಂಡವನ್ನು ಕಡಿದು ಅಗ್ನಿಗೆ ಆಹುತಿ ಕೊಟ್ಟನು. ಇದೆಲ್ಲಾ ದೇವತೆಗಳಿಗೆ ತಿಳಿದು ಅವರು ಭಕ್ತಿಯಿಂದ ರುದ್ರನನ್ನು ಸ್ತುತಿಸಿದರು. ಅದರಿಂದ ಪ್ರಸನ್ನನಾದ ಪ್ರರಮೇಶ್ವರನು ದಕ್ಷನನ್ನು ಬದುಕಿಸಿದನು; ಅವನಿಂದ ಮತ್ತೆ ಯಜ್ಞ ಮಾಡಿಸಿದನು. ಆಗ ಎಲ್ಲರೂ ಅದರಲ್ಲಿ ವಿಶೇಷ ಪೂಜೆಯನ್ನು ರುದ್ರನಿಗೆ ಸಲ್ಲಿಸಿದರು. ಸತೀ ದೇಹದಿಂದ ಹುಟ್ಟಿದ ಜ್ವಾಲೆಯು ಪೂಜಿತೆಯಾಗಿ ಪರ್ವತದಲ್ಲಿ ಧುಮುಕಿ ಜ್ವಾಲಾಮುಖಿಯೆಂದು ಪ್ರಸಿದ್ಧಳಾದಳು. ಅನಂತರ ಸತಿಯು ಹಿಮಾಲಯನ ಮಗಳಾಗಿ ಹುಟ್ಟಿದಳು, ಪಾರ್ವತಿ ಎನ್ನಿಸಿದಳು. ಕಠಿನ ತಪಸ್ಸು ಮಾಡಿ ಅವಳು ಪುನಃ ರುದ್ರಪತ್ನಿಯಾದಳು. ಪಾರ್ವತೀ ತಪಸ್ಸಿನ ಕಾಲದಲ್ಲಿ ಕಾಮದಹನವಾದ ಕಥೆಯು ಸುಪ್ರಸಿದ್ಧ.

ಬ್ರಹ್ಮನಿಗೆ ಮಂಜುವೆಂಬ ಮಗನೂ, ದಕ್ಷನಿಗೆ ಸಂಧ್ಯೆ ಎಂಬ ಮಗಳೂ ಜನಿಸಿದ್ದರು. ಅವರಿಬ್ಬರೂ ಜಗತ್ಸುಂದರರಾದರು. ದಕ್ಷನು ಸಂಧ್ಯೆಯನ್ನು ಮಂಜುವಿಗೆ ಮದುವೆ ಮಾಡಿಕೊಟ್ಟನು. ಮಂಜುವು ಆಗ ಮದನ, ಮನ್ಮಥ, ಮಾರ, ಪ್ರದ್ಯುಮ್ನ, ಮೀನಕೇತನ, ಕಂದರ್ಪ, ದರ್ಪಕ, ಅನಂಗ, ಕಾಮ, ಪಂಚಶರ ಮತ್ತು ಸ್ಮರ ಎಂದು ಪ್ರಸಿದ್ಧನಾದನು. ಅವನಿಗೆ ಕಾಮಮೂಲ ಸೃಷ್ಟಿಯ ಶಕ್ತಿಯನ್ನು ಬ್ರಹ್ಮನು ದಯಪಾಲಿಸಿದನು; ಮತ್ತು ದಕ್ಷನು ತನ್ನ ಮಗಳಾದ ರತಿಯನ್ನೂ ಕರೆದು ಅವನಿಗೆ ಮದುವೆ ಮಾಡಿಕೊಟ್ಟನು.

ಇದಕ್ಕೂ ಮೊದಲು ಬ್ರಹ್ಮ ತನಗೆ ಕೊಟ್ಟ ಶಕ್ತಿಯನ್ನು ಪರೀಕ್ಷಿಸಲೆಂದು ಮಂಜುವು ತನ್ನ ಪಂಚ ಪುಷ್ಪ ಬಾಣಗಳನ್ನು ಬಿಟ್ಟಾಗ ಬ್ರಹ್ಮಾದಿ ಸರ್ವ ದೇವತೆಗಳೂ ದೇವಮುನಿಗಳೂ ಸಂಧ್ಯೆಗೆ ಮರುಳಾದರು. ಆಗ ಬ್ರಹ್ಮನಲ್ಲಿದ್ದ ಧರ್ಮನು ರುದ್ರಧ್ಯಾನ ಮಾಡಿದನು. ರುದ್ರನು ಮಂಜುಮನ್ಮಥನ ಬಾಣಗಳನ್ನು ನಿಷ್ಫಲಗೊಳಿಸಿದನು. ಆಗ ಬ್ರಹ್ಮನು ಮನ್ಮಥನಿಗೆ "ನೀನು ಹರಕೋಪಾಗ್ನಿಯಿಂದ ಭಸ್ಮೀಭೂತನಾಗಿ ಹರನಿಗೆ ಪಾರ್ವತಿಯು ಪತ್ನಿಯಾದ ಮೇಲೆ ಪುನಃ ನಿನ್ನ ಶರೀರವನ್ನು ಪಡೆ" ಎಂದು ಶಾಪ ಕೊಟ್ಟನು. ಆ ಶಾಪವು ಕುಮಾರ ಸಂಭವಕ್ಕೆ ಕಾರಣವಾಗಿ ತಾರಕಾಸುರ ವಧೆಯನ್ನು ರುದ್ರಪುತ್ರ ಸ್ಕಂದನು ಮಾಡಿದ್ದು ಸುಪ್ರಸಿದ್ಧ. ಆಗ ಸಂಧ್ಯಾದೇವಿಯು ದೇಹತ್ಯಾಗ ಮಾಡಿ ದಕ್ಷನ ಮಗಳಾಗಿ ಹುಟ್ಟಿ ಮುಂದೆ ಅರುಂಧತಿ ಎಂಬ ಹೆಸರಿನಿಂದ ವಸಿಷ್ಠ ಪತ್ನಿಯಾದಳು. ಸಪ್ತರ್ಷಿ ಮಂಡಲದಲ್ಲಿ ವಿರಾಜಿತೆಯಾದಳು. ಎಲ್ಲವೂ ಶಿವಲೀಲೆ ಶಿವಲೀಲೆ, ಶಿವಲೀಲೆ!

# ದಾಕ್ಷಾಯಣಿ ಮಾಡಿದ ಶಿವ ಪ್ರಶಂಸೆ ಮತ್ತು ತದಿತರ ದೇವಾದಿಗಳ ನಿಂದೆ

ಯಜ್ಞ ಶಿವ, ಯಜ್ಞವೇತ್ತರೊಳಗ್ರಗಣ್ಯ. ತಾ
ಯಜ್ಞಾಂಗ, ಯಜ್ಞದಕ್ಷಿಣನಪ್ಪನು।
ಯಜ್ಞಕರ್ತಾರನವನಿರದೆ ಯಜ್ಞವೆ ಇಲ್ಲ
ಯಜ್ಞಶಿವನಿಂದಲೇ ಶುಚಿಯಪ್ಪುದು ॥೧॥

ಶಿವನ ನೆನಹಿಲ್ಲದೆಯೆ ಮಾಳ್ಪ ಕರ್ಮಗಳೆಲ್ಲ
ಅಪವಿತ್ರ ಅಪವಿತ್ರ ಅಪವಿತ್ರವು।
ದ್ರವ್ಯವೂ ಮಂತ್ರವೂ ಹವ್ಯವೂ ಕವ್ಯವೂ
ಶಿವನಿಲ್ಲದಲ್ಲೆಲ್ಲ ಅಪವಿತ್ರವು ॥೨॥

ಹತ್ತು ದೇವತೆಗಳಲ್ಲಿವನೊಬ್ಬನೆಂದನಾ–
ದರಿಸಿದಪ್ಪಯ್ಯ ನೀನತ್ಯಧಮನು।
ಹತ್ತು ರೂಪಗಳ ಹರಿ ಬೊಮ್ಮನಿಂದ್ರಾದಿಗಳು
ನಿತ್ಯ ಸೇವಿಸುವರಾ ಪರಶಿವನನು ॥೩॥

ಅಪ್ಪ, ನಿನಗೇಕೆ ಬುದ್ಧಿಭ್ರಂಶವಾಯ್ತು? ನೀ–
ನೊಪ್ಪುವೀ ಸ್ಥಾನ ಶಿವದತ್ತವಲ್ತೇ?
ತಪ್ಪಿತಸ್ಥರು ದೇವ–ಮುನಿಗಳಿಲ್ಲಿಗೆ ಶಿವನ
ಕಃಪದಾರ್ಥಿಸಿ ಬಂದೊಡೇಂ ನೆಗಳ್ತೇ? ॥೪॥

ವೇದ ಪ್ರಶಸ್ತ ನಿರ್ಗುಣ ಸಗುಣ ಶಿವತತ್ವ–
ಬೋಧೆ ನಿನಗಿಲ್ಲವೇ ಲಕ್ಷ್ಮೀಧರ?
ಬೋಧಿಸಿದ್ದಿಲ್ಲವೇ ಶಾಲ್ವ ಪ್ರಮುಖ ನಿನಗೆ?
ಬೋಧೆತಪ್ಪಿತೆ ನಿನಗೆ ಮುರಲೀಧರ? ॥೫॥

ಬೊಮ್ಮನೇ ಯಜ್ಞಭಾಗಕ್ಕಾಗಿ ನೀ ಬಂದೆ
ಹಮ್ಮಿನಿಂ ಶಿವ ಬೋಧಿಸಿದುದ ಮರೆತು।
ದುಮ್ಮಾನ ನಿನಗಿಲ್ಲವೇ ಪಂಚಮುಖಗಳಲಿ

ಒಮ್ಮೆ ಶಿವನೊಂದ ಕಡಿದುದನು ಕುರಿತು ॥೬॥

ಶಿವನೊಮ್ಮೆ ನಿನ್ನ ವಜ್ರಾಯುಧವನಿಂದ್ರನೇ
ಶವದಂತೆ ಸುಟ್ಟೊಗೆದುದನು ಮರೆತೆಯಾ?
ತವಸಿಗಳೆ ಹೇ ವಸಿಷ್ಠಾದಿಗಳೆ ಸುರವರರೆ
ಶಿವಮಹಿಮೆಯೆಷ್ಟೆಂಬುದನು ಮರೆತಿರಾ? ॥೭॥

ಭಿಕ್ಷಾಟನಕೆ ಬಂದ ಶಿವನ ಶಪಿಸಿದಿರಂದು
ಲಕ್ಷಿಸಿದಿರೇನದರ ಫಲವನಿಂದು?
ಅಕ್ಷಯ್ಯ ಲಿಂಗಬಲದಿಂದಾತ ನಿಮ್ಮೊಡನೆ
ಶಿಕ್ಷಿಸಿದ ಸುಟ್ಟು ಲೋಕಗಳ ಬಂದು ॥೮॥

ಗಾಢಾಂಧಮತಿಯಿಂದ ಯಜ್ಞಕ್ಕೆ ಬಂದಿಹಿರಿ
ಮೂಢರೋ ಮೂರ್ಖರೋ ಗಾರ್ದಭಗಳೋ?
ರೂಢಿಯಲ್ಲಿಹ ವೇದ ಶಾಸ್ತ್ರಗಳು ನೀವುಗಳು
ಮೂಡಿದಿರದೆಲ್ಲಿಂದ? ವನಪಶುಗಳೇ? ॥೯॥

ವೇದಾಂಗ ವೇದಾಂತವೆಲ್ಲವಕ್ಕೂ ಮೂಲ–
ನಾದ ಶಿವನನು ಬಿಟ್ಟು ಬಂದ ನೀವು।
ಭೂದಾರರೋ ಭೂಮಿಭಾರರೋ ನಾನರಿಯೆ
ಸ್ವೇದಜರೋ ನಿಮಗಿಲ್ಲವೇನು ಸಾವು? ॥೧೦॥

–೧೮–

# ಕಾಮ ದಹನದ ಸಂಕೇತ ಕಲಿಸುವ ಪಾಠ

ದೇವತೆಗಳು ತಾರಕಾಸುರನ ಹಾವಳಿಗೆ ಬೇಸತ್ತು ಬ್ರಹ್ಮನ ಮೊರೆ ಹೊಕ್ಕಾಗ ಅವನು, ಶಿವ–ಪಾರ್ವತಿಯರ ಪುತ್ರನಾಗಿ ಕುಮಾರನು ಜನಿಸಿ ಅವನಿಂದ ಅಸುರವಧೆಯಾಗತಕ್ಕದ್ದು ಈಶ್ವರೇಚ್ಛೆಯೆಂದನು. ಇಂದ್ರನು ಆಗ ಮನ್ಮಥನನ್ನು ಯೋಗಸ್ಥನಾಗಿದ್ದ ಶಿವನ ಲಕ್ಷ್ಯವನ್ನು ಪ್ರಪಂಚದತ್ತ ಸೆಳೆಯಲೆಂದು ಕಳುಹಿದನು. ಶಿವಸೇವೆಯಲ್ಲಿ ನಿರತಳಾಗಿ ಹಿಮಾಲಯನ ಮಗಳಾಗಿ ಹುಟ್ಟಿದ್ದ ದಾಕ್ಷಾಯಣಿಯು ಅವನನ್ನು ಮದುವೆಯಾಗಲು ಬಯಸಿದ್ದಳು. ಈ ಸಂದರ್ಭದಲ್ಲಿ ಗರ್ವದಿಂದ ಮನ್ಮಥನು ತನ್ನ ಪಂಚಬಾಣಗಳನ್ನು ಶಿವನ (ರುದ್ರನ) ಮೇಲೆ ಬಿಟ್ಟನು. ಅದರಿಂದ ಶಿವರುದ್ರನು ಸ್ವಲ್ಪ ಚಂಚಲಿತನಾದೆನೆಂಬುದು "ಕುಮಾರ ಸಂಭವದಲ್ಲಿ" ಹೇಳಿದಂತೆ ಶಿವ ಪುರಾಣವೂ ಹೇಳುತ್ತದೆ. ಕಾಳಿದಾಸನು "ಧೈರ್ಯ ಪರಿವರ್ತನ" ಶಿವನಿಗಾಯ್ತೆಂದರೆ ಪುರಾಣವು "ಧೈರ್ಯವ್ಯಸನ" ಉಂಟಾಯಿತೆಂದಿದೆ. ಶಿವೇಚ್ಛಾತಿರಿಕ್ತವಾದದ್ದು ಯಾವುದೂ ಇಲ್ಲವಾದುದರಿಂದ ಶಿವನ ದಿವ್ಯ ಮಾನಸಾಭಿಮಾನವು ತತ್ಫಲವೆಂದೂ ಕಾಮನ ಗರ್ವವೂ ತತ್ಪ್ರೇರಿತವೆಂದೂ ಪುರಾಣ ಸಂದರ್ಭದಲ್ಲಿ ಗಮನಾರ್ಹ.

ಈಶ್ವರನ ಇಚ್ಛೆಯು ಸಂಕಲ್ಪ–ಕಾಮವಲ್ಲ. ಕಾಮವು ಭೌತಿಕ ವಿಷಯಗಳಿಗೆ ಮಾತ್ರ ಸಂಬಂಧಿಸಿದ್ದು. ಪಾರ್ವತಿಯೇ ಆ ಇಚ್ಛಾಶಕ್ತಿ. ಶಿವ ಪಾರ್ವತಿಯರ ವಿರಹವೂ ಮಿಲನವೂ ಕೇವಲ ಶಿವಲೀಲೆ. ಲೀಲಾವಾದವೊಂದೇ ಈ ದೇವಾಸುರರ (ಶಿವಪ್ರಜ್ಞೇತರ) ನಿತ್ಯ ಕಲಹದ ಈವರೆಗಿನ ವಿವರಣೆ. ಶಕ್ತಿಗೆ ಮಾಯೆಯೆಂದೂ, ಮಾಯೆಗೆ ವಿದ್ಯಾವಿದ್ಯೆಗಳೆಂದೂ, ಅವುಗಳಿಗೆ ಅಪರ–ಪರಾ ಪ್ರಕೃತಿಗಳೆಂದೂ ಸಂಪ್ರದಾಯವು ಭಾವಿಸುತ್ತಾ ಬಂದಿರುವುದಲ್ಲದೆ ಶಕ್ತಿಗೇ ಮಹಾಲಕ್ಷ್ಮಿ, ಮಹಾಕಾಳಿ, ಮಹಾಸರಸ್ವತಿ, ಮಾಹೇಶ್ವರಿ ಎಂದು ಮುಂತಾಗಿ ಕರೆಯುತ್ತಾ ಬಂದಿರುವುದರಿಂದಲೂ ಬ್ರಹ್ಮ, ವಿಷ್ಣು, ಮನ್ಮಥ, ಇಂದ್ರ ಮುಂತಾದ ದೇವತೆಗಳೆಲ್ಲರೂ ಶಿವದೂತರಂತೆ ಪರಿಸೀಮಿತ "ಅಮರತ್ವ"ದಿಂದ ಮಾನವಲೋಕವನ್ನು ನಡೆಸುವರೆಂದೂ ನಂಬಿಗೆ ಬೆಳೆದಿರುವಾಗ– ಮಾನವತ್ವದಲ್ಲೇ ದೇವತ್ವ–ದಾನವತ್ವಗಳು ಸುಪ್ತವಾಗಿರುವುದನ್ನು ಮನಸ್ಸಿನಲ್ಲಿಟ್ಟುಕೊಂಡೇ ಮಾನವನು ದೇವನಾಗಬಹುದು ಹಾಗೂ ದೇವನು ಶಿವನಾಗಬಹುದು ಎಂದು ಪುರಾಣವು ಪರ್ಯಾಯ ಪದಗಳಿಂದ ಬೋಧಿಸುತ್ತದೆ. "ಸದಸದತೀತ (ತ್ರಿಗುಣಾತೀತ)" ಎಂದೆನ್ನಿಸಿದ ಶಿವ (ಪರಬ್ರಹ್ಮ)ನಿಗೆ ಸದ್ರೂಪದ ತ್ರಿಗುಣಸಹಿತನಾಗಲು (ಅವನಿಗೆ)

ಬೇಕಾದಾಗ ಬರುವುದೆನ್ನುವುದನ್ನು ಹೇಳಿದಾಗ ನಿರ್ಗುಣವು ಒಂದು ಚಿದಂಬರ ರಹಸ್ಯವಾಗುತ್ತದೆ. ನಿರ್ಗುಣಶಕ್ತಿಯು ಸಗುಣ (ಮೂರ್ತಿತ್ರಯುವಾಗಿ ಲೋಕ ವೈವಿಧ್ಯವನ್ನೂ ಯುದ್ಧ–ಶಾಂತಿಗಳನ್ನೂ ಮಾಡಿಸುತ್ತಿರುವ ವಿವರಣೆಗೆ "ಲೀಲೆ" ಎಂದರೆ ಆ ಪರಮಸತ್ಯ ಸ್ವರೂಪದ ಶಕ್ತ ಶಿವನ ನಿರ್ದಯತೆಯನ್ನು (ಷೇಕ್ಸ್‌ಪಿಯರ್ ಒಂದೆಡೆ ಸೂಚಿಸಿದಂತೆ) ಸೂಚಿಸಿದಂತಾಗುತ್ತದೆ; ಅವನು ನಮ್ಮನ್ನು ಮಗುವಿನ ದೃಷ್ಟಿಯಿಂದ ಆಟಿಗೆ ಸಾಮಾನುಗಳನ್ನಾಗಿ ಮಾಡಿಕೊಂಡು ಬೇಕಾದ ಹಾಗೆ (ಯದ್ವಾತದ್ವಾ) ಪ್ರೇರಿಸುತ್ತಾನೆ ಎಂದಾಗುತ್ತದೆ. ಆದ್ದರಿಂದ ದೇವದೈತ್ಯರಿಬ್ಬರಿಗೂ (ಮಾನವರಿಗೆ ಸಹ) ವರ–ಶಾಪಗಳನ್ನು ಕೊಡುವ ಶಿವನ ಕಥೆಗಳಿಂದ ಅವನ ಅನುಗ್ರಹ (ಅನುಕಂಪ, ಕರುಣೆ) ರಾಜಸ ನ್ಯಾಯಾ ನ್ಯಾಯ ವಿವೇಕವನ್ನು ಆಧರಿಸದಿರುವುದು ಸ್ಪಷ್ಟವಾಗುತ್ತದೆ. ಅದರಿಂದಲೇ ಮನ್ಮಥನ ಗರ್ವವೂ ಶಿವ ಪ್ರೇರಿತ, ಅದರ ಭಂಗವೂ ಶಿವಕರ್ತೃಕ, ಅವನ ಪುನರುದ್ಧಾರವೂ ಶಿವಕೃತ–ಎಂದಿರುವುದರಿಂದ ಶಿವನ ಪ್ರಕೃತಿ (ಶಕ್ತಿ, ಸ್ವಭಾವ) ಅಂಥದನ್ನುವುದೇ ಲೇಸು. ತಾರಕಾಸುರ ಸಂಹಾರವು ಸದುದ್ದೇಶ; ಮನ್ಮಥ ರುದ್ರನ ಮೇಲೆ ಬಾಣ ಬಿಡುವುದು ದುರುದ್ದೇಶ–ಎಂದು ಶಿವದೃಷ್ಟಿಯು ಸಾರತಃ ಒಪ್ಪಲಾರದು. ಆದ್ದರಿಂದ ಕಾಮನಂತೆ ಶಿವ ಸೃಷ್ಟ (ಅಥವಾ ಅವನ ಪ್ರಕೃತಿ ನಿರ್ಮಿಸಿದ) ಪಾಂಚ ಭೌತಿಕ ಜಗತ್ತಿನ ಯಾವ ಶಿವೇತರ ಶಕ್ತಿಯಿಂದ ಗರ್ವಿತರಾಗುವುದೂ ನಮಗೆ ತಕ್ಕದ್ದಲ್ಲ ಎಂಬುದಷ್ಟನ್ನೇ ಈ ಕಥೆ ಸೂಚಿಸುತ್ತದೆ. ತಮಃ ಪ್ರಧಾನನಾದ ರುದ್ರನು ತಮಃ ಪ್ರಧಾನನಾದ ತಾರಕನನ್ನು ಸ್ಕಂದಾವತಾರದಿಂದ ಸಂಹರಿಸುವುದೂ ಅದನ್ನೇ ಸೂಚಿಸುತ್ತದೆ. ಸೃಷ್ಟಿ, ಸ್ಥಿತಿ, ಲಯ, ಮೋಕ್ಷಗಳು ಲೀಲೆಗಳಲ್ಲ–ಶಿವಪ್ರಕೃತಿ–ಶಿವಸ್ವಭಾವ.

ಅನಂತರ ದೇವತೆಗಳ ಪ್ರಾರ್ಥನೆಯಂತೆ ಕಾಮನು ಬದುಕಿದನು; ಶಿವ ಕ್ರೋಧ ಸ್ವರೂಪದ ತೃತೀಯಾಕ್ಷಿ ಜನ್ಯ ಬಡಬಾನಲನು ಸಮುದ್ರಾಂತರ್ಗತನಾದನು; ಪಾರ್ವತೀ ಪರಮೇಶ್ವರರಲ್ಲಿ (ವಿವಾಹರೂಪದಿಂದ) ವಾಗರ್ಥಗಳ ಹಾಗೆ ಇರುವ ಪುನಃ ಸಂಯೋಗವಾಯಿತು; ಸ್ಕಂದ ಜನಿಸಿದ; ತಾರಕನು ಸಂಹೃತನಾದನು. ದೇವತೆಗಳಿಗೆ ಕ್ಷೇಮ ಲಭಿಸಿತು. ಈ ಸಂದರ್ಭದ ವಿವರಗಳನ್ನು ಪುರಾಣವು ಸುವಿಸ್ತಾರವಾಗಿಯೂ ಕಾವ್ಯಮಯವಾಗಿಯೂ ವರ್ಣಿಸಿದೆ. ತಾತ್ಪರ್ಯವನ್ನು ಅದರ ಒಂದೇ ಮಾತು ಹೇಳುತ್ತದೆ:

**"ಶಂಕರಃ ಸಹಿ ಸರ್ವಜ್ಞಃ**
**ಸರ್ವಾತ್ಮಾ ಸರ್ವದರ್ಶನಃ"**

[೧೦೪ನೆಯ ಪುಟದ ೫೫ನೆಯ ಶ್ಲೋಕ – ಶಿ. ಪು.] ಗೀತೆಯ ಭಾಷೆಯಲ್ಲಿ–

**"ಉತ್ತಮಃ ಪುರುಷಸ್ತ್ವನ್ಯಃ**
**ಪರಮಾತ್ಮೇತ್ಯುದಾಹೃತಃ।**
**ಯೋ ಲೋಕತ್ರಯಮಾವಿಶ್ಯ**
**ಬಿಭರ್ತ್ಯವ್ಯಯ ಈಶ್ವರಃ॥"**

ಕೇವಲ ಶಿವನು ಅಕ್ಷರ, ಸಗುಣ ಶಿವನು ಈಶ್ವರ, ಅವನ ಸೃಷ್ಟಿಯು ಕ್ಷರ. ಪುರಾಣದ ಭಾಷೆಯಲ್ಲಿ ಕೇವಲ ಶಿವನು ಅಕೂಟಸ್ಥ, ತ್ರಿಗುಣಾತೀತ, ತುರೀಯಾತೀತ, ನಿಷ್ಪ್ರಪಂಚ, ನಿರ್ವಿಕಲ್ಪ, ಸಚ್ಚಿದಾನಂದ, ಉತ್ತಮ ಪುರುಷ; ಅಕೇವಲ ಶಿವನು ರುದ್ರ, ಅಕ್ಷರ, ಕೂಟಸ್ಥ, ತ್ರಿಗುಣಪ್ರಯೋಜಕ; ಕೇವಲ ಶಿವನ ಮಾಯಾಶಕ್ತಿಯೋ ಲೀಲಾಕರ ಶಕ್ತಿಯೋ ಸ್ವಭಾವ ಬಲವೋ ಮೂರ್ತೀಕರಣ ಪ್ರವೃತ್ತಿಯೋ ಆಗಿರುವುದು ಗುಣದ ಲಕ್ಷಣ. ಎರಡು ಗ್ರಂಥಗಳಲ್ಲೂ "ಕ್ಷರಃ ಸರ್ವಾಣಿ ಭೂತಾನಿ" (the beings manifested from the Being) ಸರ್ವೋಚ್ಚ ಸತ್ತೆಯು ತನ್ನ ಒಂದಂಶವನ್ನೂ ಕಳೆದುಕೊಳ್ಳದೆ ನಮ್ಮೆದುರು ಪಾಂಚ ಭೌತಿಕ ಪ್ರಪಂಚವನ್ನಿಟ್ಟದ್ದು ಅದರ ಸ್ವಭಾವ ಮತ್ತು ಪ್ರಪಂಚಾಂತರ್ಗತರಾದ ನಾವೆಲ್ಲಾ ಆ ಪೂರ್ಣ ಸತ್ಯವನ್ನೇ ಆಧರಿಸಿ ನಿಂತ ಅದರ ಆಭಾಸಗಳು, ನೆರಳುಗಳು, ಪ್ರತಿಬಿಂಬಗಳು, ಬುದ್ಬುದಗಳು, ಮರ್ತ್ಯರು, ಸಾಪೇಕ್ಷರು, ಸಕಾಮರು, ನ್ಯೂನರು; ಅಪೂರ್ಣತೆಯ ನಮ್ಮ ಅರಿವೇ ಮೋಕ್ಷೇಚ್ಛೆಗೆ ಕಾರಣ. "ಅಹಂ ಪೂರ್ಣಃ" ಎಂಬುದು ಮನ್ಮಥನಿಗಿದ್ದಂಥ ನಮ್ಮ ಅಹಂಕಾರ. ನಿರಹಂಕಾರ ಜ್ಞಾನದಿಂದ ಕೂಡಿದ ಭಕ್ತಿಯೇ ಸತ್ತಾಸ್ವರೂಪದ ಪರಶಿವನ ಉಪಾಸನೆಗೆ ಸಾಧನ. ಈ ಉಪಾಸನೆಯಿಂದ "ಅಹಂ" ಎಂಬುದರ ಇತರ ವಿಭಕ್ತಿ ಸ್ವರೂಪಗಳೂ ಪ್ರಪಂಚ ಸಂಪರ್ಕದ ಸುಖ–ದುಃಖಗಳಿಂದ ಅವಿಚಲಿತ (unaffected) ವಾಗುವುವು. ಆಗ ನಿವಾತಸ್ಥ ದೀಪದಂತಿರುವ (Absolute Being) ಕೇವಲ ಶಿವನಲ್ಲಿ ಸಾಮರಸ್ಯ ಹೊಂದುವೆವು.

–೧೯–

# ಅನರಣ್ಯನ ಚರಿತ್ರೆ

ಅನರಣ್ಯನು ಮನುವಂಶದ ಒಬ್ಬ ಅರಸು. ಆ ಮನುವಿನ ಹೆಸರು ಇಂದ್ರಸಾವರ್ಣಿ. ಅವನು ಚತುರ್ದಶ ಮನುಗಳಲ್ಲಿ ಒಬ್ಬನು. ಅನರಣ್ಯನು ಸಪ್ತ ದ್ವೀಪವುಳ್ಳ ವಸುಂಧರೆಯ ಚಕ್ರವರ್ತಿ. ಅವನು ವಿಷ್ಣುವಿನಂತೆ ಶಂಭು ಭಕ್ತ. ಅವನ ಪುರೋಹಿತ ಭೃಗುಮಹರ್ಷಿ. ಅವನ ಮೂಲಕ ಅರಸನು ನೂರು ಯಜ್ಞಗಳನ್ನು ಮಾಡಿದನು. ಆದರೆ ಇಂದ್ರತ್ವವನ್ನು ಅವನು ಸ್ವೀಕರಿಸಲಿಲ್ಲ. ಅವನಿಗೆ ನೂರು ಜನ ಪುತ್ರರೂ, ಒಬ್ಬಳು ಪುತ್ರಿಯೂ ಜನಿಸಿದರು. ಅವನ ಪತ್ನಿಯರು ಐವರು. ಪಿಪ್ಪಲಾದ ಮುನಿಯು ಆ ರಾಜಪುತ್ರಿಯಾದ ಪದ್ಮೆಯನ್ನು ಮದುವೆಯಾಗಲು ಬಯಸಿದನು. ಆ ಮುದುಕನನ್ನು ಕಂಡು ಚಕ್ರವರ್ತಿ ಮಗಳನ್ನು ಅವನಿಗೆ ಮದುವೆ ಮಾಡಲು ಮನಸ್ಸಿಲ್ಲದೆ ಅತ್ತನು. ಆಗ ಪುರೋಹಿತನಾಗಿದ್ದ ಭೃಗುವು ಅಲ್ಲಿಗೆ ಹೋದನು. ಅವನೂ ರಾಜಗುರುವೂ ಪಿಪ್ಪಲಾದನಿಗೆ ಮಗಳನ್ನು ಮದುವೆ ಮಾಡಿಕೊಟ್ಟು ಅವನನ್ನು ತೃಪ್ತಿಪಡಿಸಿ ಅವನ ಶಾಪಕ್ಕೆ ಗುರಿಯಾಗದೆ ಜಗತ್ತನ್ನು ರಕ್ಷಿಸು ಎಂದು ಬೋಧಿಸಿದರು. ರಾಜನು ಹಾಗೇ ಮಾಡಿ ತಪಸ್ಸು ಮಾಡಲು ಕಾಡಿಗೆ ಹೋದನು. ಆ ತಪಸ್ಸಿನಿಂದ ಅವನು ಶಿವಲೋಕವಾಸಿಯಾದನು. ಅವನ ಜ್ಯೇಷ್ಠ ಪುತ್ರನು ಸಕಲ ಪ್ರಜೆಗಳನ್ನೂ ಪಾಲಿಸಿ ಕೀರ್ತಿವಂತನಾದನು. ಅನರಣ್ಯನ ಹೆಸರು ಅಮರವಾಯಿತು. ಹಿಮಾಲಯ ರಾಜನು ಈ ಕಥೆಯನ್ನು ಕೇಳಿದ ಬಳಿಕವೇ ತನ್ನ ಮಗಳಾದ ಪಾರ್ವತಿಯನ್ನು ಶಿವನಿಗೆ ಮದುವೆ ಮಾಡಿಕೊಡಲು ಒಪ್ಪಿದನೆಂಬುದು ಪುರಾಣೋಕ್ತವಾಗಿದೆ.

–೨೦–

# ೬೦,೦೦೦ ವಾಲಖಿಲ್ಯರ ಉದಯ

ಮದುವೆಯ ಕಾಲದಲ್ಲಿ ಪಾರ್ವತಿಯ ಪಾದದ ಉಗುರಿನಲ್ಲಿ ಹೊಳೆಯುತ್ತಿದ್ದ ಚಂದ್ರನನ್ನು ನೋಡಿ ಮರುಳಾದ ಬ್ರಹ್ಮನ ವೀರ್ಯಸ್ಖಲನದಿಂದ ಸಾವಿರಾರು ಹೆಬ್ಬೆರಳು ಗಾತ್ರದ ವಾಲಖಿಲ್ಯ ಋಷಿಗಳು ಹುಟ್ಟಿ ಬ್ರಹ್ಮನ ಆಜ್ಞೆಯ ಮೇರೆಗೆ ಗಂಧಮಾದನ ಪರ್ವತದಲ್ಲಿ ತಪಸ್ಸನ್ನು ಮಾಡತೊಡಗಿದರು. ಬ್ರಹ್ಮನು ತನ್ನ ಮೋಹಕ್ಕೆ ಪಶ್ಚಾತ್ತಾಪ ಪಟ್ಟದ್ದರಿಂದ ರುದ್ರನು ಅವನನ್ನು ಕ್ಷಮಿಸಿದನು.

ವಾಲಖಿಲ್ಯರು ಸೂರ್ಯರಥದ ಸುತ್ತಲೂ ಇರುವವರು; ವೇದದ ಮಂತ್ರದ್ರಷ್ಟಾರರು. ಅವರ ಹುಟ್ಟು ಬ್ರಹ್ಮನ ಮೋಹದಿಂದಾದುದು. ಮೋಹವು ಸೃಷ್ಟಿಗೆ ಕಾರಣ ಎಂಬುದೀ ಕಥೆಯ ಪಾಠ. ಮೋಹವು ಮರುಳ್ತನ, ಮೂಢತನ, ಅಜ್ಞಾನ, ಅವಿದ್ಯೆ–ಅದಕ್ಕೆ ಆದಿಯಿದೆ, ಅಂತ್ಯವಿದೆ. ನಿರ್ಮೋಹರು ಹೇಗಿರುತ್ತಾರೆ? ದೇವಾ ಊಚುಃ–

"ನಿರ್ವಿಕಾರೋಽವ್ಯಯೋ ನಿತ್ಯೋ ನಿರ್ವಿಕಲ್ಪೋಽಕ್ಷರಃ ಪರಃ
ಆದ್ಯಂತಾವಸ್ಯ ಯನ್ಮಧ್ಯಮಿದಮನ್ಯದಹಂ ಬಹಿಃ।
ಯತೋಽವ್ಯಯಃ ಸನ್ನೈತಾನಿ ತತ್ಸತ್ಯಂ ಬ್ರಹ್ಮ ಚಿದ್ ಭವಾನ್
ತವೈವ ಚರಣಾಂಭೋಜಂ ಮುಕ್ತಿಕಾಮಾ ದೃಢವ್ರತಾಃ।
ವಿಸೃಜ್ಯೋಭಯತಃ ಸಂಗಂ ಮುನಯಃ ಸಮುಪಾಸತೇ।
ತ್ವಂ ಬ್ರಹ್ಮ ಪೂರ್ಣಮಮೃತಂ ವಿಶೋಕಂ ನಿರ್ಗುಣಂ ಪರಂ
ಆನಂದ ಮಾತ್ರಮವ್ಯಗ್ರಮವಿಕಾರಮನಾತ್ಮಕಂ।
ವಿಶ್ವಸ್ಯ ಹೇತುರುದಯ ಸ್ಥಿತಿ ಸಂಯಮನಸ್ಯ ಹಿ
ತದಪೇಕ್ಷತಯಾತ್ಮೇಶೋಽನಪೇಕ್ಷಃ ಸರ್ವದಾ ವಿಭುಃ।
ಏಕಸ್ತ್ವಮೇವ ಸದಸ್‌ದ್ವಯಮದ್ವಯಮೇವ ಚ
ಸ್ವರ್ಣಂ ಕೃತಾಕೃತಮಿವ ವಸ್ತುಭೇದೋ ನ ಚೈವ ಹಿ।
ಅಜ್ಞಾನತಸ್ತ್ವಯಿ ಜನೈರ್ವಿಕಲ್ಪೋ ವಿದಿತೋ ಯತಃ।
ತಸ್ಮಾದ್ ಭ್ರಮ ಪ್ರತೀಕಾರೋ ನಿರುಪಾಧೇರ್ನಹಿಸ್ವತಃ।

**ತ್ವಮಾದಿ ಸ್ತ್ವಮನಾದಿಶ್ಚ ಪ್ರಕೃತೇಸ್ತ್ವಂ ಪರಃ ಪುಮಾನ್**
**ವಿಶ್ವೇಶ್ವರೋ ಜಗನ್ನಾಥೋ ನಿರ್ವಿಕಾರಃ ಪರಾತ್ಪರಃ॥**

(೧೩ ರಿಂದ ೨೧ನೆಯ ಶ್ಲೋಕದವರೆಗೆ ಶಿ.ಪು. Nag Publishers Delhi - 1981)

Ultimate Truth is a bundle of Contradictions- ತರ್ಕದ ಪರಿಭಾಷೆಯಲ್ಲಿ ಆತ್ಯಂತಿಕ ಸತ್ಯವು ನಮಗೆ ವಿರುದ್ಧ ಪದಾರ್ಥಗಳ ಸಿವುಡಿನಂತೆ ಕಾಣಿಸುತ್ತದೆ. ನಾವು ಯಾರು? ಅವಿದ್ಯರು, ಮೂಢರು, ಪ್ರಾಪಂಚಿಕರು, ಅಧ್ರುವಾರಾಧಕರು. ನಾವು ಅಧ್ರುವರಾದುದರಿಂದ ನಮ್ಮ ಮೂಲಕ ಆಗುವುದೆಲ್ಲಾ ಅಧ್ರುವ, ಅಸ್ಥಿರ, ಕಾಲಮಿತಿಬದ್ಧ, ನಶ್ವರ. ನಮ್ಮ ಚಿಂತನ, ಸಂಶೋಧನ, ತರ್ಕ, ವಿತರ್ಕಗಳೆಲ್ಲಾ ಅನಿತ್ಯ. ಆದ್ದರಿಂದ ಪರಾವಿದ್ಯಾಮೂರ್ತಿಯಾದ ಶಿವ ತತ್ವವು ನಮಗೆ ದೇವತೆಗಳಿಗೆ ಕಾಣಿಸಿದ ಹಾಗೆ ವಿಶ್ವರೂಪವಾಗಿ ಕಾಣಿಸುವುದು. ವ್ಯಾಹತಿಮಯವಾಗಿ ತೋರುವುದು. "ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಂ" ಎಂದು ಗೀತೆ ಹೇಳಿದ್ದು ಈ ಪರತತ್ವವನ್ನು ಕುರಿತೇ. ಇಷ್ಟು ದೊಡ್ಡ ಆಶ್ಚರ್ಯ ಇನ್ನೊಂದಿಲ್ಲ!

–೨೧–

# ಕುಮಾರ ಸಂಭವ ಮತ್ತು ತಾರಕವಧೆ

ಪಾರ್ವತಿಯೊಡನೆ ಗುಹೆಯೊಂದರಲ್ಲಿ ಶಿವನು ರಮಿಸುತ್ತಿದ್ದಾಗ ವಿಷ್ಣುವೇ ಮೊದಲಾದ ದೇವತೆಗಳು ಹೊರಗೇ ನಿಂತು ಶಿವಸ್ತುತಿ ಮಾಡಿ ತಾರಕಾಸುರ ಬಾಧೆಯಿಂದ ತಾವೆಲ್ಲಾ ಸೋತು ಹೋದೆವೆಂದು ಅತ್ತು ಕರೆದು ಬೇಡಿಕೊಂಡರು. ಆಗ ಶಿವನು (ರುದ್ರನು) ಹೊರಗೆ ಬಂದು ತನ್ನ ತಲೆಯಿಂದ ಉಕ್ಕುವ ವೀರ್ಯವನ್ನು ಧಾರಣೆ ಮಾಡಿದವರಿಂದ ತಾರಕವಧ ಸಮರ್ಥನು ಹುಟ್ಟುವನು ಎಂದನು. ಆ ಕಾಲದಲ್ಲಿ ಶಿವ ವಿರಹವನ್ನುಂಟು ಮಾಡಿದ ವಿಷ್ಣ್ವಾದಿ ಸುರರೆಲ್ಲರಿಗೂ ಪಾರ್ವತಿ ಶಾಪಕೊಟ್ಟಳು. ಇನ್ನು ಮುಂದೆ ದೇವತೆಗಳ ಪತ್ನಿಯರೆಲ್ಲರೂ ನನ್ನಂತೆಯೇ ಬಂಜೆಯರಾಗಲಿ–ಎಂದು. ಆಗ ಅಗ್ನಿಯು ಶಿವ ವೀರ್ಯವನ್ನು ನುಂಗಿದನು. ಶಿವನು ಪಾರ್ವತಿಯನ್ನು ಸಂತೈಸಲು ಅವಳಲ್ಲಿ ಗಣೇಶನು ಜನಿಸುವಂತೆ ಅನುಗ್ರಹಿಸಿದನು. ಅಗ್ನಿ ಮುಖೇನ ದೇವತೆಗಳು ಅನ್ನ ತಿನ್ನುವುದರಿಂದ ಅವರಿಗೆಲ್ಲಾ ಗರ್ಭಧಾರಣೆಯಾಯಿತು. ಅವರು ಮತ್ತೆ ರುದ್ರನ ಹತ್ತಿರ ಹೋಗಿ ಗೋಳಾಡಿದರು. ಅದಕ್ಕವನು ಆ ಗರ್ಭಗಳನ್ನು ವಾಂತಿ ಮಾಡಿರೆಂದು ಅವರಿಗೆ ಹೇಳಿದನು. ಆಗ ಅವರು ವಾಂತಿ ಮಾಡಿದ ಗರ್ಭಸ್ಥರೇತಸ್ಸು ಹೊರಗೆ ಬಿದ್ದು ಸುವರ್ಣಪರ್ವತವಾಯಿತು. ಅಗ್ನಿಯು ಈಶ್ವರಾಜ್ಞೆಯಂತೆ ತನ್ನಲ್ಲಿದ್ದ ಶಿವರೇತಸ್ಸನ್ನು ಆರು ಜನ ಮುನಿ ಸ್ತ್ರೀಯರಲ್ಲಿ ಅವ್ಯಕ್ತವಾಗಿ ಪ್ರವೇಶಿಸುವಂತೆ ಮಾಡಿದನು. ಅವರಿಗೆ ನದೀಸ್ನಾನದಿಂದ ಹಿಂದಿರುಗಿ ಮನೆಗೆ ಹೋದಾಗ ಅದು ಗೊತ್ತಾಗಿ ಅವರು ಹಿಮಾಲಯದ ಬುಡದಲ್ಲಿ ಅದನ್ನು ತ್ಯಜಿಸಿದರು. ಹಿಮಾಲಯನು ಸುಸ್ತಾಗಿ ಅದನ್ನು ಗಂಗೆಯಲ್ಲಿ ಹಾಕಿದನು. ಗಂಗೆ ಅದನ್ನು ತಾಳಲಾರದೆ ತನ್ನ ಅಲೆಗಳಿಂದ ಆ ವೀರ್ಯವನ್ನು ಶರಸ್ತಂಭದಲ್ಲಿ ಸುರಿದಳು. ಆ ಶರಸ್ತಂಭದಲ್ಲಿ ಕುಮಾರನು ಉದಯಿಸಿದನು. ಅವನು ಹುಟ್ಟಿದ್ದು ಮಾರ್ಗಶಿರ ಮಾಸದ ಶುಕ್ಲಪಕ್ಷದ ಷಷ್ಠಿಯ ದಿನ. ಅವನು ರುದ್ರನ ಅವತಾರ.

ಬ್ರಹ್ಮನು ವಿಶ್ವಾಮಿತ್ರನನ್ನು ಸ್ಕಂದನೆಡೆಗೆ ಕಳುಹಿಸಿದನು. ಅವನು ಮಾಡಿದ ಸ್ತುತಿಯಿಂದ ಕುಮಾರನು ಪ್ರಸನ್ನನಾದನು ಮತ್ತು ತನಗೆ ವೈದಿಕ ಸಂಸ್ಕಾರಗಳನ್ನು ಮಾಡು ಎಂದನು. ತಾನು ಗಾಧಿಯೆಂಬ ಕ್ಷತ್ರಿಯನ ಮಗನಾದುದರಿಂದ ಅಂಥ ಸಂಸ್ಕಾರ ಮಾಡಲು ಪಾತ್ರನಲ್ಲವೆಂದು ಹೇಳಿದಾಗ, "ನನ್ನವರದಿಂದ ನೀನು ಬ್ರಹ್ಮರ್ಷಿ; ವಸಿಷ್ಠಾದಿಗಳು ಆಗಲೇ ಹಾಗೆ ಹೇಳಿದ್ದಾರೆ" ಎಂದು ಬಾಲನಾದ ಸ್ಕಂದನು ಹೇಳಿದ

ಕೂಡಲೇ ವೇದೋಕ್ತವಾಗಿ ಬಾಲಸ್ಕಂದನಿಗೆ ವಿಶ್ವಾಮಿತ್ರನು ವೈದಿಕ ಸಂಸ್ಕಾರಗಳನ್ನು ಮಾಡಿದನು. ಅಂದಿನಿಂದ ವಿಶ್ವಾಮಿತ್ರನು ಸ್ಕಂದನ ಪುರೋಹಿತನಾದನು. ಆಗ ಅಲ್ಲಿಗೆ ಸರಕ್ಕನೆ ಅಗ್ನಿಯು ತನ್ನ ಏಳು ಜ್ವಾಲೆಗಳಲ್ಲಿ ಒಂದಾದ ಶ್ವೇತ ಎಂಬ ಸ್ವರೂಪದಿಂದ ಬಂದು ತನ್ನ ಮಗನಾದ ಸ್ಕಂದನನ್ನು ಮುದ್ದಾಡಿ ಶಕ್ತಿ ಎಂಬ ಅಸ್ತ್ರವನ್ನು ಅವನಿಗಿತ್ತನು. ಅವನದನ್ನು ತೆಗೆದುಕೊಂಡು ಅದರ ಶಿಖರವನ್ನೇರಿ ಆ ಶಕ್ತಿಯಿಂದ ಆ ಶೃಂಗವನ್ನು ಕಡಿದುರುಳಿಸಿದನು.

ಅದರ ಉರುಳುವಿಕೆಯಿಂದ ಸ್ಕಂದ ಸಂಹಾರಕ್ಕೆಂದು ಮೊದಲೇ ಅಲ್ಲಿ ಕಾಯ್ದು ಕುಳಿತಿದ್ದ ದಶಪದ್ಮ ಸಂಖ್ಯೆಯ ರಾಕ್ಷಸರು ಸತ್ತುಹೋದರು. ಅಷ್ಟರಲ್ಲಿ ಸ್ಕಂದ ಯಾರೆಂದು ತಿಳಿಯದ ಇಂದ್ರನು ದೇವತೆಗಳೊಡನೆ ಅಲ್ಲಿಗೆ ಹೋಗಿ ತನ್ನ ವಜ್ರದಿಂದ ಸ್ಕಂದನ ಬಲಪಾರ್ಶ್ವ, ಎಡಪಾರ್ಶ್ವ, ಹೃದಯಗಳಿಗೆ ಹೊಡೆದಾಗ ಆ ವಜ್ರದಿಂದಲೇ ಅನುಕ್ರಮವಾಗಿ ಶಾಖ, ವಿಶಾಖ, ನೈಗಮರೆಂಬ ಮಹಾಬಲಿಗಳು ಹುಟ್ಟಿ ಸ್ಕಂದನನ್ನು ಸೇರಿಕೊಂಡರು ಮತ್ತು ಇಂದ್ರನ ಮೈಮೇಲೆ ಸ್ಕಂದಸಮೇತರಾಗಿ ಅವನನ್ನು ಕೊಲ್ಲಲೆಂದು ಜಿಗಿದರು. ಆಗ ಇಂದ್ರನು ಅವರಿಗೆ ಶರಣಾಗತನಾದನು ಮತ್ತು ದೇವತೆಗಳೊಡನೆ ಭಯಾಶ್ಚರ್ಯಗಳಿಂದ ಕೂಡಿದವನಾಗಿ ಮನೆಗೆ ಮರಳಿದನು. ಅನಂತರ ಅಲ್ಲಿಗೆ ಕೃತ್ತಿಕೆಯರೆಂಬ ಆರುಜನ ದೇವತಾಸ್ತ್ರೀಯರು ಬಂದು ಈ ಮಗು "ನನಗೆ ಬೇಕು ತನಗೆ ಬೇಕು" ಎಂದು ವಾದಿಸಲಾರಂಭಿಸಿದರು. ಅವರ ವಾದಶಮನಕ್ಕಾಗಿ ಸ್ಕಂದನು ಅವರಿಗೆ ಆರು ಮುಖಗಳಿಂದ ಪ್ರತ್ಯಕ್ಷನಾದನು; ಆ ಆರೂ ಜನರ ಸ್ತನ್ಯವನ್ನು ಅವನು ಪಾನ ಮಾಡಿ ಅವರನ್ನು ತೃಪ್ತಿಪಡಿಸಿದನು. ಅವರು ಒಟ್ಟಾಗಿ ಅವನನ್ನು ಕರೆದೊಯ್ದು ಸಾಕಿದರು. ಅವನು ದೊಡ್ಡವನಾದ ಮೇಲೆ ಒಂದು ದಿನ ದೇವಸಭೆಗೆ ಹೋದನು. ಅವನ ಅದ್ಭುತ ತೇಜಸ್ಸನ್ನು ಕಂಡು ಹರಿವಿಧಿಗಳಾದಿಯಾಗಿ ಎಲ್ಲರೂ ಸ್ತಂಭೀಭೂತರಾದರು. ಅವರು ನೀನಾರೆಂದು ಕೇಳಿದಾಗ ಉತ್ತರ ಕೊಡದೆ ದೇವಸಭೆಯಿಂದ ಹಿಂದಿರುಗಿ ಮನೆಗೆ ಮರಳಿ ಸ್ಕಂದನು ಮಲಗಿ ಬಿಟ್ಟನು.

ಕೃತ್ತಿಕೆಯ ಪಾಲನೆಯಲ್ಲಿ ಸ್ಕಂದನಿದ್ದು ಕೆಲ ವರ್ಷಗಳು ಕಳೆದ ಮೇಲೆ ಪಾರ್ವತಿಯು ಪತಿಯನ್ನು ಭೂಮಿಯಲ್ಲಿ ಬಿದ್ದ ಅವನ ವೀರ್ಯವೇನಾಯಿತೆಂದು ಕೇಳಿದಳು. ದೇವತೆಗಳಿತ್ತ ವರದಿಯಂತೆ. ಸ್ಕಂದನ ಇಲ್ಲಿಯವರೆಗಿನ ಕಥೆಯನ್ನು ಅವನು ಅವಳಿಗೆ ತಿಳಿಸಿದನು. ಆಗ ಶಿವಕಿಂಕರರೆಲ್ಲಾ ಹೊರಟರು; ಕೃತ್ತಿಕೆಯರು ಹೆದರಿ ಕಾರ್ತಿಕೇಯ ಸ್ಕಂದನನ್ನು ತಾವೀಗ ಏನು ಮಾಡಬೇಕೆಂದು ಕೇಳಿದರು. ಅವನು ಅವರಿಗೆ ಅಭಯವನ್ನು ಕೊಟ್ಟನು. ನಂದಿಯು ಅವನನ್ನು ಶಿವಾಧ್ಯಕ್ಷತೆಯಲ್ಲಿ ನಡೆಯುತ್ತಿದ್ದ ದೇವಸಭೆಗೆ ಬರಲು ಆಹ್ವಾನಿಸಿದನು; ಅವನ ಹುಟ್ಟಿನ ಕಥೆಯನ್ನೂ ಹೇಳಿದನು. ಆ ಪ್ರಕಾರ ಕಾರ್ತಿಕೇಯ ಕುಮಾರನು ಕೃತ್ತಿಕೆಯರೊಡನೆ ದೇವಸಭೆಗೆ ಹೋದನು. ಅಲ್ಲಿ (ಕೈಲಾಸದಲ್ಲಿ) ಪಾರ್ವತಿಯ ಸ್ತನ್ಯಪಾನ ಮಾಡಿ ಶಿವನಿಂದ

ಮುದ್ದಿಸಲ್ಪಟ್ಟು, ವಿಷ್ಣು, ಬ್ರಹ್ಮ, ಇಂದ್ರಾದಿಗಳಿಂದಲೂ ಋಷಿ ಮುನಿಗಳಿಂದಲೂ ಸಂಸ್ತುತನಾದನು. ಈ ಕಾರ್ತಿಕೇಯನೇ ಸ್ಕಂದ, ಗಾಂಗೇಯ, ಗುಹ, ಕುಮಾರ, ಷಾಣ್ಮಾತುರ, ತಾರಕಜಿತ್. ಶಿವನು ಸರ್ವಶತ್ರುಸಂಹಾರ ವಿದ್ಯೆಯನ್ನು ಅವನಿಗೆ ಕಲಿಸಿದನು. ವಿಷ್ಣುವು ಕಿರೀಟ, ಮುಕುಟಾದಿಗಳೊಡನೆ ತನ್ನ ವೈಜಯಂತೀ ಮಾಲೆಯನ್ನೂ, ಸುದರ್ಶನ ಚಕ್ರವನ್ನೂ ಸ್ಕಂದನ ಕೊರಳಿಗೆ ಹಾಕಿದನು. ಶಿವನು ಶೂಲಾದಿ ತನ್ನ ಆಯುಧಗಳನ್ನವನಿಗೆ ಕೊಟ್ಟನು. ಇಂದ್ರನು ವಜ್ರಾಸ್ತ್ರವನ್ನೂ, ಐರಾವತವನ್ನೂ ಅವನಿಗೆ ಇತ್ತನು. ಯಮನು ಯಮದಂಡವನ್ನು ಕೊಟ್ಟನು. ವರುಣನೂ ಸೂರ್ಯನೂ ಶ್ವೇತಛತ್ರ ರತ್ನಮಾಲೆಗಳನ್ನೂ ಮಾನಸವೇಗದ ರಥವನ್ನೂ ಅನುಕ್ರಮದಿಂದ ಕೊಟ್ಟರು. ಚಂದ್ರನು ಅಮೃತ ಕಲಶವನ್ನಿತ್ತನು. ತನ್ನ ಮಗನಿಗೆ ಅಗ್ನಿಯು ಮಹಾ ಶಕ್ತ್ಯಾಯುಧವನ್ನಿತ್ತನು. ಕುಬೇರನು ಗದೆಯನ್ನಿತ್ತನು. ನಿಯತಿ ವಾಯುಗಳು ತಮ್ಮ ಆಯುಧಗಳನ್ನು ಅರ್ಪಿಸಿದರು. ಕಾಮದೇವನು ಕಾಮಾಸ್ತ್ರವನ್ನಿತ್ತನು. ಕ್ಷೀರ ಸಮುದ್ರನೂ, ಹಿಮಾಲಯನೂ ರತ್ನಭೂಷಣಗಳನ್ನಿತ್ತರು. ಯಜ್ಞಸೂತ್ರವನ್ನೂ ವೇದಗಳನ್ನೂ ವೇದಮಾತೆಯನ್ನೂ, ಕಮಂಡಲುವನ್ನೂ ಬ್ರಹ್ಮಾಸ್ತ್ರವನ್ನೂ ಬ್ರಹ್ಮನು ಸ್ಕಂದನಿಗೆ ಕೊಟ್ಟನು. ಅರುಣನೂ ಗರುಡನೂ ತಮ್ಮ ಮಕ್ಕಳಾದ ತಾಮ್ರಚೂಡನನ್ನೂ ಚಿತ್ರಬರ್ಹಣವನ್ನೂ ಸ್ಕಂದ ಸೇವೆಗೆ ಮುಡಿಪಿಟ್ಟರು. ಪಾರ್ವತಿ ಅವನಿಗೆ ಚಿರಂಜೀವಿತ್ವವನ್ನಿತ್ತಳು. ಲಕ್ಷ್ಮಿಯು ಸಂಪತ್ತನ್ನು ಕೊಟ್ಟಳು. ದಿವ್ಯಮಹಾಹಾರವನ್ನು ಕುಮಾರನ ಕೊರಳಿಗೆ ಹಾಕಿದಳು. ಸಾವಿತ್ರಿಯು ಸಿದ್ಧ ವಿದ್ಯೆಯನ್ನು ದಾನಮಾಡಿದಳು. (ಸಾವಿತ್ರ+ಸರಸ್ವತಿ) ದೇವಿಯರು ತಮ್ಮಲ್ಲಿದ್ದ ತಪಶ್ಶಕ್ತಿಯನ್ನಿತ್ತರು. ಕೃತ್ತಿಕೆಯರೂ ಹಾಗೇ ತಮ್ಮ ದಿವ್ಯಶಕ್ತಿಗಳನ್ನಿತ್ತರು.

ಇದನ್ನೆಲ್ಲಾ ಕಂಡು ಸಂತುಷ್ಟನಾದ ಶಿವನು (ರುದ್ರನು) ವಿಷ್ಣು ಬ್ರಹ್ಮಾದಿ ದೇವತೆಗಳು ಬೇಕಾದ ವರವನ್ನು ಬೇಡಬಹುದು ಎಂದನು. ಆಗ ಅವರು ಕುಮಾರನಿಂದ ತಾರಕಾಸುರ ಸಂಹಾರವಾಗಲಿ ಎಂದು ಬೇಡಿಕೊಂಡರು. ಆಗ ರುದ್ರಾಜ್ಞೆಯಂತೆ ಸ್ಕಂದನು ದೇವಸೇನಾನಿಯಾಗಿ ತಾರಕಸಂಹಾರಕ್ಕೆ ಹೊರಟನು. ಆ ವೇಳೆಗೆ ಒಬ್ಬ ಬ್ರಾಹ್ಮಣನು ಬಂದು ತನ್ನ ಯಜ್ಞ ಪಶುವಾದ ಆಡು ತಪ್ಪಿಸಿಕೊಂಡು ಹೋಯಿತು ಎಂದು ದೂರಿದನು. ಬ್ರಾಹ್ಮಣನಿಗೆ ಅಭಯವಿತ್ತ ದೇವಸೇನಾಪತಿಯು ಅವಧೂತನ ಮೂಲಕ ವಿಷ್ಣುಲೋಕದಲ್ಲಿ ಆ ಆಡಿದ್ದುದನ್ನು ತಿಳಿದು ಅದನ್ನು ತರಿಸಿಕೊಂಡು ಹತ್ತಿದಾಗ ಅದು ಬ್ರಹ್ಮಾಂಡದಲ್ಲೆಲ್ಲಾ ತಿರುಗಿತು. ಆಗ ಸ್ಕಂದನು (ತನ್ನ ಅಜ್ಜ ದಕ್ಷನ ಆಡಿನ ತಲೆಯನ್ನು ನೆನೆದೋ ಏನೋ!) ಆಡು ಕಡಿಯದೆ ಯಜ್ಞ ಸಫಲವಾಗುತ್ತದೆ ಎಂದು ಆ ಬ್ರಾಹ್ಮಣನನ್ನು ಯಜ್ಞ ಮುಗಿಸೆಂದು ಕಳುಹಿದನು. ದಕ್ಷ ಮಾಡಿದ್ದು ಪಶುವಧ ಯಜ್ಞ, ಅದಕ್ಕೇ ವೀರಭದ್ರ ಅವನನ್ನು ಯಜ್ಞ ಪಶು ರೂಪನಾಗುವಂತೆ ಮಾಡಿಸಿದನು. ಮೊಮ್ಮಗ ಸ್ಕಂದನು ಪಶುಯಜ್ಞವನ್ನೇ ನಿಷೇಧಿಸಿದನು. ಈ ಅಂಶವು ಯಜ್ಞ ಸಂಸ್ಥೆಗೆ ಪರ್ಯಾಯವಾಗಿ ದೇವಸ್ಥಾನಗಳಲ್ಲಿ ದೇವರ ಪೂಜೆಯನ್ನು ಮಾಡುವ ಪದ್ಧತಿಯು ಬಂದಿತೆಂಬ ತತ್ವಶಾಸ್ತ್ರ ಚರಿತ್ರಜ್ಞರ ಹಾಗೂ ಶಿಲ್ಪೇತಿಹಾಸಜ್ಞರ ನಿಗಮನವನ್ನು

ಉದಾಹರಣೆಯ ಮೂಲಕ ಸಮರ್ಥಿಸುತ್ತದೆ. ಪುರಾಣಗಳು ಇದಕ್ಕೆ ಕಾರಣ. ಅವುಗಳ ಅಸ್ಪಷ್ಟ ಆದಿಕಾಲ ಕ್ರಿ.ಪೂ. ೩ನೆಯ ಶತಮಾನ, ಸ್ಪಷ್ಟ ಆದಿಗಾಲ ೪ನೆಯ ಶತಮಾನ (ಗುಪ್ತಸಾಮ್ರಾಜ್ಯದ) ಕಾಲ ಎನ್ನುತ್ತಾರೆ ಚಾರಿತ್ರಿಕರು. ವ್ಯಾಸಭಾರತದ ತುಲಾಧಾರ ಜಾಜಲಿ ಸಂವಾದದಲ್ಲಿ ಬ್ರಾಹ್ಮಣರಿಗೆ ಪಶುಯಜ್ಞ ನಿಷಿದ್ಧವೆಂದು ಹೇಳಲಾಗಿದೆ; ಪಂಚಗವ್ಯದಿಂದ ದೇವರ ಪೂಜೆ ಮಾಡುವುದೇ ಯಜ್ಞ ಎಂದು ಬೋಧಿಸಲಾಗಿದೆ. ಅರ್ಜುನನು ಲಿಂಗವೆಂದು ಶಿವಪೂಜೆಗೆ ತೆಗೆದುಕೊಂಡದ್ದು ಸ್ಥಂಡಿಲ (ಮಣ್ಣುಂಡೆ, ಮಣ್ಣು ಹೆಂಟೆ) ಮಹಾಭಾರತದ ಕಿರಾತಾರ್ಜುನೀಯದಲ್ಲಿ. ಇವುಗಳನ್ನು ಭಾರತೀಯ ಸಂಸ್ಕೃತಿ ವ್ಯಾಖ್ಯಾತೃಗಳು ಮರೆಯಕೂಡದು. ಮಹಾಭಾರತವನ್ನು ಈಗಿರುವಂತೆ ಬರೆದ ಕಾಲ ಕ್ರಿ.ಪೂ. ೪ನೆಯ ಶತಮಾನ ಎಂಬುದು ಬಹುಮತ. ಬುದ್ಧನ ಕಾಲ ಕ್ರಿ. ಪೂ. ೫೦೦ ಎಂದು ಅಂದಾಜು (ಕಲಿಯುಗದಲ್ಲಿ). ಮಹಾಭಾರತೋಕ್ತ ಬೌದ್ಧಾವತಾರ ( ಕೃಷ್ಣ ದಿಗಂಬರನಾಗಿ ತುಲಸಿಯ ಇದಿರು ನಿಂತದ್ದು) ದ್ವಾಪರ ಯುಗದಲ್ಲಿ ಜಲಂಧರ ವಧಕ್ಕಾಗಿ. ಕೆಲ ವಿದ್ವಾಂಸರಿದನ್ನು ಮರೆತಿದ್ದಾರೆ–ಅದಕ್ಕಾಗಿ ಇಲ್ಲಿ ಈ ವಿಷಯದ ಪುನರುಚ್ಚಾರ.

ಅನಂತರ ತ್ರಿಮೂರ್ತಿ ಸಹಿತರಾದ ದೇವತೆಗಳ ರಕ್ಷಕನಾಗಿ ತಾರಕಾಸುರನನ್ನು ವಧಿಸಲು ಸ್ಕಂದ ದೇವಸೇನೆಯೊಡನೆ ಹೊರಟಾಗ ತಾರಕಾಸುರನು ತನ್ನ ಜಗದ್ಭಯಂಕರ ದಾನವ ಸೇನೆಯೊಡನೆ ಇದಿರಾದನು. ಈ ದೇವ ದಾನವ ಯುದ್ಧದಲ್ಲಿ ಅನೇಕ ದೇವಾಸುರರು ಅಂಗಭಂಗ ಹೊಂದಿದರು. ಕಬಂಧಗಳು ನರ್ತಿಸಿದವು. ರಕ್ತದ ನದಿಗಳು ಹರಿದವು. ಭೂತ, ಪ್ರೇತ, ಪಿಶಾಚಗಳು ಕುಣಿದವು. ಅನೇಕರು ಪುಡಿಪುಡಿಯಾಗಿ ಸತ್ತರು. ಕಾಡುಪ್ರಾಣಿಗಳು ಹೆಣಗಳನ್ನು ತಿನ್ನಬಂದವು. ರಣ ಹದ್ದುಗಳು ಮಾಂಸವನ್ನು ಕೊಕ್ಕಿನಿಂದ ಕುಕ್ಕಿ ತೆಗೆದುಕೊಂಡು ಹೋದವು. ತಾರಕಾಸುರನು ಇಂದ್ರನು ಓಡುವಂತೆ ಕಾದಿನು. ಆ ಈ ಪಕ್ಷದವರು ದ್ವಂದ್ವ ಯುದ್ಧ ಮಾಡಿದರು. ದೈತ್ಯರಿಂದ ಆದಿತ್ಯರು ಪರಾಜಿತರಾಗುತ್ತಾ ಹೋದರು. ವೀರಭದ್ರನೂ ತಾರಕನ ಹೊಡೆತದಿಂದ ಬಿದ್ದನು; ವಿಷ್ಣುವೂ ಸೋತನು. ಆಗ ಸ್ಕಂದನು ತಾರಕನನ್ನಿದಿರಿಸಿ ಪರಾಕ್ರಮದಿಂದ ಹೋರಾಡಿದನು. ಆಗ ವಾಯುವು ಸ್ತಬ್ಧನಾದನು. ಸೂರ್ಯನು ನಿಷ್ಪ್ರಭನಾದನು. ಭೂಮಿ ನಡುಗಿತು. ಮಹಾಶಕ್ತಿಯಿಂದ ತಾರಕನು ಸ್ಕಂದನನ್ನು ಮೂರ್ಛೆಗೊಳಿಸಿದರೂ ಮತ್ತೆ ಎದ್ದು ರುದ್ರ ಶಕ್ತಿಯಿಂದ ಸ್ಕಂದನು ತಾರಕನನ್ನು ಕೊಂದನು. ದೈತ್ಯರಲ್ಲಿ ಅನೇಕರು ಸತ್ತರು, ಅನೇಕರು ಪಾತಾಳಕ್ಕೆ ಹೋಗಿ ತಲೆ ಮರೆಸಿಕೊಂಡರು. ಅನೇಕರು ಶರಣಾಗತರಾದರು. ಶಿವ–ಪಾರ್ವತಿ–ಹಿಮಾಲಯ–ಮೇನೆಯರು ಸಂತುಷ್ಟರಾಗಿ ಅಲ್ಲಿಗೆ ಹೋಗಿ ಸ್ಕಂದನನ್ನು ಎತ್ತಿಕೊಂಡು ಮುದ್ದಾಡಿದರು. ವಿಷ್ಣು–ಬ್ರಹ್ಮ–ಇಂದ್ರ–ನಾರದಾದಿ ದೇವರ್ಷಿಗಳು ಜಯಕಾರ ಹಾಕಿ ಕೃತಜ್ಞತೆ ಸಲ್ಲಿಸಿದರು. (ಶಿ.ಪು. ೨ನೆಯದಾದ ರುದ್ರ ಸಂಹಿತೆಯಲ್ಲಿ ನಾಲ್ಕನೆಯದಾದ ಕುಮಾರ ಖಂಡದ ೫೨ ಶ್ಲೋಕಗಳ ಸಾರ–ಪುಟ ೧೪೪).

ದೈತ್ಯರು ಸೋತು ಹೋದರೂ ಬಾಣಾಸುರನೆಂಬಾತನು ದೇವ ಪಕ್ಷಪಾತಿಯಾದ ಕ್ರೌಂಚಪರ್ವತವನ್ನು ಕೊಲ್ಲ ಹೋದಾಗ ಆ ಪರ್ವತಾತ್ಮನು ಸ್ಕಂದನ ಹತ್ತಿರ ಓಡಿ ಬಂದನು. ಆಗ ತಾರಕಾರಿ ಕಾರ್ತಿಕನು ಬಾಣನನ್ನು ಕೊಂದು ಕ್ರೌಂಚನನ್ನು ರಕ್ಷಿಸಿದ್ದೊಂದು ಉಪಕಥೆ. ಹಾಗೆ ರಕ್ಷಿಸಿದ ಬಳಿಕ ಕಾರ್ತಿಕೇಯನು ಆ ಸ್ಥಳದಲ್ಲಿ ಪ್ರತಿಜ್ಞೇಶ್ವರ, ಕಪಾಲೇಶ್ವರ. ಕುಮಾರೇಶ್ವರ ಎಂಬ ಮೂರು ಲಿಂಗಗಳನ್ನು ಸ್ಥಾಪಿಸಿದನು; ಸುರಜಯ ಸ್ಮಾರಕವಾಗಿ ಸ್ತಂಭೇಶ್ವರ ಲಿಂಗವನ್ನೂ ಪ್ರತಿಷ್ಠಾಪಿಸಿದನು. ಅನಂತರ ಮಹಾಶೇಷನ ಮಗನಾದ ಕುಮುದನೆಂಬ ನಾಗನು ಪ್ರಲಂಬಾಸುರನ ಕಾಟ ತಾಳಲಾರದೆ ಗುಹನನ್ನು ಮೊರೆವೊಕ್ಕನು. ಅಯುತ ಬಲ ಸಂಪನ್ನನಾದ ಆ ಪ್ರಲಂಬಾಸುರನನ್ನು ತನ್ನ ಶಿವಶಕ್ತಿಯಿಂದ ಸೇನಾ ಸಮೇತವಾಗಿ ಸ್ಕಂದನು ಸುಟ್ಟು ಬೂದಿಮಾಡಿದನು.

## –೨೨–

# ಗಣೇಶೋಪಾಖ್ಯಾನ

ರುದ್ರನು ದಿನಕ್ಕೊಮ್ಮೆ ಮನೆಗೆ ಬರುವ ಲೋಕಾಚಾರ ಸಂಪನ್ನ. ರುದ್ರಾಣಿಯು ಸ್ನಾನ ಮಾಡುತ್ತಿರುವ ಹೊತ್ತೇ ಅದಾಗಿರುತ್ತಿತ್ತು. ರುದ್ರಗಣಗಳು ಮನೆಗಾವಲಿಗಿದ್ದರೂ ರುದ್ರನ ಹೆಸರಿಂದ ಬಂದವರನ್ನು ಒಳಗೆ ಬಿಡುತ್ತಿದ್ದರು. ಇದರ ಫಲ ತನ್ನ ಸೇವಿಕೆಯೊಬ್ಬನ ಆಲೋಚನೆಯಂತೆ ಶಿವೆಯು ತನ್ನ ಮೈಮಣ್ಣಿಂದ ಒಂದು ದಿನ ಗಣೇಶ ಮೂರ್ತಿಯನ್ನು ಮಾಡಿ ಅವನನ್ನು ಮಗನನ್ನಾಗಿ ಸ್ವೀಕರಿಸಿ ಬಾಗಿಲು ಕಾಯಲು ನಿಯಮಿಸಿದಳು. ಅವನ ಕೈಗೆ ಅವಳಿತ್ತ ಬೆತ್ತ ಯಾ ದೊಣ್ಣೆ ರುದ್ರನ ಶಕ್ತಿಯಾದ ಅಂಬಿಕೆಯ ಅಜಯ್ಯತೆಯನ್ನು ಹೊಂದಿತ್ತು. ಯಥಾಪೂರ್ವ ಒಂದು ದಿನ ರುದ್ರ ಬಂದ. "ಈ ಬೆತ್ತದ ಮಾಸ್ತರ್ ಯಾರು?" ಎಂದು ಕೇಳಿದ. ಸಾವಿರಾರು ರುದ್ರಗಣಗಳು ತಮಗೆ ಗೊತ್ತಿಲ್ಲವೆಂದೂ, ಎದುರು ಬಿದ್ದರೆ ತಮ್ಮನ್ನೆಲ್ಲಾ ಬಡಿದೋಡಿಸುವನೆಂದೂ ಹೇಳಿದಾಗ ವಿಷ್ಣು, ಬ್ರಹ್ಮ, ಇಂದ್ರಾದಿ ದೇವತೆಗಳನ್ನು ಸೈನ್ಯ ಸಮೇತವಾಗಿ ರುದ್ರನು ಬರಹೇಳಿದನು. ಅವರು ಚಕ್ರ, ಬ್ರಹ್ಮಾಸ್ತ್ರ, ವಜ್ರಾಸ್ತ್ರಾದಿಗಳನ್ನು ಬಿಟ್ಟರೆ ಅವೆಲ್ಲವನ್ನೂ ಬಾಲ ಗಣೇಶನು ತನ್ನ ಕೋಲಿನಿಂದ ಬಡಿದು ಮುರಿದು ಹಾಕಿದನು. ರುದ್ರನು ಆಶ್ಚರ್ಯಚಕಿತನಾದನು. ಇಷ್ಟರಲ್ಲಿ ಗಣೇಶನ ಸಮಾಚಾರವನ್ನು ಮೃಡಾಣಿಯ ಸೇವಿಕೆಯರ ಮೂಲಕ ಮೃಡನು ತಿಳಿದು ಕೊಂಡನು. ಆದರೆ ಅವಳು ಹೊರಗೆ ಬರಲೇ ಇಲ್ಲ. ಮೂರು ಮೂರು ಸಲ ಗಣಪತಿಗೆ ರುದ್ರನು ಹಠವನ್ನು ಬಿಡಲು ಹೇಳಿ ಕಳುಹಿದನು. ಆದರೆ ಗಣ ರಾಜನು ಜಪ್ಪಯ್ಯ ಎನ್ನಲಿಲ್ಲ. ಹಿಡಿದ ಪಟ್ಟನ್ನು ಬಿಡಲಿಲ್ಲ–ರುದ್ರನೇ ಬಂದರೂ ಒಳಗೆ ಬಿಡೆನೆಂದನು. ಅವನಮ್ಮನ ಆಜ್ಞೆಯೇ ಹಾಗಿತ್ತು. ಗಂಡನು ಎಲ್ಲೆಲ್ಲಾದರೂ ತಿರುಗಾಡಿ ಹೊತ್ತುಗೊತ್ತಿಲ್ಲದೆ ಮನೆಗೆ ಬರುತ್ತಿದ್ದುದು ಅವಳಿಗೆ ಸರಿಯೆನ್ನಿಸುತ್ತಿದ್ದಿಲ್ಲ. ಆದ್ದರಿಂದಲೇ ಅವನಿಗೆ ಬುದ್ಧಿಗಲಿಸಲು ಬುದ್ಧಿಗೆ ಅಧಿದೈವತ ಆಗುವಂತೆ ಗಣೇಶನನ್ನು ತನ್ನ ಪ್ರತಿನಿಧಿಯನ್ನಾಗಿ ಬೆತ್ತಕೊಟ್ಟು ಅವಳು ನಿಲ್ಲಿಸಿದ್ದಳು. ರುದ್ರನು ಕ್ರುದ್ಧನಾಗಿ ತ್ರಿಶೂಲವನ್ನೆಸೆದು ಗಣಪತಿಯ ತಲೆಯನ್ನು ಹಾರಿಸಿದನು. ಅದರಿಂದ ಮತ್ತಷ್ಟು ಕ್ರುದ್ಧಳಾದ ಪಾರ್ವತಿ ಚಂಡಿಯ ಅವತಾರ ತಾಳಿ ದೇವ–ದಾನವ–ಮಾನವ ಭೇದವಿಲ್ಲದೆ ತ್ರಿಲೋಕಗಳ ಚರಾಚರಗಳನ್ನು ಪ್ರಲಯಾಗ್ನಿಯಿಂದ ಸುಡಲಾರಂಭಿಸಿದಳು. ಅದರ ಶಕ್ತಿಯು ಅವ್ಯಕ್ತ; ಯಾರ ಕೈಗೂ ಸಿಗದು, ಅದಕ್ಕೆ ಯಾವ ಅಸ್ತ್ರವೂ ಸರಿದೊರೆಯಾಗಲಿಲ್ಲ. ನಾರದಾದಿ ಮುನಿಗಳೂ ವಿಷ್ಣುಬ್ರಹ್ಮೇಂದ್ರರೂ ಸಂಧಾನ

ಮಾಡಹೋದರು. "ಮಗ ಬದುಕಿದ ಮೇಲೆ ಸಂಧಾನ" ಎಂದು ಚಂಡಿಯು ಗುಡುಗಿದಳು. ಶಿವನು ಎಲ್ಲರ ಪ್ರಾರ್ಥನೆಯಂತೆ ಉತ್ತರಕ್ಕೆ ತಲೆ ಹಾಕಿ ಮಲಗಿದ ಗಜವೊಂದರ ತಲೆಯನ್ನು ತಂದು ಗಣೇಶನ ಮುಂಡಕ್ಕೆ ಜೋಡಿಸಿ. ಅವನನ್ನು ಮತ್ತಷ್ಟು ಮುದ್ದಾಗಿ ಮಾಡಿ ಅವನನ್ನು ಸ್ತುತಿಸುತ್ತಾ ಅವನಿಗೆ ಕೈಮುಗಿಯುತ್ತಾ ತ್ರಿಮೂರ್ತಿಗಳೂ ಬ್ರಹ್ಮರ್ಷಿಗಳೂ ಶಿವಗಣಕೋಟಿಗಳೂ ಪಾರ್ವತಿಯಿದ್ದೆಡೆಗೆ ಹೋದರು; ಇನ್ನು ಮುಂದೆ ಜಗತ್ತಿನಲ್ಲಿ ಇವನಿಗೇ ಸರ್ವಕಾಲಗಳಲ್ಲೂ ಅಗ್ರಪೂಜೆ ಎಂದರು. ಆಗ ಪ್ರಸನ್ನೆಯಾದ ಅಪರ್ಣಾ ದೇವಿಯು ಪ್ರಲಯಾಗ್ನಿಯನ್ನು ಹಿಂದೆಗೆದುಕೊಂಡು ತ್ರೈಲೋಕ್ಯವನ್ನು ಉಳಿಸಿದಳು. ಶಿವಭಕ್ತ ಶ್ರೇಷ್ಠನಾದ ಹರಿಯು ತನಗಿಂತಲೂ ಮೊದಲು ಗಣೇಶ ಪೂಜೆ ನಡೆಯಲಿ ಎಂದು ಲೋಕಗಳಿಗೆ ಆಜ್ಞಾಪಿಸಿದನು. ಅವನೂ ಬ್ರಹ್ಮನೂ ರುದ್ರನೂ ಆಗಲೇ ಗಣೇಶ ಪೂಜೆಯನ್ನು ಮಾಡಿ ಅವನೇ ಸರ್ವಗಣಾಧಿನಾಥನೆಂದು ಘೋಷಿಸಿದರು. ಹರಿ–ವಿಧಿ–ರುದ್ರಗಣಗಳೆಲ್ಲಾ ಸಂತೋಷದಿಂದ ಘೋಷಣಾನುಸಾರ ನಡೆದುಕೊಳ್ಳತೊಡಗಿದರು. ಸ್ಕಂದನ ತಮ್ಮ ಗಣೇಶನೀಗ ಸಗುಣ ಬ್ರಹ್ಮತ್ವದ ಕೇಂದ್ರಬಿಂದು ಅಥವಾ ರುದ್ರ ಸಮಾನ ಎನ್ನಿಸಿದನು. ಶಿವ–ಶಿವೆಯರು ಆನಂದದಿಂದ ಗಣೇಶನನ್ನು ಮುದ್ದಾಡಿದರು.

ಕಾಲ ಸಂದ ಹಾಗೆ ಸ್ಕಂದನೂ ಗಣೇಶನೂ ಪ್ರಾಯ ಪ್ರಬುದ್ಧರಾಗುತ್ತಾ ಹೋದರು. ಇಬ್ಬರಿಗೂ ಮದುವೆ ಮಾಡಬೇಕಾಯಿತು. ಅದಕ್ಕೆ ಅವರ ಮಾತಾಪಿತೃಗಳು ಯಾರು ಮೊದಲು ಭೂಪ್ರದಕ್ಷಿಣೆಮಾಡಿ ಬರುವರೋ ಅವರಿಗೆ ಮೊದಲು ಮದುವೆ ಎಂಬ ಶರ್ತವನ್ನು ಹಾಕಿದರು. ಪಾಪ, ತಾರಕ ಧ್ವಂಸಿಯು ಪ್ರಾಮಾಣಿಕವಾಗಿ ಭೂಮಿಯನ್ನು ಸುತ್ತಲು ಹೊರಟನು. ಗಣೇಶನಾದರೋ ತನ್ನ ವಿಘ್ನೇಶ್ವರತ್ವದ ಬುದ್ಧಿ ಸಾಮರ್ಥ್ಯದಿಂದ ನಿಮಿಷಾರ್ಧದಲ್ಲಿ ತಂದೆ ತಾಯಿಯರನ್ನು ಕುಳಿತುಕೊಳ್ಳಹೇಳಿ ಅವರನ್ನು ಪೂಜಿಸಿ ಅವರಿಗೆ ಏಳು ಸಲ ಪ್ರದಕ್ಷಿಣ–ನಮಸ್ಕಾರಗಳನ್ನು ಮಾಡಿ ಎದುರು ನಿಂತನು. ಅದೇ ಭೂಪ್ರದಕ್ಷಿಣೆ ಎಂದು ಶ್ರುತಿ–ಸ್ಮೃತಿ–ಶಿಷ್ಟಾಚಾರಗಳ ಆಧಾರವನ್ನಿತ್ತು ಮಾತಾಪಿತೃಗಳನ್ನು ಒಪ್ಪಿಸಿದ ಗಣೇಶನು ಅವರಿಂದ ಪೂಜಿತನಾಗಿ ಚತುರ್ವದನನಾಗಿ ಅವರೇ ಹೋಗಿ ವಿಶ್ವರೂಪ ರಾಜನ ಮಗಳಂದಿರಿಬ್ಬರನ್ನು ತಂದು ಮದುವೆ ಮಾಡುವಂತೆ ಯೋಜಿಸಿ ಬಿಟ್ಟನು! ಆ ತ್ರಿಪುರ ಸುಂದರಿಯರ ಹೆಸರುಗಳು ಸಿದ್ಧಿ (Success) ಮತ್ತು ಬುದ್ಧಿ (Wisdom) ಎಂದು. ಅವನಿಗೆ ಸಿದ್ಧಿಯಲ್ಲಿ ಕ್ಷೇಮನೆಂಬ ಸುತನೂ ಬುದ್ಧಿಯಲ್ಲಿ ಲಾಭನೆಂಬ ಪುತ್ರನೂ ಜನಿಸಿದರು. ಆಗ ಭೂಪ್ರದಕ್ಷಿಣೆಯನ್ನು ಸಾಕ್ಷಾತ್ತಾಗಿ ಮಾಡಿ ಬಂದ ಕುಮಾರನು ಬೇಡವೆಂದರೂ ಕೇಳದೆ ಸಿಟ್ಟಿನಿಂದ ಕ್ರೌಂಚ ಪರ್ವತದಲ್ಲಿ ಹೋಗಿ ಆಜನ್ಮ ಬ್ರಹ್ಮಚರ್ಯೆಯ ವ್ರತವನ್ನು ಕೈಕೊಂಡನು.

–೨೩–

# ತ್ರಿಪುರ ದಹನ

ಸ್ಕಂದ ಕೊಂದ ತಾರಕನಿಗೆ ತಾರಕಾಕ್ಷ, ವಿದ್ಯುನ್ಮಾಲಿ, ಕಮಲಾಕ್ಷ ಎಂಬ ಮೂವರು ಮಕ್ಕಳಿದ್ದರು. ಅವರು ಸಾವಿರಾರು ವರ್ಷಗಳ ಕಾಲ ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ಅವನಿಂದ ಮೂವರೂ ಒಂದೊಂದು ವರವನ್ನು ಪಡೆದರು. ಆ ವರಗಳ ಪ್ರಕಾರ, ತಾರಕಾಕ್ಷನಿಗೆ ಚಿನ್ನದ, ವಿದ್ಯುನ್ಮಾಲಿಗೆ ಬೆಳ್ಳಿಯ ಮತ್ತು ಕಮಲಾಕ್ಷನಿಗೆ ವಜ್ರದಂಥ ಕಬ್ಬಿಣದ ಮೂರು ಅಭೇದ್ಯವಾದ ಕೋಟೆಯುಳ್ಳ ನಗರಗಳನ್ನು ಬ್ರಹ್ಮನು ಮಾಡಿಸಿಕೊಟ್ಟನು. ಅವುಗಳನ್ನು ರಚಿಸಿದವನು ಮಯನೆಂಬ ದಾನವ ಶಿಲ್ಪೀಶ್ವರ. ಏಕೆಂದರೆ ಆ ಅಸುರತ್ರಯವು ತಾರಕ ಸಂತಾನ. ತಾರಕನು ಅಸುರ. ಅನುಕ್ರಮವಾಗಿ ಆ ದುರ್ಗಗಳು ಸ್ವರ್ಗ, ಆಕಾಶ, ಭೂಮಿಗಳಲ್ಲಿ ರಚಿತವಾಗಿದ್ದವು. ತಮ್ಮ ಮೂವರು ಪುತ್ರರೊಡನೆ ಬ್ರಹ್ಮನೇ ಹೊಕ್ಕು ಪವಿತ್ರಗೊಳಿಸಿದ ಆ ಅರಮನೆಗಳನ್ನು ಆ ಸೋದರರು ಪ್ರವೇಶಿಸಿ ವಾಸಮಾಡಲಾರಂಭಿಸಿದರು. ಅಲ್ಲಿ ಅವರು ರುದ್ರಾಲಯಗಳನ್ನು ಕಟ್ಟಿಸಿದರು; ಅಲ್ಲಿ ವಾಸಿಸುವ ಅಸುರ ದಂಪತಿಗಳ ಆ ನಗರಸ್ಥ ಗೃಹವೊಂದೊಂದರಲ್ಲೂ ಒಂದೊಂದು ರುದ್ರಾಲಯ! ವೇದಾಧ್ಯಯನ ಶಾಲೆಗಳು ಉದಯವಾದವು. ಕೈಲಾಸ ಶಿಖರೋಪಮವಾದ ಪ್ರಾಸಾದ ಶಿಖರಗಳು ಸೂರ್ಯಪ್ರಕಾಶದಂತೆ ದೇವತೆಗಳ ಕಂಗಳನ್ನು ಕೋರೈಸಿದವು. ಅಜಶಿವ ಪೂಜೆಗಳು ಪ್ರತಿದಿನ ನಡೆದವು. ಚತುರಂಗ ಬಲ ಸಮೇತರಾದ ದಿವ್ಯಾಸ್ತ್ರ ಸಂಪನ್ನ ದೈತ್ಯೇಂದ್ರರು ದಿನೇ ದಿನೇ ಬಲಿಷ್ಠರಾಗುತ್ತಾ ಹೋಗುತ್ತಿದ್ದು, ಅವರ ಪ್ರಭಾವವು ಇಂದ್ರಾದಿ ದೇವತೆಗಳನ್ನು ಸುಡತೊಡಗಿತು. ಅವರು ಬ್ರಹ್ಮನ ಹತ್ತಿರ ಹೋಗಿ ಏನು ಮಾಡಬೇಕೆಂದು ಕೇಳಿದಾಗ ಅವನು ಶ್ರೀ ಶಂಕರನೊಬ್ಬನೇ ತ್ರಿಪುರ ದಹನ ಸಮರ್ಥನಾದುದರಿಂದ ಅವನಲ್ಲಿ ಹೋಗಿ ಪ್ರಾರ್ಥಿಸಿರಿ ಎಂದು ಬುದ್ಧಿ ಹೇಳಿದನು. ಅವರು ರುದ್ರನ (ಶಂಕರನ) ಹತ್ತಿರ ಹೋಗಿ 'ನೀನೇ ಸರ್ವಸ್ವ, ನೀನೇ ನಿರ್ಗುಣ ಶಿವ, ನೀನೇ ಸಗುಣ ವಿಷ್ಣು, ನೀನು ತಾರಕ ಪುತ್ರರಿಂದ ನಮ್ಮನ್ನು ರಕ್ಷಿಸಬೇಕು' ಎಂದು ಅಂಗಲಾಚಿ ಬೇಡಿಕೊಂಡರು. ಅವರ ಸ್ತುತಿಯ ಪ್ರಕಾರ, ರುದ್ರ ದೇವತೆಗಳಲ್ಲಿ ಇಂದ್ರ, ಗ್ರಹಗಳಲ್ಲಿ ಸೂರ್ಯ, ಲೋಕಗಳಲ್ಲಿ ಸತ್ಯಲೋಕ, ನದಿಗಳಲ್ಲಿ ದೇವ ನದಿ (ಅಲಕನಂದೆ), ಬಣ್ಣಗಳಲ್ಲಿ ಬಿಳಿಯ, ಸರಸ್ಸುಗಳಲ್ಲಿ ಮಾನಸ ಸರೋವರ, ಗಿರಿಗಳಲ್ಲಿ ಹಿಮಾಲಯ, ಗೋವುಗಳಲ್ಲಿ ಕಾಮಧೇನು, ಸಮುದ್ರಗಳಲ್ಲಿ ಹಾಲುಗಡಲು, ಲೋಹಗಳಲ್ಲಿ ಬಂಗಾರ, ಜಾತಿಯಲ್ಲಿ ಬ್ರಾಹ್ಮಣ, (ಬ್ರಹ್ಮಜ್ಞಾನಿ) ನರರಲ್ಲಿ ದೊರೆ,

ಮುಕ್ತಿ ಕ್ಷೇತ್ರಗಳಲ್ಲಿ ಕಾಶಿ, ತೀರ್ಥಗಳಲ್ಲಿ ತೀರ್ಥ ರಾಜ, ಕಲ್ಲುಗಳಲ್ಲಿ ಸ್ಫಟಿಕ, ಹೂವುಗಳಲ್ಲಿ ತಾವರೆ, ವಾಗ್ಮಿತ್ವದಲ್ಲಿ ಕವಿಯಾದ ಶುಕ್ರ, ಪಕ್ಷಿಗಳಲ್ಲಿ ಶರಭ, ಹಿಂಸ್ರಜಂತುಗಳಲ್ಲಿ ಸಿಂಹ, ಶಿಲೆಗಳಲ್ಲಿ ಸಾಲಿಗ್ರಾಮ (ಶಾಲಗ್ರಾಮ), ಪೂಜ್ಯ ವಸ್ತುಗಳಲ್ಲಿ ನರ್ಮದಾಲಿಂಗ, ಪಶುಗಳಲ್ಲಿ ನಂದಿ, ವೇದೋಪನಿಷದ್ರೂಪನಾದ ರುದ್ರನು ಯಾಜ್ಞಿಕರಿಗೆ ಅತ್ಯುಚ್ಚ ದೇವತೆ; ಚಂದ್ರಶೇಖರನಾದ ಆತನು ಪ್ರತಾಪಿಗಳಲ್ಲಿ ಅಗ್ನಿ, ಶೈವರಲ್ಲಿ ಅಚ್ಯುತ, ಪುರಾಣಗಳಲ್ಲಿ ಮಹಾಭಾರತ, ಅಕ್ಷರಗಳಲ್ಲಿ ಮಕಾರ, ಬೀಜಮಂತ್ರಗಳಲ್ಲಿ ಪ್ರಣವ (ಓಂಕಾರ), ದಾರುಣ ವಸ್ತುಗಳಲ್ಲಿ ವಿಷ, ಆತ್ಮಗಳಲ್ಲಿ ಪರಮಾತ್ಮ, ಇಂದ್ರಿಯಗಳಲ್ಲಿ ಮನಸ್ಸು, ದಾನಗಳಲ್ಲಿ ಅಭಯ, ಪವಿತ್ರ ದ್ರವಗಳಲ್ಲಿ ನೀರು. ಜೀವನೌಷಧಿಗಳಲ್ಲಿ ಅಮೃತ, ಲಾಭಗಳಲ್ಲಿ ಪುತ್ರಲಾಭ, ವೇಗವಂತರಲ್ಲಿ ವಾಯು, ನಿತ್ಯಕರ್ಮಗಳಲ್ಲಿ ಸಂಧ್ಯೋಪಾಸನೆ, ಯಜ್ಞಗಳಲ್ಲಿ ಅಶ್ವಮೇಧ. ಯುಗಗಳಲ್ಲಿ ಕೃತ (ಸತ್ಯ) ಯುಗ, ೮ ಉಪವೇದಿಗಳಲ್ಲಿ ಪುಷ್ಯನು, ತಿಥಿಗಳಲ್ಲಿ ಅಮಾವಾಸ್ಯೆ, ಋತುಗಳಲ್ಲಿ ವಸಂತ, ಹಬ್ಬಗಳಲ್ಲಿ ಸಂಕ್ರಾಂತಿ, ಹುಲ್ಲುಗಳಲ್ಲಿ ದರ್ಭೆ, ದೊಡ್ಡ ಮರಗಳಲ್ಲಿ ಆಲದ ಮರ, ಯೋಗಗಳಲ್ಲಿ ವ್ಯತೀಪಾತ, ಬಳ್ಳಿಗಳಲ್ಲಿ ಸೋಮ, ಬುದ್ಧಿಗಳಲ್ಲಿ ಧರ್ಮಬುದ್ಧಿ, ಸಂತರಿಗೆ ಸತಿ, ಶುದ್ಧ ಸಾಧಕರಿಗೆ ಪ್ರಾಣಾಯಾಮ, ಜ್ಯೋತಿರ್ಲಿಂಗಗಳಲ್ಲಿ ವಿಶ್ವೇಶ್ವರ, ಬಂಧುಗಳಿಗೆ ಧರ್ಮ, ಸರ್ವಾಶ್ರಮಾತೀತ (ಯಾ ಆಶ್ರಮಗಳಲ್ಲಿ ಸನ್ಯಾಸಾಶ್ರಮ), ಪುರುಷಾರ್ಥಗಳಲ್ಲಿ ಮೋಕ್ಷ, ಏಕಾದಶ ರುದ್ರರಲ್ಲಿ ನೀಲಲೋಹಿತ, ದ್ವಾದಶಾದಿತ್ಯರಲ್ಲಿ ವಾಸುದೇವ, ವಾನರರಲ್ಲಿ ಆಂಜನೇಯ, ಯಜ್ಞಗಳಲ್ಲಿ ಜಪಯಜ್ಞ, ಶಸ್ತ್ರಧಾರಿಗಳಲ್ಲಿ ಶ್ರೀರಾಮ, ಗಂಧರ್ವರಲ್ಲಿ ಚಿತ್ರರಥ, ಅಷ್ಟವಸುಗಳಲ್ಲಿ ಅಗ್ನಿ, ಮಾಸಗಳಲ್ಲಿ ಅಧಿಮಾಸ (ಅಧಿಕ ಮಾಸ), ವ್ರತಗಳಲ್ಲಿ ಅನಂತ ಚತುರ್ದಶಿ, ಗಜೇಂದ್ರರಲ್ಲಿ ಐರಾವತ, ಸಿದ್ಧರಲ್ಲಿ ಕಪಿಲ, ನಾಗಗಳಲ್ಲಿ ಅನಂತ (ಮಹಾಶೇಷ), ಪಿತೃದೇವತೆಗಳಲ್ಲಿ ಅರ್ಯಮ, ಜ್ಯೋತಿಷಿಗಳಿಗೆ ಕಾಲ, ದೈತ್ಯರಲ್ಲಿ ಬಲಿಚಕ್ರವರ್ತಿ; ಬಹಳ ಹೇಳಿ ಪ್ರಯೋಜನವಿಲ್ಲ; ರುದ್ರನು ತನ್ನ ಏಕಾಂಶದಿಂದ ಸರ್ವಜಗತ್ತನ್ನೂ ಆಧಾರವಾಗಿ ನಿಂತು ಪೋಷಿಸುತ್ತಾನೆ; ಅದರ ಒಳಗೂ ಅವನೇ ಹೊರಗೂ ಅವನೇ!

ದೇವತೆಗಳ ಸ್ತುತಿಗೊಲಿದ ರುದ್ರರೂಪಿ ಶಿವನು ದೇವತೆಗಳನ್ನು ತಾರಕ ಪುತ್ರರು ಕಾಡಿಸುವುದನ್ನು ಕೇಳಿ, ಅವರು ತನ್ನ ಭಕ್ತರಾದುದರಿಂದ ತಾನು ಅವರನ್ನು ಕೊಲ್ಲುವುದು ಕೃತಘ್ನತೆ ಎನ್ನಿಸುವುದರಿಂದ ವಿಷ್ಣುವನ್ನು ಕೇಳಿರಿ ಎಂದು ಹೇಳಿ ಕಳುಹಿದನು. ವಿಷ್ಣುವು ಅವರಿಗೆ ಯಜ್ಞ ಮಾಡಲು ಹೇಳಿದನು. ಅವರು ಮಾಡಿದರು. ಆ ಯಜ್ಞಕುಂಡದಿಂದ ಶೂಲ, ಶಕ್ತಿ, ಗದೆಗಳನ್ನು ಹಿಡಿದ ಸಾವಿರಾರು ಮಹಾಕಾಯ ಭೂತಗಳು ಎದ್ದುಬಂದರು. ಅವರು ವಿಷ್ಣುವಿನ ಆಜ್ಞೆಯಂತೆ ತ್ರಿಪುರಗಳನ್ನು ಹಾಳು ಮಾಡಲು ಹೊರಟರು. ತ್ರಿಪುರಗಳನ್ನು ಹೊಕ್ಕ ಕೂಡಲೇ ಅವರು ಭಸ್ಮೀಭೂತರಾದರು. ಅಳಿದುಳಿದ ಕೆಲವರು ಬಂದು ವಿಷ್ಣುವಿಗೆ ಇದನ್ನು ತಿಳಿಸಿದರು. ಆಗ ನಾರಾಯಣನು ತನ್ನ ಮಾಯೆಯಿಂದ ತ್ರಿಪುರಾಸುರರಿಗೆ ಧರ್ಮವಿಘ್ನವನ್ನು ಮಾಡಲು ಹೊರಟರು.

ಅದಕ್ಕಾಗಿ "ಅರಿಹನ್" ಎಂಬ ಬೋಳು ಮಂಡೆಯ ಮಹಾ ತೇಜಸ್ವಿಯಾದ ಸನ್ಯಾಸಿಯನ್ನು ಸೃಷ್ಟಿಸಿ ಅವನ ಕೈಯಲ್ಲಿ ಒಂದು ಗುಂಫಿ ಪಾತ್ರೆಯನ್ನೂ, ಪುಂಜಿಕೆಯನ್ನೂ ಕೊಟ್ಟು ತ್ರಿಪುರೇಶರಿಗೂ ಅವರ ಪ್ರಜೆಗಳಿಗೂ ಅಧರ್ಮೋಪದೇಶ ಮಾಡಲು ಕಳುಹಿಸಿಕೊಟ್ಟನು. ಅವನು ಪುಂಜಿಕೆಯನ್ನಲ್ಲಾಡಿಸುತ್ತಾ ಧರ್ಮ ಧರ್ಮ! ಎಂದು ಕೂಗುತ್ತಾ ಹೊರಟನು. ಹೋಗಿ ಅವನು ತನ್ನ ಶಿಷ್ಯರೊಡನೆ ತ್ರಿಪುರ ನಗರದ ಉಪವನದಲ್ಲಿ ಕುಳಿತನು, ಆದರೆ ಶಿವಾರ್ಚನ ಪ್ರಭಾವದಿಂದ ಅವನ ಮಾಯೆ ಫಲಿಸಲಿಲ್ಲ. ಯಾರೂ ಅವನನ್ನು ಮಾತಾಡಿಸಲಿಲ್ಲ. ಹಾಗೇ ಹಿಂದಿರುಗುವಾಗ ವಿಷ್ಣುವಿನ ಕಡೆಯಿಂದ ನಾರದ ಮುನಿ ಬಂದು ಅವನನ್ನು ಮತ್ತೆ ತ್ರಿಪುರಕ್ಕೆ ಕರೆದೊಯ್ದು ತ್ರಿಪುರೇಶ್ವರನ ಹತ್ತಿರ ತಾನು ಅರಿಹನ್ನನಿಂದ ದೀಕ್ಷಿತನಾಗಿದ್ದೇನೆ ಎಂದು ಹೇಳಿ ಅವನನ್ನು ನಂಬಿಸಿ ಅವನೂ ಅವನ ಪ್ರಜೆಗಳೂ ಈ ಹೊಸ "ಧರ್ಮ"ದ ದೀಕ್ಷೆಯನ್ನು ತೆಗೆದುಕೊಳ್ಳುವಂತೆ ಮಾಡಿದನು.

ಈ ಹೊಸ ಧರ್ಮ ಅವೈದಿಕ, ಬೌದ್ಧ, ಚಾರ್ವಾಕ, ಹಾಲಿವುಡ್ ಆಚಾರ. ಈ ವರೆಗೆ ಇಂಥ ಸಂಮಿಶ್ರಣ ಬಲದಿಂದ ಭಾರತ (೧೯೪೭ ರಿಂದ ೧೯೮೪) ಏನಾಗಿ ಮಾರ್ಪಡುತ್ತಿದೆ ಎಂಬುದು ಸ್ಪಷ್ಟ. No ritualism or Extreme ritualism; Spiritual ritualism or Voluptuos ritualism- ಸೋಮಾರಿತನದ ನಿಷ್ಕರ್ಮ ಅತಿ ಸನಾತನ ಕರ್ಮಜಾಲ; ಆಧ್ಯಾತ್ಮಿಕ ಕರ್ಮ, ಪಂಚೇಂದ್ರಿಯ ಸಂತರ್ಪಣದ ಕರ್ಮ–ಎಂಬೀ ನಾಲ್ಕು ಪ್ರಜ್ಞಾಸ್ತರಗಳಲ್ಲಿ ಜಗತ್ತು ಒಲೆಯುತ್ತಾ ಬಂದಿದೆ. ಅರಿಹಂತಾರನ ಪ್ರಚಾರವು ಸಾರತಃ ದಾಮೋದರ ಗುಪ್ತನ "ಕುಟ್ಟನೀಮತದ" ಸಾರಸರ್ವಸ್ವ. ಅದರಿಂದ ತ್ರಿಪುರ ಸಂಸ್ಕೃತಿ–ನಾಗರಿಕತೆಗಳು ಆತ್ಮಹತ್ಯೆ ಮಾಡಿಕೊಳ್ಳುವ ಹೀನ ದೀನ ಸ್ಥಿತಿಗೆ ಇಳಿದವು. ಅರಿಹಂತನು ಆಧುನಿಕ ಪರಪ್ರತಾರಣ ಪಂಡಿತರ ಮೂಲಪುರುಷನೆನ್ನಬಹುದು. ತ್ರಿಪುರರ ಶಿವಪೂಜೆಯನ್ನೂ ಅವರಿಗೆ ತ್ಯಾಜ್ಯವೆಂದು ಮನಂಬುಗಿಸಿ ನೂರು ಗಬೆಲ್ಸರನ್ನು ನುಂಗಿದ, ಸಾವಿರ ಮೆಕೆಯ್ ವಿಲಿಯರನ್ನು ಅರಗಿಸಿಕೊಂಡ ಆ ರಜನೀಶ. ತ್ರಿಪುರರು ಪಾಪಿಗಳಾದ ಮೇಲೆ ಬ್ರಹ್ಮ ವಿಷ್ಣು ಮಹೇಂದ್ರ ನಾರದಾದಿಗಳು ಅವರು ಈಗ ವಧ್ಯರಾದರೆಂದು ಶಿವನಿಗೆ ತಿಳಿಸಿದರು. ಶಿವನು ವಿಷ್ಣುವು ಆ ಆತ ತಾಯಿಗಳನ್ನು ಕೊಲ್ಲಲಿ ಎಂದ. ಆಗ ವಿಷ್ಣ್ವಾದಿ ಸುರರೆಲ್ಲರೂ ಪೆಚ್ಚಾದರು. ಮತ್ತೆ ಅವರು ರುದ್ರನನ್ನು ಕಾಡಿದರು, ಅವನೊಪ್ಪಿದ. ಅಷ್ಟು ಹೊತ್ತಿಗೆ ಪಾರ್ವತಿ ಸ್ಕಂದನನ್ನು ಕರೆದುಕೊಂಡು ಬಂದು ಶಿವನನ್ನು ಮನೆಯೊಳಗೆ ಕರೆದುಕೊಂಡು ಹೋಗಿ ಬಿಟ್ಟಳು! ಅದರಿಂದ ಪುನಃ ಸಾತ್ವಿಕತೆ ಎಂಬುದರ ಪೂರ್ಣರೂಪಿಗಳಾದ ಹರಿಪ್ರಮುಖ ಸುರರು ನಿರ್ವಿಣ್ಣರಾದರು. ಅನಂತರ ಮತ್ತೆ ಬಾಗಿಲ ಹೊರಗೇ ನಿಂತು ದೈನ್ಯದಿಂದ ಶಿವಸ್ತೋತ್ರ ಮಾಡುತ್ತಾ ಆ ಸಜ್ಜನ ಮಹಾ ಸ್ತೋಮ ಬಹುಕಾಲ ಕಳೆಯಿತು. ಆ ಮೇಲೆ ಹೊರ ಬಂದ ಶಿವನು ತನಗೆ ಕ್ಷಾತ್ರ ಯುದ್ಧ ಸಾಧನಗಳೊಂದೂ ಇಲ್ಲ ಎಂದನು. ಆ ಕೂಡಲೇ ಬ್ರಹ್ಮಾದಿಗಳು ಹೃಷ್ಟರಾಗಿ ಅವುಗಳನ್ನೆಲ್ಲಾ ತಾವು ಈಗಿಂದೀಗ ಮಾಡುವೆವೆಂದರು.

ದೇವಶಿಲ್ಪಿ ವಿಶ್ವಕರ್ಮನು ತೇರನ್ನು ಈ ಪ್ರಕಾರ ಸಜ್ಜುಗೊಳಿಸಿದನು. ಅದು ಸರ್ವಲೋಕಮಯ ರಥ. ಅದರ ಎಡ–ಬಲ ಚಕ್ರಗಳಾಗಿ ನಿಂತವರು ಸೋಮ–ಸೂರ್ಯರು, ದ್ವಾದಶಾದಿತ್ಯರು ಬಲ ಚಕ್ರದ ಹಳಿಗಳಾದರು. ಷೋಡಶ ಕಲಾಯುತ ಚಂದ್ರರು ಎಡ ಚಕ್ರದ ಹಳಿಗಳಾದರು. ತೇರಿನೆಡಗಡೆಯ ಅಲಂಕಾರಗಳಾದವರು ಸಪ್ತರ್ಷಿಗಳು. ಆರು ಋತುಗಳು ಚಕ್ರನೇಮಿಗಳಾದವು. ಪುಷ್ಕರನು ಅಂತರಿಕ್ಷ; ಮಂದರನು ತೇರಗೂಡು. ಅಸ್ತಾದ್ರಿ ಉದಯಾದ್ರಿಗಳು ನೊಗಕ್ಕೆ ಕುದುರೆಗಳನ್ನು ಕಟ್ಟುವ ದಿಂಡುಗಳು. ತೇರ ಆಧಾರ ಫಲಕವಾಗಿ ನಿಂತದ್ದು ಮಹಾಮೇರು. ಕೇಶರಾಚಲಗಳು ಅದರ ಕೀಲುಗಳಾದವು. ಗಟ್ಟಿಯಾಗಿ ನಿಲ್ಲುವಂತೆ ಮಾಡುವ ಬೆಣೆಗಳಾದವು. ಸಂವತ್ಸರಗಳೇ ರಥದ ವೇಗ. ಅಯನಗಳು ಚಕ್ರಸಂಗಮಗಳು. ಮುಹೂರ್ತಗಳು ಸಾರಥಿಯ ಆಸನ. ಕಲೆಗಳು ತೇರಿನ ನಡುಪಟ್ಟಿಗಳಾದವು. ಕಾಲದ ಆ ಕಲೆಗಳ ಕಾಷ್ಠೆಗಳು ತೇರಿನ ಎದುರಿನ (ನೊಗದ ಮುಂದಿನ) ಕೊಕ್ಕು ಆದವು. ಕ್ಷಣಗಳು ಅಕ್ಷದಂಡ (Axis Rod). ನಿಮೇಷಗಳು (ಸೆಕೆಂಡುಗಳು) ಅಕ್ಷದಂಡವನ್ನು ಕೆಳಗಿನಿಂದ ನೊಗಕ್ಕೆ ಜೋಡಿಸುವ ದಿಂಡು. ನಿಮೇಷಾಂಶಗಳು ಆ ದಿಂಡಿನ ಎಡಬಲಗಳ ಹಲಗೆಗಳು. ಕಾಷ್ಠೆಯಾ ಒಂದು ಅಂಶವು ಕಲೆಯೊಂದರ 1/30 ಭಾಗ. ಕಲೆ = ೧.೬ ನಿಮಿಷಗಳು. ಕ್ಷಣ = ೪ ನಿಮಿಷಗಳು, ಆಕಾಶವು ರಥ–ರಕ್ಷಣೆಗೆ ಮಾಡಿದ ಲೋಹ ಕವಚ ಯಾ ಪಟ್ಟಿಗಳು. ಸ್ವರ್ಗ ಮೋಕ್ಷಗಳೇ ಧ್ವಜಗಳು. ಭ್ರಮಿಸುವ ಕಾಮಧೇನುಗಳೇ ನೊಗದ ತುದಿಗಳು. ಹೀಗೆ ರಥದ (ಗಾಡಿಯ) ಸ್ತಂಭವು ರೂಪಿತವಾಯ್ತು ಅದು ನೇಗಿಲ ಅತ್ತಿಯಂತಿತ್ತು. ಬುದ್ಧಿಯು ಆ ವ್ಯಕ್ತ ಪದಾರ್ಥಗಳ (ಬಿಡಿ ಭಾಗಗಳ) ಬೀಡಾದ ಕುಮುದಾಕರ. ಅಹಂಕಾರವು ಅದರ ಕೋನಗಳು; ಭೂತಗಳೇ ಸೈನ್ಯ. ಇಂದ್ರಿಯಗಳು ಭೂಷಣಗಳು. ಆ ಗಾಡಿಯ ಗತಿ ಎಂದರೆ ಶ್ರದ್ಧೆ. ವೇದದ ಷಡಂಗಗಳೂ ಭೂಷಣಗಳು. (ಸುವ್ರತಬೋಧಕಗಳಾದ ಪುರಾಣ, ನ್ಯಾಯಶಾಸ್ತ್ರ, ಮೀಮಾಂಸಾಶಾಸ್ತ್ರ, ಧರ್ಮಶಾಸ್ತ್ರಗಳೂ ಹಾಗೇ ಅಲಂಕಾರಗಳು) ಅವುಗಳೆಲ್ಲಾ ಬಲಿಷ್ಠವೂ, ಶ್ರೇಷ್ಠವೂ ಆಗಿದ್ದವು. ಆ ಸುವ್ರತಗಳು ಮಂತ್ರ. ಕಲಶ, ವರ್ಣ, ಪಾದ, ಆಶ್ರಮಗಳಿಂದ ಕೂಡಿದ್ದವು. ರಥಿಕನಾದ ಶಿವನಿಗೆ (ರುದ್ರನಿಗೆ) ಮಾಡಿಸಿದ ಆ ರಥಕ್ಕೆ ಅನಂತನು (ಆದಿಶೇಷನು) ಬಂಧ (ಹಗ್ಗ); ದಿಕ್ಕುಗಳೇ ಕಾಲುಗಳು–ಉಪದಿಕ್ಕುಗಳೂ ಕಾಲುಗಳು.

ಸೈನ್ಯವು ಹಾಲಾಹಲೋದ್ಭವವಾದದ್ದು. ವಾಯುಗಳು (ಮರುತ್ತುಗಳು) ವೇಗವಾಗಿ ರಥಕ್ಕೆ ದಾರಿ ಮಾಡಿಕೊಡುವವರು (Sappers and Miners). ವ್ಯಾಸಾದಿ ಮುನಿಗಳು ವಾಹನಗಳನ್ನು ಹತ್ತಿಕೊಂಡು ನಡೆಯಿಸುವವರು, ಗಂಟು ಮೂಟೆಗಳನ್ನು ಹೊತ್ತವರು! ಒಟ್ಟಿನಲ್ಲಿ ಮಹಾ ವೃಷಭದಂತೆ ತೋರುತ್ತಿದ್ದ ಆ ರಥವು ರುದ್ರಾದಿ ದೇವತೆಗಳೊಡನೆ ಚಲಿಸಲಾರಂಭಿಸಿದಾಗ, ವೇದಜಾತವಾದ ಕುದುರೆಗಳು ತಲೆಕೆಳಗಾಗಿ ಜರಿದುಬಿದ್ದವು. ಭೂಮಿಯು ನಡುಗಿತು. ಪರ್ವತಗಳು ತಳತಪ್ಪಿ ಜಾರಿದವು. ಮಹಾಶೇಷನು ಕಂಪಿಸಿ ಬೆವತು ಹೋದನು. ಭೂಮಿಯನ್ನು ಹೊತ್ತ ವೃಷೇಂದ್ರ ರೂಪಿಯಾದ ಧರಣೀಧರನು

ಎದ್ದು ಕೂಡಲೇ ರಥವನ್ನು ನಿಲ್ಲಿಸಿದನು. ಆದರೆ ಮರುಕ್ಷಣದಲ್ಲಿ ರಥದ ಭಾರವನ್ನು ತಾಳಲಾರದೆ ವೃಷಭೇಂದ್ರ ಮೊಣಕಾಲೂರಿ ಬಿಟ್ಟನು! ಆಗ ಬ್ರಹ್ಮ ಸ್ವಲ್ಪ ರಥ ನಿಲ್ಲಿಸಿದ; ಅನಂತರ ಕುದುರೆಗಳ ಕಡಿವಾಣವನ್ನು ಚುರುಕುಗೊಳಿಸಿದ. ರಥವು ತ್ರಿಪುರಗಳ ಹೊರವಲಯದಲ್ಲಿ ನಿಂತಿತು. ಆಗ ಶಿವನು "ನೀವೆಲ್ಲಾ ಪಶುಗಳಾಗಿ ನನಗೆ ಪಶುಪತಿತ್ವವನ್ನು ಕೊಟ್ಟರೆ ದೈತ್ಯ ಸಂಹಾರ ಸುಲಭ" ಎನ್ನಲು ಅವರು ಹಾಗೇ ಮಾಡಿದರು. ಆಮೇಲೂ ಮತ್ತೆ ವಿಘ್ನಬಂತು. ಶಿವಗಣಗಳು ರಥಕ್ಕಿಂತ ಮುಂದೆ ಧಾವಿಸಿದರು. ಅಲ್ಲದೆ, ಯುದ್ಧಕ್ಕೆ ಮೊದಲು ಗಣೇಶ ಪೂಜೆ ನಡೆಯಬೇಕಾಗಿತ್ತು. ಆ ಪೂಜೆ ನಡೆದೊಡನೆಯೇ ಗಣಗಳು ಹಿಂದಿರುಗಿ ರಥವನ್ನು ಹಿಂಬಾಲಿಸಿದರು. ಅನಂತರ ಶಿವನು ಬಾಣಬಿಟ್ಟು ತ್ರಿಪುರಾಧೀಶ ಸಮೇತ ತ್ರಿಪುರದಹನವನ್ನು ಕ್ಷಣಾರ್ಧದಲ್ಲಿ ಮಾಡಿ ಮುಗಿಸಿದನು. ತ್ರಿಪುರಾಧೀಶರು ಖಿನ್ನರಾದರೂ "ಸಾಯುವ ಮೊದಲು ಪ್ರತಿ ಯುಗದಲ್ಲೂ ನಮಗೆ ನಿನ್ನಿಂದಲೇ ಇಂಥ ಮರಣ ಬರಲಿ" ಎಂಬ ವರವನ್ನು ಬೇಡಿದರು. ಶಿವನದನ್ನಿತ್ತನು. ಅಲ್ಲಿದ್ದ ಮಯನೊಬ್ಬ ಸಾಯಲಿಲ್ಲ. ಶಿವನೊಡನೆ ಶಿವಲೋಕಕ್ಕೆ ಹಿಂದಿರುಗಿದ. ಅವನ ಶಿವಭಕ್ತಿ ಅಂಥದಿತ್ತು, ಅಚಲವಾಗಿತ್ತು.

–೨೪–

# ಜಲಂಧರ ಚರಿತ

ಒಂದು ಸಲ ಬೃಹಸ್ಪತಿಯೂ ಇಂದ್ರನೂ ಮಹಾ ದೇವನಿದ್ದಲ್ಲಿಗೆ ಹೋಗುತ್ತಿದ್ದಾಗ ಅವರನ್ನು ಪರೀಕ್ಷಿಸಲು ಆತನು ದಿಗಂಬರನೂ ಜಟಾಧಾರಿಯೂ ಆಗಿ ಹಾದಿಯಲ್ಲಿ ಎದುರಾದನು. ಆಗ ಇಂದ್ರನು ಅವನನ್ನು ಕುರಿತು "ಶಂಭುವು ಸ್ವಸ್ಥಾನದಲ್ಲಿದ್ದಾನೆಯೋ ಅಥವಾ ಎಲ್ಲಿಗಾದರೂ ಹೋಗಿರುವೆನೋ?" ಮೂರು ಸಲ ಕೇಳಿದರೂ ಆ ದಿಗಂಬರ ಉತ್ತರ ಕೊಡದಿದ್ದಾಗ ಅವನನ್ನು ಇಂದ್ರನು ತನ್ನ ವಜ್ರಾಯುಧದಿಂದ ಹೊಡೆಯ ಹೋಗಲು ಅವನ ತೋಳು ಸ್ತಂಭಿತವಾಯಿತು. ರುದ್ರನು ಕ್ರುದ್ಧನಾದನು. ಆಗ ಆ ದಿಗಂಬರನು ರುದ್ರನೆಂಬುದನ್ನು ತಿಳಿದ ಬೃಹಸ್ಪತಿಯು ರುದ್ರನು ಸರ್ವೇಶ್ವರನೆಂದು ಸ್ತುತಿಸಿ ಇಂದ್ರನನ್ನೂ ಆ ದಿಗಂಬರೇಶ್ವರನ ಪಾದಕ್ಕೆ ಬೀಳುವಂತೆ ಮಾಡಿದನು. ಆಗ ರುದ್ರನ ಫಾಲಾಕ್ಷದ ಅಗ್ನಿಯು ಲವಣ ಸಮುದ್ರದಲ್ಲಿ ಶಿವಕ್ಷಿಪ್ತನಾದನು. ರುದ್ರನು ಇಂದ್ರಜೀವನದಾತನೆಂದು ಬೃಹಸ್ಪತಿಗೆ ಬಿರುದುಕೊಟ್ಟು ಅವರಿಬ್ಬರನ್ನೂ ಬಿಟ್ಟುಕೊಟ್ಟನು.

ಅನಂತರ ಲವಣ ಸಮುದ್ರದಲ್ಲಿ ಹೊಕ್ಕ ಶಿವ ತೇಜಸ್ಸು (ಅಗ್ನಿ) ಒಬ್ಬ ಬಾಲಕನಾಗಿ ಪರಿಣಮಿಸಿತು. ಅದು ಗಂಗಾ ಸಂಗಮ, ಸಿಂಧು ಸಂಗಮ, ಸಮುದ್ರ ಸಂಗಮ ಸ್ಥಳವಾಗಿತ್ತು. ಅಂದರೆ "ಸಿಂಧುಗಂಗೆ" ಸಾಗರ ಸೇರುವ ಸ್ಥಳ. ಆ ಬಾಲಕನು ಅತ್ತನು. ಅದರಿಂದ ಬುವಿ ನಡುಗಿತು; ಸ್ವರ್ಗವಾಸಿಗಳೂ ಸತ್ಯಲೋಕವಾಸಿಗಳೂ ಕಿವುಡರಾದರು. ಎಲ್ಲ ಲೋಕವಾಸಿಗಳೂ ಬೆದರಿದರು. ಲೋಕಪಾಲರು ದಿಕ್ಕೆಟ್ಟರು. ದೇವತೆಗಳು ಬ್ರಹ್ಮನೆಡೆಗೆಯ್ದಿದರು. ಅವರೊಡನೆ ಬ್ರಹ್ಮನು ಸಂಗಮಕ್ಕೆ ಹೋದನು; ಹೋಗಿ ಸಮುದ್ರ ರಾಜನನ್ನು ಕುರಿತು ಅಲ್ಲಿದ್ದ ಆ ಭಯಂಕರ ಬಾಲಕನ ಪರಿಚಯ ಮಾಡಿಕೊಡಲು ಕೇಳಿಕೊಂಡನು. ಆಗ ಸಮುದ್ರನು ನಡೆದ ಸಂಗತಿ "ಅಕಸ್ಮಾತ್" ಎಂದನು. ಅಷ್ಟರಲ್ಲಿ ಆ ಹುಡುಗನು ಬ್ರಹ್ಮನ ಕುತ್ತಿಗೆಯನ್ನು ಹಿಡಿದು ಅಪ್ಪಿಕೊಂಡು ಅಲ್ಲಾಡಿಸಿದಾಗ ಬ್ರಹ್ಮನಿಗೆ ಕಂಬನಿ ಬಂದಿತು. ಬೀಳುತ್ತಿದ್ದ ಅದನ್ನು ಬಾಲಕನು ತನ್ನ ಕೈಯಲ್ಲಿ ಹಿಡಿದನು. ಆದ್ದರಿಂದ ಅವನಿಗೆ (ನೇತ್ರ) ಜಲಂಧರ ಎಂದು ಹೆಸರು ಬಂತು. ಅವನು ಸಮುದ್ರನ ಮಗನಾದನು. ಆಗಲೇ ಆ ಬಾಲನು ಸರ್ವಶಾಸ್ತ್ರ ಪಾರಂಗತನಾಗಿರುವನೆಂದೂ ಅವನು ಅಸುರಾಧಿಪತಿಯಾಗುವನೆಂದೂ ರುದ್ರೇತರರಿಂದ ಜಯಿಸಲ್ಪಡದವನಾಗುವನೆಂದೂ ಹೇಳಿ ಬ್ರಹ್ಮನು ದೇವತೆಗಳೊಡನೆ ಅಂತರ್ಧಾನ ಹೊಂದಿದನು.

ಕಾಲಾಂತರದಲ್ಲಿ ಸಮುದ್ರರಾಜನು ಜಲಂಧರನಿಗೆ ಕಾಲನೇಮಿಯ ಮಗಳು ವೃಂದೆಯನ್ನು ಮದುವೆ ಮಾಡಿ ಹಾಯಾಗಿದ್ದನು. ದೇವತೆಗಳಿಂದ ಸೋತು ಹಿಂದೆ ಪಾತಾಳದಲ್ಲಿ ಅಡಗಿಕೊಂಡಿದ್ದ ದೈತ್ಯರು ಈಗ ನಿರ್ಭಯದಿಂದ ಜಲಂಧರನ ಆಶ್ರಯ ಪಡೆದು ಭೂಮಿಗೆ ಬಂದು ಸುಖವಾಗಿ ಇರತೊಡಗಿದರು. ಆಗ ಒಂದು ದಿನ ದೈತ್ಯಗುರು ಶುಕ್ರಾಚಾರ್ಯನು ಜಲಂಧರನ ಸಭೆಗೆ ಬಂದಾಗ ರಾಹುವಿನ ಶಿರಚ್ಛೇದ ಹೇಗಾಯಿತು? ಎಂದು ಜಲಂಧರನು ಗುರುವಾದ ಶುಕ್ರಾಚಾರ್ಯನನ್ನು ಕೇಳಿದನು. ಶಿವನನ್ನು ನೆನೆದು ಆ ಭಾರ್ಗವ ಗುರುವು ನಡೆದ ಸಂಗತಿಯನ್ನು ತಿಳಿಸಿದರು:–

ಹಿಂದೆ ವಿರೋಚನನ ಮಗ ಬಲಿ ಎಂಬ ವೀರನಿದ್ದನು. ಅವನು ಧರ್ಮವೇತ್ತನಾಗಿದ್ದನು. ಅವನು ಹಿರಣ್ಯಕಶಿಪುವಿನ ಮೊಮ್ಮಗನು. ಅವನಿಂದ ಪರಾಜಿತರಾದ ಸುರರು ರಮೇಶನಿಗೆ ಶರಣಾಗತರಾದರು. ಇಂದ್ರನೊಡಗೂಡಿ ಹೋದ ಆ ಸ್ವಾರ್ಥ ಸಾಧಕರು ತಮ್ಮ ಕಥೆಯನ್ನೆಲ್ಲಾ ಹೇಳಿದರು. ರಮಾಪತಿಯ ಆಜ್ಞೆಯಂತೆ ಅಸುರರೊಡನೆ ಸುರರು ಸಂಧಿ ಮಾಡಿಕೊಂಡರು; ಅನಂತರ ಅಮೃತಕ್ಕಾಗಿ ಸಮುದ್ರ ಮಥನ ಮಾಡಿದರು. ಸುರಾಸುರರು ಅದರಲ್ಲಿ ವಿಷ್ಣುವಿಗೆ ಸಹಾಯಕರಾದರು. ಸುರರು ಸಮುದ್ರದಲ್ಲಿ ಸಿಕ್ಕಿದ ರತ್ನಗಳನ್ನು ಅಪಹರಿಸಿದರು; ಅಮೃತವನ್ನು ತಾವೇ ಕುಡಿದರು. ಅಮೃತ ಕುಡಿಯುತ್ತಿರುವ ಹರಿಯು ಚಕ್ರದಿಂದ ರಾಹುವಿನ ತಲೆಯನ್ನು ಕಡಿದನು. ದೈತ್ಯರಾಗ ಪೆಚ್ಚುಮೋರೆ ಹಾಕಿ ಕುಳಿತರು. ಈ ಕಥೆ ಕೇಳಿ ಜಲಂಧರನಿಗೆ ಸಿಟ್ಟು ಬಂದಿತು; ತನ್ನ ತಂದೆಯಾದ ಸಮುದ್ರನನ್ನು ಕಡೆದುದಕ್ಕೆ ಹಲ್ಲು ಹಲ್ಲು ಕಡೆದನು; ಘಸ್ಮಾರನೆಂಬ ದೂತನನ್ನು ಶಕ್ರನತ್ತ ಕಳುಹಿದನು. "ನೀನು ನಮ್ಮಪ್ಪನನ್ನು ಕಡೆದು ರತ್ನಾಪಹಾರ ಮಾಡಿದ್ದು ತಪ್ಪು. ಆ ರತ್ನಗಳನ್ನು ನನಗೆ ಕೊಡು. ಇಲ್ಲವಾದರೆ ನಿನಗೆ ವಿಪತ್ತುಂಟಾಗುತ್ತದೆ." ಎಂದು ಆ ದೂತ ಇಂದ್ರನಿಗೆ ಜಲಂಧರ ಸಂದೇಶವನ್ನು ಮುಟ್ಟಿಸಿದನು. ಅದಕ್ಕೆ ರೋಷದಿಂದ ಇಂದ್ರನು– "ನನ್ನ ರಿಪುಗಳಾದ ಕೆಲ ಪರ್ವತಗಳನ್ನು ನಿನ್ನ ಅಪ್ಪನು ತನ್ನ ಹೊಟ್ಟೆಯಲ್ಲಿಟ್ಟು ಸಲಹುತ್ತಿದ್ದುದರಿಂದ ನಾನು ಹಾಗೆ ಮಾಡಿದೆ. ಶಂಖ ಕೂಡಾ ಸಾಗರಾತ್ಮಜ. ಅವನೂ ಹೀಗೇ ದುರ್ಜನರ ಸಹವಾಸದಿಂದ ನನ್ನನ್ನು ದ್ವೇಷಿಸಿ ಹಿಂಸಿಸ ಬಂದನು. ಆಗ ನನ್ನ ತಮ್ಮನಾದ ವಿಷ್ಣುವು ಅವನನ್ನು ಕೊಂದನು; ಇದನ್ನು ನಿನ್ನ ಒಡೆಯನಿಗೆ ಹೇಳು, ಹೋಗು" ಎಂದು ಹೇಳಿ ಕಳುಹಿದನು. ಈ ಉತ್ತರದಿಂದ ರುಷ್ಟನಾದ ಜಲಂಧರನು ಇಂದ್ರಾದಿಗಳನ್ನು ಜಯಿಸಲು ಸಿದ್ಧನಾದನು, ಹೊರಟನು. ದೇವಲೋಕವನ್ನು ಮುತ್ತಿದನು. ದೇವಾಸುರ ಯುದ್ಧ ಪ್ರಾರಂಭವಾಯಿತು. ಆ ಯುದ್ಧದಲ್ಲಿ ಸತ್ತ ಅಸುರರೆಲ್ಲರನ್ನೂ ಶುಕ್ರಾಚಾರ್ಯನು ಬದುಕಿಸಿದನು. ಅವನಿಗೆ ಮೃತಸಂ ಜೀವಿನೀ ವಿದ್ಯೆ ಬರುತ್ತಿತ್ತು. ಅಂಗಿರಸ್ಸು ದೇವತೆಗಳನ್ನೂ ಹಾಗೇ ದ್ರೋಣಾದ್ರಿಯ ದಿವ್ಯೌಷಧಗಳಿಂದ ಬದುಕಿಸಿದನು. ಶುಕ್ರನಿಂದ ಈ ಅಂಶವನ್ನು ತಿಳಿದು ಜಲಂಧರನು ದ್ರೋಣಾದ್ರಿಯನ್ನೆತ್ತಿಕೊಂಡು ಬಂದು ಸಮುದ್ರದಲ್ಲಿ ಮುಳುಗಿಸಿಬಿಟ್ಟನು! ಅದರಿಂದ ಸುರರು ಔಷಧವಿಲ್ಲದೆ ಸಾಯುತ್ತಾ

ಹೋದರು. ಈ ವಿಷಯವನ್ನು ಬೃಹಸ್ಪತಿಯು ದೇವತೆಗಳಿಗೆ ತಿಳಿಸಿದನು ಮತ್ತು ಅವರೆಲ್ಲರೂ ಜೀವದಾಶೆಯಿದ್ದರೆ ಪಲಾಯನ ಮಾಡಬೇಕೆಂದು ಬುದ್ಧಿ ಹೇಳಿದನು. ಅವರನ್ನೆಲ್ಲಾ ಹಿಡಿದು, ಶುಂಭಾದಿ ದೈತ್ಯರನ್ನು ಅಧಿಕಾರದಲ್ಲಿಟ್ಟು, ಜಲಂಧರನು ದೇವರಾಜ್ಯವನ್ನು ಆಳತೊಡಗಿದನು. ಆ ಸುರರಲ್ಲಿ ಕೆಲವರು ವೈಕುಂಠಕ್ಕೆ ಓಡಿದರು. ಅವರ ಮುಖಂಡ ಆಗ ಪ್ರಜಾಪತಿ. ಅವರೆಲ್ಲಾ ವಿಷ್ಣುಸ್ತುತಿಯನ್ನು ಮಾಡಿದರು. ವಿಷ್ಣುವು ಪ್ರಸನ್ನನಾಗಿ ಅವರೊಡನೆ ಹೋಗಿ ತನ್ನ ಸರ್ವಾಯುಧಗಳಿಂದ ಜಲಂಧರನೊಡನೆ ಯುದ್ಧಮಾಡಿ ಸೋತನು. ಅನಂತರ ಅವನು ಮೋಸ ಮಾಡಲು ಯೋಚಿಸಿದನು; ಜಲಂಧರನನ್ನು ಹೊಗಳಿ ಬೇಕಾದ ವರವನ್ನು ಬೇಡೆಂದು ಹೇಳಿದನು. ಜಲಂಧರನು, "ಹಾಗಾದರೆ, ನೀನು ನನ್ನ ಅಕ್ಕನಾದ ಮಹಾಲಕ್ಷ್ಮಿಯನ್ನೂ ನಿನ್ನ ಗಣಗಳನ್ನೂ ಕೂಡಿಕೊಂಡು ನನ್ನ ಅರಮನೆಯಲ್ಲಿ (ಸಮುದ್ರದಲ್ಲಿ) ವಾಸಿಸು" ಎಂದು ಹೇಳಿದನು. ವಿಷ್ಣುವು ಸುಸ್ತಾದನು; "ಹಾಗೇ ಆಗಲಿ" ಎಂದು ಹೇಳಿ ಹೊರಟನು. ಜಲಂಧರನು ಅಂದಿನಿಂದ ಸರ್ವ ದೇವಾಧಿದೇವನಾದನು; ದೇವತೆಗಳಲ್ಲಿದ್ದ ಎಲ್ಲ ಸಂಪತ್ತನ್ನೂ ಸ್ವಾಧೀನಪಡಿಸಿಕೊಂಡನು.

ಆಮೇಲೆ ಏನು ಮಾಡಲೂ ತೋರದೆ ಇಂದ್ರಾದಿ ದೇವತೆಗಳೆಲ್ಲಾ ಶಿವಧ್ಯಾನ ಪರಾಯಣರಾದರು. ಶಿವನು ನಾರದನನ್ನು ಅವರಿದ್ದಲ್ಲಿಗೆ ಕಳುಹಿದನು. ನಾರದನು ಅವರಿಗೆ ಸಮಾಧಾನ ಹೇಳಿ, ಜಲಂಧರನ ಹತ್ತಿರಕ್ಕೆ ಹೋಗಿ ಅವನನ್ನು ಬಾಯಿ ತುಂಬಾ ಹೊಗಳಿ ಶಿವಶಕ್ತಿಯಾದ ತ್ರಿಪುರ ಸುಂದರಿ ಪಾರ್ವತಿಯನ್ನು ಪತ್ನಿಯನ್ನಾಗಿ ಶಿವನಿಂದ ಪಡೆದುಕೊಂಡ ಹೊರತೂ ಅವನು ಪೂರ್ಣಭೋಗಿಯಾಗನು ಎಂದು ಉಬ್ಬಿಸಿದನು. ಅದಕ್ಕೆ ಮರುಳಾಗಿ ಅವನು ಸೈಂಹಿಕೇಯನೆಂಬ ದೂತನನ್ನು ಕೈಲಾಸಕ್ಕೆ ಕಳುಹಿದನು. ಆ ದೂತನು ಕೈಲಾಸದಲ್ಲಿ ಧ್ಯಾನಪರನಾಗಿದ್ದ ಶಿವನ ಹತ್ತಿರ ಹೋಗಿ ಯಜಮಾನನ ಸಂದೇಶವನ್ನು ತಲುಪಿಸಿದನು. ಸೈಂಹಿಕೇಯನೆಂದರೆ ರಾಹು. ರಾಹುವಿನ ಮಾತನ್ನು (ಪಾರ್ವತಿಯನ್ನು ತನಗೆ ಮದುವೆ ಮಾಡಿಕೊಡಬೇಕೆಂದು ಜಲಂಧರ ಹೇಳಿದ್ದನ್ನು) ಕೇಳಿ ಶಿವನು ಮುನಿದು ಭ್ರೂಮಧ್ಯದಿಂದ ತಾಲ ಜಂಘನಾದ ಪುರುಷನನ್ನು ನಿರ್ಮಿಸಿ ರಾಹುವನ್ನು ನುಂಗಲು ಹೇಳಿದನು. ರಾಹು (ಸೈಂಹಿಕೇಯ) ಶಿವನಿಗೆ ದಮ್ಮಯ್ಯ ಹಾಕಿದನು. ಅವನಾಗ ಹೋಗೆಂದು ಬಿಡಲ್ಪಟ್ಟನು. ಅನಂತರ ತನ್ನ ಮುಂಡವನ್ನೇ ಶಿವಾಜ್ಞೆಯಂತೆ ತಿಂದ ರುಂಡ ಮಾತ್ರನಾದ ಆ ಪುರುಷನನ್ನು ಮೆಚ್ಚಿ ಅವನಿಗೆ ಕೀರ್ತಿಮುಖನೆಂಬ ಹೆಸರನ್ನಿಟ್ಟು ಶಿವನು ತನ್ನ ದ್ವಾರಪಾಲಕನನ್ನಾಗಿ ನಿಲ್ಲಿಸಿದನು. ರಾಹುವು ನಡೆದ ಸಂಗತಿಯನ್ನೆಲ್ಲಾ ಜಲಂಧರನಿಗೆ ತಿಳಿಸಿದನು... ಆಗ ಕ್ರುದ್ಧನಾದ ಜಲಂಧರನು, ಕಾಲನೇಮಿ, ಶುಂಭ, ನಿಶುಂಭಾದಿಯಾಗಿ ಕಂಬುವಂಶ್ಯರೂ ಕಾಲಕರೂ ಕಾಲಕೇಯರೂ ಮೌರ್ಯರೂ ಧೌಮ್ರರೂ ಕೋಟಿ ಗಟ್ಟಲೆ ರಾಕ್ಷಸಗಣಗಳನ್ನು ಸಜ್ಜುಗೊಳಿಸಿಕೊಂಡು ಕೈಲಾಸವನ್ನು ಮುತ್ತಲು ಆಜ್ಞಾಪಿಸಿದನು. ಅವನೇ ಸೇನಾಪತಿಯಾದನು. ಆಗಲೇ ರಾಹುವಿಗೆ ತಲೆ ಹೋದದ್ದು. ಆ ದಳದ ಮುಂದೆ

ಹೋಗುತ್ತಿದ್ದ ಶುಕ್ರನ ಇದಿರಿನಲ್ಲೇ ರಾಹುವಿನ ಕಿರೀಟ ಉರುಳಿದ್ದು. ಆಕಾಶವೆಲ್ಲಾ ಮೇಘಮಯವಾಯಿತು. ಅಪಶಕುನಗಳಾದವು. ಇದನ್ನೆಲ್ಲಾ ನೋಡಿದ ದೇವತೆಗಳು ಶಿವಾಲಯಕ್ಕೆ ಹೋದರು. ವಿಷ್ಣುವು ಶಿವನನ್ನು ಬೇಡಿದನು; ಜಲಂಧರನ ಸೈನ್ಯವು ಕೈಲಾಸದ ಸುತ್ತಲಿರುವುದನ್ನು ತಿಳಿಸಿದನು. ಆಗ ನಂದ್ಯಾದಿ ಗಣಗಳು ಹೋರಾಡಿದರು. ಆದರೆ ಮೃತಸಂಜೀವನೀ ಬಲದಿಂದ ಸತ್ತ ದೈತ್ಯರೆಲ್ಲಾ ಎದ್ದು ಹೋರಾಡ ತೊಡಗಿದರು. ಆಗ ರುದ್ರನಿಗೆ ಶುಕ್ರಾಚಾರ್ಯನ ಮೇಲೆ ದೊಡ್ಡ ಸಿಟ್ಟು ಬಂತು. ಆ ಕೂಡಲೇ ರುದ್ರನ ಬಾಯಿಂದ ಹೊರಬಿದ್ದ ತಾಲಂಜಂಘೋದರೀ ಮುಖಿಯು ಮಹಾದೈತ್ಯರೆಲ್ಲರನ್ನೂ ನುಂಗಿ ಶುಕ್ರನನ್ನು ಹಾರಿಸಿಕೊಂಡು ಹೋದಳು. ಅದರಿಂದ ಹೆದರಿದ ಅಳಿದುಳಿದ ದೈತ್ಯರು ಯುದ್ಧಬಿಟ್ಟು ಹಿಂದಿರುಗಿದರು. ಇದರಿಂದ ಜಲಂಧರ, ಕಾಲನೇಮಿ, ಶುಂಭ, ನಿಶುಂಭರು ಕೆರಳಿದರು. ಶಿವಗಣ ಸೈನ್ಯವನ್ನು ಮುತ್ತಿದರು. ಆಗ ನಂದಿ, ಲಂಬೋದರ, ವೀರಭದ್ರ, ಕಾರ್ತಿಕೇಯರು ರುದ್ರಗಣ ರಕ್ಷಣೆಗೆ ಬಂದರು. ದೈತ್ಯರನ್ನು ತಡೆದರು. ಯುದ್ಧದಲ್ಲಿ ಪುನಃ ಶಿವ ಸೇನಾನಿಗಳು ಸೋತರು. ಆಗ ಶಂಕರನು ತಾನೇ ಭಯಂಕರ ರೂಪತಾಳಿ ನಂದಿಯನ್ನೇರಿ ಯುದ್ಧ ರಂಗಕ್ಕಿಳಿದು ದೈತ್ಯರನ್ನು ಬೆದರಿಸಿದನು. ಜಲಂಧರ ಹೆದರಿದನು; ಶಿವನು ಅತಿ ಬಲನೆಂದು ತಿಳಿದನು; ತನ್ನ ಸೈನ್ಯ ಅವನ ಹಾಗೂ ಅವನ ಗಣಗಳಿಂದ ಕ್ಷತವಿಕ್ಷತವಾದುದನ್ನು ಕಂಡನು. ಆಗ ಗಾಂಧರ್ವೀ ಮಾಯೆಯಿಂದ ಶಿವನನ್ನು ಮೂಢನನ್ನಾಗಿ ಮಾಡಿ, ಶಿವ ಸೈನ್ಯವನ್ನು ಜಲಂಧರ ಥಳಿಸತೊಡಗಿದನು. ಶಿವನು ನಿಷ್ಕ್ರಿಯ ಬೆಪ್ಪುತಕ್ಕಡಿಯಾಗಿ ನಿಂತನು; ಅಲ್ಲದೆ ಜಲಂಧರನು ರುದ್ರರೂಪತಾಳಿ ಶಿವೆಯೆದುರು ಹೋದಾಗ ಅವನ ಮಾಯೆಯನ್ನರಿತ ಪಾರ್ವತಿ ಅಂತರ್ಧಾನ ಹೊಂದಿದಳು ಮತ್ತು ವಿಷ್ಣುವನ್ನು ಜಲಂಧರ ರಾಜಧಾನಿಗೆ ಕಳುಹಿ ಅವನ ಮೂಲಕ ಜಲಂಧರನ ಪತ್ನಿ ವೃಂದೆಯ ಪಾತಿವ್ರತ್ಯವನ್ನು ಭಂಗಗೊಳಿಸಿ ಆ ಮೂಲಕ ಜಲಂಧರನ ಭಾಗ್ಯ ಕುಸಿಯುವಂತೆ ಮಾಡಿದಳು. ಆಗ ಜಲಂಧರನ ಅವನತಿ ಖಾತ್ರಿಯಾಯಿತು. ಮೋಸ ಗೊತ್ತಾದ ಕೂಡಲೇ ವೃಂದೆ ಬೆಂಕಿಯಲ್ಲಿ ಹಾರಿ ಪ್ರಾಣ ಬಿಟ್ಟಳು. ವಿಷ್ಣು ಮಾತ್ರ (ಜಲಂಧರನ ರೂಪದಲ್ಲಿದ್ದಾಗಲೇ) ಮೂಢನಾಗಿ ಅಲ್ಲೇ ನಿಂತುಬಿಟ್ಟನು; ತಾನು ಅಧರ್ಮ ಮಾಡಿದೆನೆಂದು ಹಳಹಳಿಸುತ್ತಾ ವಿಸ್ಮೃತ ಕರ್ತವ್ಯನಾದನು! ವೃಂದೆಯು ಆತ್ಮಹತ್ಯೆಗೆ ಮೊದಲು ಮಾಯಾವಿಗಳ ಮೂಲಕ ಭಾರ್ಯಾ ವಿರಹದಿಂದ ನೀನು ನರಳೆಂದೂ ನಿನ್ನ ಹೆಂಡತಿಯನ್ನು ನಿನ್ನ ಶತ್ರು ಕದ್ದೊಯ್ಯಲೆಂದೂ ವಿಷ್ಣುವಿಗೆ ಶಾಪ ಕೊಟ್ಟಳು; ಅಲ್ಲದೆ ಅವಳು ಅಗ್ನಿ ಪ್ರವೇಶ ಮಾಡಿ ಮೈಕಳೆದುಕೊಂಡ ಮೇಲೆ ಜ್ಯೋತಿ ಸ್ವರೂಪದಿಂದ ಶಿವಾತನುವನ್ನು ಸೇರಿ ಹೋದಳು. ದೇವತೆಗಳು ಅವಳ ಪಾತಿವ್ರತ್ಯ ಪಾಲನೆಗಾಗಿ ಜಯಕಾರ ಹಾಕಿದರು ಮತ್ತು ಇನ್ನು ಜಲಂಧರ ಸಂಹಾರವು ನಿಶ್ಚಿತ ಎಂದು ಧೈರ್ಯವನ್ನು ತಾಳಿದರು.

ಇತ್ತ ರಣಾಂಗಣದಲ್ಲಿ ಶಿವನಿಗೆ ಜ್ಞಾನೋದಯವಾಯಿತು. ಅವನೇ ಜ್ಞಾನತತ್ವ ಸ್ವರೂಪನಾಗಿದ್ದುದರಿಂದ ತನ್ನಷ್ಟಕ್ಕೆ ತಾನೇ ಗಾಂಧರ್ವ ಮಾಯೆ ಅಡಗಿತು. ಆ ಕೂಡಲೇ ಶಿವನು ಹೆಬ್ಬೆರಳಿಂದ ಚಕ್ರವನ್ನು ನಿರ್ಮಿಸಿದನು. ಇದು ಮಹಾಜಲೋದ್ಭೂತ ರುದ್ರ ಸುದರ್ಶನ ಚಕ್ರ. ಇದರ ಹೊಡೆತದಿಂದ ಜಲಂಧರ ಶರೀರ ಇಬ್ಭಾಗವಾಗಿ ತುಂಡಾಗಿ ಬಿದ್ದಿತು. ಅವನು ರುದ್ರಾಂಶ ಸಂಭೂತನಾಗಿದ್ದುದರಿಂದ ಅವನ ಜೀವಜ್ಯೋತಿಯು ಶಿವನಲ್ಲಿ ಸೇರಿಹೋಯಿತು!

–೨೫–

# ಅವಿರಾಗ ಜೀವನ ನ್ಯಾಯ

ಏಕಮೇವಾದ್ವಿತೀಯನಾದ ದೇವರು ದೈತ್ಯಾಂತಕನಾದುದು ವಿಶ್ಲೇಷಣೀಯ. ದೈತ್ಯರು ಪ್ರಜಾಶೋಷಕರಾಗಿ ರಾಜ್ಯಭಾರ ಮಾಡುತ್ತಿದ್ದಿಲ್ಲ. ಆದರೆ ದೇವತಾರಾಜ್ಯಕ್ಕೆ ಅವರು ವಿರೋಧಿಗಳು. ಅವರ ಸಂಬಂಧವು ಇಂದಿನ ಅಮೇರಿಕ–ರಶಿಯಗಳ ಸಂಬಂಧವನ್ನು ಹೋಲುತ್ತದೆ. ಅಮೇರಿಕದ ರೇಗನ್ ರಶಿಯನ್ನರ ಜೀವನೀತಿಯ ಕಡು ವೈರಿ. ರಶಿಯಕ್ಕಿಂತ ತನ್ನ ರಾಷ್ಟ್ರವು ಯಾವಾಗಲೂ ಬಲಿಷ್ಠವಾಗಿರಬೇಕೆಂಬ ಧೋರಣೆಯು ಜಲಂಧರ ಸದೃಶವಾದ ಧೋರಣೆ.

ಕಶ್ಯಪನ ಹೆಂಡಂದಿರಾದ ದಿತಿ–ಅದಿತಿಯರ ಮಕ್ಕಳೇ ದೈತ್ಯರು ಮತ್ತು ಅದಿತ್ಯರು (ದೇವತೆಗಳು). ದೇವತೆಗಳು ತಮ್ಮಷ್ಟಕ್ಕೆ ತಮ್ಮ ಧರ್ಮದಂತೆ ಬದುಕಲು ಬಿಟ್ಟರೆ ಸಾಕೆಂಬ Co-existence ಸಹಜೀವನ ತತ್ವದ ಅನುಯಾಯಿಗಳು. ದೈತ್ಯರು ತಾವೇ ದೇವಾಧಿಪತಿಗಳು ಎಂಬ ಗರ್ವಿಷ್ಠರು. ಅದರಿಂದ ಅವರು ದೇವತೆಗಳ ರಾಜ್ಯವನ್ನು ದಾಳಿ ಮಾಡಲು ಪದೇ ಪದೇ (ತಲೆಮಾರುಗಳ ಮೇಲೆ ತಲೆಮಾರುಗಳಂತೆ) ಯತ್ನಿಸುತ್ತಿದ್ದರು; ಕೆಲ ಕಾಲ ಜಯಿಸಿ ಅವರನ್ನು ದಾಸ್ಯದಲ್ಲೂ ಇಡಬಲ್ಲವರಾಗಿದ್ದರು. ಆದರೆ ಅಂತ್ಯ ಜಯ ದೇವತೆಗಳದ್ದು. ಈ optimism ಆಶಾವಾದ ಇಲ್ಲಿದೆ. ದೇವ–ಸೈತಾನರ ಬೈಬಲ್ ಪ್ರಕರಣವು ಬೇರೆ. ಇಲ್ಲಿ ಶಿವ–ಶಕ್ತಿಯರನ್ನುಳಿದು ಇತರ ಎಲ್ಲವರೂ ಮರ್ತ್ಯರು, ಸಾವಿಗೀಡಾಗುವವರು–ಆಯುಷ್ಯದೀರ್ಘತೆಯಲ್ಲಿ ತಾರತಮ್ಯವನ್ನು ಹೇಳಲಾಗಿದೆ.

ಗ್ರೀಕ್ ಫ್ಯೂರಿಗಳಂಥ ಶಿವಗಣವಿದಲ್ಲ. ಶಿವಗಣಗಳು (ರಂದ್ರ ಗಣಗಳು) ಅಂತರಾಕಾರ. ಬಹಿರ್ವಿಕಾರಗಳಿಂದ ದೃಶ್ಯರು. ಇದು ಬ್ರಹ್ಮ–ಹರಿಗಳ ಭಕ್ತರ External Refinement ಹೊರ ನಯವುಳ್ಳದ್ದಲ್ಲ; ಈ ನೀತಿಯು ಮಹಾತ್ಮಗಾಂಧಿಯವರ ಸರಳ ಜೀವನ ಮತ್ತು ಉದಾತ್ತ ಧ್ಯೇಯಾಚಾರಗಳನ್ನು ಸಂಕೇತಿಸುತ್ತದೆ. ಈ ಗಣಗಳು ಅಂತರ್‌ಬಹಿಶ್ಚ ಶುದ್ಧರು. ಬ್ರಹ್ಮ–ವಿಷ್ಣುಗಳ ಅನುಯಾಯಿಗಳಾದ ಇಂದ್ರಾದಿಗಳು ಇವರಂತೆ ಪರೋಪಕಾರಕ್ಕಾಗಿಯೇ ಬದುಕುವವರಲ್ಲ. ಅವರಿಗೆ ಬೇಕು–ಬೇಡಗಳಿವೆ. “ಪರೋಪಕಾರಾಯ ಸತಾಂ ವಿಭೂತಯಃ” ಎಂಬುದು ಶಿವಾಚಾರ, ಗಣಾಚಾರ, ಸದಾಚಾರ.

ಅಸಂಗನಾದ ಶಿವನು ಕರ್ತಾರನಲ್ಲ, ಪ್ರೇರಕನು; ಭೋಕ್ತಾರನಲ್ಲ, ಭೋಗ್ಯದಾತಾರನು. ಅವನ ಪ್ರೇರಕತ್ವವು ಕಾರಕತ್ವವನ್ನು ಧ್ವನಿಸುವುದರಿಂದ ಈ ಲೋಕಾಚಾರವೆಲ್ಲವುಗಳ (ಸರ್ವಕಾರ್ಯ–ಕಾರಣಗಳ) ಆತ್ಯಂತಿಕ ಫಲದ ಹೊಣೆ ಅವನದೆಂಬುದಲ್ಲಿ ಪರಾಭಕ್ತಿ ಪ್ರೇರಕ–ಸರ್ವಮನೋವಾಕ್ ಕಾಯಕರ್ಮಗಳ ಸಮರ್ಪಣೆಗೆ ಚೋದಕ. ಇದು ಪರಮೋಪಾಸನಾಲಕ್ಷಣ. ಮುಕುಂದ ಮಾಲಾ ಸ್ತೋತ್ರೋಕ್ತವಾದ (ಅವಧೂತ ಪದ್ಧತಿಯೆ?) ಭಕ್ತಿ; ಭಕ್ತಿಗಾಗಿ ಭಕ್ತಿ–ಇದೇ ಸಾವಿರಾರು ವರ್ಷಗಳ ತಪಸ್ಸು, ಧ್ಯಾನ, ಪೂಜೆ, ಯೋಗ. ಇವೆಲ್ಲವುಗಳೂ ಒಬ್ಬ ವ್ಯಕ್ತಿಯಲ್ಲೇ ಕಾಲೋಪಾಧಿ ಬದ್ಧ. ಚಂಚಲ, ಪರಿವರ್ತನಶೀಲ–ಎಂಬುದನ್ನು ದೇವ ದೈತ್ಯರಿಬ್ಬರಲ್ಲೂ ನಾವೀ ಪುರಾಣದಲ್ಲಿ ಕಾಣುತ್ತೇವೆ. ಆದರೆ ಆತ್ಯಂತಿಕ ಸತ್‌ಪರಿವರ್ತನೆಗೆ ದೇವತೆಗಳು ಬದ್ಧರು; ದೈತ್ಯರು ಆತ್ಯಂತಿಕ (ಭೌತಿಕ) ನಾಶಕ್ಕೆ ತಲುಪುವವರು. "ಆಸುರೀ ಸಂಪತ್." "ದೈವೀ ಸಂಪತ್" ಎಂದು ಗೀತೆ ಚೆನ್ನಾಗಿ ವಿಂಗಡಿಸಿದೆ. ಅದು ಎರಡು Types of personality ವ್ಯಕ್ತಿತ್ವದ ವಿವೇಕವನ್ನು (ಸ್ಥಾಯಿ ಭಾವ ಭೇದವನ್ನು) ಸ್ಪಷ್ಟವಾಗಿ ಹೇಳಿದೆ.

ಪುರಾಣದ ವೈಶಿಷ್ಟ್ಯವಿರುವುದು ಈ ಮಾನವ್ಯ ಮಾದರಿಗಳನ್ನು ಭೂಮ್ಯಾಕಾಶದಷ್ಟು ಅತ್ಯುಕ್ತಿಗಳಿಂದ (ಅತಿಶಯೋಕ್ತಿಗಳಿಂದ Magnified Version) ವರ್ಣಿಸುವುದೇ ಆಗಿದೆ. ಇದು ಅಂದಿನ ಸಮಾಜ ಶಿಕ್ಷಣಕ್ಕೆ ಸಮರ್ಥ ಸಾಧನವಾಗಿತ್ತು. ಅಲಂಕಾರ ಶಾಸ್ತ್ರದಲ್ಲಿ "ಗುಣಾ ದೋಷಾಯಂತೇ, ದೋಷಾ ಗುಣಾಯಂತೇ" ಎಂದು ದಂಡಿ ತೋರಿಸಿರುವ ಹಾಗೆ ಸದಸತ್ತುಗಳು (The Good and the Evil) ಸಂದರ್ಭಾನುಸಾರ ವಿಪರ್ಯಾಯ ಹೊಂದುವುದನ್ನು ಶಿವೋಪಾಸಕರ (ಪರಮ ಸತ್ಯೋಪಾಸಕರ) ಲೌಕಿಕ ಜೀವನದಲ್ಲಿ ಈ ಪುರಾಣವು ತೋರಿಸಿಕೊಟ್ಟಿದೆ. ಅದರಿಂದಲೇ ಶಿವನು ನಿರ್ಗುಣ ಎಂಬುದು ಮೂಲ ಆಧಾರ. ಕಲ್ಪನೆ, ನಿರ್ಗುಣತ್ವದ ಶಕ್ತಿಯು ಸರ್ವಚರಾಚರ (ದೇವ, ದಾನವ, ಮಾನವಾದಿ) ಗಳ ಸೃಷ್ಟಿ, ಸ್ಥಿತಿ, ಲಯ. ಮೋಕ್ಷಗಳ ಮೂಲ. ಜಲಂಧರನೂ ವೃಂದೆಯೂ ಶಿವೈಕ್ಯರಾದದ್ದು ಈ ನಂಬಿಗೆಯನ್ನಾಧರಿಸಿಯೇ. ತಪ್ಪಿಗೆ ಪ್ರಾಯಶ್ಚಿತ್ತವು ಪಶ್ಚಾತ್ತಾಪ ಮತ್ತು ಕ್ಷಮಾಯಾಚನೆ ಹಾಗೂ ಅಹಂಕಾರ (ದೇಹಾದ್ಯಭಿಮಾನ) ತ್ಯಾಗ; ತತ್ಫಲವಾದ ಮುಕ್ತಿಯು ಪರಮಾರ್ಥ, ನಿತ್ಯಾನಂದ. ನಿರ್ವಿಕಾರ ಸ್ಥಿತಿ, ನಿರ್ವಿಕಲ್ಪ ಸಾಮರಸ್ಯವನ್ನು ಶಿವನಲ್ಲಿ ಹೊಂದುವುದು. ಅದು ಮೊದಲು ಆಕರ್ಷಕವಾಗಿ ತೋರದು; ಕಷ್ಟನಷ್ಟ ಪಟ್ಟಮೇಲೆ ಅಪೇಕ್ಷಣೀಯ ಎನ್ನಿಸುವುದು. ಜಲಂಧರನಿಗಾದದ್ದು ಹೀಗೆ. ಇತರರಿಗೂ ಅಷ್ಟೇ. "ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್" ಎಂದದ್ದು ಮನಃಶಾಸ್ತ್ರ ಸಿದ್ಧ, ಜಲಂಧರ ಚರಿತದ ಅನಂತರ ಶಂಖಚೂಡಾದಿಗಳ ಕಥೆಗಳು ಬರುತ್ತವೆ. ಅಲ್ಲೂ ಸಾರಾಂಶತಃ ಇದೇ ನ್ಯಾಯವು ಅನ್ವಿತವಾಗುತ್ತದೆ.

-೨೬-

# ಶಂಖಚೂಡನ ಕಥೆಯ ವೈಶಿಷ್ಟ್ಯ

ಮರೀಚಿಯೆಂಬ ಧಾತಾರನ ಮಗ ಕಶ್ಯಪಮುನಿ. ಅವನು ಧರ್ಮಿಷ್ಠನೂ ಸೃಷ್ಟಿಕರ್ತೃಗಳಲ್ಲಿ (ಬ್ರಹ್ಮ ನಿಯಮಿಸಿದವರಲ್ಲಿ) ಒಬ್ಬನೂ ಆಗಿದ್ದನು. ಸೃಷ್ಟಿ ಕರ್ತರಿಗೆ ಪ್ರಜಾಪತಿಗಳೆಂದು ಹೆಸರು. ಅವನಿಗೆ ದಕ್ಷನು ತನ್ನ ಹದಿಮೂರು ಜನ ಮಗಳಂದಿರನ್ನು ಮದುವೆ ಮಾಡಿಕೊಟ್ಟನು. ಅವರಲ್ಲಿ ದನು ಎಂಬವಳು ವರಾಂಗನೆ. ಅವಳಲ್ಲಿ ಅನೇಕ ಮಕ್ಕಳು ಹುಟ್ಟಿದರು. ಅವರಲ್ಲಿ ವಿಪಚಿತ್ತಿ ಎಂಬವನು ಬಹಳ ಪರಾಕ್ರಮಶಾಲಿಯಾಗಿದ್ದನು. ದಂಭನೆಂಬ ಧಾರ್ಮಿಕನು ಅವನ ಮಗ. ಅವನು ವಿಷ್ಣು ಭಕ್ತನಾಗಿದ್ದನು. ಮಕ್ಕಳಿಲ್ಲದ ಚಿಂತೆಯಿಂದ ಅವನು ಶುಕ್ರಾಚಾರ್ಯನನ್ನು ಮುಂದಿಟ್ಟುಕೊಂಡು ಕೃಷ್ಣಮಂತ್ರ ಜಪವನ್ನು ಆರಂಭಿಸಿದನು. ಅವನ ತಪಸ್ಸಿನ ಬಿಸಿಯಿಂದ ದೇವಲೋಕವು ತಲ್ಲಣಿಸಿತು. ಇಂದ್ರನನ್ನು ಮುಂದಿಟ್ಟುಕೊಂಡು ಆ ಸಂತಪ್ತರು ಬ್ರಹ್ಮನ ಬಳಿಗೆ ಹೋದರು. ಬ್ರಹ್ಮನು ಅವರೆಲ್ಲರೊಡನೆ ವೈಕುಂಠಕ್ಕೆ ಹೋದನು. ವಿಷ್ಣುವು ಅವರಿಗೆ ಸಮಾಧಾನ ಹೇಳಿದನು. ಪುಷ್ಕರದಲ್ಲಿ ತಪಸ್ಸು ಮಾಡುತ್ತಿದ್ದ ಸ್ವಭಕ್ತ ದಂಭನಿಗೆ ವಿಷ್ಣುವು ವರ ಕೊಡಲು ಹೋದನು. ತ್ರೈಲೋಕಜಯಿಯಾಗಬಲ್ಲ ಮಗನನ್ನು ದಯಪಾಲಿಸೆಂದು ದಂಭನು ಬೇಡಿದನು. ಹರಿ ವರಕೊಟ್ಟು ಅದೃಶ್ಯನಾದನು. ಆಮೇಲೆ ದಂಭಪತ್ನಿ ಗರ್ಭಿಣಿಯಾಗಿ ಶಂಖಚೂಡನೆಂಬ ಮಗನನ್ನು ಹಡೆದಳು. ಅವನು ಪೂರ್ವಜನ್ಮದಲ್ಲಿ ಗೋಪ ಜಾತಿಯ ಸುದಾಮನೆಂಬ ಕೃಷ್ಣಭಕ್ತನಾಗಿದ್ದನು. ಶಂಖಚೂಡನು ದೊಡ್ಡವನಾದನು. ಬಲಿಷ್ಟನಾದನು; ಗುರುದತ್ತವಾದ ಬ್ರಹ್ಮವಿದ್ಯೆಯನ್ನು ಜಪಿಸಿದನು. ಪುಷ್ಕರದಲ್ಲಿ ಬಹಳ ಕಾಲ ಹಾಗೆ ಅವನು ಇಂದ್ರಿಯ ನಿಗ್ರಹದಿಂದ ತಪಸ್ಸನ್ನು ಮಾಡಿದ ಮೇಲೆ ಬ್ರಹ್ಮನು ಪ್ರತ್ಯಕ್ಷನಾಗಿ “ದೇವತೆಗಳಿಗೆ ನೀನು ಅಜಯ್ಯನಾಗು” ಎಂದು ವರವಿತ್ತನು; ಶಂಖಚೂಡ ದೈತ್ಯನಿಗೆ ಶ್ರೀಕೃಷ್ಣ ಕವಚವನ್ನೂ ಅವನು ದಯಪಾಲಿಸಿದನು. ಅದನ್ನು ಧರಿಸಿಕೊಂಡು ಶಂಖಚೂಡನು ಬ್ರಹ್ಮಾಜ್ಞೆಯಂತೆ ಬದರಿಕಾಶ್ರಮಕ್ಕೆ ಹೋದನು. ಅಕಸ್ಮಾತ್ತಾಗಿ ಅಲ್ಲಿಗೆ ಬಂದ ಅವನನ್ನು ಧರ್ಮಧ್ವಜನ ತಪೋನಿಷ್ಠಳಾದ ಸುತೆ ತುಳಸಿಯು ಕಂಡಳು. ಅವಳಿಗೂ ಶಂಖಚೂಡನಿಗೂ ಸ್ನೇಹ ಉಂಟಾಯಿತು. ಅವರಿಬ್ಬರೂ ಧರ್ಮಶೀಲರೂ, ವಿದ್ವಾಂಸರೂ ಆದುದರಿಂದ ಧರ್ಮಚರ್ಚೆ ಅವರಲ್ಲಿ ನಡೆಯಿತು. ಅಜಿತೇಂದ್ರಿಯನು ಸ್ತ್ರೀ ಮೋಹಕ್ಕೊಳಗಾಗಿ ಮದುವೆಯಾದರೆ ಅವನ ಗ್ರಹಸ್ಥ ಧರ್ಮಾಚಾರಗಳೆಲ್ಲಾ

ವ್ಯರ್ಥ ಅವುಗಳಿಂದ ಪಿತೃಗಳು ಸಂಪ್ರೀತರಾಗರು–ಎಂದು ಹೇಳಿದ್ದಕ್ಕೆ ಶಂಖಚೂಡನು ಜಾತಿಸ್ಮರನಾದ ತಾನು ಜಿತೇಂದ್ರಿಯನೆಂಬುದನ್ನು ಅವಳಿಗೆ ಮನದಟ್ಟು ಮಾಡಿಕೊಟ್ಟನು. ಅಷ್ಟರಲ್ಲಿ ಬ್ರಹ್ಮನೇ ಸ್ವತಃ ಬಂದು ಅವರು ಮದುವೆ ಮಾಡಿಕೊಳ್ಳಬೇಕೆಂದು ಆಜ್ಞಾಪಿಸಿದನು. ಆ ಪ್ರಕಾರ ಅವರು ಗಾಂಧರ್ವ ವಿಧಿಯಿಂದ ಮದುವೆ ಮಾಡಿಕೊಂಡರು.

ಆಮೇಲೆ ಶುಕ್ರಾಚಾರ್ಯನಿಂದ ಪಟ್ಟಾಭಿಷಿಕ್ತನಾದ ಶಂಖಚೂಡನು ದೇವಲೋಕಕ್ಕೆ ಹೋಗಿ ದೇವತೆಗಳೆಲ್ಲರನ್ನೂ ಯುದ್ಧದಲ್ಲಿ ಸೋಲಿಸಿದನು. ಸೋತ ದೇವತೆಗಳು ಬ್ರಹ್ಮನೊಡನೆ ವೈಕುಂಠಕ್ಕೆ ಹೋದರು. ಅಲ್ಲಿ ವಿಷ್ಣುವು "ನನ್ನ ಬೇರೆ ಆಕೃತಿಯಾದ ಕೃಷ್ಣನು ದೇವ ಕಾರ್ಯಕ್ಕಾಗಿ ಕೈಲಾಸದ ಸನಿಹದ ಗೋಕುಲದಲ್ಲಿರುವಂತೆ ಶಿವನ ಬೇರೆಯ ಆಕೃತಿಯಾದ ರುದ್ರನು ಕೈಲಾಸದಲ್ಲಿದ್ದಾನೆ–ಅವನ ಹತ್ತಿರ ಹೋದರೆ ಕಾರ್ಯ ಸಿದ್ಧಿಯಾಗುವುದು" ಎಂಬುದನ್ನು ಶಿವನನ್ನು ನೆನೆದು ಹೇಳಿ ಅವರೊಡನೆ ಹೊರಟನು. ಅಲ್ಲದೆ ರುದ್ರನಲ್ಲದೆ ಯಾರೂ ಅವನನ್ನು ಕೊಲ್ಲಲಾರರೆಂಬುದೂ ಅವನು ಪೂರ್ವಜನ್ಮದಲ್ಲಿ ಕೃಷ್ಣ ಪಾರ್ಷದನಾಗಿದ್ದಾಗ ರಾಧೆ ಅವನಿಗೆ ಅವನ ತಪ್ಪಿಗಾಗಿ ಈ ದಾನವಜನ್ಮ ಬರಲೆಂದು ಶಾಪವಿತ್ತಳೆಂಬುದೂ ಸ್ಪಷ್ಟವಾಯಿತು. ರುದ್ರಾಸ್ಥಾನಕ್ಕೆ ಹೋದಾಗ ರುದ್ರನು ಮಾಯೆಯಿಂದ ಶಂಖಚೂಡನ ಪತ್ನಿಯ ಪಾತಿವ್ರತ್ಯವನ್ನು ಭಂಗಿಸ ಹೇಳಿದಾಗ ಅವನು ಹಾಗೆ ಮಾಡಿದನು; ಕವಚವನ್ನು ಕೃಷ್ಣನು ವೃದ್ಧ ಬ್ರಾಹ್ಮಣ ರೂಪದಿಂದ ಹೋಗಿ ದಾನ ಪಡೆದನು. ಶಿವೋಕ್ತೋಪಾಯಗಳಿವು. ಇವುಗಳಿಂದ ಶಂಖಚೂಡನ ಭವಿಷ್ಯತ್ತಿಗೆ ಸಾಮರ್ಥ್ಯವು ನ್ಯೂನವಾಗುವಂತಾಯಿತು. ಇಷ್ಟರೊಳಗೇ ಅವನು ಇಂದ್ರಾದಿಗಳನ್ನೂ ವಿಷ್ಣುವನ್ನೂ ಸೋಲಿಸಿದ್ದನು. ಈಗ ಉಳಿದದ್ದು ಶಿವ (ರುದ್ರ) ನೊಬ್ಬನೇ. ಏಕೆಂದರೆ, ಶಿವ ಕಳುಹಿದ ಅವನ ಪುತ್ರರೂ ಸೈನ್ಯದೊಡನೆ ಹೋರಾಡಿ ಸೋತು ಸುಣ್ಣವಾಗಿದ್ದುದನ್ನು ಅವರೇ ರುದ್ರನಲ್ಲಿಗೆ ಬಂದು ಹೇಳಿದರು. ಶಿವಗಣ ನಾಯಕರುಗಳು:– ವೀರಭದ್ರ, ನಂದಿ, ಅಷ್ಟ ಭೈರವರು, ಭದ್ರಶಾಲಿ, ಮಹಾಕಾಲಿ, ಗಣೇಶ, ಸುಭದ್ರತೆ, ವಿಶಾಲಾಕ್ಷ, ಬಾಣ, ಪಿಂಗಲಾಕ್ಷ, ವಿಕಂಪನ, ವಿರೂಪ, ವಿಕೃತಿ, ಮಣಿಭದ್ರ, ಭಾಷ್ಕಲ, ಕಪಿಲ, ದೀರ್ಘದಂಷ್ಟ್ರ, ವಿಕರ, ತಾಮ್ರಲೋಚನ, ಕಾಲಂಕರ, ಬಲೀಭದ್ರ, ಕಾಲಜಿಹ್ವ, ಏಕಾದಶರುದ್ರರು, ಕುಟೀಚರ, ಬಲೋನ್ಮತ್ತ, ರಣಶ್ಲಾಘ, ದುರ್ಜಯ, ದುರ್ಗಮ ಇವರುಗಳಲ್ಲದೆ ಶಂಖಕರ್ಣ, ಕೇಶರಾಕ್ಷ, ವಿಕೃತ ವಿಶಾಖ, ಪಾರಿಯಾತ್ರಿಕ, ಸರ್ವಾಂತಕ, ವಿಕೃತಾವನ, ಜಾಲಕ, ಗಣಪುಂಗವ, ಸಮದ, ದುಂದುಭಿ, ಕರಾಲಾಕ್ಷ, ಸಂದಾರಕ, ಕಂದುಕ, ಕುಂಡಕ, ವಿಷ್ಟಂಭ, ವಿಪ್ಪಲ, ಸಂನಾದ, ಆವೇಶನ. ಚಂದ್ರತಾಪನ, ಮಹಾಕೇಶ, ಕುಂಡಿ, ಪರ್ವತಕ, ಶುಭ, ಕಾಲ, ಕಾಲಕ, ಮಹಾಕಾಲ, ಅಗ್ನಿಕ, ಅಗ್ನಿ ಮುಖ, ಆದಿತ್ಯ, ಘನಾವಹ, ಸನಾಹ, ಕುಮುದ, ಅಮೋಘ, ಕೌಶಿಲ, ಸುಮಂತ್ರಕ, ಕಾಳಪಾದ, ಸಂತಾನಕ, ಮಹಾಬಲ, ಮಧುಪಿಂಗಲ, ನೀಲ, ಪೂರ್ಣಭದ್ರ, ಚತುರ್ವಕ್ತ್ರ, ಕಾಷ್ಠಾರೂಢ, ಸುಕೇಶ, ವೃಷ, ವಿರೂಪಾಕ್ಷ, ಕಾಲಕೇತು, ಪಂಚಾಸ್ಯ,

ಸಂವರ್ತಕ, ಚೈತ್ರ, ಲಕುಲೀಶ, ಲೋಕಾಂತಕ, ದೀಪ್ತಾತ್ಮ, ದೈತ್ಯಾಂತಕ, ಭೃಂಗಿ, ರಿಟಿ, ಅಶನಿ, ಭಾನುಕ, ಕಂಕಾಲ–ಈ ವೀರರು ರುದ್ರಾವತಾರರು, ಕೋಟಿಗಟ್ಟಲೆ ಸೈನ್ಯಗಳನ್ನುಳ್ಳವರು. ಸಹಸ್ರಹಸ್ತರು. ಜಟಾಜೂಟ ಮಂಡಿತರು, ಚಂದ್ರರೇಖಾವತಂಸರು, ಹಾರ ಕುಂಡಲಕೇಯೂರಧರರು.

ಇವರೆಲ್ಲರೂ ವಿಫಲರಾದ ಬಳಿಕ ಶಿವನು 'ವಿಜಯ' ವೆಂಬ ಹೆಸರಿನ ಶೂಲವನ್ನು ಶಂಖಚೂಡವಧಾರ್ಥವಾಗಿ ಹಿಡಿದನು. ದಶದಿಕ್ಕುಗಳೂ ಆ ಶೂಲದ ಪ್ರಕಾಶದಿಂದ ಪ್ರಜ್ವಲಿಸಿದವು. ಅವ್ಯರ್ಥವೂ, ವೈರಿಘಾತಕವೂ, ಸುರಾಸುರರಿಗೆ ದುಃಸಹವೂ ಆದ ಆ ಶೂಲವು ಆಕಾಶದಲ್ಲಿ ತಿರ್ರನೆ ತಿರುಗಿ ಶಂಖಚೂಡನ ಮೇಲೆರಗಿತು. ಶಿವಶಾಸನದಿಂದ ತತ್ಕ್ಷಣವೇ ಅವನನ್ನು ಭಸ್ಮವಾಗಿಸಿತು. ದೇವತೆಗಳಿಂದ ಪುಷ್ಪವೃಷ್ಟಿ, ಹರಿ–ಬ್ರಹ್ಮ–ಇಂದ್ರರಿಂದ ಪ್ರಶಂಸಾವೃಷ್ಟಿಯಾಯಿತು. ಶಂಖಚೂಡನು ಶಿವಕೃಪೆಯಿಂದ ಶಾಪಮುಕ್ತನಾಗಿ ಪೂರ್ವರೂಪ ಪಡೆದನು. ಭಸ್ಮೀಭೂತನಾದ ಶಂಖಚೂಡನ ಅಸ್ಥಿಗಳು ಶಂಖವಾದವು. ಶಂಖತೋಯವು ಶಂಕರನೊಬ್ಬನ ವಿನಃ ಎಲ್ಲರಿಗೂ ಪ್ರಿಯವಾಯಿತು. ವಿಶೇಷವಾಗಿ ಹರಿ ಲಕ್ಷ್ಮಿಯರಿಗೆ! ಈ ರೀತಿಯಲ್ಲಿ ಲೋಕ ಕಲ್ಯಾಣಕಾರಕವಾದ ಶಂಖಚೂಡವಧೆಯನ್ನು ಮಾಡಿದ ಶಂಕರನು ವೃಷಾರೂಢನಾಗಿ ಸೋಮ–ಸ್ಕಂದ–ಗಣಗಳಿಂದೊಡಗೂಡಿ ಶಿವಲೋಕವನ್ನು ಸೇರಿದನು. ಲೋಕದಲ್ಲಿ ಪ್ರಶಾಂತಿ ನೆಲೆಸಿತು.

–೨೭–

# ಅಂಧಕಾಸುರನ ಗಾಣಪತ್ಯ ಸಂಪಾದನೆ

ರುದ್ರನೊಮ್ಮೆ ಕಾಶಿಗೆ ಹೋದ. ಪಾರ್ವತಿಯೂ ಜೊತೆಗಿದ್ದಳು. ಆಗ ಅವಳೊಡನೆ ವಿಹರಿಸುತ್ತಿದ್ದ ಶಿವನು ಒಂದು ಕ್ಷಣ ಕಣ್ಣು ಮುಚ್ಚಿದ ಪಾರ್ವತಿಯು ಮುಚ್ಚಿಸಿದ್ದರಿಂದ, ಆಗ ಶಿವನ ಹಣೆಯಿಂದ ಸ್ವೇದಜನಾಗಿ ಅಂಧಕಾಸುರನು (ಕುರುಡನು) ಜನಿಸಿದನು. ಅವನನ್ನು ತನ್ನ ಮಗನಂತೆ ನೋಡಿಕೊಳ್ಳಬೇಕೆಂದು ಪಾರ್ವತಿಗೆ ರುದ್ರನು ಹೇಳಿದನು. ಅನಂತರ ಕಶ್ಯಪನ ಮಗನಾದ ಹಿರಣ್ಯನೇತ್ರನು ತನಗೊಬ್ಬ ಮಗ ಬೇಕೆಂದು ತಪಸ್ಸು ಮಾಡಿ ಬೇಡಿದಾಗ ರುದ್ರನು ಅವನಿಗೆ ಅಂಧಕಾಸುರನನ್ನು ಪುತ್ರನನ್ನಾಗಿ ದಯಪಾಲಿಸಿದನು. ಅವನ ಬಲದಿಂದ ಹಿರಣ್ಯನೇತ್ರನು ದೇವತೆಗಳೆಲ್ಲರನ್ನೂ ಸೋಲಿಸಿ ತನ್ನ ರಸಾತಲದಿಂದ ಲೋಕತ್ರಯವನ್ನೂ ಅಳತೊಡಗಿದನು. ಆಗ ಸುರಪ್ರಾರ್ಥಿತನಾದ ವಿಷ್ಣುವು ವರಾಹಾವತಾರ ತಾಳಿ ರಸಾತಲಕ್ಕೆ ಹೋಗಿ ಹಿರಣ್ಯಾಕ್ಷನನ್ನು ಕೊಂದು ಬಂದನು. ಅನಂತರ ಅವನ ತಮ್ಮ ಹಿರಣ್ಯಕಶಿಪು ಪಟ್ಟಾಭಿಷಿಕ್ತನಾದನು. ದೇವತೆಗಳು ಕೊಟ್ಟ ದೂರಿನ ಪ್ರಕಾರ ದೇವಪೀಡಕನಾದ ಹಿರಣ್ಯಕಶಿಪುವನ್ನು ವಿಷ್ಣುವು ನರಸಿಂಹಾವತಾರದಿಂದ ಕೊಂದನು. ಅವನ ಮಗನು ವಿಷ್ಣು ಭಕ್ತನಾದ ಪ್ರಹ್ಲಾದ. ಅವನಿಗೆ ರಾಜ್ಯಪಟ್ಟ ಸಿಕ್ಕಿದಾಗ ಕೆಲ ದೈತ್ಯರು ಅಂಧಕಾಸುರನನ್ನು ಕುರಿತು ಚೇಷ್ಟೆ ಮಾಡಿದರು. ಅದರಿಂದ ಸಿಟ್ಟಿಗೆದ್ದ ಹುಟ್ಟು ಕುರುಡ ಅಂಧಕನು ಬ್ರಹ್ಮನನ್ನು ಕುರಿತು ಅತ್ಯಂತ ಕಠಿಣವಾದ ತಪಸ್ಸನ್ನು ಮಾಡಿ ಅವನಿಂದ ಕಣ್ಣುಗಳನ್ನು ಪಡೆದು ಅವನ ಆಜ್ಞೆಯಿಂದ ಯುದ್ಧಮಾಡಿ ಸುರಾಸುರರನ್ನು ಗೆದ್ದನು. ತ್ರೈಲೋಕ್ಯವು ಅವನಿಗೆ ವಶವರ್ತಿಯಾಯಿತು. ಎಷ್ಟು ವರ್ಷಗಳ ಕಾಲ? ಅಯುತ ವರ್ಷಗಳವರೆಗೆ! ಅನಂತರ ದುಷ್ಟ ಸಹವಾಸದಿಂದ ವೈದಿಕ ಧರ್ಮವನ್ನು ನಾಶ ಮಾಡಿದನು. ಮದೋನ್ಮತ್ತನಾಗಿ ಅವನು ಮಂದರ ಪರ್ವತಕ್ಕೆ ಹೋಗಿ ಅಲ್ಲೇ ಅರಮನೆ ಕಟ್ಟಿಸಿಕೊಂಡು ಐಷಾರಾಮಮಗ್ನನಾದನು. ಒಮ್ಮೆ ಅಲ್ಲಿ ತಪಸ್ವಿಯೊಡನಿದ್ದ ಸುಂದರಿಯೊಬ್ಬಳನ್ನು ಕಂಡು ಮರುಳಾದನು. ಅವಳು ತಪಸ್ಸು ಮಾಡುತ್ತಿದ್ದ ರುದ್ರನ ಹೆಂಡತಿ. ಅಂಧಕ ಮಂತ್ರಿಗಳು ಮಹಾದೇವನಿಗೆ ಅವನು ತನ್ನ ಹೆಂಡತಿಯನ್ನು ಒಪ್ಪಿಸಲು ಕೇಳಿಕೊಂಡದ್ದನ್ನು ಕೇಳಿದ ಕೂಡಲೇ ಕೋಪ ಬಂತು. ಅವರ ಬೇಡಿಕೆಯನ್ನು ಶಿವ ತಿರಸ್ಕರಿಸಿದನು. ಅದರಿಂದ ರೋಷಾವಿಷ್ಟನಾದ ಅಂಧಕಾಸುರನು ಯುದ್ಧಕ್ಕಿಳಿದು ಬಹಳ ಕಷ್ಟ ನಷ್ಟಗಳಿಗೊಳಗಾದನು. ಅವನ ಪರವಾಗಿ ವಿರೋಚನ, ಬಲಿ, ಬಾಣ, ಸಹಸ್ರಬಾಹು, ಭಜಿ, ಕುಂಜಭ, ಶ್ರಂಬರ, ವೃತ್ರರು ಯುದ್ಧಮಾಡಿ ರಕ್ತದ ನದಿಯಲ್ಲಿ ಬಿದ್ದರು.

ಶಿವಗಣ ಕೇಕೇ ಹಾಕಿತು. ಆದರೆ ಪಿನಾಕಿಯೂ ದೈತ್ಯರಿಂದ ಭಗ್ನನಾದನು. ಶಿವನು ತಪಸ್ಸಿಗೆ ಹೋದ. ಪಾರ್ವತಿಗೆ ಅಭಯವನ್ನಿತ್ತ ಅವಳ ಮಕ್ಕಳೊಡನೆ ಅಂಧಕ ಹೋರಾಡಿದ. ಆದರೆ ಅವನ ಸೈನ್ಯದ ಆಯುಧಗಳು ಅವಳಿದ್ದ ಗುಹೆಯೆದುರು ನಿಷ್ಕ್ರಿಯವಾದವು. ಆದರೂ ದೈತ್ಯರು ಹೋರಾಡುತ್ತಲೇ ಹೋದರು. ಆಗ ದೇವಿಯು ಬ್ರಹ್ಮನನ್ನು ನೆನೆದಳು. ವಿಷ್ಣುವನ್ನು ಸ್ಮರಿಸಿದಳು. ಆ ಕೂಡಲೇ ಬ್ರಹ್ಮ, ವಿಷ್ಣು, ರುದ್ರ ಇಂದ್ರಾದಿಗಳು ಸ್ತ್ರೀ ರೂಪ ತಾಳಿ ಸ್ತ್ರೀ ಸೈನ್ಯದೊಡನೆ ಅಂಧಕನ ಸೈನ್ಯಕ್ಕೆ ಎದುರಾದರು. ಯುದ್ಧ ಪುನರಾರಂಭವಾಯಿತು. ಬ್ರಾಹ್ಮಿಯು ದಂಡಹಸ್ತೆಯಾದಳು: ದಂಡಧರೆಯಾದ ಗೌರಿಯು ಮುನಿದೆದ್ದಳು; ನಾರಾಯಣಿಯು ಶಂಖ ಚಕ್ರ ಗದಾ ಧನುರ್ಬಾಣ ಪಾಣಿಯಾದಳು; ವ್ಯೋಮಾಲಕೆಯು ಲಾಂಗಲ ದಂಡವನ್ನು ಹಿಡಿದೆದ್ದಳು; ಇಂದ್ರಾಣಿಯು ವಜ್ರಾಯುಧವನ್ನೆತ್ತಿ ಬಂದಳು; ಸಹಸ್ರನೇತ್ರೆಯು ದುರ್ಜಯೆಯೊಡನೆ ರಣರಂಗಕ್ಕೆ ಬಂದಳು. ವೈಶ್ವಾನರಿ, ಯಾಮ್ಯೆಯರು ದಂಡಪಾಣಿಗಳಾದರು; ನೈಋತಿ ಶಕ್ತಿಯಾದ ಘೋರಚಾಪೆಯು ತೀಕ್ಷ್ಣ ಖಡ್ಗ ಹಿಡಿದಳು; ತೋಯಾಲಿಕೆಯು ವಾರುಣ ಪಾಶ ಹಿಡಿದು ಧುಮ್ಮಿಕ್ಕಿದಳು; ಪಾರ್ವತೀದೇವಿ (ರುದ್ರಾಣಿ) ಅಂಕುಶ ಪಾಣಿಯಾಗಿ ಬಂದಳು, ಕುಬೇರ ಶಕ್ತಿಯು ಗದೆಯನ್ನೆತ್ತಿದಳು; ಯಾಕ್ಷೇಶ್ವರಿಯು ನಖಾಯುಧೆಯಾಗಿ ಗರ್ಜಿಸಿದಳು. ಅವರನ್ನು ಅಂಧಕನು ಸೋಲಿಸಿದನು. ಆಗ ಕೃತ್ತಿವಾಸನಾದ ರುದ್ರನು ಅವತರಿಸಿದನು. ಗೌರೀಶಂಕರರು ಸಾವಿರ ವರ್ಷ ಅಂಧಕನೊಡನೆ ಪರಾಕ್ರಮದಿಂದ ಹೋರಾಡಿದರು; ವಿಷ್ಣ್ವಾದಿಗಳೂ ಹೋರಾಡಿದರು. ಆದರೆ ಶುಕ್ರಬಲದಿಂದ, ಅವನ ಸಂಜೀವಿನೀ ವಿದ್ಯೆಯಿಂದ, ಹತರಾದ ಅಸುರರು ಎದ್ದೆದ್ದು ಬಂದು ಮತ್ತೆ ಹೋರಾಡತೊಡಗಿದರು. ಆಗ ಅವನನ್ನು ಹೆಡೆಮುರಿಗೆಗಟ್ಟಿ ಗಣಗಳು ಶಿವನೆದುರು ಕೆಡಹಿದರು. ಅಷ್ಟಾದ ಕೂಡಲೇ ಅಂಧಕನ ಸೇನಾನಿಗಳೂ ಸೈನಿಕರೂ ಸೋತರು, ಸತ್ತರು. ಅಂಧಕನು ವಿಷ್ಣು ಮಾಯೆಯಾದ ದೇವಿಯೊಡನೆ ಸತ್ತು ಕೆಟ್ಟು ಹೋರಾಡಿದನು. ಆದರೂ ಸ್ಥಾಣುವಿನೆದುರು ಸೋತು ಸುಣ್ಣವಾದರೂ ಹೆದರದೆ ನಿಂತ ಅಂಧಕನನ್ನು ಕಂಡು ಶಿವನು ಮೆಚ್ಚಿದನು. ಅಂಧಕನು ಶಿವಸ್ತುತಿ ಮಾಡಿದನು, ಅವನನ್ನು ವಂದಿಸಿದನು. ಅದಕ್ಕೆ ಮೆಚ್ಚಿ ಶಿವನು ಅವನನ್ನು ಕೊಂದು ಅವನಿಗೆ ದಿವ್ಯ ಶರೀರವನ್ನಿತ್ತು ತನ್ನ ಗಣಪತಿಗಳಲ್ಲಿ ಒಬ್ಬನನ್ನಾಗಿ (ಸೇವಕನನ್ನಾಗಿ) ನಿಯಮಿಸಿಕೊಂಡನು. ಅಲ್ಲಿಗೆ ಯುದ್ಧ ಮುಗಿಯಿತು. ಎಲ್ಲರೂ ಸಂತುಷ್ಟರಾಗಿ ಅವರವರ ಬೀಡುಗಳಿಗೆ ತೆರಳಿದರು. ಶುಕ್ರನನ್ನು ಅಷ್ಟರೊಳಗೆ ಶಿವನು ನುಂಗಿದ್ದನು. ಶುಕ್ರನು ಶಾಂಭವ ಯೋಗದಿಂದ ತಪಸ್ಸು ಮಾಡಿ ಶಿವನ ಹೊಟ್ಟೆಯಿಂದ ವೀರ್ಯರೂಪದಿಂದ (ಬಲರೂಪದಿಂದ) ಹೊರಬಂದು ಶಿವಲಿಂಗ (ಶುಕ್ರೇಶಲಿಂಗ)ವನ್ನು ಸ್ಥಾಪಿಸಿ, ಅವನು ಕಸಿದುಕೊಂಡಿದ್ದ ಮೃತ ಸಂಜೀವನೀ ವಿದ್ಯೆಯನ್ನು ಅವನಿಂದ ಪುನಃ ಪಡೆದು ಅವನ ಸ್ತೋತ್ರದಿಂದಲೇ ಶೇಷಾಯುಷ್ಯವನ್ನು ಕಳೆಯಲು ನಿರ್ಧರಿಸಿ ಶಿವಪುತ್ರತ್ವದ ಸ್ಥಾನ ಹೊಂದಿ ಹೊರಟು ಹೋದನು. (ವಿಷ್ಣು ಪುರಾಣವು ಇದನ್ನು ಸಮರ್ಥಿಸಿದೆ)

–೨೮–

# ಬಾಣಾಸುರ ಗರ್ವಭಂಗ

ಬ್ರಹ್ಮನ ಮಾನಸ ಪುತ್ರನಾದ ಮರೀಚಿಯು ಮಹಾಮುನಿ, ಜ್ಯೇಷ್ಠ ಪ್ರಜಾಪತಿ. ಅವನ ಮಗನು ಕಶ್ಯಪ ಮಹಾಮುನಿ. ದಕ್ಷನ ೧೩ ಜನ ಕನ್ಯೆಯರನ್ನು ಕಶ್ಯಪನು ಮದುವೆಯಾಗಿದ್ದನು. ಅವರಲ್ಲಿ ಹಿರಿಯಳು ದಿತಿ. ಅವಳ ಮಕ್ಕಳು ದೈತ್ಯರು. ಉಳಿದ ಕಶ್ಯಪ ಪತ್ನಿಯರಿಂದ ದೇವಾದಿ ಸಚರಾಚರಗಳು ಹುಟ್ಟಿದವು.

ದಿತಿಯ ಜ್ಯೇಷ್ಠ ಪುತ್ರನು ಹಿರಣ್ಯಕಶಿಪು. ಅವನ ತಮ್ಮ ಹಿರಣ್ಯಾಕ್ಷ. ಹಿರಣ್ಯ–ಕಶಿಪುವಿಗೆ ನಾಲ್ಕು ಜನ ಮಕ್ಕಳು. ಹ್ಲಾದ, ಅನುಹ್ಲಾದ. ಸಂಹ್ಲಾದ ಮತ್ತು ಪ್ರಹ್ಲಾದ ಎಂದು ಅವರ ಹೆಸರುಗಳು. ಜಿತೇಂದ್ರಿಯನಾದ ಪ್ರಹ್ಲಾದನು ವಿಷ್ಣು ಭಕ್ತನು. ಅವನನ್ನು ದೈತ್ಯರಲ್ಲಿ ಯಾರೂ ಕೊಲ್ಲಲಾರದಾದರು. ಅವನ ಮಗ ವಿರೋಚನ. ಅವನು ಇಂದ್ರನು ಬೇಡಿದ ಕೂಡಲೇ ತನ್ನ ತಲೆಯನ್ನೇ ದಾನ ಕೊಟ್ಟ ದಾನಶೂರ. ಅವನ ಮಗನು ಬಲಿಚಕ್ರವರ್ತಿ. ಅವನು ಮಹಾದಾನಿಯೂ ಶಿವಭಕ್ತನೂ ಆಗಿದ್ದನು. ವಾಮನ ರೂಪದಲ್ಲಿ ಬಂದ ವಿಷ್ಣುವಿಗೆ ಅವನು ಇಡೀ ಭೂಮಂಡಲವನ್ನು ದಾನ ಮಾಡಿದನು. ಅವನ ಮಗ ಬಾಣಾಸುರ; ಅವನು ಶಿವಭಕ್ತ, ಮಾನ್ಯ, ವದಾನ್ಯ, ಧೀಮಂತ. ಅವನು ಮಹಾದಾನಿಯೂ ಆಗಿದ್ದನು. ಅವನ ರಾಜಧಾನಿ ಶೋಣಿತಪುರ. ಅವನು ಮೂರು ಲೋಕಗಳನ್ನು ಗೆದ್ದು ಆಳುತ್ತಿದ್ದನು. ದೇವತೆಗಳು ಅವನ ಕಿಂಕರರು. ದೇವತೆಗಳನ್ನುಳಿದರೆ ಇನ್ನಾರೂ ಬಾಣನ ರಾಜ್ಯದಲ್ಲಿ ದುಃಖಿಗಳಾಗಿರಲಿಲ್ಲ. ಅವರ ದಾಯಾದ ಮತ್ಸರವೇ ಅವರ ದುಃಖಿತ್ವಕ್ಕೆ ಕಾರಣ; ಅಲ್ಲದೆ ಅವರು ಪರಧರ್ಮೀಯರಾಗಿದ್ದದ್ದೂ ಮತ್ತೊಂದು ಕಾರಣ. ದೇವಧರ್ಮ–ದೈತ್ಯಧರ್ಮಗಳು ಭಿನ್ನ. ದಾನಿ ದೇವ; ದಯಾಮಯನು ಮನುಷ್ಯ; ಷಡ್ವೈರಿದಾಸ್ಯಮುಕ್ತನು ಸುದೈತ್ಯ. ಅದಾನಿ, ಸ್ವಾರ್ಥಿ, ನಿರ್ದಯನು, ಅಸಂಸ್ಕೃತ ಮತ್ತು ಅಜಿತೇಂದ್ರಿಯನು ದುರ್ದೈತ್ಯ. ಮಾನವರಲ್ಲೇ ಈ ಒಂದೊಂದು ಗುಣವು ಪ್ರಧಾನವಾಗಿರುವವರನ್ನು ಕಾಣಬಹುದು. ಆದುದರಿಂದಲೇ Super human ಅತಿಮಾನವರೆನ್ನಿಸಿದ ದೇವ, ದೇವರ್ಷಿ, ದಾನವರ ಚರಿತ್ರೆಯನ್ನು ಪುರಾಣಗಳು ಮನುಷ್ಯಲೋಕದಲ್ಲೇ ನಡೆದಂತೆ ಚಿತ್ರಿಸುವುದು ಸಾಮಾನ್ಯವಾಗಿದೆ. ಸ್ವರ್ಗ–ಮರ್ತ್ಯ–ಪಾತಾಳಗಳಲ್ಲಿ ಮರ್ತ್ಯವೇ ಪುರಾಣಗಳಲ್ಲಿ ಪ್ರಧಾನ. ಮರ್ತ್ಯಲೋಕದ ಆಗು–ಹೋಗುಗಳಿಗೆ ದೇವರ್ಷಿಪಿತೃದಾನವರ ಸಂಬಂಧ ಯಾವಾಗಲೂ ಇದ್ದೇ ಇದೆ ಎಂಬುದು ಪುರಾಣಗಳಲ್ಲಿ ಸ್ಪಷ್ಟ. ಆದ್ದರಿಂದ Character in Destiny ಚಾರಿತ್ರವೇ ಒಬ್ಬನ ಅಂತ್ಯಸಿದ್ಧಿಗೆ ಕಾರಣವೆಂಬ ಗಾದೆಯಂತೆ ಅವರ

ಚರಿತ್ರೆಗಳು ಮಾನವರಿಗೆ ಯುಕ್ತಾಯುಕ್ತ ವಿವೇಕವನ್ನು ಕಲಿಸುವುದರಿಂದ ಪುರಾಣಗಳು Relevant ಸದ್ಯ: ಕಾಲದ ಮಾನವ ಜೀವಿತಕ್ಕೆ ಅನ್ವಯವಾಗುತ್ತವೆ ಎಂಬುದು ತಾತ್ವಿಕ ನ್ಯಾಯ.

ಬಲಿಪುತ್ರನಾದ ಬಾಣನು ಶಿವಮಾಯೆಯಿಂದ ಮೋಹಿತನಾದನು. ಅವನಿಗೆ, ಶಿವಭಕ್ತನಾದುದರಿಂದ, ಶಿವನು ಅನೇಕ ವರಗಳನ್ನಿತ್ತನು. ಬಾಣನು ಸಹಸ್ರಬಾಹುವಾದನು. ಆ ತೋಳ್ಗಳ ತೀನಿನಿಂದ ಅವನು ಯುದ್ಧಾರ್ಥಿಯಾದನು. ಏಕೆಂದರೆ ಯಮ ಅವನ ರೋಧನಾದನು; ವಹ್ನಿಯು ಕೃತಕನಾದನು; ವರುಣನು ದನಕಾಯುವವನಾದನು; ಕುಬೇರನು ಅವನ ಆಸ್ಥಾನದಲ್ಲಿ ಗಜಾಧ್ಯಕ್ಷನಾದನು; ನಿರ್ಋತಿಯು ಸೈರಂಧ್ರಿಯಾದನು; ಇಂದ್ರನು ಕಪ್ಪಕಾಣಿಕೆಗಳನ್ನು ಕೊಡಬೇಕಾಯಿತು. ಯುದ್ಧಾರ್ಥಿಗೆ ಆಗ ಶಿವನು ಯುದ್ಧ ಭಿಕ್ಷೆಯನ್ನು ನೀಡಿದನು. ಅವನು ಅಂದಿನಿಂದ WARMONGER ಕೆರೆದು ಕೆರಳಿಸಿ ಯುದ್ಧಕ್ಕಿಳಿಯುವ ದುರ್ಬುದ್ಧಿಯನ್ನು ತಾಳಿದನು. (ಮಂತ್ರಿ) ಕುಂಭಾಂಡನಿಗೆ ತನಗೆ ದೊರೆತ ಶಿವ ವರಗಳನ್ನು ವಿವರಿಸಿದನು. ಒಮ್ಮೆ ಅಕಸ್ಮಾತ್ತಾಗಿ ಅವನ ಮಯೂರ ಧ್ವಜವು ದೈವದಿಂದ ಭಗ್ನವಾಯಿತು. ಆ ಕೂಡಲೇ ಅವನು ಯುದ್ಧಕ್ಕೆ ಹೊರಟನು, ಎದುರಾಳುಗಳನ್ನು ಹುಡುಕಲು ಹೊರಟನು.

ಇತ್ತ ಬಾಣಾಸುರನ ಮಗಳು ಉಷೆ ವಿಷ್ಣುಭಕ್ತೆಯಾಗಿ ಪ್ರಾಯಕ್ಕೆ ಬಂದಿದ್ದಳು. ಅವಳು ಮಲಗಿದ್ದಾಗ ಸ್ವಪ್ನದಲ್ಲಿ ಗೌರಿಯು ದಿವ್ಯ ಮಾಯೆಯಿಂದ ಶ್ರೀ ಕೃಷ್ಣನ ಮೊಮ್ಮಗನಿದ್ದ ದ್ವಾರಾವತಿಗೆ ಒಯ್ಯಲ್ಪಟ್ಟು ಕೃಷ್ಣಪೌತ್ರನಲ್ಲಿ ಅನುರಕ್ತೆಯಾಗುವಂತೆ ಮಾಡಿದಳು. ಎಚ್ಚೆತ್ತ ಉಷೆಯು ತನ್ನ ಸಖಿ ಕುಂಭಾಂಡ ಪುತ್ರಿಗೆ ಪಾರ್ವತಿ "ನಿನಗೆ ಇವನೇ ವರ" ಎಂದು ಹೇಳಿದ್ದನ್ನು ತಿಳಿಸಿದಳು. ಅವನಾರು? ಕೃಷ್ಣನ ಮಗನ ಮಗನಾದ ಅನಿರುದ್ಧ. ಅವನು ಸ್ವಪ್ನದಲ್ಲಿ ಬಂದು ತನ್ನ ಹೃದಯವನ್ನು ಅಪಹರಿಸಿದ್ದನ್ನು ತನ್ನ ಗೆಳತಿಗೆ ಹೇಳಿದಳು. ಅದನ್ನು ಕೇಳಿದ ಚಿತ್ರಲೇಖೆಯೆಂಬ ಮತ್ತೊಬ್ಬ ಸ್ನೇಹಿತೆ ತನ್ನ ಯೋಗಬಲದಿಂದ ಅವನನ್ನು ಅವಳಿದ್ದೆಡೆಗೆ ತಂದು ಬಿಡುವೆನೆಂದು ವಚನ ಕೊಟ್ಟಳು; ಅವನ ಕುಲಗೋತ್ರ ಮುಂತಾದ ವಿವರಗಳನ್ನೆಲ್ಲಾ ಉಷೆಯು ಅವಳಿಂದ ತಿಳಿದುಕೊಂಡಳು. ಚಿತ್ರಲೇಖೆ ದ್ವಾರಾವತಿಗೆ ಹೋಗಿ ಅಲ್ಲಿಯ ಉದ್ಯಾನದಲ್ಲಿ ಕ್ರೀಡಿಸುತ್ತಿದ್ದ ಅನಿರುದ್ಧನನ್ನು ಎತ್ತಿಕೊಂಡು ಬಂದು ಉಷೆಯ ಶಯ್ಯಾಗಾರದಲ್ಲಿ ಬಿಟ್ಟಳು. ದ್ವಾರಾವತಿಯಿಂದ ಶೋಣಿತಪುರಕ್ಕೆ ಅನಿರುದ್ಧ ಬಂದದ್ದು ಹೀಗೆ. ಅವಳು ಅವನೊಡನೆ ಅಂತಃಪುರದಲ್ಲಿ ಕ್ರೀಡಿಸುತ್ತಿದ್ದ ದುಃಶೀಲವನ್ನು ಕಂಚುಕಿಗಳು ಬಾಣಾಸುರನಿಗೆ ತಿಳಿಸಿದರು. ಅದರಿಂದ ಬಾಣನು ಕ್ರುದ್ಧನಾದನು. ಅವನಿಗೀಗ ಯುದ್ಧಕ್ಕೊಬ್ಬ ಶತ್ರು ಸಿಕ್ಕಿದಂತಾಯಿತು. ಅವನನ್ನು ಕೊಲ್ಲಲು ಬಾಣನು ಹತ್ತುಸಾವಿರ ಸೈನಿಕರಿಗೆ ಆಜ್ಞಾಪಿಸಿದನು. ಶಿವತೇಜೋವೃದ್ಧನಾದ ಅನಿರುದ್ಧನು ಪರಿಘದಿಂದ ಆ ಸೈನಿಕರೆಲ್ಲರನ್ನೂ ಸದೆಬಡಿದನು. ಅನಂತರ ಸತ್ತವರ ಸಂಖ್ಯೆ ಲಕ್ಷಕ್ಕೇರಿತು. ಬಾಣ ಮತ್ರಿ ಕುಂಭಾಂಡನೂ ತನ್ನ ಶಕ್ತ್ಯಾಯುಧದಿಂದ ಹೊಡೆದ ಅನಿರುದ್ಧನಿಂದ ತಾಡಿತನಾದನು. ಬಾಣನೂ

ಶಕ್ತ್ಯಾಯುಧಕ್ಕೆ ತುತ್ತಾಗುವಷ್ಟರಲ್ಲಿ, ಅದೃಶ್ಯನಾಗಿ ಮಾಯಾಬಲದಿಂದ ಅನಿರುದ್ಧನನ್ನು ಅವನು ಸೆರೆಮನೆಯಲ್ಲಿಟ್ಟನು. ಅನಿರುದ್ಧನೀಗ ನಾಗಪಾಶಬದ್ಧ! ಬಾಣನು ತನ್ನ ಸೂತ (ಸಾರಥಿ) ಪುತ್ರನನ್ನು ಕರೆದು ಈ ಸೆರೆಯಾಳನ್ನು ಕಡಿದು ತುಂಡು ತುಂಡು ಮಾಡಿ ಮಾಂಸ ಭಕ್ಷಕರಾದ ಅಸುರರಿಗೆ ಉಣಬಡಿಸೆಂದು ಅಪ್ಪಣೆಯಿತ್ತನು. ಆಗ ಮಂತ್ರಿ ಕುಂಭಾಂಡನು ಹಾಗೆ ಮಾಡಕೂಡದೆಂದೂ ಅನಿರುದ್ಧನು ಶಿವಶಕ್ತಿ ಸಂಪನ್ನನೆಂದೂ ಅವನ ರೋಮವೂ ಈ ನಾಗಬಂಧದಿಂದ ಕೊಂಕದಿರುವುದನ್ನು ನೋಡೆಂದೂ ಬಾಣಾಸುರನಿಗೆ ಬುದ್ಧಿ ಹೇಳಿದನು. ಅಷ್ಟರಲ್ಲಿ ಆಕಾಶವಾಣಿ ಕೇಳಿಬಂತು: "ಬಾಣಾ, ನೀನು ಅನಿರುದ್ಧನನ್ನು ಹಿಂಸಿಸಿದರೆ ಹಾಳಾಗುವೆ–ಶಿವನು ನಿನ್ನ ಗರ್ವಭಂಗಕ್ಕಾಗಿ ಅವನನ್ನು ಇಲ್ಲಿಗೆ ಕಳುಹಿಸಿದ್ದಾನೆ" ಎಂದು.

ಅದನ್ನು ಕೇಳಿದ ಬಾಣಾಸುರ ಅನಿರುದ್ಧನ ಹತ್ಯೆಗೈಯುವ ವಿಚಾರ ತ್ಯಜಿಸಿದನು. ಇತ್ತ ನಾಗಪಾಶಬದ್ಧನಾದ ಅನಿರುದ್ಧ, ದೇವಿ ದುರ್ಗೆಯನ್ನು ಆರ್ತನಾಗಿ ಪ್ರಾರ್ಥಿಸಿದ. ಕರಗಿದ ದೇವಿ ನಾಗಪಾಶವನ್ನು ಮುಷ್ಟಿಘಾತದಿಂದ ಬಿಡಿಸಿ, ಅವನನ್ನು ಮುಕ್ತವಾಗಿಸಿ ಅಂತಃಪುರ ಪ್ರವೇಶ ಮಾಡಿಸಿ ಅಂತರ್ಧಾನಳಾದಳು.

ಇತ್ತ, ಅನಿರುದ್ಧನನ್ನು ಕಾಣದ ಕೃಷ್ಣ ಪತ್ನಿಯರು ದುಃಖಿತರಾದರು. ನಾಲ್ಕು ವರ್ಷಗಳು ಕಳೆದವು. ಕೃಷ್ಣ ಬಾಣಾಸುರನೊಂದಿಗೆ ಯುದ್ಧಕ್ಕೆ ಸಜ್ಜಾದನು. ಶಿವನು ವೃಷಭಾರೂಢನಾಗಿ ಭಕ್ತನಾದ ಬಾಣನ ರಕ್ಷಣೆಗೆ ಬಂದನು. ಶಿವ ಕೃಷ್ಣರ ಯುದ್ಧ ಅತಿ ಭಯಂಕರವಾಯಿತು. ಕೃಷ್ಣ ಸೈನ್ಯವೆಲ್ಲ ನಾಶವಾಯಿತು. ಆಗ ಕೃಷ್ಣನು ಶಿವನನ್ನು ಸ್ತುತಿಸಿ 'ನಿನ್ನ ಇಚ್ಛೆಯಂತೆಯೇ ಬಾಣನ ಗರ್ವಭಂಗಕ್ಕಾಗಿ ಬಂದವನು ನಾನು. ಅದಕ್ಕೀಗ ಅನುಜ್ಞೆಕೊಡು' ಎಂದು ಬಿನ್ನವಿಸಿದನು. ಆಗ ಶಿವನು ತನ್ನ ಭಕ್ತ ಪರಾಧೀನತೆಯನ್ನೂ, ತತ್ಪರಿಣಾಮವಾದ ನಿರುಪಾಯಕತೆಯನ್ನೂ ವಿವರಿಸಿ ತನ್ನ ಮೇಲೆ ಜೃಂಭಣಾಸ್ತ್ರ ಬಿಟ್ಟು ನಿಯಂತ್ರಿಸುವಂತೆ ಸೂಚಿಸಿದನು! ಅದರಂತೆ ಶ್ರೀ ಕೃಷ್ಣನು ಜೃಂಭಣಾಸ್ತ್ರ ಪ್ರಯೋಗದಿಂದ ಶಿವನು ಮೋಹಿತನಾಗುವಂತೆ ಮಾಡಿ, ಬಾಣಾಸುರನೊಡನೆ ಯುದ್ಧಗೈದು, ಸುದರ್ಶನ ಚಕ್ರದಿಂದ ಅವನ ಬಹುಭುಜಗಳನ್ನು ಕಡಿದೊಗೆದು ಕೇವಲ ನಾಲ್ಕು ಭುಜಗಳಷ್ಟೇ ಅವಶಿಷ್ಟವಾಗುವಂತೆ ಮಾಡಿದನು. ಕುಪಿತನಾದ ಬಾಣನು ಕೃಷ್ಣನನ್ನು ಕೊಲ್ಲಲುದ್ಯುಕ್ತನಾದಾಗ ಕೃಷ್ಣನೂ ಬಾಣನ ಹತ್ಯೆಗೆ ಸಜ್ಜಾದನು. ಆಗ ಶಿವನು ಮಧ್ಯೆ ಪ್ರವೇಶಿಸಿ ತಡೆದು ಅವರಿಬ್ಬರಲ್ಲಿ ಮೈತ್ರಿ ಏರ್ಪಡಿಸಿದನು. ತದನಂತರ ಬಾಣನು ಲಜ್ಜಿತನೂ, ವ್ಯಥಿತನೂ ಆಗಿರಲಾಗಿ ನಂದಿಯು ಭಕ್ತವತ್ಸಲನಾದ ಶಿವನನ್ನು ಪುನಃ ಪುನಃ ಸ್ಮರಿಸಿ ಸುಪ್ರೀತಗೊಳಿಸುವಂತೆ ಉಪದೇಶಿಸಿದನು. ಅದರಂತೆ ಬಾಣಾಸುರನು ಭಕ್ತಿನಿರ್ಭರ ನೃತ್ಯ ಗೀತಾದಿಗಳಿಂದ ಶಿವನನ್ನು ಪ್ರಸನ್ನಗೊಳಿಸಿ ಶಿವನಲ್ಲಿ ಪರಮಭಕ್ತಿಯನ್ನೂ ಕೇಳಿ ಪಡೆದು ಗಾಣಪತ್ಯ ಪದವಿಯಿಂದ ಅನುಗೃಹೀತನಾದನು.

ಶಿವನಿಗೆ ವಿಶಿಷ್ಟವಾದ ಈ ಭಕ್ತಪರಾಧೀನತೆಯ ಪರಾಕಾಷ್ಠೆಯ ಸೌಂದರ್ಯ, ಸ್ವಾರಸ್ಯ ಈ ಕಥಾನಕದಲ್ಲಿ ಪ್ರಕಟವಾಗಿದೆ.

–೨೯–

# ಗಜಾಸುರನ ವಧೆ

ತನ್ನ ತಂದೆಯಾದ ಮಹಿಷಾಸುರನನ್ನು ಕೊಂದದ್ದಕ್ಕಾಗಿ ಕುಪಿತನಾದ ಗಜಾಸುರನು ಬ್ರಹ್ಮನನ್ನು ಕುರಿತು ಘನಘೋರ ತಪಸ್ಸು ಮಾಡಿ ಕಾಮನಿಂದ ಜಿತರಾದ ಯಾವ ಸ್ತ್ರೀ ಪುರುಷರಿಂದಲೂ ತನಗೆ ಸಾವು ಬರದಿರಲಿ ಎಂಬ ವರವನ್ನು ಪಡೆದನು. ಅದರಿಂದ ಅವನು ಮೂರು ಲೋಕಗಳನ್ನೂ ಗೆದ್ದನು; "ವಿಶ್ವಜಿತ್" ಎನ್ನಿಸಿಕೊಂಡನು. ದೇವತೆಗಳನ್ನೂ ಆಳತೊಡಗಿದ ಗಜಾಸುರನು ಮದೋನ್ಮತ್ತನಾಗಿ ಒಮ್ಮೆ ಶಂಕರನ ರಾಜಧಾನಿಗೆ ಹೋಗಿ ಅವನೊಡನೆ (ಕಾಶಿಯಲ್ಲಿ) ಘೋರವಾಗಿ ಕಾದಾಡಿದನು ಮತ್ತು ಸೋತನು. ಸೋತ ಮೇಲೆ ಶಿವಸ್ತುತಿ ಮಾಡಿ ಅವನನ್ನೊಲಿಸಿಕೊಂಡು– "ನೀನು ನನ್ನ ಶಿರಚ್ಛೇದ ಮಾಡು, ಅದರಿಂದ ನಾನು ಧನ್ಯನಾಗುವೆನು: ನನ್ನ ಚರ್ಮವನ್ನು ನೀನು ಯಾವಾಗಲೂ ಧರಿಸಿ ಕೃತ್ತಿವಾಸಸ್ಸೆಂಬ ಹೆಸರಿನಿಂದ ಪ್ರಸಿದ್ಧನಾಗಬೇಕು.".. ಎಂದು ಬೇಡಿದನು. ಈಶ್ವರನು "ತಥಾಸ್ತು" ಎಂದು, ಅವನಿಗೆ, ಕೃತ್ತಿವಾಸೇಶ್ವರ, ಎಂಬ ನಿನ್ನ ಶರೀರ ರೂಪದ ಸರ್ವೋತ್ತಮಲಿಂಗವು ಇಲ್ಲಿ ಮುಕ್ತಿಧಾಮವಾಗಿ ಮೂಡಲಿ ಎಂದು ಆಶೀರ್ವದಿಸಿ, ಗಜಾಸುರನ ಸಂಹಾರವನ್ನು ಮಾಡಿ, ದೇವಾಸುರರೆಲ್ಲರನ್ನೂ ಸಮಾಧಾನಗೊಳಿಸಿದನು. ಸರ್ವೋದಯಕ್ಕೆ ತಿಲಾಂಜಲಿಯಿತ್ತ ಗರ್ವೋದಯದ ಈ ಕಾಲಕ್ಕಿದು ತಕ್ಕ ಪಾಠ. ಮನುಷ್ಯರು ನವ ಖಂಡಪೃಥ್ವಿಯನ್ನು ನಾಶಮಾಡಿದರೂ ಶಿವನನ್ನು ನಾಶಮಾಡಲಾರರು. ಅವನು ಅದನ್ನು ಮೊದಲಿದ್ದಂತೆಯೇ ಮಾಡಲು ಮದೋನ್ಮತ್ತ ನೈಟ್ರೋಜನಾಸ್ತ್ರಪತಿಗಳನ್ನು ಸಂಹರಿಸಿಯೇ ತೀರುವನು!

–೩೦–

# ದುಂದುಭಿ ಸಂಹಾರ

ದಿತಿಪುತ್ರ ಹಿರಣ್ಯಾಕ್ಷ ಸತ್ತ ಮೇಲೆ ದಿತಿಗೆ ಬಹಳ ದುಃಖವುಂಟಾಯಿತು. ಪ್ರಹ್ಲಾದನ ಸೋದರ ಮಾವನಾದ ದುಂದುಭಿ ಅದರಿಂದ ಸಂತಪ್ತನಾದನು. ದಿತಿಗೆ ಸಮಾಧಾನ ಹೇಳಿ ದುಂದುಭಿಯು ಹಿರಣ್ಯಾಕ್ಷ–ಹಿರಣ್ಯ ಕಶಿಪುಗಳನ್ನು ಸಂಹರಿಸಿದ ವಿಷ್ಣುವನ್ನು ಸಂಹರಿಸಲು ಸನ್ನದ್ಧನಾದನು. ಅವನ ಆಲೋಚನೆ ಹೀಗಿತ್ತುಃ

ವಿಷ್ಣ್ವಾದಿ ದೇವತೆಗಳು ಹವಿಸ್ಸಿನಿಂದ ಬಲಪಡೆಯುವವರು. ಹವಿಸ್ಸಿನ ಯಜ್ಞ ಯೋಜನೆಯು ವೇದದಿಂದ ಹುಟ್ಟಿದ್ದು. ವೇದಗಳಿಗೆ ಬ್ರಾಹ್ಮಣರೇ ಆಧಾರ. ಆದ್ದರಿಂದ ದೇವ ಬಲದ ಮೂಲವೇ ಬ್ರಾಹ್ಮಣರು. ಅವರನ್ನು ಮೊದಲು ಸಂಹರಿಸಬೇಕು. ಆಗ ಬಡಕಲಾಗುವ ದೇವತೆಗಳನ್ನು ನಿಮಿಷಾರ್ಧದಲ್ಲಿ ಸೋಲಿಸಬಹುದು. Brahminbaiting ಬ್ರಾಹ್ಮಣರನ್ನು ಛೇಡಿಸುವ ತಂತ್ರದ ಮೂಲ ಪುರುಷನು ದುಂದುಭಿ–ಮೂಲ ದೇವನೆಂಬಾತನು ಕಳ್ಳರ ಗುರುವೆಂದು ದಂಡಿಯು ದಶಕುಮಾರ ಚರಿತದಲ್ಲಿ ಹೇಳಿದ ಹಾಗೆ. ಇಂದಿನ ಬ್ರಹ್ಮದ್ವೇಷಿಗಳು ದುಂದುಭಿಯ ಅನುಯಾಯಿಗಳೆಂದರೆ ತಪ್ಪೇ? ಅನೇಕ ಸಿದ್ಧಾಂತಗಳಿಗೆ (ಕಮ್ಯುನಿಜಂ ಕ್ಯಾಪಿಟಲಿಜಂ, ಡೆಮೊಕ್ರಾಟಿಕ್, ಸೋಷಲಿಜಂ ಇತ್ಯಾದಿಗಳಿಗೂ) ಮತ್ತು ಅನೇಕ ಉತ್ಸರ್ಗ ನಿಯಮಗಳಿಗೂ ನೂರಕ್ಕೆ ೯೯ರಷ್ಟು ಅಪವಾದಗಳಿರುತ್ತವೆ ಎಂಬುದಕ್ಕಿದು ಉದಾಹರಣೆ. ಇದನ್ನು ತಿಳಿಯದೆ ದುಂದುಭಿಯು ಹುಲಿಯ ರೂಪ ತಾಳಿ ಕಾಶಿಗೆ ಹೋಗಿ ಬ್ರಾಹ್ಮಣರನ್ನು ನುಂಗಲಾರಂಭಿಸಿದನು. ತಪೋಧನ (ವಿದ್ಯಾವಿನಯ ಸಂಪನ್ನ) ರಾದ ಆ ಬ್ರಾಹ್ಮಣರು ದೇವತೆಗಳೊಂದಿಗೆ ಜಗದ್ಗುರು ಶಿವನನ್ನು ಧ್ಯಾನಿಸಿದರು. ಆ ಪ್ರಕಾರ ವ್ಯಾಘ್ರರಾಜನ ರೂಪದಿಂದ ಅವತರಿಸಿ ಅಲ್ಲಿದ್ದ ಲಿಂಗದಲ್ಲಿ, ಅವರಿಗೆ ಅಭಯವಿತ್ತು. ಅಂತರ್ಧಾನ ಹೊಂದಿದನು. ಅದರಿಂದ ದುಂದುಭಿಯನ್ನು ಕೊಂದು ಕಾಶಿಯು ಶಿವಮಾಹಾತ್ಮ್ಯದಿಂದ ಭಾರತದಲ್ಲೇ ಪ್ರಮುಖ ಯಾತ್ರಾಸ್ಥಳವೆನ್ನಿಸಿತು.

-೩೧-

# ವಿದಲ-ಉತ್ಪಲರ ವಧೆ

ಹಿಂದೆ ವಿಧಿಯು ವರದಿಂದ ಯಾವ ಪುರುಷನಿಂದಲೂ ತಮಗೆ ಮರಣವೊದಗಬಾರದೆಂದು ಭದ್ರತೆಯನ್ನು ಮಾಡಿಕೊಂಡ ವಿದಲ-ಉತ್ಪಲರೆಂಬ ದೈತ್ಯರು ಸುರರಾಜ್ಯವನ್ನು ಆಕ್ರಮಿಸಿ ಆಳತೊಡಗಿದರು. ಸುರರಾಗ ಪರಮೇಶ್ವರನನ್ನು ಧ್ಯಾನಿಸಿದರು. ಆಗ ದೇವರ್ಷಿನಾರದನು ಆ ದೈತ್ಯರಲ್ಲಿ ಹೋಗಿ ಪಾರ್ವತಿಯ ಸೌಂದರ್ಯವನ್ನು ಬಣ್ಣಿಸಿದನು. ಅದನ್ನು ಕೇಳಿ ಆ ದೈತ್ಯರು ಪಾರ್ವತಿಯನ್ನು ಅಪಹರಿಸಲು ಹೋದರು. ಅವಳು ಆಗ ಚೆಂಡಾಡುತ್ತಿದ್ದಳು. ಅಷ್ಟು ಹೊತ್ತಿಗೆ ಅವರು ಹಗಲನ್ನು ಶಾಂಬರೀ ಮಾಯೆಯಿಂದ ಮೊಟಕುಗೊಳಿಸಿ, ಪಾರಿಷದಿ ಮಾಯೆಯನ್ನು ತಾಳಿ ಜಗದಂಬೆಯತ್ತ ಸಾರಿದರು. ದೇವತೆಗಳು ಅವರು ಮಾಯಾವಿಗಳಾದ ರಾಕ್ಷಸರೆಂದು ಶಿವನಿಗೆ ತಿಳಿಸಿದರು. ಶಿವನು ಪಾರ್ವತಿಗೆ ಕಣ್ಸನ್ನೆ ಮಾಡಿದನು. ಅದರ ಅರ್ಥ ಅವರು ಸ್ತ್ರೀಯರಿಂದ ವಧ್ಯರು ಎಂದು ಆಗ ಪಾರ್ವತಿಯು ತಾನು ಆಟವಾಡಲು ತೆಗೆದುಕೊಂಡಿದ್ದ ಚೆಂಡಿನಿಂದಲೇ ಆ ದೈತ್ಯರನ್ನು ಹೊಡೆದಾಗ ಅವರು ಮಹಾಬಲ ಪರಾಕ್ರಮಮಶಾಲಿಗಳಾಗಿದ್ದೂ ಗಿರಗಿರನೆ ತಿರುಗಿ ಮಹಾಗಿರಿ ಶೃಂಗಗಳು ಕಳಚಿ ಬಿದ್ದಂತೆ ಸತ್ತು ಬಿದ್ದರು. ಅನಂತರ ಆ ಚೆಂಡು ಲಿಂಗ ರೂಪ ತಾಳಿ ಕಂದುಕೇಶ್ವರ ಲಿಂಗವೆಂಬ ಪ್ರಖ್ಯಾತಿಯನ್ನು ಪಡೆಯಿತು. ಅದು ಜ್ಯೇಷ್ಠೇಶ್ವರ ಸಮೀಪದಲ್ಲಿದೆ.

ದುಷ್ಟರೆಷ್ಟು ಬಲಿಷ್ಠರಾದರೂ ಅವರಿಗೆ ತಿಳಿಯದೆ ಉಳಿದಿರುವ ಯಾವುದಾದರೊಂದು ದೌರ್ಬಲ್ಯದಿಂದ ಅವರು ಸರ್ವನಾಶ ಹೊಂದುವರು ಎಂಬುದನ್ನು ವಿದಲೋತ್ಪಲರ ಕಥೆ ಉದಾಹರಿಸುತ್ತದೆ. ಕೇಡಿಗತನವೆಂಬುವುದು ಒಂದು ಅಜ್ಞಾನಾವಸ್ಥೆ; ಅದು ಬೆಳವಣಿಗೆಯಲ್ಲಿ ಬಹಳ ಕೊರತೆಯಾಗಿರುವುದರ ಲಕ್ಷಣ-ಅಥವಾ ಅದು ಒಳಿತಿನದೇ ಒಂದು ಮೂರ್ಖಾವತಾರ-ಎಂಬ ಲೋಕರೂಢಿಯಿದೆ. ಗೀತೆಯ ೧೬ನೆಯ ಅಧ್ಯಾಯದಲ್ಲಿ ದುಷ್ಟನ ಒಳ ಆಲೋಚನೆಗಳನ್ನು ಚೆನ್ನಾಗಿ ಹೇಳಲಾಗಿದೆ:

**ಈಗ ನನಗಿದು ಸಿಕ್ಕಿತು। ಮತ್ತಿನಾ**
**ಶಾಗಣಗಳನು ಪಡೆವೆನು॥**

ಈಗ ನನ್ನಲ್ಲಿಹುದಿದು। ಹೊಸ ಆಸ್ತಿ
ಬೇಗನೆಯೆ ಬರಲಿರುವುದು ॥೧॥
ಈ ವೈರಿಯನ್ನು ಗೆದ್ದೆ। ಇತರರನು
ಕೈವಾರಕ್ಕೀಡು ಮಾಳ್ಪೆ॥
ಭಾವಿಪೊಡೆ ನಾನೀಶ್ವರ। ಭೋಗಿಗಳ
ಠಾವಿನಲ್ಲಗ್ರೇಸರ ॥೨॥
ಸಿದ್ಧರಿಗೆ ಸಿದ್ಧನಾನು। ಮಲ್ಲರಲಿ
ಯುದ್ದಬಲ ಸಂಪನ್ನನು॥
ನನ್ನಂಥ ಸುಖಿಗಳಿಲ್ಲ। ಆಢ್ಯರಲಿ
ನನ್ನ ಹೊಯ್ಕೈಗಳಿಲ್ಲ ॥೩॥
ನನಗಿರುವ ನೆಂಟರಷ್ಟು ! ಯೋಗ್ಯ ಜನ
ರನಿಬರಿಂಗಿಲ್ಲವಯ್ಯಾ॥
ನನಗೆ ಸರಿದೊರೆಯಾದವ। ಮೂಜಗದಿ
ಕೊನೆಗು ಸಿಗಲಾರನಯ್ಯಾ ॥೪॥

–೩೨–

# ಅವತಾರ ಮತ್ತು ಸೃಷ್ಟಿ ಕ್ರಮ

ಶಿವನ ಅವತಾರಗಳಲ್ಲಿ ಐದು ಮುಖ್ಯ: ಶ್ವೇತ ಲೋಹಿತ ಕಲ್ಪದಲ್ಲಾದ ಸದ್ಯೋಜಾತಾವತಾರ: ರಕ್ತ ಲೋಹಿತಕಲ್ಪದಲ್ಲಾದ ವಾಮದೇವಾವತಾರ; ಪೀತವಾಸಃ ಕಲ್ಪದಲ್ಲಾದ ತತ್ಪುರುಷಾವತಾರ; ಶಿವಕಲ್ಪದಲ್ಲಾದ ಅಘೋರಾವತಾರ ಮತ್ತು ವಿಶ್ವರೂಪ ಕಲ್ಪದಲ್ಲಾದ ಈಶಾನಾವತಾರ. ಇವುಗಳಲ್ಲಿ ಈಶಾನನ ಅವತಾರ ಅತಿಮುಖ್ಯ. ಈ ಐದು ಅವತಾರಗಳೂ ಸೃಷ್ಟಿ ಕಾರ್ಯದಲ್ಲಿ ಬ್ರಹ್ಮನಿಗೆ ನೆರವು ನೀಡಲೆಂದು ಅವನ ಪ್ರಾರ್ಥನೆಯಂತೆ ಶಿವನು ಕೈಕೊಂಡಂಥವುಗಳು. ಈ ಅವತಾರಗಳ ಮಾನಸಪುತ್ರರು ಬ್ರಹ್ಮನಿಗೆ ಶಿಷ್ಯರಾಗಿ ನೆರವಿತ್ತರು. ಸುನಂದನಂದನ, ವಿಶ್ವನಂದ, ಉಪನಂದನ, ವಿರಾಜ, ವಿವಾಹ, ವಿಶೋಕ, ವಿಶ್ವಭಾವನ, ಕೃಷ್ಣ, ಕೃಷ್ಣಶಿಖ, ಕೃಷ್ಣಾಸ್ಯ. ಕೃಷ್ಣ ಕಂಠದರ. ಜಟಿ, ಮುಂಡಿ, ಶಿಖಂಡಿ ಮತ್ತು ಅರ್ಧಮುಂಡ ಮುಂತಾದವರೇ ಆ ಮಾನಸ ಪುತ್ರರು ಸದ್ಯೋಜಾತಾದಿ ಐದು ಶಿವಾವತಾರಗಳನ್ನು ಪಂಚಬ್ರಹ್ಮರೆಂದು ಕರೆಯಲಾಗುತ್ತದೆ.

ಸ್ವೇಚ್ಛೆಯಂತೆ ಶಿವನು ಅಷ್ಟಮೂರ್ತಿ – ಆ ಮೂರ್ತಿಗಳೆಂದರೆ–ಶರ್ವ, ಭವ, ರುದ್ರ, ಉಗ್ರ, ಭೀಮ, ಪಶುಪತಿ, ಈಶಾನ ಮತ್ತು ಮಹಾದೇವ ಎಂದು. ಈ ಅಷ್ಟಮೂರ್ತಿಗಳ ಸ್ವರೂಪದಲ್ಲಿ ಶಿವನು ಜಗದಾಧಾರ. ಈವರೆಗಿನ ಸೃಷ್ಟಿಗಳೆಲ್ಲಾ ಮಾನಸಿಕ–ಈಶ್ವರೇಚ್ಛಾಕೃತ. ಇನ್ನು ಮುಂದೆ ಹೇಳುವ ಪುಂಸ್ತ್ರೀಲಿಂಗ ಸಂಯೋಗಗಳಿಂದ ಆಗುವ ಸೃಷ್ಟಿಗಳು ಪಾಂಚಭೌತಿಕ. ಪುನಃ ಬ್ರಹ್ಮನ ಬೇಡಿಕೆಯಂತೆಯೇ ಶಿವನು ಅರ್ಧನಾರೀಶ್ವರಾವತಾರ ತಾಳಿ ಅದಕ್ಕೆ ನಾಂದಿಯನ್ನು ಹಾಡಿದನು. ಅಲ್ಲಿಂದ ಮುಂದೆ ಬ್ರಹ್ಮನ ಮರ್ತ್ಯ (ಅಮರರಲ್ಲದ, ಮರರಾದ) ಜೀವಿಗಳ ಮಿಥುನಜನ್ಯ ಸೃಷ್ಟಿಕ್ರಮವನ್ನು ಅನುಸರಿಸಿದನು.

ಶ್ವೇತವರಾಹಕಲ್ಪದ ವೈವಸ್ವತ ಮನ್ವಂತರದ ದ್ವಾಪರಾಂತ–ಕಲ್ಯಾದಿಗಳಲ್ಲಿ ಅವತರಿಸಿದ ವ್ಯಾಸ ಪ್ರಜಾಪತಿಗಳ ಸಂಖ್ಯೆ ೨೮. ಅವರಿಗೆ ಅಷ್ಟೇ ಸಂಖ್ಯೆಯಲ್ಲಿ ಸಹಾಯಕರಾಗಿ ನಿಂತವರು ಯೋಗೇಶ್ವರರು. ವ್ಯಾಸರು ಬ್ರಹ್ಮನ ಅವತಾರಗಳಾದರೆ ಯೋಗೇಶ್ವರರು ಶಿವಾವತಾರಗಳು.

ವ್ಯಾಸರು: ಸ್ವಯಂಪ್ರಭು, ಸತ್ಯ, ಭಾರ್ಗವ, ಅಂಗಿರಸ್, ಸವಿತೃ, ಮೃತ್ಯು, ಶತಕ್ರತು, ವಸಿಷ್ಠ, ಸಾರಸ್ವತ, ತ್ರಿಧಾಮನ್, ತ್ರಿವೃತ, ಶತತೇಜಸ್, ನಾರಾಯಣ, ರಕ್ಷ, ಆರುಣಿ, ದೇವ, ದೇವಕೃತಂಜಯ, ಋತಂಜಯ, ಭರದ್ವಾಜ, ಗೌತಮ, ವಾಚಃಶ್ರವಸ್, ಶುಷ್ಮಾಯಣ, ತೃಣಬಿಂದು, ಯಕ್ಷ, ಶಕ್ತಿ, ಪರಾಶರ, ಜಾತೂಕರ್ಣ್ಯ ಮತ್ತು ಪರಾಶರನ ಮಗನಾದ ಕೃಷ್ಣದ್ವೈಪಾಯನ ಅಥವಾ ವಾಸುದೇವ ಎಂಬೀ ೨೮ ಜನರು.

ಯೋಗೇಶ್ವರ ಮಹಾಮುನಿಗಳು:

**(ಅನುಕ್ರಮವಾಗಿ)**

ಶ್ವೇತ, ಸುತಾರ ದಮನ, ಸುಹೋತ್ರ, ಕಂಕ, ಲೋಕಾಕ್ಷಿ, ಜೈಗೀಶವ್ಯ, ದಧಿವಾಹನ, ಋಷಭ, ಮುನಿ. ತಪಸ್, ಅತ್ರಿ, ಬಲಿ, ಗೌತಮ, ವೇದ ಶಿರಸ್, ಗೋಕರ್ಣ, ಗುಹಾವಾಸಿನ್, ಶಿಖಂಡಿನ್, ಜಟಿಮಾಲಿನ್, ಅಟ್ಟಹಾಸ, ದಾರುಕ, ಲಾಂಗಲಿನ್, ಶ್ವೇತ, ಶೂಲಿನ್, ದಂಡಿನ್, ಸಹಿಷ್ಣು, ಸೋಮ ಶರ್ಮನ್ ಮತ್ತು ಯೋಗಾತ್ಮನ್ ಎಂಬ ೨೮ ಜನರು.

ಪರಬ್ರಹ್ಮ ಸೃಷ್ಟಿಯು "ಇಚ್ಛಾಮಾತ್ರ ಜಗತ್" ಯಾ "ಈ ಕ್ಷಣಮಾತ್ರ ಜಗತ್." ಅಂಥ ಜಗತ್ತಿನ ಪ್ರಜಾಪತಿಗಳು ಈ ಮಾನಸಪುತ್ರರು. ಮೊದಲಿನದು ಬೀಜನ್ಯಾಯ; ಎರಡನೆಯದು ತಜ್ಜನ್ಯವಾದ ಬೀಜವೃಕ್ಷನ್ಯಾಯ. ನ್ಯೂಟನ್ ಹೇಳಿದಂತೆ ನಿಸರ್ಗ ನಿಯಮಗಳು ಈಶನ ಮಾನಸಪುತ್ರರು ಎನ್ನಬಹುದು. ಈ ದೇವತಾ ಸ್ವರೂಪದ ಮಾನಸಪುತ್ರರು ಮುಂದಿನ ಸೃಷ್ಟಿಸೋಪಾನದ ಉಚ್ಚಾವಚ ಸೋಪಾನಗಳಿಗೆ ಕಾರಣರಾಗುವರು. ಹೀಗಾದ ಮೇಲೆ ಪರಬ್ರಹ್ಮ (ಪರಶಿವ, ಪರಮ ಚಿತ್ಸತ್ಯ) ಶಂಕರೋಕ್ತ ನಿರ್ಗುಣತ್ವದಲ್ಲಿರುತ್ತದೆ.

–೩೩–

# ನಂದೀಶ್ವರನಿಗೆ ಶಿವಪ್ರಾಪ್ತಿಯಾದದ್ದು

ಹಿಂದೆ ಶಿಲಾದನೆಂಬ ಮುನಿಯು ಪುತ್ರೇಚ್ಛೆಯಿಂದ ಇಂದ್ರನನ್ನು ಕುರಿತು ತಪಸ್ಸು ಮಾಡಿದನು. ಅದರಿಂದ ಇಂದ್ರನು ಪ್ರತ್ಯಕ್ಷನಾದನು ಮತ್ತು ಬೇಕಾದ ವರವನ್ನು ಬೇಡಿಕೋ! ಎಂದನು. ಆಗ ಆ ಮುನಿಯು ತನಗೆ ಆಯೋನಿಜನೂ ಮರಣರಹಿತನೂ ಆದ ಮಗನೊಬ್ಬ ಹುಟ್ಟುವಂತಾಗಲಿ ಎಂದು ಕೇಳಿಕೊಂಡನು. ಅದಕ್ಕೆ ಪ್ರತಿಯಾಗಿ ಇಂದ್ರನು ಅಂಥ ವರವನ್ನು ಕೊಡುವುದು ತನಗಸಾಧ್ಯ; ಏಕೆಂದರೆ ಅಂಥ ವರವನ್ನು ಹರಿಬ್ರಹ್ಮರೂ ಕೊಡಲಾರರು. ಅವರಿಬ್ಬರೂ ತ್ರಿಪುರಾಂತಕನ ದೇಹದಿಂದ ಹುಟ್ಟಿದ ಮರ್ತ್ಯರು–ಮರಣಾಧೀನರು. ಆದರೆ ಮಹೇಶ್ವರನಾದ ರುದ್ರನು ಪ್ರಸನ್ನನಾದರೆ ಅಂಥ ವರವನ್ನು ಕೊಟ್ಟಾನು" ಎಂದು ಮುನಿಗೆ ಇಂದ್ರನು ತಿಳಿಸಿದನು. ಆ ಶಿಲಾದನು ತನ್ನ ದೀರ್ಘವಾದ ಕಠಿಣ ತಪಸ್ಸಿನಿಂದ ಮಹಾದೇವನನ್ನು ಒಲಿಸಿಕೊಂಡನು. ಅವನೆದುರು ನಿಂತಾಗಲೂ ಮುನಿಗೆ ಎಚ್ಚರವಾಗದಿದ್ದಾಗ ಅವನೇ ಮುಟ್ಟಿ ಎಬ್ಬಿಸಿ ಏನು ಬೇಕೆಂದು ಕೇಳಿದನು. ಆಗ ಮುನಿಯು ತನಗೆ ಮಹಾದೇವನು ಅಯೋನಿಜನೂ (ಗರ್ಭದಿಂದ ಹುಟ್ಟದವನೂ) ಮರಣವರ್ಜಿತನೂ ಆದ ಮಗನನ್ನು ಕೊಡು ಎಂದು ಬೇಡಿದನು. ಆಗ ಪ್ರಸನ್ನನಾದ ಶಿವನು ತಾನೇ "ನಂದೀಶ್ವರನೆಂಬ ಹೆಸರಿನಿಂದ ಅಯೋನಿಜನೂ ಅಮರ್ತ್ಯನೂ ಆಗಿ ನಿನ್ನ ಪುತ್ರತ್ವವನ್ನು ವಹಿಸಿಕೊಳ್ಳುವೆನು" ಎಂದು ವರವನ್ನಿತ್ತನು. ಆ ಪ್ರಕಾರ ಆ ಮುನಿ ಮಾಡಿದ ಯಜ್ಞಕುಂಡದಿಂದ ಕಾಲಾಗ್ನಿ ಸಮನಾದ ನಂದೀಶ್ವರನು ಜನಿಸಿದನು. ಅದರಿಂದ ಹರಿ–ಹರ–ಬ್ರಹ್ಮರೂ ಅವರ ಪತ್ನಿಯರೂ ಸಂತುಷ್ಟರಾದರು ದೇವತೆಗಳು ಹೂಮಳೆಗರೆದರು. ಆಗ ನಂದಿಯು ಮನುಷ್ಯತ್ವದಲ್ಲಿ ಬೆಳೆಯುತ್ತಿರುವಾಗ ಮಿತ್ರಾವರುಣರು ಬಂದು ನಂದಿಗೆ ಅಲ್ಪಾಯಸ್ಸು ಎಂದರು. ಆಗ ನಂದಿಯು ಶಿವನನ್ನು ಕುರಿತು ಘೋರ ತಪಸ್ಸನ್ನು ಮಾಡಿದನು. ಅದರಿಂದ ಪ್ರತ್ಯಕ್ಷನಾದ ಮಹಾದೇವನು ಏನು ಬೇಕೆಂದು ಪ್ರಶ್ನಿಸಿದನು. ಅದಕ್ಕೆ ಉತ್ತರವಾಗಿ ನಂದಿಯು ತನಗೆ ಜರೆ, ಜನ್ಮ, ಮೃತ್ಯು (ಮುಪ್ಪು, ಜನನ ಮತ್ತು ಸಾವು) ಬಾರದಿರಲಿ ಎಂದು ಬೇಡಿಕೊಂಡನು. ತಥಾಸ್ತು ಎಂದ ಆ ರುದ್ರನು ಕಮಲಮಯವಾದ ತನ್ನ ರುಂಡಮಾಲೆಯನ್ನು ಅವನ ಕೊರಳಿಗೆ ಹಾಕಿದನು. ಆ ಕೂಡಲೇ ನಂದಿಗೆ ಕಣ್ಣು ಮೂರಾದವು. ಭುಜ ಹತ್ತಾದವು. ಮುಖ ಐದಾದವು. ಅವನು ರುದ್ರ ಸಮಾನನಾದನು. ಅವನ ಜಡೆಯಿಂದ ವೃಷಧ್ವನಿ, ಸ್ವರ್ಣೋದಕೆ, ಜಂಬುನದಿ, ಜಟೋದಕೆ, ತ್ರಿಸ್ರೋತಸ್– ಎಂಬ ಐದು ನದಿಗಳು ಹುಟ್ಟಿ ಹರಿಯಲಾರಂಭಿಸಿದವು. ಇವು ಜಪೇಶ್ವರ ಲಿಂಗದ ಹತ್ತಿರ ಇರುತ್ತವೆ.

–೩೪–

# ರುದ್ರನ ಭೈರವಾವತಾರ

ರುದ್ರನೇ ಭೈರವ; ಶಿವನ ಪೂರ್ಣಾವತಾರ; ಸೃಷ್ಟಿ–ಸ್ಥಿತಿ–ಪ್ರಲಯಕಾರಕ ಶಕ್ತಿಯುಳ್ಳವನು. ಅವನೇ ಬ್ರಹ್ಮ+ವಿಷ್ಣು+ಮಹೇಶ್ವರ–ಎಂಬ ಮಾತನ್ನು ಕೇಳಿ ಒಮ್ಮೆ ಅಜೆಯೆಂಬ ಮಾಯೆಗೆ (ಅಜ್ಞಾನಕ್ಕೆ) ಒಳಗಾಗಿ ಸಿಟ್ಟಿಗೆದ್ದ ಹರಿಬ್ರಹ್ಮರಿಗೆ ಚತುರ್ವೇದಗಳು ಆ ಮಾತು ಸತ್ಯವೆಂದು ಸಾರಿದವು. ಅದರಿಂದ ಇನ್ನೂ ಸಿಟ್ಟಿಗೆದ್ದಾಗ ಬ್ರಹ್ಮನ ಪಂಚಮ ಶಿರಸ್ಸನ್ನು ಭೈರವ ರೂಪ ತಾಳಿ ರುದ್ರನು ಕತ್ತರಿಸಿದನು. ಆ ಬ್ರಹ್ಮಕಪಾಲವು ರುದ್ರನ ಕೈಯಲ್ಲಿ ಬಂದು ಕುಳಿತು "ಹಸಿವು ಹಸಿವು" ಎಂದು ಕೂಗಿತು. ಆಗ ಭೈರವನು ವಿಷ್ಣು ವಚನವನ್ನಾದರಿಸಿ ಬ್ರಹ್ಮಕಪಾಲವನ್ನು ಹಿಡಿದು ವೈಕುಂಠದಲ್ಲಿ ಭಿಕ್ಷಾಯಾತ್ರೆಯನ್ನು ಮಾಡಿ ಕಾಶಿಯನ್ನು ಹೊಕ್ಕನು. ಕಾಶೀಮಾಹಾತ್ಮ್ಯದಿಂದ ಆ ಬ್ರಹ್ಮಕಪಾಲವು ಪಾತಾಳಕ್ಕೆ ಬಿದ್ದು ಹೋಯಿತು. ಅಂದಿನಿಂದ ರುದ್ರಾವತಾರಿಯಾದ ಭೈರವೇಶ್ವರನಿಗೆ "ಕಾಶಿಕಾಪುರಾಧಿನಾಥ ಕಾಲಭೈರವ" ಎಂಬ ಖ್ಯಾತಿಯುಂಟಾಯಿತು. ಕಾಪಾಲಿಕರಿಗೆ ಭೈರವಾರಾಧನೆಯು ವಿಶಿಷ್ಟ. ಏಕೆಂದರೆ ಅವನು ಪಾಪಹರ, ಕಾಲ ಕಾಲ ಮತ್ತು ಕರುಣಾಕರ; ಅಲ್ಲದೆ ರುದ್ರನ ಅಪರಾವತಾರ! ಆದರೆ ಅವನು ನಿಷ್ಕಲತ್ವದಲ್ಲಿ ಆದಿಶಿವ, ಪರಶಿವ, ಪರಬ್ರಹ್ಮ; ಸತ್ಯ, ಜ್ಞಾನ, ಅನಂತ!

–೩೫–

# ಶರಭಾವತಾರ

ಜಯ ವಿಜಯರು ಶಪ್ತರಾಗಿ ಹಿರಣ್ಯಕಶಿಪು ಮತ್ತು ಹಿರಣ್ಯಾಕ್ಷರೆಂಬ ದೈತ್ಯರಾಗಿ ಹುಟ್ಟಿ ಲೋಕ ಕಂಟಕತನವನ್ನು ತೋರಿದಾಗ ನರಸಿಂಹಾವತಾರದಿಂದ ಅಣ್ಣನನ್ನೂ ವರಾಹಾವತಾರದಿಂದ ತಮ್ಮನನ್ನೂ ವಿಷ್ಣುವು ಸಂಹರಿಸಿದನು. ಬ್ರಹ್ಮನಿಂದ ವರ ಪಡೆದದ್ದರಿಂದ ಹಿರಣ್ಯಕಶಿಪುವನ್ನು ಮನುಷ್ಯನೂ ಅಲ್ಲ. ಪ್ರಾಣಿಯೂ ಅಲ್ಲ–ಈಯೆರಡರ ಸಂಯುಕ್ತತೆಯ ಮೂಲಕ ಕೊಲ್ಲಬೇಕಾಯ್ತೆಂಬುದು ಸುಪ್ರಸಿದ್ಧ. ಹಾಗೆ ಕೊಂದ ಮೇಲೂ ನರಸಿಂಹನ ರೋಷವು ತಣಿಯಲಿಲ್ಲ. ಸುರಾಸುರನರೋರಗರು ಭಯಗ್ರಸ್ತರಾದರು. ಅವನ ಹೃದಯವನ್ನು ಪ್ರಹ್ಲಾದನು ತಣಿಸಿದರೂ ರೋಷ ಜ್ವಾಲೆಯನ್ನು ತಣಿಸಲು ಅಸಮರ್ಥನಾದನು. ಆಗ ದೇವತೆಗಳು ರುದ್ರನನ್ನು ಪ್ರಾರ್ಥಿಸಿದರು. ಆ ಕೂಡಲೇ ರುದ್ರನು ನರಸಿಂಹನನ್ನು ಸಂಹರಿಸಲು ಶರಭಾವತಾರ ತಾಳಿ ಎದುರು ಬಂದನು. ಶರಭಕ್ಕೆ ಎಂಟು ಕಾಲುಗಳು, ಮೂರು ಕೋಡುಗಳು, ಎರಡು ರೆಕ್ಕೆಗಳು ಮತ್ತು ಒಂದು ಕೊಕ್ಕು ಎಂದು ಕವಿಸಮಯದ ಹೇಳಿಕೆಯಿದೆ. ತತ್ಸದೃಶ, ಆದರೆ ಪೂರ್ಣ ಈ ತೆರನಾಗಿರದ, ಎಂಟು ಕಾಲಿನ ತಿರ್ಯಗ್‌ಜಂತುವಿನ ಮೂರ್ತಿಯೊಂದು ಚಂದ್ರಗುತ್ತಿ ದೇವಾಲಯದೆದುರಿದೆ. ಶರಭಕ್ಕೆ ಸಿಂಹವನ್ನು ಕೊಲ್ಲುವ ಶಕ್ತಿ ಇದೆಯಂತೆ. ಭೇರುಂಡಕ್ಕೆ ಶರಭವನ್ನು ಸೋಲಿಸುವ ಬಲವುಂಟಂತೆ! ಪುರಾಣ ಹೇಳಿದ ಶರಭ ಹೀಗಿದೆ:

ಸಾವಿರ ಕೈಗಳು, ಜಟಾಜೂಟ, ಚಂದ್ರಾರ್ಧ ಶೇಖರತ್ವಗಳನ್ನುಳ್ಳ ರುದ್ರನು ಶರಭನಾದನು. ಈ ಶರಭಕ್ಕೆ ಎರಡು ರೆಕ್ಕೆಗಳು, ಉಗ್ರ ಶರೀರ, ಅತಿ ತೀಕ್ಷ್ಣವಾದ ಕೋರೆದಾಡೆಗಳು. ವಜ್ರಸದೃಶವಾದ ಉಗುರುಗಳನ್ನುಳ ಚೋಟುಗಳು, ನೀಲವರ್ಣದ ಕಂಠ, ತೋರವಾದ ತೋಳುಗಳು, ನಾಲ್ಕು ಕಾಲುಗಳು ಮತ್ತು ಬೆಂಕಿಯಂತೆ ಉರಿಯುವುದು ಹಾಗೂ ಪ್ರಲಯಕಾಲದ ಮೇಘನಾದ–ಇವು ಚಿಹ್ನಗಳು. ಈ ಶರಭಕ್ಕೆ ಹೆದರಿ ನರಸಿಂಹನು ಶರಣಾಗತನಾದನು; ತನ್ನ ಗರ್ವ ಹೆಚ್ಚಾದಾಗಲೆಲ್ಲಾ ಹೀಗೇ ಭಂಗಿಸೆಂದು ಶರಭೇಶ್ವರನನ್ನು ಬೇಡಿಕೊಂಡನು. ಹರಿಯನ್ನು (ನರಹರಿಯನ್ನು) ಹೀಗೆ ನಿಗ್ರಹಿಸಿದ್ದರಿಂದಲೇ ರುದ್ರನಿಗೆ "ಹರ" ಎಂಬ ಹೆಸರು ಬಂದಿತು. ನರಸಿಂಹನ ರುಂಡವು ರುದ್ರನ ರುಂಡಮಾಲೆಗೆ ಸೇರಿಹೋಯಿತು. ಅವನ ಚರ್ಮವು ರುದ್ರನ ಉಡುಪಾಯಿತು. ವಿಷ್ಣುವು ಕ್ಷೀರ–ಕ್ಷೀರ ನ್ಯಾಯದಂತೆ ರುದ್ರನಲ್ಲಿ ತನ್ನ ನರಸಿಂಹಾವತಾರವನ್ನು ಲೀನಗೊಳಿಸಿ ಮುಗಿಸಿದನು. ಅಂದಿನಿಂದ ಲೋಕತ್ರಯಕ್ಕೆ ಶಾಂತಿ ದೊರಕಿತು. ರುದ್ರಾದಿ ಸರ್ವದೇವತೆಗಳೂ ಅಂತರ್‌ಧಾನ ಹೊಂದಿದರು.

–೩೬–

# ಗೃಹಪತಿಯ ಅವತಾರ

ಹಿಂದೆ ವಿಶ್ವಾನರರನ ಮನೆಯಲ್ಲಿ ಶಿವನು ಅಗ್ನಿ ಲೋಕ ಪತಿತ್ವವನ್ನು ಗೃಹಪತಿಯಾಗಿ ಹುಟ್ಟಿ ಪಡೆದ ಕಥೆ ಇಂತಿದೆ:

ನರ್ಮದಾ ತೀರದಲ್ಲಿ ನರ್ಮಪುರವೆಂಬ ನಗರವಿತ್ತು. ಶಿವಭಕ್ತನಾದ ವಿಶ್ವಾನರನೆಂಬ ಮುನಿಯು ವಾಸಿಸುತ್ತಿದ್ದನು. ಅವನಿಗೆ ಶುಚಿಷ್ಮತಿಯೆಂಬ ಹೆಂಡತಿಯಿದ್ದಳು. ಅವಳು ತನಗೆ ಮಹೇಶ ಸದೃಶನಾದ ಮಗ ಹುಟ್ಟಬೇಕೆಂದು ಗಂಡನನ್ನು ಪ್ರಾರ್ಥಿಸಿದಳು. ಅವನೂ ಅದಕ್ಕಾಗಿ ತಪಸ್ಸು ಮಾಡಲು ಕಾಶಿಗೆ ಹೋದನು. ಕಾಶಿಯ ವಿಶ್ವೇಶ್ವರನು ಸಿದ್ಧಲಿಂಗನೆನ್ನಿಸಿದ್ದು ವಿಲಂಬಿಸದೆ ಭಕ್ತರ ಇಷ್ಟವನ್ನು ಅನೇಕ ಸಲ ಸಲ್ಲಿಸಿದ ಪ್ರಸಿದ್ಧಿಯ ದೆಸೆಯಿಂದ. ವಿಶ್ವಾನರನು ಒಂದು ವರ್ಷ ತಪಸ್ಸನ್ನು ಮಾಡಿದ ಕೂಡಲೇ ಮರುವರ್ಷಾರಂಭದಲ್ಲಿ ವಿಶ್ವೇಶ್ವರನು ಲಿಂಗದಿಂದ ಎಂಟು ವರ್ಷದ ಬಾಲಕನ ಆಕಾರದಲ್ಲಿ ಪ್ರತ್ಯಕ್ಷನಾದನು. ಆಗ ಸಂತೋಷದಿಂದ ವಿಶ್ವಾನರ ಮುನಿಯು ಶಿವನನ್ನು ಸ್ತುತಿಸಿದನು ಮತ್ತು ಏನು ಬೇಕೆಂದು ರುದ್ರ ಸ್ವರೂಪದ ಆ ಬಾಲ ಶಿವನು ಕೇಳಿದಾಗ ತನಗೆ ಬೇಕಾದುದೇನೆಂಬುದು ಸರ್ವಜ್ಞನಾದ ಶಿವನಿಗೆ ಗೊತ್ತು ಎಂದು ಹೇಳಿದನು. ಆಗ ಶಿವನು ಆ ಮುನಿಯ ಹೆಂಡತಿಯಾದ ಶುಚಿಷ್ಮತಿಯ ಹೊಟ್ಟೆಯಲ್ಲಿ ಮಗನಾಗಿ ತಾನು ಜನಿಸುವುದಾಗಿ ವರವನ್ನು ಕೊಟ್ಟನು. ಅನಂತರ ಆ ವರವು ಫಲಿಸಿತು. ಅದರ ಪ್ರಕಾರ ಆ ಮುನಿಗೆ ಮಗನಾಗಿ ಹುಟ್ಟಿದ ಶಿವಾವತಾರಕ್ಕೆ "ಗೃಹಪತಿ" ಎಂಬ ಹೆಸರು ಬಂದಿತು.

ಶಿಶುವಾದ ಗೃಹಪತಿಗೆ ೧೨ ವರ್ಷ ವಯಸ್ಸಾದೊಡನೆ ಸಾವು ಎಂಬುದು ಶಿಶುವಿನ ಹಸ್ತ ಸಾಮುದ್ರಿಕ ನೋಡಿದಾಗ ತಿಳಿದುಬಂತು. ಆಗ ವಿಶ್ವಾನರನು ಬಹಳ ಮರುಗಿದನು. ಅದನ್ನು ವಟುವಾಗಿ ಬೆಳೆಯುತ್ತಿದ್ದ ಗೃಹಪತಿಯು ತಿಳಿದು ಮಾತಾಪಿತೃಗಳಿಗೆ ಸಮಾಧಾನ ಹೇಳಿ, ಮೃತ್ಯುಂಜಯ ಜಪದಿಂದ ಶಿವನನ್ನು ಒಲಿಸಿಕೊಂಡು, ಬರಲಿರುವ ತನ್ನ ಸಾವಿನಿಂದ ಪಾರಾಗುವ ಆಶ್ವಾಸನವನ್ನಿತ್ತು ಕಾಶಿಗೆ ಹೋದನು. ಆಗ ಮೃತ್ಯುಂಜಯನಿಗಿಂತ ಮೊದಲು ಇಂದ್ರನು ಪ್ರತ್ಯಕ್ಷನಾಗಿ ವರ ಬೇಡೆಂದು ಹೇಳಿದಾಗ ಪಶುಪತಿಯನ್ನುಳಿದು ಇನ್ನಾರಿಂದಲೂ ತಾನು ವರವನ್ನು ಬೇಡೆನು ಎಂದು ಗೃಹಪತಿ ನುಡಿದನು. ಅದರಿಂದ ಸಿಟ್ಟಿಗೆದ್ದು ಇಂದ್ರನು ತನ್ನ

ವಜ್ರಾಯುಧವನ್ನು ಝಳಪಿಸಿ ಬಾಲಕನಾದ ಗೃಹಪತಿಯನ್ನು ಹೆದರಿಸಿ ಮೂರ್ಛೆಹೋಗುವಂತೆ ಮಾಡಿದನು. ಆ ಕೂಡಲೇ ಗೌರೀಪತಿಯು ಪ್ರತ್ಯಕ್ಷನಾಗಿ ಆ ಬಾಲಕನನ್ನು ಮುಟ್ಟಿದ ಕೂಡಲೇ ಅವನು ಮೂರ್ಛೆಯಿಂದ ಎಚ್ಚತ್ತನು. ಅವನನ್ನು ಕುರಿತು ಶಿವನು: "ನಾನೇ ಇಂದ್ರ ರೂಪದಿಂದ ಬಂದು ನಿನ್ನನ್ನು ಹೆದರಿಸಿದೆನು. ನಿನಗೆ ಅಗ್ನಿಪದದ ವರವನ್ನು ಕೊಡುತ್ತೇನೆ. ಎಲ್ಲ ದೇವತೆಗಳಿಗೂ ವರದನೂ, ಸಕಲ ಭೂತಗಳಲ್ಲಿ ಅಂತಃಶ್ಚರನಾದ ಅಗ್ನಿಯೂ ನೀನಾಗುತ್ತೀಯೆ. ನಿನ್ನಿಂದ, ಸ್ಥಾಪಿತವಾದ ಈ ಲಿಂಗವು 'ಅಗ್ನೀಶ್ವರ' ಎಂಬ ಹೆಸರಿನಿಂದ ಖ್ಯಾತವಾಗುತ್ತದೆ" ಎಂದು ಹರಸಿ ಅವನಿಗೆ ದಿಕ್ಪತಿತ್ವವನ್ನಿತ್ತು ಅದೃಶ್ಯನಾದನು.

–೩೭–

# ಯಕ್ಷೇಶ್ವರಾವತಾರ

ಹಾಲ್ಗಡಲನ್ನು ಅಮೃತಕ್ಕಾಗಿ ದೇವಾಸುರರು ಕಡೆಯುವಾಗ ಅಗ್ನಿ ಮುಖದಿಂದ ಹಾಲಾಹಲವೆಂಬ ನಂಜು ಹೊರಟು ಉರಿಯತೊಡಗಿತು. ಆಗ ಅವರೆಲ್ಲಾ ಶಿವನಿಗೆ ಶರಣಾಗತರಾದರು. ಶಿವನು ಆ ಅದ್ಭುತವಾದ ವಿಷವನ್ನು ತನ್ನ ಕಂಠಗತವನ್ನಾಗಿ ಮಾಡಿಕೊಂಡು ನೀಲಕಂಠ, ವಿಷಕಂಠ ಎಂಬ ಹೆಸರುಗಳನ್ನು ಪಡೆದನು. ಇದು ಗೊತ್ತಿದ್ದರೂ ಅನಂತರ ದೈತ್ಯರನ್ನು ವಂಚಿಸಿ. ತಾವೇ ಅಮೃತವನ್ನು ಒಯ್ದು ಕುಡಿದು, ಅವರನ್ನು ಯುದ್ಧದಲ್ಲಿ ಸೋಲಿಸಿ ಜಂಭ ಕೊಚ್ಚಿಕೊಳ್ಳುತ್ತಿದ್ದರು. ಸರ್ವಜ್ಞನಾದ ಸದಾಶಿವನಿಗಿದು ಗೊತ್ತಾಗಿ ಅವನು ಯಕ್ಷರೂಪದಿಂದ ಇಂದ್ರೋಪೇಂದ್ರಾದಿಗಳು ನೆರೆದಿದ್ದ ದೇವಸಭೆಯಲ್ಲಿ ಹೊಕ್ಕು ಅವರನ್ನು ಕುರಿತು ಸಭೆ ನೆರೆದ ಉದ್ದೇಶವೇನೆಂದು ಕೇಳಿದನು. ಆಗ ದೇವತೆಗಳು ತಾವು ದೈತ್ಯಾಧಿಕ ಬಲವಂತರು; ಏಕೆಂದರೆ ಅವರನ್ನೆಲ್ಲಾ ಮುಗಿಸಿಬಿಟ್ಟಿದ್ದೇವೆ ಎಂಬ ಗರ್ವದ ಮಾತನ್ನಾಡಿದರು. ಅವರ ಗರ್ವವನ್ನು ಭಂಗಿಸಲು ಯಕ್ಷಾವತಾರಿಯಾದ ಶಿವನು ಅವರೆದುರು ಒಂದು ಹುಲ್ಲುಕಡ್ಡಿಯನ್ನು ಬಿಸಾಡಿ "ಇದನ್ನು ಭಂಗಿಸಿರಿ, ನೋಡೋಣ" ಎಂದನು. ಆಗ ಬ್ರಹ್ಮ, ವಿಷ್ಣು, ಇಂದ್ರಾದಿಗಳು ತಮ್ಮ ಬಲಿಷ್ಠ ಆಯುಧಗಳಿಂದ ಬಡಿದರೂ ಆ ಹುಲ್ಲು ಕಡ್ಡಿ ತುಂಡಾಗಲಿಲ್ಲ. ಆಗ ಆಕಾಶವಾಣಿ (ಅಶರೀರವಾಣಿ) ಆ ಯಕ್ಷನು ಈಶ್ವರನ ಅವತಾರವೆಂದು ಹೇಳಿದಾಗ ಅವರು ತಪ್ಪಾಯಿತೆಂದು ಅವನ ಕಾಲಿಗೆ ಬಿದ್ದು ಅವನನ್ನು ಸ್ತುತಿಸಿ ಸಂತೋಷಪಡಿಸಿದರು. ಅವನವರನ್ನು ಕ್ಷಮಿಸಿ, ಅವರಿಗೆ ಬುದ್ಧಿ ಹೇಳಿ ಅದೃಶ್ಯನಾದನು.

ಎಲ್ಲ ದೇವತೆಗಳಿಗೂ ದಾನವರಿಗೂ ಮಾಯಾಶಕ್ತಿ ಇದ್ದರೂ ಶಿವನ ಶಾಂಭವೀ (ಪಾರ್ವತಿ) ಮಾಯೆಯು ಅವೆಲ್ಲವುಗಳಿಗಿಂತಲೂ ಬಲಿಷ್ಠ. ಆದ್ದರಿಂದಲೇ ದೇವತೆಗಳಲ್ಲಿ ಪ್ರಮುಖರಾಗಿದ್ದ ವಿಷ್ಣು, ಬ್ರಹ್ಮ, ಇಂದ್ರರು ಕೂಡಾ ಗರ್ವದ ಭಾವನೆಗೆ ಒಳಗಾದರು. ಅವರ ಆ ಭಾವೋದ್ರೇಕವನ್ನು ನಿಗ್ರಹಿಸಲು ಶಾಂಭವೀಪತಿಯಾದ ಶಿವನೇ ಬರಬೇಕಾಯಿತು. ಇಲ್ಲಿ ಗರ್ವವು ಸರ್ವ ಪಾಪಾಧಿಕವೆಂಬುದನ್ನೂ ಶಿವನು ಸರ್ವಗರ್ವಹರನೆಂಬುದನ್ನೂ ಬೋಧಿಸಲಾಗಿದೆ. ಅಲ್ಲದೆ, ಶಿವಶಕ್ತಿಯು ಶಿವಾಭಿನ್ನೆಯಾದ ಶಿವೆ, ಸರ್ವದಹನೆ, ಮಾಯೆ; ಆದ್ದರಿಂದ ಶಿವನು ಜ್ಞಾನಶಕ್ತಿಯುಕ್ತ; ಅವನ ಅಜ್ಞಾನವೆಂಬ ಶಕ್ತಿಯು ಅವನಿಂದ ಭಿನ್ನವಲ್ಲ. ಅದೇ ಮೂಲ ವಿದ್ಯೆ. ಅದರಿಂದಲೇ "ಅಜ್ಞಾನದಿಂದ ಜ್ಞಾನ ಆವೃತವಾಗಿದೆ. ಅದನ್ನು ಜ್ಞಾನ ಸೂರ್ಯನಿಂದ ಓಡಿಸಬೇಕು." ಎಂದು ಗೀತೆ

ಉಪದೇಶಿಸಿದೆ: ಓಡಿಸಿದರೆ ಆ ಕತ್ತಲು ಶಿವನಲ್ಲಿ (ಬ್ರಹ್ಮಜ್ಞಾನದಲ್ಲಿ) ಲಯ ಹೊಂದುವುದು, ಅಡಗಿ ಹೋಗುವುದು; ಜೀವಾತ್ಮನು ಶಿವಾತ್ಮನಲ್ಲಿ ಐಕ್ಯ ಹೊಂದುವನು. ಅದೇ ಮುಕ್ತಿ (ಲಯವಲ್ಲ).

–೩೮–

# ಶಿವ ದಶಾವತಾರಗಳು ಮತ್ತು ದುರ್ವಾಸ

ದಸರೆಯ (ದಶ ಅಹೋರಾತ್ರೆಗಳ) ದಶ ಶಿವಾವತಾರಗಳು ಇಂತಿವೆ: ಮಹಾಕಾಲ, ತಾರ, ಭುವನೇಶಬಾಲ, ಶ್ರೀ ವಿದ್ಯೇಶನಾದ ಷೋಡಶ, ಭೈರವ, ಭಿನ್ನಮಸ್ತಕ, ಧೂಮವಾನ್, ಬಗಲಾಮುಖ, ಮಾತಂಗ ಮತ್ತು ಕಮಲ. ಅದಕ್ಕೆ ಅನುಕ್ರಮವಾಗಿ ಶಿವಪತ್ನ್ಯವತಾರಗಳು ಹೀಗಿವೆ: ಮಹಾಕಾಲಿ, ತಾರೆ, ಬಾಲೆ, ಷೋಡಶಿ, ಭಿನ್ನ ಮಸ್ತಕೆ, ಧೂಮವತಿ. ಬಗಲಾಮುಖಿ, ಮಾತಂಗಿ ಮತ್ತು ಕಮಲೆ. ಈ ಶಕ್ತಿ ಪೂಜೆಯ ಹಬ್ಬದಲ್ಲಿ ಶಕ್ತಿಯ ದಶಾವತಾರಗಳೇ ಎದ್ದು ಕಾಣುವಂತಾಗಿದೆ. ಶಕ್ತಿಯಿದ್ದಲ್ಲಿ ಶಿವನಿರಲೇ ಬೇಕಾದುದರಿಂದ ಆಯಾ ಶಕ್ತ್ಯವತಾರಕ್ಕೆ ಆಧಾರವಾಗಿ ಆಯಾ ಶಿವಾವತಾರವಿದೆ.

ಎರಡನೆಯ ಉಲ್ಲೇಖ ಶಿವನ ಏಕಾದಶಾವತಾರಗಳದ್ದು: ಕಪಾಲಿ, ಪಿಂಗಲ, ಭೀಮ, ವಿರೂಪಾಕ್ಷ, ವಿಲೋಹಿತ, ಶಾಸ್ತ್ರ, ಜಪಾದ, ಅಹಿರ್ಬುಧ್ಯ. ಶಂಭು, ಚಂಡ, ಮತ್ತು ಭವ ಎಂಬಿವರು ಏಕಾದಶರುದ್ರರು. ಇವರು (ಕಶ್ಯಪನ ಬೇಡಿಕೆಯಂತೆ) ಅವನಲ್ಲಿ ಹುಟ್ಟಿದ ೧೧ ಜನ ಮಕ್ಕಳು. ದೇವತೆಗಳು ದಾನವರಿಂದ ಹಿಂದೊಮ್ಮೆ ಸೋಲನ್ನನುಭವಿಸಿ ದೇವಲೋಕಗಳನ್ನು ದಾನವರ ವಶಕ್ಕೆ ಬಿಟ್ಟು ಓಡಿ ಹೋಗಿ ಕಶ್ಯಪನೆದುರು ತಮ್ಮ ದುಃಖವನ್ನು ತೋಡಿಕೊಂಡಾಗ ಅವನು ಶಿವನನ್ನು ಕುರಿತು ತಪಸ್ಸು ಮಾಡಿ ಅವನಿಂದ ಈ ರುದ್ರರು ಹುಟ್ಟಿ ದೈತ್ಯಸಂಹಾರವಾಗಬೇಕೆಂಬ ವರವನ್ನು ದೇವತೆಗಳಿಗಾಗಿ ಪಡೆದುಕೊಂಡನು. ಆ ಪ್ರಕಾರ ಈ ೧೧ ಜನ ರುದ್ರನು ಅವತರಿಸಿ ದೈತ್ಯರನ್ನು ಸಂಹರಿಸಿ ದೇವತೆಗಳಿಗೆ ಅವರವರ ಲೋಕದ ಮೇಲಿನ ಯಾಜಮಾನ್ಯವನ್ನು ಪುನಃಗಳಿಸಿ ಕೊಟ್ಟರು. ಇವರನ್ನು ಸುರಭೀತನಯರೆಂದೂ ಹೇಳುವರಂತೆ. ಈ ಮಹಾರುದ್ರರೆಲ್ಲರೂ ಶಿವಸಮಾನರು.

ಬ್ರಹ್ಮ ಪುತ್ರನಾದ ಅತ್ರಿಯು ಪುತ್ರಾರ್ಥವಾಗಿ ಘೋರ ತಪಸ್ಸನ್ನು ಒಮ್ಮೆ ಮಾಡಿದನು. ಅದರ ಬೇಗೆಯಿಂದ ಸಂತ್ರಪ್ತರಾದ ದೇವತೆಗಳು ತ್ರಿಮೂರ್ತಿಗಳೆದುರು ದೂರಿಕೊಂಡರು. ಆಗ ತ್ರಿಮೂರ್ತಿಗಳು ಅತ್ರಿಗೆ ವರಕೊಡಲು ಹೋದರು; ಅತ್ರಿಯ ಹೆಂಡತಿಯ ಹೊಟ್ಟೆಯಲ್ಲಿ ಬ್ರಹ್ಮಾಂಶದಿಂದ ವಿಧುವೂ ವಿಷ್ಣ್ವಂಶದಿಂದ ದತ್ತನೂ ರುದ್ರಾಂಶದಿಂದ ದುರ್ವಾಸಸ್ಸೂ ಹುಟ್ಟುವಂತೆ ವರಗಳನ್ನು ಅವರು ಕೊಟ್ಟರು. ಈ ಮೂವರು ಮಕ್ಕಳು ಜನಿಸಿದ ಮೇಲೆ ಅವರಿಗೆ ಸಂನ್ಯಾಸ ಪದ್ಧತಿಯಂತೆ ಶಿಕ್ಷಣ ಕೊಡಲಾಯಿತು ಅವರಲ್ಲಿ

ದುರ್ವಾಸನು ಹೆಚ್ಚಿನ ಬ್ರಹ್ಮ ವರ್ಚಸ್ವಿಯಾದನು. ಅದರಿಂದ ಅವನಿಗೆ ಧರ್ಮಪರೀಕ್ಷಕತ್ವದ ಸ್ಥಾನವು ದೊರಕಿತು. ಆ ಪ್ರಕಾರ ಅವನು ಒಮ್ಮೆ ಸೂರ್ಯವಂಶದ ಅಂಬರೀಷ ರಾಜನ ಧರ್ಮವನ್ನು ಹೀಗೆ ಪರೀಕ್ಷಿಸಿದನು:–

ಅಂಬರೀಷನು ಸಪ್ತದ್ವೀಪವುಳ್ಳ ಭೂಮಿಗೆ ಚಕ್ರವರ್ತಿಯಾಗಿದ್ದನು. ಅವನು ತನ್ನ ರಾಜ್ಯದಲ್ಲಿ ಏಕಾದಶೀ ವ್ರತವನ್ನು ಆಚರಣೆಗೆ ತಂದನು. ಆಮಂತ್ರಿತನಾದ ದುರ್ವಾಸ ಮಹರ್ಷಿಯು ಪರೀಕ್ಷಾರ್ಥವಾಗಿ ಸ್ನಾನ ಮಾಡಹೋಗಿ ಪಾರಣೆಯ ಊಟಕ್ಕೆ ಬರುವುದನ್ನು ತಡಮಾಡಿದನು. ತಾನು ಬರುವುದರೊಳಗೆ ಊಟ ಮಾಡಿ ಮುಗಿಸಿದ್ದ ಅಂಬರೀಷ ರಾಜನ ಮೇಲೆ ದುರ್ವಾಸನು ಸಿಟ್ಟು ಮಾಡಿದನು. ಅವನ ಊಟವು ನಿಯಮ ಭಂಗ ಮಾಡಬಾರದೆಂದು ಮಾಡಿದ ಬರಿ ಜಲಪ್ರಾಶನವಾಗಿತ್ತು. ಆದರೂ ಕೇಳದೆ ದುರ್ವಾಸನು ಸಿಟ್ಟಿನ ಬೆಂಕಿಯಿಂದ ರಾಜನನ್ನು ಸುಡಹೋದಾಗ ಅವನನ್ನು ರಕ್ಷಿಸಲು ಶಿವನು ವಿಷ್ಣುವಿಗೆ ಕೊಟ್ಟಿದ್ದ ಚಕ್ರವು ಆವಿರ್ಭೂತವಾಯಿತು. ಆಗ ಅಶರೀರವಾಣಿ ನುಡಿದಿತು–ಅದು ಶಿವದತ್ತ ವಿಷ್ಣುಚಕ್ರವೆಂದೂ ಅದನ್ನು ದುರ್ವಾಸನು ಶಾಂತಗೊಳಿಸಬೇಕೆಂದೂ ಅಂಬರೀಷನು ದುರ್ವಾಸನಲ್ಲಿ ಕ್ಷಮೆ ಬೇಡಬೇಕೆಂದೂ ಅದರ ಸಾರಾಂಶ. ಆ ಪ್ರಕಾರ ಮಾಡಿದಾಗ ಎಲ್ಲಾ ಸರಿಹೋಯಿತು.

ಬ್ರಹ್ಮನು ಪ್ರಾರ್ಥಿಸಿದ ಪ್ರಕಾರವಾಗಿ, ವಿಷ್ಣುವು ವಸುದೇವನ ಮಗನಾಗಿ ಹುಟ್ಟಿ ಕೃಷ್ಣನೆಂಬ ಹೆಸರನ್ನು ಪಡೆದನು. ಬ್ರಹ್ಮ ದ್ರೋಹಿಗಳ ಸಂಹಾರಕ್ಕೆ ಕೃಷ್ಣಾವತಾರ ಮೀಸಲು. ನಿತ್ಯವೂ ಕೃಷ್ಣನು ಬ್ರಾಹ್ಮಣರಿಗೆ ಸುರಸವಾದ ಊಟವನ್ನು ಹಾಕಿಸುತ್ತಿದ್ದನು. ಅವನ ಆ ಬ್ರಹ್ಮಭಕ್ತಿಯನ್ನು ಪರೀಕ್ಷಿಸಲು ದುರ್ವಾಸನು ಒಮ್ಮೆ ಹೋದನು. ಅವನೇ ಈ ಮುನಿಯನ್ನು ತನ್ನ ರಥದಲ್ಲಿ ಕರೆದುಕೊಂಡು ಹೋದಾಗ ಪ್ರಸನ್ನನಾಗಿ "ನೀನು ವಜ್ರಾಂಗನಾಗು" ಎಂದು ಕೃಷ್ಣನಿಗೆ ದುರ್ವಾಸ ಮುನಿಯು ವರಕೊಟ್ಟನು. ಆಮೇಲೆ ಒಮ್ಮೆ ಸುರನದಿಯಲ್ಲಿ ದುರ್ವಾಸನು ಮೀಯುತ್ತಿದ್ದಾಗ ಅವನ ವಸ್ತ್ರವು ಕೊಚ್ಚಿಕೊಂಡು ಹೋಗಿ ಅವನು ನಾಚಿಕೆ ಪಡುವಂತಾಯ್ತು. ಆಗ ಅಲ್ಲೇ ಸ್ನಾನ ಮಾಡುತ್ತಿದ್ದ ದ್ರೌಪದಿಯು ತನ್ನ ಸೀರೆಯ ಸೆರಗಿನ ಚೂರನ್ನು ಹರಿದು ಅವನಿಗೆ ಕೊಟ್ಟಳು. ಅದರಿಂದ ಸಂತುಷ್ಟನಾದ ಮುನಿಶ್ರೇಷ್ಠನು ಆ ವಸ್ತ್ರದಿಂದ ಕೌಪೀನವಂತನಾದನು ಮತ್ತು ಅವಳಿಗೆ ವರವನ್ನಿತ್ತು ಆ ಮೂಲಕ ಅವಳು ಪಾಂಡವರನ್ನು ಸುಖದಲ್ಲಿಡಲು ಶಕ್ತಳಾದಳು.

ಹಾಗೇ ಹರಿಯ ಪ್ರಾರ್ಥನೆಯ ಮೇರೆಗೆ ಅವನನ್ನು ಅವಮಾನಗೊಳಿಸಿದ ಹಂಸಡಿಂಭದ್ವಯ ಎಂಬ ಖಲನೃಪರನ್ನು ದುರ್ವಾಸನು ತನ್ನ ಬ್ರಹ್ಮ ತೇಜಸ್ಸಿನಿಂದ ನಾಶ ಮಾಡಿ ಭೂಲೋಕದಲ್ಲಿ ಸನ್ಯಾಸ ಪದ್ಧತಿಯನ್ನು ಮೊಟ್ಟ ಮೊದಲು ಸಂಸ್ಥಾಪಿಸಿದನು.

–೩೯–

# ಹನುಮಂತನ ಕಥೆ

ಒಬ್ಬ ಪತಿವ್ರತೆಯ ಶಾಪದಿಂದ ರಾಮಾವತಾರದಲ್ಲಿ ವಿಷ್ಣುವು ಸೀತಾವಿರಹವನ್ನು ಅನುಭವಿಸಬೇಕಾದದ್ದು ಆಗಲೇ ಉಕ್ತ. ಅದರಿಂದ ದೈತ್ಯ ಸಂಹಾರವೆಂಬ ಸತ್ಫಲವು ದೇವತೆಗಳಿಗೂ ಮಾನವರಿಗೂ ಲಭಿಸುವುದು. ರಾಮಾವತಾರದಲ್ಲಿ ಶಂಕರ, ಸೂರ್ಯ, ಇಂದ್ರ, ವಾಯು ಮುಂತಾದ ವಿಷ್ಣು ಸಹಾಯಕರು ಕಪಿಗಳಾಗಿ ಅವತರಿಸಲು ನಿರ್ಧರಿಸಿ ಹಾಗೇ ಮಾಡಿದರು. ಹನುಮಂತನು ರುದ್ರಾವತಾರ, ವಾಲಿಯು ಇಂದ್ರಾವತಾರ, ಸುಗ್ರೀವನು ಸೂರ್ಯಾವತಾರ, (ಹನುಮನು ವಾಯ್ವವತಾರವೆನಿಸಿದ್ದು ವಾಯುವು ರುದ್ರನ ಅಪರಾವತಾರನಾದುದರಿಂದ) ಅವತಾರವೆಂದರೆ ಅಂಶಾವತಾರ, ಪುತ್ರರೂಪ, ಪುತ್ರೀರೂಪ.

ಒಂದು ಸಲ ವಿಷ್ಣು ತನ್ನ ಮೋಹಿನೀ ರೂಪವನ್ನು ತೋರಿಸಿದನು. ಅದನ್ನು ಮೆಚ್ಚಿದ ಕುರುಹಾಗಿ ಶಂಕರನು (ರುದ್ರನು) ತನ್ನ ವೀರ್ಯವನ್ನು ದಾನಮಾಡಿದನು; ಅದು ರಾಮ ಕಾರ್ಯಸಿದ್ಧಿಗಾಗಿ. ರಾಮರಾವಣರದು ತ್ರೇತಾಯುಗ. ಆ ವೀರ್ಯವನ್ನು (ಶಕ್ತಿಯ ಅಂಶವನ್ನು) ಸಪ್ತರ್ಷಿಗಳು ಎಲೆದೊನ್ನೆಯಲ್ಲಿಟ್ಟು ಗೌತಮ ಮುನಿಯ ಮಗಳ ಕಿವಿಯಲ್ಲಿ ಹೊಯ್ದರು. ಅವಳ ಕಿವಿಯಿಂದ ಶಂಭು ಶಕ್ತಿ ಸಂಪನ್ನನಾದ ಹನುಮಂತನು ಜನಿಸಿದನು. ಹುಟ್ಟುವಾಗಲೇ ಅವನು ಇಂದ್ರಾತಿರಿಕ್ತ ಬಲ ಸಂಪನ್ನನಾಗಿದ್ದನು. ಹಣ್ಣೆಂದು ಸುಲಭವಾಗಿ ಬಾಲ ಹನುಮಂತನು ಸೂರ್ಯನನ್ನು ನುಂಗಿದನು. ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿ ಅವನು ಸೂರ್ಯನನ್ನು ಉಗುಳಿದನು. ಅದರಿಂದ ಅವನು ಸುರರ್ಷಿಗಳಿಂದ ಅನೇಕ ವರಗಳನ್ನು ಪಡೆದನು ಮತ್ತು ಸ್ವಜನರಲ್ಲಿ ಹೋಗಿ ಸೇರಿಕೊಂಡನು. ಸ್ವಜನರ ಆಜ್ಞೆಯಂತೆ ಅಯತ್ನದಿಂದ ಸರ್ವವಿದ್ಯಾ ಪಾರಂಗತನಾದನು. ಸೂರ್ಯನೇ ಸ್ವತಃ ಅವನಿಗೆ ಪಾಠ ಹೇಳಿಕೊಟ್ಟನು. ಅವನ ಆಜ್ಞೆಯಂತೆ ಅಂಜನೇಯನು ಸುಗ್ರೀವನ ಸನಿಹಕ್ಕೆ ಹೋಗಿ ನೆಲೆಸಿದನು. ಸುಗ್ರೀವನು, ಅಣ್ಣ ವಾಲಿಯು ತನ್ನ ಹೆಂಡತಿಯಾದ ರುಮೆಯನ್ನು ಅಪಹರಿಸಿಕೊಂಡು ಹೋಗಿ ತನ್ನನ್ನು ಕಿಷ್ಕಿಂಧಾ ರಾಜ್ಯದಿಂದ ಹೊರಗೆ ಅಟ್ಟಿದುದರಿಂದ, ಋಷ್ಯಮೂಕ ಪರ್ವತದಲ್ಲಿ ಆಗ ವಾಸಮಾಡುತ್ತಿದ್ದನು. ಅವನು ಹನುಮನನ್ನು ತನ್ನ ಮಂತ್ರಿಯನ್ನಾಗಿ ಮಾಡಿಕೊಂಡನು. ಸತೀರಹಿತನಾಗಿ ಅಲ್ಲಿಗೆ ಬಂದ ರಾಮನಿಗೂ, ಸುಗ್ರೀವನಿಗೂ ಪರಸ್ಪರ ಸ್ನೇಹವುಂಟಾಗುವಂತೆ ಮಾಡಿದ್ದು ಹನುಮಂತನೇ. ವಾಲಿಯನ್ನು ರಾಮ ಕೊಂದ.

ಸೀತೆ ಲಂಕೆಯಲ್ಲಿದ್ದುದನ್ನು ತಿಳಿದ ರಾಮ–ಸುಗ್ರೀವರು ಅವಳನ್ನು ಶೋಧಿಸಲು ಹನುಮಂತನನ್ನು ವಿಜ್ಞಾಪಿಸಿಕೊಂಡರು. ಆ ಪ್ರಕಾರ ಸಹಸ್ರದೈತ್ಯ ಶಕ್ತಿಯನ್ನು ಹೊಂದಿದ್ದ ಹನುಮಂತನು ಮಹಾ ಸಮುದ್ರವನ್ನು ಒಂದೇ ದಾಪಿಗೆ ಹಾರಿ, ಲಂಕಾ ನಗರದ ಅಶೋಕವನದಲ್ಲಿದ್ದ ಸೀತೆಗೆ ರಾಮನ ಮುದ್ರೆಯುಂಗುರವನ್ನಿತ್ತು ಭಯ ನಿವಾರಣೆ ಮಾಡಿದನು. ಸೀತಾಪಹಾರ ಮಾಡಿದ ದಶಕಂಠನ ಅವಸಾನಕ್ಕೆ ಅದು ಮುಂಗುರುಹಾಯಿತು. ಆಗಲೇ ಹನುಮಂತನು ಲಂಕಾದಹನದಿಂದ ತನ್ನ ಶೌರ್ಯವನ್ನು ಮೊಟ್ಟ ಮೊದಲು ಪ್ರದರ್ಶಿಸಿದನು. ತಿರುಗಿ ಬಂದು ಸೀತಾದತ್ತ ಚೂಡಾಮಣಿ ಎಂಬ ಆಭರಣದ ಅಭಿಜ್ಞಾನವನ್ನು ರಾಮನಿಗೆ ಒಪ್ಪಿಸಿದನು. ಲಂಕಾದಹನದಲ್ಲಿ ರಾವಣನ ಒಬ್ಬ ಮಗನೂ ಅಗ್ನಿಗಾಹುತಿಯಾದನು–ಇತರ ಅಸಂಖ್ಯಾತ ಅಸುರರ ಮರಣದ ಮಾತು ಗೃಹೀತ. ಅವನು ಬ್ರಹ್ಮ ಪ್ರಾರ್ಥನೆಯಂತೆ ಬ್ರಹ್ಮಾಸ್ತ್ರಕ್ಕೆ ಬದ್ಧನಾಗಿ ರಾವಣ ಸುತನ ಕೈಯಲ್ಲಿ ಸ್ವಬುದ್ಧಿಯಿಂದ ಶರಣಾಗತನಾದಾಗ ಅವನ ಬಾಲಕ್ಕೆ ಬೆಂಕಿ ಹಚ್ಚಿದ್ದೇ ಹನುಮನು ಕಾಲಾಗ್ನಿ ರುದ್ರನಾಗಿ, ಲಂಕೆಯನ್ನು ಸುಡಲು ಕಾರಣ. ಆದರೂ ರಾವಣನ ಛಲ ಕುಂದಲಿಲ್ಲ. ಆಗ ರಾಮನು ಶಿವಲಿಂಗವನ್ನು ಸ್ಥಾಪಿಸಿ ಅದನ್ನು ಪೂಜಿಸಿ ವರ ಪಡೆದು ಕಪಿಸೈನ್ಯ ಬಲದಿಂದ ಸೇತು ನಿರ್ಮಾಣ ಮಾಡಿ ಲಂಕೆಗೆ ಹೋಗಿ ರಾವಣಾದಿ ದೈತ್ಯರನ್ನು ಸಂಹರಿಸಿ ಅಯೋಧ್ಯೆಗೆ ಸೀತೆಯೊಡನೆ ಹಿಂದಿರುಗಿದನು. ಲೋಕದಲ್ಲಿ ರಾಮ ಭಕ್ತಿಯನ್ನು ಪ್ರತಿಷ್ಠಾಪನೆ ಮಾಡಿದ ಕೀರ್ತಿ ಹನುಮಂತನಿಗೆ ಸಲ್ಲುತ್ತದೆ. ಅಲ್ಲದೆ ಅವನಿಗೆ "ಸರ್ವದೇವ ಮದಹರ" ಎಂಬ ಬಿರುದಿದೆ. ಈ ರುದ್ರಾವತಾರ ಅನುಪಮ, ಅದ್ವಿತೀಯ, ಅತ್ಯುದಾತ್ತ. ಇದರ ಮುಂದೆ ದೇವೀ ಶಾಪಗ್ರಸ್ತ ದ್ವಾರಪಾಲಕ ಭೈರವನು ಮಾನುಷ ಲೋಕದಲ್ಲಿ ವೇತಾಲನಾಗಿ ಜನಿಸಿದಾಗ ಅವನನ್ನು ಕಾಯಲು ದೇವನೂ ದೇವಿಯೂ ಅವತರಿಸಿದ್ದು ಅತಿ ಚಿಕ್ಕಕಥೆ. ಇದರ ಶಿವಾವತಾರಕ್ಕೆ "ಮಹೇಶಾವತಾರ" ಎಂಬ ಹೆಸರು ಬಂದಿದೆ. ಈ ಕಥೆಯಲ್ಲಿ ರುದ್ರ ನಿಯಮಿಸಿದ ದ್ವಾರಪಾಲಕ ಭೈರವನು ರುದ್ರಾಣಿಯನ್ನು ಮನೆ ಹೊರಗೆ ಹೋಗಬಿಡದ ಕರ್ತವ್ಯ ದಕ್ಷತೆಯ ಮೂಲಕ ಅವಳ ಶಾಪಕ್ಕೆ ತುತ್ತಾದುದು, ಉನ್ಮಾದವು ದೇವಿಯಲ್ಲಾಗ ಇದ್ದ ದೋಷ; ಅವಳು ಸಾಮಾನ್ಯ ಸ್ತ್ರೀಯೆಂದು ನಡೆದುಕೊಂಡದ್ದು ಭೈರವನ ದೋಷ. ಕಲ್ಲಪ್ಪ ಗುಂಡಪ್ಪಗಳಿಂದ ಮೆಣಸಪ್ಪ ಚಟ್ಟಾದ. ಆದರೆ ಕೊನೆಗೆ ಕರುಣಾಮಯ ಶಿವರುದ್ರನು (ರುದ್ರ ಶಿವನು) ದೇವಿಗೂ ಮಗನಾದ ಭೈರವನಿಗೂ ರಾಜಿ ಮಾಡಿಸಿದನು. ಒಂದಂಶದಲ್ಲಿದು ಗಣೇಶನ ಕಥೆಯನ್ನು ಹೋಲುತ್ತದೆ. ಹನುಮನ ಕಥೆಯೆದುರು ಇದು ತೀರಾ ಅಲ್ಪ. ಹನುಮನು ರಾಮನಿಗೆ ಕೀರ್ತಿ ಗಳಿಸಿಕೊಟ್ಟ ಮಹಾತ್ಯಾಗವು ರಾಮನ ಲೋಕಸೇವಾ ಪುಣ್ಯವನ್ನು ಮೀರಿ ನಿಲ್ಲುತ್ತದೆ. ರಾಮನ ಧರ್ಮಜ್ಞತೆ ಈಗ ಕೆಲವರಿಗಾದರೂ ವಿವಾದಕ್ಕೆ ಅವಕಾಶ ಮಾಡಿಕೊಟ್ಟಿದೆ. ಆ ವಿವಾದ ಅಲ್ಪಜ್ಞತಾಜನ್ಯವಾದರೂ ಅದಕ್ಕೆ ಅವಕಾಶವಿರುವ ಹಾಗೆ ಸಂದರ್ಭ ಬಂದದ್ದರಿಂದ ರಾಮಾಯಣದ ವಿಮರ್ಶಕರು ಚಂದ್ರನಲ್ಲಿ

ಕಲಂಕವನ್ನು ಕಂಡಂತೆ ಕಾಣುತ್ತಾರೆ. ಆದರೆ ಸಂಪೂರ್ಣ ನಿಷ್ಕಳಂಕ ಚಾರಿತ್ರ್ಯಕ್ಕೆ ಹನುಮಂತನನ್ನು ಬಿಟ್ಟರೆ ಭಾರತದ ವೀರರ ಚರಿತ್ರೆಯಲ್ಲಿ ಮತ್ತೊಂದು ಉದಾಹರಣೆ ಸಿಕ್ಕಲಾರದು. ಈಶತ್ವದ ರಹಸ್ಯವಿರುವುದು ಅಂಥ ಚಾರಿತ್ರ ಸಂಪನ್ನತೆಯಲ್ಲಿಯೇ ಎಂಬುದು ಭಾರತದ ಯಜ್ಞ (ತ್ಯಾಗ) ಧರ್ಮದ ಸಾರ. ಶಿವವು ಅದರಿಂದಲೇ ಸತ್ಯ ಮತ್ತು ಸುಂದರ. ಶಿವ=ಸತ್. ವಿಜಯ ನಗರದ ಸರ್ವಶಕ್ತನು ಹನುಮಂತ. ಅವನ ಆರಾಧನೆಯಿಂದಲೇ ಕರ್ನಾಟಕ ರತ್ನ ಸಿಂಹಾಸನವು ಸ್ಥಾಪಿತವಾಯ್ತು.

–೪೦–

# ಹರಿ ಗರ್ವ ಭಂಗ

ಶಿವನು ವೃಷೇಶಾವತಾರ ತಾಳಿದ ಕಥೆ: ಹಿಂದೆ ದೇವಾಸುರರು ಮುಪ್ಪು–ಸಾವುಗಳ ನೆನಪಾದ ಕೂಡಲೆ ಅತ್ಯಂತ ಭಯಭೀತರಾದರು. ಪರಸ್ಪರ ಸಮಾಲೋಚಿಸಿದ ಅವರು ರತ್ನಗಳನ್ನು ಸಂಚಯಿಸಲು ನಿರ್ಧರಿಸಿದರು. ಆಗ ಸಾಗರೋತ್ತರದಲ್ಲಿದ್ದ ಹಾಲ್ಗಡಲನ್ನು ಕಡೆಯಲು ಅವರು ಉದ್ಯತರಾದರು. ಆ ಕೆಲಸವನ್ನು ಹೇಗೆ ಮಾಡಬೇಕೆಂಬುದನ್ನು ತಿಳಿದುಕೊಳ್ಳಲು ಅವರು ಬ್ರಹ್ಮನನ್ನು ನೆನೆದರು. ಆಗ ಈಶ್ವರಾಜ್ಞೆಯಂತೆ ನಭೋವಾಣಿ ಕೇಳಿಸಿತು: 'ಹೇ ದೇವತೆಗಳೇ, ದೈತ್ಯರೇ, ಹಾಲ್ಗಡಲನ್ನು ಕಡೆಯಿರಿ. ಮಂದರ ಪರ್ವತವನ್ನು ಕಡೆಗೋಲು ಮಾಡಿರಿ. ಮಹಾಶೇಷನನ್ನು ಕಡೆಯುವ ಹಗ್ಗವನ್ನಾಗಿ ಮಾಡಿಕೊಳ್ಳಿರಿ' ಎಂದು. ಆ ಬಾನುಲಿಯನ್ನು ಕೇಳಿದಾಕ್ಷಣ ಅವರು ಹಾಗೆಯೇ ಮಾಡಹೋದರು. ಮಂದರ ಗಿರೀಶನನ್ನು ಪ್ರಸನ್ನೀಕರಿಸಿಕೊಂಡು, ಅದನ್ನು (ಗಿರಿಯನ್ನು) ಕ್ಷೀರಸಾಗರಕ್ಕೆ ತರಲೆಂದು ಎಲ್ಲರೂ ಸೇರಿ ಎಳೆದರು. ಆದರಾ ಗಿರಿ ಅಲ್ಲಾಡಲಿಲ್ಲ; ಅನಂತರ ಕಿತ್ತು ಬಿತ್ತು. ಆದರೆ ಆಮೇಲೆ ಅದನ್ನೆಳೆದು ಕೊಂಡೊಯ್ಯಲು ಅವರಿಗಾಗಲಿಲ್ಲ. ಆಗ ಜಗದೀಶ್ವರನನ್ನು ಧ್ಯಾನಿಸಿ ಪುನಃ ಪ್ರಯತ್ನಿಸಿ ಮಂದರಾದ್ರಿಯನ್ನು ಹಾಲ್ಗಡಲೊಳಗಿಳಿಸಲು ಅವರು ಸಮರ್ಥರಾದರು. ಅಂತವಿಲ್ಲದ ಸಹಸ್ರ ಶೀರ್ಷನಾದ ಮಹಾಶೇಷನನ್ನು ಅದಕ್ಕೆ ಕಟ್ಟಿದರು. ಕಡೆದರು. ಕಡೆಯುವ ಕಾಲದಲ್ಲಿ ಭೃಗು ಪುತ್ರಿಯಾದ ಮಹಾಲಕ್ಷ್ಮಿ ಹಾಲ್ಗಡಲಿಂದೆದ್ದು ಬಂದಳು. ಹಾಗೇ ಧನ್ವಂತರಿ, ಚಂದ್ರ, ಪಾರಿಜಾತ, ಉಚ್ಚೈಃ ಶ್ರವಸ್, ಐರಾವತ, ಸುರೆ, ಶಾರ್ಙ್ಗಧನು, ಶಂಖ, ಕಾಮಧೇನುಗಳು, ಕೌಸ್ತುಭ ಮತ್ತು ಅಮೃತಗಳು ಉದ್ಭವಿಸಿದವು. ಆದರೂ ತೃಪ್ತರಾಗದೆ ಹರಿ ವಿಧೀಂದ್ರಾದಿ ಸುರರೂ ವೃತ್ರಶಂಬರಾದ್ಯಸುರರೂ ಮತ್ತೆ ಕಡೆದರು. ಆ ಕೂಡಲೇ ಹಾಲಾಹಲ ಭುಗಿಲ್ಲೆಂದು ಎದ್ದು ಎಲ್ಲೆಡೆ ವ್ಯಾಪಿಸತೊಡಗಿತು. ಆ ಕಾಲಕೂಟವು ಯುಗಾಂತಾಗ್ನಿ ಹಡೆದದ್ದು. ಆದರೂ ಗಡಿಬಿಡಿಯಿಂದ ಅಷ್ಟರೊಳಗೇ ಅಮೃತ, ಲಕ್ಷ್ಮಿ, ಶಂಖ, ಕೌಸ್ತುಭ, ಖಡ್ಗಗಳನ್ನು ವಿಷ್ಣು ಓಡಿಹೋಗಿ ತೆಗೆದುಕೊಂಡನು. ಸೂರ್ಯನು ಉಚ್ಚೈಃಶ್ರವಸ್ ಕುದುರೆಯನ್ನೂ, ಇಂದ್ರನು ಪಾರಿಜಾತದ ಮರವನ್ನೂ ಐರಾವತ ಗಜರಾಜನನ್ನೂ ತೆಗೆದುಕೊಂಡರು. ಕಾಲಕೂಟವನ್ನೂ ಚಂದ್ರನನ್ನೂ ಶಂಕರನು ಆ ದೇವತೆಗಳ ಹಾಗೂ ಅಸುರರ ರಕ್ಷಣೆಗಾಗಿ ತೆಗೆದುಕೊಂಡನು ಮತ್ತು ತನ್ನ ಕಂಠದಲ್ಲಿ ಧರಿಸಿದನು.

ಅಷ್ಟರಲ್ಲಿ ದಾನವರು ಈಶ್ವರಾಜ್ಞೆಯಿಂದ ಮೋಹಿತರಾಗಿ ಸುರಾ (ಹೆಂಡ) ರಮಣಿಯನ್ನು ಕೊಂಡೊಯ್ದರು. ಎಲ್ಲ ಜನರೂ ಸೇರಿ ಧನ್ವಂತರಿಯೆಂಬ ದೇವವೈದ್ಯನನ್ನು ಕರೆದುಕೊಂಡು ಹೋದರು. ಮುನಿಗಳು ಕಾಮಧೇನುಗಳನ್ನೊಯ್ದರು. ಹೆಂಗಸರೆಲ್ಲಾ ಮುಗ್ಧರಾಗಿ ಸುಮ್ಮನೆ ನಿಂತು ಬಿಟ್ಟರು!

ಕೂಡಲೇ ಅಮೃತಕ್ಕಾಗಿ ಸುರಾಸುರ ಕದನ ಶುರುವಾಯಿತು. ಬಲಿ ಮುಂತಾದ ದೈತ್ಯರು ಬಲಾತ್ಕಾರದಿಂದ ಆ ಸೋಮಾಮೃತವನ್ನು ಕಸಿದುಕೊಂಡು ಹೋದರು. ಆಗ ದೇವತೆಗಳು ಶಂಕರನಿಗೆ (ರುದ್ರ ರೂಪದ ಶಿವನಿಗೆ) ಶರಣಾಗತರಾದರು. ಆಗ ಅವನು ರಾಕ್ಷಸರು ಮುಗ್ಧರಾಗುವಂಥ ಮೋಹಿನೀ ರೂಪವನ್ನು ವಿಷ್ಣುವಿಗೆ ಕೊಟ್ಟು ಆ ಮೂಲಕ ಧನುಜರು ಅಮೃತ ಕಲಶವನ್ನು ಮೋಹಿನಿಗೆ ಕೊಡುವಂತೆ ಮಾಡಿದನು. ಮೋಹಿನಿ ಅಮೃತವನ್ನು ತಾನು ಕುಡಿದಳು ಮತ್ತು ದೇವತೆಗಳಿಗೆ ಕುಡಿಸಿದಳು. ಹೀಗೆ ಪಂಕ್ತಿ ಭೇದ ಮಾಡಬಾರದೆಂದು ದೈತ್ಯರು ಕೇಳಿದ್ದು ವ್ಯರ್ಥವಾಯ್ತು. ಆದರೆ ಅಮೃತೋದ್ಭವರಾದ ಅನೇಕ ಸ್ತ್ರೀಯರನ್ನಲ್ಲಿ ಕಂಡು ಮರುಳಾದ ದೈತ್ಯರು ಅವರನ್ನು ಹೊತ್ತುಕೊಂಡು ಹೋಗಿ ತೃಪ್ತರಾದರು. ಅವರನ್ನು ತಮ್ಮ ತಮ್ಮ ಮಯ ನಿರ್ಮಿತ ಕೋಟೆಗಳಲ್ಲಿಟ್ಟು ಅವರು ಸುರರೊಡನೆ ಮತ್ತೆ ಯುದ್ಧಕ್ಕೆ ತೊಡಗಿದರು. ಆ ಯುದ್ಧದಲ್ಲಿ ಗೆದ್ದ ಹೊರತೂ ಅವರೊಯ್ದಿದ್ದ ಅಮರ ಸ್ತ್ರೀಯರನ್ನು ಮುಟ್ಟಬಾರದೆಂಬ ಕರಾರಿಗೆ ಬದ್ಧರಾಗಿ ಯುದ್ಧ ಮಾಡಿದ ಅಸುರರು ವಿಷ್ಣು ರಕ್ಷಿತರಾಗಿದ್ದ ದೇವತೆಗಳಿಂದ ಪರಾಜಿತರಾಗಿ ಓಡಿ ಹೋದರು; ಅನೇಕರು ಸತ್ತು ಹೋದರು. ಉಳಿದ ದೈತ್ಯರು ಪಾತಾಳಕ್ಕೆ ಹೋದರು. ಅಲ್ಲಿಗೆ ಹೋದ ವಿಷ್ಣುವು ಅಲ್ಲಿ ಅವರಡಗಿಸಿಟ್ಟಿದ್ದ ಅಮೃತ ನಂದನೆಯರನ್ನು ನೋಡಿ ಮರುಳಾಗಿ ಹೋದನು. ಅವರೊಡನೆ ಸದಾ ರತಿ ಕ್ರೀಡೆಯಲ್ಲಿರತೊಡಗಿ, ಆ ಮೂಲಕ, ಕೋಟ್ಯಂತರ ಲೋಕ ಕಂಟಕರನ್ನು ಹಡೆದು ಸ್ವರ್ಗ–ಮರ್ತ್ಯಗಳನ್ನು ಹಾಳು ಮಾಡಲು ಬಿಟ್ಟಾಗ, ಬ್ರಹ್ಮನ ಧುರೀಣತ್ವದಲ್ಲಿ ದೇವತೆಗಳು ಕೈಲಾಸವಾಸಿ ರುದ್ರನನ್ನು ಸ್ತುತಿಸಿ ಕಾಪಾಡಲು ಕೇಳಿಕೊಂಡರು. ಆಗ ಭಕ್ತಾನುಗ್ರಹಿ ರುದ್ರ (ಶಂಕರ) ವೃಷೇಶ್ವರಾವತಾರ ತಾಳಿ ಪಾತಾಳದಲ್ಲಿದ್ದ ಎಲ್ಲ ಹರಿಪುತ್ರರನ್ನೂ ಮೆಟ್ಟಿ ತಿವಿದುಕೊಂದು ಹಾಕಿದನು. ವಿಷ್ಣುವು ಕೋಪದಿಂದ ವೃಷನಿಗೆ ಬಾಣಬಿಟ್ಟನು. ಅವನು ಬಿಟ್ಟ ಬಾಣಗಳನ್ನೆಲ್ಲಾ ವೃಷೇಶ್ವರನು ನುಂಗಿದನು ಮತ್ತು ವಿಷ್ಣುವನ್ನು ಒದೆದು ನಿಷ್ಕ್ರಿಯನನ್ನಾಗಿ ಮಾಡಿಬಿಟ್ಟನು. ಆಗ ವಿಷ್ಣುವಿಗೆ ಜ್ಞಾನೋದಯವಾಯಿತು: ವೃಷ (ಎತ್ತು) ರುದ್ರ ಶಿವ ಎಂದು! ಆಗ ತಪ್ಪಾಯಿತೆಂದು ಕ್ಷಮೆ ಯಾಚಿಸಿದನು; ತಾನು ಮಾಡಿದ್ದೆಲ್ಲಾ ರುದ್ರಮಾಯೆಯು ಕೊಟ್ಟ ಮೌಢ್ಯದಿಂದ–ಎಂದ. ರುದ್ರನು ಸರ್ವ ಪ್ರಜಾಪತಿಗಳ ಪತಿ! ತಥಾಸ್ತು ಎಂದ!

–೪೧–

# ಪಿಪ್ಪಲಾದ ಚರಿತ್ರೆ

ಹಿಂದೆ ಪಿಪ್ಪಲನೆಂಬ ಶಿವಾಂಶ ಸಂಭೂತನಾದ ಮುನಿಯಿದ್ದನು. ಆ ಕಾಲದಲ್ಲಿ ಋಷ್ಯಾಶ್ರಮದಲ್ಲಿ ಆಯುಧಗಳನ್ನಿಟ್ಟು ವೃತ್ರನೊಡನೆ ಯುದ್ಧ ಮಾಡಹೋದ ದೇವತೆಗಳು ಸೋತರು. ಬ್ರಹ್ಮನನ್ನು ಕೇಳಿದಾಗ ತ್ವಷ್ಟ್ರವು ನಿಮ್ಮ ಸಂಹಾರಕ್ಕಾಗಿ ಹಿಂದೆ ವೃತ್ರ ಹುಟ್ಟಲೆಂದು ವರ ಪಡೆದಿದ್ದನು ಎಂದು ಅವರಿಗೆ ಹೇಳಿದನು. ಅಲ್ಲದೆ ಪಿಪ್ಪಲ ಮುನಿಯ ಮಗ ದಧೀಚಿಯ ವಜ್ರಾಸ್ಥಿಯಿಂದ ಮಾತ್ರ ವೃತ್ರಹನನ ಸಾಧ್ಯ ಎಂಬುದನ್ನೂ ಅವನು ತಿಳಿಸಿದನು. ಆ ವಜ್ರಾಸ್ತ್ರದ ಹೆಸರು ಬ್ರಹ್ಮ ಶಿರಸ್.

ಪಿಪ್ಪಲನ ಹೆಂಡತಿ ಸುವರ್ಚೆ. ಅವಳಿಗೆ ದೇವತೆಗಳು ಅಸ್ಥ್ಯರ್ಥಿಗಳಾಗಿ ಬಂದದ್ದು ಗೊತ್ತಾಗಿ ಅವರಿಗೆ ಶಾಪ ಕೊಟ್ಟಳು. ಆಗ ಅವರೆಲ್ಲರೂ ಪಶುಗಳಾದರು. ಅನಂತರ ಅವಳು ಪತಿಯನ್ನು ನೋಡ ಹೊರಟಾಗ ಆಕಾಶವಾಣಿ ಹೇಳಿತು: "ನಿನ್ನ ಗರ್ಭದಲ್ಲಿ ಮುನಿ ತೇಜಸ್ಸಿರುವುದರಿಂದ ನೀನು ಮೊದಲು ಅದನ್ನು ರಕ್ಷಿಸು. ಮುಂದೆ ಎಲ್ಲಾ ಸರಿ ಹೋಗುವುದು ಎಂದು ಗಿರೀಶ ಹೇಳಿದ್ದಾನೆ" ಎಂದು. ಅದನ್ನು ಕೇಳಿ ಅವಳು ತನ್ನ ಗರ್ಭವನ್ನು (ಗರ್ಭಸ್ಥ ಶಿಶುವನ್ನು) ಹೊರ ಬರುವಂತೆ ಮಾಡಿದಳು. ಆಗ ಸಾಕ್ಷಾದ್ರುದ್ರಾವತಾರನಾದ ದಧೀಚ ಋಷಿ ಜನಿಸಿದನು. ಆಗ ಅವನನ್ನು ಆಕೆ ತಾನೀಗ ಮೃತನಾಗಿದ್ದ ತನ್ನ ಪತಿ ಪಿಪ್ಪಲನ ದಿವ್ಯಲೋಕಕ್ಕೆ ಹೋಗಲು ಅನುಮತಿ ಕೊಡೆಂದು ಕೇಳಿದಳು. ಅವನ ಅನುಮತಿ ಪಡೆದು ಸಮಾಧಿ ಮಾರ್ಗದಿಂದ ಅವಳು ಪತಿಲೋಕವನ್ನು ಸೇರಿದಳು. ಅವನಿದ್ದದ್ದು ಶಿವಲೋಕದಲ್ಲಿ. ಅನಂತರ ಇಂದ್ರಾದಿ ಸುರರು ದಧೀಚನೆಂಬ ಹೆಸರಿನ ರುದ್ರಾವತಾರಿಯ ಸನಿಹಕ್ಕೆ ಬಂದರು. ವಿಷ್ಣುವು ಬ್ರಹ್ಮ ಸಂಸ್ಕಾರವನ್ನಿತ್ತು ಬ್ರಹ್ಮನು ದಧೀಚನಿಗೆ ಪಿಪ್ಪಲಾದನೆಂಬ ಹೆಸರನ್ನಿತ್ತನು.

ಒಂದು ದಿನ ಪಿಪ್ಪಲಾದನು ಸ್ನಾನಕ್ಕೆಂದು ಪುಷ್ಪ ಭದ್ರಾ ನದಿಗೆ ಹೋದಾಗ ಅನರಣ್ಯ ಮಹಾರಾಜನ ಮಗಳಾದ ಪದ್ಮೆಯನ್ನು ಕಂಡು ಮೆಚ್ಚಿ ಅವಳ ತಂದೆಯ ಹತ್ತಿರ ಹೋಗಿ ಅವಳನ್ನು ತನಗೆ ಮದುವೆ ಮಾಡಿಕೊಡೆಂದು ಕೇಳಿದನು. ಮುದುಕನಾದ ದಧೀಚನಿಗೆ ಮಗಳನ್ನು ಕೊಡಲು ಮನಸ್ಸಿಲ್ಲದಿದ್ದರೂ ಅವನ ತಪಃಶಕ್ತಿಗೆ ಹೆದರಿ ಅವನು ಅವಳನ್ನು ಅವನಿಗೆ ಮದುವೆ ಮಾಡಿಕೊಟ್ಟನು. ಅವಳಲ್ಲಿ ಅವನಿಗೆ ಹತ್ತು ಜನ ಮಕ್ಕಳು ಹುಟ್ಟಿದರು. ದಯಾಳುವಾದ ದಧೀಚನು ಶಿವಭಕ್ತರಿಗೆ ಅವರು

ಹುಟ್ಟಿದ ೧೬ ವರ್ಷಗಳವರೆಗೆ ಶನಿಪೀಡೆಯಿಲ್ಲದಂತಾಗಲಿ–ಎಂದು ವರವಿತ್ತು ಹರಸಿದವನು. ಅಲ್ಲಿಂದ ಶನಿಯು ವಿಕೃತನಾದನು.

ಹೀಗೆ ಶನಿಪೀಡಾ ನಿವಾರಕರು ಇನ್ನಿಬ್ಬರು ಅವರೇ ಗಾಧಿ ಮತ್ತು ಕೌಶಿಕ ಎಂಬ ಮಹಾಪುರುಷರು.

ದೇವತೆಗಳು ದಧೀಚನನ್ನು ಅಸ್ಥಿ ಕೊಡಲು ಕೇಳಲಾಗಿ ಪರೋಪಕಾರಿಯಾದ ಅವನು ಕೊಟ್ಟನು. ಆ ಅಸ್ಥಿಯಿಂದ ವಿಶ್ವಕರ್ಮನು ವಜ್ರಾಯುಧವನ್ನು ನಿರ್ಮಿಸಿ ಕೊಟ್ಟನು. ಅದರಿಂದ ಇಂದ್ರನು ವಜ್ರಪಾಣಿಯಾದನು. ಆ ವಜ್ರದಿಂದ ವೃತ್ರಾಸುರನನ್ನು ಕೊಂದನು. ಅಂದಿನಿಂದ ದೇವತೆಗಳ ಪಶುತ್ವ ಹೋಗಿ ಅವರು ಸ್ವತಂತ್ರರಾಗಿ ಸ್ವರ್ಗದಲ್ಲಿ ರಾಜ್ಯಭಾರ ಮಾಡುತ್ತಾ ಲೋಕಹಿತ ಕಾರ್ಯಗಳಲ್ಲಿ ತ್ರಿಮೂರ್ತಿಗಳಿಗೆ ನೆರವಿಗರಾಗಿ ನಿಂತರು. ಇಂದ್ರನಿಗೆ ರುದ್ರಶಕ್ತಿಯಾದ ವಜ್ರಾಯುಧವಿಲ್ಲದಿದ್ದರೆ ವೃತ್ರನನ್ನು ಸೋಲಿಸಲು ಸಾಧ್ಯವಾಗುತ್ತಲೇ ಇರಲಿಲ್ಲ. ಇದು ರುದ್ರಮಹಾತ್ಮೆಗೆ ಮತ್ತೊಂದು ಮಹಾ ನಿದರ್ಶನ. ಪಿಪ್ಪಲಾದ ದಧೀಚನು ರುದ್ರ!

-೪೨-

# ಮಹಾನಂದೆಯ ಕಥೆ

ನಂದಿ ಗ್ರಾಮದಲ್ಲಿ ಹಿಂದೆ ಮಹಾನಂದೆ ಎಂಬ ಶಿವಭಕ್ತೆಯಾದ ಪ್ರಸಿದ್ಧ ವೇಶ್ಯೆಯಿದ್ದಳು. ಅವಳೇ ಸ್ವತಃ ದೊಡ್ಡ ನರ್ತಕಿಯಾಗಿದ್ದಳಲ್ಲದೆ ಅವಳು ಸಾಕಿದ್ದ ಒಂದು ಮಂಗಕ್ಕೂ. ಕೋಳಿಗೂ ರುದ್ರಾಕ್ಷ ಧಾರಣ ಮಾಡಿಸಿ ಭಕ್ತಿ ನೃತ್ಯ ಮಾಡಲು ಕಲಿಸಿದ್ದಳು. ಅವಳ ಭಾವ ಪರೀಕ್ಷೆಗಾಗಿ ಒಮ್ಮೆ ರುದ್ರನು ಜಟಾಧಾರಿಯಾಗಿ ಅವಳ ಭವನಕ್ಕೆ ಹೋದನು; ತಾನೊಬ್ಬ ದೊಡ್ಡ ವೈಶ್ಯನೆಂದು ಹೇಳಿಕೊಂಡನು. ಅದಕ್ಕವಳು ನನ್ನ ಕುಲಧರ್ಮದ ಪ್ರಕಾರ ಮೂರು ರಾತ್ರಿ ನಿನ್ನೊಡನೆ ರಮಿಸಲು ನಿನ್ನ ಕೈಯಲ್ಲಿರುವ ಬಂಗಾರದ ರತ್ನ ಕಂಕಣವನ್ನು ಕೊಡಬೇಕು ಎಂದು ಹೇಳಿದಳು. ಅದಕ್ಕೊಪ್ಪಿ ರುದ್ರಾವತಾರಿಯು ಅವಳೊಡನೆ ಮೂರು ರಾತ್ರಿಯನ್ನು ಕಳೆಯುವುದಲ್ಲದೆ ಅವಳಿಗೆ ತನ್ನ ರತ್ನ ಕಂಕಣವನ್ನಲ್ಲದೆ ರತ್ನಲಿಂಗವನ್ನೂ ಕೊಡಲು ಒಪ್ಪಿದನು. ಈ ನಡುವೆ ಒಂದು ರಾತ್ರಿ ಅವಳ ನೃತ್ಯ ಮಂಟಪಕ್ಕೆ ಬೆಂಕಿ ಹಿಡಿಯಿತು. ಆಗ ಅವಳು ಕೂಡಲೇ ಎದ್ದು ಹೋಗಿ ಕಟ್ಟಿದ್ದ ತನ್ನ ಮಂಗನನ್ನೂ ಕೋಳಿಯನ್ನೂ (ಹುಂಜನನ್ನೂ) ಬಿಡಿಸಿದಳು ನಾಟ್ಯ ಮಂಟಪದ ಕಂಬಗಳ ಜೊತೆಗೆ ಅಲ್ಲಿದ್ದ ಲಿಂಗವೂ ಭಸ್ಮವಾಯಿತು. ಅದರಿಂದ ಅತಿ ದುಃಖಿತಳಾದ ವೇಶ್ಯೆ ತನ್ನ ದೂತಿಗೆ ವೈಶ್ಯರು ನಿಷ್ಕ್ರಿಯರಾಗಿ ಕುಳಿತಾಗ ಯಾವನೋ ವೈಶ್ಯನು (ಪ್ರಚ್ಛನ್ನ ರುದ್ರನು) ಲಿಂಗ ಒಡೆದು ನುಚ್ಚುನೂರಾಗಿ ಮಾಡಿ ಹೋದುದರಿಂದ ತಾನು ಬದುಕೆನು; ತನಗೆ ಚಿತೆಯನ್ನು ಸಿದ್ಧಮಾಡು ಎಂದಳು. ಅವಳು ಭಯದಿಂದ ಹಾಗೇ ಮಾಡಿದಳು. ವಿಟನಾಗಿ ಬಂದಿದ್ದ ಆ ವೈಶ್ಯಪತಿ ಆ ಮಹಾಗ್ನಿಯನ್ನು ಹೊಕ್ಕನು. ಅದರಿಂದ ಅವಳು ಮೂರು ದಿನಗಳಿಗಾದರೂ (ಅವು ಕಳೆಯುವುದರೊಳಗೇ) ವೈಶ್ಯನು ತನ್ನ ಪತಿಯಾಗಿದ್ದುದರಿಂದ ಅವನ ಚಿತೆಯಲ್ಲಿ ತಾನೂ ಹಾರಿ ದೇಹತ್ಯಾಗ ಮಾಡಲು ನಿರ್ಧರಿಸಿದಳು. ಅದಕ್ಕೆ ಅವಳು ತನ್ನ ಬಂಧುಗಳಿಗೆ ಕೊಟ್ಟ ವಿವರಣೆ ಇಂತಿದೆ:

**ಸತ್ಯಾಶ್ರಯಃ ಪರೋಧರ್ಮಃ ಸತ್ಯೇನ ಪರಮಾ ಗತಿಃ।**
**ಸತ್ಯೇನ ಸ್ವರ್ಗ ಮೋಕ್ಷೌಚ ಸತ್ಯೇ ಸರ್ವಂ ಪ್ರತಿಷ್ಠಿತಂ॥**

(''ಸತ್ಯೇನ ವಿಧೃತೋ ಲೋಕಃ ಸರ್ವಂ ಸತ್ಯೇ ಪ್ರತಿಷ್ಠಿತಂ'' ಎಂಬ ವ್ಯಾಸೋಕ್ತಿಯೊಡನೆ ಇದನ್ನು ಹೋಲಿಸಿರಿ) ಇಷ್ಟು ಹೇಳಿ ತನ್ನ ಸರ್ವೈಶ್ವರ್ಯವನ್ನೂ

ದ್ವಿಜರಿಗೆ ದಾನ ಮಾಡಿ, ಮಹಾನಂದೆಯು ಅಗ್ನಿ ಪ್ರವೇಶಕ್ಕೆ ತೊಡಗಿದಾಗ ಶಿವನು ಪ್ರತ್ಯಕ್ಷನಾದನು; ಅವಳನ್ನು ತಡೆದನು; ಮತ್ತು ತಾನು ಅವಳ ನಿಷ್ಠಾ ಪರೀಕ್ಷೆಗಾಗಿ ವೈಶ್ಯ ರೂಪದಲ್ಲಿ ಬಂದದ್ದನ್ನು ವಿವರಿಸಿದನು. ಅಲ್ಲದೆ ಅವಳು ಕೇಳಿದ ಭೋಗ್ಯವಸ್ತುಗಳನ್ನು ಕೊಡುವೆನೆಂದು ರುದ್ರನು ವಚನ ಕೊಟ್ಟನು. ಮಹಾನಂದೆಯು ಅವಾವುವೂ ತನಗೆ ಬೇಡವೆಂದೂ ತನ್ನ ಸರ್ವಾವಲಂಬಿಗಳೊಡನೆ ತನ್ನನ್ನು ಶಿವ ಪಾದಾರವಿಂದದಲ್ಲಿ ಸದಾ ಮೋಕ್ಷ ಸ್ಥಿತಿಯಲ್ಲಿಡಬೇಕೆಂದೂ ಕೇಳಿಕೊಂಡಳು. ವೈಶ್ಯನಾಥಾವತಾರಿ ಶಿವ ಅದಕ್ಕೊಪ್ಪಿ ಅವಳ ಪರಿವಾರದೊಡನೆ ಅವಳನ್ನು ಕರೆದುಕೊಂಡು ಅವಳು ಕೇಳಿದ್ದನ್ನವಳಿಗೆ ಕೊಟ್ಟನು.

ಈ ವೇಶ್ಯಾಧರ್ಮದ ಕಥೆ ಗರುಡ ಪುರಾಣದಲ್ಲಿ ಬಂದ ವೇಶ್ಯಾಧರ್ಮದ ಕಥೆಯನ್ನು ಹೋಲುತ್ತದೆ. ಇದು ಭಾರತೀಯ ಧರ್ಮದ ಅತ್ಯಂತ ದೊಡ್ಡ ರಹಸ್ಯವನ್ನು ಹೇಳುತ್ತದೆ. ಇದು ಗೀತೋಕ್ತ ಸ್ವಧರ್ಮ ಪಾಲನೆ. ವರ್ಣಾಶ್ರಮ ಧರ್ಮಕ್ಕೊಳಪಡದ ಲಿಂಗಿಗಳ ವರ್ಗಕ್ಕೆ ಸೇರಿದ ವೇಶ್ಯೆಗೆ ಕೂಡಾ ಅವಳು ಭಾರತೀಯಳೇ ಆದರೆ ಅವಳಿಗೆ ಪಾಲಿಸತಕ್ಕ ಸ್ವಧರ್ಮವಿದೆ. ಅದು ಕುಲಾಚಾರ ಪಾಲನೆ, ಸತ್ಯನಿಷ್ಠೆ, ತ್ರಿಕರಣ ಶುದ್ಧಿ, ವಚನಪಾಲನೆ, ಸರ್ವೇಶ್ವರ ಭಕ್ತಿ, ಪ್ರಾಮಾಣಿಕತೆ (ನಿರ್ವಂಚನೆ) ಮತ್ತು "ತುಲಾ ಮೇ ಸರ್ವಭೂತೇಷು ಸಮಾ ತಿಷ್ಠತಿ ಜಾಜಲೇ" ಎಂಬ ರೀತಿಯ ತತ್ವನಿಷ್ಠ ಹರಿಶ್ಚಂದ್ರ ವ್ಯವಹಾರ. ಈ ಸದಾಚಾರದ ಸಪ್ತ ಸೂತ್ರಗಳಿಂದ ಮಾನವನು ಯಾವ ವೃತ್ತಿಯಲ್ಲಿದ್ದರೂ ಯಾವ ಜಾತಿಯಲ್ಲಿದ್ದರೂ ಜಾತಿ ರಹಿತನಾದರೂ ಪರಮ ಪುರುಷಾರ್ಥವೆಂಬ ಮೋಕ್ಷ ಮೌಲ್ಯವನ್ನು ಪಡೆಯಬಹುದು–ಎಂಬುದು ಜಗತ್ತಿಗೆ ಭಾರತ ಕೊಟ್ಟ ವರ. ಅಸದಾಚಾರಪರರು ವೇಶ್ಯೆಗಿಂತ ಸಾವಿರ ಪಟ್ಟು ಕೀಳು ದರ್ಜೆಯವರು. ಅವರ ತಪೋಯಜ್ಞ ದಾನಾದಿ ಸರ್ವ ವೇದೋಕ್ತ ಕರ್ಮಗಳೂ ಉಪನಿಷದುಕ್ತ ಜ್ಞಾನೋಪಾಸನೆಗಳೂ ರಾಜ್ಯಾದಿ ಶಾಸ್ತ್ರ ಪಾಂಡಿತ್ಯವೂ ಕಃ ಪದಾರ್ಥ, ಕಸ, ಕಡ್ಡಿ. (ಆಚಾರಃ=ಸದಾಚಾರಃ=ಸತಃ ಆಚಾರಃ= ಶಿವಸ್ಯ ಆಚಾರಃ– ನಿವೃತ್ತಿ ಧರ್ಮಪಾಲನಂ–ಸಂನ್ಯಾಸ ಬುದ್ಧಿಯಿಂದ ಮಾಡುವ ಲೋಕ ಸಂಗ್ರಹ ಕರ್ಮ–ನಿಷ್ಪಕ್ಷಪಾತ ನ್ಯಾಯಾಧೀಶನ ಆತ್ಮಸಾಕ್ಷಿ ಪ್ರಧಾನ ನಿರ್ಣಯದ ಪ್ರಕಾರ ಅವನು ಮಾಡುವ ಕೆಲಸ–ಸ್ವದೇಹ ಕೂಡಾ ತನ್ನದಲ್ಲವೆಂದೂ ಶಿವನದೆಂದೂ ತಿಳಿದು.) ಆನಂದವೆಂದರೆ ಮೋಕ್ಷ. ಮಹಾನಂದವೆಂದರೆ ಭಗವಲ್ಲೀನವಾಗಿ ಭಗವದನುಗ್ರಹವನ್ನು ಪಾತ್ರಾಪಾತ್ರ ವಿವೇಕದಿಂದ ಕೊಡುವ ಮಹಾಧರ್ಮಾಮೃತ. ಇದರಿಂದ ಮಾತ್ರ ಹಿಂದು ಧರ್ಮವು ವಿಶ್ವಧರ್ಮವೆನ್ನಿಸೀತು; ಇನ್ನಾವುದರಿಂದಲೂ ಆಗದು. ಇನ್ನಾವುದಿದ್ದರೂ ಅದು ಈ ಸಪ್ತಸೂತ್ರಗಳಿಗೆ ಅವಿರುದ್ಧವಾಗಿರಬೇಕು–ಎಂಬುದು ತಾತ್ಪರ್ಯ–ಎಲ್ಲರೂ ವೇಶ್ಯೆಯರಾದರೇ ವಿಟರಾದರೇ ಮೋಕ್ಷಾರ್ಹರಾಗುತ್ತಾರೆ ಎಂದರ್ಥವಲ್ಲ. ವೇಶ್ಯೇತರ ಕುಲದವರು ತಮ್ಮ ತಮ್ಮ ಸತ್ಕುಲಗಳ ಸದಾಚಾರ ಪಾಲಕರಾಗಿಯೇ ಇರಬೇಕು.

–೪೩–

# ದ್ವಿಜೇಶ್ವರಾವತಾರ

ಶಿವನ ವೃಷಭರೂಪದಿಂದ ಹಿಂದೆ ಶಿವ ಪ್ರಸಾದ ಪಡೆದು ರಾಜ್ಯವಾಳುತ್ತಿದ್ದ ಭದ್ರಾಯುವೆಂಬ ಅರಸನ ಸತ್ವ ಪರೀಕ್ಷೆಗಾಗಿ ದ್ವಿಜ ದಂಪತೀ ಸ್ವರೂಪ ತಾಳಿ ರುದ್ರನು ರಾಜನು ವಿಹರಿಸುತ್ತಿದ್ದ ಅರಣ್ಯಕ್ಕೆ ಹೋದನು; ಒಂದು ಮಾಯಾ ಶಾರ್ದೂಲವನ್ನು ನಿರ್ಮಿಸಿ ಅದು ಆ ದಂಪತಿಗಳತ್ತ ಕೂಗುತ್ತಾ ಓಡಿ ಬರುವಂತೆ ಮಾಡಿದನು. ಸಪತ್ನೀಕನಾಗಿ ಬಂದಿದ್ದ ಭದ್ರಾಯುವು ಕೂಡಲೇ ಅದನ್ನು ಕೊಲ್ಲಲು ಧನುಸ್ಸನ್ನೆತ್ತಿದನು. ಅಷ್ಟರಲ್ಲಿ ಆ ಹುಲಿ ದ್ವಿಜವರನ ಪತ್ನಿಯನ್ನು ಕಚ್ಚಿಕೊಂಡು ಹೋಯಿತು. ಆಗ ಕ್ರುದ್ಧನೂ ದುಃಖಿಯೂ ಆಗಿ ರುದ್ರಾವತಾರಿ ಬ್ರಾಹ್ಮಣನು ರಾಜನನ್ನು ಉಗ್ರವಾಗಿ ತರಾಟೆಗೆ ತೆಗೆದುಕೊಂಡನು:

**"ಏ ರಾಜ, ಸಕಲಬಲತೇಜ,**
**ನಿನ್ನ ಬಲವೆಲ್ಲಿ ಶೌರ್ಯವೆಲ್ಲಿ?**
**ಎಲ್ಲಿ ನಿನ್ನ ಹೆಗ್ಗೈದುಗಳೆಲವೋ ಹೆಬ್ಬಿಲ್ಲಿಹುದೆಲ್ಲಿ?**
**ಎಲ್ಲಿ ನಿನ್ನ ಹನ್ನೆರಡು ಸಾವಿರಾನೆಗಳು?**
**ಅಯುತಸೈನ್ಯ?**
**ಎಲ್ಲಿ ಏತಕೀ ನಿನ್ನ ಕತ್ತಿ? ಮಂತ್ರಾಸ್ತ್ರವಿದ್ಯೆ ಪಣ್ಯ!**
**ಏನಿದ್ದರೇನು ನಿನ್ನಲ್ಲಿ ಎಲ್ಲವೂ ವ್ಯರ್ಥವಾಯಿತಲ್ಲ!**
**ಕಾಡಾಡಿಗಳನು ಕಾಪಾಡಲಾರದವನೆಂಥ ದೊಡ್ಡ ಮಲ್ಲ?**
**ಕ್ಷತದೆ ಕಾವುದೇ ಕ್ಷಾತ್ರಧರ್ಮ! ಅದ ಬಿಟ್ಟ ಮೇಲೆ ನಿನ್ನ**
**ಬೆಲೆಯೆಷ್ಟು ಹೇಳು ಸರಕಾರಿ ಜೀವನದ? ಬಾರದಿಹುದೆ ಬನ್ನ?**
**ಆರ್ತರಕ್ಷಣೆಯೆ ರಾಜಧರ್ಮ ಸರಕಾರದೊಡೆಯನಿಂಗೆ**
**ಅದ ಬಿಟ್ಟ ಮೇಲೆ ಸಾವನ್ನಪ್ಪುವುದೇ ಧರ್ಮವಾತನಿಂಗೆ!**
**ಪ್ರಾಣವಿತ್ತಗಳ ಹೊಂದದಿರುವ ಧರ್ಮಜ್ಞ ಶವ ಸಮಾನ**
**ಅನ್ನಪಾನದಾನಾಸಮರ್ಥ ಗಾರ್ಹಸ್ಥ್ಯ ಮಾನ ಹೀನ**

**ದೀನರರನ್ನು ನಿರ್ಗತಿಕರನ್ನನಾಥರನು ಕಾಯದಿರುವ**
**ಪಾನಮಗ್ನ ಶಾಸಕಗೆ ವಿಷವ ಕುಡಿಯುವುದೆ ಲೇಸು, ಕರೆವ।**

**ಕಾನನಾಗ್ನಿಯಲಿ ಬಿದ್ದು ಸಾಯುವುದು, ಬಿಕ್ಕೆ ಬೇಳ್ವುದು ವರ**
**ಆ ನರಾಧಮನ ರಾಜ್ಯಭಾರ ಪಾಪಿಷ್ಠ ವೃದ್ಧ್ಯಾಗಾರ॥**

(ಭಾವಾನುವಾದ)

ಹೀಗೆ ಬಯ್ಯಿಸಿಕೊಂಡ ಭದ್ರಾಯು ಬಹಳ ದುಃಖಿತನಾಗಿ ದ್ವಿಜವರ್ಯನಿಗೆ ಮಾರುತ್ತರವಿತ್ತನು. "ಪತ್ನಿಯನ್ನು ಕಳೆದುಕೊಂಡ ನಿನಗೆ ಪರಿಹಾರವಾಗಿ ಈ ರಾಜ್ಯವನ್ನೂ, ರಾಜ್ಞಿಯನ್ನೂ, ನನ್ನ ದೇಹವನ್ನೂ ಅರ್ಪಿಸುತ್ತೇನೆ–ಆಗದೇ?" ಎಂದು. ಅದಕ್ಕೆ ಉತ್ತರವಾಗಿ–

**"ಕಾಣದಂಧನಿಗೇಕೆ ಕನ್ನಡಿ,**
**ದೇಣಿಗೆಯೊಳೇ ಬದುಕುವಗೆ ನಿರ್–**
**ಮಾಣ ಮಾಡಿದ ಭವನವೇತಕ್ಕವನು ಬೀಡಾಡಿ।**
**ಕೋಣವಾನಿಸನೋದದಿರಲವ–**
**ನೇನಗೈವನು ಪುಸ್ತಕದೆ, ಧನ–**
**ದಾನದಿಂದೇನೆನಗೆ ಹೆಂಡತಿಯಿಲ್ಲದಿರುವಾಗ॥"**

ಎಂದು ದ್ವಿಜೋತ್ತಮನು ಹೇಳಿದಾಗ, ರಾಜನು ತನ್ನ ರಾಜ್ಞಿಯನ್ನವನಿಗೆ ದಾನವಿತ್ತನು. ಮತ್ತು ತಾನು ಅಗ್ನಿ ಪ್ರವೇಶಕ್ಕೆ ಸಿದ್ಧನಾದನು. ಆ ಕೂಡಲೇ ದ್ವಿಜೇಶ್ವರನು ನಿಜ ರೂಪದಿಂದ ಪ್ರತ್ಯಕ್ಷನಾದನು ಮತ್ತು "ನಾನು ಕೇವಲ ಸತ್ವ ಪರೀಕ್ಷೆಗೈಯ ಬಂದಿದ್ದೆ. ನಿನ್ನ ಸತ್ವಕ್ಕೆ ನಾನು ಮೆಚ್ಚಿದ್ದೇನೆ. ನೀನು ಬೆದರಬೇಡ. ನಿನಗೆ ಸದ್ಗತಿ ಸಿದ್ಧ" ಎಂದು ಸಮಾಧಾನ ಮಾಡಿದನು. ಆ ರುದ್ರಶಿವ ಹೀಗಿದ್ದ:

**ಪಂಚಮುಖ ಮುಕ್ಕಣ್ಣ ಬಾಲೇಂದು ಧರನಾದ**
**ಪಂಚಬಾಣಾರಿ ಹಿಡಿದಿದ್ದನು ಪಿನಾಕವನು**
**ಗೊಂಚಲಾಗಿತ್ತವನ ಮಾರುದ್ದ ಕೆಂಜೆಡೆ ಮಹಾ**
**ಪ್ರತಾಪಾಗ್ನಿಯವನ।**
**ಚಂಚಲಿಸದಿರ್ಪ ನಡುವಗಲರ್ಕನಂತಿತ್ತು**
**ಕೊಂಚ ಬೆಳ್ಳಗೆ ಮೃಣಾಲದ ಹಾಗೆ ಮೈಯಿತ್ತು**
**ಪಂಚಾನನಾರಿ ಚರ್ಮವ ಹೊದೆದು ನಿಂತಿದ್ದ**
**ಗಂಗಾ ಪ್ರಸಿಕ್ತಶೀರ್ಷ॥**
**ನಾಗೇಂದ್ರಹಾರ, ಕಾಂಚ್ಯಂಗದ, ಕಿರೀಟಿ ವಿ–**
**ಶ್ವಾಗಾರ, ಶೂಲಾಸಿ ಖಟ್ವಾಂಗ ಚರ್ಮಮೃಗ,**

ನಾಗೇಂದ್ರ ಕೋಟಿಬಲ, ಭಯನಿವಾರಕ ಹಸ್ತ,
ಕೋಟಿ ಸೂರ್ಯಪ್ರಕಾಶ ।
ಜಾಗು ಜಾಗೆಂದಮರ ವೃಂದ ವಂದಿಸುತ್ತಿತ್ತು
ಹೂಗರೆದು ಹರ್ಷವೃಷ್ಟಿಯನು ಸುರಿಸುತ್ತಿತ್ತು
ಯೋಗೀಂದ್ರ ಭೋಗೀಂದ್ರ ವೇಷಮಂ ತಾಳಿ ಬರೆ
ಭಕ್ತವಾತ್ಸಲ್ಯದಿಂದ ॥

(ಭಾವಾನುವಾದ)

–೪೪–

# ಬ್ರಹ್ಮಹಂಸ ಯತಿನಾಥಾವತಾರ

ಅರ್ಬುದಾಚಲವೆಂಬ ಪರ್ವತದ ತಪ್ಪಲಿನಲ್ಲಿ ಆಹುಕನೆಂಬ ಭಿಲ್ಲರವನು ಮನೆ ಮಾಡಿಕೊಂಡಿದ್ದನು. ಆಹುಕೆ ಅವನ ಹೆಂಡತಿ. ಅವರು ಶಿವಭಕ್ತರು. ಅವರು ಬೇಟೆಯಿಂದ ಸಾಯಂಕಾಲ ಮನೆಗೆ ಬರುವಷ್ಟರಲ್ಲಿ ರುದ್ರನು ಯತಿರೂಪದಿಂದ ಅವರ ಮನೆಗೆ ಹೋದನು. ಅವನನ್ನವರು ಭಕ್ತಿಯಿಂದ ಪೂಜಿಸಿದ ಮೇಲೆ ಅವನು ತನಗೆ ರಾತ್ರಿಯಲ್ಲಿ ಉಳಿದುಕೊಳ್ಳಲು ಸ್ಥಳ ಬೇಕೆಂದು ಕೇಳಿದನು. ಆ ಬಡವರ ಮನೆಯಲ್ಲಿ ಇಬ್ಬರಿಗಲ್ಲದೆ ಮೂರನೆಯವರಿಗೆ ಜಾಗವಿರಲಿಲ್ಲ. ಆದ್ದರಿಂದ ಭಿಲ್ಲನನ್ನು (ಅವನು ಹೊರಗೆ ಮಲಗಿದ್ದುದರಿಂದ) ಹಿಂಸ್ರ ಜಂತುಗಳು ಬೆಳಗಾಗುವುದರೊಳಗೆ ತಿಂದುಕೊಂಡು ಹೋದವು.

ಭಿಲ್ಲಿಯು ಸಹಗಮನ ಮಾಡಲು ಹೇಳಿದಳು. ಯತಿಯು ಅದನ್ನು ಸಿದ್ಧಮಾಡಿದನು. ಅವಳು ಅದರಲ್ಲಿ ಹಾರುವಷ್ಟರಲ್ಲಿ ರುದ್ರಶಿವನು ಪ್ರತ್ಯಕ್ಷನಾಗಿ ವರವನ್ನು ಬೇಡು ಎಂದು ಅವಳಿಗೆ ಹೇಳಿದನು. ಅವಳು ದಿಗ್ಭ್ರಾಂತಳಾಗಿ ಸುಮ್ಮನಿರಲು ಶಿವ ಹೇಳಿದ–

"ನಾನು ಶಿವ. ನಿಮ್ಮ ಧರ್ಮಕ್ಕೆ ಮೆಚ್ಚಿದ್ದೇನೆ. ನೀವಿಬ್ಬರೂ ಮುಂದಿನ ಜನ್ಮದಲ್ಲಿ ಮಹಾ ಕೀರ್ತಿಶಾಲಿಗಳಾದ ನಳ–ದಮಯಂತಿಯರಾಗಿ ಹುಟ್ಟಿ ಜೀವನದ ಮಹಾಸುಖ–ಮಹಾದುಃಖಗಳನ್ನು ಪಡೆದು ಮರಣಾಂತದಲ್ಲಿ ಶಿವ ಸಾಯುಜ್ಯವನ್ನು ಹೊಂದುವಿರಿ" ಎಂದು ಹೇಳಿ ಅಂತರ್ಧಾನ ಹೊಂದಿದನು.

ತಾನು ಪರರಿಂದ ಬಯಸುವುದನ್ನು ಪರರಿಗೆ ದೊರಕುವಂತೆ ಮಾಡುವುದೇ ಜೀವನ ಧರ್ಮಯೋಗ. ಯತಿಗೆ ಬಂದ ಆಪತ್ಕಾಲ ದಂಪತಿಗಳಿಗೆ ಬಂದಿದ್ದರೆ ಯತಿಯೂ ಹೊರಗೆ ಮಲಗಿ ಆ ದಂಪತಿಗಳಿಗೆ ಒಳಗೆ ಮಲಗಲು ವ್ಯವಸ್ಥೆ ಮಾಡುತ್ತಿದ್ದನು. ಈ ಆರ್ಯ ಧರ್ಮ ಬೋಧವೇ ಶಿವನ ಯತಿನಾಥಾವತಾರದ ಉದ್ದೇಶ. Let live and then live ಪರರಿಗೆ ಬದುಕಗೊಟ್ಟು ಅನಂತರ ನೀನು ಬದುಕು ಎಂದು ಭಾರತರ್ಷಿಗಳು ಭಾರತ ವೀರರಿಗೆ ಹೇಳಿದ ಧರ್ಮ. ಜಗತ್ತಿನ ಇನ್ನಾವ ದೇಶದಲ್ಲೂ ಈ ಮಹಾಧರ್ಮವಿಲ್ಲ. ವೀರರಲ್ಲದ ಭಾರತೀಯರು ಈ ಧರ್ಮವನ್ನು ಹಿಡಿದರೆ ಪರದೇಶದ ಲೋಭಿಗಳ ಅಂತಃ ಪ್ರವೇಶ ಅಧಿಕವಾಗಿ

ಭಾರತವು ನರಕ ಶೋಷಣೆಗೀಡಾಗುವುದು. ಅವೀರರು ಅವಿಗಳಲ್ಲೂ ವೀರರಲ್ಲ. ವೀರರು ಮೋಸ ಹೋಗುವವರಾದರೆ ಅವರು ಅವಿವೀರರು (ಕುರಿ ಪರಾಕ್ರಮಿಗಳು.)

ಸಮರ್ಥಧರ್ಮವೀರನಲ್ಲದವನು, ವಿವೇಕ ವೀರನಲ್ಲದವನು, ಬುದ್ಧಿ ವೀರನಲ್ಲದವನು–ವೀರನೇ ಅಲ್ಲ. ಅವನದು ಯಕ್ಷಗಾನದ ವೀರ ವೇಷಧಾರಿಗಿಂತಲೂ ಕೀಳು ಮಟ್ಟದ ಹಾಸ್ಯಾಸ್ಪದ ವೀರತನ. ಆತ್ಮಸಾಮರ್ಥ್ಯ–ಬುದ್ಧಿ ಸಾಮರ್ಥ್ಯ–ಸಾಧನ ಸಾಮರ್ಥ್ಯಗಳಿಲ್ಲದ ವೀರಂಮನ್ಯರು= Good, but good for nothing and bad for themselves and to others- ನಿಷ್ಪ್ರಯೋಜಕ ಸಜ್ಜನರು ಮತ್ತು ತಮಗೂ ಇತರ ಸಜ್ಜನರಿಗೂ (ಯಾವುದಾದರೊಂದು ಸಂದರ್ಭದಲ್ಲಿ) ಹಾನಿಯನ್ನೇ ತಿಳಿಯದೆಯೇ ಮಾಡುವರು. ಆ ಹಾನಿ ತುಂಬಿ ಬಾರದಷ್ಟಾದರೂ ಆದೀತು. "True heroism is the brilliant triumph of the soul over the flesh=ನಿಜವಾದ (ಭಕ್ತಿ) ವೀರತ್ವವು ಭೌತಿಕದ ಮೇಲೆ ಆಧ್ಯಾತ್ಮಿಕ ಶಕ್ತಿ ಪಡೆದ ಜಯ" ಎಂಬ ಗಾದೆಯು ವೇದ. ಔಚಿತ್ಯವು ರಸದ ಆತ್ಮವಾಗಿರುವಂತೆ, ಆಚಾರ ನಿರ್ಣಾಯಕ ಧರ್ಮವು ಜೀವನದ ಸಾರ.

ಪುರಾಣವು ಅವತಾರಗಳನ್ನವಲಂಬಿಸಿರುವುದು ಕರ್ಮ ಸಿದ್ಧಾಂತದಂತಹ ಯಾಂತ್ರಿಕ ನಿಸರ್ಗನಿಯಮಗಳು ಕ್ರಮವಾಗಿ ಜೀವಿಯನ್ನು ಅನಂತ ನಿರಾಶೆಗಿಳಿಸ ಹೊರಟಾಗ ಅವನಲ್ಲಿ ಪ್ರತ್ಯಾಶೆಯು ಮೂಡುವಂತೆ ಮಾಡಲೆಂದೇ. ತ್ರಿಕರಣಪೂರ್ವಕವಾಗಿ (ತನ್ನಿಂದಾದ) ತಪ್ಪಿಗೆ ಪಶ್ಚಾತ್ತಾಪಪಟ್ಟು ಪಾಪವಿಮೋಚನೆ ಮಾಡೆಂದು ಬೇಡಿಕೊಳ್ಳಲು ಸಾಕಾರ ಸಂಕೇತವು ಸಾಮಾನ್ಯನಿಗೆ ಅಗತ್ಯ. ಆ ಆಕೃತಿ ಸಾವಯವವಾದರೂ ಸರಿಯೆ, ನಿರವಯವವಾದರೂ ಸರಿಯೆ! ದೇವರೆಂಬ ದಕಾರಾದಿ ಸಂಕೇತದ ಸತ್ಯತೆಯು ನಿತ್ಯವೂ ನಿರ್ವಿಕಲ್ಪವೂ ನಿರವಧಿಕ ಸಾಮರ್ಥ್ಯ ಸಂಪನ್ನವೂ ಸರ್ವಾದಿ ಕಾರಣವೂ ಆಗಿರುವುದೆಂಬ ನಂಬಿಕೆ ಪ್ರಾತಿಭೇಯವಾಗಿರುವುದರಿಂದ, ಹುಟ್ಟಾ ಇರುವುದರಿಂದ ಅದನ್ನು ಪ್ರತಿಭಟಿಸುವ ಭೌದ್ಧಿಕ ಸರ್ಕಸ್ಸು ಶಾಂತಿಮಾರಕವಾಗಿ ಪರಿಣಮಿಸುವುದು ಅನುಭವ ಸಿದ್ಧ. ಆದಿ ಕಾರಣವು ಬುದ್ಧ್ಯತೀತ ಆದರೆ ಬುದ್ಧ್ಯೂಹ್ಯ ಅಸ್ತಿತ್ವವುಳ್ಳದ್ದು. ಜ್ಞಾನಮಯ ಭಕ್ತಿ ಯಾ ಭಕ್ತಿಮಯ ಜ್ಞಾನ ಮೂಢನಂಬಿಗೆಯಲ್ಲ–ಜ್ಞಾನವು ವೈರಾಗ್ಯದಷ್ಟು ವಸ್ತುನಿಷ್ಠ ದೃಷ್ಟಿಯುಳ್ಳದ್ದಾದಾಗ ಮತ್ತು ಭಕ್ತಿಯು ಜಗತ್ಕುಟುಂಬಿಯ ಪ್ರೀತಿಯಷ್ಟು ವಿಸ್ತಾರವೂ ಪ್ರಾಮಾಣಿಕವೂ ಆದಾಗ!

–೪೫–

# ಕೃಷ್ಣದರ್ಶನ ಶಿವಾವತಾರ ಯಾ ಶಿವನ "ಕೃಷ್ಣಾವತಾರ"

ಮನುವಿನ ಮಗ ನಭಗ. ಅವನು ವಿದ್ಯಾಭ್ಯಾಸಕ್ಕೆ ಹೋದಾಗ ಅವನ ದಾಯಾದರಾದ ಇಕ್ಷ್ವಾಕುಗಳು ಪಿತ್ರಾರ್ಜಿತ ಆಸ್ತಿಯನ್ನು ಅವನ ಪಾಲಿಗೆ ಏನನ್ನೂ ಇಡದೆ ತಾವೇ ಹಂಚಿಕೊಂಡರು. ಅವನು ತಂದೆಗೆ ದೂರು ಕೊಟ್ಟಾಗ ಅದು ಅನ್ಯಾಯುವೆಂದು ಒಪ್ಪಿಕೊಂಡು, "ನೀನು ಅಂಗೀರಸ ಸತ್ರಕ್ಕೆ ಹೋಗಿ ವೈಶ್ವದೇವಸೂಕ್ತವೆರಡನ್ನು ಹೇಳಿ ಅವರ ಯಜ್ಞವನ್ನು ಪವಿತ್ರಗೊಳಿಸು. ಆಗ ಅವರು ನಿನಗೆ ಬೇಕಾದಷ್ಟು ಧನ ದಾನ ಮಾಡುವರು" ಎಂದು ಸಮಾಧಾನ ಮಾಡಿದನು. ಅವನು ಹಾಗೇ ಮಾಡಿದನು. ಅದರಿಂದ ಸತ್ರ ಮುಗಿಸಿ ಧನದಾನ ಮಾಡಿ ಆ ಅಂಗೀರಸರು ಸ್ವರ್ಗಕ್ಕೆ ತೆರಳಿದರು. ಆ ಕೂಡಲೇ ನೀಲ ಮೇಘಶ್ಯಾಮ ರೂಪದಿಂದ ರುದ್ರನು ಪ್ರತ್ಯಕ್ಷನಾದನು ಮತ್ತು "ಆ ಭಾಗ ನಿನ್ನದಲ್ಲ–ನನ್ನದು" ಎಂದನು. ಅವನು ಋಷಿದತ್ತ ಯಜ್ಞ ಶೇಷವಾದ ಆ ಭಾಗ ತನ್ನದೆಂದು ವಿನಯದಿಂದ ಹೇಳಿದನು. ಆಗ ಕೃಷ್ಣಾವತಾರಿ ಶಿವನು "ನಿನ್ನ ತಂದೆ ಹೇಳಿದರೆ ಒಪ್ಪುತ್ತೇನೆ" ಎಂದನು. ಮನುವು ಶ್ರಾದ್ಧ ದೇವನು. ರುದ್ರಭಾಗ ರುದ್ರನಿಗೆ ಯಜ್ಞದಲ್ಲಿ ಸಲ್ಲಬೇಕೆಂಬುದು ಅವನಿಗೆ ಗೊತ್ತು. ಆದ್ದರಿಂದ ಕೃಷ್ಣ ರೂಪದ ರುದ್ರನಲ್ಲಿ ಕ್ಷಮೆ ಬೇಡು ಎಂದು ಹೇಳಿದನು. ಆಗ ರುದ್ರನು, "ನೀನು ಹೇಳಿದ್ದೂ ಸತ್ಯ, ನಿನ್ನ ಅಪ್ಪ ಹೇಳಿದ್ದೂ ಸತ್ಯ. ನನ್ನ ಭಾಗವನ್ನೆಲ್ಲಾ ನಿನಗೀವೆನು. ಅಲ್ಲದೆ, ನಿನಗೆ ಮರಣಾಂತರ ಬ್ರಹ್ಮೈಕ್ಯ (ಶಿವೈಕ್ಯ) ವಾಗುವಂತೆ ಮಾಡುವೆನು" ಎಂದು ವರವನ್ನಿತ್ತು ವಿಷ್ಣು ಬ್ರಹ್ಮಾದಿ ದೇವತೆಗಳಿಂದ ಪೂಜಿತನಾಗಿ ಅಂತರ್ಹಿತನಾದನು.

**ನ್ಯಾಯ=ಸತ್ಯ=ಶಿವ!**

–೪೬–

# ಇಂದ್ರ ಗರ್ವಭಂಗ

ಶತರುದ್ರ ಸಂಹಿತೆಯಲ್ಲಿ ಬರುವ ಅವಧೂತೇಶ್ವರಾವತಾರದ ಕಥೆ ಇದು:

ಒಮ್ಮೆ ಶಕ್ರನು ಗುರು ಸಮೇತನಾಗಿ ಶಿವ (ರುದ್ರ) ದರ್ಶನಕ್ಕೆಂದು ಕೈಲಾಸಕ್ಕೆ ತೆರಳಿದನು. ಅವರ ಭಾವ ಪರೀಕ್ಷೆಗಾಗಿ ರುದ್ರನು ಅವಧೂತಾವತಾರ ತಾಳಿ ಅವರಿಗೆ ಹಾದಿಯಲ್ಲಿಯೇ ಎದುರಾದನು. ಆಗ ಅಧಿಕಾರ ದರ್ಪದಿಂದ ಇಂದ್ರನು ಅವಧೂತನನ್ನು ಕುರಿತು, "ದಿಗಂಬರಾಕಾರದ ನೀನು ಯಾರು? ಎಲ್ಲಿಂದ ಬಂದೆ? ನಿನ್ನ ಹೆಸರೇನು? ಶಂಭು ಸ್ವಸ್ಥಾನದಲ್ಲಿದ್ದಾನೊ ಮತ್ತೆಲ್ಲಿಗಾದರೂ ಹೋಗಿದ್ದಾನೋ? ನಾನವನನ್ನು ನೋಡಬೇಕಾಗಿದೆ" ಎಂದು ಪದೇ ಪದೇ ಕೇಳಿದರೂ ಅವಧೂತನು ಉತ್ತರ ಕೊಡದಿರಲು ಸಿಟ್ಟಿನಿಂದ ವಜ್ರಾಯುಧವನ್ನೆತ್ತಿ ಅವನನ್ನು ಇಂದ್ರನು ಹೊಡೆಯಲೆದ್ದನು. ಆ ನಿಮಿಷದಲ್ಲಿ ಶಂಕರ ದಿಗಂಬರ ಆ ವಜ್ರ ಬೀಳದಂತೆ ಅವನ ತೋಳನ್ನು ಸ್ತಂಭನಗೊಳಿಸಿ ಬಿಟ್ಟನು! ಸ್ತಬ್ಧ ಬಾಹುವಾದ ಪುರಂದರ ಏನನ್ನೂ ಮಾಡಲಾರದೆ ಹೊಟ್ಟೆಯೊಳಗೇ ಉರಿದೆದ್ದನು. ದಿಗಂಬರನು ಜಗಜ್ಜಾಲ ಕಾಲಾನಲನಂತೆ ತಿರುಗಿ ಮತ್ತಷ್ಟು ಪ್ರಜ್ವಲಿಸಿದನು. ಆಗ ಗುಟ್ಟನ್ನು ತಿಳಿದ ಗುರುವು (ಬೃಹಸ್ಪತಿಯು) ಕ್ಷಮಿಸೆಂದು ಶಿವನ ಕಾಲಿಗೆ ಬಿದ್ದನು; ಇಂದ್ರನೂ ಕಾಲಿಗೆ ಬಿದ್ದ! ಆಗ ಭಾಲ ನೇತ್ರದಿಂದ ಉರಿದೆದ್ದ ಅಗ್ನಿತೇಜವನ್ನು ರುದ್ರನು ಲವಣ ಸಮುದ್ರಕ್ಕೆ ಹಾಕಿ ಗುರು–ಶಕ್ರರನ್ನು ಉಳಿಸಿದನು. ಲವಣಾಗ್ನಿಗಿಳಿದ ರುದ್ರ ತೇಜಸ್ಸು ಸಿಂಧು ಪುತ್ರನೆಂಬ ಬಾಲಕನಾಗಿ ಜಲಂಧರನೆಂಬ ಬಿರುದಿಂದ ಸುರೇಶ್ವರ ಪದವಿಗೇರಿದನು. ಅವಧೂತ ಶಿವನಾಗ ಮಾಯವಾಗಿ ಹೋದನು.

"POWER CORRUPTS ಪ್ರಭುತ್ವಾಧಿಕಾರವು ಮನುಷ್ಯನನ್ನು ಮದಮತ್ತನನ್ನಾಗಿ ಮಾಡಿ ದುರಾಚಾರಕ್ಕೆ ತಳ್ಳುತ್ತದೆ" ಎಂಬುದಕ್ಕೆ ಈ ಕಥೆ ಸರಿಯಾದ ದೃಷ್ಟಾಂತ. ಷಡ್ವೈರಿಗಳಲ್ಲಿ ಮದವು ಮಹಾರಾಜ. ಸೊಕ್ಕಿದ್ದವನು ಯಾಣಕ್ಕೆ ಹೋಗಬೇಕಂತೆ, ರೊಕ್ಕಿದ್ದವನು ಗೋಕರ್ಣಕ್ಕೆ ಹೋಗಬೇಕಂತೆ ಉತ್ತರ ಕನ್ನಡ ಜಿಲ್ಲೆಯ ಗಾದೆಯಿದು. ಯಾಣ (ಕಲ್ಯಾಣ) ಬತ್ತಲೇಶ್ವರ (ದಿಗಂಬರ) ಕವಿಯಿದ್ದ ಭೈರವೇಶ್ವರ ಗುಹಾಂತರ್ದೇವಾಲಯವಾಗಿರುವುದು ಈ ಕಥೆಗೆ ಕಾಕತಾಲೀಯ ಸಂಬಂಧವನ್ನು ತರುತ್ತದೆ. ಭೈರವ ಮೂರ್ತಿಯು ನಿರಾಕಾರ, ಶೂನ್ಯ; ಸುಣ್ಣದ ಕಲ್ಲಿನ, ನೂರೈವತ್ತು

ಅಡಿ ಎತ್ತರದ, ಕೋಡುಗಳ್ಳಿಯಂಥ ಕಲ್ಲುಗೈಗಳನ್ನುಳ್ಳ ಹೆಗ್ಗವಿಯೇ ಗುಹೇಶ್ವರ, ಭೈರವೇಶ್ವರ; ಲಿಂಗಾತೀತನಾಗಿ ಅರ್ಚಕ ಪ್ರತಿ ನಿತ್ಯ ಗುಹೆಯ ಒಳಗೋಡೆಯ ಮೇಲೆ ಗಂಧದಿಂದ ಬರೆದ ಚಿತ್ರವೇ ಭೈರವ. ಹತ್ತಿರದಲ್ಲಿರುವ ಅತಿ ಚಿಕ್ಕ ಪೀಠಸ್ಥ ಲಿಂಗಕ್ಕೂ (ಅದನ್ನು ಆಮೇಲೆ ಯಾರೋ ತಂದಿಟ್ಟಂತಿದೆ!) ಭೈರವೇಶ್ವರನ ಅಭಾವಾಕಾರಕ್ಕೂ ಯಾವ ಸಂಬಂಧವೂ ಇಲ್ಲ! ಅಲ್ಲಿಗೆ ಹೋದವರು ಮಾರ್ಗ ಶ್ರಮದಿಂದ ಭೀಮ ಹೋಗಿ ಸುದಾಮ ದೇಹಿಗಳಾಗುತ್ತಾರೆ, ಶಿವರಾತ್ರಿಯ ದಿನ!

–೪೭–

# ದೇವರ ನ್ಯಾಯದ ಮೂಲ ಸಿದ್ಧಾಂತ

ವಿದರ್ಭ ದೇಶದಲ್ಲಿದ್ದ ಧರ್ಮಿಷ್ಠನಾದ ಸತ್ಯರಥನಿಗೂ ಶಾಲ್ವರಿಗೂ ಒಮ್ಮೆ ಮಹಾಯುದ್ಧವೊಂದು ನಡೆಯಿತು. ಅದರಲ್ಲಿ ಸತ್ಯರಥನು ಸತ್ತು ಹೋದನು. ಊರು ಬಿಟ್ಟು ಹೋದ ಅವನ ರಾಣಿಯು ದಿವ್ಯ ತೇಜೋಮಯನಾದ ಬತ್ತೀಸ ಲಕ್ಷಣದ ರಾಜಪುತ್ರನನ್ನು ಹಡೆದಳು. ಬಾಯಾರಿದ ಅವಳು ಕೆರೆಯೊಂದರಲ್ಲಿಳಿದಾಗ ಮೊಸಳೆ ಅವಳನ್ನು ತಿಂದು ಹಾಕಿತು. ಇದೆಲ್ಲಾ "ದೈವಯೋಗ." ಒಬ್ಬ ಭಿಕ್ಷುಕಿ ಅಳುತ್ತಿದ್ದ ಆ ಮಗುವನ್ನು ಸಾಕಲು ತೆಗೆದುಕೊಂಡಳು. ಅವಳಿಗೆ ಆ ಆಕಸ್ಮಿಕ ಘಟನೆಗೆ ಕಾರಣವೇ ಗೊತ್ತಾಗಲಿಲ್ಲ. ಆಗ ಮಹೇಶ್ವರನು ಭಿಕ್ಷು ರೂಪದಿಂದ (ಭಿಕ್ಷುಕನ ಅಥವಾ ಸಂನ್ಯಾಸಿಯ ರೂಪದಿಂದ) ಅವಳಿದ್ದಲ್ಲಿಗೆ ಹೋದನು. ಅವನು ಅವಳಿಗೆ "ಕಾರಣವನ್ನು" ಕೃಪೆಯಿಂದ ಹೇಳಿದನು.

'ಈ ಹುಡುಗನು ಸತ್ಯರಥನ ಮಗನು. ಸತ್ಯರಥ ಶಿವಭಕ್ತ. ಸ್ವಧರ್ಮಕ್ಕೆ ಸರಿಯಾಗಿ ರಾಜ್ಯಭಾರ ಮಾಡುತ್ತಿದ್ದಾಗ ಸೊಕ್ಕಿನಿಂದ ಎದುರುಬಿದ್ದು ಶಾಲ್ವ ರಾಜನು ಅವನನ್ನೂ ಅವನ ಸೈನ್ಯವನ್ನೂ ಸೋಲಿಸಿದನು. ಅವನು ಸತ್ತ. ಅವನ ತಾಯಿ ಮೊಸಳೆಯ ಪಾಲಾದಳು. ಏಕೆ?'

"ಈ ಮಗುವಿನ ತಂದೆ ಸತ್ಯರಥನು ಪೂರ್ವಜನ್ಮದಲ್ಲಿ ಪಾಂಡ್ಯ ರಾಜನಾಗಿದ್ದನು. ಅವನು ದಿನವೂ ಶಿವಪೂಜೆ ಮಾಡುತ್ತಿದ್ದನು. ಆಗ ಒಂದು ಪ್ರದೋಷ ಕಾಲದಲ್ಲಿ ಅವನು ಪೂಜೆ ಮಾಡುತ್ತಿದ್ದಾಗ ಅಕಸ್ಮಾತ್ತಾಗಿ ಭಯಂಕರವಾದ ಒಂದು ಶಬ್ದ ಕೇಳಿಸಿತು. ಅದು ಶತ್ರುಗಳ ಆರ್ಭಟವೆಂದು ತಿಳಿದು ಅವನು ಶಿವ ಪೂಜೆಯನ್ನು ಮುಗಿಸದೆ ಅಲ್ಲಿಂದೆದ್ದು ಧಾವಿಸಿದನು. ಅಷ್ಟರೊಳಗೇ ಅವನ ಬಲಿಷ್ಠ ಅಮಾತ್ಯನು ಸೈನ್ಯದೊಡನೆ ಆ ಸದ್ದು ಬಂದ ದಿಕ್ಕಿನತ್ತ ಹೊರಟು ಬಿಟ್ಟಿದ್ದನು. ಅವನೇ ತನ್ನ ಶತ್ರುವೆಂದು ಅವಿಚಾರೋದ್ವೇಗದಿಂದ ಆ ತನ್ನ ಅಮಾತ್ಯನ ಶಿರಚ್ಛೇದವನ್ನು ಪಾಂಡ್ಯರಾಜ ಮಾಡಿದನು; ಮನೆಗೆ ಬಂದು ಪೂಜೆ ಮುಗಿಸಿದೆ ಉಂಡು ಆರಾಮವಾಗಿ ನಿದ್ರಿಸಿದನು. ಅದರ ಫಲವಾಗಿ ಈ ಜನ್ಮದಲ್ಲಿ ಸತ್ಯರಥನಾಗಿ ವಿದರ್ಭೇಶತ್ವ ಪಡೆದರೂ ಶತ್ರುಗಳಿಂದ ಸಾಯಬೇಕಾಯಿತು. ಅವನ ಮಗನೆಂದರೆ ನಾನೇ ಮದಂಶಾವತಾರ. ಸತ್ಯರಥನ ಹೆಂಡತಿ ಪೂರ್ವಜನ್ಮದಲ್ಲಿ ಸವತಿಯನ್ನು ಗುಪ್ತವಾಗಿ ಅರಮನೆಯ ಹೊರಗಿಟ್ಟಿದ್ದಳು. ಆ ಪಾಪಕ್ಕಾಗಿ ಅವಳು ಮೊಸಳೆಯ ತುತ್ತಾದಳು. ನಿನ್ನ ಸ್ವಂತ ಮಗನು (ಈಗ ಸಿಕ್ಕಿದ

ಸತ್ಯರಥ ಪುತ್ರನಲ್ಲ) ದಾನ ಹಿಡಿದು ಬ್ರಾಹ್ಮಣ್ಯ ನಡೆಸುತ್ತಿದ್ದನಲ್ಲದೆ. ಹಿಂದಿನ ಜನ್ಮದಲ್ಲಿ ಎಂದೂ ಅವನು ಯಜ್ಞ (=ದೇವತಾ ಪ್ರೀತ್ಯರ್ಥೆ ಕರ್ತವ್ಯ ಬುದ್ಧ್ಯಾಲೋಕೋಪಕಾರಾಯ ಅಹಿಂಸಾಮಯ ಅಗ್ನ್ಯಾಹುತಿ ಪೂರ್ವಕಂಕರಣೀಯಂ ದಾನಾದಿಭಿಃ ಗುಣವಿದ್ಯಾ ಯೋಗ್ಯತಾ ಸಂಪನ್ನಾನಾಂ ದೇಶಸ್ಯ ಸಾಂಸ್ಕೃತಿಕ ಧುರೀಣಾನಾತದನುಯಾಯಿನಾಂಚ ಸಂತೋಷಣಂ–ಲೇ) ಮುಂತಾದ ಯಾವ ಸತ್ಕಾರ್ಯವನ್ನೂ ಮಾಡಲಿಲ್ಲ. ಯಜ್ಞ=ಶಿವಪೂಜೆ. ಅದನ್ನವನಾಗ ಮಾಡಲಿಲ್ಲ. ಆದ್ದರಿಂದ ಅವನೀಗ ದರಿದ್ರನಾಗಿ ಹುಟ್ಟಿದ್ದಾನೆ. ಇವನಿಗೆ ಉಪನಯನ ಮಾಡಿ ಶಿವಪೂಜೆ ಹೇಳಿಕೊಡು. ಅದರಿಂದ ಅವನ ದಾರಿದ್ರ್ಯ ಹೊರಟು ಹೋಗುವುದು." ಎಂದು ಹೇಳಿ ಸನ್ಯಾಸಿ ಶಿವ ಮಾಯವಾದನು.

"Nothing is lost when a candle burns ಮೇಣದ ಬತ್ತಿ ಉರಿಯುವಾಗ ಯಾವುದೂ ಕಳೆಯದು" ಎಂಬ ವೈಜ್ಞಾನಿಕ ಗಾದೆಯು ನಿಜವಾದರೆ ಸಾವೆಂಬುದು ಕೇವಲ ರೂಪಪರಾವರ್ತನ (Change of form): ಮನೋ ಬುಧ್ಯಹಂಕಾರ ಚಿತ್ತಗಳ ರೂಪಾಂತರೀಕರಣ (ದೇಹದೊಡನೆಯೇ) ಅವುಗಳ Co-ordinatorಸಂಪರ್ಕವನ್ನು ಸಂಯೋಜಿಸುವ ಜೀವಾಹಂಕಾರವು ಹಳೆಯ ಗಂಟನ್ನು ಹೊತ್ತುಕೊಂಡೇ ಹೊಸ ಕಾಯಧಾರಣಮಾಡಬೇಕು. ಇದು ಅಪ್ರತಿಹತ ವಿಜ್ಞಾನತರ್ಕ. ಇದರಿಂದ ಮುಕ್ತಿಯ ಬಾಗಿಲಿಗೆ ಸಾರ್ವಕಾಲಿಕ ಬೀಗ ಮುದ್ರೆ ಬೀಳುತ್ತದೆ. ಆದರೆ ದೇವರು ಮಾಸ್ತರನು. ಶಿಕ್ಷೆಯ ಮೂಲಕ ಶಿಕ್ಷಣವಿತ್ತು ಅಹಮ್ಮಯ ಜೀವಾತ್ಮದ ಅಹಂತ್ವದ ಪಾಪವನ್ನು ಪರಿಹರಿಸಿ (ಉಳಿದೆಲ್ಲ ಪಾಪಗಳೂ ಅಹಂತ್ವ ಜನ್ಯ) ಕ್ರಮ ಮುಕ್ತಿಯನ್ನು (Gradual grant of perfect liberation) ದಯಪಾಲಿಸುತ್ತಾನೆ. ಅಹಂತ್ವದ ಅನಾದಿ ಮೂಲ ಪಾಪದ ಉತ್ಪತ್ತಿಯು ಅನಿರ್ವಚನೀಯ. ಈ ಉತ್ತರವು ಬರ್ಟ್ರೆಂಡ್ ರಸೆಲ್ ಹೇಳಿದಂತೆ, "ಉತ್ತರವಿಲ್ಲದ ಪ್ರಶ್ನೆ." ಎಂಬ ನಿರ್ಣಯಾತ್ಮಕ ಉತ್ತರ! ಪರಮಾತ್ಮ ಲೀಲಾದಿಗಳಾವುವೂ ಸಮರ್ಪಕ ಉತ್ತರಗಳಲ್ಲ. ಆದುದರಿಂದಲೇ ದೇವತಾ ಶಾಸ್ತ್ರರೀತ್ಯಾ, ಭಕ್ತಿಯೋಗರೀತ್ಯಾ ಮತ್ತು ಉಪಾಸನಾಖಂಡರೀತ್ಯಾ ಆತ್ಮ ನಿವೇದನವೊಂದೇ ಭಕ್ತನ ಕರ್ತವ್ಯ ಪರಾಕಾಷ್ಠೆ. ಇದೇ ಸರ್ವಸಮರ್ಪಣ ಯೋಗ. ಈ ನಿರ್ವಿಚಾರ ಸಮಾಧಿಯು, ದೇವ (ಪಾದ) ತಾದಾತ್ಮ್ಯವು ಅನುಸ್ಮರಣ ಜನ್ಯವಾದುದು; ಅನುಸ್ಮರಣದಿಂದ ಸಾಕಾರಾತ್ಮ ದರ್ಶನ, ಭಕ್ತಿಕೈವಲ್ಯ, ಪ್ರಪತ್ತಿ ಪರಾಕಾಷ್ಠೆ! ಇಲ್ಲಿ ನ್ಯಾಯಾನ್ಯಾಯ ವಿವೇಕದ ಪ್ರಶ್ನೆಗೆ ಅವಕಾಶವಿಲ್ಲದಾಗುವುದರಿಂದ ದೇವರೆನ್ನಿಸಿಕೊಂಡ ತತ್ವವು ಮಾಡಿದ್ದೆಲ್ಲಾ ಅದರ ಪ್ರಾಮಾಣಿಕ ಆರಾಧಕನಿಗೆ ನ್ಯಾಯವೆಂದೇ ಅನುಭವಕ್ಕೆ ಬಂದಿರುತ್ತದೆ. ಈ ನಿಯಮಕ್ಕೆ ಹೊರತಾದವನು ಅಪೂರ್ಣನಾದ ಭಕ್ತ. ಅಂಥವನು "ವಿನಾಶಾಯ ಚ ದುಷ್ಕೃತಾಂ" ಎಂಬ ದಿವ್ಯೋದ್ದೇಶಕ್ಕೆ ಪಾತ್ರನಾಗುವನು. "ನಮೇ ಭಕ್ತಃ ಪ್ರಣಶ್ಯತಿ" ಎಂದಾಗ "ಅಭಕ್ತೋ ಮೇ ಪ್ರಣಶ್ಯತಿ" ಆಗುವುದು ಸಹಜ ನಿಗಮನೀಯ (ಗೀತೆಯನ್ನು ನೋಡಿರಿ).

"ಕಂಡು ಮಾಡಿದರೂ ಪಾಪ, ಕಾಣದೆ ಮಾಡಿದರೂ ಪಾಪ; ಬೆಂಕಿಯನ್ನು ಕಂಡು ತುಳಿದರೂ ಸುಡುವುದು, ಕಾಣದೆ ತುಳಿದರೂ ಸುಡುವುದು" ಎಂಬುದು ಸತ್ಯರಥನ ಕಥೆ ಕಲಿಸುವ ಪಾಠ. ಜೊತೆಗೆ ಪಶ್ಚಾತ್ತಾಪ ಮತ್ತು ದೇವಕ್ಷಮಾಯಾಚನೆ, ತಪ್ಪು ಮಾಡಿದ ಭಕ್ತನು ಕಲಿಯಬೇಕಾದ ಎರಡನೆಯ ಪಾಠ. "ಕಾಣದೆ (ತಿಳಿಯದಿರುವಾಗ) ಮಾಡಿದ ತಪ್ಪು ದಂಡನೀಯವೇ?" ಎಂಬುದು ಕಾಯಿದೆಯ ಪ್ರಶ್ನೆಯು. ಜ್ಞಾನಾರ್ಜನೆ ಮಾಡದಿರುವುದು ತಪ್ಪು. ಜ್ಞಾನವಿಲ್ಲಿ ಸರಿ ತಪ್ಪುಗಳ ವಿವೇಕ. ಆ ಜ್ಞಾನಾರ್ಜನೆಗೆ ಅವಕಾಶ ಮಾಡಿಕೊಳ್ಳದಿರುವುದು ಅಥವಾ ಮಾಡಿಸಿಕೊಳ್ಳದಿರುವುದು ತಪ್ಪು. ಅವಕಾಶವಿದ್ದಾಗಲೂ ಸಾಂದರ್ಭಿಕ ನ್ಯಾಯವನ್ನು ನಿರ್ಧರಿಸದೆ ಕಾರ್ಯ ಮಾಡುವುದು ತಪ್ಪು. ಆದರೆ ಕಾಳಿದಾಸ ಹೇಳಿದಂತೆ, ಶಕ್ತರು ಅಶಕ್ತರನ್ನು (ತಪ್ಪೊಪ್ಪಿಕೊಂಡಾಗ) ಕ್ಷಮಿಸುವುದು ಧರ್ಮ; ಕ್ಷಮೆಯು ಆಂಶಿಕವೂ ಆಗಬಹುದು. ಪೂರ್ಣವೂ ಆಗಬಹುದು. ಅದು ಶಕ್ತನು ತಪ್ಪಿತಸ್ಥನ ಪಾತ್ರ ಯೋಗ್ಯತೆಯನ್ನು ತಿಳಿದುಕೊಂಡ ಜ್ಞಾನದ ಆಧಾರವನ್ನುಳ್ಳದ್ದಾಗಿರುತ್ತದೆ. ದೇವರು ಸರ್ವ ಶಕ್ತ, ಸರ್ವಜ್ಞ, ಆದ್ದರಿಂದ ಅವನು ನ್ಯಾಯ ಪರಿಮಾಣದ ಕ್ಷಮೆಯನ್ನೇ ಕೊಡುತ್ತಾನೆ ಎಂಬುದು ತಾತ್ಪರ್ಯ. ಅದರಿಂದಲೇ ಆ ಬಡ ಬ್ರಾಹ್ಮಣೆ ಶಿವ (ಭಿಕ್ಷು) ಕೊಟ್ಟ ವಿವರಣೆಯನ್ನು ಒಪ್ಪಿ ಸಮಾಧಾನ ಹೊಂದುತ್ತಾಳೆ.

–೪೮–

# ಶಿವನ ಸುರೇಶ್ವರಾವತಾರ

ಹಿಂದೆ ವ್ಯಾಘ್ರಪಾದನಿಗೆ ಉಪಮನ್ಯುವೆಂಬ ಮಗನಿದ್ದನು. ಆ ಮುನಿಪುತ್ರನು ಶಿಶುವಾಗಿದ್ದಾಗ ತಾಯಿಯೊಡನೆ ಸೋದರ ಮಾವನ ಮನೆಯಲ್ಲಿದ್ದನು. ದುರ್ದೈವದಿಂದ ವ್ಯಾಘ್ರಪಾದಿ ಉಪಮನ್ಯು ಬಡವನಾಗಿದ್ದನು. ಮಾವನ ಮನೆಯಲ್ಲಿದ್ದಾಗ ಹಾಲು ಕುಡಿದಿದ್ದ ಉಪಮನ್ಯು ಮನೆಗೆ ಬಂದಾಗ ತನ್ನ ತಾಯಿಯ ಹತ್ತಿರ ಹಾಲು ಕೊಡೆಂದು ಬೇಡಿದನು. ಅವಳು ಉಪಾಯವಿಲ್ಲದೆ ಹಿಟ್ಟು ಕದಡಿ ಹಾಲೆಂದು ಅವನಿಗೆ ಕುಡಿಸಿದಳು. ಅವನದು ಹಾಲಲ್ಲ ಎಂದು ಅತ್ತನು. ಆಗ ಮಗನ ಕಣ್ಣೀರನ್ನು ಸೆರಗಿನಿಂದ ಒರಸಿ "ಬಡವರಾದ ನಮ್ಮ ಆಶ್ರಮದಲ್ಲಿ ಆಕಳ ಹಾಲಿಲ್ಲ. ಶಿವಕೃಪೆ ದೊರೆತರೆ ಇಲ್ಲಿ ಹಾಲು ಸಿಕ್ಕೀತು" ಎಂದಳು. "ಹಾಗಾದರೆ ನಾನು ಶಂಭುವಿನ ತಪಸ್ಸನ್ನು ಮಾಡುವೆನು" ಎಂದು ಹೇಳಿ ಹೊರಟು ಹೋದನು.

ಹಿಮಾಲಯಕ್ಕೆ ಹೋದ ಉಪಮನ್ಯುವು ತಿನ್ನುತ್ತಿದ್ದದ್ದು ಗಾಳಿಯನ್ನು. ಎಂಟು ಇಟ್ಟಿಗೆಗಳ ಗೂಡು ಮಾಡಿ ಅದರಲ್ಲಿ ಮಣ್ಣಿನಿಂದ ಲಿಂಗವನ್ನು ಮಾಡಿ ಅವನು ಧ್ಯಾನ ತತ್ಪರನಾದನು; ಪಂಚಾಕ್ಷರ ಮಂತ್ರವನ್ನು ಜಪಿಸಿದನು. ಅವನ ತಪಃ ಪ್ರಭಾವವು ದೇವಲೋಕಕ್ಕೆ ಹಬ್ಬಿತು. ಅವನನ್ನು ಪರೀಕ್ಷಿಸಲು ರುದ್ರ ಶಿವನು ಇಂದ್ರಾವತಾರ ತಾಳಿ ಪ್ರತ್ಯಕ್ಷನಾದನು. ಅವನ ಪರಿವಾರವೆಲ್ಲಾ ಇಂದ್ರ ಪರಿವಾರವಾಗಿ ಮಾರ್ಪಟ್ಟಿತು. ಆಗ "ನೀನು ಕೇಳಿದ ವರವನ್ನು ಕೊಡುವೆನು" ಎಂದ ಇಂದ್ರಾವತಾರಿ ಶಿವನು ನುಡಿದನು. ಆಗ ಆ ಬಾಲಕನು "ನನಗೆ ಶಿವಭಕ್ತಿಯನ್ನು ನೀಡು" ಎಂದು ಪ್ರಾರ್ಥಿಸಿದನು. ಅದಕ್ಕೆ ಉತ್ತರವಾಗಿ ಕೃತಕೇಂದ್ರನು–"ನಾನು ಇಂದ್ರ, ಶಿವನಲ್ಲ. ನನ್ನನ್ನು ಬೇಡು, ಸುರರೊಡೆಯನಾದ ನಾನು ನಿನಗೆ ಬೇಕಾದುದೆಲ್ಲವನ್ನೂ ಕೊಡುವೆನು. ನನ್ನ ಭಕ್ತನಾಗು. ರುದ್ರನು ನಿರ್ಗುಣನು; ಅವನನ್ನು ಬಿಡು. ಅವನಿಂದೇನೂ ಆಗದು" ಎಂದನು. ಅದಕ್ಕೆ ಉಪಮನ್ಯುವು, "ನೀನು ಶಿವ ನಿಂದೆ ಮಾಡಿದೆ. ನಿನಗೆ ದೇವ ದೇವನಾದ ಶಿವ ಯಾರೆಂಬುದು ಗೊತ್ತಿಲ್ಲ. ಅವನು ಬ್ರಹ್ಮ, ವಿಷ್ಣು, ಮಹೇಶ್ವರ ಮತ್ತು ಪ್ರಕೃತಿ ದೇವಿಯರ ತಂದೆ; ಅವರೆಲ್ಲರಿಗಿಂತ ಹೆಚ್ಚಿನವನು. ದೇವ ದೇವನು ನೀನಲ್ಲ, ಅವನು. ಸತ್, ಅಸತ್, ವ್ಯಕ್ತ ಮತ್ತು ಅವ್ಯಕ್ತಗಳೆಲ್ಲಾ ಅವನೇ. ಅವನೇ ನಿತ್ಯವೂ ಏಕ ಮತ್ತು ಅನೇಕ. ಅವನು ಕಾರ್ಯಕಾರಣ ಸೂತ್ರಾತೀತನು. (ಗೀತೋಕ್ತ) ಸಾಂಖ್ಯ ಯೋಗಾರ್ಥವನ್ನು

ಹೊಳೆಯಿಸುವವನು. ತತ್ವಜ್ಞರು ತದ್ಗತರು. ಆದ್ದರಿಂದ ನಾನು ಶಿವಭಕ್ತಿಯನ್ನು ಬೇಡಿದ್ದೇನೆ. ನಾನು, ಬ್ರಹ್ಮ-ವಿಷ್ಣು-ಇಂದ್ರಾದಿಗಳೆಲ್ಲರೂ ಶಿವನ ಗುಣ ಸ್ವರೂಪಿಗಳು ಮಾತ್ರರಾದುದರಿಂದ ಅವರ ಮೇಲಿನ ಭಕ್ತಿಯನ್ನು ಬೇಡಲಿಲ್ಲ. ಇಂದ್ರನಾದ ನೀನಿದನ್ನು ತಿಳಿದಿಲ್ಲವೇ? ಶಿವನಿಂದೆ ಕೇಳಿದರೆ ದೇಹತ್ಯಾಗ ಮಾಡಬೇಕೆಂದಿದೆ. ನನ್ನ ಕ್ಷೀರಾಪೇಕ್ಷೆ ಈಗ ಅಲ್ಲಿರಲಿ. ನಿನ್ನನ್ನು ಮೊದಲು ಶಿವಾಸ್ತ್ರದಿಂದ ಕೊಂದು ಅನಂತರ ದೇಹತ್ಯಾಗ ಮಾಡಿ ಶಿವನನ್ನು ಸೇರುವೆನು" ಎಂದು ಹೇಳಿ ಇಂದ್ರನಿಗೆ ಶಿವಾಸ್ತ್ರವನ್ನು ಬಿಡಲು ಉದ್ಯುಕ್ತನಾದನು; ಮತ್ತು ಆತ್ಮ ಬಲಿದಾನಕ್ಕಾಗಿ ಚಿತೆಯನ್ನು ಸಿದ್ಧಗೊಳಿಸಿದನು. ಆ ಕೂಡಲೇ ಶಿವನು ಪ್ರತ್ಯಕ್ಷನಾಗಿ ಉಪಮನ್ಯುವನ್ನು ತಡೆದುದಲ್ಲದೆ, ನಂದಿಯು ಆ ಮುನಿಕುಮಾರ ಬಿಟ್ಟ ಅಘೋರಾಸ್ತ್ರವನ್ನು ಶಮನಗೊಳಿಸಿದನು; ಮತ್ತು ಅವನಿಗೆ ಶಿವನು ಅಜರಾಮರತ್ವವನ್ನು ದಯಪಾಲಿಸಿ, ಅವನ ಆಶ್ರಮಕ್ಕೆ, ಸಿದ್ಧ ಸಂಕಲ್ಪನನ್ನಾಗಿ ಮಾಡಿ, ಕಳುಹಿಸಿಕೊಟ್ಟನು. ಅವನ ತಾಯಿ ಅದನ್ನೆಲ್ಲಾ ಕೇಳಿ ಬಹಳ ಸಂತೋಷಪಟ್ಟಳು.

"ಭಕ್ತ ಕೇಳತಕ್ಕದ್ದು ದೇವಶ್ರದ್ಧೆ, ದೇವಭಕ್ತಿ, ದೇವಸಾನ್ನಿಧ್ಯ ಮತ್ತು ದೇವಾನುಗ್ರಹ; ಇತರ ಎಲ್ಲ ಬೇಡಿಕೆಗಳೂ ಕೆಳಮಟ್ಟದವು" ಎಂಬುದು ಸಾಕಾರ ಸಾಕ್ಷಾತ್ಕಾರ ಭಕ್ತಿಯೋಗದ ಅಪ್ರತಿಹತ ವ್ಯಾಖ್ಯೆ ಎಂಬುದು ಉಪಮನ್ಯೂಪಾಖ್ಯಾನದಿಂದ ತಿಳಿದು ಬರುತ್ತದೆ. ಇದು ಸರ್ವೋಪಾಸನ ಸಾಧಾರಣ.

–೪೯–

# ರುದ್ರನ ಜಟಿಲಾವತಾರ

ಶಿವಾವಮಾನವನ್ನು ಸಹಿಸದ ದಾಕ್ಷಾಯಣಿ ದಕ್ಷಯಜ್ಞ ಕುಂಡದಲ್ಲಿ ಬಿದ್ದು ದೇಹತ್ಯಾಗ ಮಾಡಿದ್ದು ಸುಪ್ರಸಿದ್ಧ. ಅನಂತರ ಅವಳು ಹಿಮವದ್ದೇವತೆಯ ಮತ್ತು ತತ್ಪತ್ನಿಯಾದ ಮೇನೆಯರಿಗೆ ಮಗಳಾಗಿ ಹುಟ್ಟಿ ರುದ್ರನೇ ಪತಿಯಾಗಬೇಕೆಂದು ಘೋರ ತಪಸ್ಸನ್ನು ಮಾಡಿದಳು. ಆ ತಪಃ ಪರೀಕ್ಷೆಗೆ ಶಿವನು ಸಪ್ತರ್ಷಿಗಳನ್ನು ಕಳುಹಿದನು. ಅವರು ಸೋತು ತಮ್ಮ ಸೋಲಿನ ವರದಿಯನ್ನು ಶಿವನಿಗೊಪ್ಪಿಸಿದರು. ಆಗ ಸ್ವತಃ ಶಿವನು ವೃದ್ಧ, ಜಟಾಧರ, ಬ್ರಹ್ಮಚಾರಿಯ ವೇಷ ಧರಿಸಿ ಪಾರ್ವತೀ ತಪೋವನಕ್ಕೆ ಹೋದನು. ದಂಡಕಮಂಡಲು ಧಾರಿಯಾದ ಅವನನ್ನು ಅವಳು ಸತ್ಕರಿಸಿದಳು. ಅವಳು ಕುಶಲ ಪ್ರಶ್ನೆ ಕೇಳಿದ ಕೂಡಲೇ ಜಟಿಲಾವತಾರಿ ರುದ್ರನು ರಾಜಪುತ್ರಿಯಾದ ಅವಳ ತಪಸ್ಸಿನ ಉದ್ದೇಶವನ್ನು ಕೇಳಿದನು. ಅವಳು ತನಗೆ ರುದ್ರನೇ ಪತಿಯಾಗಬೇಕೆಂದು ತಪಸ್ಸು ಮಾಡುತ್ತಿರುವುದಾಗಿ ಹೇಳಿದಳು. ಆಗ ಅವನು ಅವಳಿಗೆ ತಕ್ಕ ವರನಲ್ಲವೆಂದು ಬೋಧಿಸಿದನು:

"ರುದ್ರನು ವೃಷಧ್ವಜ, ವಿಕೃತಾತ್ಮ, ಜಟಾಧರ, ಏಕಾಕಿ, ವಿರಾಗಿ; ಆದ್ದರಿಂದ ಅವನು ನಿನಗೆ ತಕ್ಕ ವರನಲ್ಲ"–ಎಂದು.

ಜಟಿಲನ ಈ ಶಿವನಿಂದೆಯಿಂದ ಕೆರಳಿದ ಪಾರ್ವತಿ ಬ್ರಾಹ್ಮಣಾಚಾರದ ದೆಸೆಯಿಂದ ಅವಧ್ಯನಾದರೂ ತ್ಯಾಜ್ಯನೆಂದು ನಿರ್ಧರಿಸಿ ಆ ಜಾಗ ಬಿಟ್ಟು ತೆರಳಲು ಸಖಿಯರಿಗೆ ಸಿದ್ಧತೆ ನಡೆಸಲು ಹೇಳಿದಳು. ಆ ಕ್ಷಣದಲ್ಲಿ ರುದ್ರಶಿವನು ನಿಜ ರೂಪದಿಂದ ಪ್ರತ್ಯಕ್ಷನಾಗಿ ಅವಳು ಹೊರಡದಂತೆ ಸೆರಗು ಹಿಡಿದು ನಿಲ್ಲಿಸಿದನು ಮತ್ತು ತನ್ನ ಸುಪ್ರೀತಿಯನ್ನು ವ್ಯಕ್ತಪಡಿಸಿದನು; "ಅದ್ಯಪ್ರಭೃತ್ಯವನತಾಂಗಿ ತವಾಸ್ಮಿ ದಾಸಃ" ಎಂಬ ಉದ್ಗಾರದ ಪರ್ಯಾಯವನ್ನು ಉಸಿರಿದನು. ಅದನ್ನು ಗಿರಿಜೆ ತಂದೆಗೆ ಹೇಳಿದಾಗ ಅವನು ಸಪತ್ನೀಕನಾಗಿ ಮದುವೆಗೇರ್ಪಾಟು ಮಾಡಿದನು. ನಿರಂಜನ ಶಿವನಾಗ ಸರಂಜನ ನಟರಾಜನಾಗಿ ತ್ರಿಭುವನ ಸಂತೋಷ ಪಡುವಂತೆ ನರ್ತಿಸಿದನು; ಭಿಕ್ಷು, ವಿಷ್ಣು, ಬ್ರಹ್ಮ, ಸೂರ್ಯ ಮತ್ತು ರುದ್ರ ರೂಪಗಳನ್ನು ಒಂದಾದ ಮೇಲೆ ಒಂದರಂತೆ ತೋರಿಸಿದನು. ದೇವತೆಗಳ ಇಚ್ಛೆಯಿಂದ ಲೋಕೋಪಕಾರಕ್ಕಾಗಿ ಹಿಮಾಲಯ ಮಹಾರಾಜನು ಕನ್ಯಾದಾನದಿಂದ ಸಾಯುಜ್ಯವನ್ನು ಹೊಂದುವುದನ್ನು ತಪ್ಪಿಸಿ, ಸಮಾಧಾನ ಹೇಳಿ ಅವನ ಮನೆಯಲ್ಲೇ

(ಕೈಲಾಸದಲ್ಲೇ) ಶಿವನು ಪಾರ್ವತಿಯೊಡನೆ ಖಾಯಂ ವಾಸಿಸುವಂತೆ ಬೇಡಿಕೊಂಡದ್ದರಿಂದ, ಮಹಾ ವೈಭವದಿಂದ ಪಾರ್ವತಿಯನ್ನು ಮದುವೆಯಾದ ಪರಮೇಶ್ವರನು ಹಿಮಾಲಯ (ಮಾವ) ನಿರ್ಮಿಸಿಕೊಟ್ಟ ಕೈಲಾಸ ನಗರದಲ್ಲೇ ಉಳಿದುಕೊಂಡನು. ವೈಕುಂಠ ಆಕಾಶಸ್ಥ, ದುರ್ಗಮ; ಕೈಲಾಸ ಹಿಮಾಲಯಸ್ಥ, ಸುಗಮ. ಹರಿ, ವಿಧಿ, ಸೂರ್ಯಾದಿಗಳೆಲ್ಲರೂ ಶಿವಾಜ್ಞಾಧಾರಕರಾಗಿ ಶಿವನ ದಿವ್ಯೋದ್ದೇಶವಾದ ಲೋಕ ಪ್ರಶಾಸನವನ್ನು ಮಾಡುವಲ್ಲಿ ಇಮ್ಮಡಿ ಉತ್ಸಾಹ ತಾಳಿದರು. ಅರೂಪ, ಜ್ಯೋತಿರಾಕಾರ, ಪರಸತ್ಯ–ಎನ್ನಿಸಿದ ಶಿವನ ಬಹುರೂಪಧಾರಿತ್ವವಿಲ್ಲಿ ರಂಜನೀಯ. ಅವನ ಸರ್ವೇಶ್ವರತ್ವ, ನಟ ಸಾರ್ವಭೌಮತ್ವ, ಭಕ್ತ ಪರವಶತೆ ಅದ್ವಿತೀಯ!

–೫೦–

# ಅಶ್ವತ್ಥಾಮಾವತಾರ

ಉಪಲಬ್ಧ ಮಹಾಭಾರತದಲ್ಲಿ ಅಶ್ವತ್ಥಾಮನು ಭರದ್ವಾಜನ ಮಗನಾದ ದ್ರೋಣಾಚಾರ್ಯನ ಏಕಮಾತ್ರ ಪುತ್ರ. ದ್ರೋಣನು ಬ್ರಾಹ್ಮ–ಕ್ಷಾತ್ರ ವಿದ್ಯೆಗಳಲ್ಲಿ ಅಂದಿನ ಕಾಲದಲ್ಲಿ ಅದ್ವಿತೀಯ. ಅಶ್ವತ್ಥಾಮನು ಅತ್ಯಂತ ಪಿತೃವತ್ಸಲನಾದರೂ ಅಸಂಯಮಿ; ಆದ್ದರಿಂದ ಚಿರಂಜೀವಿಗಳಲ್ಲಿ ಮೊದಲಿಗನಾದರೂ ಭಾರತದ ಅಂತ್ಯದಲ್ಲಿ ಕೃಷ್ಣನಿಂದ ತೇಜೋಭಂಗ ಹೊಂದಿದನು. ಇದೊಂದು ಪರಂಪರೆ.

ಶಿವಪುರಾಣದ ಪರಂಪರೆ ಸ್ವಲ್ಪ ಭಿನ್ನವಾಗಿದೆ. ಇಲ್ಲಿ ಅಶ್ವತ್ಥಾಮನು ರುದ್ರಾವತಾರನು, ಶ್ರೀಕೃಷ್ಣ ಪೂಜ್ಯನು. ಪರಶುರಾಮನು ರಾಮಾಯಣದಲ್ಲಿ ರಾಮನಿಗೆ ಮಣಿದಂತೆ ಅಶ್ವತ್ಥಾಮನಿಲ್ಲಿ ಕೃಷ್ಣನಿಗೆ ಮಣಿದವನಲ್ಲ. ರುದ್ರಾವತಾರತ್ವದಿಂದ ಅವನು ಕೃಷ್ಣಾದಿ ಸರ್ವ ದೇವಾವತಾರ ಪೂಜ್ಯನು.

ರಾಮಾಯಣದ ಸೀತೆಯಂತೆ ದ್ರೋಣನಿಲ್ಲಿ ಅಯೋನಿಜ. ಮಾನವ ಗರ್ಭಜಾತನಲ್ಲ. ಸೀತೆಯ ಪಾತಿವ್ರತ್ಯ ಬಲವು ಈತನಲ್ಲಿ ಅದ್ವಿತೀಯ ಯೋಗ ಸಿದ್ಧಿಬಲದಿಂದ ತುಲಿತವಾಗಿದೆ. ಸಪ್ತರ್ಷಿಗಳಲ್ಲಿ ಒಬ್ಬನಾದ ಭರದ್ವಾಜನ ಪೀಳಿಗೆ ಹೀಗಿರುವುದು ಸಹಜ. ಭರದ್ವಾಜ ಗೋತ್ರದವರಿಗಿದು ಹೊಸ ಬೆಳಕು. ಭರದ್ವಾಜನು ಬೃಹಸ್ಪತಿ ಸಂತಾನದವನು. ದ್ರೋಣನು ಕುರುಕುಲ ಗುರು. ಭೀಷ್ಮ ದ್ರೋಣರು ಮಹಾಭಾರತದಲ್ಲಿ ವಹಿಸಿದ ಪಾತ್ರವು ಕೃಷ್ಣಪ್ರಿಯವಾಗಿರದಂತೆ ತೋರಿದರೂ ಅವರು ಕೃಷ್ಣಪೂಜಿತರೆಂಬುದು ಸುಸ್ಪಷ್ಟ. ಅವರೂ ಕೃಷ್ಣನಲ್ಲಿ ಗೌರವವುಳ್ಳವರು. ಈ ಮೂವರಲ್ಲಿ ಯಾರೂ ಇನ್ನೊಬ್ಬರನ್ನು ಅಧಾರ್ಮಿಕರೆಂದು ತಿಳಿದಿರಲಿಲ್ಲ.

ಇಲ್ಲಿ ದ್ರೋಣನು ಪುತ್ರಾರ್ಥಿಯಾಗಿ ಶಿವನನ್ನು ಪ್ರಾರ್ಥಿಸಿದನು. ಆಗ ರುದ್ರಶಿವನು (ಸಾಕಾರ ಶಿವನು) ತಾನೇ ಅಂಶಾವತಾರಿಯಾಗಿ ದ್ರೋಣ ಪುತ್ರನಾಗಿ ಹುಟ್ಟುವೆನೆಂದು ಅವನಿಗೆ ವರವನ್ನಿತ್ತು ಆ ಪ್ರಕಾರ ಜನಿಸಿದನು; ತಂದೆಯಂತೆಯೇ ಅದ್ವಿತೀಯ ಶಾಪ–ಶರ ಶಕ್ತಿಯುಳ್ಳ ಮಹಾವೀರನೆನ್ನಿಸಿಕೊಂಡನು.

ಕುರುಕ್ಷೇತ್ರದ ಯುದ್ಧದಲ್ಲಿ ಕೃಷ್ಣನ ವಂಚನೆಯ ಮೂಲಕ ಧೃಷ್ಟದ್ಯುಮ್ನನೆಂಬ ಸಾಮಾನ್ಯ ವೀರನಿಂದ ಉದಾತ್ತ ಮಹಾವೀರನಾದ ತನ್ನ ತಂದೆ ಹತನಾದುದನ್ನು

ಕಂಡು ರುದ್ರನಾದ ಅಶ್ವತ್ಥಾಮನು (ಹಯವದನನು=ಗ್ರೀಕ್ ಸೆಂಟಾರಿನ ಹಯದೇಹಿಯನ್ನು ನೆನಪು ಮಾಡಿ ಕೊಡುವವನು) ಕೃಷ್ಣ ರಕ್ಷಿತನಾದ ಉತ್ತರಾ ಗರ್ಭಸ್ಥ ಪರೀಕ್ಷಿತನ ವಧೆಗೆ ಬ್ರಹ್ಮ ಶೀರ್ಷಾಸ್ತ್ರವನ್ನು ಬಿಟ್ಟನು. ಅದರಿಂದ ದ್ರೋಣನ ಕಡೆಯ ಕೌರವ ವಿರೋಧಿಗಳಾದ ಪಾಂಡವರ ಸಂತತಿ ಮುಕ್ತಾಯವಾಗುವುದೆಂದು ಅವನು ಭಾವಿಸಿದ್ದನು. ಆದರೆ ಅಷ್ಟರಲ್ಲಿ ಅವನ ಬ್ರಹ್ಮಾಸ್ತ್ರಕ್ಕೆ ಕೃಷ್ಣನ ಚಕ್ರಾಸ್ತ್ರ ಎದುರಾಯಿತು. ಚಕ್ರಾಸ್ತ್ರವು ರುದ್ರನಿಂದ ಮೊದಲು ವಿಷ್ಣುವಿಗೆ, ಆ ಮೂಲಕ ಅವನ ಅಣ್ಣನಿಗೆ, ಅದು ತಲುಪಿ, ಪುನಃ ವಿಷ್ಣುವಿನ ಅವತಾರಿಯಾದ ಕೃಷ್ಣನ ಕೈಗೆ ಬಂದಿತ್ತೆಂಬುದು ಶಿವಪುರಾಣ ತಾತ್ಪರ್ಯ. ಆದ್ದರಿಂದ ಸುದರ್ಶನವೂ ಬ್ರಹ್ಮಾಸ್ತ್ರ (=ಬ್ರಹ್ಮಶೀರ್ಷಾಸ್ತ್ರ)ವೂ ರುದ್ರಾಸ್ತ್ರಗಳೇ. ಅಶ್ವತ್ಥಾಮನು ರುದ್ರರೂಪದಿಂದ ಕೃಷ್ಣನಿಗೆ ದರ್ಶನವಿತ್ತು ಅವನು ಮಾಡಿದ ಗರ್ಭ ರಕ್ಷೆಯನ್ನು ಮನ್ನಿಸಿದನು. ಈ ಮಹಾನುಗ್ರಹಕ್ಕಾಗಿ ಕೃಷ್ಣನೂ ಪಾಂಡವರೂ ರುದ್ರರೂಪಿ ಅಶ್ವತ್ಥಾಮನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಅಶ್ವತ್ಥಾಮನು ರುದ್ರಾಂಶಾವತಾರನೆಂಬುದಕ್ಕೆ ಅವನು ಉಪಪಾಂಡವಾದಿಗಳ ವಧೆ ಮಾಡಲು ರುದ್ರ–ರುದ್ರಾಣಿಯರು ನೆರವಿತ್ತುದು ಪ್ರಮಾಣ. ವಿಷ್ಣುವಿನ ದಶಾವತಾರಗಳೂ ಕೊನೆಗೊಂಡಂಥವುಗಳು. ಆದರೆ ಅಶ್ವತ್ಥಾಮ ರುದ್ರನು ಚಿರಂಜೀವಿ (ದ್ವಾಪರಾದಿ ಕಲ್ಪಂತ ಜೀವಿಯಾದ ಅಮರ) ಎಂಬುದು ಲೋಕ ಪ್ರಸಿದ್ಧ. ಈ ಅಶ್ವ ಮುಖಾವತಾರವು ವಿಷ್ಣುವಿನ (ನರಸಿಂಹ) ಸಿಂಹ ಮುಖಾವತಾರವನ್ನು ಹೋಲುತ್ತದೆ. ಕುರುಕ್ಷೇತ್ರದಿಂದ ಆಮೇಲೆ ಹೋದ ಅಶ್ವತ್ಥಾಮನು ಗಂಗಾ ತಟನಿವಾಸಿಯಾದನು.

**ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚವಿಭೀಷಣಃ।**
**ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ॥**

–೫೧–

# ಕಿರಾತಾರ್ಜುನೀಯ

ಕೌರವರೊಡನೆ ಜೂಜಾಡಿ ಸೋತು ಪಾಂಡವರೂ ದ್ರೌಪದಿಯೂ ದ್ವೈತವನದಲ್ಲಿ ವಾಸಿಸುತ್ತಿದ್ದ ಕಾಲ. ಕೌರವ ಬಲದ ಮೊತ್ತವನ್ನರಿತ ಅವರು ಸ್ವಬಲವರ್ಧನೆಗೇನು ಮಾಡಬೇಕೆಂದು ಕೃಷ್ಣನನ್ನು ಒಮ್ಮೆ ಕೇಳಿದರು. ಅವನು ಅದಕ್ಕೆ ಉತ್ತರವಾಗಿ, "ಶತ್ರುಗಳನ್ನು ದ್ವಾರಕೆಯಿಂದ ಹಿಂದೆ ಓಡಿಸಿದ್ದು ಉಪಮನ್ಯುವು ಉಪದೇಶಿಸಿದಂತೆ ಶಂಭುವನ್ನು ಆರಾಧಿಸಿ ಅವನಿತ್ತ ವರದಿಂದ ಸ್ವಬಲವರ್ಧನೆ ಮಾಡಿಕೊಂಡ ಮೇಲೆಯೇ; ಆದುದರಿಂದ ನೀವೂ ಶಿವೋಪಾಸನೆ ಮಾಡಿ ನಿಮ್ಮ ಬಲವನ್ನು ಹೆಚ್ಚಿಸಿಕೊಳ್ಳಿರಿ" ಎಂದು ಹೇಳಿ ದ್ವಾರಕೆಗೆ ಮರಳಿದನು. ಅಷ್ಟು ಹೊತ್ತಿಗೆ ವ್ಯಾಸಮುನಿ (ಕೃಷ್ಣದ್ವೈಪಾಯನ, ಬಾದರಾಯಣ) ಅಲ್ಲಿಗೆ ಬಂದನು. ಅವನ ಬೂದಿ, ರುದ್ರಾಕ್ಷಿ, ಜಡೆಗಳನ್ನು ಕಂಡ ಕೂಡಲೇ ಅವನೊಬ್ಬ ಋಷಿ ಎಂದು ಗೊತ್ತಾಯಿತು. ಅವನು ಪಂಚಾಕ್ಷರ ಜಪಿಸುತ್ತಾ ಹತ್ತಿರಕ್ಕೆ ಬಂದಾಗ ಆತನು ಯುಗ ಪ್ರವರ್ತಕ ವ್ಯಾಸಮುನಿ ಎಂಬುದು ತಿಳಿದು ಬಂತು. ಆಗ ಪಾಂಡವರೆಲ್ಲರೂ ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು ಮತ್ತು ತಮ್ಮ ದಾರಿದ್ರ್ಯದ ದುಃಖವನ್ನವರು ಅವನೆದುರಿಗೆ ತೋಡಿಕೊಂಡರು. "ಸಜ್ಜನರಾದ ನಿಮಗೆ ಅಂತ್ಯ ಜಯವು ಸಿದ್ಧ–ಬೀಜದಿಂದ ಮರ ಬೆಳೆದು ನಿಲ್ಲುವಂತೆ. ಅನ್ಯಾಯಗಾರರಾದ ಧಾರ್ತರಾಷ್ಟ್ರರಿಗೆ ಅಂತ್ಯಾಪಜಯವು ಕಟ್ಟಿಟ್ಟದ್ದು. ನೀವು ಶಿವಪೂಜೆ ಮಾಡಿರಿ" – ಎಂದು ಬೋಧಿಸಿದನು. ಆಗ ಪಾಂಡವರು ಅರ್ಜುನನನ್ನು ಶಿವನನ್ನು ಕುರಿತು ತಪಸ್ಸು ಮಾಡಲು ಕಳುಹಿದರು.

ಆ ಪ್ರಕಾರ ಅರ್ಜುನನು ಈಶ್ವರನನ್ನು ಕುರಿತು ತಪಸ್ಸನ್ನು ಮಾಡಲು ಹೋದನು. ಗಂಗಾ ತೀರಕ್ಕೆ ಸನಿಹದಲ್ಲಿದ್ದ ಬೆಟ್ಟದಲ್ಲಿ ಅವನು ತಪಸ್ಸಿಗೆ ಕುಳಿತನು. ಇಂದ್ರನು ಅರ್ಜುನನನ್ನು ಪರೀಕ್ಷಿಸಲು ಬ್ರಾಹ್ಮಣ ವೇಷದಿಂದ ಬಂದು "ಸುಖ ಬೇಕಾದರೆ ಇಂದ್ರಪೂಜೆ ಮಾಡಬೇಕು, ಮುಕ್ತಿ ಬೇಕಾದರೆ ಶಿವಪೂಜೆ ಮಾಡಬೇಕು. ನೀನು ಸುಖಾಪೇಕ್ಷಿ. ಆದ್ದರಿಂದ ನಿನಗೆ ಇಂದ್ರೋಪಾಸನೆ ಯೋಗ್ಯ" ಎಂದನು. ಅದಕ್ಕೆ ಅರ್ಜುನನು– "ನಾನು ವ್ಯಾಸನು ಹೇಳಿದ್ದಾನೆ ಎಂದಿಷ್ಟೇ ತಿಳಿದುಕೊಂಡು ತಪಸ್ಸು ಮಾಡುತ್ತೇನೆ. ನನ್ನಲ್ಲಿ ರಾಜ್ಯ–ಮುಕ್ತಿಗಳು ಬೇಕೆಂಬ ಫಲಾಪೇಕ್ಷೆ ಇಲ್ಲ" ಎಂದು ಉತ್ತರ ಕೊಟ್ಟು ಆ ಬ್ರಹ್ಮಚಾರಿ ಬ್ರಾಹ್ಮಣ ವೇಷದ ಇಂದ್ರನನ್ನು ಸಂತೋಷಗೊಳಿಸಿದನು.

ಅವನು ತನ್ನ ನಿಜರೂಪದಿಂದ ಪ್ರತ್ಯಕ್ಷನಾಗಿ, "ಬ್ರಹ್ಮ ವಿಷ್ಣುಗಳಿಗೆ ವರದಾನ ಶಕ್ತಿ ಬಂದದ್ದು ಶಿವನಿಂದ. ಆದುದರಿಂದ ನೀನು ಶಿವೋಪಾಸನೆಯಿಂದಲೇ ಶತ್ರುಂಜಯನಾಗಿ ಭಕ್ತಿ–ಮುಕ್ತಿಗಳೆರಡನ್ನೂ ಪಡೆಯುವೆ" ಎಂದು ವರವನ್ನು ಕೊಟ್ಟನು. ತಪಸ್ಸಿನಲ್ಲಿ ಎಂದೆಂದೂ ಧೈರ್ಯಗುಂದದೆ ಇರಲು ಉಪದೇಶಿಸಿದನು. ದೇವತೆಗಳು ಅರ್ಜುನನ ಘೋರ ತಪಸ್ಸನ್ನು ರುದ್ರಶಿವನಿಗೆ ತಿಳಿಸಿದರು. ಆಗ ರುದ್ರನು ಅವರ ಇಂಗಿತವನ್ನು ತಿಳಿದು ತಾನು ಎಲ್ಲವನ್ನೂ ಸರಿಪಡಿಸುವೆನೆಂದು ಆಶ್ವಾಸನವಿತ್ತು ಕಳುಹಿದನು.

ಆ ಸಮಯದಲ್ಲಿ ಮಾಯಾವಿಯಾದ ದುರ್ಯೋಧನನು ಮೂಕನೆಂಬ ದಾನವನನ್ನು ಹಂದಿಯ ರೂಪ ತಾಳುವಂತೆ ಮಾಡಿ ಅರ್ಜುನನಿದ್ದ ಕಾಡಿಗೆ ಕಳುಹಿದನು. ದಾಳಿ ಮಾಡುತ್ತಾ ಬಂದ ಆ ಮೂಕಾಸುರನನ್ನು ಕಂಡ ಅರ್ಜುನನು ಹೀಗೆ ಚಿಂತಿಸಿದನು.

ಈತ ನನಗೆ ಅನಿಷ್ಟಕಾರಿಯೂ ಸೇಡು ತೀರಿಸಿಕೊಳ್ಳಲು ಬಂದ ದೈತ್ಯನೂ ಆಗಿರಬಹುದು. ಏಕೆಂದರೆ ಅವನ ಪೂರ್ವಜರನೇಕರನ್ನು ನಾನು ಸಂಹರಿಸಿದ್ದೇನೆ.

ಅಥವಾ ಈತನು ದುರ್ಯೋಧನ ಹಿತಕಾರಿಯಾಗಿ ಇಲ್ಲಿಗೆ ಬಂದಿದ್ದಾನೆ.

ನನ್ನ ಮನಸ್ಸು ಯಾರನ್ನು ನೋಡಿದೊಡನೆಯೇ ಪ್ರಸನ್ನವಾಗುವುದೋ ಅವನು ನನ್ನ ಹಿತಕಾರಿ. ತದ್ವಿರುದ್ಧ ಭಾವ ನನ್ನಲ್ಲಿ ಮೂಡಿದರೆ ಅವನು ಅಹಿತಕಾರಿ.

ಈ ಹಂದಿಯನ್ನು ಕಂಡ ಕೂಡಲೇ (ನನ್ನ ಅಂತಃಕರಣ ಪ್ರವೃತ್ತಿಗಳ ಪ್ರಾಮಾಣಿಕ ಪ್ರತಿಕ್ರಿಯೆಗಳ ಪ್ರಕಾರ) ನನ್ನ ಇಂದ್ರಿಯಗಳು ಕಲುಷಿತವಾದವು. ಆದ್ದರಿಂದ ಈ ಸೂಕರ ರಾಕ್ಷಸನು ವಧ್ಯ!"

ಇಷ್ಟು ಆಲೋಚನೆ ಮಾಡಿ ಬಾಣ ಬಿಡಲು ಅರ್ಜುನ ಸಿದ್ಧನಾದಾಗ, ಒಮ್ಮಿಂದೊಮ್ಮೆ ಈಶ್ವರನು ಕಿರಾತವೇಷತಾಳಿ, ತನ್ನ ಸೈನ್ಯದೊಡನೆ ಅರಣ್ಯ ರಕ್ಷಣಾರ್ಥವಾಗಿ ಮತ್ತು ಭಕ್ತ ಪರೀಕ್ಷೆಗಾಗಿ, ಘನ ಗರ್ಜನೆ ಮಾಡುತ್ತಾ ಈಶಾನ ಧ್ವಜದ ಹಿಂದೆ ಧನುರ್ಬಾಣಗಳನ್ನು ಧರಿಸಿ ಬಂದೇ ಬಿಟ್ಟನು! ಆ ಹಂದಿಗಾಗ ಇಬ್ಬರು ಬೇಟೆಗಾರರಾದರು. ಇಬ್ಬರೂ ಏಕಕಾಲದಲ್ಲಿ ಆ ಹಂದಿಗೆ ಬಾಣ ಬಿಟ್ಟರು. ಶಿವಬಾಣವು ಅದರ ಬಾಲವನ್ನಿರಿದಿತು; ಅರ್ಜುನ ಬಾಣವು ಅದರ ಮುಖವನ್ನು ಸೀಳಿತು. ಸಾಯುವಾಗ ಆ ಹಂದಿ ತನ್ನ ಕ್ರೂರ ರಾಕ್ಷಸ ರೂಪವನ್ನು ತೋರಿ ಸತ್ತಿತು. ಅರ್ಜುನನು ತನ್ನನ್ನು ರಕ್ಷಿಸಲು ಶಿವನು ಕಿರಾತಕನಿಂದ ಹಂದಿಯನ್ನು ಕೊಲ್ಲಿಸಿದನೆಂದು ಕೃತಜ್ಞನಾದನು. ಆದರೆ ಶಿವಬಾಣವು ಹಂದಿಯ ಬಾಲದಿಂದ ಹೊರಟು ಮಾಯವಾಗಿ ಹೋಯ್ತು. ಮತ್ತು ಕಿರಾತ ಗಣಗಳು ಅದರ ಬಾಯಲ್ಲಿದ್ದ ಅರ್ಜುನ ಬಾಣವನ್ನು ಕಿತ್ತುಕೊಂಡು ಹೋಗಲು ಬಂದರು. ಅವರನ್ನು ಬೈದು ಅರ್ಜುನನು ತನ್ನ ಬಾಣವನ್ನು ಕಿತ್ತುಕೊಂಡನು. ಅವರು ಆ ಬಾಣ ತಮ್ಮದೆಂದು ಜಗಳ ಮಾಡಿದರು, ತಪಸ್ವಿಯಾದ

ಅವನು ಸುಳ್ಳು ಹೇಳಿದ್ದು ತಪ್ಪೆಂದರು. ಆಗ ಕ್ರುದ್ಧನಾದ ಅರ್ಜುನನು ಮಲ್ಲಮುಷ್ಟ್ಯಾದಿಯುದ್ಧಗಳನ್ನು ಮಾಡಿ ಗಗನ ಯಾನದಲ್ಲಿ ಕಿರಾತನ ಕಾಲುಗಳನ್ನು ಹಿಡಿದು ಗಿರ ಗಿರನೆ ತಿರುಗಿಸಲು ಶುರು ಮಾಡಿದನು. ಶಿವ ಧ್ಯಾನವನ್ನು ಮಾತ್ರ ಅವನು ಯಾವ ಕ್ಷಣದಲ್ಲಿಯೂ ಬಿಡಲಿಲ್ಲ. ಅದರಿಂದ ತೃಪ್ತನಾದ ರುದ್ರ ಶಿವನು (ಶಿವರುದ್ರನಲ್ಲ!) ಪ್ರತ್ಯಕ್ಷನಾಗಿ ಅರ್ಜುನನ ಪಶ್ಚಾತ್ತಾಪಕ್ಕೆ ಮರುಗಿ ತನ್ನ ಕಿರಾತ ವೇಷದ ಕಾಪಟ್ಯವು ಕೇವಲ ಭಕ್ತಿ ಪರೀಕ್ಷಾರ್ಥವೆಂದು ಹೇಳಿ, ಅರ್ಜುನನಿಗೆ ಮಹಾಭಾರತದ ಯುದ್ಧದಲ್ಲಿ ಜಯವಾಗಲಿ ಎಂದು ಆಶೀರ್ವದಿಸಿ ಅಂತರ್ಧಾನ ಹೊಂದಿದನು (ಅಂತರ್ಧಾನನಾಗಲಿಲ್ಲ!). ಇದರಿಂದ ಪಾಂಡವರೆಲ್ಲರಿಗೂ ಪರಮ ಸಂತೋಷವಾಯಿತು. ಇಂದ್ರಾದಿ ದೇವತೆಗಳು ಹೂಮಳೆಗರೆದರು.

ನರನು ಹರನಂತಾಗದೆ ದುಷ್ಟರನ್ನು ದಮಿಸಲಾರನು. ಆದ್ದರಿಂದ ಕಾಳಿದಾಸನು ದಿಲೀಪನನ್ನು "ಸರ್ವಾತಿರಿಕ್ತಸಾರ" "ಸರ್ವತೇಜೋಽಭಿಭಾವಿ" "ಅದೃಷ್ಯ" ಆದರೆ "ಅಭಿಗಮ್ಯ" (Most powerful, can stare out of existence all adverse forces, cannot be defied by evil geniuses but can be easily approached by the good people) ಎಂದು ವರ್ಣಿಸಿದ್ದಾನೆ. ಈ ಬಗೆಯ ವ್ಯಕ್ತಿತ್ವವಿಲ್ಲದ ಯಾರೂ ಕಾಯದೆ ಮತ್ತು ಸುವ್ಯವಸ್ಥೆಗಳನ್ನು ಯಾವ ದೇಶದಲ್ಲಿಯೂ ಸಮರ್ಪಕವಾಗಿ ಪಾಲಿಸಿಕೊಂಡು ಹೋಗಲಾರರು–ಎಂಬುದು ಕಿರಾತೇಶ್ವರ ನಿದರ್ಶಿಸಿ ಕೊಟ್ಟ ಪಾಠ. ಅರ್ಜುನ ಅಂಥ ಜನನಾಯಕ ಎಂಬುದು ಶಿವಮತ.

–೫೨–

# ಪ್ರಸಿದ್ಧ ಶಿವಲಿಂಗಗಳು

ಜ್ಯೋತಿರ್ಲಿಂಗಗಳು ಶ್ರೇಷ್ಠ. ಅವುಗಳಲ್ಲಿ ಶಿವನ ದ್ವಾದಶಾವತಾರಗಳಿಂತಿವೆ:– ಸೋಮನಾಥೇಶ್ವರ, ಮಲ್ಲಿಕಾರ್ಜುನ, ಮಹಾಕಾಲ, ಓಂಕಾರ, ಕೇದಾರೇಶ್ವರ ಭೀಮಶಂಕರ, ವಿಶ್ವೇಶ್ವರ, ತ್ರ್ಯಂಬಕ, ವೈದ್ಯನಾಥ, ನಾಗೇಶ್ವರ, ರಾಮೇಶ್ವರ ಮತ್ತು ಘುಶ್ಮೇಶ್ವರ ಎಂಬಿವೇ ಆ ೧೨ ಅವತಾರಗಳು. ಅನುಕ್ರಮವಾಗಿ ಈ ಲಿಂಗಗಳು ಸೌರಾಷ್ಟ್ರ, ಶ್ರೀಗಿರಿ, ಉಜ್ಜಯಿನಿ, ವಿಂಧ್ಯ, ಕೇದಾರ, ಕಾಮರೂಪ, ಕಾಶಿ, ಗೌತಮೀತಟ, ಚಿತಾಭೂಮಿ, ನಾಗೇಶ್ವರ, ರಾಮೇಶ್ವರ ಮತ್ತು ದಕ್ಷಿಣದ ದೇವ ಶೈಲ ಸಮೀಪ ಸ್ಥಲ ಎಂಬ ಪ್ರದೇಶಗಳಲ್ಲಿವೆ.

ಸೋಮೇಶನು ಅವತರಿಸಿದ್ದು ಚಂದ್ರನ ದುಃಖವನ್ನು ಪರಿಹರಿಸಲಿಕ್ಕೆ; ಆ ಲಿಂಗದ ಪೂಜೆಯಿಂದ ಕ್ಷಯ ಕುಷ್ಠಾದಿ ರೋಗಗಳು ಗುಣವಾಗುತ್ತವೆ. ಅಲ್ಲಿರುವ ಚಂದ್ರ ಕುಂಡದಲ್ಲಿ ಮಿಂದರೆ ಎಲ್ಲ ಆಶೆಗಳೂ ದೂರ ಹೋಗುವುವು; ಭಕ್ತನು ನಿಷ್ಕಾಮನಾಗುವನು; ಶ್ರೀ ಗಿರಿಯು ರುದ್ರಶಿವನ ಸ್ವಗಿರಿ. ಅಲ್ಲಿ ಮೊದಲು ಪ್ರೇಯಸ್ಸು, ಆಮೇಲೆ ಶ್ರೇಯಸ್ಸು ಬರಲಿ ಎಂಬುವರು ಶಿವಾರಾಧನೆ ಮಾಡುತ್ತಾರೆ: ಧ್ಯೇಯನು ಮಲ್ಲಿಕಾರ್ಜುನನು.

ಉಜ್ಜಯಿನಿಯಲ್ಲಿ ಮಹಾಕಾಲ (Supratemporal Divine Force) ವೇದ ಧರ್ಮ ವಿರೋಧಿಯಾಗಿದ್ದ ದೂಷಣಾಸುರನನ್ನಲ್ಲಿ ರುದ್ರನು ಸಂಹರಿಸಿದನು. ಆದ್ದರಿಂದ ಮಹಾಕಾಲಾವತಾರವು ವೇದ ಹೃದಯ ರಕ್ಷಕ; ವೇದಾಂತರರ್ಥ ಚೋದಕ. ನಿಜ ವೇದನಿಂದಕರಿಗಲ್ಲಿ ವಿನಾಶ!

ಓಂಕಾರೇಶ್ವರ ಮತ್ತು ಅಮರೇಶ್ವರ ಎಂದರೆ ಒಂದೇ. ಅದು ಬ್ರಹ್ಮ ಸ್ಥಾಪಿತ ಲಿಂಗ. ಅದು ದ್ವಿರೂಪದಿಂದ ಭುಕ್ತಿ–ಮುಕ್ತಿಗಳನ್ನು ಆಯಾ ಗುರಿಯ ಆರಾಧಕರಿಗೆ ದಯಪಾಲಿಸುವುದು.

ನರ–ನಾರಾಯಣರ ಪ್ರಾರ್ಥನೆಯಂತೆ ರುದ್ರಶಿವ ಕೇದಾರದಲ್ಲಿ ಕೇದಾರೇಶ್ವರ ಲಿಂಗನಾದನು. ಆತನ ಉಪಾಸನೆಯು ಇಷ್ಟಸಿದ್ಧಿಕರ.

ಭೀಮಶಂಕರನು ಭೀಮಾಸುರ ವಿನಾಶಕನು. ಕಾಮ ರೂಪದ ಸುದಕ್ಷಿಣ ರಾಜನನ್ನು ಅವನು ಸಂರಕ್ಷಿಸಿದನು. ಅವನು ಕಾಮರೂಪದ ಡಾಕಿನಿಯಲ್ಲಿ ಸ್ವಯಂಸ್ಥಿತನಾದವನು.

ಕಾಶೀ ವಿಶ್ವೇಶ್ವರನು ಭರತವರ್ಷೇಶ್ವರನೆಂದು ಪ್ರಸಿದ್ಧಿಯಿದೆ. ಅವನು ಸರ್ವಬ್ರಹ್ಮಾಂಡ ಸ್ವರೂಪನು. ವಿಷ್ಣು ಮುಂತಾದ ದೇವತೆಗಳ ನಿತ್ಯಪೂಜೆ ಅವನಿಗೆ ಅಲ್ಲಿದೆ. ಕೈಲಾಸಪತಿಯೂ ಭೈರವನೂ ಆ ಪೂಜಕರಲ್ಲಿ ಸೇರಿದವರು. ಆದ್ದರಿಂದ ವಿಶ್ವನಾಥನು ಮುಕ್ತಿದಾಯಕನಾದ ವಿಶ್ವೇಶ್ವರ (The Supreme God of the universe) ಅವನು ಸ್ವಯಂ ಸಿದ್ಧ ಸ್ವರೂಪನು, ನಿರ್ಲಿಪ್ತನು, ಕೈವಲ್ಯಸ್ಥಿತನು.

ಗೌತಮೀ ತಟಸ್ಥ ತ್ರ್ಯಂಬಕ ಲಿಂಗನು ಗೌತಮ ಪ್ರಾರ್ಥನೆಯಂತೆ ಅವತರಿಸಿದವನು. ಗೌತಮೀ=ಗಂಗೆ ಶಿವಪ್ರಿಯೆ. ತ್ರ್ಯಂಬಕನು ಪ್ರಿಯ–ಹಿತದಾಯಕನು. ಚಿತಾಭೂಮಿಸ್ಥನಾದ ವೈದ್ಯನಾಥೇಶ್ವರನು ರಾವಣಪ್ರೀತ್ಯರ್ಥವಾಗಿ ಅವತರಿಸಿದಾತನು. ಅವನು ಭುಕ್ತಿ ಮುಕ್ತಿಪ್ರದನು. ನಾಗೇಶ್ವರನು ದಾರುಕನೆಂಬ ರಾಕ್ಷಸನನ್ನು ಕೊಂದವನು. ಶಿಷ್ಟ ರಕ್ಷಣ ದುಷ್ಟ ಶಿಕ್ಷಣ ಅವನಿಂದ ನಿತ್ಯವೂ ಆಗುತ್ತಿರುತ್ತದೆ. ಆತನು ಸ್ವಭಕ್ತನಾದ ವೈದ್ಯನಾಥನನ್ನು ರಕ್ಷಿಸಿದ್ದನು. ರಾಮೇಶ್ವರನು ಶ್ರೀ ರಾಮಚಂದ್ರನಿಗೆ ಅನುಗ್ರಹ ಮಾಡಿದವನು, ರಾಮನಿಂದ ಸ್ಥಾಪಿಸಲ್ಪಟ್ಟವನು, ಪ್ರೇಯಃ ಶ್ರೇಯಃ ಪ್ರದಾತನು. ದೇವ ಶೈಲ ಸಮೀಪಸ್ಥನಾದ ಘುಶ್ಮೇಶ್ವರನು ಘುಶ್ಮಾನಂದಕರನು, ಸರೋವರದಲ್ಲಿ ಅವಿರ್ಭವಿಸಿದವನು. ಘುಷ್ಮೆಯ ಪುತ್ರನನ್ನು ಅವಳ ಭಕ್ತಿಗೆ ಮೆಚ್ಚಿ ಕೊಲ್ಲದೆ ಬಿಟ್ಟದ್ದರಿಂದ ಅವನು ಘುಶ್ಮೇಶ್ವರನಾದನು. ತದಾರಾಧನೆ ಸರ್ವೇಷ್ಟಪ್ರದವು.

ಈ ತೀರ್ಥಕ್ಷೇತ್ರಯಾತ್ರೆಗಳು ಆರೋಗ್ಯಕರ, ಭಾವೈಕ್ಯಕರ, ಲೋಕಜ್ಞಾನದಾಯಕ, ದಾನಬುದ್ಧಿ ಪ್ರಚೋದಕ. ಪ್ರವಾಸ ಸುಖದಾಯಕ, ಭಾರತ ಪರಿಚಾಯಕ, ಸಾಂಸ್ಕೃತಿಕ ಪರಂಪರಾ ಜ್ಞಾನವನ್ನು ಊರ್ಜಿತಗೊಳಿಸಿ ಜನರಲ್ಲಿ ಭ್ರಾತೃಭಾವವನ್ನು ಉಂಟು ಮಾಡುವ ಸಾಮಾಜಿಕ ದಿವ್ಯೌಷಧ ಮತ್ತು ಶಿವಬುದ್ಧಿ (ಸರ್ವೋದಯ ಬುದ್ಧಿ) ಪ್ರೇರಕ. ನಮ್ಮ Tourist ಪ್ರವಾಸಿ ಇಲಾಖೆ ಈ ಫಲಗಳುಂಟಾಗುವಂತೆ ವ್ಯವಸ್ಥೆಮಾಡಿದೆಯೇ? ಅವ್ಯವಸ್ಥೆಯು ಏತದ್ವಿರುದ್ಧ ಪರಿಣಾಮಕಾರಿಯಾದೀತು!

ಶ್ರೀ ಧರ್ಮಸ್ಥಲ ಮಂಜುನಾಥೇಶ್ವರನೀಗ ಸರ್ವಲಿಂಗ ಪ್ರತಿನಿಧಿ. ಗೋಕರ್ಣವನ್ನು ದಕ್ಷಿಣ ಕಾಶಿಯೆಂಬುದುಂಟು. ಧರ್ಮಸ್ಥಲವು ಈ ಕಾಶೀದ್ವಯ ಪ್ರತಿನಿಧಿಯಾಗುತ್ತಿರುವುದು ದಾಕ್ಷಿಣಾತ್ಯರ ಮೇಲಿನ ಶಿವಾನುಗ್ರಹ.

ಸರ್ವ ಪ್ರಾಣಿಗಳ ಹೃದಯದಲ್ಲಿರುವವನು ಈಶ್ವರ, ಪುರುಷೋತ್ತಮ, ಉತ್ತಮ ಪುರುಷ (ಅಹಂ ಬ್ರಹ್ಮಾಸ್ಮಿ, ಅಹಂ ಶಿವೋಽಸ್ಮಿ ಎಂಬ ಆತ್ಯಂತಿಕ ಪ್ರಜ್ಞೆಯ ಲಕ್ಷ್ಯಾರ್ಥ) ಸಂಕೇತ; CENTRAL GENERATOR OF ALL ENERGY- ಮಲ್ಪೆ ಮತ್ತು

ಧರ್ಮಸ್ಥಳಗಳಲ್ಲಿರುವ ಲಿಂಗಗಳು ಉಲ್ಕಾಪಾತದಿಂದಾವುಗಳೆಂಬ ಐತಿಹಾಸಿಕತೆಯ ದೆಸೆಯಿಂದ ಅವುಗಳು ಜ್ಯೋತಿರ್ಲಿಂಗತ್ವದ ಪುರಾಣೇತರ ಸಂಕೇತಗಳು ಎನ್ನಬಹುದು. ಸೃಷ್ಟಿಕರ್ತನೇ ಲಯಸ್ಥಲ, ಮುಕ್ತಿಸ್ಥಲ. ಈ ಸಂವರ್ಗ ವಿದ್ಯೆಯು ಉಪನಿಷದುಕ್ತ ವಿಶ್ವಸಿದ್ಧಾಂತ ಮತ್ತು ವಿಶ್ವದ ವಿಜ್ಞಾನಿಗಳ ೧೮ ವಿಶ್ವಸಿದ್ಧಾಂತಗಳಲ್ಲಿ ಅತ್ಯಂತ ಶ್ರದ್ಧೇಯ. ಧರ್ಮವು ಅರ್ಥ–ಕಾಮ–ಮೋಕ್ಷಗಳ ಸಾಧನ; ಅರ್ಥಾತ್ ಶಿವಜ್ಯೋತಿ: ಸ್ಮಾರಕ. ಧರ್ಮಸ್ಥಲದ ಅನ್ವರ್ಥಕತೆಯು "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ'' ಎಂಬ ಸಂದೇಶವನ್ನು ಬೀರಬಲ್ಲುದು, ಸಮನ್ವಯದಿಂದ ಸಾಮರಸ್ಯಕ್ಕೇರಿಸಬಲ್ಲುದು. (ಹಾಲಿಗೆ ಹಾಲು ಸೇರಿದಂತೆ) ಲಿಂಗ ಸಂಕೇತವು ಸರ್ವಾಲಿಂಗನ ದ್ಯೋತಕ. ಅದರಿಂದಲೇ ಶಿವನು (ಶುಭ, ಆತ್ಯಂತಿಕ ಮಂಗಲ) ಲಿಂಗಮುಖೇನ ಪ್ರಖ್ಯಾತನಾದನೆನ್ನಬಹುದು. ಶಿಲ್ಪ ಶಾಸ್ತ್ರದಲ್ಲಿಯ "ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ" ಎಂಬ ಶ್ಲೋಕವು (ಲಿಂಗ–ಸ್ಥಾಣು–ಸ್ತಂಭ–ಅಚಲತ್ವ ಸಂಕೇತ ಎಂಬುದನ್ನು ಸೂಚಿಸುವುದರಿಂದ) ಶಾಸನಗಳಲ್ಲಿ ಅನೇಕ ಸಲ ಮಂಗಲ ಶ್ಲೋಕವಾಗಿ ಬರೆಯಲ್ಪಟ್ಟಿದೆ. ಈ ಶ್ಲೋಕದ ಶಬ್ದಾರ್ಥ ಸೌಂದರ್ಯವನ್ನು ಅನುವಾದಿಸುವವನಿಗೆ ಎಂಟೆದೆ ಬೇಕು.

ಎಲ್ಲ ಲಿಂಗಗಳೂ ಒಂದೇ, ಅವುಗಳಲ್ಲಿಯ ತಾರತಮ್ಯ ಕವಿ ಕಲ್ಪಿತ. ಜಗತ್ತೇ ಲಿಂಗ (ಚಿಹ್ನ) ಮಾತ್ರ ವಿವರ್ತ. ವಾಚಕರು ಕ್ರಿ.ಶ ೧೯೧೦ರಲ್ಲಿ ಶ್ರೀರಂಗದಲ್ಲಿ ಮುದ್ರಿತವಾದ ಶ್ರೀಮದಯ್ಯಣ್ಣ ದೀಕ್ಷಿತಕೃತ "ವ್ಯಾಸತಾತ್ಪರ್ಯ ನಿರ್ಣಯ" ಎಂಬ ಗ್ರಂಥವನ್ನು ಪರಾಮರ್ಶಿಸಿ ನಿರ್ಣಯಿಸಲಿ; ಶ್ರೀ ಅರವಿಂದರ ಸಮಗ್ರಾದ್ವೈತವನ್ನು ಅಭ್ಯಸಿಸಲಿ. ಇನ್ನು ಮುಂದೆ ನಾಲ್ಕನೆಯದಾದ ಕೋಟಿರುದ್ರ ಸಂಹಿತೆ ಪ್ರಾರಂಭವಾಗುವುದು.

## ಜ್ಯೋತಿರ್ಲಿಂಗಗಳೂ ಉಪಲಿಂಗಗಳೂ

| ಜ್ಯೋತಿರ್ಲಿಂಗ | ಉಪಲಿಂಗ |
|---|---|
| ೧ ಸೋಮೇಶ್ವರ | ೧ ಅಂತಕೇಶ್ವರ (ಭೂ–ಸಮುದ್ರ ಸಂಗಮದಲ್ಲಿ) |
| ೨ ಮಲ್ಲಿಕಾರ್ಜುನೇಶ್ವರ | ೨ ರುದ್ರೇಶ್ವರ (ಭೃಗು ಕಕ್ಷದಲ್ಲಿ) |
| ೩ ಮಹಾಕಾಲೇಶ್ವರ | ೩ ದುಗ್ಧೇಶ್ವರ (ನರ್ಮದಾ ತಟದಲ್ಲಿ) |
| ೪ ಓಂಕಾರೇಶ್ವರ | ೪ ಕರ್ದಮೇಶ (ಬಿಂದು ಸರೋವರದಲ್ಲಿ) |
| ೫ ಕೇದಾರೇಶ್ವರ | ೫ ಭೂತೇಶ್ವರ (ಯಮುನಾ ತಟದಲ್ಲಿ) |

| | |
|---|---|
| ೬ ಭೀಮಶಂಕರೇಶ್ವರ | ೬ ಭೀಮೇಶ್ವರ (ಸಹ್ಯಾದ್ರಿಯಲ್ಲಿ) |
| ೭ ನಾಗೇಶ್ವರ | ೭ ಭೂತೇಶ್ವರ (ಮಲ್ಲಿಕಾ ಸರಸ್ವತೀ ತಟದಲ್ಲಿ) |
| ೮ ರಾಮೇಶ್ವರ | ೮ ಗುಪ್ತೇಶ್ವರ |
| ೯ ಘುಷ್ಮೇಶ್ವರ | ೯ ವ್ಯಾಘ್ರೇಶ್ವರ |

ವಿಶ್ವೇಶ್ವರ, ತ್ರ್ಯಂಬಕ ಮತ್ತು ವೈದ್ಯನಾಥ ಎಂಬ ಜ್ಯೋತಿರ್ಲಿಂಗಗಳಿಗೆ ಉಪಲಿಂಗಗಳನ್ನು ಹೇಳಿಲ್ಲ.

## ಪುನರುಕ್ತಿ ಸಮೇತ ಹೇಳಿದ ಇತರ ಲಿಂಗಗಳು

ಕಾಶೀ ವಿಶ್ವೇಶ್ವರ, ಕೃತ್ತಿವಾಸೇಶ್ವರ, ತಿಲಭಾಂಡೇಶ್ವರ, ಸಂಗಮೇಶ್ವರ, ಭೂತೇಶ್ವರ, ನಾರೀಶ್ವರ, ಬಟುಕೇಶ್ವರ, ಪೂರ್ವೇಶ್ವರ, ಸಿದ್ಧನಾಥೇಶ್ವರ, ಮಾರೇಶ್ವರ, ಶೃಂಗೇಶ್ವರ, ವೈದ್ಯನಾಥ, ಜಪ್ಯೇಶ್ವರ, ಗೋಪೇಶ್ವರ, ರಂಗೇಶ್ವರ, ವಾಮೇಶ್ವರ, ನಾಗೇಶ್ವರ, ಕಾಮೇಶ್ವರ, ವಿಮಲೇಶ್ವರ, ವ್ಯಾಸೇಶ್ವರ, ಸುಕೇಶ್ವರ, ಭಾಂಡೇಶ್ವರ, ಹುಂಕಾರೇಶ್ವರ, ಸುರೋಚನೇಶ್ವರ, ಕುಮಾರೇಶ್ವರ, ಸಿದ್ಧೇಶ್ವರ, ಸೇನೇಶ್ವರ, ರಾಮೇಶ್ವರ, ಕುಂಭೇಶ್ವರ, ನಂದೀಶ್ವರ, ಪುಂಜೇಶ್ವರ, ಬ್ರಹ್ಮೇಶ್ವರ, ಸೋಮೇಶ್ವರ, ಭಾರದ್ವಾಜೇಶ್ವರ, ಶೂಲಟಂಕೇಶ್ವರ, ಮಾಧವೇಶ್ವರ, ನಾಗೇಶ್ವರ, ಭುವನೇಶ್ವರ, ಲೋಕೇಶ್ವರ, ಕಾಮೇಶ್ವರ, ಶಂಭುಲಿಂಗೇಶ್ವರ, ಗಂಗೇಶ್ವರ, ಶಕ್ರೇಶ್ವರ, ವಟೇಶ್ವರ, ಕಪಾಲೇಶ್ವರ, ವಕ್ರೇಶ್ವರ, ಧೌತಪಾಪೇಶ್ವರ, ಭೀಮೇಶ್ವರ, ಸೂರ್ಯೇಶ್ವರ, ನಂದೇಶ್ವರ, ನಾಕೇಶ್ವರ, ರಾಮೇಶ್ವರ, ವಿಮಲೇಶ್ವರ, ಕಂಟಕೇಶ್ವರ, ಧರ್ತುಕೇಶ್ವರ, ಚಂದ್ರೇಶ್ವರ, ಬಿಲ್ವೇಶ್ವರ, ಅಂಧಕೇಶ್ವರ, ಶರಣೇಶ್ವರ, ಕರ್ದಮೇಶ್ವರ, ಕೋಟೀಶ್ವರ, ಸಪ್ತೇಶ್ವರ, ಭದ್ರೇಶ್ವರ, ಚಂಡೀಶ್ವರ, ಚಿತ್ರಕೂಟೇಶ್ವರ, ಪಶುಪತೀಶ್ವರ, ಅತ್ರೀಶ್ವರ. ಇನ್ನು ಮುಂದೆ ಚಿತ್ರಕೂಟ ಸಮೀಪಸ್ಥ ಅತ್ರೀಶ್ವರನ ಕಥೆ ಪ್ರಾರಂಭವಾಗುತ್ತದೆ:–

ಸಪ್ತರ್ಷಿಗಳಲ್ಲಿ ಎರಡನೆಯವನಾದ ಅತ್ರಿಮುನಿಯು ಅನಸೂಯಾದೇವಿಯೊಡನೆ ತಪೋನಿರತನಾಗಿದ್ದನು. ಅವರಿಗೆ ಮಕ್ಕಳಿರಲಿಲ್ಲ. ಸಮಾಧಿಯಿಂದೆದ್ದು ಒಂದು ಸಲ ಅತ್ರಿಯು ನೀರು ಕೊಡೆಂದು ಹೆಂಡತಿಯನ್ನು ಕೇಳಿದನು. ಬರ ಬಂದ ಆ ಕಾಲದಲ್ಲಿ ಅವಳಿಗೆ ಎಲ್ಲೂ ನೀರು ಸಿಗಲಿಲ್ಲ. ಆಗ ಅವಳು ಗಂಗಾಧ್ಯಾನ ಮಾಡಿದಳು. ಗಂಗೆ ಪ್ರತ್ಯಕ್ಷಳಾಗಿ ನೀರನ್ನು ಕೊಟ್ಟಳು. ಅದನ್ನವಳು ಗಂಡನಿಗಿತ್ತಳು. ಅಂದಿನಿಂದ ಗಂಗಾ ತೀರ ನಿವಾಸಿಗಳಾದರು; ತಪಸ್ಸು ಮಾಡಿದರು; ರುದ್ರ ಶಂಭುವನ್ನು ಸಾಕ್ಷಾತ್ತಾಗಿ ಕಂಡರು. ಮಂದಾಕಿನಿ ಎಂಬ ಹೆಸರಿಂದ ಗಂಗೆ ಅವರ ತಪೋವನದಲ್ಲಿ ನೆಲೆಸಿದಳು. ಅತ್ರೀಶ್ವರ ಲಿಂಗ ರೂಪದಿಂದ ಶಿವ ಅಲ್ಲಿ ನೆಲೆಸಿದನು.

ಕಾಲಂಜರ ಗಿರಿಯಲ್ಲಿ ನೀಲಕಂಠೇಶ್ವರ ಲಿಂಗ; ರೇವಾ ತೀರದಲ್ಲಿ ಲಿಂಗಗಳು ಅಸಂಖ್ಯಾತ: ಆರ್ತೇಶ್ವರ, ಪರಮೇಶ್ವರ, ಸಿಂಹೇಶ್ವರ, ಶರ್ಮೇಶ್ವರ, ಪುಂಡರೀಕೇಶ್ವರ, ಮಂಡಪೇಶ್ವರ, ತೀಕ್ಷ್ಣೇಶ್ವರ, ಧುಂಧುರೇಶ್ವರ, ಶೂಲೇಶ್ವರ, ಕುಂಭೇಶ್ವರ, ಕುಬೇರೇಶ್ವರ, ಸೋಮೇಶ್ವರ, ಮಂಗಲೇಶ್ವರ, ಮಹಾಕಪೀಶ್ವರ, ನಂದಿಕೇಶ್ವರ ಎಂಬಿವು ಆ ನರ್ಮದ ತೀರದಲ್ಲಿಯ ಲಿಂಗಗಳು. ಮಹಾ ಕಪೀಶ್ವರ ಲಿಂಗವನ್ನು ಹನೂಮಂತ ಸ್ಥಾಪಿಸಿದನೆಂದು ಪ್ರಸಿದ್ಧ.

–೫೩–

# ಗೋವತ್ಸ ಜೀವನ ವ್ಯಾಖ್ಯಾನ

ರೇವೆಯ ಪಶ್ಚಿಮ ತೀರದಲ್ಲಿಯ ಕರ್ಣಿಕೀಪುರದ ಬ್ರಾಹ್ಮಣನ ಮನೆಯಲ್ಲಿದ್ದ ಗೋವಿಗೆ ತನ್ನ ವತ್ಸನನ್ನು ಯಜಮಾನನು ಹೊಡೆದದ್ದಕ್ಕಾಗಿ ಸಿಟ್ಟು ಬಂದಾಗ ಆ ವತ್ಸ (ಕರು) ಹೇಳಿದ ವೇದಾಂತ ಇಂತಿದೆ:

೧ ಮಾಡಿದ್ದನ್ನು ಪ್ರಾಣಿಗಳೂ ಮನುಷ್ಯರೂ ಭೋಗಿಸಬೇಕು.

೨ ನಗು ನಗುತ್ತ ಮಾಡಿದ್ದನ್ನು ಅಳು ಅಳುತ್ತ ಉಣ್ಣುತ್ತಾರೆ.

೩ ನಮಗೆ ನಮ್ಮಿಂದ ಭಿನ್ನರಾದ ಯಾರೂ ಸುಖ ದುಃಖಗಳನ್ನು ಕೊಡಲಾರರು.

೪ ಅವು ಪರದತ್ತವೆಂದು ತಿಳಿಯುವುದು ದುರ್ಬುದ್ಧಿಯ ಗುರುತು.

೫ ನಾನು ಮಾಡುತ್ತೇನೆಂಬುದು ಮಿಥ್ಯಾ (ವಿಪರ್ಯಸ್ತ) ಜ್ಞಾನ.

೬ ಆದ್ದರಿಂದ ಕರ್ತನಾದ ಕರ್ಮನು ಪೂಜ್ಯನು.

೭ ಎಲ್ಲರೂ ಕರ್ಮಬದ್ಧರಾದ್ದರಿಂದ ಅವರಾರೂ ಶೋಚನೀಯರಲ್ಲ.

೮ ಪ್ರಜೆಗಳೆಲ್ಲಾ ಕರ್ಮಾಧೀನರು; ಭೋಗ ಭೂಮಿ ಭಾರತ.

೯ ಭೋಗ (Experience) ಕ್ಷಯದಿಂದ ಮೋಕ್ಷ ಸಿದ್ಧಿ.

೧೦ ಮಾತಾಪಿತೃ ಪುತ್ರಾದಿ ಸಂಬಂಧಗಳೆಲ್ಲಾ ಅಯಥಾರ್ಥ ಜ್ಞಾನ ಜನ್ಯಗಳು.

೧೧ ಈ ಎಲ್ಲವೂ ಸ್ವಕಪೋಲ ಕಲ್ಪಿತ. ಇವೆಯೆಂದು ಭಾವಿಸಿದರೆ ಇರುತ್ತವೆ; ಇಲ್ಲವೆಂದು ಭಾವಿಸಿದರೆ ಇಲ್ಲವಾಗುತ್ತವೆ!

ನಂದಿಕೇಶ್ವರ ಲಿಂಗದ ಕೃಪೆಯಿಂದ ನರ್ಮದಾ ಸ್ನಾನವು ಗೋವಿಗೆ ಪಾಪಮೋಚಕವಾಯ್ತು. ಅದಕ್ಕೂ ಅದರ ಕರುವಿಗೂ ಅಂತ್ಯದಲ್ಲಿ ಮುಕ್ತಿ ದೊರಕಿತು.

–೫೪–

# ನಂದಿಕೇಶ್ವರನು ಮಾಡಿದ ಮೂಢಾಸುರ ವಧದ ಪಾಠ

ಓರ್ವ ತಪಸ್ವಿನಿಯ ಮಾನಭಂಗಮಾಡ ಹೊರಟು ಮೂಢಾಸುರನು ರುದ್ರನಿಂದ ಹತನಾದನು. ಏಕೆ? "ವಿಮೂಢಾ ನಾನು ಪಶ್ಯಂತಿ." "ಅನು ದರ್ಶನವಿಲ್ಲದೆ ಪ್ರವರ್ತಿಸುವವರು ಮೂಢರು. ಆತ್ಮಜ್ಞಾನವಿಹೀನರು ಮೂಢರು. ಪರಪ್ರತ್ಯಯನೇಯ ಬುದ್ಧಿಗಳು ಮೂಢರು. ವಿಚಾರಹೀನರು ಮೂಢರು. ಅಜ್ಞಾನಿಗಳು ಮೂಢರು" ಎಂದು ಪ್ರಸಿದ್ಧಿ. ಸಂಬಂಧ ಬಂಧವನ್ನು ಬಿಡಲಾರದೆ, ಕ್ಷಣಿಕೋದ್ರೇಕದಿಂದ ಬಿಟ್ಟು ಮತ್ತೆ ಕೂಡಿಕೊಳ್ಳಲಾರದವರು, ಅನುದರ್ಶನ ಮಾಡದವರು ದುಃಖಿಗಳು. ಅನುದರ್ಶನದಿಂದ ಅನುಸ್ಮೃತಿ, ಅನುಸ್ಮೃತಿಯಿಂದ ಪ್ರಪಂಚದ ಯಥಾರ್ಥ ಜ್ಞಾನ– ಅದರ ಆತ್ಯಂತಿಕ ಸ್ವರೂಪವು ಮೋಕ್ಷ. ಸಂಬಂಧತ್ಯಾಗಬಲ ಅವಿಚಲವಾಗಿದ್ದರೆ ಆಗ ಮಾತ್ರ ಆ ಪ್ರಕಾರ ಮಾಡಿ ಬಂಧ ಮುಕ್ತರಾಗಬಹುದು. ಪುನಃ ಪುನಃ ಅನುಭವಿಸುವುದು, ಅನುಭವವನ್ನು ಅರ್ಥ ಮಾಡಿಕೊಳ್ಳುವುದು ಅನುದರ್ಶನ. ಆ ಅನುದರ್ಶನದ ಪುನಃ ಪುನಃ ಸ್ಮರಣೆ ಅನುಸ್ಮೃತಿ. ಅನುಸ್ಮೃತಿಯಿಂದ ಅನುಸ್ಮೃತದಲ್ಲಿ ಒಂದಾನೊಂದು ದಿನ ಸಾತ್ಮ್ಯಭಾವ. ಸಾತ್ಮ್ಯಭಾವದ ಐಚ್ಛಿಕ ಆಗಮನವು ಸಹಜ ಸಮಾಧಿ ಅಥವಾ ಮುಕ್ತತೆ.

–೫೫–

# ಗೋಕರ್ಣೇಶ್ವರಾವತಾರ

ಶಿವಾತ್ಮಲಿಂಗವನ್ನೊಯ್ದು ರಾವಣನು ಗೋಕರ್ಣದಲ್ಲಿ ಅನಿವಾರ್ಯವಾಗಿ ನೆಲೆ ನಿಲ್ಲಿಸುವಂತಾದ ಕಥೆಯು ಸುಪ್ರಸಿದ್ಧ. ಬ್ರಹ್ಮ–ವಿಷ್ಣು ಮುಂತಾದ ದೇವತೆಗಳ ಹಿತಕ್ಕಾಗಿ ಶಿವ ಅಲ್ಲಿ ವಿಶಿಷ್ಟ ಶಕ್ತಿಯಿಂದ ನೆಲೆಸಿದನು. ದೇವತೆಗಳು ಯಾವಾಗಲೂ ಸಜ್ಜನರಿಗೆ ಗೃಹ ರಕ್ಷಕ ದಲದಂತಿರುವವರು. ಮಾಘ ಕೃಷ್ಣ ಚತುರ್ದಶಿಯು ಶಿವಾರ್ಚನೆಗಲ್ಲಿ ಪ್ರಶಸ್ತ. ಗೋಕರ್ಣೇಶ್ವರನು ಅಸ್ಪೃಶ್ಯರಿಗೂ ಸ್ಪೃಶ್ಯ. ಶಿವರಾತ್ರಿಗೆ ಹೋಗಿ ನೋಡಿರಿ.

ಅಲ್ಲೊಬ್ಬ ಹೊಲೆತಿಯಿದ್ದಳು. ಅವಳು ಪೂರ್ವ ಜನ್ಮದಲ್ಲಿ ಬ್ರಾಹ್ಮಣ ಪುತ್ರಿಯಾಗಿದ್ದಳು. ಅವಳ ಹೆಸರು ಆಗ ಸೌಮಿನಿ. ಅವಳು ಬ್ರಾಹ್ಮಣನೊಬ್ಬನಿಗೆ ಮದುವೆಯಾಗಿ ಕೆಲ ಕಾಲಾ ನಂತರ ವಿಧವೆಯಾದಳು. ಆಮೇಲೆ ಕೆಲ ಕಾಲ ಸಂದ ಮೇಲೆ ಅವಳು ವ್ಯಭಿಚಾರಿಣಿಯಾದಳು. ಸಮಾಜ ಅವಳನ್ನು ಬಹಿಷ್ಕರಿಸಿತು. ಆಗ ಅವಳು ಶೂದ್ರನೊಬ್ಬನನ್ನು ಕೂಡಿ ಕೊಂಡು ಮಾಂಸಾದ್ಯಾಹಾರ ಭಕ್ಷಿಕೆಯಾಗಿ ಹೆಂಡ ಕುಡಿದು ಒಂದು ದಿನ ಗೋವತ್ಸವೊಂದನ್ನು ಕಡಿದಳು. ಕುರಿಗಳ ನಡುವೆ ಇದ್ದ ಅದನ್ನು ಕೊಂದ ಅವಳಿಗೆ ಆ ಮೇಲೆ ತಾನು ಮಾಡಿದ್ದು ತಪ್ಪೆಂದು ಗೊತ್ತಾಯಿತು. ಆಗ ಅವಳು “ಶಿವ ಶಿವ” ಎಂದು ಪ್ರಲಪಿಸಿದಳು. ಆದರೂ ಅದರ ಮಾಂಸದ ಅಡಿಗೆ ಮಾಡಿ ಉಂಡಳು. ಅದಕ್ಕಾಗಿ ಅವಳು ಸತ್ತ ಮೇಲೆ ಹೊಲೆತಿಯಾಗಿ ಹುಟ್ಟುವಂತೆ ಯಮನು ವ್ಯವಸ್ಥೆ ಮಾಡಿದನು. ಅವಳಾಗ ಹುಟ್ಟು ಕುರುಡಿಯಾಗಿ ಹುಟ್ಟಿದಳು; ಮಾತಾಪಿತೃ ಹೀನೆಯಾದಳು. ಕುಷ್ಠ ರೋಗಿಣಿಯಾದ ಅವಳನ್ನಾವನೂ ಮದುವೆ ಮಾಡಿಕೊಳ್ಳಲಿಲ್ಲ. ಚಾಂಡಾಲರೆಂಜಲನ್ನುಂಡು ದಿನಗಳೆಯುತ್ತಿದ್ದಳು. ಪುಣ್ಯಾತ್ಮರನ್ನಾಕೆ ಬೇಡುತ್ತಾ ಹೋದಾಗ ಅವರಲ್ಲೊಬ್ಬನು ಅವಳಿಗೆ ಬಿಲ್ವ ಮಂಜರಿಯನ್ನು ಕೊಟ್ಟನು. ಅದು ತಿನ್ನುವ ವಸ್ತುವಲ್ಲವೆಂದು ಅವಳು ಎಸೆದಾಗ ಅದು ಶಿವಲಿಂಗದ ತಲೆಯ ಮೇಲೆ ಬಿದ್ದಿತು. ಅಲ್ಲೇ ಅವಳಿಗೆ ಚತುರ್ದಶ್ಯುಪವಾಸ ಅನಿವಾರ್ಯವಾಗಿ ಆಯಿತು. ಅಲ್ಲಿಂದ ಊರಿಗೆ ಮರಳುವಾಗ ಅವಳು ಸುಸ್ತಾಗಿ ಸತ್ತಳು. ಆಗ ಅವಳ ಜೀವಾತ್ಮವನ್ನು ಶಿವಗಣಗಳು ಶಿವಲೋಕಕ್ಕೊಯ್ದುವು.

ಇದು ಅಜಾಮಿಳನ ಕಥೆಗೆ ಸರಿಸಮನಾದದ್ದು. ಆದ್ದರಿಂದ ಇದು ಪಾಪ ಸಮರ್ಥನೆಯಲ್ಲ. ಪಾಪ (ಭ್ರಷ್ಟಾಚಾರ) ಪಾಪವೇ. ಅದಕ್ಕೆ ದಂಡನೆ ತಪ್ಪದು. ಆದರೆ

ದಂಡನೆಯು ಅನಂತವಲ್ಲ, ನಿತ್ಯ ನರಕವಾಸವಲ್ಲ. ನಿತ್ಯ ನಾರಕಿಗಳು ಇರುವ ವೇದಾಂತವು ವೇದಾಂತವೇ ಅಲ್ಲ. ಏಕೆಂದರೆ ಅಲ್ಲಿ ನಿತ್ಯ ನಿರಾಶಾಭಾವದ ಸಮರ್ಥನೆ ಇರುತ್ತದೆ. ಅದು ಅನಾರ್ಯ, ಅವೈದಿಕ, ಅಹಿಂದು. ಕ್ರೈಸ್ತರಲ್ಲಿ ಕಡುಪಾಪಿಗಳು ದೇವರ ತೀರ್ಮಾನದಂತೆ ನಿತ್ಯನಾರಕಿಗಳಾಗುವ ಆತ್ಯಂತಿಕ ನಿರಾಶಾವಾದವಿದೆ. ಇಸ್ಲಾಮಿನಲ್ಲಿ ಅಲ್ಲಾ ಅಪ್ಪಣೆ ಮಾಡಿ ಆತ್ಮವೊಂದಕ್ಕೆ ಇರುವ ಅಮರತ್ವವನ್ನು ತೆಗೆದು ಹಾಕಿ ಇನ್ನೆಂದೂ ದೊರಕದಂತೆ ಮಾಡಬಹುದು ಎಂದಿದೆ. ಆದುದರಿಂದ ಭಾರತೀಯತೆಯ ಸಾರವಾದ ಪಶ್ಚಾತ್ತಾಪದಗ್ಧವೂ ಸರ್ವ ಶಿವ ಪ್ರಜ್ಞೋದಯ ಸಂಪನ್ನವೂ ಆದರೆ, ಪಾಪಿಷ್ಠ ಜೀವಾತ್ಮ ಕೂಡಾ ಪಾಪಾದಿ ಸರ್ವಬಂಧಗಳಿಂದ ಮುಕ್ತವಾಗಬಹುದು ಎಂಬುದನ್ನು ಗೋಕರ್ಣ ಚಾಂಡಾಲೀ ಕಥೆಯು ಬೋಧಿಸುತ್ತದೆ. ಅಸ್ಪೃಶ್ಯತೆ ಸರ್ವಪಾಪಾತ್ಮ ಸಾಧಾರಣ. ಅದರಲ್ಲಿ ವರ್ಣಭೇದವಿಲ್ಲ. ಜಾತಿ ಭೇದವಿಲ್ಲ. ಅದಕ್ಕೂ ಪರಿಹಾರವಿದೆ.

**"ಹಿಂದು ಸಿಂಧು ತಾ ಮಹಾಭಾವವೋ ಸತ್ಯ ಧರ್ಮಸಾರ**
**ಬಂಧು ದೇವ ಯಾವಾಗಲೂನು ಪ್ರಜ್ಞೋದಯ ಪ್ರಸಾರ"**
**ಎಂದು ಮನಕೆ ಬಂದಂತೆ ಮಾಡಿದರೆ ರುದ್ರ ದಂಡನಾರ್ಹ**
**ಒಂದು ಮಗುವು ಸಹ ಹಕ್ಕಿಯಂತೆ ತಾನಾಗುವುದು ನಿಬರ್ಹ ॥೧॥**
**ಆದರೂನು ಆ ನಿಬರ್ಹತೆಗೆ ಕಾಲ ಪ್ರಮಾಣವುಂಟು**
**ನಾದ ಬಿಂದು ಕಲೆಯೊಡೆಯನಿಗೂ ಈ ಜಗತ್ತಿಗೂ ನಂಟು।**
**ಆದ್ದರಿಂದ ತನ್ನಂಶದಂತಿರುವ ಪಾಪಿಯನ್ನು ಎತ್ತಿ**
**ಉದ್ಧರಿಸುವನ ಜ್ಞಾನ ಕಾನನ ಕುಠಾರನಾಗಿ ಮುತ್ತಿ ॥೨॥**

ಆದ್ದರಿಂದ ಮಹಾಬಲೇಶ್ವರನಿಗೆ ಅಸ್ಪೃಶ್ಯತೆಯಿಲ್ಲ. ಅಸ್ಪೃಶ್ಯಾಚಾರಿಗಳ ಸಂಪರ್ಕದಿಂದ ಅಸ್ಪೃಶ್ಯನಾಗದೆ ಅವರನ್ನು ಸ್ಪೃಶ್ಯಶೀಲರನ್ನಾಗಿ ಮಾಡುವವನೇ ಮಹಾಬಲ!

ಬಹಿಷ್ಕಾರವೆಂದರೇ ಅಸ್ಪೃಶ್ಯತೆ. ಅದು ಇಂದಿನ ಜೀವಾವಧಿ ಶಿಕ್ಷೆಗೆ ಸಮನಾದುದು. ರಾಜಪುರುಷರು ಧರ್ಮ ವಿಮುಖರಾದ ಕಾಲದಲ್ಲಿ ರಾಜೇತರ ವರ್ಣೀಯರು (ವೃತ್ತಿಪರರು) ಸ್ವಸ್ವಧರ್ಮ ಪಾಲನೆಗೆ ವಿಘ್ನ ಮಾಡಬಂದವರಿಗೆ ಸಂಘಟಿತರಾಗಿ ಕೊಟ್ಟ ದೀಕ್ಷೆ ಅದು. ಅಸ್ಪೃಶ್ಯ ಧರ್ಮ ಅಸ್ಪೃಶ್ಯ. ಹಿಂಸಾ ಪರಾಯಣತೆ ಪರಮಾಧರ್ಮ. ಹಿಂಸೆ ಮಾನಸಿಕ, ಕಾಯಿಕ ಮತ್ತು ವಾಚಿಕ. ಆದರೀಗ ಪ್ರಚ್ಛನ್ನಾಸ್ಪೃಶ್ಯರು ಪ್ರಕಟಾಸ್ಪೃಶ್ಯರನ್ನು ಕೀಳ್ಗಾಣುತ್ತಾರೆ; ಹಾಗೇ ಪ್ರಕಟಾಸ್ಪೃಶ್ಯರು ಪ್ರಚ್ಛನ್ನಾಸ್ಪೃಶ್ಯರನ್ನು ಮೇಲ್ಜಾತಿಯವರೆಂದು ದ್ವೇಷಿಸುತ್ತಾರೆ. ಇದು ಶಿವಮಹಿಮೆಯಲ್ಲ. ಕಲಿ ಮಹಿಮೆ! ಅಧರ್ಮದ ಅಭ್ಯುತ್ಥಾನ ಮತ್ತು ಧರ್ಮದ ಪತನ. ಇಂಥ ದುರಾಚಾರಗಳೆಲ್ಲವುಗಳಿಗೂ ಅಸ್ಪೃಶ್ಯತಾಚಾರವೊಂದು ಪ್ರಬುದ್ಧ ಪರಿಹಾರ. ಆದರಿದು ಆನುವಂಶಿಕತೆಗೆ ಅವಿನಾಭಾವಿಯಲ್ಲ. ಜಾತಿ

ಚಾಂಡಾಲೆಯು ಚಾಂಡಾಲೆಯಲ್ಲ. ನೀತಿ ಚಾಂಡಾಲೆಯು ಚಾಂಡಾಲಿ. ನೀತಿಯು ಅಹಿಂಸೆ, ಸತ್ಯ, ಅಕ್ರೋಧ, ಶೌಚ, ಇಂದ್ರಿಯ ನಿಗ್ರಹ ಎಂಬ ಕಟ್ಟುನಿಟ್ಟಾದ ಪಂಚಾಂಗದ ಮೇಲೆ ನಿಂತಿರುವಂಥವು. ಇವು ಅಷ್ಟ ಆತ್ಮ ಗುಣಾಂತರ್ಗತ. ಯಾರೂ ಯಾವಾಗಲೂ ಒಳ್ಳೆಯವರಾಗಿರುವುದು ದುಃಸಾಧ್ಯ. ಹಾಗೇ ಎಲ್ಲರೂ ಯಾವಾಗಲೂ ಕೆಟ್ಟವರಾಗಿರುವುದೂ ಅಸಾಧ್ಯ. ಆದ್ದರಿಂದ ನ್ಯಾಯಾಧೀಶರಿಂದ ಕೃತ್ಯಾಕೃತ್ಯ ವಿವೇಕದಿಂದ ಸಮಾಜ ಹಿತಕ್ಕಾಗಿ ಅಸ್ಪೃಶ್ಯತಾ ದಂಡವನ್ನು ತತ್ಪಾತ್ರರಿಗೆ ವಿಧಿಸುವಂತೆ ವ್ಯವಸ್ಥೆಯಾಗತಕ್ಕದ್ದು ಚಾಂಡಾಲೀ ಕಥಾ ಪಾಠ. "ದುರ್ಬಲರು ಸುರಕ್ಷಿತತೆಯನ್ನು ಕೊಂಡುಕೊಳ್ಳಲಾರರು." ಬಲಿಷ್ಠರು ಅದನ್ನು ಅವರಿಗೆ ಕೊಡಬೇಕಾಗುತ್ತದೆ. ಶಿವಬಲವಿಲ್ಲದಿದ್ದರೆ ಪಶ್ಚಾತ್ತಾಪ–ಪ್ರಾಯಶ್ಚಿತ್ತ ಕಷ್ಟಗಳಿಂದ ಸವೆದ ಹೊಲತಿಗೆ ಶಿವಲೋಕದ ಶಾಂತಿ ಸಿಕ್ಕುತ್ತಿರಲಿಲ್ಲ.

ಶಿವ ಮಹಾಬಲನಲ್ಲವಾಗಿದ್ದರೆ ಬಹಿರಾಡಂಬರದ ಭಕ್ತರ ಕೈಯೇ ಮೇಲಾಗಿ ಒಲೆತಿಯ ಗತಿ ನಿತ್ಯ ನರಕಾನುಭವವಾಗಿ ಹೋಗುತ್ತಿತ್ತು. ಆದ್ದರಿಂದ ಶಿವನು ಸರ್ವಶಕ್ತ. ಯಾವಾಗಲೂ ಗೆದ್ದೇ ಗೆಲ್ಲುವ ಎತ್ತು ಎಂದರೆ ವೃಷ=ಧರ್ಮ. ತಾತ್ಕಾಲಿಕ ಸೋಲುಗಳು ಅನಭಿಜ್ಞೇಯ. ಆದುದರಿಂದ "ಗೆದ್ದೆತ್ತಿನ ಬಾಲವನ್ನು ಹಿಡಿದು ಸಾಗುವುದು ಸಂದರ್ಭಾನುಸಾರವಾಗಿ ಪುರುಷಾರ್ಥ ಸಾಧನೆಯ ಸಾಮಾನ್ಯ ನಿಯಮ. ಪುರುಷನ ಪುರಿಯು ವಿಶ್ವದಷ್ಟಗಲವಾಗಿರಬೇಕು ಅಷ್ಟೇ.

ಅಸ್ಪೃಶ್ಯತಾ ನಿವಾರಣೆಯಿಂದಲೇ ಇಂದು ಅಸ್ಪೃಶ್ಯಗುಣ ಸಂಪನ್ನತೆ ಅಧಿಕವಾಗುತ್ತಿದೆ. "ದೃಶ್ಯರೆಲ್ಲರೂ ಸಂದರ್ಭಶಃ ಸ್ಪೃಶ್ಯರು" ಎಂದು ತಿಳಿಯದ ವೈದಿಕತೆ ಪೌರಾಣಿಕತೆಯಿಂದ ಸಂಸ್ಕಾರವಾಯಿತು. ಗೋಕರ್ಣ ಅದಕ್ಕೆ ಮೂಲ ಆಕರವಾದದು ಕರ್ಣಾಟಕಕ್ಕೆ ಹೆಮ್ಮೆಯ ವಿಷಯ. ಗೋಕರ್ಣೇಶ್ವರ ಮಾಹಾತ್ಮ್ಯವು ಈ ಪ್ರಕಾರ ಪ್ರಸ್ತುತ ಕಾಲದ ಸಮಾಜ ಸುಧಾರಣೆಗೆ ಆದಿಮೂಲ.

–೫೬–

# ಮಿತ್ರಸಹರಾಜನ ಕಥೆ

ಭುಜಬಲ ಪರಾಕ್ರಮಿಯೆನ್ನಿಸಿದ್ದ ಮಿತ್ರಸಹರಾಜನ ರಾಣಿ ಮದಯಂತಿ. ನಲನಿಗೆ ದಮಯಂತಿಯಂತೆ ಅವನಿಗವಳಿದ್ದಳು. ಒಂದು ಸಲ ರಾಜನು ಮೃಗ ಬೇಟೆಗೆ ಸೈನ್ಯ ಸಮೇತನಾಗಿ ಹೋದನು. ಮೃಗಗಳೊಂದಿಗೆ ಆ ಕಾಡಿನಲ್ಲಿದ್ದ ಕಮಠನೆಂಬ ರಾಕ್ಷಸನನ್ನೂ ಅವನು ಸಂಹರಿಸಿದನು. ಅದರಿಂದ ಕ್ರುದ್ಧನಾದ ರಾಕ್ಷಸ ಸೋದರನು ಮಾಯಾ ರೂಪದಿಂದ ಅರಸನಿದ್ದಲ್ಲಿಗೆ ಹೋದನು. ನಿನ್ನ ಸೇವೆಗೆ ಬಂದೆನೆಂದು ಹೇಳಿದ ಅವನನ್ನು ರಾಜನು ಅಡಿಗೆಯ ಭಟ್ಟನನ್ನಾಗಿ ನಿಯಮಿಸಿಕೊಂಡನು. ಕೆಲ ಕಾಲವಿದ್ದು ಅನಂತರ ರಾಜನು ತನ್ನ ರಾಜಧಾನಿಗೆ ಹಿಂದಿರುಗಿದನು.

ಆಗ ಒಂದು ದಿನ ಅವನ ಮನೆಗೆ ವಸಿಷ್ಠನು ಅತಿಥಿಯಾಗಿ ಬಂದಿದ್ದನು. ಈ ಕಪಟ ನಳನು ಅವನಿಗೆ ಮನುಷ್ಯ ಮಾಂಸವನ್ನು ಬೆರೆಯಿಸಿ ಅಡಿಗೆ ಮಾಡಿ ಬಡಿಸಿದನು. ಎಲೆಯ ಮೇಲೆ ಹಾಕಿದ ಆ ನರಮಾಂಸಾನ್ನವನ್ನು ಗುರುತಿಸಿದ ವಸಿಷ್ಠನು ಸಿಟ್ಟಿನಿಂದ "ರಾಕ್ಷಸನಿಂದ ನರಮಾಂಸದ ಅಡಿಗೆ ಮಾಡಿಸಿ ಹಾಕಿದ್ದರಿಂದ ನೀನು ರಾಕ್ಷಸನಾಗು" ಎಂದು ಬಿಟ್ಟನು. ಮತ್ತೆ ಆಲೋಚಿಸಿ ಆ ಗುರುರಾಜನು ರಾಜನಿಗೆ ಕೊಟ್ಟಿದ್ದ ರಾಕ್ಷಸತ್ವದ ಶಾಪವನ್ನು ೧೨ ವರ್ಷಗಳಿಗೆ ಇಳಿಸಿದನು. ಮಿತ್ರಸಹ ಇದರಲ್ಲಿ ಯಾವ ಪಾತ್ರವನ್ನೂ ವಹಿಸದುದರಿಂದ ರೇಗಿ ಗುರುವಿಗೇ ಶಾಪ ಕೊಡಲು ಉದ್ಯುಕ್ತನಾದನು. ಆಗ ಪತಿವ್ರತೆಯಾದ ಮದಯಂತಿ ಅವನನ್ನು ತಡೆದಳು.

ಅಂದಿನಿಂದ ಮಿತ್ರಸಹನು ಕಾಡು ತಿರುಗುವ ಘೋರ ರಾಕ್ಷಸನಾದನು. ಅಲ್ಲಿ ಒಮ್ಮೆ ಒಬ್ಬ ಮುನಿ ಕುಮಾರನನ್ನು ತಿಂದನು. ಆ ಮುನಿಕುಮಾರನ ತಾಯಿಯೂ ತಂದೆಯೂ ದುಃಖದಿಂದ ಬೆಂಕಿಯಲ್ಲಿ ಹಾರಿಕೊಳ್ಳುವ ಮೊದಲು ತಾಯಿಯ ಬಾಯಿಯಿಂದ ಶಾಪ ಬಂತು. "ನಾರೀ ಸಹವಾಸ ಮಾಡಲು ಹೋದರೆ ನಿನಗೆ ಕೂಡಲೇ ಮರಣ ಬರಲಿ" ಎಂದು. ಅಷ್ಟು ಹೇಳಿ ಅವಳು ಚಿತೆಯನ್ನು ಹೊಕ್ಕಳು. ಆ ರಾಜನು ಹಾಗೇ ೧೨ ವರ್ಷಗಳನ್ನು ಕಳೆದು ವಸಿಷ್ಠ ಶಾಪಮುಕ್ತನಾಗಿ ರಾಜಧಾನಿಗೆ ಹಿಂದಿರುಗಿದನು; ಆದರೆ ಅಲ್ಲಿ ಬ್ರಾಹ್ಮಣ ಪತ್ನಿಯ ಶಾಪದಿಂದ ತನ್ನ ಹೆಂಡತಿಯ ಹತ್ತಿರ ಹೋಗದಾದನು. ಹೋದ ಕೂಡಲೇ ಬ್ರಹ್ಮಹತ್ಯೆಯ ಪಾಪ ಬರುವುದಕ್ಕಂಜಿ ಮದಯಂತಿಯು ಗಂಡ ಸಾಯದಿರಲೆಂದು ಅವನನ್ನು ದೂರದಿಂದಲೇ

ಸೇವಿಸತೊಡಗಿದಳು. ಅದರಿಂದ ನಿಷ್ಪುತ್ರ ರಾಜನು ಬೇಸತ್ತು ರಾಜ್ಯತ್ಯಾಗ ಮಾಡಿ ತಪಸ್ಸಿಗೆ ಹೋದನು. ಅಲ್ಲಿ ಗೌತಮ ಮಹರ್ಷಿಯ ಪಾದಗಳಿಗೆರಗಿ ತನ್ನ ಕಷ್ಟಗಳನ್ನು ಮಿತ್ರಸಹನು ಹೇಳಿಕೊಂಡನು. ಅವನು ಗೋಕರ್ಣಕ್ಕೆ ಹೋಗಿ ತಪಸ್ಸನ್ನು ಮಾಡಲು ಉಪದೇಶಿಸಿದನು. ಅದರಂತೆ ಮಿತ್ರಸಹ ಮಹಾರಾಜನು ಗೋಕರ್ಣಕ್ಕೆ ಹೋಗಿ ತಪಸ್ಸಿನಿಂದ ರುದ್ರಶಿವನನ್ನೊಲಿಸಿಕೊಂಡು ಬ್ರಾಹ್ಮಣ ಕುಮಾರನನ್ನು ಕೊಂದು ತಿಂದ ಮತ್ತು ಕೊಲ್ಲಿಸಿ ತಿನ್ನಿಸ ಹೋದ ಬ್ರಹ್ಮಹತ್ಯಾ ದೋಷದಿಂದ ಮುಕ್ತನಾಗಿ ಶಿವಲೋಕಕ್ಕೆ ತೆರಳಿದನು. ತಿಳಿಯದೆ ಮಾಡಿದ ತಪ್ಪು ಎಷ್ಟು ದೊಡ್ಡದಾದರೂ ಶಿವ ಅದಕ್ಕೆ ಸಣ್ಣ ಶಿಕ್ಷೆಯಷ್ಟನ್ನೇ ಕೊಟ್ಟು ಭಕ್ತರನ್ನು ಪಾಪ ಮುಕ್ತರನ್ನಾಗಿ ಮಾಡಿ ಕೈಲಾಸದಲ್ಲಿ ಅಮರತ್ವವನ್ನು ಕೊಡಿಸುವ ದಯಾಳು ಎಂಬ ಅಂಶ ಈ ವ್ಯಾಸ ಶಿಷ್ಯೋಕ್ತಿಯಿಂದ ತಿಳಿದು ಬರುತ್ತದೆ.

–೫೭–

# ಚಂದ್ರೋದ್ಧಾರ

ದಕ್ಷಬ್ರಹ್ಮನಿಗೆ ೨೭ ಜನ ಹೆಮ್ಮಕ್ಕಳಿದ್ದರು. ಅವರೇ ಅಶ್ವಿನೀ ಮುಂತಾದ ೨೭ ನಕ್ಷತ್ರಗಳು. ಆ ಎಲ್ಲ ಕನ್ಯೆಯರನ್ನೂ ದಕ್ಷನು ಚಂದ್ರನಿಗೆ ಮದುವೆ ಮಾಡಿಕೊಟ್ಟನು. ಚಂದ್ರನು ಅವರಲ್ಲಿ ರೋಹಿಣಿಯನ್ನು ಅಧಿಕತರವಾಗಿ ಪ್ರೀತಿಸತೊಡಗಿದನು. ಈ ಪಕ್ಷಪಾತದಿಂದಾದ ದುಃಖವನ್ನು ಉಳಿದ ಹೆಂಡಿರು ತಮ್ಮ ತಂದೆ ದಕ್ಷನಲ್ಲಿ ತೋಡಿಕೊಂಡರು. ದಕ್ಷನು ಹಾಗೆ ಪಕ್ಷಪಾತ ಮಾಡುವುದು ಅಧರ್ಮವೆಂದು ಚಂದ್ರನಿಗೆ ಬುದ್ಧಿ ಹೇಳಿದರೂ ಅವನು ಕೇಳಲಿಲ್ಲ. ಅದರಿಂದ ಕ್ರೋಧ ಸಂತಪ್ತನಾದ ದಕ್ಷನು "ನಿನಗೆ ಕ್ಷಯ ರೋಗ ಉಂಟಾಗಲಿ" ಎಂದು ಚಂದ್ರನಿಗೆ ಶಾಪಕೊಟ್ಟನು. ಅವನು ಅಂದಿನಿಂದ ಶಾಪದಿಂದ ಕ್ಷಯಿಸತೊಡಗಿದನು. ಇದು ಲೋಕಕ್ಕೆ ಅಹಿತವೆಂದು ಬ್ರಹ್ಮ ವಿಷ್ಣು ದೇವೇಂದ್ರಾದಿಗಳೂ ವಸಿಷ್ಠಾದಿ ದೇವರ್ಷಿಗಳೂ ದುಃಖ ಪಟ್ಟರೂ ಚಂದ್ರನ ದುಶ್ಚರಿತಗಳನ್ನು ಅವರು ಮರೆತಿರಲಿಲ್ಲ. ಅವುಗಳಲ್ಲಿ ಗಣ್ಯವಾದದ್ದು: ಒಮ್ಮೆ ಬೃಹಸ್ಪತಿಯ ಹೆಂಡತಿ ತಾರೆಯನ್ನು ಚಂದ್ರನು ಕದ್ದೊಯ್ದನು. ಬೃಹಸ್ಪತಿಗಾದ ಅವಮಾನವನ್ನು ಸಹಿಸದ ಅವನ ಅಣ್ಣ ಶುಕ್ರನ ಭಕ್ತರಾದ ದೈತ್ಯರು ದಕ್ಷಪಕ್ಷಪಾತಿಗಳಾಗಿದ್ದರೂ ಚಂದ್ರನನ್ನು ಶಿಕ್ಷಿಸದೆ ಬಿಟ್ಟ ದೇವತೆಗಳ ಮೇಲೆ ದಂಡೆತ್ತಿ ಬಂದರು. ಆಗ ಚಂದ್ರನು ತಪಸ್ಸು ಮಾಡತೊಡಗಿದನು. ಅದರಿಂದ ಪ್ರಸನ್ನನಾದ ಶಿವನು, "ಕೃಷ್ಣಪಕ್ಷದಲ್ಲಿ ಚಂದ್ರನಿಗೆ ಕ್ಷಯವಾಗಲಿ ಮತ್ತು ಶುಕ್ಲಪಕ್ಷದಲ್ಲಿ ಅವನಿಗೆ ವೃದ್ಧಿಯಾಗಲಿ" ಎಂದು ವರವನ್ನಿತ್ತು ಸಂತೋಷಪಡಿಸಿದನು.

ತಪಸ್ಸು ಒಂದು ಪ್ರಾಯಶ್ಚಿತ್ತ, ತಪ್ಪೊಪ್ಪಿಗೆ, ಕ್ಷಮಾಯಾಚನೆ, ಪಶ್ಚಾತ್ತಾಪ ಪೂರ್ಣತೆ– ಅದಕ್ಕೆ ಯಾರನ್ನು ಕುರಿತು ತಪಸ್ಸು ಮಾಡಲಾಗುವುದೋ ಆ ದೇವರೋ ಋಷಿಯೋ ಪರೀಕ್ಷಕರು, ನಿರ್ಣಾಯಕರು, ದಂಡ–ರಕ್ಷಣ ವಿಧಾತರು. ಅಪರಾಧ ಮತ್ತು ದಂಡಾಧಾನ ಎಂಬ ಶಾಸ್ತ್ರವಿಂದು ಈ ದೃಷ್ಟಿಯಿಂದ ಪುನರ್ವಿವೇಚನೆಗೊಳಪಡಬೇಕು. ಮನೋಜ್ಞರಲ್ಲದವರ ಮಹತ್ವಾರೋಹಣಕ್ಕೆ ಎಡೆ ಸಿಗುವ ಪ್ರಭುತ್ವದಲ್ಲಿ ಅಪಾತ್ರರೇ ಪಾತ್ರರಲ್ಲವೇ?

ಇಂದಿನ ಚಂದ್ರರು ಬಿಲಿಯನ್ ಡಾಲರ್ ಲಂಚತೆತ್ತಾದರೂ ಶಿವನನ್ನೊಲಿಸಿಕೊಂಡು ತಮ್ಮ ಬಾರಾಖೂನುಗಳನ್ನು ಮಾಫಿ ಮಾಡಿಸಿಕೊಳ್ಳಲು

"ಚಂದ್ರೋದ್ಧಾರ"ದ ಕಥೆ ಪ್ರೇರಿಸಬಹುದು. ಏಕೆಂದರೆ "ಸರ್ವಾನ್‌ಪುಚ್ಛವತೋ ಹಯಾ ಇತಿವದಂತ್ಯತ್ರಾಧಿಕಾರೇ ಸ್ಥಿತಾಃ" ನಮ್ಮ ಪ್ರಭುಗಳೆಲ್ಲರೂ ಶಿವಾತೀತ ದೃಷ್ಟಿಯಿಂದ "ಬಾಲ ಇದ್ದದ್ದೆಲ್ಲಾ ಕುದುರೆ" ಎಂದು ತಿಳಿದು ಕತ್ತೆಗಳಿಗೆ ಪ್ರಾಶಸ್ತ್ಯ ಕೊಟ್ಟು ಕುದುರೆಗಳನ್ನು ವಿದೇಶಗಳಿಗೆ ಓಡಿಸುತ್ತಾರೆ! ಅದರ ಫಲವಾಗಿಯೇ ಅಂದರೆ ಶಿವೇತರರ ಮಾಯೆಯಿಂದಲೇ ಮಹಾ ವಿಜ್ಞಾನ ಚಂದ್ರನು ಪ್ರತಿ ಹದಿನೈದು ದಿನಗಳಿಗೊಮ್ಮೆ ವಿದೇಶಕ್ಕೆ ಹೋಗಿ ಬ್ಯಾಂಕಿನಲ್ಲಿ ದುಡ್ಡಿಟ್ಟು ಬರುತ್ತಾನೆ. ಅವನ ಕೈ ಕೆಳಗಿನ ಕೆಲ ನೌಕರರಿಗೆ ಅನಾಸಕ್ತಿಯ ಉಪದೇಶ ಇಲ್ಲವೆ ಆತ್ಮಹತ್ಯೆಯ ಅನಿವಾರ್ಯತೆ. ಅರ್ಥಾಧಿಕಾರಗಳು ಶಿವತ್ವಕ್ಕೆ ಸಾಧನಗಳು – "ರಾಜಾ ಪ್ರತ್ಯಕ್ಷ ದೇವತಾ." ರಾಜನಿಂದು ಕೇಂದ್ರ ಸರಕಾರ, ಚಂದ್ರರಿಂದು ಶೋಷಕ ೧) ಅಧಿಕಾರಿಗಳು, ೨) ವರ್ತಕರು, ೩) ವರ್ತಕರನ್ನೆತ್ತಿ ಹಿಡಿಯುವ ಆಷಾಢಭೂತಿ ನಾಯಕರುಗಳು! ಆದ್ದರಿಂದ ಅಶಿವಾಭಿವೃದ್ಧಿ ಯೋಜನೆಗಳು ಬೆಳಗಾಗುವುದರೊಳಗೆ ಬಲಾತ್ಕಾರದಿಂದ ಆರೋಪಿತವಾಗಿ ಹೆಗ್ಗಣಗಳನ್ನು ಮನುಷ್ಯರನ್ನಾಗಿಯೂ ಮನುಷ್ಯರನ್ನು ಹೆಗ್ಗಣಗಳನ್ನಾಗಿಯೂ ಪರಿವರ್ತಿಸುವುವು.

## –೫೮–

# ಕುಮಾರಾಗಮನ–೨

ದೈತ್ಯರ ಆಳಿಕೆ ಪುನರಾಂಭವಾಯಿತು, ಚಂದ್ರಶೇಖರನಿಗಿದು ಗೊತ್ತು. ಚಂದ್ರನು ಎಷ್ಟಾದರೂ ದೇವತೆ. ಒಳ್ಳೆಯ ಮಾತಿಗೆ ಬಗ್ಗುವವನು. ಆದರೆ ದೈತ್ಯರು ಹಾಗಲ್ಲ, ಅವರು ಮಾಡಬಾರದ್ದನ್ನೇ ಜನರಿಂದ ಮಾಡಿಸುತ್ತಾರೆ.

ರತ್ನಮಾಲಾ ಪರ್ವತದಲ್ಲಿ ದೂಷಣನೆಂಬ ದೈತ್ಯ ರಾಜನು ಪ್ರವರ್ಧಮಾನನಾದನು. ಹಿಂದೆ ಹೇಳಿದಂತೆ ಅವನಿಗೆ ನೀತಿಯೇ ಅನೀತಿ, ಧರ್ಮವೇ ಅಧರ್ಮ. ಅವನು ದೇವತೆಗಳನ್ನು ಸೋಲಿಸಿದನು; ವೇದ, ಸ್ಮೃತಿ, ಸದಾಚಾರ ಪರರನ್ನು ಹಿಂಸೆಗೊಳಪಡಿಸಿದನು. ಪುಣ್ಯ ಸ್ಥಳಗಳಲ್ಲಿ ಪಾಪ ಮಾಡಿಸಿದನು. ಅವನ ಪ್ರಕಾರ ಬ್ರಹ್ಮವ್ರತಿಗಳಾದ ಬ್ರಾಹ್ಮಣರು ದುಷ್ಟರು, ಅವರ ಬುದ್ಧಿವಾದದಂತೆ ನಡೆದುಕೊಳ್ಳುವವರು ದಂಡ್ಯರು. ವೇದವು ಶಿವಧರ್ಮವಾದುದರಿಂದ ಅದು ತ್ಯಾಜ್ಯ.

ಆ ಹಿಂಸೆಗೊಳಗಾದ ಮೂಲ ಭಾರತೀಯ ವೈದಿಕ ವರ್ಗಗಳವರೆಲ್ಲರೂ ಶಿವಧ್ಯಾನವನ್ನು ಮಾಡತೊಡಗಿದರು. ಆ ಸಮಾಜ ಸೇವಕರಿಗೆ ಬೇರೆ ದಾರಿಯಿಲ್ಲವಾಯಿತು. ಆಗ ದೂಷಣನು ಭೀಷಣ ಸೈನ್ಯದಿಂದ ನ್ಯಾಯಪರರನ್ನು (ಧಾರ್ಮಿಕರನ್ನು) ಕೊಲ್ಲಲು ಬಂದನು. ಅಷ್ಟರಲ್ಲಿ ಗುಂಡಿಯೊಂದರೊಳಗಿನಿಂದ ಭೇರಿನಾದದೊಡನೆ ಮಹಾಕಾಲ ಶಿವನು ವಿಕಟಾಟ್ಟಹಾಸದಿಂದ ಎದ್ದು ಬಂದನು ಮತ್ತು ದೈತ್ಯರೆಲ್ಲರನ್ನೂ ಬಡಿದು ಹಾಕಿದನು. ಈತನೇ ಉಜ್ಜಯಿನಿಯ ಮಹಾಕಾಲ, ಕಾಲಭೈರವ, ಕ್ರೌಂಚ ಪರ್ವತಸ್ಥ ಸ್ಕಂದನ ಆತ್ಮಸ್ವರೂಪ (ಕದಂಬರ ಕಂಗವರ್ಮ) ದಾಕ್ಷಿಣಾತ್ಯ ಅರಸರ ಯುದ್ಧದೇವ. ೧೨ನೆಯ ಶತಮಾನದವರೆಗಿನ ಅಜಯ್ಯವೀರ ಇಲ್ಲಿ ಅವನೇ ಆಗಿದ್ದನು. ಅವನ ವಾಹನ ಮಯೂರ, ಮುಖ ಸಿಂಹ. ಬನವಾಸಿಯ ಕದಂಬರ ಮೂಲಲಾಂಛನಗಳವು. ಹನುಮಂತನೂ ಆ ಯುದ್ಧವೀರನ ಕಲ್ಪನೆಯಲ್ಲಿ ಸಾಮರಸ್ಯಹೊಂದಿದ್ದರಿಂದ ಕದಂಬರು ವಾನರ ಚಿಹ್ನರೂ ಆದರು. ಕದಂಬರ ಬನವಾಸಿ ಈ ತ್ರಿಚಿಹ್ನೆಗಳನ್ನು ನಿದರ್ಶಿಸುತ್ತದೆ. ಅವರೇ, ಕರ್ಣಾಟಕದ ಪ್ರಥಮ ಚಕ್ರವರ್ತಿಗಳು; "ಸಮಗ್ರ ಕರ್ಣಾಟ ಭೂವರ್ಗ ಭರ್ತಾರರು." ಆಗ ಮಹಾರಾಷ್ಟ್ರ ಗುಜರಾತಗಳು ಒಂದಲ್ಲಾ ಒಂದು ತಲೆಮಾರಿನಲ್ಲಿ ದಕ್ಷಿಣದ ಅರಸು ಮನೆತನಗಳಾದ ಕದಂಬ, ಗಂಗ, ಚೋಳ, ಚೇರ. ಪಾಂಡ್ಯ, ಚಾಲುಕ್ಯ, ರಾಷ್ಟ್ರಕೂಟ ಯಾದವ (ಸೇವುಣ),

ಕಳಚೂರ್ಯ ಹೊಯ್ಸಳ ಮುಂತಾದ ರಾಜವಂಶೀಯರು ಪರಸ್ಪರ ಹೆಣ್ಣು ಗಂಡುಗಳನ್ನು ಕೊಟ್ಟುಕೊಂಡು ಬಾಂಧವರಾಗಿರುವುದು ಸಂಶೋಧನೆ ಹರಿತವಾದರೆ, ಸೂಕ್ಷ್ಮವಾದರೆ, ವಿವರ ಪೂರ್ವಕವಾದರೆ ಸ್ಪಷ್ಟವಾಗದಿರಲಾರದು. ಈ ಚಿತ್ರವು ಕ್ರಿ. ಶ ೧೨ನೆಯ ಶತಮಾನದಿಂದ ಮಾಸಿ ಹೋಗಲಾರಂಭಿಸಿತು.

ಕದಂಬ ಬಂಧುಗಳಾದ ರಾಷ್ಟ್ರಕೂಟರ ಮತ್ತು ಚಾಲುಕ್ಯರ ಆಳಿಕೆಗಳ ಪಟ್ಟ ಕರ್ಣಾಟದ್ವಯವಾಗಿದ್ದವು. ಕುಂತಳವು ಪ್ರಥಮ ಕರ್ಣಾಟಕ. ಆದುದರಿಂದ ಕುಮಾರನ ಅಥವಾ ಸ್ಕಂದನ ಪುರಾಣಕ್ಕೆ ದ. ಭಾರತದಲ್ಲಿ ಹೆಚ್ಚಿನ ಪುರಸ್ಕಾರ ದೊರಕಿತು. ೧೨ನೆಯ ಶತಮಾನದ ಬಳ್ಳಿಗಾಂವೆಯಲ್ಲಿದ್ದ ಅಗ್ರಹಾರವನ್ನು ಶಾಪ–ಶರಶಕ್ತಿದ್ವಯ ಸಂಪನ್ನರಾಗಿದ್ದ "ಮಹಾಜನರು" ಶತ್ರುಬಾಧೆಗಳಿಂದ ರಕ್ಷಿಸಿಕೊಂಡದ್ದು ಶಾಸನೋಕ್ತ. ಅದೇ ಶಿವಾವತಾರನಾದ ಸ್ಕಂದನ ಸ್ಫೂರ್ತಿ.

ದಿ. ವಾಸಿಷ್ಠ ಗಣಪತಿ ಮುನಿಗಳ ಪ್ರಕಾರ ಶ್ರೀ ಅರುಣಾಚಲದ ಬ್ರಹ್ಮರ್ಷಿ ಶ್ರೀ ರಮಣರು ಸ್ಕಂದಾವತಾರಿಗಳು.

ಕ್ರಿ.ಶ. ೪ನೆಯ ಶತಮಾನದ ಹೊತ್ತಿಗೆ ಕರ್ಣಾಟಕದಲ್ಲಿ ಪ್ರಚುರವಾಗತೊಡಗಿದ ಜೈನಧರ್ಮದ ಗೋಮತೇಶ್ವರನು ದಿಗಂಬರನಾಗಲು ಶಿವನ ದಿಗಂಬರಾವತಾರವೇ ಮೂಲ. ದಿಗಂಬರತ್ವವು ಅವಧೂತ ಮಾರ್ಗದ ಬೀಜ. ಅವಧೂತಿಯ ಕಿಚ್ಚು ಇನ್ನಾವ ಮಾರ್ಗಕ್ಕೂ ಇಲ್ಲ. ಕುಮಾರ, ಸ್ಕಂದ, ಬಾಲಸುಬ್ರಹ್ಮಣ್ಯ, ಷಣ್ಮುಖ ಹಾಗೂ ಮಯೂರ, ನಾಗ, ಕುಕ್ಕುಟಗಳ ಸಂಬಂಧದ ಮೇಲೆ ಪ್ರತ್ಯೇಕ ಮಹಾ ಪ್ರಬಂಧವನ್ನು ಬರೆಯಬಹುದು.

ಸೋಮನಾಥ–ಮಲ್ಲಿಕಾರ್ಜುನ ಜ್ಯೋತಿರ್ಲಿಂಗಗಳ ಮಹಾತ್ಮ್ಯೆಯ ಆವಿಷ್ಕಾರ– ಹಿಂದೆ ಹೇಳಿದ ಸ್ಕಂದ ಪುರಾಣ. ಹೇಗೆ? ಶಿವಗಣ, ಶಿವಾವತಾರ, ಶಿವಶಕ್ತಿಗಳಲ್ಲಿ ಅನೈಕ್ಯವಿಲ್ಲ. ಈ ಎಲ್ಲವುಗಳ ಕಾರ್ಯಗಳೂ ಶಿವಕಾರ್ಯಗಳೇ. ಅವತಾರಿಗಳೆಲ್ಲಾ ಸಕಾಯರು. ಋತೇ ಶಿವಂ ನಾನ್ಯತವೋ ಗತಿರಸ್ತಿ ಶರೀರಿಣಾಂ=ಶರೀರಿಗಳಿಗೆ ಶಿವನನ್ನು ಬಿಟ್ಟರೆ ಬೇರೆ ಗತಿಯೇ ಇಲ್ಲ. (ಪುಟ ೨೫೪, ಶ್ಲೋಕ ೬೫–ಶಿವ ಮಹಾಪುರಾಣ–) ಪಂಚಭೂತಗಳು ಕಾಯದ್ರವ್ಯಗಳು. ಅವು ಶಿವಶಕ್ತೀಚ್ಛೆಗೆ ಸಂಪೂರ್ಣವಾಗಿ ಅಧೀನವಾದಂಥವುಗಳು.

ಓಂಕಾರವೆಂಬ ಜ್ಯೋತಿರ್ಲಿಂಗವು ವಿಂಧ್ಯದಲ್ಲಿ ಸ್ಥಾಪಿತವಾದದ್ದು ಮೇರುವಿಗೆ ವಿಂಧ್ಯವು ಸರಿಸಾಟಿ ಎಂದು ತೋರಿಸಿ ಕೊಡಲು. ವಿಂಧ್ಯ–ಹಿಮಾಲಯಗಳ ನಡುವಿನ ಪ್ರದೇಶ ಆರ್ಯಾವರ್ತವೆಂಬುದು ಒಂದು ನಂಬಿಕೆ. ಆದರೆ ಈಗಲೂ ಮಹಾರಾಷ್ಟ್ರವು "ದಕ್ಷಿಣ ರಾಜ್ಯ" ಎನ್ನಿಸಿಕೊಂಡಿಲ್ಲ. ಈ ವಿಚಿತ್ರದಂತೆಯೇ ಅಲಹಾಬಾದಿನಿಂದ ಶರಾವತಿಯವರೆಗಿನ ಪ್ರದೇಶವು ದಕ್ಷಿಣ ಭಾರತ ಎಂಬ ಕಾಲವೊಂದಿತ್ತು. ಉತ್ತರ ಭಾರತವು ಇತಿಯೋಪಿಯದಿಂದ ಇರಾನ್ ಇರಾಕುಗಳನ್ನೊಳಗೊಂಡು ಅಫಗಾನಿಸ್ತಾನ

ಪಾಕಿಸ್ತಾನಗಳೊಂದಿಗೆ ತಿಬೇಟ ಕೇಂದ್ರವುಳ್ಳವಾಗಿತ್ತೆಂಬುದು ಡಾ. ಮುತ್ತಣ್ಣನವರು ಇತಿಯೋಪಿಯದ ಮೇಲೆ ಬರೆದ ಹೊತ್ತಗೆಯಿಂದ ನಿಗಮನಿಸುವ ಸಂಪ್ರದಾಯವಿದೆ. ಪುರಾಣಗಳು ನೆನೆಸಿಕೊಳ್ಳುವ ಪ್ರಾಚೀನತೆಯಲ್ಲಿ ಗಣ್ಯಗಡಿಯಾದ ಮೇರುವಿನ ದಕ್ಷಿಣ ಭಾಗ ಹಿಮಾಲಯವಾಗಿರಬೇಕು. ದಿ.ದ.ರಾ.ಬೇಂದ್ರೆಯವರು ಪಡೆದ ದೈವೀ ಸೂಚನೆಯಂತೆ ಬ್ರಹ್ಮದೇಶವೇ "ದೇವಲೋಕ", "ತ್ರಿವಿಷ್ಟಪ"ವೆಂದರೆ ತಿಬೇಟ. ಬ್ರಹ್ಮಪುತ್ರ–ಇರಾವತೀ ನದಿಗಳ ಬ್ರಹ್ಮತ್ವ–ಐರಾವತತ್ವಗಳು ಅವರಿಗೆ ಹೊಳೆದ ಆಧಾರ.

ವಿಷ್ಣುವಿನ ಅವತಾರಗಳಾದ ನರ–ನಾರಾಯಣರು ಬದರೀಲಿಂಗವನ್ನು ಪೂಜಿಸುತ್ತಾರೆ ಎನ್ನುತ್ತದೆ ಈ ಪುರಾಣ. ಬದರೀಲಿಂಗದ ಪೂಜೆಯ ದಿನವೇ ಕೇದಾರೇಶ್ವರ ಲಿಂಗವೂ ಪೂಜಿಸಲ್ಪಡುವುದಂತೆ.

ಕೇದಾರೇಶ್ವರನೊಮ್ಮೆ ಪಾಂಡವರನ್ನು ಕಂಡು ಕೋಣನ ರೂಪವನ್ನು ತಾಳಿದನು. ಪಾಂಡವರದನ್ನು ಕೆಳಮೋರೆ ಮಾಡಿ ನಿಲ್ಲಿಸಿದರು. ಅದರ ಶಿರೋ ಭಾಗ ಹಾರಿ ಹೋದ ಮೇಲೆ ಉಳಿದದ್ದೇ ಕೇದಾರೇಶ್ವರ ಲಿಂಗ. ಪಾಂಡವರದನ್ನು ಪೂಜಿಸಿ ವರ ಪಡೆದರು. ಶಿರಸಿ–ಸಿದ್ಧಾಪುರ ತಾಲೂಕಿನ ಕೆಲ ಹಳ್ಳಿಗಳಲ್ಲಿ ಗುಡಿ ಗುಂಡಾರ ಕಟ್ಟದೆ ಕಾಡಿನ ಪೊದೆಗಳಲ್ಲಿ ಕೋಣನ ತಲೆಯ ಆಕೃತಿಯುಳ್ಳ ಕಲ್ಲನ್ನು ಪೂಜಿಸುತ್ತಾರೆ. ಇದು ಅಲ್ಲಿ ಮಾಯವಾಗಿ ಹೋದ ಮಹಿಷ ಶಿರಸ್ಸೇ? ಸಂಶೋಧನೀಯ ವಿಷಯವಿದು.

–೫೯–

# ಭೀಮಾಸುರ ಪ್ರತಾಪ ಮತ್ತು ಗೌತಮ ಋಷಿಯ ಶಾಪ

## ಭೀಮಾಸುರ ಪ್ರತಾಪ

"ರಾಮಾಯಣದ" ಕುಂಭಕರ್ಣನೊಮ್ಮೆ ಕರ್ಕಟಿ ಎಂಬ ರಾಕ್ಷಸಿಯನ್ನು ಕೂಡಿದ್ದನಂತೆ. ಅವಳ ತಂದೆ ಕರ್ಕಟ. ತಾಯಿ ಪುಷ್ಕಸಿ. ಅವಳ ಗಂಡನು ರಾಮಹತನಾದ ವಿರಾಧನು. ಕರ್ಕಟ–ಪುಷ್ಕಸಿಯರು ಸತ್ತು ಹೋದರು. ಕುಂಭಕರ್ಣನಿಂದ ಹುಟ್ಟಿದ ಭೀಮಾಸುರನೆಂಬ ಪುತ್ರನೇ ಕರ್ಕಟಿಗೆ ಆಧಾರವಾದನು. ಈ ಅಂಶಗಳನ್ನೆಲ್ಲಾ ದೊಡ್ಡವನಾದ ಮೇಲೆ ತಿಳಿದುಕೊಂಡ ಭೀಮಾಸುರನು ರಾಮಾವತಾರದಲ್ಲಿ ತನ್ನ ತಂದೆಯನ್ನು ಸಂಹರಿಸಿದ ಹರಿಯ ಹಮ್ಮನ್ನು ಮುರಿಯಬೇಕೆಂದು ನಿಶ್ಚಯಿಸಿ ತಪೋನಿರತನಾದನು. ಬ್ರಹ್ಮನು ಒಲಿದು ವರ ಕೊಡಲು ಅವನಿದ್ದಲ್ಲಿಗೆ ಹೋಗುವ ಮೊದಲೇ ದೇವತೆಗಳು ಬ್ರಹ್ಮನಿಗೆ ಭೀಮಾಸುರನು ಸುರಶತ್ರುವೆಂದು ಹೇಳಿದ್ದರು. ಕಾಮರೂಪದಲ್ಲಿ ಶಿವಭಕ್ತನಾದ ದೊರೆ ಆಳುತ್ತಿದ್ದಾಗ ಭೀಮಾಸುರನು ಅವನೊಡನೆ ಯುದ್ಧ ಮಾಡಲು ಹೋದನು. ಅವನನ್ನು ರಕ್ಷಿಸಲು ರುದ್ರನು ಭೀಮನಿಗಿದಿರಾದನು. ಅವನ ಪರಾಕ್ರಮಕ್ಕೂ ಭಕ್ತಿಗೂ ಮೆಚ್ಚಿದ್ದ ಶಿವನು ಅವನನ್ನೂ ಅವನ ಸೈನಿಕರನ್ನೂ ಬೂದಿ ಮಾಡಿ, ಆತನ ಭಸ್ಮದಲ್ಲಿ "ಭೀಮ ಶಂಕರಲಿಂಗ" ಎಂಬ ಜ್ಯೋತಿರ್ಲಿಂಗನಾದನು. ಅದರಿಂದ ದೇವತೆಗಳಿಗೂ ಭೀಮನಿಗೂ ಸಮಾಧಾನವಾಯಿತು. ಭೀಮನು ಶಿವಲೋಕ ಸೇರಿದ್ದರಿಂದ ಅವನ ತಾಯಿಗೂ ಸಂತೋಷವಾಯಿತು, ಶಿವಲೋಕದಲ್ಲವನಿಗೆ ಅಮರ ಶರೀರ!

## ಗೌತಮ ಋಷಿಯ ಶಾಪ

ಸಪ್ತರ್ಷಿಗಳಲ್ಲಿ ಪಂಚಮನು ಗೌತಮ ಮಹರ್ಷಿ. ಅವನು ಸಾಕಾರ ಶಿವ ಪಾರ್ವತಿಯರು ಕಾಶಿಯಲ್ಲಿ ಸ್ಥಿರವಾಗಿ ನಿಲ್ಲುವಂತೆ ಮಾಡಿದನು. ಅವನು –

**"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ**
**ಅಹಂ ತ್ವಾಂ ಸರ್ವ ಪಾಪೇಭ್ಯೋ ಮೋಕ್ಷ ಯಿಷ್ಯಾಮಿ ಭಾರತ॥**

ಎಂಬ ತಾತ್ಪರ್ಯವನ್ನು ಈಶ್ವರ ಘೋಷಿಸುವಂತೆ ಮಾಡಿದನು. ಅಂದಿನದು ವಿಶ್ವನಾಥನ ವಿಶ್ವಧರ್ಮ, ಇಂದಿನದು ಮಂಜುನಾಥನ ವಿಶ್ವಧರ್ಮ. ಕಾಶೀ ವಿಶ್ವನಾಥನು ಶ್ರೇಯಃ ಪ್ರೇಯಃಪ್ರದನೂ ದುಷ್ಟದಂಡನ ಶಿಷ್ಟಪರಿಪಾಲಕನೂ ಆದ ದೇವಾವತಾರಗಳಲ್ಲಿ ಅಗ್ರಗಣ್ಯನು. ಕಾಶಿಯಲ್ಲಿ ಸತ್ತವರಿಗೆ ಪುನರ್ಜನ್ಮವಿಲ್ಲ. ಗಂಗೆಯು ಸರ್ವರ ಸರ್ವ ಪಾಪಗಳನ್ನು ತೊಳೆಯುವ ಶಿವಬಾಹು. ಕಾಶಿಯಲ್ಲಿ ಯಾರೂ ನಿರಾಶಿಗಳಾಗರು. ಆದರೆ ಜೀವನ್ಮುಕ್ತ ನಿಸ್ಪೃಹರಾಗುವವರ ಸಂಖ್ಯೆ ಅಧಿಕ. ಕಾಶೀ ವಿಶ್ವನಾಥ ಲಿಂಗವು ಲಿಂಗರಾಜ. ದಕ್ಷಿಣದಲ್ಲಿ ಮಂಜುನಾಥನು ಲಿಂಗರಾಜ. ಪ್ರಾರಬ್ಧಾದಿ ಕರ್ಮ ಬೀಜಗಳನ್ನು ಸುಡುವ ಅಗ್ನಿಯು ಶೈವ.

ಇತರ ಋಷಿಗಳೂ ಅವರ ಪತ್ನಿಯರೂ ಹೊಟ್ಟೆ ಕಿಚ್ಚಿನಿಂದ ಗೌತಮನಿಗೆ ಕಾಟಕೊಡತೊಡಗಿದರು. ಆಗ ಶಂಕರನು ಪ್ರತ್ಯಕ್ಷನಾಗಿ–

"ಕೃತಘ್ನಾಶ್ಚ ತಥಾ ಜಾತಾ ನೈತೇಷಾಂ ನಿಷ್ಕೃತಿಃಕ್ವಚಿತ್– ಈ ಕೃತಘ್ನರಿಗೆ ಪರಿಹಾರವೇ ಇಲ್ಲ" ಎಂದನು. ಶಂಕರನು ತ್ರ್ಯಂಬಕ ಲಿಂಗನಾದನು, ಗಂಗೆಯು ಗೌತಮೀ ನದಿಯಾದಳು. ಅದರಿಂದ ಮತ್ತಷ್ಟು ಮತ್ಸರಗ್ರಸ್ತರಾಗಿ ಕಾಡತೊಡಗಿದ ಅವರನ್ನು ಗೌತಮನು ಶಪಿಸಿದನು:

"ಮುಕ್ತಿದಾಯಕವಾದ ಶೈವ ಮಾರ್ಗವನ್ನು ಹೇಳುವ ವೇದಜ್ಞಾನಕ್ಕೆ ವಿಮುಖರಾಗುತ್ತೀರಿ ಮತ್ತು ವೇದೋಕ್ತ ಸತ್ಕರ್ಮಗಳನ್ನು ಬಿಡುತ್ತೀರಿ; ಅಲ್ಲದೆ ಶೈವ (ಮಂಗಲ) ಶ್ರದ್ಧೆ ನಿಮ್ಮಿಂದ ತೊಲಗುತ್ತದೆ. ಇಂದಿನಿಂದ ನೀವು ದುರ್ಮಾರ್ಗ ಪ್ರವರ್ತಕರಾಗುತ್ತೀರಿ; ಶ್ರುತಿ ಬಹಿರ್ಮುಖರೂ ಮೋಕ್ಷಮಾರ್ಗಹೀನರೂ ಆಗುತ್ತೀರಿ. ನಿಮ್ಮ ಹಣೆಗೆ ನೀವಿನ್ನು (ವಿಭೂತಿಯನ್ನಲ್ಲ) ಮಣ್ಣನ್ನು (ಅದರ ನಾನಾ ವಿಕಾರಗಳನ್ನು) ಹಚ್ಚಿಕೊಳ್ಳುತ್ತೀರಿ. ನೀವು ಶಿವೈಕ ಭಕ್ತರಾಗದಿರಿ. ಮಿಕ್ಕ ದೇವರುಗಳೆಲ್ಲಾ ಸಮಾನರು, ಶಿವನು ಅದ್ವಿತೀಯನು. ಇಂದಿನಿಂದ ನಿಮ್ಮ ಸಂಸ್ಕೃತಿ ಅಧಃಪಾತ ಹೊಂದುತ್ತಾ ಹೋಗಲಿ. ನೀವು ಶಠರೂ ನಿಂದಕರೂ ತಪ್ತ ಮುದ್ರಾಂಕಿತರೂ ಆಗಿರಿ." ಖಿನ್ನರಾದ ಅವರು ಕಾಶಿಯನ್ನು ಬಿಟ್ಟು ಕಾಂಚಿಗೆ ಹೋಗಿ ನೆಲೆಸಿದರು. ಖಳರೆಲ್ಲರೂ ಅಶೈವರು (=ಅಸ್ಮಾರ್ತರು).

ಭಾರತೀಯ ನಾಗರಿಕತೆಗೆ ಮೊದಲು ಬಂದ ಕಂಟಕವಿದು. ಆಯಾ ಋಷಿಗಳಿಗೆ ಅನುಯಾಯಿಗಳಾದ ಚಾತುರ್ವರ್ಣ್ಯರು ಆಯಾ ಋಷಿಗಳ ಸ್ಮಾರ್ತಾಸ್ಮಾರ್ತ ಆಚಾರಗಳನ್ನು ಹಿಡಿದುದು ಆ ಪ್ರಾಚೀನ ಕಾಲದಲ್ಲೇ (ಧರ್ಮಸೂತ್ರಗಳ ಕಾಲದಲ್ಲೇ). ಈಗ ಸ್ವತಂತ್ರ ವಿಚಾರದ ಹೆಸರಿನಲ್ಲಿ ಅನುಯಾಯಿ ವರ್ಣದವರು ಸ್ವಚ್ಛಂದರಾಗ ತೊಡಗಿದ್ದಾರೆ!

"ಒಳಗೂ ಹೊರಗೂ ಅದೇ ತುಂಬಿಹುದು" ಎಂಬ ನರಕಪ್ರಜ್ಞೆ ಸೂಚಿಸಿದ ("ಜಾತವೇದವನ್ನು" ನೋಡಿರಿ) ದಶಮವಾದ ಮತ್ಸರವೆಂಬ ನರಕರಸವು

ಸಮಸಾಮಯಿಕವಾಗಿದೆ. ಅಂದು ಮುನಿಗಳಲ್ಲೇ ರಾಕ್ಷಸರಿದ್ದರು. ಅಂದು ಧರ್ಮ ಮತಗಳಿದ್ದರೆ, ಇಂದು ಜಾತಿ ಮತ, ಸಾಹಿತ್ಯ ಮತ, ವಿಕಟ ವಿದ್ಯಾಮತ, ವಿರಾಜಕೀಯ ಮತ, ದುರ್ವ್ಯಾಪಾರ ಮತ, ದುರಭ್ಯಾಸ ಮತ, ದುರ್ವಾರ್ತಾ ಮತ, ದುಃಶಾಸನ (ದುರಾಡಳಿತ) ಮತ, ದುರ್ಯುದ್ಧಮತ (ಅಧರ್ಮ ಯುದ್ಧ ಮತ) ಮತ್ತು ದುರ್ಮನೋರಂಜನ ಮತಗಳು ಪ್ರೋತ್ಸಾಹ ಪಡೆಯುತ್ತಿವೆ.

ಗೋವಿನ ಹಾಲನ್ನು ಕುಡಿಯದ ಜೀವಿಯಿಲ್ಲ. ಗೋತಮ ಧರ್ಮ ಸೂತ್ರದಂತೆ ಆತ್ಮಗುಣಗಳನ್ನು ಎತ್ತಿ ಹೇಳಿದ ಅನ್ಯ ಧರ್ಮಸೂತ್ರವಿಲ್ಲ. ವಾರಣಾಸಿಯಂಥ ಮತ್ಸರಾರಣ್ಯ ಮಾರಕ ಅಸಿ (=ಕತ್ತಿ) ಇಲ್ಲ. ಗೌತಮನ ಶಾಪದಂಥ ಶಾಪವಿಲ್ಲ. ಈಶ್ವರನ ಅನುಗ್ರಹದಂಥ ಅನುಗ್ರಹವಿಲ್ಲ!

-೬೦-

# ರಾವಣ ಸ್ಥಾಪಿಸಿದ ವೈದ್ಯನಾಥ ಲಿಂಗ

ವೈದ್ಯನಾಥ ಲಿಂಗವು ಜ್ಯೋತಿರ್ಲಿಂಗ. ಅದನ್ನು ಭೂಮಿಯಲ್ಲಿಟ್ಟರೆ ಅಲ್ಲೇ ಅದು ಕೀಳಬರದಂತೆ ಹೂತು ಹೋಗುವುದು ಎಂದಿರುವಾಗಲೂ ಮೂತ್ರ ಶಂಕೆ ಪರಿಹರಿಸಿಕೊಳ್ಳಲೆಂದು ರಾವಣನು ಅದನ್ನು ದನಗಾಹಿಗಿತ್ತು ಹೋದನು. ಅವನು ಬರುವಷ್ಟರಲ್ಲಿ ದನಗಾಹಿ ಅದನ್ನು ಭುವಿಯ ಮೇಲಿಟ್ಟಿದ್ದನು. ರಾವಣ ಕೀಳಲಾರದಾದ. ಈ ದನಗಾಹಿ ಗೋಕರ್ಣದ ಗಣಪತಿ ಎಂದು ಉಲ್ಲೇಖಿಸಿಲ್ಲ. ಸುರರು ವೈದ್ಯನಾಥನ ಪ್ರತಿಷ್ಠಾಪನೆ ಮಾಡಿ ನಾರದರ ಹತ್ತಿರ ಹೋಗಿ ರಾವಣನಿಂದ ಉಂಟಾಗಬಹುದಾದ ತೊಂದರೆಗಳ ಬಗೆಗೆ ಭಯವನ್ನು ವ್ಯಕ್ತಪಡಿಸಿದರು. ಆಗ ನಾರದರು ರಾವಣನ ಮನವೊಲಿಸಿ ಕೈಲಾಸವನ್ನೆತ್ತಿ ಭೂಮಿಗೆ ತಂದು, ಮರಳಿ ಒಯ್ದು ಅಲ್ಲೇ ತಿರುಗಿ ಇಡಲು ಉಪದೇಶಿಸಿದರು; ವೈದ್ಯನಾಥ ದತ್ತ ವರಗಳ ಫಲಗಳಿಗಿಂತ ಕೈಲಾಸೋದ್ಧರಣದ ಫಲ ಹೆಚ್ಚಿನದೆಂದರು. ಅದು ರಾವಣನ ಮನಸ್ಸಿಗೆ ಹಿಡಿಸಿತು. ಅವನು ಹಾಗೇ ಮಾಡಲನುವಾದನು. ಆಗ ಗೌರೀ ಸೂಚನೆಯ ಪ್ರಕಾರ ರುದ್ರನು ರಾವಣನ ಬಾಹುಬಲ ಕುಂದುವಂತೆ ಮಾಡಿದನು. ರಾವಣನು ಅದನ್ನೆತ್ತಲಾರದೆ ವೈದ್ಯನಾಥದತ್ತ ವರದ ಮಹಾಸ್ತ್ರಗಳಿಂದಷ್ಟೇ ತೃಪ್ತನಾಗಿ ಮನೆಗೆ ಹೋದನು. ಆದರೆ ತನ್ನ ಬಾಹುಬಲ ಮರ್ದನನೊಬ್ಬ ಹುಟ್ಟುವನೆಂದು ಶಿವ ಹೇಳಿದ ಭವಿಷ್ಯವು ಸ್ವಲ್ಪ ತಾತ್ಕಾಲಿಕ ಚಿಂತೆಗೆ ಅವನನ್ನು ಈಡು ಮಾಡಿದರೂ ಆಗ ಅವನದನ್ನು ಬಹಳ ಹಚ್ಚಿಕೊಳ್ಳಲಿಲ್ಲ.

ಈ ನಡುವೆ ಒಂದು ತಮಾಷೆ ನಡೆಯಿತು. ಅದು ನಾಗೇಶ ಜ್ಯೋತಿರ್ಲಿಂಗ ಲೀಲೆ. ಪಾರ್ವತೀ ವರದಿಂದ ಮದಿಸಿದ ದಾರುಕೆ ಎಂಬ ರಾಕ್ಷಸಿಯ ಗಂಡ ದಾರುಕಾಸುರನು ಲೋಕ ರಕ್ಷಕ (=ಸಜ್ಜನ ರಕ್ಷಕ) ದೇವತೆಗಳನ್ನು ಪೀಡಿಸತೊಡಗಿದಾಗ ದೇವತೆಗಳು ಸಮುದ್ರ ಗರ್ಭಸ್ಥ ಔರ್ವರ್ಷಿಯೆಂಬ ಅವತಾರದಲ್ಲಿದ್ದ ರುದ್ರನನ್ನು, ಮೊರೆವೊಕ್ಕರು. "ಅವನು ಹೊಡೆಯಿರಿ ರಾಕ್ಷಸರನ್ನು, ನಾನಿದ್ದೇನೆ" ಎಂದನು. ಆಗ ಸಪ್ತಸಾಗರಗಳಂತೆ ಮುಸುಕಿ ಬಂದ ದೇವಸೇನೆಗಂಜಿದಾರುಕನು ತನ್ನ ಪ್ರಜೆಗಳೊಡನೆ ಭೂಮಿಯನ್ನು ಬಿಟ್ಟು ವನ-ಸಮುದ್ರಗಳ ನಡುವೆ ರಾಜ್ಯ ಕಟ್ಟಿ ಸುಖವಾಗಿರತೊಡಗಿದನು. ಅಲ್ಲಿಂದಲೂ ಆಗಾಗ ಭೂಮಿಗೆ ಶಸ್ತ್ರಾಸ್ತ್ರಗಳನ್ನೆಸೆದು ವರ್ಣೀಯರ (ತ್ರಿವರ್ಣೀಯರ) ಯಜ್ಞಕ್ಕೆ ಭಂಗ ತರತೊಡಗಿದನು. ದಾರುಕಾಸುರಿಯೊಮ್ಮೆ ಜಲಮಧ್ಯದಿಂದೆದ್ದು

ಮಣ್ಣಿನ ಮಕ್ಕಳಿಗೆ ಪೀಡೆ ಕೊಡಲು ಆಲೋಚಿಸುತ್ತಿರಲು ಎದುರಿಗೆ ವೈಶ್ಯನೊಬ್ಬನ ಹಡಗುಗಳು ಬಂದವು. ಸುಪ್ರಿಯನೆಂಬ ಆ ಶಿವಭಕ್ತ ವೈಶ್ಯನ ಹಡಗಿನಲ್ಲಿ ಅಸುರರು ಶಿವೋಪಾಸನೆಗಾರಂಭಿಸಿದರು. ಅದರಿಂದ ತೃಪ್ತನಾದ ನಾಗೇಶನು ಅವರಿಗೆ ಬೇಡಿದ ವರಗಳನ್ನಿತ್ತನು. ಒಮ್ಮೆ ದಾರುಕನ ಸೇವಕನು ಶಿವನ ಸುಂದರೀ ರೂಪವನ್ನು ಕಂಡು ರಾಜನಿಗೆ ವರದಿ ಮಾಡಿದನು. ರಾಜ ಪತ್ನಿಯು ಭವಾನಿಯನ್ನು ಪೂಜಿಸಿ ಅವಳ ಪತಿಯ ಮೂಲಕ ತನ್ನ ಪತಿಗೆ ಜಯಾಸ್ತ್ರಗಳನ್ನು ಕೊಡಿಸಿದಾಗ ಅವನು ದೇವತೆಗಳನ್ನು ಹೊಡೆದೋಡಿಸಿದನು. ಆದರೆ ಅವನೂ ಅವನ ಭಟರೂ ಮತ್ತೆ ಕಾನುಗಳಿಗೆ ಹೋಗಿ ಮೊದಲಿನಂತೆಯೇ ಇರತೊಡಗಿದರು. ಅದರಿಂದ ದಾರುಕೆಯ ಪಟ್ಟದ ಗುರು ಸ್ವರೂಪೆಯಾದ ಪಾರ್ವತಿಗೆ ಬೇಸರವಾಯಿತು. ರುದ್ರನಾಗ ರಾಕ್ಷಸಿಯರ ಮಕ್ಕಳು ಬೇಕಾದರೆ ನಿನ್ನಿಷ್ಟದಂತೆ ಕಲಿಯುಗಾಂತದಲ್ಲಿ ಭುವಿಯನ್ನಾಳಲಿ. ಸತ್ಯ (ಕೃತ) ಯುಗ ಬಂದೊಡನೆಯೇ ಮಹಾಸೇನ ಸುತನಾದ ವೀರಸೇನನು ಜನಿಸಿ ಯಜ್ಞ ಧರ್ಮ ಸಂಸ್ಥಾಪನೆ ಮಾಡುವನೆಂದು ಹೇಳುತ್ತಿದ್ದ ಹಾಗೆಯೇ ವೀರಸೇನನಿಗೆ ಶಿವನು ಪಾಶುಪತವನ್ನು ಕೊಟ್ಟನು. ಅವನು ದಾರುಕೆಯ ಮುಖಗಳನ್ನು ಕಡಿದೊಗೆದನು. ಇದು ಈಶ್ವರ–ಪಾರ್ವತಿಯರ ನಡುವಿನ ತಮಾಷೆ, ಹುಸಿ ಜಗಳ ನಿರ್ಮಿಸಿದ ಘಟನೆಯಂತೆ!

ಮನುಜರು ದೇವತೆಗಳ ಕೈಯ ಆಟದ ಬೊಂಬೆಗಳಂತಾದರೆ ಮಕ್ಕಳಂಥ ದೇವತೆಗಳು ತಮಗೆ ಬೇಕಾದಾಗ ಅವುಗಳೊಡನೆ ಆಡುತ್ತಿರಬಹುದು; ಬೇಡವಾದ ನಿಮಿಷದಲ್ಲಿ ಅವುಗಳನ್ನು ಬಿಸುಟು ಒಡೆದು ಚೂರು ಚೂರು ಮಾಡಬಹುದು. “ನಿನ್ನ ಸೂತ್ರದೊಳಾಡುವುವು ಚೈತನ್ಯ ಸಚರಾಚರಗಳೆಲ್ಲವು” ಎಂದಿಲ್ಲವೇ ದಾಸರು? ದೇವ–ದಾನವರು ಕಾಶ್ಯಪರು!

–೬೧–

# ರಾಮೇಶ್ವರ ಮಹಾತ್ಮ್ಯ

ಕಾಶಿಯ ಜೊತೆಗೇ ರಾಮೇಶ್ವರವೂ ಸುಪ್ರಸಿದ್ಧ ಯಾತ್ರಾಸ್ಥಳ. ರಮೇಶ್ವರನ ಅವತಾರನಾದ ರಾಮನಿಗೆ ಅನುಗ್ರಹ ಮಾಡಿದ್ದರಿಂದ ರುದ್ರನು (ಶಿವನು) ರಾಮೇಶ್ವರನೆಂದು ಪ್ರಖ್ಯಾತನಾದನು. ಶ್ರೀರಾಮ ಚಂದ್ರನು ಶಿವಭಕ್ತನು. ರಾವಣನು ರಾಮನ ವನವಾಸ ಕಾಲದಲ್ಲಿ ಸೀತೆಯನ್ನು ಮೋಸದಿಂದ ಅಪಹರಿಸಿಕೊಂಡು ಲಂಕೆಗೆ ಹೋದ ಕಥೆಯು ರಾಮಾಯಣದಲ್ಲಿ ಮುಖ್ಯ. ಸೀತೆಯನ್ನು ಕಪಿಬಲದೊಡನೆ ಹುಡುಕುತ್ತಾ ಕಾಡುಮೇಡು ಗುಡ್ಡ ಗವಿನದೀ ಸಮುದ್ರ ತೀರಾದಿ ಪ್ರದೇಶಗಳಲ್ಲಿ ಸಂಚರಿಸಿ ಶ್ರೀರಾಮನು ದಕ್ಷಿಣ ಭಾರತದ ಇಂದಿನ "ರಾಮೇಶ್ವರವನ್ನು" ತಲುಪಿದನು. ದೈತ್ಯರು ರುದ್ರ ಪ್ರಸಾದ ಪಡೆದವರಾಗಿರುತ್ತಿದ್ದರು. ರುದ್ರ ಕೊಟ್ಟ ವರವುಳ್ಳವರನ್ನು ರುದ್ರಾನುಗ್ರಹದಿಂದಲೇ ಜಯಿಸದೆ ಗತ್ಯಂತರವಿಲ್ಲ. ರಾವಣನನ್ನು ಜಯಿಸದೆ ರಾಮನು ಸೀತೆಯನ್ನು ಬಿಡಿಸಿಕೊಂಡು ಬರಲಾರನು. ರಾವಣನ ಮಗನೇ ಇಂದ್ರನನ್ನು ಜಯಿಸಿ ಬಂದವನಾಗಿದ್ದಾಗ, ರಾವಣನು ಎಂಥ ಬಲಶಾಲಿಯಾಗಿರಬೇಕು! ಕೌಶಿಕ ಕಲಿಸಿದ ಅತ್ಯುನ್ನತ ಮಂತ್ರಾಸ್ತ್ರಗಳ ಬಲವಿದ್ದರೂ ಸೀತಾ ವಿರಹ ದಗ್ಧನಾದ ರಾಮನಿಗೆ ರುದ್ರಾನುಗ್ರಹವು ರಾವಣಾದಿಗಳನ್ನು ಗೆಲ್ಲಲು ಅಗತ್ಯ ಎನ್ನಿಸಿದ್ದರಿಂದ ರಾಮೇಶ್ವರಕ್ಕೆ ಹೋದಾಗ ರಾಮೇಶ್ವರ ಜ್ಯೋತಿರ್ಲಿಂಗವನ್ನು ಸ್ಥಾಪಿಸಿ ಶಿವನನ್ನು ಒಲಿಸಿಕೊಳ್ಳಬೇಕೆಂದು ಶ್ರೀರಾಮನು ಆ ಪ್ರಕಾರ ರಾಮೇಶ್ವರ ಲಿಂಗವನ್ನು ಪ್ರತಿಷ್ಠೆ ಮಾಡಿ ಪರಮ ಭಕ್ತಿಯಿಂದ ಪೂಜಿಸಿದನು. ಅವನ ಬೆಂಬಲಿಗರಾದ ವಾನರ ಮಹಾವೀರರೂ ಲಿಂಗಗಳನ್ನು ಮಾಡಿ ಶಿವಾರಾಧನೆಯನ್ನು ಕೈಕೊಂಡರು. ರಾಮನಿಗೆ ರಾಮೇಶ್ವರನು ಪ್ರತ್ಯಕ್ಷನಾದಾಗ ಅವನು ಬೇಡಿದ್ದು ರಾವಣನ ಸೋಲನ್ನು ಮತ್ತು ತನ್ನ ಗೆಲುವನ್ನು. ಶಿವಪ್ರಿಯರಲ್ಲಿ ಅಗ್ರಗಣ್ಯನಾದ ವಿಷ್ಣುವಿನ ಅವತಾರನಾದ ರಾಮನಿಗೆ ಶಿವನು ಸುಲಭವಾಗಿ ಒಲಿದನು. ಶ್ರೀ ರಾಘವೇಂದ್ರನಿಗೆ ಜಯ ವರವನ್ನು ಶಿವನು ದಯೆ ಪಾಲಿಸಿದನು. ರಾಮನೂ ಅವನ ಅನುಚರರೂ ಪರಮ ಸಂತುಷ್ಟರಾಗಿ ಕೃತಜ್ಞತೆಯಿಂದ ಪುನಃ ಪುನಃ ಶಿವನನ್ನು ಕೊಂಡಾಡಿದರು. ಶಿವದೃಷ್ಟಿಯಲ್ಲಿ ಧರ್ಮವಾದಿಯು ಜಾತಿವಾದಿಗಿಂತ ಶ್ರೇಷ್ಠ. ಬ್ರಾಹ್ಮಣನಾದ ರಾವಣನಲ್ಲಿಲ್ಲದ ಧರ್ಮಬುದ್ಧಿಯು ಕ್ಷತ್ರಿಯನಾದ ರಾಮನಲ್ಲಿತ್ತು. ಅದು ಶಿಷ್ಟಧರ್ಮ. ಆದ್ದರಿಂದ ಶಿವನು ಕೊನೆಯ ಗೆಲುವು ರಾಮಾದಿಗಳದ್ದೇ ಎಂದು ವರವನ್ನಿತ್ತದ್ದು. ಧರ್ಮದ ಸೂಕ್ಷ್ಮ ಮರ್ಮಗಳನ್ನು ರಾಮನಷ್ಟು ಚೆನ್ನಾಗಿ

ತಿಳಿದವರು ಯಾರೂ ಇಲ್ಲ ಎಂದು ರಾಮ ಕಥಾಕಾರ ಹೇಳಿದ್ದು ಸುಳ್ಳಲ್ಲ. ರಾಮನು ರಾವಣಾಂತಕನಾದನು. ಯಾರ ದಯೆಯಿಂದ? ಪರಬ್ರಹ್ಮ ಸ್ವರೂಪನಾದ ಪರಶಿವನ ಪೂರ್ಣಾವತಾರವಾದ ರಾಮೇಶ್ವರ ಜ್ಯೋತಿರ್ಲಿಂಗದ ದಯೆಯಿಂದ!

ರಾಮ–ರಾವಣರೂ, ಭೀಮ–ಕೌರವರೂ, ಕೃಷ್ಣ–ಕಂಸರೂ, ರುದ್ರ–ದಕ್ಷಬ್ರಹ್ಮರೂ ದೇವಾಸುರರಂತೆ ಜಗತ್ತಿನ ವಿರುದ್ಧ ಭಾವಗಳ ಪ್ರತಿನಿಧಿಗಳು. ಪರಾ–ಅಪರಾ ವಿದ್ಯೆಗಳ ಆರಾಧಕರು. ಪರಾ ದೈವೀ ಸತ್ವಮಯೀ ಶಿಷ್ಟಾತ್ಮೋದ್ಧಾರ ಕಾರಿಣೀ; ಅಪರಾದುಷ್ಟ ಭಾವಾನಾಂ ಪ್ರೇರಣಾ ಶಕ್ತಿರಾಸುರೀ. ದೇವ–ಸೈತಾನರ ಕಲ್ಪನೆಗಳು ಬೈಬಲ್ಲಿನಲ್ಲೂ ಪ್ರಸಿದ್ಧ. ಅದರ ಹಾಗೂ ಇದರ ಜಯ–ಅಪಜಯಗಳು ಮಾನವರ ಇತಿಹಾಸದಲ್ಲಿ ಉದಾಹೃತವಾಗಿವೆ.

"ದೇವರು ತಾನೇ ತಿಳಿದು, ನೆನೆದಲ್ಲಿ ನಿಜಭಕ್ತರ ನೆರವಿಗೆ ಬರುವನು" ಎಂಬುದು ರಾಮೇಶ್ವರ ಮಾಹಾತ್ಮ್ಯ.

–೬೨–

# ಘುಶ್ಮೇಶ್ವರ ಲಿಂಗ ಮಹಿಮೆ

ಘುಶ್ಮೆಯು ಒಬ್ಬ ಶಿವ ಭಕ್ತನ ಎರಡನೆಯ ಹೆಂಡತಿ. ಅವನ ಮೊದಲನೆಯ ಹೆಂಡತಿ ಸುದೇಹೆ. ಅವನ ಹೆಸರು ಸುಧರ್ಮ. ಸುಹೇಹೆ ತನಗೆ ಮಕ್ಕಳು ಹುಟ್ಟದುದರಿಂದ ತನ್ನ ಗಂಡನಿಗೆ ಘುಶ್ಮೆಯನ್ನು ಮದುವೆಯಾಗು ಎಂದು ಹೇಳಿದಳು. ದೇವಗಿರಿವಾಸಿಯಾಗಿದ್ದ ಆ ಸುಧರ್ಮನೆಂಬ ಸುಜ್ಞಾನ ಸಂಪನ್ನನಾದ ಭಕ್ತನು ಅವಳು ಹೇಳಿದ ಪ್ರಕಾರ ಘುಶ್ಮೆಯೆಂಬ ಸತೀಶಿರೋಮಣಿಯನ್ನು ಮದುವೆ ಮಾಡಿಕೊಂಡು ಕರೆದು ತಂದನು. ಅವಳಿಗೆ ಮಗು ಹುಟ್ಟಿದ ಹಾಗೆಲ್ಲಾ ಸುದೇಹೆಯು ಸವತಿ ಮಾತ್ಸರ್ಯದಿಂದ ಚೂರಿಯಿಂದ ಇರಿದುಕೊಂದು ಕೆರೆಗೆ ಬಿಸುಟು ಬರುತ್ತಿದ್ದಳು. ಅದರಿಂದ ಘುಶ್ಮೆಯು ಶಿವಧ್ಯಾನ ಪರಾಯಣೆಯಾಗಿ ಕೆರೆಯಲ್ಲಿ ಪದ್ಮಾಸನ ಹಾಕಿ ಕುಳಿತಳು. ಆಗಿಂದಾಗ ಸತ್ತ ಮಗ ಅವಳಿಗೆ ಎದ್ದು ಕುಳಿತಂತೆ ತೋರಿತು. ಹೌದು–ಶಿವನು ಪ್ರತ್ಯಕ್ಷನಾಗಿ "ಕರೆದುಕೊಂಡು ಹೋಗು ನಿನ್ನ ಮಗನನ್ನು" ಎಂದನು. ಆ ಮಗುವಿಗೆ ಶತಾಯುಷಿಯಾಗೆಂದೂ ಹರಸಿದನು: ಅಷ್ಟೇ ಅಲ್ಲ–೧೦೧ ತಲೆಮಾರಿನವರೆಗೆ ಆ ಹುಡುಗನ ವಂಶ ಬೆಳೆದು ಲೋಕ ಹಿತವನ್ನು ಮಾಡಿ ಯಶಸ್ಸನ್ನು ಗಳಿಸಲಿ–ಎಂಬ ವರವನ್ನೂ ಕೊಟ್ಟನು!

ಘುಶ್ಮೆಯು ಕೃತಜ್ಞತಾ ಪರವಶತೆಯಿಂದ ಆನಂದ ಬಾಷ್ಪಗಳನ್ನು ಸುರಿಸುತ್ತಿದ್ದರೂ ತನ್ನ ಅಕ್ಕನನ್ನು (ಸುದೇಹೆಯನ್ನು) ಅವಳು ಮಾಡಿದ ಪಾಪಕ್ಕಾಗಿ ದೇವರು ಕ್ರೂರ ದಂಡನೆಗೆ ಗುರಿ ಮಾಡಬಹುದೆಂದು ಶಂಕಿಸಿ ಅವಳನ್ನು ಕ್ಷಮಿಸೆಂದು ಶಿವನಲ್ಲಿ ಬೇಡಿಕೊಳ್ಳಲು ಕೂಡಾ ಮರೆಯಲಿಲ್ಲ. ಅವಳ ಸಾಧ್ವೀತ್ವಕ್ಕೆ ದೇವ–ದೇವಿಯರೂ ನಾಚಬೇಕಲ್ಲವೇ? ಅಂಥ ಶಿವಸ್ವರೂಪಿಣಿಯಂತಿದ್ದ ಅವಳ ಬಯಕೆಯಂತೆ ಅಲ್ಲಿದ್ದ ಜ್ಯೋತಿರ್ಲಿಂಗದಲ್ಲಿ ಶಿವನು ಐಕ್ಯ ಹೊಂದಿದನು. ಆ ಲಿಂಗವೇ ಘುಶ್ಮೇಶ್ವರ!

ಜೀವಿಗಳಲ್ಲಿ ಸತ್–ಅಸತ್ ಎಂದು ಎರಡೇ ಜಾತಿಗಳು ಇವೆ ಎಂಬುದಕ್ಕಿದು ಮಹಾ ದೃಷ್ಟಾಂತ. ಮೊದಲನೆಯ ಗುಣದ ಪ್ರತಿನಿಧಿಯು ಘುಶ್ಮೆ; ಎರಡನೆಯದಕ್ಕೆ ನಿದರ್ಶನ ಸುದೇಹೆ. ಗುಣಾವಗುಣಗಳನ್ನು ಬಿಟ್ಟು ಮನುಷ್ಯರನ್ನು ವರ್ಗೀಕರಿಸುವ ಇತರ ಯಾವ ಒರೆಗಲ್ಲೂ ಶಿವನು ಅಂಗೀಕರಿಸುವಂಥದಲ್ಲ. ಗುಣ=ಶೀಲ+ಜ್ಞಾನ; ಸದಾಚಾರ+ಸುವಿಚಾರ. ಸುನೀತಿಯೇ ನೀತಿ–"ಸುರುಚಿ"ಯೊಮ್ಮೆ ಅನೀತಿಗೆಳೆದೀತು.

ಸುಜ್ಞಾನವೇ ಸುನೀತಿ ಪ್ರೇರಕ, ಸತ್ಕರ್ಮ ಪ್ರಚೋದಕ. "ಅಪಕಾರಿಷು ಯಃ ಸಾಧುಃ. ಸಸಾದು:" ಅಲ್ಲವೇ? ಜ್ಞಾನವಿದ್ದಲ್ಲಿ ಅದಕ್ಕೆ ಮೌನವೂ ಶಕ್ತಿಯಿದ್ದಲ್ಲಿ ಅದಕ್ಕೆ ಕ್ಷಮೆಯೂ ತ್ಯಾಗ ಮಾಡಿದಲ್ಲಿ ಅದಕ್ಕೆ ಸ್ತುತಿ ವಿಮುಖತೆಯೂ ಭೂಷಣಗಳು ಎಂಬ ಕಾಳಿದಾಸ ಸೂತ್ರವು ಗುಣಾಭಿಜ್ಞತೆಗೆ ನಿಕಷ. ಘುಶ್ಮೆಗೆ ಭಕ್ತಿಯೇ ಶಿವಶಕ್ತಿ: ಅದು ಅಸೀಮವಾಗಿತ್ತು. ಆದ್ದರಿಂದ ಶಿವ ಅವಳು ಹೇಳಿದಂತೆ ಮಾಡಿದನು. ಯಾವ ಗುಣವೇ ಆಗಲಿ, ಪರಿಪೂರ್ಣವಾಗಿದ್ದರೇನೇ ಅದಕ್ಕೆ ಶಿವಾನುಗ್ರಹ ನಿಶ್ಚಿತ. ಅರೆಬೆರಕೆ ಗುಣವುಳ್ಳವರಿಗೆ ಅರೆಬೆರಕೆ (ಸದಸತ್) ಫಲ!

ಘುಶ್ಮೆಯ ಹೆಸರನ್ನು ಘುಶ್ಮೇಶ್ವರ ಜ್ಯೋತಿರ್ಲಿಂಗವು ಅಜರಾಮರವನ್ನಾಗಿ ಮಾಡಿತು. ಅವಳದು ಪೂರ್ಣ ಜೀವನ, ಸಫಲ ಜೀವನ.

–೬೩–

# ಹರೀಶ್ವರ ಲಿಂಗ ಮಹಿಮೆ

ಒಂದು ಸಲ ದೇವತೆಗಳಿಂದ ದೈತ್ಯರು ಅಜಯ್ಯರಾದರು. ಲೋಕ ಪೀಡೆ, ಧರ್ಮ ಲೋಪಗಳು ಶುರುವಾದವು. ಆಗ ದೇವತೆಗಳು ಸ್ವರಕ್ಷನಾದ ವಿಷ್ಣುವನ್ನು ಮೊರೆ ಹೊಕ್ಕರು. "ಗಿರೀಶನನ್ನು ಆರಾಧಿಸಿ ನಿಮ್ಮ ನೆರವಿಗೆ ಬರುವೆನು" ಎಂದು ಹರಿ ಅವರಿಗೆ ಆಶ್ವಾಸನವನ್ನಿತ್ತನು. ಶಿವ ಸಹಸ್ರನಾಮದಿಂದ ಅವನು ಶಿವನನ್ನು ಆರಾಧಿಸಿದನು. ಒಂದೊಂದು ನಾಮವನ್ನು ಹೇಳುವಾಗ ಅವನು ಒಂದೊಂದು ತಾವರೆಯ ಹೂವನ್ನು ಶಿವಲಿಂಗದ ತಲೆಯ ಮೇಲೆ ಇಡುತ್ತಿದ್ದನು. ಪರೀಕ್ಷೆಗಾಗಿ, ಅವನು ತಂದಿದ್ದ ಸಾವಿರ ಕಮಲಗಳಲ್ಲಿ ಒಂದನ್ನು ಪರಮೇಶ್ವರನು ಮಾಯದಿಂದ ಒಯ್ದು ಬಿಟ್ಟನು. ಇಡಿ ಪೃಥ್ವಿಯನ್ನು ಹುಡುಕಿದರೂ ಹರಿಗೆ ಆ ಕಳೆದ ತಾವರೆ ಸಿಕ್ಕಲಿಲ್ಲ. ಆಗ ತನ್ನ ಕಣ್ಣೊಂದನ್ನು ತೋರಿಸಿ ಇದು ಸಾವಿರನೆಯ ಕಮಲ ಎಂದು ಶ್ರೀಧರನು ತ್ರಿಶೂಲಧರನಿಗೆ ಅರ್ಪಿಸಿದನು. ಆಗ ಪ್ರತ್ಯಕ್ಷನಾದ ರುದ್ರ ಶಿವನು ವರ ಬೇಡಲು ಹೇಳಿದನು. ವಿಷ್ಣುವು ದೈತ್ಯ ಪೀಡಾ ಪರಿಹಾರಾರ್ಥವಾಗಿ, ತಾನು ತಪಸ್ಸು ಮಾಡಿದೆನೆಂದು ಅಂಥ ಸಾಮರ್ಥ್ಯವನ್ನು ತನಗೆ ದಯಪಾಲಿಸಬೇಕೆಂದೂ ಈಶ್ವರನನ್ನು ಬೇಡಿದನು. ಆ ಮಾತನ್ನು ಕೇಳಿ ಶಿವನು ಅವನಿಗೆ ತನ್ನ ಸುದರ್ಶನ ಚಕ್ರವನ್ನಿತ್ತನು. ಅದರ ಬಲದಿಂದ ಲಕ್ಷ್ಮೀಶನು ದೈತ್ಯಸಂಹಾರ ಮಾಡಿ ದೇವತಾ ಮನುಷ್ಯರನ್ನು ಕಾಯ್ದನು. ಲೋಕ ಕ್ಷೇಮ ಉಂಟಾಯಿತು. ಹರಿ ಪೂಜಿಸಿದ ಲಿಂಗ "ಹರೀಶ್ವರ ಲಿಂಗ" ಎನ್ನಿಸಿತು.

"ಸುದರ್ಶನ" ಎಂದರೆ ಶುಭದರ್ಶನ. ಸೂಕ್ಷ್ಮ ದರ್ಶನ, ದೃಷ್ಟಿ ಪಾತದಿಂದಲೇ ಶತ್ರುವನ್ನು ನಾಮಶೇಷ ಮಾಡುವ ಅದ್ಭುತ ಶಕ್ತಿಯುಳ್ಳ ಆಯುಧ. ಇದು ಅಶೋಕ ಚಕ್ರಕ್ಕಿಂತಲೂ ಹಳೆಯದು ಮತ್ತು ಅದಕ್ಕಿಂತ ಹೆಚ್ಚು ಅರ್ಥಪೂರ್ಣವಾದುದು. ಇದು ಭಾರತ ಸಂಸ್ಕೃತಿಯ ನಿಜವಾದ ಸಂಕೇತ. ಜೀವನದ ಕ್ರಮವಿಕಾಸದ ಅಂಡಾಕೃತಿಯ ಪಥವನ್ನು ಈ ಚಕ್ರವು ಸೂಚಿಸುತ್ತದೆ. ಜಾಗತಿಕ ಇತಿಹಾಸದ ಶಿಖರ ಸಿದ್ಧಾಂತಕ್ಕಿದು ಮೂಲ. ಸೃಷ್ಟಿ, ಸ್ಥಿತಿ, ಲಯಗಳು ಈ ಸಿದ್ಧಾಂತವನ್ನು ಅವಲಂಬಿಸಿವೆ. ಅಕುಂಚನ ಪ್ರಸಾರಣದ ಸರಳ ಲಂಬರೇಖೆಯಾಗಲಿ, ಊರ್ಧ್ವಾಧೋಮುಖಿಯಾದ ಸರಳ ಎತ್ತರಗೆರೆಯಂತಾಗಲಿ, ಸಂಪೂರ್ಣ ಅಕ್ಷರಶಃ ವೃತ್ತಾಕೃತಿಯಾಗಲಿ, ಬುಡದಲ್ಲಿ ಸಪುರವಾಗಿ ಹೊರಟು ತಲೆಯಲ್ಲಿ ಚೂಪಾಗುವ ಬುಗುರಿಯ ಆಕಾರವಾಗಲಿ ಮಾಯಾ

ಪ್ರಪಂಚದ ಅನಂತ ಪ್ರವಾಹದ ಗತಿಯನ್ನು ವೈಜ್ಞಾನಿಕವಾಗಿ ಸೂಚಿಸುವುದಿಲ್ಲ. ಪ್ರಗತಿ ಮತ್ತು ವಿಕಾಸದ ಹಿಂದು ಸಿದ್ಧಾಂತವು ದೀರ್ಘವೃತ್ತಾಕೃತಿಯ ಚಕ್ರ. ಡಾ. ಓ. ಸಿ. ಗಾಂಗೋಲಿಯವರು ನಮ್ಮ ದೇವಾಲಯಗಳ ದ್ವಾರಗೋಪುರಗಳೂ ಗರ್ಭಗುಡಿಗಳ ಮೇಲಿನ ಶಿಖರಗಳೂ (ಅರ್ಧ ವ್ಯಕ್ತ ಅರ್ಧ ಅವ್ಯಕ್ತವಾಗಿ) ಈ ಸೂರ್ಯ (ಭೂಮಿ) ಸಂಚಲನ ಪಥದ ಅಂಡಾಕೃತಿಯನ್ನು ಸೂಚಿಸುತ್ತವೆ ಎಂದು ಹೇಳಿದ್ದಿಲ್ಲಿ ಸ್ಮರಣೀಯ. ಒಂದು ಅಂಡವನ್ನು ಊರ್ಧ್ವಾಧೋಮುಖವಾಗಿ ಇಟ್ಟರೆ ಅದನ್ನು ಒಡೆಯುವುದು ಅತ್ಯಂತ ದುಃಸಾಧ್ಯ ಎಂದು ಹೇಳುವುದರ ಮರ್ಮ ಇಲ್ಲಿದೆ. ಖಗೋಲ ಶಾಸ್ತ್ರೀಯ ಶಕ್ತಿವ್ಯೂಹಗಳು ಅಂಡಾಕೃತಿಯುಳ್ಳವುಗಳು. ವಿಷ್ಣು ಪದವೆಂದರೆ ಆಕಾಶ. ಅದರ ಅಮಿತತೆಯ ಬಗೆ ಬೇರೆ ಪರಿಮಿತತೆಯ ಬಗೆ ಬೇರೆ. ಎರಡನೆಯ ಬಗೆಯನ್ನು ಈ ಅಂಡಾಕೃತಿಯ ವ್ಯೂಹಗಳು ಕೇಂದ್ರವುಳ್ಳ ಪರಿಧಿ ಸಹಿತವಾದ ಶಕ್ತಿ ಚಲನ ಕ್ಷೇತ್ರಗಳನ್ನು (ಗುರುತ್ವಾಕರ್ಷಣದ ಉಪ ಪ್ರಪಂಚಗಳನ್ನು) ಬರೆಯುತ್ತ ಅಳಿಸುತ್ತ ಹೋಗುವ ರೀತಿಯ ಅಸ್ತಿತ್ವವನ್ನು ಉಳ್ಳಂಥವುಗಳು. ಆದ್ದರಿಂದ ಈ ವಿಷ್ಣು ಚಕ್ರವು ಪಾಶುಪತದ ಯಾ ಕಾಲಾನಲ ಶಿವ ಶೂಲದ ತಮ್ಮನೆನ್ನಿಸಿತು. ನಾರಾಯಣಾಸ್ತ್ರವಾಯಿತು, ಬ್ರಹ್ಮಾಸ್ತ್ರ ಪ್ರತಿಸ್ಪರ್ಧಿಯಾಯಿತು.

–೬೪–

# ವ್ಯಾಧೇಶ್ವರ ಮಹಾತ್ಮೆ

ಹಿಂದೆ ಒಂದು ಕಾನಿನಲ್ಲಿ ಗುರುದ್ರೋಹಿಯಾದ ಭಿಲ್ಲನೊಬ್ಬನಿದ್ದನು. ಅವನು ದುರ್ಜನಾಗ್ರೇಸರ ಚಕ್ರವರ್ತಿಯಾಗಿದ್ದನು. ನಿಷ್ಕಾರಣವಾಗಿ ಪ್ರಾಣಿಗಳನ್ನು ಕೊಲ್ಲುವುದು, ಸಿಕ್ಕಾಬಟ್ಟೆ ಕದಿಯುವುದು, ಇತರರನ್ನು ನಾನಾ ರೀತಿಯಿಂದ ಪೀಡಿಸುವುದು ಅವನಿಗೆ ಬಾಲ್ಯದಿಂದ ಬಂದ ಅಭ್ಯಾಸವಾಗಿತ್ತು. ಒಂದು ಶಿವ ರಾತ್ರಿಯ ದಿನ ಹಸಿವಾಗುತ್ತದೆ ಎಂದು ಬೇಡಿದ ಅವನ ಮನೆಯವರಿಗಾಗಿ ರಾತ್ರಿಯವರೆಗೂ ಅಲೆದರೂ ಅವನಿಗೆ ಒಂದು ಮೃಗವೂ ಆ ಕಾಡಿನಲ್ಲಿ ಸಿಕ್ಕಲಿಲ್ಲ. ಆಗ ಗೊತ್ತಿಲ್ಲದೆಯೇ ಆ ಬೇಡರವನು ಬಿಲ್ವ ಪತ್ರೆಯ ಮರವೊಂದನ್ನು ಹತ್ತಿ ಯಾವುದಾದರೂ ಮಿಗ ಬಂದರೆ ಹೊಡೆಯಬೇಕೆಂದು ಕುಳಿತನು. ಆ ಮರ ಇದ್ದದ್ದು ಕೆರೆಯ ಏರಿಯ ಮೇಲೆ. ಅಲ್ಲೊಂದು ಶಿವಲಿಂಗವಿತ್ತು. ಅಲ್ಲಿಗೊಂದು ಮೃಗ ಬಂದಾಗ ಅದಕ್ಕೆ ಗುರಿಯಿಟ್ಟು ಆ ಬೇಡನು ಅದರತ್ತ ಬಾಣ ಬಿಡುವಾಗ ಒಂದು ಬಿಲ್ವ ಪತ್ರೆಯೂ ನೀರೂ ಅದರ ರಭಸದಿಂದ ಅಲ್ಲೇ ಕೆಳಗಿದ್ದ ಲಿಂಗದ ತಲೆಯ ಮೇಲೆ ಬಿತ್ತು. ಅದರಿಂದ ಅನಿರೀಕ್ಷಿತ ಶಿವ ಪೂಜೆ ಆ ಶಿವರಾತ್ರಿಯ ದಿನ ಆ ಭಿಲ್ಲನು ಮಾಡಿದ ಹಾಗಾಯಿತು. ಅಷ್ಟರಿಂದ ಅವನು ಮಾಡಿದ್ದ ಪಾಪಗಳೆಲ್ಲಾ ಪರಿಹಾರ ಹೊಂದಿದವು. ಆಗ ಆ ಹೆಣ್ಣು ಚಿಗರೆಯು ಬೇಡನ ಎತ್ತಿದ್ದ ಬಾಣವನ್ನು ನೋಡಿ ಅವನನ್ನು ಕೇಳಿತು. "ನನ್ನನ್ನು ಕೊಂದು ನೀನು ಏನು ಮಾಡುವೆ?"–ಎಂದು ಅದಕ್ಕವನು, "ನನ್ನ ಕುಟುಂಬದವರ ಹಸಿವನ್ನು ನೀಗಿಸುವೆನು" ಎಂದನು. ಆಗ ಆ ಹರಿಣಿಯು, "ಬೇಡನೇ, ಸ್ವಲ್ಪ ಸಮಯ ಕೊಡು. ನನ್ನ ಮಕ್ಕಳನ್ನು ನನ್ನ ತಂಗಿಯ ವಶಕ್ಕೊಪ್ಪಿಸಿ ತಿರುಗಿ ಬರುವೆನು" ಎಂದಿತು. ಆ ಮಾತಿಗೆ ಆ ಭಿಲ್ಲನು ಒಪ್ಪಿದಾಗ ಆ ಹರಿಣಿ ಹಾಗೇ ಮಾಡಿ ಪುನಃ ಬೇಡನಿದ್ದಲ್ಲಿಗೆ ಬಂದಿತು. ಅವನ ಅಪ್ಪಣೆ ಪಡೆದು ಮತ್ತೆ ಮೂರು ಸಲ ಮನೆಗೆ ಹೋಗಿ ಬಂದಿತು. ಆಗ ಭಿಲ್ಲನು ಬಾಣ ಎತ್ತಿದಾಗ ಮತ್ತೆ ಜಲ–ಪತ್ರೆಗಳು ಶಿವಲಿಂಗದ ತಲೆಯ ಮೇಲೆ ಬಿದ್ದು ಅವನಿಗೆ ಗೊತ್ತಿಲ್ಲದಂತೆಯೇ ಶಿವರಾತ್ರಿ ಪೂಜೆಯ ೪ ಜಾವಗಳು ಕಳೆದವು. ಅದರಿಂದ ಅವನಿಗೆ ಜ್ಞಾನೋದಯವಾಗಿ ಎದುರು ನಿಂತ ಹರಿಣಿಯನ್ನೂ ಅದರ ಬಳಗವನ್ನೂ ಅವನು ಕೊಲ್ಲಲಿಲ್ಲ. ಅದರಿಂದ ತೃಪ್ತನಾದ ಶಿವನು "ವಿಷ್ಣುವು ರಾಮಾವತಾರದಲ್ಲಿ ನಿನ್ನ ಮನೆಗೆ ಬಂದು ಉಳಿದು ನಿನಗೆ ಮುಕ್ತಿಯನ್ನು ಕೊಡುವನು" ಎಂದು ಹೇಳಿ ಆ ಮೃಗ ಕುಟುಂಬದ ಸದಸ್ಯರೆಲ್ಲರಿಗೂ ಆ ಕೂಡಲೇ ಮುಕ್ತಿಯನ್ನಿತ್ತನು;

ಅದಕ್ಕಿದ್ದ ಶಾಪ ಆಗಲೇ ಪರಿಹಾರವಾಯಿತು. ಶಿವಲಿಂಗಕ್ಕೆ ವ್ಯಾಧೇಶ್ವರನೆಂಬ ಹೆಸರು ಬಂದಿತು. ಭಿಲ್ಲನ ಮುಂದಿನ ಜನ್ಮವು ಶೃಂಗವೇರಪುರದಲ್ಲಾಯಿತು. ಅಲ್ಲಿಗೆ ರಾಮ ಬಂದಾಗ ಅವನನ್ನು ಆದರಿಸಿದ್ದರಿಂದ ಅವನಿಗೆ ಕೈಲಾಸ ಪ್ರಾಪ್ತಿಯಾಯಿತು. (ಮುಕ್ತಿಯ ಬಾಗಿಲು ತೆರೆಯಿತು.)

ಭಕ್ತಿ ಮಾರ್ಗ ಇಷ್ಟು ಸುಲಭ ಎಂದು ಈ ಕಥೆ ತೋರಿಸುತ್ತದೆ. ಆದರೆ ಎಲ್ಲ ಮಾರ್ಗಗಳಿಗೂ ಅನಿವಾರ್ಯವಾದ ಸ್ವಧರ್ಮ ಪಾಲನೆ, ಪಾಪ ವಿಮುಖತೆ, ಸತ್ಯವಂತಿಕೆ, ತ್ರಿಕರಣ ಶುದ್ಧಿ, ಔದಾರ್ಯ, ದಯೆ, ತ್ಯಾಗ, ಉಪಾಸ್ಯದಲ್ಲಿಯ ಏಕಾಗ್ರತೆ ಮತ್ತು ನಿಷ್ಠೆಗಳು ಅನುಕ್ರಮವಾಗಿ ನಡೆಯಲೇಬೇಕು ಎಂಬುದಿಲ್ಲಿ ಅವಿಸ್ಮರಣೀಯ. ಭಿಲ್ಲನ ಆತ್ಮ ವಿಕಾಸವಾದದ್ದು ಜನ್ಮಾಂತರಗಳ ಮೂಲಕ ಮತ್ತು ಮೃಗ ಗಣಕ್ಕೆ ಸದ್ಯೋಮುಕ್ತಿ ದೊರಕಿದ್ದು ಹಾಗೆ ನಡೆದದ್ದರಿಂದಲೇ. ಆದುದರಿಂದ ನೀತಿ ಶುದ್ಧಿಯೂ ಉಪಾಸನೆಯೂ ಅವಿನಾಭಾವಿಗಳು. ನೀತಿಯಿಲ್ಲದ ಭಕ್ತಿಯು ಕುಹಕ ಯುಕ್ತಿಯು, ದೇವರದಕ್ಕೆಂದೂ ಒಲಿಯನು.

"ನಾತ್ರಕಾರ್ಯಾ ವಿಚಾರಣಾ" ಎಂದು ಎರಡೆರಡು ಸಲ ಕೋಟಿ ರುದ್ರ ಸಂಹಿತೆಯು ಹೇಳಿರುವುದರಿಂದ ಕೇವಲಾದ್ವೈತಕ್ಕೆ ತಾರ್ಕಿಕ ಸಮರ್ಥನೆಯು ಅನಿವಾರ್ಯವಲ್ಲ. ಅಥವಾ ಅದಕ್ಕೆ ಆಧಾರ ಸ್ತಂಭವಾಗಿ ನಿಲ್ಲಲು ತರ್ಕಕ್ಕೆ ಸಾಮರ್ಥ್ಯ ಸಾಕಾಗದು. ಆದುದರಿಂದ ಶಿವೈಕ್ಯ ಅಥವಾ ಪರಬ್ರಹ್ಮೈಕ್ಯ ಎಂಬ ತಾತ್ಪರ್ಯದ ಶಿವ ಪುರಾಣವು ವ್ಯಾಸನೆಂಬ ಸದ್ಗುರುವಿನ ಆಧಾರವನ್ನು ಪ್ರಧಾನವಾಗಿ ಉಳ್ಳದ್ದು. ಈ ಪುರಾಣದ ಪ್ರಕಾರ ಶಿವನಿಗೂ ಜಗತ್ತಿಗೂ ಇರುವುದು ಚಿನ್ನ ಮತ್ತು ಅದರಿಂದ ಮಾಡಿದ ಆಭರಣ ಎಂಬೆರಡರಲ್ಲಿರುವಂಥ ಸಂಬಂಧ. ಸತ್ಯವು ಶಿವ, ಚಿನ್ನ, ಮಿಥ್ಯೆಯು ನಾಮ ರೂಪಗಳ ದೆಸೆಯಿಂದ ಸ್ವರ್ಣ ಭಿನ್ನವೆಂದು ತೋರುವ ಆಭರಣ ಸಮುದಾಯ. ಒಂದು ನಿತ್ಯ, ನಿರ್ವಿಕಾರ ಇನ್ನೊಂದು ಅನಿತ್ಯ. ವಿಕಾರ (ಪರಿವರ್ತನ ಶೀಲ) – ಅಥವಾ ಶಿವೇಚ್ಛೆಗೆ ಸಂಪೂರ್ಣ ಅಧೀನವಾಗಿ, ಇಚ್ಛೆ ಇಲ್ಲಿ ಸೊನಗಾರ. ಸೃಷ್ಟಿಯಲ್ಲದು ಬ್ರಹ್ಮ ಸ್ಥಿತಿಯಲ್ಲಿ ವಿಷ್ಣು, ಲಯದಲ್ಲಿ ರುದ್ರ ಮತ್ತು ಮುಕ್ತಿಯಲ್ಲಿ ಶಿವ. ಅಹಂಕಾರವೆಂಬ ಅಜ್ಞಾನದ ಆವರಣದಿಂದ ಮುಕ್ತವಾದ ಜೀವವೇ ಶಿವ ಅಥವಾ ಕೈವಲ್ಯ. ಶಿವನೇ ಗುರು. ಗುರುವೇ ಶಿವ. ಶಿವೇಚ್ಛೆಯು ದಿವ್ಯ; ಆದ್ದರಿಂದ ವಿಮರ್ಶಾತೀತ. ಶಿವನೇ ಜ್ಞಾನ; ಆದ್ದರಿಂದ ಅದರ ಮೇಲಿನ ಭಕ್ತಿಯೊಂದೇ ಭಕ್ತಿ. ಅಂಥ ಪೂರ್ಣ ಭಕ್ತಿಯೇ ಜ್ಞಾನ (=ಪರಬ್ರಹ್ಮಾನುಭೂತಿ, ಅಪರೋಕ್ಷ ಜ್ಞಾನ) ಪೂರ್ಣತೆಯು ಕ್ಷೀರ–ಕ್ಷೀರ ಸಾಮರಸ್ಯ. ಅಪೂರ್ಣತೆಯು ಅದರ ಅಭಾವದ ಆಭಾಸ.

ಈ ಶಿವಾದ್ವೈತವನ್ನು ಶಿವನು ಮೊದಲು ವಿಷ್ಣುವಿಗೆ ಉಪದೇಶಿಸಿದನು; ವಿಷ್ಣುವು ಅದನ್ನು ಬ್ರಹ್ಮನಿಗೆ ಉಪದೇಶಿಸಿದನು. ಬ್ರಹ್ಮನು ಅದನ್ನು ಸನಕಾದಿ ಮುನಿಗಳಿಗೆ ಹೇಳಿದನು; ಸನಕಾದಿಗಳು ನಾರದನಿಗೆ ತಿಳಿಸಿದರು; ನಾರದನು ವ್ಯಾಸನಿಗೆ ಅರುಹಿದನು;

ವ್ಯಾಸನು ಸೂತ ಪುರಾಣಿಕನಿಗೆ ಹೇಳಿದನು. ಸೂತನು ಅದನ್ನು ಲೋಕಕ್ಕೆ ಜಾಹೀರು ಮಾಡಿದನು. ಅದೇ ಶಿವ ಪುರಾಣ.

ಏಕದೇವವಾದ, ದೇವತ್ವದ ಸರ್ವಶಕ್ತಿಮತ್ತಾವಾದ. ಶಕ್ತಿಯ ಸರ್ವಪದಾರ್ಥ ಭೇದ ಸಮರಸತಾವಾದ, ಆ ಸಾಮರಸ್ಯದ ಅನಂತತಾವಾದ, ಏತದಿತರವಾದಗಳ ಆತ್ಯಂತಿಕತೆ ಆಭಾಸಿಕವೆಂಬವಾದ–ಈ ಪಂಚಮುಖಗಳಿಂದ ಶಿವಮಹಾಪುರಾಣವು ತನ್ನ ಸನಾತನತೆಯನ್ನೂ ಸರ್ವಧರ್ಮಸಮನ್ವಯವನ್ನೂ ಸಾಧಿಸುತ್ತದೆ. ಇದರಿಂದಲೇ ಹಿಂದು ಧರ್ಮಕ್ಕೆ "ವಿಶ್ವಧರ್ಮ" ಎಂಬ ಪುರಸ್ಕಾರ ಸಾರ್ಥಕವಾಗುತ್ತದೆ. ಇದು ಪೂರ್ಣತಾವಾದದ ಪೂರ್ಣಸ್ವರೂಪ. ಕೇಂದ್ರ ಶಿವಬಿಂದುವಿನ ವ್ಯಾಸ ರೇಖೆಯ ನಿಷ್ಪರಿಧಿಯಲ್ಲಿಯ ಸುತ್ತಾಟವು ಶಿವಪುರಾಣ ಕಾವ್ಯಸ್ವರೂಪವನ್ನು ತಾಳಿದೆ. ಈ ಸುತ್ತಾಟವೇ ಶಿವಕಾರ್ಯಾಭಾಸ. ಶೈವಸಾರಸ್ವತ, ಶಿವೋನ್ಮುಖತಾ ಪ್ರೇರಕ ಶಿಕ್ಷಣ. ಶಿವಾಯನವೇ ಶಾಂತ್ಯಯನ. ಅಬಾಧಿತ ನಿತ್ಯಶಾಂತಿಯು ಯಾರಿಗೆ ಬೇಡ? ಭೌತವಾದಿಗೆ ಬೇಡವೇ? ಮರಣಾನುಭವಿ ಇದಕ್ಕೆ ತಕ್ಕ ಉತ್ತರ ಕೊಟ್ಟಾನು– ಮರಣಾವಸ್ಥೆಯಲ್ಲೂ ವಸ್ತುನಿಷ್ಠ ಜ್ಞಾನ ಜಾಗರವುಳ್ಳಾತನು ಅಂಥ ನಿರ್ಣಾಯಕ ಉತ್ತರಾಧಿಕಾರಿ!

–೬೫–

# ಶ್ರೀ ಕೃಷ್ಣ ಪಡೆದ ಎಂಟು ವರಗಳು

ವಸುದೇವನ ಮಗನಾದ ಕೃಷ್ಣನು ಬಹುಕಾಲ ಮಕ್ಕಳನ್ನು ಪಡೆಯಲಿಲ್ಲ. ಅದಕ್ಕೆ ಏನು ಮಾಡಬೇಕೆಂದು ಅವನು ತನ್ನ ಗುರುವಾದ ಉಪಮನ್ಯುವಿದ್ದಲ್ಲಿಗೆ ಹೋಗಿ ಕೇಳಿದನು. ಉಪಮನ್ಯುವು ಆಯೋದಧೌಮ್ಯನೆಂಬ ಬ್ರಹ್ಮರ್ಷಿಯ ಶಿಷ್ಯನಾದ ಮಹರ್ಷಿ. ಅವನನ್ನು ಮಹಾಭಾರತ ಹೊಗಳಿದೆ. ಋಗ್ವೇದದಲ್ಲೂ ಅವನ ಹೆಸರು ಬಂದಿದೆ. ಶಿಷ್ಯನಾದ ವಾಸುದೇವನಿಗೆ ಅನುಗ್ರಹ ಮಾಡಲೆಂದು ಅವನಿಗೆ ಈ ಪ್ರಕಾರ ರುದ್ರ ಮಹಾತ್ಮ್ಯವನ್ನು ವಿವರಿಸಿದನು: ಮತ್ತು ಅವನನ್ನು ಕುರಿತು ತಪಸ್ಸು ಮಾಡಬೇಕೆಂದು ಉಪದೇಶಿಸಿದನು:

ಪರಬ್ರಹ್ಮಾತ್ಮಕ ಶಿವನು ರುದ್ರ, ಶಂಭು, ಶಂಕರ ಎಂಬ ಪೂರ್ಣಾವತಾರದಲ್ಲಿ ಸಗುಣ, ಸಕಲ, ಸಮಾಯ, ಸಂಕಲ್ಪ ಮಾತ್ರೋದಯ ಸಿದ್ಧಿಮಂತ. "ಇಚ್ಛಾಮಾತ್ರಂ ಜಗತ್ ಸೃಷ್ಟಿ ಸ್ಥಿತಿ ಸಂಹಾರಕಾರಕಃ." ಚರಾಚರಗಳಿಂದ ಕೂಡಿದ ಮೂರುಲೋಕಗಳು (ಭೂ. ಭುವ, ಸುವ) ಮಹೇಶ್ವರನಾದ ರುದ್ರನ ತೋಳುಗಳಿಂದ ಹುಟ್ಟಿದವು. ಅವನ ಶೂಲವು ವಿಜಯ ಎಂಬ ಹೆಸರನ್ನುಳ್ಳದ್ದು. ಅದರ ಎದುರು ನಿಂತ ಎಲ್ಲ ಶಸ್ತ್ರಾಸ್ತ್ರಗಳೂ ನಾಶವಾಗುತ್ತವೆ. ಚಕ್ರಾಧಿಕ್ಯಕ್ಕಿಲ್ಲಿ ಚಕ್ರ!

ಆ ತ್ರಿಶೂಲದಿಂದ ಹಿಂದೆ ಗರ್ವಿಷ್ಠರಾಗಿದ್ದ ಯೌವನಾಶ್ವ, ಮಾಂಧಾತೃ, ಹೈಹಯ, ಲವಣಾಸುರ, ಶತ್ರುಘ್ನನೃಪತಿ (ದೈತ್ಯ) ಮುಂತಾದವರು ಅಳಿದರು. ಇತರ ರುದ್ರಾಯುಧಗಳೆಂದರೆ ಕೊಡಲಿ, ಸುದರ್ಶನ ಚಕ್ರ, ವಜ್ರಾಯುಧ, ಪಿನಾಕಧನು, ಶಕ್ತಿ. ಖಡ್ಗ. ಗದೆ, ಪಾಶಗಳು, ಇವುಗಳನ್ನು ಪರಶುರಾಮಾದಿಗಳು ರುದ್ರನಿಂದ ಬೇಡಿ ಪಡೆದುಕೊಂಡರು. ರುದ್ರನ ಬಲಕ್ಕೆ ಬ್ರಹ್ಮ. ಎಡಕ್ಕೆ ವಿಷ್ಣು (ಕೃಷ್ಣ): ಚತುರ್ದಶಮನುಗಳು, ಭೃಗು ಮೊದಲಾದ ಋಷಿಗಳು. ಇಂದ್ರಾದಿ ದೇವತೆಗಳು, ದೇವೀ ಸಮೀಪಸ್ಥ ಸ್ಕಂದ, ನಂದಿ, ಭೂತಗಣಗಳು, ವಿವಿಧ ಮಾತೃಶಕ್ತಿಗಳು ಎದುರು ಕುಳಿತವರು. ರುದ್ರ ಶಿವನ ಒಡ್ಡೋಲಗದ ಸದಸ್ಯರಲ್ಲಿರುವರು ಗಣ್ಯರು. ಅಂಥ ಒಂದು ದೇವಸಭೆಯಲ್ಲಿ ಉಪಮನ್ಯು ರುದ್ರನಿಂದ ತ್ರಿಕಾಲಜ್ಞಾನವನ್ನು ಬೇಡಿ ಪಡೆದನು; ಜರೆ, ಮರಣಗಳಿಂದ ಮುಕ್ತನಾದನು. ಶಿವಕೃಪೆಯಿಂದ ಅವನನ್ನು ಓಲೈಸಲು ಋಷಿಗಳು, ಗಂಧರ್ವರು, ಅಪ್ಸರಸ್ಸುಗಳು, ವಿದ್ಯಾಧರರು, ಸಿದ್ಧರು ಮತ್ತು ಸಾಧ್ಯರು ಶಿವಾಜ್ಞೆಯಂತೆ ಸಿದ್ಧರಾದರು. ಶಿವದತ್ತ

ಆಯುಧಗಳಿಂದ ಋಷಿಗಳೂ, ದೇವತೆಗಳೂ ದುಷ್ಟ ಸಂಹಾರ ಮಾಡಿದರು. ದಿವ್ಯವು ಶಿಷ್ಟ; ಅದಿವ್ಯವು ದುಷ್ಟ. ದುಷ್ಟ–ಶಿಷ್ಟರೆಲ್ಲರ ಸ್ರಷ್ಟಾರನೂ ಶಿವನೇ; ಮೊದಲು ದುಷ್ಟಸಂಹಾರ–ಅನಂತರ ಶಿಷ್ಟರ ಭುಕ್ತಿ ಮತ್ತು ಮುಕ್ತಿ. ಇದು ಶಿವಲೀಲೆ; ನಿರ್ಗುಣನ ಸಗುಣಾಭಿವ್ಯಕ್ತಿ. ದುಷ್ಟರು ಶಿವವರಗಳನ್ನು ದುರುಪಯೋಗ ಮಾಡಿಕೊಂಡಾಗ ಶಿಷ್ಟರು ಪ್ರತಿವರಗಳಿಂದ ಅವರನ್ನು ನಾಶ ಮಾಡುತ್ತಾ ಬಂದಿದ್ದಾರೆ. ಇದು ಶಿವ ಪ್ರಿಯ. ಅವನು ಎಲ್ಲರಿಗೂ ಭಕ್ತಿ ದೋರಿದಾಗ ಕೇಳಿದ್ದನ್ನು ಕೊಡುತ್ತಾ ಬಂದವನು. ಭಕ್ತಿಯಿಂದಲೇ ಉಪಮನ್ಯು ತ್ರಿಕಾಲಜ್ಞಾನವನ್ನು ಪಡೆದುದಲ್ಲವೇ? ಮುಕ್ತಿಯು ಸರ್ವಜ್ಞತ್ವ ಮತ್ತು ನಿರುಪಾಧಿಕ ಆನಂದ. ಅದೂ ಭಕ್ತಿ ಜನ್ಯ ಜ್ಞಾನದಿಂದ ಲಭ್ಯ. ಕರ್ಮ–ಭಕ್ತಿ–ಜ್ಞಾನಗಳು ಬದ್ಧ ಸಾಧಕನಲ್ಲಿ ಓತಪ್ರೋತ–ಅವು ಒಂದು, ಎರಡು, ಮೂರನೆಯ ಉತ್ತರೋತ್ತರ ಮಟ್ಟಗಳವುಗಳಾದದ್ದು ಅಂಶ ಪ್ರಾಧಾನ್ಯದಿಂದ. ಶಿಷ್ಟರು ವರಮದದಿಂದ ದುಷ್ಟರಾದಾಗ ಅವರೂ ಶಿವನಿಂದ ದುಷ್ಟ ದೈತ್ಯರಂತೆ ದಮಿಸಲ್ಪಡುತ್ತಾರೆ; ಹಾಗೇ ದುಷ್ಟರು ಅವನಿಂದ ಗರ್ವಭಂಗ ಹೊಂದಿದ ಮೇಲೆ ಶಿಷ್ಟರಾಗಿ ಸದ್ಗತಿಯನ್ನೂ ಶಿವನಿಂದ ಪಡೆಯುತ್ತಾರೆ. ಸದ್ಗತಿಗಳ ಪರಾಕಾಷ್ಠೆಯೇ ಅದ್ವೈತ ಸಾಯುಜ್ಯ ಮುಕ್ತಿ.

ಇದನ್ನೆಲ್ಲಾ ಕೇಳಿ ಕೃಷ್ಣನು ಶಿವೋಪಾಸನೆ ಮಾಡಿ ಅವನಿಂದ ೧) ಶಿವಧರ್ಮಬುದ್ಧಿ; ೨) ಅಪ್ರಚಲ ಕೀರ್ತಿ; ೩) ಶಿವಸಾಮೀಪ್ಯ; ೪) ಶಿವಭಕ್ತಿ; ೫) ದಶಪುತ್ರರು; ೬) ಶತ್ರುಸಂಹಾರಶಕ್ತಿ; ೭) ಅಪಮಾನವಾಗದಿರುವಿಕೆ ಮತ್ತು ೮) ಯೋಗಿ ಚಕ್ರವರ್ತಿತ್ವ ಎಂಬ ಎಂಟು ವರಗಳನ್ನು ಪಡೆದನು.

ಸ್ವರ್ಗ, ನರಕ, ಬಂಧ, ಮುಕ್ತಿಗಳೆಲ್ಲವೂ ಒಬ್ಬ ಮನುಷ್ಯನ ಮನೋ ದೇಹಬುದ್ಧಿಗಳಿಂದ ಕೂಡಿದ ಬದ್ಧ ಜೀವನದ ಜೀವತ್ವಕ್ಕೇ ಸಂಬಂಧಿಸಿದ ಮತ್ತು ಅದರೊಳಗೇ ನಡೆವ ಕ್ರಿಯಾಂತರ ಸಾಧನಗಳ ಫಲಗಳು, ಸಿದ್ಧಿಗಳು (ಸ್ವಾಮಿ ರಾಮತೀರ್ಥರ ಗ್ರಂಥಗಳನ್ನು ಓದಿರಿ.) ಆದರೆ ಸಾಮಾನ್ಯರಿಗಾಗಿ ರೂಪಕೋಕ್ತಿಯಿಂದ ಸಮಾಜದ ಗುರುಗಳು ಧರ್ಮರಾಜನಾದ ಯಮನ ಲೋಕದ ಮೂಲಕ ವರ್ಣಿಸಿದ್ದಾರೆ. ಪುಣ್ಯವಂತರಿಗೆ ಸ್ವರ್ಗ, ಪಾಪಿಷ್ಠರಿಗೆ ನರಕ; ಇಕ್ಕರ್ತರೂ ಬದ್ಧರು; ಪಾಪಪುಣ್ಯಾತೀತರು ಮುಕ್ತರು. ವಿಷ್ಣುವಿನಿಂದ ಹಿಡಿದು ಅತ್ಯಧಮ ಮನುಷ್ಯನ ಅಥವಾ ದೈತ್ಯನವರೆಗೆ ಎಲ್ಲರೂ ಪಾಪ ಮಾಡಿ ರುದ್ರನಿಂದ ಶಿಕ್ಷಿಸಲ್ಪಟ್ಟು ಅನಂತರ ಸದ್ಗತಿಗಳನ್ನು ಪಡೆದರೆಂಬುದೇ ಶಿವ ಮಹಾಪುರಾಣದ ಮಹಾ ತಾತ್ಪರ್ಯ. ಪಾಪ ಪುಣ್ಯಗಳ ಹೆಚ್ಚು ಕಡಿಮೆಗಳಿಗೆ ತಕ್ಕಂತೆ ಶಿಕ್ಷೆ ಹಾಗೂ ರಕ್ಷೆ. ಶಿವೋಪಾಸನೆಯೊಂದೇ ಸರ್ವ ದುಃಖತಾರಕ. ಅಂಥ ಅವಕಾಶ ಇದೆಯೆಂಬ ಆಧ್ಯಾತ್ಮಿಕ ಆಶಾವಾದ ವೈದಿಕ ಆರ್ಯ–ಹಿಂದು ಧರ್ಮದ ಸಾರ. ಅದರಿಂದಲೇ ಬೌದ್ಧ, ಜೈನ, ವೀರ ಶೈವಾದಿ ಮತಗಳೆಲ್ಲವೂ ಹಿಂದು ಮತದ ಶಾಖೆಗಳೆಂದು ತಿಳಿಯಲ್ಪಟ್ಟದ್ದು. ಇಸ್ಲಾಂ, ಕ್ರೈಸ್ತ, ಪಾರಸೀಕ ಮತಗಳೂ ಸದ್ಗತಿಯ ಆಶಾವಾದದ ಐಕಮತ್ಯವನ್ನವಲಂಬಿಸಿದರೆ ಹಿಂದು ಮತದ ಅಂಗಗಳಾಗಲು ಸಾಧ್ಯ.

ಆಗ ಹಿಂದು ಧರ್ಮವು ವಿಶ್ವಧರ್ಮದ ಪಟ್ಟಕ್ಕೇರುತ್ತದೆ. ಸದ್ಗತಿಯ ವರ್ಣನೆಗಳ ಭೇದವನ್ನು ಗೌಣವೆಂದು ಗಣಿಸುವುದು ಅಗತ್ಯ. ಪಾಪಗಳಿಗೆ ವಿರುದ್ಧವಾದವುಗಳು ಪುಣ್ಯಗಳು. ಪಾಪಗಳ ಪಟ್ಟಿ ಇಂತಿದೆ:

ಪರಸ್ತ್ರೀಗಮನ, ಪರಸ್ವಾಪಹರಣ, ಪರಹತ್ಯಾ ಸಂಕಲ್ಪ, ಲೋಕ ಕಂಟಕ ಚಿಂತನ– ಎಂಬಿವುಗಳು ಮಾನಸಿಕವಾದ ನಾಲ್ಕು ಮೂಲ ಪಾಪಗಳು. ಮಾನಸಿಕವು ವಾಙ್ಮಯವಾಗಿ ಅಥವಾ ಆಗದೆ ಕಾಯಿಕ (ಕಾರ್ಯರೂಪಕ್ಕೆ ಬರುವ) ವಾಗುವುದು ಕ್ರಮಾಗತ. ವಾಙ್ಮಯ ಅಥವಾ ವಾಚಿಕ ಪಾಪಗಳೂ ನಾಲ್ಕು: ೧) ಯದ್ವಾತದ್ವಾ ಮಾತಾಡುವುದು; ೨) ಅಸತ್ಯವನ್ನು ಹೇಳುವುದು; ೩) ಅಪ್ರಿಯವನ್ನು (ಅದು ಅಸತ್ಯವಾಗಿದ್ದಾಗಲೂ) ಆಡುವುದು; ೪) ಪರೋಕ್ಷವಾಗಿ ಚಾಡಿ ಹೇಳುವುದು. ಕಾಯಿಕ ಅಪರಾಧಗಳು: ೧) ಅಭಕ್ಷ್ಯಭಕ್ಷಣ; ೨) ಹಿಂಸೆ ಮಾಡುವುದು: ೩) ವಂಚನೆ: ೪) ಪರರ ಆಸ್ತಿಯನ್ನು ಕಸಿದುಕೊಳ್ಳುವುದು. ಈ ನಾಲ್ಕು ಪ್ರಧಾನವಾದ ಕಾಯಿಕ ಪಾಪಗಳು. ಮೂರು ಸಾಧನಗಳಿಂದ ಮಾಡುವ ಈ ಹನ್ನೆರಡು ಪಾಪ ವೃಕ್ಷಗಳ ಶಾಖೋಪಶಾಖೆಗಳು ಅನೇಕಾನೇಕ:

ಶಿವ–ದೈವನಿಂದೆ, ಶಿವಜ್ಞಾನಿಗಳ ನಿಂದೆ, ಗುರು ನಿಂದೆ, ಪಿತೃನಿಂದೆ, ಉನ್ಮಾದ ಭಾಷಣ, ದೇವದ್ರವ್ಯಾಪಹರಣ, ದ್ವಿಜದ್ರವ್ಯಾಪಹರಣ, ಶಿವಜ್ಞಾನ ಹೇಳುವ ಪುಸ್ತಕವನ್ನು ಕಳುವುದು, ಶಿವಪೂಜಾದ್ವೇಷ, ಅರ್ಚಿತ ಶಿವಲಿಂಗವನ್ನು ನಮಸ್ಕರಿಸದಿರುವುದು, ಯಥೇಷ್ಟ ಚೇಷ್ಟೆ, ನಿಃಶಂಕೆಯಿಂದ ಸಿಕ್ಕಲ್ಲಿ ಸಿಕ್ಕದ್ದನ್ನು ಭೋಗಿಸುವುದು. ಅಶಿಸ್ತಿನಿಂದವರ್ತಿಸುವುದು, ಪೂಜ್ಯ ಪೂಜಾವ್ಯತಿಕ್ರಮ, ದೇಶ–ಕಾಲ–ಸಂದರ್ಭಗಳ ಔಚಿತ್ಯವನ್ನು ಮೀರುವುದು, ಶಿವಾಚಾರವನ್ನೂ (ಮಂಗಲಾಚಾರವನ್ನೂ) ಶಿವ (ಮಂಗಲ) ನಿಂದೆಯನ್ನೂ ರೂಢಿಸಿಕೊಳ್ಳುವುದು, ಶಿವಜ್ಞಾನ ವಿಮುಖರಾಗಿ ಓದುವುದು ಮತ್ತು ಬರೆಯುವುದು, ಅನ್ಯಾಯವಾಗಿ ದಾನಮಾಡುವುದು, ಅನ್ಯಾಯವನ್ನು ಕೇಳುವುದು ಮತ್ತು ಹೇಳುವುದು, ಅತ್ಯಾಶೆಯಿಂದ ದ್ಯೂತಾದಿಗಳಲ್ಲಿ ತೊಡಗುವುದು, ಕುಜ್ಞಾನವನ್ನು ಸುಜ್ಞಾನವೆಂದು ವಾದಿಸುವುದು, ಅಶುದ್ಧ ಸ್ಥಳದಲ್ಲಿ ಮಲಗುವುದು. ಅಶಿವ ಜ್ಞಾನಪ್ರಸಾರ, ಶಿವಜ್ಞಾನ ಖಂಡನೆ. ಗುರುಗಳ ಆಜ್ಞೆಯನ್ನು ಮೀರುವುದು, ಗುರು ಶುಶ್ರೂಷೆ ಮಾಡದಿರುವುದು, ಅಶುದ್ಧ ಆವರಣದಲ್ಲಿರುವುದು; ಅಪಗುರು ಸೇವೆಯಿಲ್ಲಿ ಅಧ್ಯಾಹೃತ. ಸದಸದ್ ಗುರು ವಿವೇಕ ಕ್ರಮವನ್ನು ಶ್ರೀ ರಮಣರೂ, ಶ್ರೀ ವಿವೇಕಾನಂದರೂ ಹೇಳಿದ್ದಾರೆ: ಅಂತೇವಾಸದಿಂದ ಪರೀಕ್ಷಣ ಮತ್ತು ಶಕ್ತಿ ದಾನ ಕ್ಷಮತ್ವದ ಪರೀಕ್ಷಣ.

ಬ್ರಹ್ಮಜ್ಞಾನಿಯ ಹತ್ಯೆ, ಹೆಂಡ ಕುಡಿಯುವುದು, ಕದಿಯುವುದು, ಗುರುಪತ್ನಿಯನ್ನು ಕಾಮಿಸುವುದು, ಇಂಥ ಪಾಪ ಮಾಡುವವರ ಸಹವಾಸದಲ್ಲಿರುವುದು ಎಂಬೀ ಐದು ಪಂಚಮಹಾಪಾತಕಗಳು. ವಧ, ಮರ್ಮಘಾತಕ ದೋಷಾರೋಪಣೆ, ದಾನಕೊಟ್ಟದ್ದನ್ನು ಕಸಿದುಕೊಳ್ಳುವುದು, ನಿರ್ದೋಷಿಯನ್ನು ದೂಷಿಸುವುದು ಎಂಬೀ

ನಾಲ್ಕನ್ನು ಬ್ರಹ್ಮಜ್ಞಾನಿಗೆ ಮಾಡುವುದು ಬ್ರಹ್ಮಹತ್ಯೆ ಎಂದೆನ್ನಿಸುವುದು. ಬ್ರಹ್ಮಜ್ಞಾನವೆಂದರೆ ಆತ್ಯಂತಿಕ, ನಿರ್ವಿಕಲ್ಪ, ಸರ್ವಮೂಲ–ಎನ್ನಿಸುವ ಸತ್ಯದ ತಿಳಿವಳಿಕೆ.

ಸುಳ್ಳು ಪ್ರಚಾರದಿಂದ ಸ್ವಪ್ರತಿಷ್ಠೆಯನ್ನು ಬೆಳೆಸಿಕೊಳ್ಳುವುದು, ಇದ್ದ ಸುಗುಣವನ್ನು ಬಿಡುವುದು, ಅನ್ಯಾಯದಿಂದ ವಿತ್ತಾರ್ಜನೆ ಮಾಡುವುದು, ಶಿವಕಾರಕ ಜ್ಞಾನವನ್ನು ಪಡೆದೂ ಅದನ್ನು ಆಚರಣೆಯಲ್ಲಿ ತಾರದಿರುವುದು, ಹಿಡಿದ ಒಳ್ಳೆಯ ವ್ರತವನ್ನು ಬಿಡುವುದು, ಮಾತಾ ಪಿತೃಗಳನ್ನು ದೂರೀಕರಿಸುವುದು, ಸುಳ್ಳು ಸಾಕ್ಷಿ ಹೇಳುವುದು, ಸುಸಂಸ್ಕೃತರನ್ನು ಸುಳ್ಳು ಹೇಳಿ ಮೋಸ ಮಾಡುವುದು, ಮಾಂಸ ತಿನ್ನುವುದು, ನಿರಪರಾಧಿ ಪ್ರಾಣಿಗಳನ್ನು ಕೊಲ್ಲುವುದು, ಸುಸಂಸ್ಕೃತರನ್ನು ಬಿಟ್ಟು ಅಸಂಸ್ಕೃತರಿಗೆ ದಾನ ಮಾಡುವುದು, ಗೋಮಾರ್ಗ, ಗ್ರಾಮ, ವನಗಳಿಗೆ ಬೆಂಕಿ ಹಚ್ಚುವುದು. ಈ ಎಲ್ಲವೂ ಅಶಿವಾಚಾರಗಳು. ಬಡವರ ಶೋಷಣೆ, ನರಾಪಹರಣ, ಗಜಾದಿ ವಾಹನಗಳ ಅಪಹರಣ. ಗೋಹರಣ; ಭೂಮಿ, ಬೆಳ್ಳಿ, ವಸ್ತ್ರ, ಔಷಧಿ ಮತ್ತು ರಸ ದ್ರವ್ಯಗಳ ಅಪಹರಣ ಇವೂ ಘೋರ ಪಾಪಗಳು. ಅವಿಪತ್ಕಾಲದಲ್ಲಿ ಮನೆಯಲ್ಲಿಯ ಗಂಧ, ಅಗರು, ಕರ್ಪೂರ, ಕಸ್ತೂರಿ, ರೇಶಿಮೆ ವಸ್ತ್ರಗಳನ್ನು ಮಾರುವುದು; ನ್ಯಾಸಾಪಹಾರ, ತಕ್ಕ ವರನೊಡನೆ ವಯಸ್ಸಿಗೆ ಬಂದ ಕನ್ಯೆಗೆ ಮದುವೆ ಮಾಡದೆ ಇರುವುದು; ಮಗನ ಹಾಗೂ ಗೆಳೆಯರ ಹೆಂಡಿರೊಡನೆಯೂ ಅಕ್ಕ ತಂಗಿಯರೊಡನೆಯೂ ಕಾಮ ಕೇಳಿ ನಡೆಸುವುದು, ಲಗ್ನವಾಗದ ಕನ್ಯೆಯರೊಡನೆ ಸಂಗ ಮಾಡುವುದು; ಹೆಂಡ ಕುಡುಕಿಯೊಡನೆ ಸಂಭೋಗ ಮಾಡುವುದು; ಕುಲಸ್ತ್ರೀ ಮಾನಭಂಗ ಮಾಡುವುದು– ಇವೆಲ್ಲಾ ಮಹಾಪಾತಕಗಳು. ಉಪಪಾತಕಗಳು ಇಂತಿವೆ:

ವಿದ್ವದ್ಧನಾಪಹರಣ, ದಾಯಾದಿಗಳಿಗೆ ಆಸ್ತಿ ವಿಭಾಗದಲ್ಲಿ ವಂಚನೆ ಮಾಡುವುದು, ಅತಿಮಾನ, ಅತಿಕೋಪ, ಡಾಂಭಿಕತೆ, ಕೃತಘ್ನತೆ, ಅತಿಯಾದ ಭೋಗ ಲಂಪಟತೆ, ಕೃಪಣತೆ, ಸಜ್ಜನ ದ್ವೇಷ, ಪರದಾರಾ ಸಂಭೋಗ, ಸುಕನ್ಯೆಯರ ನಿಂದನೆ, ತಮ್ಮನಿಗೆ ಮದುವೆ ಮಾಡಿ ತಾನು ಮದುವೆಯಾಗದೆ ಇರುವುದು. ಅಣ್ಣನಿಗೆ ಹಾಗೆ ಮಾಡಗೊಡುವುದು. ಹಾಗೆ ಹೆಂಡತಿಯಾಗಿ ಹೋಗುವುದು, ಅಂಥ ಕನ್ಯಾದಾನ, ಅಂಥ ದಂಪತಿಗಳೊಡನೆ ಪೂಜೆ–ಪುರಸ್ಕಾರಗಳಿಗೆ ಕುಳಿತುಕೊಳ್ಳುವುದು; ಶಿವಾಶ್ರಮಗಳ ತೋಟಗಳನ್ನು ಹಾಳು ಮಾಡುವುದು (ಕಲ್ಯಾಣ ಕೇಂದ್ರಗಳನ್ನು ಕೆಡಿಸುವುದು), ಆಶ್ರಮಸ್ಥರಿಗೆ ಪೀಡೆ ಕೊಡುವುದು; ಅವರ ಧನ, ಧಾನ್ಯ, ವಸ್ತು, ವಾಹನ, ಭೃತ್ಯರನ್ನು ಅಪಹರಿಸುವುದು; ಹಿತ್ತಾಳೆ–ತಾಮ್ರಗಳ ಪಾತ್ರೆ, ಹಸು, ಕರು ಮುಂತಾದುವುಗಳನ್ನೂ ಬಿಡದೆ ಕದಿಯುವುದು ಮತ್ತು ಆಶ್ರಮಗಳನ್ನು ಹೊಲಸು ಮಾಡುವುದು; ಆಶ್ರಮಗಳ ಅಥವಾ ತಮ್ಮ ಬಳಕೆಯ ಪೂಜಾಸ್ಥಲಗಳನ್ನೂ ಕೆರೆ ಕಾಲುವೆಗಳನ್ನೂ ತೋಟ– ಗದ್ದೆಗಳನ್ನೂ ಆಕ್ರಮಿಸಿ ಮೀರಿ ಬಿಡುವುದು–ಹೆಂಡಿರು ಮಕ್ಕಳನ್ನು ಹಣದಾಸೆಗಾಗಿ ಮಾರಿಬಿಡುವುದು; ಯಾತ್ರಿಕರ ಹಾಗೂ ಉಪವಾಸ ವ್ರತಿಗಳ ಸ್ತ್ರೀಯರನ್ನೂ ಧನವನ್ನೂ

ಉಪಭೋಗಿಸುವುದು; ದುಷ್ಟ ಸ್ತ್ರೀಯರಿಗೆ ಆತ್ಯಂತಿಕವಾಗಿ ಸೋತು ಅವರ ಆಳಾಗುವುದು; ಶಿಷ್ಟ ಸ್ತ್ರೀಯರ ಮಾನರಕ್ಷಣೆ ಮಾಡದೆ ಇರುವುದು; ಸ್ತ್ರೀಯರನ್ನು ಮರುಳುಗೊಳಿಸಿ ಮೋಸದಿಂದ ಭೋಗಿಸುವುದು; ಕಾಲಕ್ಕೆ ಸರಿಯಾಗಿ ಸಾಲವನ್ನು ಮರು ಪಾವತಿ ಮಾಡದಿರುವುದು; ಧನ–ಧಾನ್ಯಗಳನ್ನು ಬಡ್ಡಿಯನ್ನಾಗಿ ತೆಗೆದುಕೊಂಡು ಬಳಸುವುದು; ಕಳ್ಳ ಹಣವನ್ನು ತೆಗೆದುಕೊಳ್ಳುವುದು; ಕಳ್ಳ ಮಾರಾಟದಿಂದ ಜೀವಿಸುವುದು; ಕೆಟ್ಟ ಶಾಸ್ತ್ರವನ್ನು ಕಲಿತುಕೊಂಡು ಕುತರ್ಕ ಮಾಡುವುದು–ಇತ್ಯಾದಿ.

–೬೬–

# ಅನ್ನದಾನ ಪ್ರಶಂಸೆ

ಹಸಿವೆಗಿಂತ ಹೆಚ್ಚಿನ ಬಾಧೆಯಿಲ್ಲ; ಅನ್ನಕ್ಕಿಂತ ಹೆಚ್ಚಿನ ದಾನವಿಲ್ಲ–ಇದನ್ನು ಶಿವ ಪುರಾಣದ ಕೋಟಿ ರುದ್ರ ಸಂಹಿತೆಯ ಐದನೆಯ ಉಪಸಂಹಿತೆಯು ಹೇಳಿದೆ. ಆದುದರಿಂದ ಅನ್ನವನ್ನು ಹಸಿದ ಅತಿಥಿಗಳಿಗೆ ದಾನ ಮಾಡುವುದರಿಂದ ಸ್ವರ್ಗಾನುಭವವು ಬದುಕಿರುವಾಗ ಕೂಡಾ ಲಭ್ಯ. ಸರ್ವದಾನಗಳ ಫಲವು ಅನ್ನದಾನದಿಂದ (ದುಡ್ಡಿನ ದಾನವಲ್ಲ) ಲಭ್ಯ. ಅನ್ನವು ಪ್ರಾಣವನ್ನು ಉಳಿಸಬಲ್ಲುದು. ಆಹಾರ–ವಸ್ತ್ರ–ವಸತಿಗಳಿಗಾಗಿಯೇ ಕೊಟ್ಟ ಹಣ ಅವುಗಳಿಗಾಗಿಯೇ ವಿನಿಯುಕ್ತವಾದಾಗ ಅದು ತತ್ಸಮ ಫಲದಾಯಕವೆಂಬುದು ಗೃಹೀತ. ಹಸಿವೆಯು ರೋಗ ಚಕ್ರವರ್ತಿ. ಅದರಿಂದ ಮುಕ್ತವಾದ ದೇಹವು ಧರ್ಮಾರ್ಥ ಕಾಮಮೋಕ್ಷಗಳಿಗಾಗಿ ಬಳಸಲ್ಪಟ್ಟಾಗ ಅದು ಪಡೆದ ಅನ್ನದಾನವು ದಾನಿ–ಆದಾನಿಗಳಿಬ್ಬರಿಗೂ ಸತ್ ಫಲದಾಯಕ. ಪ್ರಾಣವು ವಾಯುವು. ವಾಯುವು ಶಿವಶಕ್ತಿಗಳಲ್ಲಿ ಗಣ್ಯ. ಅದರಿಂದಲೇ ದೇವತೆಗಳನ್ನೆಲ್ಲಾ ಗಾಳಿಗಳೆಂದು ಕರೆಯುವ ರೂಢಿಯಿದೆ. ಅದು ಸರ್ವಶಕ್ತಿಗಳ ಪರ್ಯಾಯ. ಅನ್ನದಾನದಲ್ಲಿ ಪಾನ (ನೀರು) ದಾನ ಅಡಕವಾಗಿದೆ. ಕೂಳ್ ನೀರುಗಳು ಸಹಚರಗಳು. ಅವು ಪ್ರತಿಯೊಬ್ಬ ಪ್ರಜೆಗೂ ದೊರಕುವಂತೆ ಮಾಡುವ ಸರಕಾರವು ಸರ್ವಶ್ರೇಷ್ಠ. (ಪುಟ ೨೮೭–ಶಿ.ಪು.) ಈ ದಾನಕ್ಕೆ ವೃತ್ತಿ ಜಾತಿ ಭೇದವಿಲ್ಲ. ಲಿಂಗ ಸ್ವಪರಕೀಯ ಭೇದವಿಲ್ಲ. ಅಂಡಜ, ಉದ್ಭಿಜ್ಜ, ಸ್ವೇದಜ, ಜರಾಯುಜಗಳ (ಹಕ್ಕಿ, ವನಸ್ಪತಿ, ಕ್ರಿಮಿ, ಗರ್ಭಜಾತ) ಭೇದವಿಲ್ಲ. ಅನ್ನದಾನದಿಂದ ದೊರಕದ ಅಷ್ಟ ಭೋಗಗಳಿಲ್ಲ– ಯೋಗ ಪಾತ್ರತ್ವವಿಲ್ಲ. ಪಾನವೆಂದರೆ ಶಿಷ್ಟ ಪಾನೀಯ; ಮದ್ಯಾದಿ ದುಷ್ಪಾನೀಯಗಳಲ್ಲ. ಈ ದಾನ (ತ್ಯಾಗ) ಆಧರಿಸಿದ್ದು ಸತ್ಯವೆಂಬ ಪ್ರಾಮಾಣಿಕತೆಯ ತತ್ವವನ್ನು. ಗಾಂಧೀಜಿ ಅಹಿಂಸೆಗಿಂತ ಮೊದಲು ಇದನ್ನು ಸಾರಿದರು:

ಅವರು ವ್ಯಾಸೋಕ್ತಿಯಂತೆ ಸತ್ಯಾಹಿಂಸೆಗಳು ಒಂದೇ ನಾಣ್ಯದ ಎರಡು ಮುಖಗಳೆಂದರು. ಅವು ತರ್ಕಶಾಸ್ತ್ರದ "ಯು" ಸೂಚನೆಯಂತಿವೆ–ಪರಸ್ಪರ ಸ್ಥಾನಗಳಲ್ಲಿ ವಿನಿಮಯಾರ್ಹಗಳಾಗಿವೆ; ರಾಮ–ಕೃಷ್ಣರೆಂಬ ಕರ್ತೃ–ಕರ್ಮಗಳ ಸ್ಥಾನ ವಿನಿಯಮಕ್ಕೆ ದೇವತ್ವದ ಅರ್ಥ ಭಂಗ ಬಾರದಂತೆ ಸತ್ಯಾಹಿಂಸೆಗಳು ಪರ್ಯಾಯ ಸಹಗಳು– ಒಂದಕ್ಕೆ ಬದಲು ಇನ್ನೊಂದು ಅಷ್ಟೇ ಸಮರ್ಥ ಆದೇಶವಾಗಬಲ್ಲುದು; ಅಥವಾ ಅವೆರಡೂ ನಿತ್ಯವೂ ಅವಿನಾಭಾವಿಗಳು! ಅಂಥ ಪರಬ್ರಹ್ಮ ತತ್ವವನ್ನು ಉಸಿರುಳಿಸುವ ಮೂಲಕ ಉಪಕರಿಸುವ ಅನ್ನವು ಅದ್ವಿತೀಯ ದೇಯ ವಸ್ತುವೆನ್ನಿಸಿತು.

ಅನ್ನದಾನಾದಿ ಸರ್ವಾದರ್ಶಗಳ ಆಚರಣೆ ನಿತ್ಯವಾಗಿ ನಮ್ಮಲ್ಲಿ ನೆಲೆ ನಿಲ್ಲಬೇಕಾದರೆ ಅದಕ್ಕೆ ತಪಃ ಪದ್ಧತಿ ಅಥವಾ ಸತತಾಚಾರದ ಶಿಸ್ತು ಅಗತ್ಯ. ಇಂದ್ರನು ಲೋಕವನ್ನು ಹಗಲೂ ರಾತ್ರಿಯೂ ಕಾಯುತ್ತಿರುವುದು ತಪಸ್ಸು. ತಪಸ್ಸು ಇಂಥ ಸತತೋದ್ಯೋಗ ತೀಕ್ಷ್ಣತೆ. ತಪಸ್ಸು ಅತಿ ಮಾನಸ ಶಕ್ತಿ ಸಂಚಯ; ಅಧ್ಯಾತ್ಮೋತ್ತೇಜನ. ಹೀಗೆ ಆನಂದ–ವಿಜ್ಞಾನ–ಮನಸ್ಸು–ಪ್ರಾಣ–ಅನ್ನಗಳ ಮಣಿಗಣ ಸೂತ್ರವು ಧ್ಯಾನಾರ್ಹ–ಮನನಾರ್ಹ–ಚಿಂತನಾರ್ಹ. ಆನಂದವೇ ಶಿವನ ರೂಪ; ಅವನ ಸಕಲತೆಯ ಸೂಕ್ಷ್ಮತಮ ಘಟ್ಟ–ಮುಂದೆ ಅವನ ನಿಷ್ಕಲ ಸ್ವರೂಪ (ತುರೀಯತೆ) ಆದುದರಿಂದ ಸದ್ ಬುದ್ಧಿ ಪ್ರಚೋದಕವಾದ, ಶಿಷ್ಟಭೋಗ್ಯವಾದ, ಅನ್ನದಾನದ ವ್ರತವು ಈ ಪುರಾಣದಲ್ಲಿ ಪ್ರಶಂಸಿಸಲ್ಪಟ್ಟಿದೆ. ಅನ್ನವು ಅನ್ನಮಯಕೋಶದ ಬಾಹ್ಯಾಧಾರ, ಬಾಹ್ಯ ವ್ಯಾಪಾರ. ಅದರಿಂದಾದುದು ಶರೀರ. "ಶರೀರ ಮಾದ್ಯಂ ಖಲು ಧರ್ಮ ಸಾಧನಂ." ಅಶರೀರತ್ವದ ಶುದ್ಧ ಪ್ರಜ್ಞೆಗೆ ಏರಲು ಇರುವ ಪ್ರಥಮ ವ್ಯಾವಹಾರಿಕ ಪ್ರಜ್ಞೆಯೇ ಶರೀರ ಪ್ರಜ್ಞೆ–ಶರೀರ ಅನ್ನಾಧೃತ! ಆದ್ದರಿಂದ ಅನ್ನಂ ಬಹುಕುರ್ವೀತ! ಒಳ್ಳೆಯ ಆಹಾರ ವಸ್ತುಗಳನ್ನು ಬೆಳೆಯಿರಿ, ಸತ್‌ಪಾತ್ರರಿಗೆ ಕೊಡಿರಿ!

–೬೭–

# ಬ್ರಹ್ಮಾಂಡ ವರ್ಣನೆ

ಅನಾಮಯನಾದ ಶಿವನಲ್ಲಿ ವ್ಯಕ್ತೀಕರಣ–ಅವ್ಯಕ್ತೀಕರಣ ಶಕ್ತಿಗಳಿವೆ. ಅವ್ಯಕ್ತವು ವ್ಯಕ್ತಕ್ಕೆ ಕಾರಣ. ವ್ಯಕ್ತವೇ ಬ್ರಹ್ಮ. ವ್ಯಕ್ತಾವ್ಯಕ್ತ ವಿಭಜನೆಗೆ ಕಾಲವೆಂಬ ಶಿವಶಕ್ತಿಯು ಕಾರಣ. ಬ್ರಹ್ಮಾಂಡವನ್ನು ಬ್ರಹ್ಮನು ಸೃಷ್ಟಿಸುತ್ತಾನೆ. ಅದರ ಅಂಗಗಳು ಹದಿನಾಲ್ಕು; ಏಳು ಪಾತಾಳಗಳು ಮತ್ತು ಏಳು ಮೇಲು ಲೋಕಗಳು. ಜಲ ಮಧ್ಯಗತವಾದ್ದರಿಂದ ಅದರ ಉಚ್ಛ್ರಾಯವು ಹೀಗೆ ದ್ವಿಗುಣವಾಯಿತು. ಅದರ ಆಧಾರವು ನಾಗ ಅಥವಾ ವಿಷ್ಣು. ಬ್ರಹ್ಮನ ಮಾತಿನಂತೆ ವಿಷ್ಣುವು ಈ ಎಲ್ಲವನ್ನೂ ಹೊರೆಯುತ್ತಾನೆ. ಅವನೇ ಸಾವಿರ ಹೆಡೆಯ ಅನಂತನೆನ್ನಿಸಿದ ಆದಿಶೇಷನು. ಅವನು ಸಿದ್ಧ ಸಾಧ್ಯಾದಿಗಳಿಂದ ಪೂಜಿತನಾಗಿದ್ದಾನೆ. ಅವನ ಸಾವಿರ ಹೆಡೆಗಳಲ್ಲಿ ಸಾವಿರ ರತ್ನಗಳಿವೆ. ಅವನು ಸ್ವಸ್ತಿಕೆ ಎಂಬ ಪವಿತ್ರವಾದ ಒಡವೆಯನ್ನು ಧರಿಸಿದ್ದಾನೆ. ನೇಗಿಲು ಮತ್ತು ಒನಕೆಗಳು ಅವನ ಆಯುಧಗಳು. ಅವನ ಗಾತ್ರ ಕೈಲಾಸ ಪರ್ವತದಷ್ಟು. ಅವನ ವಿಷಾಗ್ನಿ ಶಿಖೆಯನ್ನು ಸಂಕರ್ಷಣ ರುದ್ರ ಎನ್ನುತ್ತಾರೆ. ಆ ಶಿಖಾಸಹಸ್ರವು ಶಾಂತವಾಗುವುದು ಜಗತ್ ಪ್ರಲಯ (ಜಗದ್ದಹನ) ವಾದ ಮೇಲೆ. ಏಳನೆಯ ಪಾತಾಳದಡಿಯಲ್ಲಿ ಆ ನಾಗವಿಷ್ಣುವಿನ ವಾಸ.

ಅತಲ, ವಿತಲ, ಸುತಲ, ರಸಾತಲ, ಮಹಾತಲ, ತಲಾತಲ, ಪಾತಾಲ–ಎಂಬಿವು ಏಳು ಅಧೋಲೋಕಗಳು. ಅವುಗಳ ಆಳರಸರು ನಾಗರೆಂಬ ದೈತ್ಯರು ಅಥವಾ ರಾಕ್ಷಸರು. ಅವರೇ ಅಲ್ಲಿರುವ ರತ್ನಗಳ ಒಡೆಯರು, ನಾಗಕನ್ಯೆಯರ ಪತಿಗಳು. ಅಲ್ಲಿ ಸೂರ್ಯ–ಚಂದ್ರ ಪ್ರಕಾಶವಿಲ್ಲ, ಶೀತೋಷ್ಣಗಳಿಲ್ಲ. ಎಲ್ಲವೂ ಮಣಿಪ್ರಭೆ! ಅಲ್ಲಿಯ ನಾಗರು ಯಥೇಷ್ಟವಾಗಿ ಉಂಡು ತೇಗಿ ಇರುತ್ತಾರೆ. ಕಾಲದ ಜ್ಞಾನವೇ ಅವರಿಗಿರುವುದಿಲ್ಲ. ಸಿದ್ಧ ಮಾನವರೆಂಬ ಈ ದಾನವರು ತಪಸ್ಸಿನಿಂದ ಎಲ್ಲಾ ಭೋಗ್ಯಗಳನ್ನು ಪಡೆಯುತ್ತಾರೆ. ಅಲ್ಲಿ ವಿಮುಕ್ತರಿಗೆ ದೇವ ದಾನವ ಕನ್ಯೆಯರು ಸಂಗಾತಿಗಳಾಗಿ ಸಿಕ್ಕುತ್ತಾರೆ. ಅಲ್ಲಿಯ ಸುಖವೇ ಸ್ವರ್ಗ ಸುಖ. ಅವುಗಳ ಮೇಲಿನ ನರಕ ಲೋಕಗಳು ಪಾಪಿಗಳು ಹೊಗಬೇಕಾದ ಅನೇಕಾನೇಕ ಕಾರಾಗೃಹಗಳು. ಅವುಗಳಲ್ಲಿ – ರೌರವ, ಶೂಕರ, ರೋಧಸ್, ತಾಲ, ವಿವಸನ, ಮಹಾಜ್ವಾಲ, ತಪ್ತಕುಂಭ, ಲವಣ, ವಿಲೋಹಿತ, ವೈತರಣಿ, ಪೂಯವಹೆ, ಕೃಮಿಭೋಜನ–ಎಂಬೀ ನರಕಗಳಲ್ಲದೆ, ಇನ್ನೂ ವಿಲಕ್ಷಣಗಳಾದ ಅಸಿಪತ್ರವನ, ಘೋರ, ಲಾಲಾಭಕ್ಷ, ದಾರುಣ, ಬಹಿರ್ಜ್ವಾಲ,

ಅಧಃಶಿರಸ್, ಸಂದಂಶ, ಕಾಲ ಸೂತ್ರ, ತಮಸ್, ಆವೀಚಿರೋಧನ, ಶ್ವಭೋಜನ, ರುಷ್ಟ, ಮಹಾರೌರವ ಮತ್ತು ಶಾಲ್ಮಲಿ ಎಂಬಿವುಗಳೂ ಪ್ರಮುಖವಾದವುಗಳು. ಕೃಮಿಣ–ಪೂಯವಹ ಎಂಬೆರಡನ್ನೂ ಸೇರಿಸಿದರೆ ಮುಖ್ಯ ನರಕಗಳ ಸಂಖ್ಯೆಯು ಪಾತಾಳಗಳೆಂಬ ಏಳು ಸ್ವರ್ಗಗಳ ನಾಲ್ಕರಷ್ಟಾಗುತ್ತವೆ.

**"ಭ್ರಷ್ಟಾಚಾರೋಹಿ ಯೋ ವಿಪ್ರಃ ಕ್ಷತ್ರಿಯೋ ವೈಶ್ಯ ಏವ ವಾ**
**ಯಾತ್ಯಂತೇ ದ್ವಿಜ ತತ್ರೈವ ಯಃ ಶ್ವಪಾ ಕೇಷ ವಹ್ನಿದಃ"**

ಭ್ರಷ್ಟಾಚಾರಿಗಳಲ್ಲಿ ವರ್ಣಭೇದ–ಜಾತಿಭೇದ–ದೇಶಭೇದಗಳಿಲ್ಲ. ಅವರಿಗೆ ಕ್ರೂರ ದುಃಖಾನುಭವವು (ಪ್ರಾಯ ಕಳೆದ ಮೇಲಾದರೂ) ಶತಶಃ ಸಿದ್ಧ. ಈ ಪುರಾಣ ತಾತ್ಪರ್ಯವು ಮಾನಸ ಶಾಸ್ತ್ರೀಯವಾಗಿ ಸತ್ಯ. ಅದೇ ಮೇರೆಗೆ ಪುಣ್ಯಾತ್ಮರಲ್ಲೂ ದೇವರ ದೃಷ್ಟಿಯಲ್ಲಿ ಭೇದವಿಲ್ಲ. ಮನುಷ್ಯರಲ್ಲಿ ಮೂರನೆಯ ವರ್ಗವಿಲ್ಲ. ಪುಣ್ಯಾತ್ಮರ ಆತ್ಯಂತಿಕ ಸುಖಾನುಭವವೂ (ಸಮಾಧಾನವೂ) ಮನಃಶಾಸ್ತ್ರ ಸಿದ್ಧ. ದೇವರೆನ್ನಿಸಿ ಕೊಂಡ ಯಾವ ನಾಮವೂ ರೂಪವೂ ಭ್ರಷ್ಟಾಚಾರವನ್ನು ಎತ್ತಿ ಹಿಡಿಯುವುದಿಲ್ಲ; ಶಿಷ್ಟಾಚಾರವನ್ನೇ ಎತ್ತಿ ಹಿಡಿಯುತ್ತದೆ–ಎಂಬುದು ಸಮಾಜ ಶಿಕ್ಷಣ ಪಾಠ. ಭ್ರಷ್ಟಾಚಾರ ಶಿಷ್ಟಾಚಾರಗಳ ಭೇದವನ್ನು ಬಲ್ಲವನೇ ನಿಜವಾದ ಶಿವಭಕ್ತ. ಅವನಿಂದ ಭ್ರಷ್ಟಾಚಾರ ಸಂಭವಿಸದು. ಇದು ಭಕ್ತರೆಂದುಕೊಳ್ಳುವವರಿಗೆ ಶಿವ ಮಹಾಪುರಾಣ ಕೊಟ್ಟ ಎಚ್ಚರಿಕೆ. ಭಕ್ತಿಯು ಅಂಧವಲ್ಲ; ಅಂಧವು ಭಕ್ತಿಯಲ್ಲ. ಈ ಮಾತು ಸಹಜವಾಗಿಯೇ ಶ್ರದ್ಧೆಗೂ ಅನ್ವಯಿಸುತ್ತದೆ. ಆತ್ಮಜ್ಞಾನ ವಿಹೀನರು ಮೂಢರು. ಲೌಕಿಕವಾಗಿಯೂ ಆಧ್ಯಾತ್ಮಿಕವಾಗಿಯೂ ಅಂಥವರು ಮಾಡುವುದರಲ್ಲಿ ಭ್ರಷ್ಟತೆ ಇದ್ದೇ ಇರುತ್ತದೆ. ಅವರಿಗೆ ಅಂತ್ಯ ಶಾಂತಿ ದೊರಕದು.

## ಭೂಮಿಯ ಸಪ್ತಮಂಡಲಗಳು ಇತ್ಯಾದಿ

ನವಗ್ರಹಗಳಲ್ಲಿ ಮಾನವರಿರುವರೋ ಇಲ್ಲವೋ ಎಂಬುದರ ಸಂಶೋಧನೆ ನಡೆಯುತ್ತಿರುವ ಇಂದಿನ ಕಾಲದಲ್ಲಿ ವೈಜ್ಞಾನಿಕರು ಮಾಡಿದ ಮತ್ತು ಮಾಡುತ್ತಿರುವ ಊಹೆಗಳಿಗೆಷ್ಟು ಬೆಲೆಯಿದೆಯೋ ಅಷ್ಟೇ ಬೆಲೆಯು ಪೌರಾಣಿಕ ಕವಿ ಕಲ್ಪನೆಗಳಿಗಿವೆ. ಜ್ಞಾತದಿಂದ ಅಜ್ಞಾತವನ್ನು ಊಹಿಸುವುದೇ ತರ್ಕ. ಅದರ ಪ್ರಕಾರ–

ಜಂಬು, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪುಷ್ಪಕ – ಎಂಬಿವು ಏಳು ಭೂಮಿಯ ಮಂಡಲಗಳು ("ದ್ವೀಪಗಳು") ಅಥವಾ ಖಂಡಗಳು. ಇವುಗಳನ್ನು ಸಮುದ್ರವು ಬೇರ್ಪಡಿಸಿದೆ. ಅದು ಒಂದೇ ಆದರೂ ಈ ಭೂಮಿ ಭಾಗಗಳಿಗನುಗುಣವಾಗಿ ಏಳೆಂದು ವಿಂಗಡಿಸಲಾಗಿದೆ. ಲವಣ ಸಮುದ್ರ, ಕಬ್ಬಿನ

ರಸದ ಸಮುದ್ರ, ತುಪ್ಪದ ಸಮುದ್ರ, ಮೊಸರಿನ ಸಮುದ್ರ, ಹಾಲಿನ ಸಮುದ್ರ, ಸುರಾ ಸಮುದ್ರ ಮತ್ತು ಶುದ್ಧ ಸಿಹಿ ನೀರಿನ ಸಮುದ್ರ ಎಂಬಿವು ಆ ಕಡಲುಗಳ ಸಾಂಕೇತಿಕ ನಾಮಗಳು; (ಅಕ್ಷರಾರ್ಥಕ) ವಾಚ್ಯಾರ್ಥ ಬೋಧಕಗಳಲ್ಲ. ಖಂಡಗಳ ನಾಮಗಳೂ ಹೀಗೇ ಅಂಕಿತವಲ್ಲದೆ, ಅನ್ವರ್ಥ ನಾಮಗಳಲ್ಲ. ಈ ಅಂಕಿತಗಳು ಮನಸ್ಸಿನ ಉತ್ತರೋತ್ತರ ಪ್ರಜ್ಞಾಸ್ತರಗಳು.

ಭೂಮಿಯ ಏಳು ಖಂಡಗಳಲ್ಲಿ ಜಂಬುದ್ವೀಪವು ಮಧ್ಯದಲ್ಲಿದೆ. ಕಲಿಯುಗದ ಮಧ್ಯದಲ್ಲಿ ಮೇರುವೆಂಬ ಚಿನ್ನದ ಪರ್ವತ ಅಲ್ಲಿ ಮುಖ್ಯ. ಇಲ್ಲಿ ಚಿನ್ನವೂ ಅಂಕಿತ. ಇದು ಭೂಮಿಗೆ ಆಧಾರವಾಗಿರುವ ಪರ್ವತ, ಗುರುತ್ವಾಕರ್ಷಣದ ನೆಲೆ. ಅದರ ಬಡಗಲಿಗೆ ಹಿಮಾಲಯ, ಹೇಮಕೂಟ, ನಿಷಧ ಎಂಬ ಪರ್ವತಗಳೂ ತೆಂಕಲಿಗೆ ನೀಲ, ಶ್ವೇತ, ಶೃಂಗಿ ಎಂಬ ಪರ್ವತಗಳಿವೆ. ಜಂಬು ದ್ವೀಪ (ಖಂಡ)ದಲ್ಲಿ ಭಾರತವರ್ಷ, ಕಿಂಪುರುಷವರ್ಷ, ಹರಿವರ್ಷಗಳು ಮೇರುವಿನ ಬಡಗಣಕ್ಕಿರುವ ದೇಶಗಳು. ಅದರ ಉತ್ತರಕ್ಕೆ (ತೆಂಕಣ ದಿಕ್ಕಿನಲ್ಲಿ) ರಮ್ಯಕ, ಹಿರಣ್ಮಯ, ಕುರು ಎಂಬ ವರ್ಷಗಳು ಯಾ ದೇಶಗಳಿವೆ. ಮೇರು ಮಧ್ಯದಲ್ಲಿ ಇಲಾವೃತ ದೇಶ. ಅಲ್ಲಿ ಮೇರು ತನ್ನ ಎತ್ತರವನ್ನು ತೋರಿದೆ. ಇಲಾವೃತ ದೇಶದಲ್ಲಿ ಮಂದರವು ಮೂಡಲಗಿರಿ; ಗಂಧಮಾದನವು ಬಡಗಲ ಗಿರಿ; ವಿಪುಲವು ಪಡುವಲ ಗಿರಿ; ಸುಪಾರ್ಶ್ವವು ತೆಂಕಲ ಗಿರಿ. ಕದಂಬ, ಜಂಬು, ಪಿಪ್ಪಲ, ವಟ (ಹನೆಮರ, ಜಂಬುನೇರಿಳೆ, ಹಿಪ್ಪಲಿಮರ ಮತ್ತು ಆಲ) ಎಂಬ ವೃಕ್ಷಗಳು ಅಲ್ಲಿ ಗಣ್ಯ. ಹನೆ ಹೆಂಡ ಹನೆಬೆಲ್ಲ (ವಾಲಿಬೆಲ್ಲ)ಗಳು ಪ್ರಸಿದ್ಧ. ಕದಂಬವೆಂದರೆ ಹನೆಮರ; ಈಚಲವೂ ಅಲ್ಲ, ಕಡವಾಲವೂ ಅಲ್ಲ; ತಮಿಳಿನಲ್ಲಿ "ತಾಟನುಂಗು"; ಆಯುರ್ವೇದ ವೈದ್ಯರು ತೋರಿಸುವ "ಕದಂಬವೂ" ಅಲ್ಲ; ತೋಟಗಾರಿಕೆಯವರು ತೋರಿಸುವ "ಹೇತಾರಿ" ಮರವೂ ಅಲ್ಲ. ಬಯನೆಯಂತೆ ಹೆಂಡ ತೆಗೆಯುವುದಕ್ಕೆ ಹನೆ ಪ್ರಸಿದ್ಧ. ಹನೆ ಸೀಯಾಳ ಎಲ್ಲರಿಗೂ ಗೊತ್ತು. "ಕದಂಬ ಮುಕುಲ ನ್ಯಾಯ"ದಲ್ಲಿ ಬರುವ ಹೂವು ಹನೆ ಹೂವು. ತಾಳಗುಂದದ ಶಾಸನದಲ್ಲಿರುವಂತೆ ಹನೆ ಬಹಳ ಎತ್ತರದ ವ್ಯಾಪಕವಾದ ಹೆಡೆ ಬಿಡುವ ಮರ. ಭಾರತ ದೇಶವು ಜಂಬುದ್ವೀಪದ ಏಳು ದೇಶಗಳಲ್ಲಿ ಶ್ರೇಷ್ಠ. ಅದಕ್ಕೆ ಕದಂಬವು ಸಂಕೇತ. ಅದು ಕಲ್ಪವೃಕ್ಷಕ್ಕೆ ಸಮಾನ. ಜನರ ನಡತೆ ತ್ರೇತಾಯುಗದ್ದು. ಅಂದರೆ ರಾಮರಾಜ್ಯದ ಆದರ್ಶವನ್ನು ಅವಲಂಬಿಸುವ ರಾಷ್ಟ್ರೀಯ ಪ್ರವೃತ್ತಿಯುಳ್ಳದ್ದೆಂದರ್ಥ. ಇದು ಭಾರತದ ಸಾಮಾಜಿಕ ಮನೋಧರ್ಮದ ನಿದಾನ. (ಗುಣಗಳ ವಿಶ್ಲಿಷ್ಟ ತಾತ್ಪರ್ಯ.)

–೬೮–

# ಶಿವಧರ್ಮ ಲಕ್ಷಣ ಮತ್ತು ಜೀವ ಜನ್ಮ ವಿಧಾನ ಮೋಹ ಮಹಾತ್ಮೆ

## ಶಿವಧರ್ಮಲಕ್ಷಣ

ಸಾತ್ವಿಕ ತಪಸ್ಸೇ ಶಿವತಪಸ್ಸು. ಶಿವಬುದ್ಧಿಯೇ ಅಚಲವಾದ ಧರ್ಮಬುದ್ಧಿ. ಸ್ನಾನ, ಪೂಜೆ, ಜಪ, ಹೋಮ, ಶುದ್ಧಶೌಚ, ಅಹಿಂಸೆ, ವ್ರತ, ಉಪವಾಸ, ಮೌನ, ಇಂದ್ರಿಯ ನಿಗ್ರಹ, ಧೀ, ವಿದ್ಯೆ, ಸತ್ಯ, ಅಕ್ರೋಧ, ದಾನ, ಕ್ಷಮೆ, ದಮ, ದಯೆ, ಸಾರ್ವಜನಿಕ ಸೇವೆ (ಲೋಕೋಪಯೋಗಿ ಕಾರ್ಯ). ತೀರ್ಥಯಾತ್ರೆ, ಆಶ್ರಮವಾಸ, ವಿದ್ಯಾಲಯಾದಿ ನಿರ್ಮಾಣ ಪುಣ್ಯಕಾಲಗಳಲ್ಲಿ ಶಿವಧ್ಯಾನ ಮಾಡುವುದು. ಕಾಷ್ಠಾದ್ಯವಸ್ಥಾ ಸಿದ್ಧಿಗಳು ಶಿವಧರ್ಮದ (ಶಿವ ಜೀವನದ) ಗುರುತುಗಳು. ಅಷ್ಟಾಂಗಯೋಗವನ್ನು ಹಿಡಿದರೆ ಮತ್ತೂ ಉತ್ತಮ. ಅದು ಶಿವಧರ್ಮ ಶೋಭಾಕರ. ಈ ಪಂಚವಿಂಶತಿ ಆಚಾರ ನಿಯಮಗಳು ಮಂತ್ರದ್ರಷ್ಟ್ರ ಋಷಿಯ ಯೋಗ್ಯತೆಯನ್ನು ಶಿವಭಕ್ತನಿಗೆ ಕೊಡಿಸಬಲ್ಲವು. ಭಾರತದ ಆದರ್ಶ ಪುರುಷನೆಂದರೆ, ಮುನಿ, ಋಷಿ, ಯೋಗಿ, ಪುಣ್ಯಫಲಾಪೇಕ್ಷೆಯಿಲ್ಲದೆ ಪುಣ್ಯ ಕರ್ಮವನ್ನು ಮಾಡುವುದು ಈ ಉತ್ತಮ ಪುರುಷತ್ವದ ಸಾರ. ಚತುರ್ವಿಂಶತಿ ಲಕ್ಷಣಗಳಲ್ಲಿ ಒಂದು ಕಡಿಮೆಯಾದರೂ ಆ ಮಟ್ಟಿಗೆ ಶಿವಯೋಗವು ನ್ಯೂನ. ಶಿವ ಯೋಗವು ಜೀವನ್ಮುಕ್ತಿಗೆ ಸಾಧನೆ. ಯೋಗ–ಲಯ–ಆತ್ಯಂತಿಕ ನಾಶ! ಯಾವುದರ? ವಿಷಯದಾಸ ಮನಸ್ಸಿನ! ನಿಃಸ್ವಾರ್ಥ ಲೋಕಹಿತಕಾರಿಯೇ ಭಾರತದ ವೀರ, ಧೀರ, ವೀರನು ಎಲ್ಲವುಗಳನ್ನೂ ಎಲ್ಲರನ್ನೂ ನ್ಯಾಯವಾಗಿ ಪಾಲಿಸಬಲ್ಲನು (ಮ.ಭಾ.). ಇಂಥವರು ಹೇಗಿರುತ್ತಾರೆ? ಶ್ರೀ ರಮಣ, ಅರವಿಂದ, ಗಾಂಧಿ, ಪರಮಹಂಸ, ವಿವೇಕಾನಂದರಂತಿರುತ್ತಾರೆ. ಈ ವ್ಯಕ್ತಿತ್ವ ಶಿವ ವ್ಯಕ್ತಿತ್ವ–ಸತ್ಯ, ಸೌಂದರ್ಯ, ಒಳಿತು, ಪ್ರಯೋಜನಗಳ ಯಾ ಪುರುಷಾರ್ಥ ಚತುಷ್ಟಯದ ಸಾರಭೂತ ಪರಿಮಳವನ್ನು (ಶಿವವನ್ನು, ಮಂಗಲವನ್ನು) ಬೀರುವ ಮಹಾಪುರುಷ ಸ್ವರೂಪ. ಶಿಲ್ಪೋಕ್ತ ೩೨ ಮಹಾಪುರುಷ (ಶಾರೀರಿಕ) ಲಕ್ಷಣಗಳು ಗೌಣ "ಅಶರೀರಂ ವಾವ ಸಂತಂ ಪ್ರಿಯಾಪ್ರಿಯೇ ನಸ್ಪೃಶತಂ"–ಶರೀರ ಪ್ರಜ್ಞೆಯಿಲ್ಲದ ದಿವ್ಯಾತ್ಮ, ಅತಿ ಮಾನಸ ವಿಭೂತಿ ಪುರುಷ ಎನ್ನಿಸಿದವನು ಶಿವಯೋಗಿ–ಮಿಕ್ಕವೇಷಧಾರಿಗಳು ಅಶಿವಯೋಗಿಗಳು.

ಚಾಂಡಾಲರು ಶೂದ್ರರಂತೆ ಆಚಾರವನ್ನಿಟ್ಟುಕೊಂಡರೆ ಶೂದ್ರ ಸ್ಥಾನ ಪಡೆಯುವರು; ಶೂದ್ರರು ವೈಶ್ಯರ ಆಚಾರವನ್ನಿಟ್ಟುಕೊಂಡರೆ ವೈಶ್ಯ ಸ್ಥಾನವನ್ನು ಪಡೆಯುವರು. ವೈಶ್ಯರು ಕ್ಷಾತ್ರ ಆಚಾರವನ್ನು ಇಟ್ಟುಕೊಂಡರೆ ಕ್ಷತ್ರಿಯರಾಗುವರು. ಕ್ಷತ್ರಿಯರು ಬ್ರಾಹ್ಮಣಾಚಾರಗಳನ್ನಿಟ್ಟುಕೊಂಡರೆ ಬ್ರಾಹ್ಮಣತ್ವವನ್ನು ಪಡೆಯುವರು. ಇದರ ಅಪಕ್ರಮವೂ ಸತ್ಯ. ಒಂದು ಊರ್ಧ್ವ, ಊರ್ಧ್ವತರ; ಇನ್ನೊಂದು ಅಧಸ್, ಅಧಸ್‌ತರ. ಈ ಪಂಚಮಹಾ ವರ್ಗಗಳು– ವೃತ್ತಿಯ ಮೇಲೆ ನಿಂತ ಮನುಷ್ಯ ಮಾದರಿಗಳು. ಆನುವಂಶಿಕತೆಯ ಸೂತ್ರಕ್ಕಿದು ಅಪವಾದ. ಈ ಪುರಾಣದಲ್ಲಿ ಈ ತಾತ್ಪರ್ಯವು ಅಸ್ಪಷ್ಟವಾಗಿ ಮೂಡಿದೆ. ಮನುಸ್ಮೃತಿ–ಮಹಾಭಾರತಗಳಲ್ಲೂ ಈ ಧ್ವನಿಯಿದೆ.

**ಶೂದ್ರಯೋನೌ ಹಿ ಜಾತಸ್ಯ**
**ಸದ್ಗುಣಾನುಪತಿಷ್ಠತಃ।**
**ವೈಶ್ಯತ್ವಂ ಲಭ್ಯತೇ ತಾತ**
**ಕ್ಷತ್ರಿಯತ್ವಂ ತಥೈವ ಚ॥ ಮ. ಭಾ.॥**

“ಬುದ್ಧಿಃ ಕರ್ಮಾನುಸಾರಿಣೀ” ಎಂಬ ಮನಃಶಾಸ್ತ್ರಾನುಭವವೇ ಈ ಸ್ಥಾನ ನಿರ್ಣಯಕ್ಕೆ ಆಧಾರ. ಅಮುಕ್ತರು ಕರ್ಮ–ಕ್ರಿಯೆಗಳಿಲ್ಲದೆ ಬದುಕಲಾರರು. ಮುಕ್ತರು ಕರ್ಮ–ಕ್ರಿಯೆಗಳಿಂದ–ಅವುಗಳ ಫಲಾಫಲಗಳಿಂದ–ಮುಕ್ತರು, ಮುಕ್ತರು ಆದರ್ಶ ಜಾತ್ಯತೀತರು. ಅಮುಕ್ತರ ಜಾತಿ, ಗುಣ–ಕರ್ಮಗಳಿಂದಲೇ ನಿರ್ಣೀತ ಎಂಬುದನ್ನು ಮಹಾಭಾರತದ ಶಾಂತಿ ಪರ್ವವು ದೃಢಪಡಿಸುತ್ತದೆ. ಮನಃಪರಿವರ್ತನೆಯು ಒಂದೇ ಜನ್ಮದಲ್ಲೂ ಆಗಬಹುದು, ಜನ್ಮಾಂತರಗಳಿಂದಲೂ ಆಗಬಹುದು. ಸಮಾಜ ನಾಯಕರು ಇದನ್ನು ಅರಿತಿರಬೇಕು.

## ಜೀವಜನ್ಮ ವಿಧಾನ ಮತ್ತು ಮೋಹ ಮಹಾತ್ಮ್ಯ

ಶುಕ್ರವು ಅನ್ನದಿಂದ ಹುಟ್ಟುತ್ತದೆ. ಶುಕ್ರಕ್ಕೆ ಶೋಣಿತ ಅಥವಾ ಅಂಡಾಣು ಸ್ತ್ರೀಯಿಂದ ಬಂದು ಕೂಡಿಕೊಳ್ಳುತ್ತದೆ. ಅದರಿಂದ ಶರೀರೋತ್ಪತ್ತಿ ಆಗುತ್ತದೆ. ಶುಕ್ರ ವಿಸರ್ಗ ಕಾಲಕ್ಕೆ ಸ್ವಕರ್ಮದ ಪ್ರಕಾರ ಜೀವವು ಬಂದು ಸೇರಿಕೊಳ್ಳುತ್ತದೆ. ಈ ಜೀವವು ಸಂವೃತವಾಗಿರುತ್ತದೆ. ಅಸಂವೃತ ಜೀವವೇ ಆತ್ಮ, ಪರಮಾತ್ಮ, ಬೀಜ. ಅಲ್ಲಿಂದ ಜೀವದ (ಭ್ರೂಣದ) ಬೆಳವಣಿಗೆ ಆರಂಭವಾಗುತ್ತದೆ. ಕ್ರಿಯಾಶಕ್ತಿ, ಜ್ಞಾನ ಶಕ್ತಿ ಮತ್ತು ಪ್ರಾಣಶಕ್ತಿಗಳ ಸಂಯುಕ್ತವೇ ಜೀವ ಎಂಬ ಶಕ್ತಿ. ಅದರ ಮುಂದಿನ ಪರಿಣಾಮವು “ಕಲಿಲ”. ಐದು ರಾತ್ರಿಗಳಲ್ಲಿ ಕಲಿಲವು ನೊರೆಯಂತಾಗುವುದು. ಏಳು ರಾತ್ರಿಗಳಲ್ಲಿ ಅದು ಮಾಂಸಪೇಶಿಯಾಗುವುದು. ಐದು ತಿಂಗಳುಗಳಲ್ಲಿ ಅದು ಸಾವಯವಿಯಾಗುವುದು. ಏಳು ತಿಂಗಳಲ್ಲಿ ಸರ್ವಾವಯವಗಳು ಹೊರೆದು ಪೂರ್ಣವಾಗುತ್ತವೆ. ಅದನ್ನಾಗ “ಜರಾಯು” ಎಂಬ ಮಾಂಸಪೇಶಿ ಮುಸುಕಿರುತ್ತದೆ. ಆಗ ತಾಯಿಯ ಆಹಾರದ ಸಾರವನ್ನು ಗ್ರಹಿಸಲು ಹೆಚ್ಚು ಸಮರ್ಥವಾಗುವುದು.

ನಾಭಿ ನಾಲೆಯೇ ಅದರ ಆಹಾರ ಸ್ವೀಕಾರ ದ್ವಾರ. ಆಗ ಜೀವಕ್ಕೆ ಸ್ಮರಣಶಕ್ತಿಯುಂಟಾಗುವುದು. ಅದಕ್ಕೆ ಸುಖ–ದುಃಖಗಳ ಅರಿವಾಗಲು ಆರಂಭವಾಗುವುದು; ನಿದ್ರೆ–ಸ್ವಪ್ನಗಳ ಅನುಭವ ಬರುತ್ತದೆ. ಅದು ಪೂರ್ವಜನ್ಮದ ವಾಸನೆಗಳಿಂದ ಗರ್ಭದಿಂದ ಹೊರಬಿದ್ದ ಮೇಲೆ ತಾನು ಏನು ಮಾಡಬೇಕೆಂಬುದನ್ನದು ಚಿಂತಿಸಬಲ್ಲುದು. ಜನ್ಮ, ಮೃತ್ಯು, ಜರಾ, ವ್ಯಾಧಿಗಳ ಕಲ್ಪನೆ ಅದಕ್ಕೆ ಬರುವುದು. ಜಠರಾಗ್ನಿಯಿಂದ ಅದರ ದೇಹವು ಪಕ್ವವಾಗುವುದು. ಅದೊಂದು ದುಃಖಾನುಭವ. ಗರ್ಭದಿಂದ ಹೊರಬಿದ್ದ ಮೇಲೆ ಆ ದುಃಖ ಹೊರಟು ಹೋಗುವುದು. ಆ ದುಃಖವು ನರಕ ಸಮಾನವಾದ ಅನುಭವವೆನ್ನಿಸುವುದು ಪಾಪಾತ್ಮರಿಗೆ. ಪುಣ್ಯಾತ್ಮರಿಗಾಗುವುದು ಆಗ ಸುಖಾನುಭವವು. ೩೬೫ ಪೇಶಿಗಳು ಅದರ ಶರೀರದಲ್ಲಿರುತ್ತವೆ. ಅನಿತ್ಯಾತ್ಮವಾದ ಶರೀರಕ್ಕಿದು ಕಾಲ ನಿರ್ದಿಷ್ಟ ಸ್ಥೈರ್ಯವಾಗಿ ಬರುವುದು. ಅದರ ಸ್ವಕರ್ಮವು ಫಲಿಸುವುದು ಅಥವಾ ಫಲಿಸದಿರುವುದು ಈಶ್ವರೇಚ್ಛೆಯಂತೆ, ಶಿವನ ಆಜ್ಞೆಯ ಪ್ರಕಾರ.

ಪಂಚಗವ್ಯ ಮತ್ತು ಹವಿಸ್ಸುಗಳಿಂದ ಶರೀರವು ಶುದ್ಧವಾಗುವುದು. ಅವುಗಳನ್ನು ದಿನವೂ ಬಳಸುತ್ತಿರಬೇಕು. ಇಲ್ಲವಾದರೆ ಪ್ರಪಂಚಾಕರ್ಷಣೆ ಎಂಬ ಮೋಹವು ಜೀವವನ್ನು ಮರುಳು ಮಾಡಿ ತನ್ನೆಡೆಗೆ ಸೆಳೆದುಕೊಳ್ಳುವುದು. ಆಗ ಅದು ದಬ್ಬೆ ಕಟ್ಟಿದಷ್ಟು ಕಾಲ ಮಾತ್ರ ನೆಟ್ಟಗಿರುವ ನಾಯಿಬಾಲದಂತಹ ಸ್ವಭಾವ ಉಳ್ಳದ್ದಾಗುವುದು. ವ್ರತ, ನಿಯಮ, ತೀರ್ಥ ಸ್ನಾನಾದಿಗಳೆಲ್ಲಾ ನಿರುಪಯುಕ್ತವಾಗುವುವು. ಆದುದರಿಂದ ಭಾವಶುದ್ಧಿಯನ್ನು (ಹೃದಯಶುದ್ಧಿಯನ್ನು) ಯತ್ನತಃ ಸಾಧಿಸಿಕೊಳ್ಳುತ್ತಾ ಹೋಗಬೇಕು. ಅದು ಫಲಿಸದ ಸಂಸ್ಕಾರಾಧಾನಗಳೆಲ್ಲಾ ವ್ಯರ್ಥ. ಭಾವಶುದ್ಧಿಗೆ ಉದಾಹರಣೆ.

"ಮನಸ್ಯೈವ ಕೃತಂ ಪಾಪಂ ನ ಶರೀರ ಕೃತಂ ಕೃತಂ ಯೇನೈವಾಲಿಂಗ್ಯತೇ ಕಾಂತಾ ತೇನೈವಾಲಿಂಗ್ಯತೇ ಸುತಾ॥

ಹೆಂಡತಿಯನ್ನಪ್ಪಿಕೊಳ್ಳುವ ಭಾವ ಬೇರೆ; ಮಗಳನ್ನಪ್ಪಿಕೊಳ್ಳುವ ಭಾವ ಬೇರೆ. ಇದೇ ಧರ್ಮಸೂಕ್ಷ್ಮ. ಈ ಧರ್ಮಜ್ಞಾನವಿಲ್ಲದ ಸಾಧನೆಗಳೆಲ್ಲಾ ದುಷ್ಟ; ಅಂತ್ಯದಲ್ಲಿ ದುಷ್ಫಲಾನುಭವವನ್ನು ಕೊಡುವುವು. ಭಾವಹೀನನು ಪತ್ನಿಯನ್ನಪ್ಪಿಕೊಂಡರೂ ಅವನಲ್ಲಿ ಅವಳ ಬಗೆಗೆ ಪ್ರೀತಿಯಿರದು; ಮಗಳನ್ನಪ್ಪಿಕೊಂಡರೂ ವಾತ್ಸಲ್ಯವಿರದು. ಕಾಮ, ಕ್ರೋಧ, ಮೋಹಗಳಿಂದ ತಿಂದ ಅನ್ನವು ಭಾವಾತೀತತೆಯನ್ನು ಸಾಧಿಸಿಕೊಡದು, ದೇಹಭಾವಾತೀತತೆಯೇ ಜೀವನ್ಮುಕ್ತಿ, ಜೀವತ್ ಸ್ವಾತಂತ್ರ್ಯ. ಅದರಿಂದಲೇ ತನ್ಮುಕ್ತನಾಗಿ ಪ್ರಾಜ್ಞನು ಶರೀರ ಮೋಹವನ್ನು ಸಡಿಲುಗೊಳಿಸಿಕೊಳ್ಳುವನು, ಮುಮುಕ್ಷುವಾಗುವನು; ಅವನ ನಿಷ್ಪಕ್ಷಪಾತತೆಯೊಂದೇ ಪೂರ್ವ–ಅದೇ ವಿರಾಗದ ನಿಜವಾದ ಅರ್ಥ. ಉಳಿದ ವಿರಾಗಗಳು ಕಪಟನಾಟಕಗಳು. ಕಪಟ ನಾಟಕಕಾರನು ಅಶಿವಭಕ್ತ; ಅಪಕಾರಿ; ಭವಿ. ಅವನ ಜೀವನದ ನಿಜವಾದ ಧರ್ಮಯೋಗವು– ಮಮತ್ವದ, ಸ್ವಾರ್ಥದ ಪರಿತ್ಯಾಗವು. ಈ ಪರಿತ್ಯಾಗದಿಂದ ಮನುಷ್ಯನು ವಿಶ್ವ ಮಾನವನಾಗುವನು, ಜೀವಂತ ದೇವತೆಯಾಗುವನು!

–೬೯–

# ಪಂಚಚೂಡೋಪದೇಶ

ಇದುವರೆಗೆ ಹೇಳಿದ್ದು ಆತ್ಮಜ್ಞಾನವು. ಆತ್ಮ ಜ್ಞಾನವಿಹೀನನು ಮೂಢನು–ಶಿವನಿಂದ ತಿರಸ್ಕಾರ್‍ಯನು. ಅವನಿಗೆ ಯಾರು ಎಂಥ ಸದ್ ಬೋಧ ಮಾಡಿದರೂ ವ್ಯರ್ಥ. ಅವನು ಅಶಿಷ್ಟ, ಶಿವಜ್ಞಾನ ರಹಿತನು. ಇದಕ್ಕೆ ಪಂಚಚೂಡೆ ಎಂಬ ಅಪ್ಸರೆ ನಾರದನಿಗೆ ಉಪದೇಶಿಸಿದ ಮಾತು ಪುಷ್ಟಿಕೊಡುತ್ತದೆ. ಪಂಚಚೂಡೆ ಹೇಳಿದ ಸ್ತ್ರೀ ಸ್ವಭಾವವು ಇಂತಿದೆ:

ಸಾಮಾನ್ಯ ಸ್ತ್ರೀ ದೌರ್ಬಲ್ಯಗಳಲ್ಲಿ ಮೊದಲನೆಯದು ಪುರುಷನಲ್ಲಿರುವ ಸೌಂದರ್‍ಯಕ್ಕಿಂತ ಅಥವಾ ಗುಣಗಳಿಗಿಂತ ಅವನು ತಾನು ಹೇಳಿದ್ದನ್ನೆಲ್ಲಾ ತಂದುಕೊಡುವವನಾಗಿರಬೇಕೆಂಬುದು ಪ್ರಥಮ. ಒಳಗೆ ಅಮರ್‍ಯಾದರಾದ ಸ್ತ್ರೀಯರು ಹೊರಗೆ ಮರ್‍ಯಾದೆಯ ಬುರುಕಿಯನ್ನು ಧರಿಸಿರುತ್ತಾರೆ. ಅವರಲ್ಲಿ ರೂಪವು ಪಾಪ ಸಾಧನವಾಗುವುದು. ಅವರೇ ಪುರುಷ ಶೋಷಕರು. ಮೆರಿಡಿಥ್ ಹೇಳಿದಂತೆ, ಸ್ವಚ್ಛಂದ ಸ್ತ್ರೀಯರು ಅತ್ಯಂತ ಅನೀತಿವಂಥನನ್ನಾದರೂ, ಮನಸ್ಸು ಬಂದರೆ, ತಮ್ಮ ವೀರನಾಯಕನೆಂದು ಗಣಿಸುತ್ತಾರೆ. ಪರ ಪುರುಷ ಗಮನ ಪ್ರವೃತ್ತಿ ಅವರಲ್ಲಿ ಹುಟ್ಟಾ ಇರುತ್ತದೆ–ಹೆದರಿ ಅವರು ಹಾಗೆ ಮಾಡದಿರಬಹುದು. ರಕ್ಷಕನಾದ ಪತಿಯನ್ನವರು ಅಸಂಸ್ಕೃತತೆಯಿಂದ ಭಕ್ಷಿಸಬಹುದು–ಈ ಕೃತಘ್ನತೆ ಅವರಲ್ಲಿ ಅತ್ಯಂತ ನಿಗೂಢ. ಅದರಿಂದಲೇ ಈ ಉತ್ಸರ್ಗಕ್ಕೆ ಅಪವಾದರೆನ್ನಿಸಿದ ಪತಿವ್ರತೆಯರನ್ನು ಭಾರತವು ದೇವತಾ ಸಮರೆಂದು ಸ್ತುತಿಸುತ್ತದೆ. ಪತಿವ್ರತೆಯರು ಪತಿದಾಸರಲ್ಲ–ಅವನ ಶುಚಿತ್ವವನ್ನು ಮೆಚ್ಚಿ ಅವನೊಡನೆ ಧರ್ಮಕಾರ್‍ಯಗಳಲ್ಲಿ ಪ್ರಾಣಾರ್ಪಣೆ ಮಾಡುವಷ್ಟರವರೆಗೆ ಹೋಗಿ ಸಹಕರಿಸುವ ಶಿವಪ್ರಜ್ಞೆಯುಳ್ಳವರು. ಅಂತಃಶುದ್ಧಿ–ಬಹಿಃಶುದ್ಧಿಗಳೆರಡೂ ಪತಿವ್ರತೆಯರಿಗೆ ಆಕರ್ಷಕ ಅವರೂ ಹಾಗೇ ಇರುವುದರಿಂದ. ಪತಿವ್ರತೆಯರು ಜಗತ್ತಿನಲ್ಲಿ ಸದಾ ಅಲ್ಪಸಂಖ್ಯಾತರು. ಅವರು ಮನಸ್ಸಿನಲ್ಲೂ ಶಿವಪ್ರಜ್ಞೆಯಿಂದ ದೂರವಾಗಿರರು–ಸತ್ ಪತಿ ಸಂತೋಷಣ ಪರಾಯಣರಾಗಿರುವರು. ದುಷ್ಪತಿಯನ್ನು ತಿದ್ದುವರು! ಆದ್ದರಿಂದ ಸತ್ ಪುರುಷರು ಸಾಮಾನ್ಯ ದೌರ್ಬಲ್ಯವುಳ್ಳ ಸ್ತ್ರೀಯರಿಂದ ವಿಶೇಷತಃ ದೂರ ಇರುತ್ತಾರೆ. ಅಸತ್ ಪುರುಷರ ಉಲ್ಲೇಖವು ಅನಗತ್ಯ ಅವರ ಅಧರ್ಮವು ಅವರ್ಣನೀಯ. ಸ್ತ್ರೀ ಪುರುಷಜಾತಿಗಳಲ್ಲಿ ಅಂಥವರ ಸಂಖ್ಯೆಯು (ಸ್ತ್ರೀ ಸಂಬಂಧದಲ್ಲಿ) ಅಸತ್ ಪುರುಷರ ಸಂಖ್ಯೆಯು ನೂರಕ್ಕೆ ೪೦ಕ್ಕಿಂತ ಹೆಚ್ಚಾಗದು; ಅಸತ್ ಸ್ತ್ರೀ ಸಂಖ್ಯೆ

ನೂರಕ್ಕೆ ೬೦ಕ್ಕೂ ಹೆಚ್ಚು. ತಸ್ಮಾತ್ ಜಾಗೃತ, ಜಾಗೃತ! ಯಾರು ಜಾಗೃತರು? ಸತ್ ಪುರುಷರು! ಸ್ತ್ರೀ ರೂಪ ಮೋಹ ಅವರನ್ನು ಮುಟ್ಟದು! "ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನಚ ವಯಃ। ಶಿವ ಪ್ರಜ್ಞಾಯುಕ್ತೋ ಬಹಿರುಪಚರಂತೀರ ಪನಯೇತ್ ॥ ಉದಾಸೀನಃ ಸ್ತ್ರೀಣಾಂ ವಿಶತಿ ನರಕಂ ಶೀಲ ಕುಲಯೋಃ। ಸ್ವ ಸದ್ಧರ್ಮಾಚಾರಃ ಶಿವ ಕರುಣಪಾತ್ರಂ ಭವತಿ ಚ।"

ಏಕಪತ್ನೀ ವ್ರತವನ್ನೂ ವಿವಾಹ ವಿಚ್ಛೇದವನ್ನೂ ಪತಿಪತ್ನೀ ಸಮಾನತೆಯನ್ನೂ ಅಹೋ ರಾತ್ರಿ ಅತಿ ಪ್ರಚಾರ ಮಾಡುವ ಇಂದಿನ ಯುಗದಲ್ಲಿ ಮೇಲೆ ಹೇಳಿದ ಶಿವ ಪುರಾಣದ ವೈಜ್ಞಾನಿಕ ಅಂಶಗಳನ್ನು ಮನನ ಮಾಡಬೇಕು. ಸಮಾನತೆ ಎಲ್ಲರಿಗೂ ಹೆಚ್ಚು ಕಡಿಮೆ ಬೇಕು; ಅದು ಅದಕ್ಕೇ ಪರಿಸೀಮಿತ. ಅಂದರೆ ಆರ್ಥಿಕ ಕ್ಷೇತ್ರಕ್ಕೆ ಮತ್ತು ನೈತಿಕ ಕ್ಷೇತ್ರಕ್ಕೆ (ಅಂದರೆ ಗೌರವ ಕ್ಷೇತ್ರಕ್ಕೆ) ಪರಿಸೀಮಿತ. ಮಿಕ್ಕ ಕ್ಷೇತ್ರಕ್ಕೆ ಅದು ಅನ್ವಿತವಾಗಲಾರದು. ಆದರೆ ಹಾಗೇ ನಾಗರಿಕತೆ–ಸಂಸ್ಕೃತಿಗಳಿಗೆ ಅಪಾಯ ಹೆಚ್ಚಾಗುವುದು ಸಾಧಾರಣ ಎಂಬುದು–ಅನುಭವ ಸಿದ್ಧ. ಅನುಭವವನ್ನು ಮುಚ್ಚಿಕೊಂಡು ಮಾತಾಡುವುದು ಆತ್ಮವಂಚನೆ ಹಾಗೂ ಪರವಂಚನೆ. ಸ್ತ್ರೀಯರಿಗೆ ಮೋಸ ಮಾಡಿ "ಬ್ರೇನ್ ವಾಷ್" ಮಾಡಿದಂತಾಗುತ್ತದೆ. ಅದರಿಂದ ಕುಟುಂಬ ಹಾನಿ–ದೇಶ ಹಾನಿಗಳು ಉಂಟಾಗುತ್ತವೆ.

"ಪುರಾಣಮಿತ್ಯೇವ ನ ಸಾಧು ಸರ್ವಂ" ಎಂದಂತೆಯೇ "ಪುರಾಣಮಿತ್ಯೇವ ಚ ಸಾಧು ಸರ್ವಂ" ಎಂದೂ ತಿಳಿದುಕೊಳ್ಳಬೇಕು. ಆದರೆ "ಪುರಾಣ ಸೂಕ್ತಂ ನ ಆಹಾತಿ ವಿದ್ವಾನ್।" "ಪುರಾಣ ವಿಜ್ಞಾನಮನಂತ ವೀರ್ಯಂ"॥ ಎಂಬುದನ್ನು ಗ್ರಹಿಸಬೇಕಾದುದು ಅತ್ಯಗತ್ಯ. ಪ್ರಯೋಗ ಪರೀಕ್ಷೆಯ ಈ ಯುಗವು "ಪುರಾಣ", "ಸನಾತನ" ಎಂಬ ಪದಗಳಿಂದ ಅವುಗಳ ಅಭ್ಯಾಸವನ್ನು ಅಸಡ್ಡೆಯಿಂದ ನೋಡಬಾರದು ಎಂಬುದಕ್ಕೆ ಮೇಲಿನ ಪಂಚಚೂಡೆಯ ಮಾತು ಒಳ್ಳೆಯ ಉದಾಹರಣೆಯಾಗಿದೆ. ಪಂಚಚೂಡೋಪದೇಶವು ಸ್ತ್ರೀಮನಃ ಶಾಸ್ತ್ರವನ್ನು ವೈಜ್ಞಾನಿಕವಾಗಿ ಇನ್ನೂ ವಿಸ್ತಾರವಾಗಿ ಹೇಳಿದೆ. ಆ ವಿಸ್ತಾರಗಳ್ನು ಮೂಲದಲ್ಲಿ ಓದಿ ತಿಳಿದುಕೊಳ್ಳಬೇಕು.

## –೭೦–

# ಶಿವೋಪದೇಶ

ಅನುಗ್ರಹ ಶೀಲನಾದ ಶಿವನು ಪಾರ್ವತಿಯ ಮೂಲಕ (ಅವಳಿಗೆ ಹೇಳಿದಂತೆ) ಲೋಕಕ್ಕೆ ಕೆಲ ಉಪದೇಶಗಳನ್ನು ಮಾಡಿದ್ದಾನೆ. ಮೊದಲನೆಯದು ಕಾಲಜ್ಞಾನ. ಕ್ರಿಯಾಜನ್ಯ, ನಾದಜನ್ಯ, ಮತ್ತು ಶಬ್ದ ಜನ್ಯ ಎಂದು ಕಾಲವು ಮೂರು ವಿಧ. ಅಹೋರಾತ್ರಾದಿಗಳು ಕ್ರಿಯಾಮೇಯ. ದಿನದ ಒಳವಿಂಗಡಣೆಗಳು ನಾದಜನ್ಯ; ವರ್ಷಾದಿಗಳ ಅನುಕ್ರಮ ಪ್ರಜ್ಞಾನಾಶಕ್ಕೆ ವಸ್ತುವಾದದ್ದು ಯೋಗವಶ್ಯ. ಕಾಲದ ತಂದೆ ಶಬ್ದ ಬ್ರಹ್ಮ. ಶಬ್ದ ಬ್ರಹ್ಮಾಭ್ಯಾಸದಿಂದ ಕಾಲಮುಕ್ತತೆ ಪ್ರಾಪ್ಯ. ಕಾಲ ಮುಕ್ತನು ಅಷ್ಟ ಸಿದ್ಧ್ಯಧಿಕಾರಿಯಾದ ಯೋಗಿ. ಅವನಿಗೆ ಮರಣ ಭಯವಿಲ್ಲ; ಪಾಪ ಪುಣ್ಯಗಳಿಂದ ಅವನು ಮುಕ್ತನು. ಆದರೆ ಅಂಥ ಜ್ಞಾನಿಯೂ ಒಮ್ಮೊಮ್ಮೆ ಪೂರ್ವ ಕರ್ಮ ಪ್ರಭಾವದಿಂದ (ಈಶ್ವರಾನುಗ್ರಹದ ಕೊರತೆಯಿಂದ) ಮೋಹವಶನಾಗಿ ಬದ್ಧನಾದದ್ದುಂಟು. ಶಿವಾನುಗ್ರಹಿಯು ಕಾಲದಾಸ್ಯಮುಕ್ತನಾಗಿ ಶಿವಸಾಯುಜ್ಯವನ್ನು ಕಾಲಕ್ಕೆ ಗೊತ್ತಾಗದಂತೆಯೇ ಪಡೆಯುವನು.

"ಛಾಯಾಪುರುಷ" ಎಂಬ ಎರಡನೆಯ ಉಪಾಧಿಯನ್ನೂ ಸೂರ್ಯನ ಯಾ ಸೋಮನ ಉಪಾಸನೆಯಿಂದ ದಾಟಿ ಹೋಗಬಹುದು. ಅದಕ್ಕೆ ಶಿವಮಂತ್ರವು ಮುಖ್ಯ ಪ್ರಾಣ. ಉಪಾಸನಾ ಯೋಗದ ಮುಖ್ಯಾಂಗವು "ಅಭ್ಯಾಸ." ಭಗವದ್ಗೀತೆಯೂ ಇದನ್ನು ಒತ್ತಿ ಹೇಳಿದೆ. ಅಭ್ಯಾಸ–ವೈರಾಗ್ಯಗಳು ಅವಿನಾಭಾವಿಗಳು. ಅಭ್ಯಸ್ಯ ವಸ್ತುವಿನಿಂದ ಭಿನ್ನವಾದವುಗಳ ಬಗ್ಗೆ ಸಂಪೂರ್ಣ ನಿರಪೇಕ್ಷೆಯಿಂದಿರುವುದು ವೈರಾಗ್ಯ. ಈ ನಿರಪೇಕ್ಷೆ ಇಲ್ಲದಿದ್ದರೆ ಏಕಾಗ್ರತೆ one pointed meditation ಅಸಾಧ್ಯ. ವ್ಯಾಸನು ಛಾಯಾ ಪುರುಷ ದರ್ಶನ ಮಾಡಿ ಮೋಕ್ಷ ಮಾರ್ಗದಲ್ಲಿಯ ಆತಂಕವನ್ನು ದಾಟಿದನು. ಕಾಲದ ಮೂಲನು ಬ್ರಹ್ಮ. ಅವನು "ಪ್ರಧಾನ–ಪುರುಷ" ಎಂಬ ಎರಡು ರೂಪಗಳಿಂದ ಶಿವನಿಂದ ಜನಿಸಿದನು. ಶ್ರುತಿ ವಾಕ್ಯಗಳಿಗೆ ಬಹ್ವರ್ಥಗಳಿರುವುದರಿಂದ ಒಬ್ಬೊಬ್ಬರು ಒಂದೊಂದು ವಿಧದಿಂದ ಬ್ರಹ್ಮ ಸೃಷ್ಟಿಯನ್ನು ಅರ್ಥ ಮಾಡಿಕೊಂಡರು. ಪುರುಷ, ಈಶ್ವರ, ಹಿರಣ್ಯ ಗರ್ಭ ಎಂದರೆ ಒಂದೇ. ಅವನಿಂದ ಅಪಃ (ಕ್ರಿಯಾತ್ಮನ ಅವ್ಯಕ್ತ ಜಲ) ಎಂಬುದು ಮೊದಲು ಹುಟ್ಟಿತು. ಸತ್ (ಶಿವ) ಅಚಲ. ಅಸತ್ (ಅಶಿವ) ಚಲ (ಕ್ರಿಯಾತ್ಮಕ). "ಆಪೋ ನಾರಾಃ ಆಪರು ನರರ ಮಕ್ಕಳು. ಅವರ ಧರ್ಮ ಮಾರ್ಗವೇ" ನಾರಾಯಣ." ಆ ಮಾರ್ಗ ಚಿನ್ನದ ಮೊಟ್ಟೆಯಂತಿರುತ್ತದೆ. ಅದರಲ್ಲಿ ಹಿರಣ್ಯ ಗರ್ಭ ಸ್ವರೂಪದ ಬ್ರಹ್ಮ ಮಲಗಿರುತ್ತಾನೆ. ಅವನೇ ಸ್ವಯಂಭು.

ಅವನಿಂದ ೧೪ ಲೋಕಗಳ ನಿರ್ಮಾಣ. ಅವುಗಳ ಸೃಷ್ಟಿಗೆ ಸಪ್ತರ್ಷಿಗಳು ಸಾಧನ. ಆ ಮೂಲಕ ಬ್ರಹ್ಮಾಂಡ ಎರಡಾಗಿ ಒಡೆಯಿತು. ಆ ಕಾಲದಲ್ಲಿ ಭೂಮಿ, ೧೪ ಲೋಕ, ಆಕಾಶ (ನೀರಲ್ಲಿ) ಪಾರಿಪ್ಲವ ಪೃಥಿವಿ, ೧೦ ದಿಕ್ಕುಗಳು, ಮನಸ್, ವಾಕ್, ಕಾಮ, ಕ್ರೋಧ, ರತಿಗಳೆಂಬ ಗುಣಗಳೂ; ಮರೀಚಿ, ಅತ್ರಿ, ಅಂಗಿರಸ್ ಪುಲಸ್ತ್ಯ, ಪುಲಹ, ತುಮ ಮತ್ತು ವಸಿಷ್ಠರೆಂಬ ದೇವರ್ಷಿಗಳೂ ಹಿರಣ್ಯ ಗರ್ಭದ ಮಾನಸ ಸೃಷ್ಟಿಗಳಾಗಿ ಅವತರಿಸಿದರು. ಅವರೆಲ್ಲರ ಪೂರ್ವಜ ಸನತ್ಕುಮಾರ, ಅವನ ಅನಂತರ ಇತರ ಋಷಿಗಳು. ವಸಿಷ್ಠನು ಸಪ್ತ ಬ್ರಾಹ್ಮಣ ಸ್ರಷ್ಟಾರ. ಏಕಾದಶರುದ್ರರೂ ಬ್ರಹ್ಮಸೃಷ್ಟರು. ಸಪ್ತವಂಶ ಮೂಲರಾದ ಆ ಬ್ರಾಹ್ಮಣರು ಯಜ್ಞ ಮಾಡಿದರು. ಸನತ್ಕುಮಾರನು ಬ್ರಹ್ಮ ತೇಜಸ್ಸಿನ ಸಂಕ್ಷಿಪ್ತರೂಪ. ಆ ಬ್ರಾಹ್ಮಣರು ಬ್ರಹ್ಮ ತೇಜೋರೂಪರಾದ ದಿವ್ಯಶಕ್ತಿಗಳು– ಮಿಂಚು, ಸಿಡಿಲು, ಮೋಡ, ಕೆಂಪಾದ ಕಾಮನ ಬಿಲ್ಲುಗಳು, ನರಪೇಯವಾದ ವಾರಿವರ್ಗಗಳು, ಮಳೆ, ಯಜ್ಞಕ್ಕಾಗಿ ವೇದತ್ರಯ ಮುಂತಾದವುಗಳಿಗೆ ನಿಮಿತ್ತ ಕಾರಣರಾದರು. ಈ ಆರರಲ್ಲಿ ಪಯಸ್ಸು ಪ್ರಥಮ– ಅದು ಆಪ್‌ತತ್ವದ ಕ್ರಿಯಾಚಲನ–ಅಂಶ. ಮಿಕ್ಕದ್ದೆಲ್ಲಾ ಅಚಲ. ಯಜ್ಞಪಶುವಾದ ವಿರಾಟ್ ಪುರುಷನ ಸಪ್ತರ್ಷಿಕೃತಯಜ್ಞ ಪೂಜಿತರಾದ ಮಹಾದೇವ ಚೈತನ್ಯ ತತ್ವಗಳು ೧) ಮುಖದಿಂದ ದೇವತೆಗಳನ್ನು ೨) ಎದೆಯಿಂದ ಪಿತೃಗಳನ್ನು ೩) ವೀರ್ಯದಿಂದ ನರರನ್ನು ೪) ಕುಂಡೆಗಳಿಂದ ಅಸುರರನ್ನು ೫) ಇತರ ದೇಹಾವಯಗಳಿಂದ ಉಚ್ಚಾವಚ ಜಂತುಗಳನ್ನು ಸೃಷ್ಟಿಸಿದವು. ಈ ಹಿರಣ್ಯ ಗರ್ಭನೇ ಪ್ರಜಾಪತಿ. ಸ್ವದೇಹವನ್ನು ಇಬ್ಭಾಗ ಮಾಡಿ ಸ್ತ್ರೀ ಪುರುಷ ಪ್ರಾಣಿ ಭೇದವನ್ನು ಅವನು ಮಾಡಿದನು. ವಿರಾಟ್ ಪುರುಷನು ವಿಷ್ಣು ಶಕ್ತಿ ಮಾತ್ರ. ಒಂದೊಂದು ಸೃಷ್ಟಿಗೆ ಒಬ್ಬೊಬ್ಬ ಮನುವಿನ ಮೂಲ ಹೈತುಕ ಹೆಸರಿದೆ. ಮನುಗಳು ೧೪, ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ ಧರ್ಮ ಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ ಮತ್ತು ಇಂದ್ರಸಾವರ್ಣಿ ಈ ೧೪ ಮನುಗಳ ಕಾಲ–೮೬೪ ಕೋಟಿ ವರ್ಷಗಳು ೨೦೨೦ ದೇವ ಯುಗಗಳು. ಅವುಗಳಲ್ಲಿ ಅರ್ಧ ಬ್ರಹ್ಮನ ಹಗಲು, ಇನ್ನರ್ಧ ಅವನ ರಾತ್ರಿ (ಪ್ರಲಯ ಸ್ಥಿತಿ).

–೭೧–

# ಮನ್ವಂತರದ ಋಷಿಗಳು

ಮರೀಚಿ, ಅತ್ರಿ, ಅಂಗಿರಸ್, ಪುಲಹ, ಕ್ರತು, ಪುಲಸ್ತ್ಯ, ವಸಿಷ್ಠ–ಎಂಬೀ ಏಳು ಜನರು ಬ್ರಹ್ಮನ ಮಕ್ಕಳು. ಇವರು ಸ್ವಾಯಂಭುವ ಮನ್ವಂತರದ ಸಪ್ತರ್ಷಿಗಳು. ಸ್ವಾರೋಚಿಷ ಮನ್ವಂತರದ ಸಪ್ತರ್ಷಿಗಳು–ಊರ್ಜಸ್ತಂಭ, ಪರಸ್ತಂಭ, ಋಷಭ, ವಸುಮಂತ, ಜ್ಯೋತಿಷ್ಮಂತ, ದ್ಯುತಿಮಂತ, ರೋಚಿಷ್ಮಂತ–ಎಂಬೀ ಏಳು ಜನರು. ಉತ್ತಮ ಮನ್ವಂತರದ ಸಪ್ತರ್ಷಿಗಳು–ವಸಿಷ್ಠನ ಏಳು ಮಕ್ಕಳು. ಇದೇ ಪ್ರಕಾರ ಸ್ವಾಯಂಭುವ ಮನ್ವಂತರದ ಇಂದ್ರನ ಹೆಸರು ಯಜ್ಞ, ಸ್ವಾರೋಚಿಷ ಮನ್ವಂತರದ ಇಂದ್ರನು ಸತ್ಯಜಿತ್. ಸ್ವಾಯಂಭುವ ಮನ್ವಂತರದ ಇಂದ್ರನು ರೋಚನ. ಉತ್ತಮ ಮನ್ವಂತರದ ಇಂದ್ರನು ಸತ್ಯಜಿತ್. ಸ್ವಾಯಂಭುವ ಮನ್ವಂತರದ ದೇವತೆಗಳು ಯಾಮರು, ಸ್ವಾರೋಚಿಷ ಮನ್ವಂತರದ ದೇವತೆಗಳು ತುಷಿತರು. ಹೀಗೇ ಉತ್ತಮ ಮನ್ವಂತರದ ದೇವತೆಗಳು ಋಷಭರು. ಇದರ ಮುಂದೆ ಬರುವ ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವ ಸಾವರ್ಣಿ ಮತ್ತು ಇಂದ್ರ ಸಾವರ್ಣಿ ಎಂಬ ಮನುಗಳ ಕಾಲಕ್ಕೂ ಬೇರೆ ಬೇರೆ ಹೆಸರಿನ ಸಪ್ತರ್ಷಿಗಳೂ ದೇವತೆಗಳೂ ಇಂದ್ರರೂ ಇದ್ದಾರೆ. ಒಂದೊಂದು ಮನ್ವಂತರದ ಕಾಲಾವಧಿ (ಮನುಕಾಲ ೩೦೬೭೨೦೦೦೦+ ಸಂಧಿಕಾಲ ೧೭೨.೮೦೦೦) ೪,೩೨೦,೦೦೦ ವರ್ಷಗಳು. ಇದರಿಂದ ತಿಳಿದು ಬರುವುದೇನೆಂದರೆ; ಮನುತ್ವ, ಸಪ್ತರ್ಷಿತ್ವ, ದೇವತ್ವ ಮತ್ತು ಇಂದ್ರತ್ವಗಳು ಕಾಲಾವಧಿ ಸೂಚಕ (ಹುದ್ದೆಗಳಲ್ಲಿರುವ ಭಿನ್ನ ಭಿನ್ನ ಹೆಸರುಗಳನ್ನುಳ್ಳ) ಅಧಿದೇವತೆಗಳು ಎಂಬುದು.

ದಾಕ್ಷಾಯಣಿಯಲ್ಲಿ ಕಶ್ಯಪನಿಂದ ವಿವಸ್ವಂತನು ಜನಿಸಿದನು. ವಿವಸ್ವಂತನ ಅಥವಾ ಸೂರ್ಯನ ಪತ್ನಿಯು ಸಂಜ್ಞೆ, ಸಂಜ್ಞೆಯು ದೇವಶಿಲ್ಪಿ ತ್ವಷ್ಟೃವಿನ ಮಗಳು. ಅವರಿಗೆ ವೈವಸ್ವತನೂ ಶ್ರಾದ್ಧದೇವನಾದ ಪ್ರಜಾಪತಿಯೂ ಮತ್ತು ಯಮುನೆಯೆಂಬ ಮಗಳೂ ಹುಟ್ಟಿದರು. ಸಂಜ್ಞೆಯು ಸೂರ್ಯತಾಪವನ್ನು ತಡೆಯಲಾರದೆ ತನ್ನ ಛಾಯೆಯನ್ನು ಪಡೆದಳು. ಸಂಜ್ಞೆಯು ಮಾಯಾಮಯಿ. ಮಾತ್ರಾಜ್ಞೆಯಂತೆ ಛಾಯೆಯು ತನ್ನ ತಂದೆಯ ಮನೆಯಲ್ಲೇ ಉಳಿದಳು; ತಾಯಿಯಾದ ಸಂಜ್ಞೆಯು ತನ್ನ ತಂದೆಯಾದ ತ್ವಷ್ಟೃವಿನ ಮನೆಗೆ ಹೋಗಿ ಅವನಿಂದ ಬಯಿಸಿಕೊಂಡಳು. ಪದೇ ಪದೇ ತಂದೆಯಿಂದ ಬಯಿಸಿಕೊಂಡ ಆಕೆಯು ತನ್ನ ರೂಪವನ್ನು ಮರೆಯಿಸಿಕೊಂಡು ವಡವೆ (ಹೆಣ್ಣು

ಕುದುರೆಯಾಗಿ) ಎನ್ನಿಸಿಕೊಂಡು ಕುರು ದೇಶದ ಉತ್ತರದಲ್ಲಿ ಜನಮಧ್ಯದಲ್ಲಿ ಓಡಾಡ ತೊಡಗಿದಳು. ಸೂರ್ಯನು ಅವಳನ್ನು ಗುರುತಿಸಿ ಅವಳಲ್ಲಿ ಸಾವರ್ಣಿ ಎಂಬ ಮನುವನ್ನು ಜನಿಯಿಸಿದನು. ಅವನನ್ನು ಛಾಯೆಯು ಮುದ್ದಿನಿಂದ ಸಾಕಿದಳು. ಅದನ್ನು ಅವಳ ಸೋದರ ಯಮ ಸಹಿಸಲಿಲ್ಲ. ಅದರಿಂದ ಸಿಟ್ಟಿಗೆದ್ದ ಛಾಯೆಯು ಅವನಿಗೆ ಶಾಪಕೊಟ್ಟಳು. ಆಗ ಯಮನು ತಂದೆಯಾದ ಸೂರ್ಯನಿಗೆ ಶರಣುವೊಕ್ಕನು. ಛಾಯೆಯು ಸಂಜ್ಞೆಯ ಪ್ರತಿಬಿಂಬವಾದ್ದರಿಂದ ಅವಳು ಸೂರ್ಯಪತ್ನಿಯೇ. ಅವಳನ್ನು ಬೈದು ಸೂರ್ಯನು ಯಮನನ್ನು ಸಂತಯಿಸಿದನು ಮತ್ತು ತನ್ನ ಉರಿಯನ್ನು ಕಡಿಮೆ ಮಾಡಿ ಅವಳಲ್ಲಿ ವೀರ್ಯಾಧಾನ ಮಾಡಿ ದೇವತೆಗಳ ವೈದ್ಯರಾದ ಅಶ್ವಿನೀ ಕುಮಾರರನ್ನು ಜನಿಯಿಸಿದನು. ಅವರು ನಾಸತ್ಯರೆಂದೂ ದಸ್ರರೆಂದೂ ಹೆಸರು ಪಡೆದರು. ಇದರಿಂದ ವ್ಯಸನ ಪಟ್ಟ ಯಮನು ಧರ್ಮರಾಜತ್ವವನ್ನು ವಹಿಸಿಕೊಂಡನು. ಪಿತೃಪಾಲನ, ಲೋಕಪ್ರಜಾಪಾಲನಗಳು ಅವನ ಕರ್ತವ್ಯಗಳಾದವು. ಸಾವರ್ಣಿಯು ಮೇರು ಪೃಷ್ಠ ಪ್ರದೇಶದಲ್ಲಿ ಅಂದಿನಿಂದ ತಪೋನಿರತನಾದನು. ಅವನೇ ವೈವಸ್ವತನ ಅನಂತರ ಬರಲಿರುವ ಮನು ಪ್ರಜಾಪತಿ. ಯಮಿ ಅಥವಾ ಯಮುನೆ ನದಿಯಾಗಿ ಹರಿದಳು.

ವೈವಸ್ವತ ಮನುವಿಗೆ ಇಕ್ಷ್ವಾಕು, ಶಿಬಿ, ನಾಭಾಗ, ಧೃಷ್ಟ, ಶರ್ಯಾತಿ ಮುಂತಾದ ೯ ಮಕ್ಕಳು. ನಾಭಾಗ ಮುನಿಯ ಪುತ್ರಕಾಮೇಷ್ಟಿಯಿಂದ ಇಳೆ (ಇಡೆ) ಜನಿಸಿದಳು. ಅವಳ ಮಗ ಮಿತ್ರಾವರುಣಾಂಶ ಸಂಭೂತನಾದ ಸುದ್ಯುಮ್ನ. ಇಳೆ ಮನೆಗೆ ಹಿಂದಿರುಗುವಾಗ ಬುಧನಿಂದ ಭುಕ್ತಳಾಗಿ ಪುರೂರವನನ್ನು ಹಡೆದಳು. ಬುಧನು ಸೋಮಪುತ್ರನು. ಪುರೂರವಸ್ಸು ಉರ್ವಶೀ ಪತಿಯಾದನು. ಉತ್ಕಲ, ಗಯ, ವಿನತಾಶ್ವರು ಸುದ್ಯುಮ್ನನ ದಾಯಾದರು. ಇಕ್ಷ್ವಾಕುವು ಮಧ್ಯದೇಶದ, ಪುರೂರವನು ಪ್ರತಿಷ್ಠಾನದ ರಾಜರಾದರು. ನಾಭಾಗನ ಮಗ ಅಂಬರೀಷ. ಅವನು ಬಾಹ್ಲೀಕ (ಪಂಜಾಬ್) ದೇಶದ ಅರಸನಾದನು. ಶರ್ಯಾತಿಗೆ ಆನರ್ತನೆಂಬ ಮಗನೂ ಸುಕನ್ಯೆ ಎಂಬ ಮಗಳೂ ಹುಟ್ಟಿದರು. ಸುಕನ್ಯೆಯು ಚ್ಯವನ ಮುನಿಯ ಪತ್ನಿಯಾದಳು. ರೈಭ್ಯನು ಆನರ್ತನ ದಾಯಾದನು. ಆನರ್ತನ ದೇಶದಲ್ಲಿ ಅವನು ಕುಶಸ್ಥಲೀ ಪುರದ ಅರಸನಾದನು. ಅವನ ಮಕ್ಕಳು ನೂರು ಜನರು.

ರೈಭ್ಯನ ನೂರು ಮಕ್ಕಳಲ್ಲಿ ಕಕುದ್ಮಿಯು ಗಣ್ಯನು. ಅವನಿಗಿಬ್ಬರು ಹೆಣ್ಣು ಮಕ್ಕಳು. ಹಿರಿಯವಳಾದ ರೇವತಿಯನ್ನು ಬಲರಾಮನಿಗೂ ಅವಳ ತಂಗಿಯನ್ನು ಕೃಷ್ಣನಿಗೂ ಅವನು ಮದುವೆ ಮಾಡಿಕೊಟ್ಟು ಮೇರುವಿನಲ್ಲಿರುವ ಬ್ರಹ್ಮಲೋಕದಲ್ಲಿ (ಸತ್ಯಲೋಕದಲ್ಲಿ) ಹೋಗಿ ನೆಲೆಸಿದನು. ಅವರಿಂದ ಯಾದವ ವಂಶವು ಪ್ರಖ್ಯಾತವಾಯಿತು.

–೭೨–

# ನೃಗ ಚರಿತ್ರೆ

ಶರ್ಯಾತಿ ವಂಶದ ನೃಗನೊಬ್ಬ ಮನುಪುತ್ರ. ಅವನು ಮಹಾದಾನಿಯಾಗಿದ್ದನು. ಅಧ್ಯಾಪಕರಾದ ಬ್ರಾಹ್ಮಣರಿಗೆ ಒಮ್ಮೆ ಗೋದಾನ ಮಾಡಲು ಮರೆತದ್ದರಿಂದ ನೃಗರಾಜನು ಆ ಪಾಪದಿಂದ ಗೋಸುಂಬೆಯ ಜನ್ಮವನ್ನು ತಾಳಬೇಕಾಯಿತು. ಶ್ರೀ ಕೃಷ್ಣನು ಅನುಗ್ರಹಿಸಿ, ಅವನನ್ನು ಆ ಜನ್ಮದಿಂದ ಮುಕ್ತಗೊಳಿಸಿದನು. ನೃಗನಿಗೆ ಪ್ರಯಾತಿ ಎಂಬ ಮಗನೊಬ್ಬನು ಜನಿಸಿದನು. ಆದರೆ ಅವನಿಗಾ ಸಂತೋಷ ಬಹಳ ಕಾಲ ಉಳಿಯಲಿಲ್ಲ. ಅಜ್ಞಾನದಿಂದ ಅವನು ಒಂದು ದಿನ ಎತ್ತೊಂದನ್ನು ಕೊಂದದ್ದರಿಂದ ಅವನ ಗುರುವು ಅವನನ್ನು ದನ ಕಾಯಲು ಆಜ್ಞಾಪಿಸಿದನು. ಅವನು ಕೊಟ್ಟಿಗೆಯಲ್ಲೇ ಇದ್ದಾಗ ಒಮ್ಮೆ ಒಂದು ಹುಲಿ ಹೊಕ್ಕು ಗೋಧನವನ್ನು ತಿನ್ನಲು ಯತ್ನಿಸಿದಾಗ ಅವನು ಕತ್ತಲಲ್ಲಿ ಹುಲಿಯ ತಲೆಯ ಬದಲು ಅಲ್ಲಿದ್ದ ವೃಷಭದ ತಲೆಯನ್ನು ಕಡಿದದ್ದೇ ಅವನಿಗೆ ಕುತ್ತನ್ನು ತಂದಿದ್ದು. ಹುಲಿ ಓಡಿ ಹೋಗಿ ಬಿಟ್ಟಿತ್ತು. ಅದರಿಂದ ಕ್ರುದ್ಧನಾದ ಅವನ ಗುರುವು ಅವನಿಗೆ "ನಿನ್ನ ಕ್ಷತ್ರಿಯತ್ವವು ನಾಶವಾಗಿ ನಿನಗೆ ಶೂದ್ರತ್ವವು ಬರಲಿ" ಎಂದು ಶಾಪವನ್ನು ಕೊಟ್ಟನು. ದುಃಖದಿಂದ ಅವನು ಕಾಡಿಗೆ ಹೋಗಿ ಯೋಗಾಭ್ಯಾಸ ಮಾಡುತ್ತಿದ್ದಾಗ ವನಾಗ್ನಿಯಿಂದ ದೇಹವನ್ನು ಕಳೆದುಕೊಂಡನು. ಅದೇ ಅವನನ್ನು ಮುಕ್ತಿಪದಕ್ಕೊಯ್ದು ನಿಲ್ಲಿಸಿತು. ಶಿವಾನುಗ್ರಹದಿಂದ ಅವನು ಶಿವಲೋಕದಲ್ಲಿ ಕವಿಯಾದನು. ದ್ರಷ್ಟಾರನಾದನು. ಅನಂತರ ಶಾಶ್ವತ ಮುಕ್ತಿಯನ್ನು (ಅತಿಮುಕ್ತಿಯನ್ನು) ನೃಗನು ಹೊಂದಿದನು.

ಅಗ್ನಿಯನ್ನು ಕಂಡು ತುಳಿದರೂ ಸುಡುವುದು, ಕಾಣದೆ ತುಳಿದರೂ ಸುಡುವುದು, ಅಧರ್ಮವೂ ಹಾಗೇ. ಮನುಷ್ಯನಿಗೆ ದೇವರು ಬುದ್ಧಿಯನ್ನು ಕೊಟ್ಟಿರುವುದರಿಂದ ಪಾಪ–ಪುಣ್ಯ ವಿಚಾರಗಳಲ್ಲಿ ನಿರಕ್ಷರಿ ಕೂಡಾ ಅದಕ್ಷನಲ್ಲ. ಧರ್ಮಜ್ಞಾನ ಪಡೆದುಕೊಳ್ಳುವುದು ಎಲ್ಲ ಮಾನವರ ಕರ್ತವ್ಯ. "ನನಗೆ ಕಾಯಿದೆಗೊತ್ತಿಲ್ಲದೆ ಮಾಡಿದ ತಪ್ಪಿಗೆ ಶಿಕ್ಷೆಯನ್ನು ವಿಧಿಸಬಾರದು" ಎಂಬ ಹಕ್ಕು ಈಗಲೂ ಮನುಷ್ಯರಿಗಿಲ್ಲ. ಅಜ್ಞಾನದ ಗುರಾಣಿ ಯಾರನ್ನೂ ಇಹಪರಗಳಲ್ಲಿ ಎಂದೂ ರಕ್ಷಿಸದು. ಜ್ಞಾನದ ಸತತಾಭ್ಯಾಸವು ಸರ್ವಕರ್ಮ ಪೂರ್ವಜವಾಗಿರಬೇಕು. ಇದು ಶಿವೇಚ್ಛೆ. ನೃಗಚರಿತ್ರೆ ಈ ವಿಶ್ವ ಮಾನವ ನೀತಿಗೆ ನಿದರ್ಶನ, ಜ್ಞಾನಗಳಲ್ಲೂ ಧರ್ಮಜ್ಞಾನವು ಅತಿ ಮುಖ್ಯ; ಅದನ್ನು ಬಲ್ಲವರಿಂದ

ಕೇಳಿ, ಸ್ವಾನುಭವದಿಂದ ಪರೀಕ್ಷಿಸಿ ಕಲಿತುಕೊಳ್ಳಲಾರೆನೆಂದು ನೂರಕ್ಕೆ ತೊಂಬತ್ತರಷ್ಟು ಜನರು ಆತ್ಮಸಾಕ್ಷಿಯಾಗಿ ಹೇಳಲಾರರು. ಕಲಿಯಲು ಯತ್ನಿಸದಿರುವುದು ತಪ್ಪು; ಕಲಿತದ್ದನ್ನು ಜಾಗರೂಕತೆಯಿಂದ ಆಚರಣೆಗೆ ತಾರದಿರುವುದು ತಪ್ಪು, ಧರ್ಮಾಭ್ಯಾಸವು ಸರ್ವಸಾಧ್ಯ. ಧರ್ಮರಾಜ ಹೇಳಿದಂತೆ ಮಹಾಜನರು (ಮಹಾತ್ಮರು) ಆಚರಿಸಿದ್ದೇ ಧರ್ಮ. ಮಹಾಜನರು ಶ್ರೀ ಸಾಮಾನ್ಯರಲ್ಲ. ಅವರಿಗೆ ಅನುಕರಣೀಯರಾದ ನಿಃಸ್ವಾರ್ಥ ಲೋಕ ಹಿತೈಷಿಗಳು. ಸತ್‌ಪಾತ್ರೋಪಕಾರವು ಕರ್ತವ್ಯ. ಅದು ಸ್ವಶಕ್ತಿಗಿಂತ ಕಡಿಮೆಯದಾಗಿರಬಾರದು. ಇದು ಮಾನವ ಜೀವನದ ವ್ಯವಹಾರ್ಯ ನಿಯಮಗಳಲ್ಲೆಲ್ಲಾ ಅತಿ ದೊಡ್ಡದು.

ತಪ್ಪನ್ನು ಕ್ಷಮಿಸುವುದೆಂದರೆ ಮಾಫಿ ಮಾಡುವುದಲ್ಲ. ತಪ್ಪಿಗೆ ತಕ್ಕ ಪ್ರಾಯಶ್ಚಿತ್ತವನ್ನು (ಕೇವಲ ದಂಡವನ್ನಲ್ಲ) ವಿಧಿಸಿ ತಪ್ಪಿತಸ್ಥರನ್ನು ಸನ್ಮಾರ್ಗಕ್ಕೆ ತಿರುಗಿಸುವುದು. ಮಾಫಿಯು ಅಪರಾಧ ಪ್ರೋತ್ಸಾಹಕ; ಅತಿ ದಂಡವು ಕ್ರೌರ್ಯ, ಅವಮಾನವೀಯ, ಅನ್ಯಾಯ ಎಂಬುದನ್ನು ಕೂಡಾ ನೃಗ ಚರಿತ್ರೆಯು ಸೂಚಿಸುತ್ತದೆ. ಪಶ್ಚಾತ್ತಾಪವಿಲ್ಲದ ಪ್ರಾಯಶ್ಚಿತ್ತವು ಅರ್ಥವತ್ತಾಗದು. ಪಶ್ಚಾತ್ತಾಪದ ಪರೀಕ್ಷೆ ಗುರುವಿನ ಅಧೀನ; ಫಲ ನಿರ್ಣಯವೂ ಅವನಿಗೇ ಸೇರಿದ್ದು.

## –೭೩–

# ಧುಂಧುಮಾರನ ಕಥೆ ಮತ್ತು ವಿಶ್ವಾಮಿತ್ರನ ತಪಸ್ಸು

ಮನು (೧೪ರಲ್ಲಿ ಸದ್ಯದವನು)ವಿನ ಮೂಗಿನಿಂದ ಇಕ್ಷ್ವಾಕು ಹುಟ್ಟಿದನು. ಅಯೋಧ್ಯ ರಾಜನು ಅವನ ವಂಶದವನು. ಅವನ ದಾಯಾದ ಕಕುತ್ಸ್ಥನು. ಕಕುತ್ಸ್ಥನ ಮಗ ಅರಿನಾಭನೆಂಬ ದೊರೆ. ಅರಿನಾಭನ ಮಗ ಸುಪ್ರಸಿದ್ಧನಾದ ಪ್ರಥು ಚಕ್ರವರ್ತಿ. ಮನುಸ್ಮೃತಿಯ ಪ್ರಕಾರ ವೇನನ ಮಗ ಪೃಥು–ಇರಲಿ. ಈ ಪುರಾಣದಂತೆ ಪೃಥುವಿನ ಮಗ ವಿಷ್ಟರಾಶ್ವರಾಜನು. ಇಕ್ಷ್ವಾಕುಗಳೆಲ್ಲಾ ಉತ್ತರಾಪಥದ ಅರಸರು. ವಿಷ್ಟರಾಶ್ವನು ಅಂದಿನ ಇಂದ್ರ ಪ್ರಜಾಪತಿ. ಅವನು ಶ್ರಾವಸ್ತಿ ನಗರವನ್ನು ನಿರ್ಮಿಸಿದ್ದರಿಂದ ಶ್ರಾವಸ್ತಕನೆಂಬ ಬಿರುದನ್ನು ಪಡೆದನು. ಅವನ ದಾಯಾದನಾಗಿದ್ದ ಬೃಹದಶ್ವನ ಮಗನೋ ಯುವನಾಶ್ವ. ಯುವನಾಶ್ವನ ಮಗ ಕುವಲಾಶ್ವ. ಧುಂಧು ರಾಕ್ಷಸನನ್ನು ಕೊಂದದ್ದರಿಂದ ಕುವಲಾಶ್ವನಿಗೆ ಧುಂಧುಮಾರನೆಂಬ ಹೆಸರು ಬಂದಿತು. ಧುಂಧುವು ಮಧು ರಾಕ್ಷಸನ ಮಗ, ಪ್ರಜಾಪೀಡಕ.

ಅಂದು ಉತ್ತಂಕನೆಂಬವನು ಪ್ರಖ್ಯಾತ ರಾಜರ್ಷಿಯಾಗಿದ್ದನು. ಅವನ ಇಷ್ಟದ ಪ್ರಕಾರವಾಗಿ ಕುವಲಾಶ್ವನು ಧುಂಧುವನ್ನು ಸಂಹರಿಸಲು ಹೋದನು. ದೇವತೆಗಳ ಪ್ರಾರ್ಥನೆಯಂತೆ. ವಿಷ್ಣು ತೇಜಸ್ಸು ಕುವಲಾಶ್ವನಲ್ಲಿ ಮೈಗೂಡಿತು; ವಿಪ್ರರ್ಷಿ ನಾರಾಯಣನ ತೇಜಸ್ಸೂ ಅವನಲ್ಲಿ ಮಿಲಿತವಾಯಿತು. ಅವನು ಅದರಿಂದ ಅಜಯ್ಯನಾದನು– ಅಶರೀರವಾಣಿ ಹಾಗೇ ಭವಿಷ್ಯವನ್ನು ಸೂಚಿಸಿತು. ಪಡುವಣ ಕಡಲ ಆಳದಲ್ಲಿರುವ ಸಿಕತ ರಾಜ್ಯವು ಧುಂಧುವಿನ ಚಟುವಟಿಕೆಯ ಕೇಂದ್ರವಾಗಿತ್ತು. ಅಲ್ಲಿಗೆ ಕುವಲಾಶ್ವನು ಹೋದನು. ಆದರೆ ಈತನ ಸುಳಿವನ್ನು ಕಂಡ ಕೂಡಲೇ ಇವನ ಮುಂಚೂಣಿಯಲ್ಲಿದ್ದ ೯೭ ಮಕ್ಕಳನ್ನು ಧುಂಧುಮುಖದಿಂದ ಹೊರಟ ಕಾಲಾನಲ ಸುಟ್ಟು ಬೂದಿ ಮಾಡಿ ಬಿಟ್ಟಿತು. ಅವನಿಗಾಗ ಮೂರೇ ಮಕ್ಕಳು ಬದುಕಿ ಉಳಿದರು. ಅಷ್ಟರಲ್ಲಿ ಆ ರಾಕ್ಷಸನು ಪರ್ವತಾಕಾರದ ಜಲೋಲ್ಲಕಲ್ಲೋಲಗಳನ್ನೆಬ್ಬಿಸಿದನು. ಕುವಲಾಶ್ವನು ಅಗ್ನ್ಯಸ್ತ್ರದಿಂದ ಕಾಲಾನಲವನ್ನು ಶಮನಗೊಳಿಸಿದ್ದಲ್ಲದೆ ರಾಕ್ಷಸ ಹೊಡೆದೆಬ್ಬಿಸಿದ ಜಲಪರ್ವತಗಳ ಜಲವನ್ನು ಅಗಸ್ತ್ಯನಂತೆ ಕುಡಿದು ಖಾಲಿ ಮಾಡಿದನು; ಆಮೇಲೆ ಉದಕ ರಾಕ್ಷಸನಾದ ಧುಂಧುವನ್ನು ಒಂದೇ ಏಟಿಗೆ ಸಂಹಾರ ಮಾಡಿದನು. ದೇವತೆಗಳು ಹೂಮಳೆಗರೆದರು. ಉತ್ತಂಕನು ಆನಂದದಿಂದ ಧುಂಧುಮಾರ ಕುವಲಾಶ್ವನಿಗೆ ಬೇಡಿದ್ದೆಲ್ಲಾ ವರಗಳನ್ನು ಕೊಟ್ಟು ಹರಸಿದನು.

ಧುಂಧುಮಾರನ ಮೂರು ಮಕ್ಕಳಲ್ಲಿ ದೃಢಾಶ್ವನೆಂಬಾತ ಬಹಳ ಶ್ರೇಷ್ಠರಾಗಿದ್ದನು. ದೃಢಾಶ್ವನ ಮಗ ಹರ್ಯಶ್ವ. ಹರ್ಯಶ್ವ ಪುತ್ರ ನಿಕುಂಭ. ನಿಕುಂಭನು ಬಹಳ ಧರ್ಮಿಷ್ಠನಾಗಿದ್ದನು. ಸಂಹತಾಶ್ವನು ನಿಕುಂಭ ಚಕ್ರವರ್ತಿಯ ಮಗ. ಶಶಬಿಂದು ದೊರೆಯ ಮಗಳು ಸಂಹತಾಶ್ವನ ರಾಣಿ. ಅವಳ ಹೆಸರು ಚೈತ್ರರಥಿ. ಅವಳಿಗೆ ಪುರುಕುತ್ಸ–ಮುಚುಕುಂದರೆಂಬ ಇಬ್ಬರು ಮಕ್ಕಳಿದ್ದರು. ತ್ರಯ್ಯಾರುಣಿಯೆಂಬ ಕವಿಯು ಪುರುಕುತ್ಸನ ಮಗ. ಸತ್ಯವ್ರತನು ತ್ರೈಯ್ಯಾರುಣಿಯ ಮಗ. ಮದುವೆಯಾಗಿದ್ದವಳೊಬ್ಬಳನ್ನು ಮದುವೆಯಾದನೆಂದು ಆರುಣಿಯು ಸತ್ಯವ್ರತನನ್ನು ಪರಿತ್ಯಜಿಸಿ ಬಿಟ್ಟನು. ಧರ್ಮಪಾಲನೆಂಬ ರಾಜನು ಅವನಿಗೆ ಆಶ್ರಯವನ್ನಿತ್ತನು. ಆರುಣಿಯು ಶಿವನನೊಲಿಸಿಕೊಳ್ಳಲೆಂದು ತಪಸ್ಸು ಮಾಡಲು ಕಾಡಿಗೆ ಹೋದನು. ಅದು ಪಾಪ ರಾಜ್ಯವೆಂದು ಇಂದ್ರನು ೧೨ ವರ್ಷಗಳ ಕಾಲ ಮಳೆಸುರಿಸಲಿಲ್ಲ. ಅದರಿಂದ ಕ್ಷಾಮವುಂಟಾಗಿ ಜನರು ತತ್ತರಿಸಿ ಹೋದರು. ಅದನ್ನು ಪರಿಹರಿಸಲು ಮಹಾ ಪ್ರತಾಪಿ ವಿಶ್ವಾಮಿತ್ರನು ಹೆಂಡಿರು ಮಕ್ಕಳು ರಾಜ್ಯ ಕೋಶಾದಿಗಳನ್ನು ತ್ಯಜಿಸಿ ತಪಸ್ಸು ಮಾಡತೊಡಗಿದನು. ಅವನ ಯಜ್ಞಕ್ಕೆ ಅವನ ಮಧ್ಯಮ ಪುತ್ರನನ್ನು ಅವನ ಹೆಂಡತಿಯು ಭೂಮಿಯನ್ನು ಹೊತ್ತ ಆದಿಶೇಷನಿಗೆ ಆಹಾರವಾಗಲೆಂದು ಕುತ್ತಿಗೆಯೊತ್ತಲು ಸಿದ್ಧಳಾದಳು, ಒತ್ತಿದಳು! ಆ ಕ್ಷಣ ವಿಶ್ವಾಮಿತ್ರನು ಅವನನ್ನು ತಪೋಬಲದಿಂದ ಬದುಕಿಸಿದನು. ಸತ್ತು ಬದುಕಿದ ಅವನ ಕುತ್ತಿಗೆ ತಾಯ ಕೈಗೆ ತುತ್ತಾದ್ದರಿಂದ ಅವನಿಗೆ (ಗಲ=ಕಂಠ) ಗಾಲವನೆಂಬ ಹೆಸರು ಬಂದಿತು. ವಿಶ್ವಾಮಿತ್ರನಿಗಂಜಿದ ಇಂದ್ರನು ಮಳೆ ಸುರಿಸಿ ಆ ದೇಶದ ಕ್ಷಾಮವನ್ನು ಪರಿಹರಿಸಲು ಕಾರಣನಾದನು.

## ಸತ್ಯವ್ರತನ ಸಶರೀರ ಸ್ವರ್ಗಾರೋಹಣ

ಸತ್ಯವ್ರತ ಮಹಾರಾಜನು ಕೃತಜ್ಞತೆಯಿಂದ ವಿಶ್ವಾಮಿತ್ರರ್ಷಿಯ ಪತ್ನಿಯರನ್ನು ಪೂಜ್ಯಭಾವದಿಂದ ಪಾಲಿಸುತ್ತಾ ಹೋದನು. ಕ್ಷತ್ರಿಯರಾದ ಅವರಿಗೆ ಬೇಕಾದ ಮಾಂಸಾಹಾರವನ್ನು ಅವನು ಬೇಟೆಯಾಡಿ ಒದಗಿಸುತ್ತಿದ್ದನು. ಆ ರಾಜ್ಯದ ರಾಜಾಸ್ಥಾನದ ಪುರೋಹಿತನಾದ ವಸಿಷ್ಠ ಮಹರ್ಷಿಯು “ಪಿತೃದ್ರೋಹ” ಮಾಡಿ ಪಿತೃ ಪರಿತ್ಯಕ್ತನಾಗಿದ್ದ ಸತ್ಯವ್ರತನ ಆಳಿಕೆಯನ್ನು ಮನ್ನಿಸಲಿಲ್ಲ. ಅವನ ಬೇಟೆಯ ಹಕ್ಕನ್ನು ಪ್ರತಿಬಂಧಿಸಿದನು. ಅದರಿಂದ ಕ್ರುದ್ಧನಾದ ಸತ್ಯವ್ರತನು ವಸಿಷ್ಠನ ಆಶ್ರಮಕ್ಕೆ ಹೋಗಿ ಅವನ ಕಾಮಧೇನುವನ್ನು ಕೊಂದು ಅದರ ಮಾಂಸದಿಂದ ಮಾಡಿದ ಅಡಿಗೆಯನ್ನು ವಿಶ್ವಾಮಿತ್ರನ ಪುತ್ರನಿಗೆ ಉಣ್ಣ ಬಡಿಸುವ ವ್ಯವಸ್ಥೆಯನ್ನು ಮಾಡಿದನು. ಕೋಪ ತಾಪದಿಂದ ಸಿಡಿದೆದ್ದ ವಸಿಷ್ಠನಾಗ ಅವನನ್ನು ಕುರಿತು–

"ಪಿತೃದ್ರೋಹ, ಗುರುದ್ರೋಹ ಮತ್ತು ಅವಿಧಿ ಪೂರ್ವಕ ಮಾಡಿಸಿದ ಮಾಂಸಾನ್ನ ಭೋಜನದಿಂದ ಬಂದ ಪಾಪ ಈ ಮೂರರಿಂದ ಇನ್ನು ಮುಂದೆ ತ್ರಿಶಂಕುವಾಗು" ಎಂದು (ಚಾಂಡಾಲತ್ವ ಇಲ್ಲಿ ಸಪಷ್ಟವಾಗಿ ಹೇಳಿಲ್ಲ) ಶಪಿಸಿದನು. ಅಷ್ಟು ಹೊತ್ತಿಗೆ ಬ್ರಹ್ಮರ್ಷಿಗೆದುರಾಗಿ ಮತ್ತೊಬ್ಬ ಬ್ರಹ್ಮರ್ಷಿಯಾದ ವಿಶ್ವಾಮಿತ್ರ ಬಂದು ಸತ್ಯವ್ರತನ ಪಟ್ಟಾಭಿಷೇಕವನ್ನು ನೆರವೇರಿಸಿ ಅವನನ್ನು ಅವನ ತಂದೆಯ ರಾಜ್ಯಕ್ಕೆ ಅಧಿಕೃತ ವಾರಸುದಾರರನ್ನಾಗಿ ಮಾಡಿದನು. ಆಗ ಬಹುಕಾಲ ಸತ್ಯವ್ರತನು ಸತ್ಯಧರ್ಮದಿಂದ ರಾಜ್ಯಭಾರಮಾಡಿದನು. ಅನಂತರ ಮರಣಕಾಲ ಸಮೀಪಿಸುತ್ತಿದ್ದಾಗ ವಿಶ್ವಾಮಿತ್ರನು ಬಂದು ತ್ರಿಶಂಕುವಿಗೆ (ಪ್ರತ್ಯೇಕ ಸ್ವರ್ಗವನ್ನಿಲ್ಲಿ ಮಾಡಿದನೆಂದು ಹೇಳಿಲ್ಲ) ಸಶರೀರ ಸ್ವರ್ಗಾರೋಹಣವನ್ನು ಮಾಡಿಸಿದನು.

–೭೪–

# ಸಗರ ಚಕ್ರವರ್ತಿ

ಕೇಕಯ ವಂಶದ ಸತ್ಯರಥೆಯು ಸತ್ಯವ್ರತನ ರಾಣಿಯಾಗಿದ್ದಳು. ಅವಳಲ್ಲಿ ಹುಟ್ಟಿದ ಸತ್ಯಹರಿಶ್ಚಂದ್ರ ಮಹಾರಾಜನು ತ್ರೈಶಂಕವ ಎನ್ನಿಸಿದನು. ರಾಜಸೂಯಯಾಗ ಮಾಡಿ ಆತನು ಚಕ್ರವರ್ತಿಯಾದನು. ಅವನ ಮಗ ರೋಹಿತ. ರೋಹಿತನ ಮಗ ವೃಕ. ಬಾಹುವು ವೃಕನ ಮಗ. ಸಗರ ಚಕ್ರವರ್ತಿಯು ಬಾಹುರಾಜನ ಮಗ, ತಂದೆಯನ್ನು ನಿಂದಿಸಿದ್ದ ಹೈಹಯ. ತಾಲ ಜಂಘು, ಯವನ, ಪಾರದ, ಕಾಂಬೋಜ, ಪಾಹ್ನವ ಮತ್ತು ಬಹೂದಕರೆಂಬ ಶತ್ರುಗಳನ್ನು ಭಾರ್ಗವ ಔರ್ವನಿಂದ ಪಡೆದ ಆಗ್ನೇಯಾಸ್ತ್ರದಿಂದ ಸೋಲಿಸಿದನು ಮತ್ತು ತಂದೆಗೆ ಚಕ್ರವರ್ತಿತ್ವದ ಗೌರವವನ್ನು ಮತ್ತೆ ಕೊಡಿಸಿದನು. ಆದರೆ ಬಾಹುವು ದುರ್ವ್ಯಸನಗಳಿಗೆ ಕಾಲಕ್ರಮೇಣ ತುತ್ತಾಗಿ ಪೂರ್ವೋಕ್ತ ವೈರಿಗಣದಿಂದ ಸೋತು ಕಾಡಿಗೆ ಹೋದನು. ಸಗರ ಸುಮ್ಮನೆ ಕೂತುಕೊಳ್ಳಲಿಲ್ಲ. ಶತ್ರು ಸಂತತಿಯನ್ನು ನಿರ್ನಾಮಗೊಳಿಸಿ ಏಕಚಕ್ರಾಧಿಪತಿಯೆನ್ನಿಸಿಕೊಂಡನು. ಶತ್ರುಗಣವು ಹೈಹಯರಿಗಿತ್ತಿದ್ದ ತನ್ನ ತಂದೆಯ ರಾಜಧಾನಿಯನ್ನು ಅವರಿಂದ ಪುನಃ ಕಸಿದುಕೊಂಡನು.

ಗರವೆಂದರೆ ವಿಷ. ಸಗರನು ತಾಯಿಯ ಗರ್ಭದಲ್ಲಿದ್ದಾಗ ಅವನ ಮಲತಾಯಿ ಅವನ ತಾಯಿಗೆ ವಿಷಾನ್ನ ಭೋಜನ ಮಾಡಿಸಿದುದರಿಂದ, ರಾಜ್ಯ ಕಳೆದುಕೊಂಡ ಅವನ ತಂದೆ ಅವಳೊಡನೆ ಅಗ್ನಿಪ್ರವೇಶ ಮಾಡಿದಾಗ ಔರ್ವಾನಲನು ಅವರ ಶಿವಭಕ್ತಿಗೆ ಮೆಚ್ಚಿ ಅವರನ್ನು ಕಾಯ್ದನು. ಸಗರನಾಗ ವಿಷ (ಗರ) ಸಮೇತ ಜನಿಸಿದುದರಿಂದ ಆ ಅನ್ವರ್ಥ ನಾಮವನ್ನು ಪಡೆದನು.

ಸಗರನು ವಸುಂಧರೆಯನ್ನು ಗೆದ್ದು ಧರ್ಮ ಸಂಸ್ಥಾಪನೆ ಮಾಡಿದ ಮೇಲೆ ಅವನ ಶತ್ರುಗಳಾಗಿದ್ದ ಶಕರೂ ಯವನರೂ ಕಾಂಬೋಜರು ಪಾಹ್ನವರೂ ಸೋತು ವಸಿಷ್ಠ ಮಹರ್ಷಿಗೆ ಶರಣಾಗತರಾದರು. ವಸಿಷ್ಠೋಪದೇಶದಿಂದ ಸಗರನು ಅವರನ್ನು ಉಳಿಸಿದನು. ಶಕರು ಅರ್ಧಮುಂಡಿತರಾದರು. ಯವನರೂ ಕಾಂಬೋಜರೂ ಪೂರ್ಣ ಮುಂಡಿತರಾದರು. ಪಾರದರಿಗೆ ಕ್ರಾಪ್ ಕಟ್ ಆಯಿತು. ಪಾಹ್ನವರು ಗಡ್ಡಬಿಟ್ಟರು. ಅವರಿಗೆ ಸ್ವಾಧ್ಯಾಯ–ವಷಟ್ಕಾರಗಳ ಪಠನದ ಹಕ್ಕು ಕಳೆದು ಹೋಯಿತು.

ಅನಂತರ ಸಗರನು ಅಶ್ವಮೇಧಯಾಗವನ್ನು ಆರಂಭಿಸಿದನು. ತನ್ನ ೬೦,೦೦೦ ಮಕ್ಕಳನ್ನು ಪೂರ್ವ ದಕ್ಷಿಣ (ಆಗ್ನೇಯ) ದಿಕ್ಕಿಗೆ ಹೊರಟ ಯಜ್ಞಾಶ್ವದ ಬೆಂಗಾವಲಿಗೆಂದು

ಕಳುಹಿದನು. ಹೊಟ್ಟೆ ಕಿಚ್ಚಿನ ದೇವೇಂದ್ರನು ಸಮುದ್ರ ತೀರದಲ್ಲಿ ಆ ಕುದುರೆಯನ್ನು ಅಪಹರಿಸಿ "ಹೈಜಾಕರ್" ಎನ್ನಿಸಿಕೊಂಡನು. ಅಶ್ವಶೋಧನೆಗಾಗಿ ಸಗರ ಪುತ್ರರು ಸಮುದ್ರವನ್ನು ತೋಡಿದರು. ಅಲ್ಲಿ ಅವರು ಕಪಿಲ ಮುನಿಯನ್ನು ಕಂಡರು. ಆದಿ ಪುರುಷ ಕಪಿಲನು ತಪಸ್ಸಿನಿಂದ ಕಣ್ದೆರೆದಾಗ ಅವನ ನೇತ್ರಾಗ್ನಿಯಿಂದ ಸಗರ ಪುತ್ರರು ಸುಟ್ಟು ಹೋದರು. ಆಗ ಹರ್ಷಕೇತು, ಸುಕೇತು, ಧರ್ಮರಥ, ಶೂರ, ಪಂಚ ಜನರೆಂಬ ಮೊಮ್ಮಕ್ಕಳು ಹರಿಯಿಂದ ಐದು ವರಗಳನ್ನು ಪಡೆದರು. ವಂಶ, ಮೇಧೆ (ಬುದ್ಧಿ), ಕೀರ್ತಿ, ಸಮುದ್ರ, ತನಯ, ಧನ, ಸಾಗರತ್ವಗಳನ್ನವರು ಪಡೆದರು. ಆಗ ಸಮುದ್ರದಿಂದ ಯಜ್ಞಾಶ್ವವನ್ನು ಕರೆತಂದು ಶತಾಶ್ವಮೇಧಯಾಗವನ್ನು ಸಗರನು ಮಾಡಿದನು; ಶಂಭುವಿನ ವಿಭೂತಿ ಸ್ವರೂಪದ ದೇವತೆಗಳನ್ನು ಪೂಜಿಸಿದನು.

ಸಗರನಿಗೆ ಇಬ್ಬರು ಹೆಂಡಿರಿದ್ದರು. ಅವರಲ್ಲಿ ಒಬ್ಬಳು ಔರ್ವರ್ಷಿಯನ್ನು ತಪಸ್ಸಿನಿಂದ ಒಲಿಸಿಕೊಂಡು ಅರುವತ್ತು ಸಾವಿರ ಮಕ್ಕಳನ್ನು ಬೀಜಪೂರ್ಣ ತುಂಬಗಳ ಮೂಲಕ (ಸೋರೆಕಾಯಿಗಳ ಮೂಲಕ) ಪಡೆದಳು. ಅವರು ಬೆಳೆದದ್ದು ತುಪ್ಪದ ಕೊಡಗಳಲ್ಲಿ. ಅವರೀಗ ಸತ್ತು ಹೋದರು. ಮತ್ತೊಬ್ಬ ಹೆಂಡತಿಯ ಮಗ ಪಂಚಜನನೀಗ ರಾಜನಾದನು. ಪಂಚಜನನ ಮಗ ಅಂಶುಮಂತ. ಅವನ ಮಗ ದಿಲೀಪ. ದಿಲೀಪನ ಮಗನು ಭಗೀರಥ. ಗಂಗಾವತಾರ ಮಾಡಿಸಿದ "ಎಂಜಿನಿಯರ್" ಭಗೀರಥನೇ. ಗಂಗೆ ಭಾಗೀರಥಿ ಎಂಬ ಹೆಸರಿನಿಂದ ಅವನ ಮಗಳಾದಳು. ಭಗೀರಥನ ಮಗನು ಶ್ರುತಸೇನನು. ಅವನ ಮಗ ನಾಭಾಗರಾಜ. ಅಂಬರೀಷನು ನಾಭಾಗ ಪುತ್ರನು. ಸಿಂಧು ದ್ವೀಪದಲ್ಲಿ ಅವನ ದಾಯಾದ ಸೋದರನಾದ ಅಯುತಾಜಿತ್ತು ಆಳ ತೊಡಗಿದನು. ಋತುಪರ್ಣನು ಅವನ ಮಗನು. ಅವನು ನಳನ ಸ್ನೇಹಿತನಾದ ದ್ಯೂತಶಾಸ್ತ್ರ ವಿಶಾರದನು. ಅನುಪರ್ಣನು ಋತುಪರ್ಣನ ಮಗನು. ಕಲ್ಮಾಷಪಾದನು ಅವನ ಗೆಳೆಯನು. ಸರ್ವಕರ್ಮನು ಕಲ್ಮಾಷಪಾದನ ಪುತ್ರನು–ಮಿತ್ರಸಹನು ಗೆಳೆಯನು. ಅನರಣ್ಯನು ಸರ್ವಕರ್ಮ (ಶರ್ಮ)ನ ಮಗನು. ಮುಂದೆ ದ್ರುಹನು ಅನರಣ್ಯ ಪುತ್ರ. ಅವನ ಮಗ ನಿಷಧ; ರತಿ ಮತ್ತು ಖಟ್ವಾಂಗ ಎಂಬಿವೂ ಅವನ ಹೆಸರುಗಳು. ಅವನ ಮಗನು ದೀರ್ಘಬಾಹು. ರಘುವು ದೀರ್ಘ ಬಾಹುವಿನ ಮಗ. ಅವನ ಮಗ ಅಜ. ಅಜನ ಮಗ ದಶರಥ. ದಶರಥನ ಮಗ ರಾವಣಾರಿಯಾದ ರಾಮ. ರಾಮನ ಮಗ ಕುಶ. ಕುಶನ ಮಗ ಅತಿಥಿ. ನಿಷಧ ಅವನ ಮಗ. ನಿಷಧನ ಮಗ ನಳ. ನಭಾಸ್ ನಳನ ಮಗನು. ನಭನ ಮಗ ಪುಂಡರೀಕ. ಹೀಗೇ ವಂಶವು ಮುಂದುವರಿಯುತ್ತಾ ಹೋಗಿ ಕಲಿಯುಗಾಂತದಲ್ಲಿ ಕಲಾಪ ಗ್ರಾಮಾಧೀಶನಾದ ಮರುತ್ತಿನಲ್ಲಿ ಇಕ್ಷ್ವಾಕು ವಂಶವು ಮುಕ್ತಾಯವಾಯಿತು. ವೈವಸ್ವತ ವಂಶವೆಂದರೂ ಒಂದೇ, ವಿವಸ್ವಂತನಾದ ಸೂರ್ಯನ ವಂಶವೆಂದರೂ ಒಂದೇ, ಇಕ್ಷ್ವಾಕು ವಂಶವೆಂದರೂ ಒಂದೇ. ರಘುವಂಶವೆಂದರೂ ಒಂದೇ! ವಿವಸ್ವಂತನೇ ಆದಿತ್ಯ ಅಥವಾ ಶ್ರಾದ್ಧದೇವನು. ಪಿತೃಗಣಾಧಿಪತಿಯು. ಪಿತೃಗಳಿಂದ ದೇವತೆಗಳಿಗೆ ಬ್ರಹ್ಮಜ್ಞಾನವಾದುದರಿಂದ ದೇವತೆಗಳು ಪಿತೃಗಳ ಪಿತೃಗಳಾದರೂ ಪಿತೃಗಳ ಮಕ್ಕಳು

ಎಂದು ಬ್ರಹ್ಮಶಾಪದಿಂದ ಹೇಳಿಸಿಕೊಳ್ಳಬೇಕಾಯಿತು. ಹಿಂದೆ ದೇವತೆಗಳು ಬ್ರಹ್ಮವಾದಿಗಳಾಗಿರದಿದ್ದುದರಿಂದ ಅವರಿಗೆ ಬ್ರಹ್ಮಶಾಪ ಬಂದಿತ್ತು. ಅವರು ಪಶ್ಚಾತ್ತಾಪ ಪಟ್ಟುದರಿಂದ ಅವರಿಗೆ ಈ ಅನ್ಯೋನ್ಯ ಪಿತೃಸ್ಥಾನ ಬಂದಿತಂತೆ. ಪಿತೃಗಳೆಲ್ಲಾ ಸನತ್ಕುಮಾರಾದಿ ಮೂಲ ಮುನಿಗಳು; ಬ್ರಹ್ಮನ ಸೃಷ್ಟಿಗೆ ಸಹಾಯಕರಾದ ಉಪಬ್ರಹ್ಮರು; ಮನ್ವಂತರಗಳ ಮನುಗಳೂ ಅದೇ ಸಾಲಿಗೆ ಸೇರಿದವರು. ಈ ವ್ಯವಸ್ಥೆಯೆಲ್ಲಾ ಪರಶಿವನ ಆಜ್ಞೆಯಂತೆ ಆದುದು.

–೭೫–

# ಶಿವ ಶಕ್ತಿ ಮಾಹಾತ್ಮ್ಯ

ನಿರ್ಗುಣ ಶಿವನ ಸಗುಣ ಸ್ವರೂಪವೇ ಶಕ್ತಿ. ಅವಳೇ ತ್ರಿಮೂರ್ತಿ ಮೂಲ. ಬ್ರಹ್ಮ, ವಿಷ್ಣು, ರುದ್ರರೆಂದರೆ ಈ ಪರಾಶಕ್ತಿಯೇ. ಅವಳೇ ಸೃಷ್ಟಿ, ಸ್ಥಿತಿ, ಲಯಗಳ ಕಾರಣ. ಆ ಮೂವರ ಶಕ್ತಿಗೇ ಸರಸ್ವತಿ, ಮಹಾಲಕ್ಷ್ಮಿ ಮತ್ತು ಉಮೆ ಎಂದು ಹೆಸರು. ಶಕ್ತಿಗೂ ಶಕ್ತಿಮಂತರಿಗೂ ಭೇದವಿಲ್ಲ. ಭೇದವು ಕೇವಲ ಆಭಾಸಿಕ, ಭೌದ್ಧಿಕ ವಿಶ್ಲೇಷಣೆಯ ಫಲ. ಈ ಬುದ್ಧಿ ಕರ್ಮಜ.

ಒಮ್ಮೆ ವಿಷ್ಣುವು ಯೋಗನಿದ್ರೆಯಲ್ಲಿದ್ದನು. ಆಗ ಅವನ ಕಿವಿಯ ಕುಗ್ಗಿಯಿಂದ ಇಬ್ಬರು ದೈತ್ಯರು ಜನಿಸಿದರು. ಅವರು ಮಧು ಮತ್ತು ಕೈಟಭ ಎಂದು ವಿಖ್ಯಾತರಾದರು. ಅವರ ಘೋರ ರೂಪವು ಜಗತ್ತನ್ನೇ ನುಂಗುವಂತಿತ್ತು. ವಿಷ್ಣುನಾಭಿಯಲ್ಲಿ (ಆಕಾಶ ಮಧ್ಯದಲ್ಲಿ) ಕುಳಿತಿದ್ದ ಬ್ರಹ್ಮನನ್ನು ಕಂಡು ಅವರು ನೀನಾರೆಂದು ಗರ್ಜಿಸಿ ಅವನನ್ನು ಕೊಲ್ಲಲು ಉದ್ಯುಕ್ತರಾದರು. ಆಗ ಬ್ರಹ್ಮನು ವಿಷ್ಣುವನ್ನೂ ಉಮೆಯನ್ನೂ (ಪರಮೇಶ್ವರಿಯನ್ನೂ) ಕಾಪಾಡಬೇಕೆಂದು ಬೇಡಿದನು. ವಿಷ್ಣುವಿನ ಯೋಗನಿದ್ರೆಯೇ ಉಮೆ. ಶಿವಾರ್ಧಾಂಗಿ, ಮಹಾಮಾಯೆ, ತ್ರಿಮೂರ್ತಿ ಜನನಿ. ಬ್ರಹ್ಮನು ಪ್ರಾರ್ಥಿಸಿದ ಕೂಡಲೇ ಆ ಪರಾಶಕ್ತಿ ದುರ್ಗೆಯು ವಿಷ್ಣುವಿನ ಕಣ್ಣು ಬಾಯಿ ಮುಂತಾದವುಗಳಿಂದ ಹೊರ ಹೊರಟು ಬ್ರಹ್ಮನೆದುರು ನಿಂತಾಕ್ಷಣ ವಿಷ್ಣುವಿಗೆ ಎಚ್ಚರವಾಯಿತು. ಅವರಿಗೂ ವಿಷ್ಣುವಿಗೂ ೫೦೦೦ ವರ್ಷಗಳ ಕಾಲ ಬಾಹು ಯುದ್ಧವು ನಡೆಯಿತು. ಅನಂತರ ಶಕ್ತಿಯು ಆ ದೈತ್ಯರಲ್ಲಿ ಮೂಢತನ ಮೂಡುವಂತೆ ಮಾಡಿದಳು. ಆ ಮೌಢ್ಯಕ್ಕೆ ವಶರಾಗಿ ಆ ದೈತ್ಯರಲ್ಲಿ ಸೊಕ್ಕು ಉಂಟಾಯಿತು. ಸೊಕ್ಕಿನಿಂದ ಅವರು "ನಿನಗೆ ಬೇಕಾದ ವರವನ್ನು ಬೇಡು, ಕೊಡುತ್ತೇವೆ" ಎಂದು ವಿಷ್ಣುವಿನಿದಿರು ಗರ್ಜಿಸಿದರು. ಆಗ ಉಪಾಯದ ಭಕ್ತಿ ನಮ್ರತೆಯಿಂದ ವಿಷ್ಣುವು "ದಯವಿಟ್ಟು ನೀವು ನನ್ನಿಂದ ಸಾಯಬೇಕು" ಎಂಬ ವರವನ್ನು ಬೇಡಿದನು. "ಈ ಭೂಮಿಯು ನೀರಿನಿಂದ ಮುಳುಗಿರುವೆಡೆ ನಮ್ಮನ್ನು ಕೊಂದು ಹೂಳು (ಹುಗಿ)" ಎಂದು ಆ ದೈತ್ಯರು ವರ ಕೊಟ್ಟರು. ಕಾಳಿಕಾವತಾರವಾದ ಮಡುವಿನಲ್ಲಿ ಅವರನ್ನು ಆ ಪ್ರಕಾರವಾಗಿ ನಾರಾಯಣನು ಶಿರಚ್ಛೇದ ಮಾಡಿ ಮುಳುಗಿಸಿದನು. "ಕಾಳಿಕಾ" ಎಂದರೆ ಉಮೆ. ಅವಳು ನಿರ್ವಿಕಾರ ಶಿವನಲ್ಲಿ ನಿರ್ವಿಕಾರಿಣಿ, ಸವಿಕಾರ ಶಿವನಲ್ಲಿ (ರುದ್ರನಲ್ಲಿ) ವಿಕಾರಿಣಿ. ಅವಳು ರಂಭಾಸುರ ಸಂಹಾರದಲ್ಲಿ ಮಹಾಲಕ್ಷ್ಮಿಯ ಅವತಾರ ತಾಳಿದ ಕಥೆ ಇಂತಿದೆ:

ರಂಭಾಸುರನೊಬ್ಬ ದೈತ್ಯ ಶಿರೋಮಣಿ. ಅವನೊಮ್ಮೆ ಇಂದ್ರನನ್ನು ಓಡಿಸಿ ಅವನ ಸಿಂಹಾಸನವನ್ನೇರಿ ರಾಜ್ಯಭಾರ ಮಾಡತೊಡಗಿದನು. ಸೋತಸುರರು ಬ್ರಹ್ಮನಿಗೆ ಶರಣಾಗತರಾದರು. ಬ್ರಹ್ಮ–ವಿಷ್ಣುಗಳು ಅವರೊಡನೆ ರುದ್ರನೆಡೆಗೆ ಹೋದರು. ಆಗ ವಿಷ್ಣು–ರುದ್ರರ ಬಾಯಿಯಿಂದ ಮಹಾತೇಜಸ್ವಿನಿಯಾದ ಉಮೆಯು ಮಹಾಲಕ್ಷ್ಮಿಯಾಗಿ ಅವತರಿಸಿದಳು. ದೇವತೆಗಳಿಗೆ ರಂಭಾಸುರನೆಂಬ ಮಹಿಷ ಸ್ವರೂಪನ ವಧೆ ಇನ್ನು ನಿಶ್ಚಿತ ಎನ್ನಿಸಿತು. ದೇವತೆಗಳೆಲ್ಲಾ ಅವಳ ಅಂಗೋಪಾಂಗಗಳಾದರು. ಅವಳು ತ್ರಿಣೇತ್ರೆ, ಮಹಿಷಾಸುರ ಮರ್ದಿನಿ ಎಂದು ತೋರಿದಳು. ಆ ನಾಗಹಾರಧಾರಿಣಿಯ ಹಿಂದೆ ಕೋಟಿ ಕೋಟಿ ಸುರಸೈನಿಕರು ಹೋದರು. ಅವಳ ಹೂಂಕಾರಕ್ಕೆ ಜಗ ನಡುಗಿತು. ಆಗ ಆ ಮಹಿಷಾಸುರನೂ ಪ್ರತಿಯಾಗಿ ತನ್ನ ಅನುಯಾಯಿಗಳೊಡನೆ ಘನಗರ್ಜನೆ ಮಾಡಿದನು (ಆಗ ರಂಭಾಸುರ ಕೋಣನ ರೂಪವನ್ನು ತಾಳಿದ್ದನು). ದೇವಿಯು ರಾಕ್ಷಸರ ಸಂಹಾರ ಮಾಡಿ ಸುಸ್ತಾದಂತೆ ನಟಿಸಿದಾಗ ರಂಭಾಸುರ ಮಹಿಷನು ಅವಳ ವಾಹನವಾದ ಸಿಂಹವನ್ನು ಕಡಿಯಹೋದನು. ಆ ಕ್ಷಣದಲ್ಲಿ ರುಷ್ಟಳಾದ ಮಹಾದೇವಿಯು ಪಾಶದಿಂದ ಅವನನ್ನು ಕಟ್ಟಿದಳು. ಆಗ ಅವನು ಕೋಣನ ರೂಪವನ್ನು ತ್ಯಜಿಸಿ ಸಿಂಹರೂಪ ತಾಳಿದಾಗ ದೇವಿಯು ಅವನ ಗೋಣನ್ನು ಮುರಿಯಲು ಹಾರಿದಳು. ಆಗ ಅವನು ಸ್ವಂತದ ರಾಕ್ಷಸ ರೂಪದಿಂದ ಕತ್ತಿ ಹಿಡಿದು ಯುದ್ಧಕ್ಕೆ ನಿಂತನು; ಗುಡ್ಡಗಳನ್ನು ಅವಳತ್ತ ಎಸೆದನು. ಆಗ ಆಕೆ ಚಂಡಿಯಾಗಿ ಬಾಣಗಳಿಂದ ಅವುಗಳನ್ನು ನುಚ್ಚುನೂರು ಮಾಡಿದಳು ಮತ್ತು ಕತ್ತಿನ ಮೇಲೆ ಕಾಲಿಟ್ಟು ಅವುಂಕಿ ತ್ರಿಶೂಲದಿಂದ ಅವನನ್ನು ಕಡಿದು ಹೋಳು ಮಾಡಿದಳು. ಅರ್ಧ ಸತ್ತರೂ ಅವನು ಉಳಿದರ್ಧವಾದ ರುಂಡವೆತ್ತಿ ಬಾಯ್ದೆರೆದು ದೇವಿಯನ್ನು ನುಂಗಲು ಯತ್ನಿಸಿದನು. ಆಗ ಖಡ್ಗದಿಂದ ಮಹಾದೇವಿ ಅವನ ತಲೆ ಗಡಿದು ಚೂರು ಚೂರು ಮಾಡಿದಳು. ಆ ದುರ್ಗೆಗೆ ಮಹಾಲಕ್ಷ್ಮಿಯೆಂಬ ಹೆಸರು ಅಂದಿನಿಂದ ಬಂದಿತು. ಅವಳೇ ಮಹಿಷಾಸುರ ಮರ್ದಿನಿಯೂ ಆದಳು.

**ಶುಂಭಾಸುರ ಸಂಹಾರದಿಂದ ದುರ್ಗೆಯು (ಉಮೆಯು) ಸರಸ್ವತ್ಯವತಾರವೆನ್ನಿಸಿದ ಕಥೆ ಹೀಗಿದೆ:**

ಒಮ್ಮೆ ಶುಂಭ ನಿಶುಂಭರೆಂಬ ಘೋರ ರಾಕ್ಷಸರು ತ್ರೈಲೋಕ್ಯವನ್ನು ಗೆದ್ದು ಕಾಟ ಕೊಡಲಾರಂಭಿಸಿದಾಗ ದೇವತೆಗಳು ಹಿಮವಂತನಿಗೆ ಶರಣಾಗತರಾದರು. ಅಲ್ಲಿದ್ದ ಮಹಾದುರ್ಗೆಯನ್ನವರು ಸ್ತೋತ್ರ ಮಾಡಿದರು. ಆ ಸರಸ್ವತಿಯ ಹೆಸರುಗಳು: ಕಾಳಿ, ಛಿನ್ನ ಮಸ್ತೆ, ಶ್ರೀವಿದ್ಯೆ, ಭುವನೇಶ್ವರಿ, ಭೈರವಿ, ಬಗಲಾಮುಖಿ, ಧೂಮಾವತಿ, ತ್ರಿಪುರಸುಂದರಿ, ಮಾತಂಗಿ, ಅಜಿತೆ, ವಿಜಯೆ, ಜಯೆ, ಮಂಗಳೆ, ವಿಲಾಸಿನಿ, ದೋಗ್ಧ್ರಿ, ಘೋರೆ, ಮನೋಽಪರಾಜಿತೆ, ನಿತ್ಯಾಕಾರಿಣಿ, ಶರಣಾಗತಪರಿಪಾಲಿನಿ, ರುದ್ರಾಣಿ, ವೇದಾಂತವೇದ್ಯೆ, ಅನಂತಕೋಟಿ ಬ್ರಹ್ಮಾಂಡ ನಾಯಿಕೆ, – ಈಕೆಯೇ ದೇವತೆಗಳ

ಪ್ರಕಾರ ನಮಸ್ಕಾರ್ಯಾಕೃತಿಯುಳ್ಳ ಪರಮಾತ್ಮ ಸ್ವರೂಪಿಣಿ. ಈ ಸ್ತುತಿಯಿಂದ ತುಷ್ಟೆಯಾದ ಹಿಮವತ್ಸುತೆ ಗೌರಿ ಕುಮಾರೀ ತನುಧರಿಸಿ ಪ್ರತ್ಯಕ್ಷಳಾದಳು. ಅವಳ ಆ ಶರೀರದಿಂದ ಕೌಶಿಕೀ ದೇವಿ ಅವತರಿಸಿದಳು. ಉಗ್ರತಾರಿಕೆ ಅಥವಾ ಮಹೋಗ್ರತಾರಿಕೆ ಎಂದು ಅವಳು ಪ್ರಸಿದ್ಧಳಾದಳು. ಶುಂಭ–ನಿಶುಂಭರ ದ್ವಾರಪಾಲಕರಾದ ಚಂಡ–ಮುಂಡರು ಅವಳನ್ನು ನೋಡಿ ಅಂಥ ಸುಂದರಿ ಲೋಕದಲ್ಲಿಲ್ಲವೆಂದು ತಮ್ಮ ಒಡೆಯರಾದ ಶುಂಭ–ನಿಶುಂಭರೆಂಬ ಅಣ್ಣ ತಮ್ಮಂದಿರಿಗೆ ಹೇಳಿದರು. ಅವಳು ಆಗ ಅಂಥ ಸುಂದರ ರೂಪವನ್ನು ತಾಳಿಯೇ ಅವರಿಗೆದುರಾಗಿದ್ದಳು.

ಶುಂಭ–ನಿಶುಂಭರು ಅವಳನ್ನು ಭೋಗಿಸಲು ಆಲೋಚಿಸಿದರು. ಅದಕ್ಕಾಗಿ ಅವಳನ್ನು ಕರೆತರಲು ಸುಗ್ರೀವನೆಂಬ ದಾನವನನ್ನು ಕಳುಹಿದರು. ಅವನು ಹಿಮಾಲಯದಲ್ಲಿದ್ದ ದೇವಿಗೆ ಶುಂಭನನ್ನು ಅಥವಾ ನಿಶುಂಭನನ್ನು ಮದುವೆಯಾಗಲು ಉಪದೇಶಿಸಿದನು. ಅವಳು ತನ್ನನ್ನು ಯುದ್ಧದಲ್ಲಿ ಸೋಲಿಸಿದವನನ್ನು ಮದುವೆಯಾಗುವೆನೆಂದು ಹೇಳಿ ಕಳುಹಿದಳು. ಅದರಿಂದ ಸಿಟ್ಟಿಗೆದ್ದ ಶುಂಭನು ತನ್ನ ಸೇನಾಪತಿಯಾದ ಧೂಮ್ರಾಕ್ಷನನ್ನು ಕರೆದು ಮಹಾದೇವಿಯನ್ನು ಹಿಡಿದು ತರಲು ಹೇಳಿದನು. ಅವನು ಅಲ್ಲಿಗೆ ಹೋಗಿ ಈ ಮಾತನ್ನು ಹೇಳಿದಾಗ ದೇವಿ ಅವನನ್ನು ಕೊಂದಳು. ಇದರಿಂದ ಕ್ರುದ್ಧನಾದ ಶುಂಭನು ಚಂಡ, ಮುಂಡ, ರಕ್ತಬೀಜರನ್ನು ಸೈನ್ಯದೊಡನೆ ಕಳುಹಿದನು. ಅವರು ದೇವಿಯೊಡನೆ ಯುದ್ಧ ಮಾಡಿ ಸೈನ್ಯದೊಡನೆ ಸತ್ತರು. ಆಗ ಶುಂಭನು ಕಾಲಕೇಯ, ಮೌರ್ಯ, ದೌರ್ಹೃದರನ್ನು ಆ ಸಿಂಹ ವಾಹಿನಿಯನ್ನು ಸೋಲಿಸಲು ಕಳುಹಿದನು; ಅವರೂ ಯುದ್ಧದಲ್ಲಿ ಸೋತು ಸತ್ತ ಮೇಲೆ ತಾನೇ ಹೋದನು; ನಿಶುಂಭನೂ ತೆರಳಿದನು. ದೇವಿಯ ಚಂಡಿ–ಕಾಳ್ಯವತಾರಗಳೊಡನೆ ಘನ ಘೋರ ಯುದ್ಧ ಮಾಡಿದನು. ಅವರಿಬ್ಬರೂ ಉಮಾಂಶಾವತಾರಿಣಿಯಾದ ಈ ಸರಸ್ವತಿಯ ತ್ರಿಶೂಲದಿಂದ ಚಕ್ರಾಯುಧ ಸಮೇತ ಸೋತು ಸತ್ತು ನುಚ್ಚು ನೂರಾದರು. ಉಳಿದ ಅಸುರರು ಪಾತಾಳದಲ್ಲಿರುವ ಬಲಿಯ ಭವನದಲ್ಲಿ ತಲೆ ಮರೆಯಿಸಿಕೊಂಡರು.

ಈ ಕಥೆಗಳಿಂದ ಮಹಾಲಕ್ಷ್ಮಿ, ಮಹಾ ಸರಸ್ವತಿ, ಮಹಾಕಾಳಿಯರು ಒಂದೇ ಆದ ಶಿವ ಶಕ್ತಿಯ ಅವತಾರಗಳೆಂಬುದನ್ನು ಈ ಪುರಾಣ ಕವಿ ವ್ಯಾಸನು ತೋರಿಸಿಕೊಟ್ಟಿದ್ದಾನೆ. ತದ್ವತ್, ತ್ರಿಮೂರ್ತಿಗಳೂ ಆ ಒಬ್ಬನೇ ಒಬ್ಬನಾದ ಪರಬ್ರಹ್ಮ ಸ್ವರೂಪದ ಪರ ಶಿವನ ಅವತಾರಗಳೆಂಬುದನ್ನು ಸೂಚಿಸಿದ್ದಾನೆ; "ಸರ್ವದೇವ ನಮಸ್ಕಾರ: ಈಶ್ವರಂ ಪ್ರತಿಗಚ್ಛತಿ" ಎಂಬ ಪುರುಷ ಸೂಕ್ತ ತಾತ್ಪರ್ಯವನ್ನು ಸಿದ್ಧಾಂತಿಸಿದ್ದಾನೆ. ಅವನ ವಿರಾಡ್ರೂಪದ ಯೋಗಶಾಸ್ತ್ರೀಯ ಅತಿಭೌತ ತತ್ವ ಜ್ಞಾನವು ವೇದದ ದೃಢೀಕರಣ.

ಮಾಯೆಯು ಶಕ್ತಿ, ಪ್ರಕೃತಿ, ಯೋಗಬಲ, ಅತಿ ಮಾನುಷತಂತ್ರ, ಏಕೈಕ ನಿತ್ಯ ಸತ್ಯದ ಪ್ರಕಾರ, ನಿರ್ವಿಕಲ್ಪಸತ್ತೆಯ ವಿಕಲ್ಪೀಕರಣ ವಿಭೂತಿ, ದೇವಿ, ದಿವ್ಯ ಉತ್ಕ್ರಿಯಾ

ಶಕ್ತಿ ಅಥವಾ ಸಚ್ಚಿದಾನಂದದ ಅಪೂರ್ವೋಃಹ್ಯ ಇಚ್ಛಾ ಸಾಮರ್ಥ್ಯ. ತಾರತಮ್ಯ, ವೈವಿಧ್ಯ, ಗುಣ, ಕರ್ಮ, ಕ್ರಿಯೆ, ಪರಿಮಾಣ, ಪ್ರಕಾರ, ದ್ವಂದ್ವ, ಸಂಬಂಧ, ಆಕಾರ ಮುಂತಾದ ಇಂದ್ರಿಯ ಮನೋ–ಬುದ್ಧಿ ಗ್ರಾಹ್ಯಗಳಾದ ವಿಚಾರಾನುಭವಗಳ ತಾಯಿ ಮತ್ತು ಸರ್ವ ನಾಮರೂಪಗಳನ್ನು ಎರಕಹೊಯ್ಯುವ ಹಾಗೂ ಬೇರ್ಪಡಿಸುವ ಪ್ರಯೋಗ ವಿಜ್ಞಾನದ ಪ್ರವಾಹದ ತವರು. ಅದು ಕ್ಷುದ್ರವಾದ ಇಂದ್ರಜಾಲ–ಯಕ್ಷಿಣೀ ವಿದ್ಯೆಗಳ ಸ್ವರೂಪವುಳ್ಳದ್ದಲ್ಲ ಎಂಬುದು ವ್ಯಾಸ ಸಮಾಸ.

ಅವತಾರವು ಕಾಲ ದೇಶಗಳ ಆವರಣಗಳೊಳಗೆ ನಡೆಯುವ ಬದಲಾವಣೆ, ಪರಿವರ್ತನೆ, ವಿವರ್ತ ಅಥವಾ ಇಂದ್ರಿಯ ಗೋಚರ ಪದಾರ್ಥಗಳ ಆವಿರ್ಭಾವ, ತೋರಿಕೆ ಯಾ ಪ್ರತಿಬಿಂಬ ಫಲನ–ಏಕತ್ವದ ಬಹುತ್ವ ಪ್ರದರ್ಶನ. ಅಸ್ತಿತ್ವಕ್ಕೆ, ಆತ್ಮಾಸ್ತಿತ್ವ ಜ್ಞಾನಕ್ಕೆ ಮತ್ತು ಸಾಧ್ಯಸಾಧನೈಕ್ಯರೂಪದ ಸ್ವ ಪ್ರೀತಿಗೆ ಅವತಾರವಿಲ್ಲ. ಬದಲಾವಣೆಯಿಲ್ಲ, ನಾಮ ರೂಪಶಕ್ತ್ಯಂತರಗಳಿಲ್ಲ. ಆದ್ದರಿಂದ ಆ ತ್ರಿಶಬ್ದಾರ್ಥಗಳ ಮೂಲಕ ಪ್ರತೀತವಾಗುವ ಪರ (ಬ್ರಹ್ಮ) ಶಿವನಿಗೆ ಜೇಡರ ಹುಳುವಿನಂತೆ ಬ್ರಹ್ಮಾಂಡ ಜಾಲವನ್ನು ಹರಡುವ ಮತ್ತು ಒಳಗೆಳೆದುಕೊಳ್ಳುವ ಮಾಯಾತ್ವವಿದೆ. ಅವತಾರಿತ್ವವಿದೆ. ಶಿವಪುರಾಣ ಗತವಾದ ವ್ಯಾಸ ವಿಶ್ಲೇಷಣೆಯ ಸಂಶ್ಲೇಷಣೆ ಈ ಅನನ್ಯ ಜ್ಞಾನ. ಕಾಲ ದೇಶಗಳೂ ಅವತಾರಗಳು, ಮನೋ ಬುದ್ಧ್ಯಹಂಕಾರಗಳೂ ಅವತಾರಗಳು ಅಥವಾ ಸೃಷ್ಟಗಳು.

## ರೌರವ ದುರ್ಗಮಾಸುರ ಸಂಹಾರ

ರುರು ದೈತ್ಯನ ಮಗ ರೌರವ. ಅವನ ಹೆಸರು ದುರ್ಗಮಾಸುರ. ಅವನಿಗೆ ಬ್ರಹ್ಮ ವರದ ಬಲವಿತ್ತು. ಅವನ ಬಲವು ದೇವತೆಗಳಿಗೆ ಗೆಲ್ಲಲು ಅಸಾಧ್ಯವಾದುದಾಗಿತ್ತು. ಅದರಿಂದ ಅವನು (ಇತರ ವೃತ್ರಾನುಯಾಯಿ ಮಹಾಸುರರಂತೆಯೇ) ಜಗನ್ಮಾರಕವಾದ ಭೂನಾಶಕವಾದ ಸ್ವರ್ಗ ಯುದ್ಧದಿಂದ ಮೇಲಿನ ಸಪ್ತ ಲೋಕಗಳನ್ನು ನಡುಗಿಸಿದನು. ಸರ್ವದೇಶಗಳ ಧರ್ಮಬದ್ಧ (ನ್ಯಾಯಬದ್ಧ) ಜೀವನವನ್ನು ಅಲ್ಲೋಲ ಕಲ್ಲೋಲ ಮಾಡಿದನು. ಅದರಿಂದ ಜನ ಶಿಕ್ಷಕರು (ಬ್ರಾಹ್ಮಣರು) ಕೂಡಾ ದುರಾಚಾರಿಗಳಾದರು; ಸುರರು (ವೈಜ್ಞಾನಿಕ ಶಕ್ತಿಗಳು) ಕೂಡಾ ಸುರಾಪಾನಕ್ಕಿಳಿದರು; ಬಾಟ್ಲಿ ಬಾಯ್ಸ್ ಆದರು ತಾಯಿ ಹೆಂಡಿರಲ್ಲಿ ಭೇದವನ್ನು ಕಾಣದಾದರು; ಎಲ್ಲ ಸ್ತ್ರೀಯರೂ ಅವರಿಗೆ ಮಿಂಡಿತಿಯರಾಗಿಯೇ ತೋರಿದರು. ಸಾಮೂಹಿಕ ಹಿತಕ್ಕೆ ಸಾಧಕವಾದ ದಾನಶೀಲವಳಿಯಿತು–ಲಂಚಶೀಲ ಬೆಳೆಯಿತು. ಲಂಚವು ಉಪದಾನ. ಜನರಲ್ಲಿಯ ಬುದ್ಧಿವಂತರು ತಪೋ ವಿಮುಖರಾದರು–ಜ್ಞಾನ–ವಿಜ್ಞಾನ ಸಂಶೋಧನೆಗಳನ್ನು ಕೈ ಬಿಟ್ಟರು; ದೀನದಲಿತರ ಜಠರಾಗ್ನಿಯನ್ನು ತಣಿಸುವ ಯಜ್ಞಯಾಗಾದಿಗಳನ್ನು ಬಿಟ್ಟು ಕೊಟ್ಟರು. ಈ ಕರ್ತವ್ಯ ಚ್ಯುತಿಯಿಂದ ಅನಾವೃಷ್ಟಿಯು ನೂರು ಕಾಲ ಉಳಿಯಿತು; ಪರಿಸರವು ನಿಃಸಾರವಾಯಿತು; ಬರವು ಬಂದಿತು. ದರ–ಕರಗಳೇರಿ ಬಡವರಿಗೆ

ನಿತ್ಯೋಪವಾಸವು ತಪ್ಪದಾಯಿತು. ಅವರು ಅತ್ತರು, ಸತ್ತರು, ನೆತ್ತರಿಲ್ಲದ ಉಸಿರಿಲಿಗಳಾದರು. ನೆಲವು ನಿರ್ಜಲವಾಯಿತು. ಮರಗಿಡ ಬಳ್ಳಿಗಳು ಒಣಗಿ ಹೋದವು. ಆಗ ನಿಸರ್ಗದ ಅಧಿಷ್ಠಾನ ದೇವತೆಗಳು ಶಿವ ಶಕ್ತಿಯಾದ ಯೋಗಮಾಯೆಯ ಶರಣುವೊಕ್ಕರು; ಶುಂಭ, ನಿಶುಂಭ, ಧೂಮ್ರಾಕ್ಷ, ಚಂಡ, ಮುಂಡ, ರಕ್ತಬೀಜ, ಮಧು. ಕೈಟಭ, ಮಹಿಷಾಸುರನನ್ನು ಕೊಂದ ಮಹಾದೇವಿಗೆ ಶರಣಾಗತರಾದರು; ಬ್ರಾಹ್ಮಣರೂ ಅವರ ದಿವ್ಯವಾದ ಲೋಕಪಾಲಕ ಶಕ್ತಿಗಳೆನ್ನಿಸಿದ ಕ್ಷತ್ರಿಯರೂ ದುಃಶೀಲರು ಅಥವಾ ದುರ್ಬಲರು ಆದಾಗಲೆಲ್ಲಾ ಧರ್ಮ ಸಂಸ್ಥಾಪನೆ ಮಾಡುವವಳು ನೀನೇ ಎಂದು ಅವಳನ್ನು ಸತ್ಯಸಂಧರಾಗಿ ಸ್ತುತಿಸಿದರು. ಅವಳು (ಐತಿಹಾಸಿಕ ನ್ಯಾಯ ದೇವತೆ) ಆಗ ಕರುಣೆದಾಳಿ, ಅವರಿಗೆ ಪ್ರತ್ಯಕ್ಷಳಾದಳು ಮತ್ತು ಈ ನಿಸರ್ಗ ಪ್ರಕೋಪನ ಸ್ವರೂಪದ ರಾಸಾಯನಿಕ (ವಿಷಮಯ) ಯುದ್ಧವನ್ನು ಹೂಡಿದ ರೌರವ ರಾಕ್ಷಸನನ್ನೂ ಅವನ ಅನುಯಾಯಿಗಳನ್ನೂ ನಾಶ ಮಾಡುವ ಆಶ್ವಾಸನವನ್ನು ಅವ್ಯಕ್ತ ಅಧಿಷ್ಠಾನ ದೇವತೆಗಳಿಗೆ ನೀಡಿದಳು. ಆ ಪ್ರಕಾರ ಅವಳು ದಸರೆಯಲ್ಲಿ (ದಶಾಹೋರಾತ್ರದಲ್ಲಿ) ಕಾಳಿ, ತಾರೆ, ಛಿನ್ನಮಸ್ತೆ, ಶ್ರೀ ವಿದ್ಯೆ, ಭುವನೇಶ್ವರಿ, ಭೈರವಿ. ಬಗಲೆ, ಧೂಮ್ರೆ, ಶ್ರೀಮತ್ ತ್ರಿಪುರಸುಂದರಿ, ಮಾತಂಗಿ ಮತ್ತು ಮಹಾವಿದ್ಯೆ ಎಂಬ ಹತ್ತು ರೂಪಗಳನ್ನು ತಾಳಿ ಹತ್ತು ದಿನಗಳಲ್ಲಿ ರೌರವರನ್ನು (ನರಕ ಕರ್ಮಿಗಳನ್ನೂ) ನಾಶ ಮಾಡಿದಳು ಮತ್ತು ನಿಸರ್ಗ ಸಂಪತ್ತನ್ನು ಬೆಳೆಯಿಸಿದಳು; ಮಾನವಾದಿ ಪ್ರಾಣಿಗಳಿಗೆ ನ್ಯಾಯದಾನ ಮಾಡುವ ದೇವ ಬುದ್ಧಿಯನ್ನಿತ್ತಳು; ಧರ್ಮ ಪುನರುತ್ಥಾನಕ್ಕೆ ಕಾರಣಳಾದಳು.

## ಶಿವಶಕ್ತಿಯ ಮಹಿಮೆ

ಯೋಗಮಾಯೆ, ಯೋಗನಿದ್ರೆ, ಯೋಗೇಶ್ವರಿ ಎಂದರೆ ಶಿವಶಕ್ತಿ. ನಾವು ಶಿವಶಕ್ತಿ ಸಂಪನ್ನರಾಗಲು ಜ್ಞಾನ–ಕ್ರಿಯಾ–ಭಕ್ತಿಗಳ ಸಮಗ್ರಯೋಗವನ್ನು ಹಿಡಿಯಬೇಕು. ಚಿತ್ತ–ಆತ್ಮಗಳ ಸಂಯೋಗದಿಂದ ಜ್ಞಾನದ ಉದಯ; ಇದು ಆಂತರಿಕ. ಬಾಹ್ಯಾರ್ಥಗಳ ಸಂಯೋಗವು ಕ್ರಿಯಾಯೋಗ ಅಥವಾ ಸರ್ವೋದಯಾಪೇಕ್ಷೆಯಿಂದ ಕಾಯಕ ಮಾಡುವುದು.

ದೇವೀ ಭಕ್ತಿಯೋಗವೆಂದರೆ ಆತ್ಮೈಕ್ಯ ಭಾವನೆ. ಮೇಲಿನ ಮೂರು ಯೋಗಗಳನ್ನೂ ಕೂಡಿಸಿ ಕ್ರಿಯಾ ಯೋಗ ಎಂದು ಹೇಳುವುದುಂಟು. ಕರ್ಮದಿಂದ ಭಕ್ತಿಯೂ, ಭಕ್ತಿಯಿಂದ ಜ್ಞಾನವೂ ಉದಯಿಸುವುದು. ಜ್ಞಾನದಿಂದ ಮುಕ್ತಿಯು ಲಭ್ಯ. ಆದ್ದರಿಂದ ಸಂಕ್ಷೇಪವಾಗಿ ಯೋಗದಿಂದ ಮುಕ್ತಿಯು ಸಿಕ್ಕುತ್ತದೆ ಎನ್ನುತ್ತಾರೆ.

ಶಾಶ್ವತನಾದ ಶಿವನು ಪರಬ್ರಹ್ಮ. ಅವನು ಮಾಯಾವಿ, ಮಾಯೆಯೇ ಪ್ರಕೃತಿ. ಶಿವ–ಮಾಯೆಯರು ಒಂದೇ ಕಾಯವುಳ್ಳವರು. ಮಣ್ಣು, ಮರ, ಕಲ್ಲುಗಳಿಂದ ದೇವಿಯ ಮಂದಿರವನ್ನು ಕಟ್ಟಬಹುದು. ಅದರಿಂದ ಯೋಗ ಫಲ ದೊರಕುತ್ತದೆ. ಇಂಥ ಶ್ರೀ

ಮಾತೃಧಾಮದ ನಿರ್ಮಾಣದಿಂದ ನಿರ್ಮಾಪಕನೂ ಅವನ ಕುಲ ಕೋಟಿಗಳೂ ಮಾಡಿದ ಪಾಪಗಳು ಭಸ್ಮವಾಗುವುವು. ನದಿಗಳಲ್ಲಿ ಗಂಗೆ, ನದಗಳಲ್ಲಿ ಶೋಣ, ಕ್ಷಮೆಯಲ್ಲಿ ಭೂಮಿತಾಯಿ, ಗಾಂಭೀರ್ಯದಲ್ಲಿ ಕಡಲು, ಗ್ರಹಗಳಲ್ಲಿ ಸೂರ್ಯ ಹೇಗೋ ಹಾಗೇ ಸರ್ವ ದೇವತೆಗಳಲ್ಲಿ ಶ್ರೀ ಪರಾಶಕ್ತಿಯು ವಿಶಿಷ್ಟ. ದೇವಾಲಯ ನಿರ್ಮಾಣವು ಭಾರತದ ಅತ್ಯುದಾತ್ತವಾದ ವೈಶಿಷ್ಟ್ಯ. ಶಿಲಾ ಶಾಸನಗಳ ಪ್ರಾರ್ಥನಾ ಪದ್ಯ ಇದಕ್ಕೆ ಸಾಕ್ಷಿ–

**"ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ**
**ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ"**

ದೇವಸ್ಥಾನ ಸಂಸ್ಕೃತಿಗಿದು ಮೂಲಾಧಾರ. ಇದು ಶಿವ ಭಾಗವತಿಕೆ; ಯಜ್ಞಕ್ಕೆ ಬದಲಾಗಿ ಬಂದ ಪೂಜಾವಿಧಾನದ (ಕ್ರಿ.ಪೂ. ೩ನೆಯ ಶತಮಾನದ ಕಾಲ) ಆದ್ಯ ಪ್ರೇರಣೆ. ಇದಕ್ಕಿಂತ ಹಿಂದೆ ದೇವಾಲಯಗಳಿಲ್ಲ. ಮಹಾಭಾರತ ರಚನೆಯ ಕಾಲವೇ ಇಂಥ ಪರಿವರ್ತನ ಸಂಧಿಕಾಲ. ರಾಮಾಯಣ ರಚನೆಯ ಕಾಲವು ಲಿಂಗಪೂಜೆಯ ಪ್ರಾರಂಭಕಾಲ. ಆಮೇಲೆ ಮೂರ್ತಿ ಪೂಜಾರಂಭ, ಮೂರ್ತಿಯುಗ. ಇಂದಿನದು ಅವುಗಳನ್ನು ಕದಿಯುವ ಯುಗ, ಕದ್ದು ಮಾರುವ ಯುಗ! ಸೂರ್ಯನ, ಗಣಪತಿಯ, ವಿಷ್ಣುವಿನ ಮತ್ತು ಮಹೇಶ್ವರನ ಮುಖಗಳು ನಾಲ್ದೆಸೆಗಳಿಗೆ ತಿರುಗಿರಬೇಕು– ನಡುವೆ ದೇವೀ ವಿಗ್ರಹ ಸ್ಥಾಪನೆ ಮಾಡಬೇಕು. ಏಕೆಂದರೆ ದೇವಿಯು (ಉಮೆಯು) ವೇದತ್ರಯದ ಪ್ರತಿನಿಧಿ. ಈ ಮೂರ್ತಿಗಳು ಅನುಚಿಂತನದ ಸಾಧನಗಳು. ಅನುಚಿಂತನವು ನಿದಿಧ್ಯಾಸ. ಶ್ರವಣ–ಮನನಗಳ ಅನಂತರದ ಅಂತ್ಯ ಹಂತ.

ನವರಾತ್ರಿಯ (ದಸರೆಯ) ದೇವೀ ಪೂಜೆಯಿಂದ ಸುರಥನೂ ಸುದರ್ಶನನೂ ಕಳೆದುಹೋದ ರಾಜ್ಯವನ್ನು ಮತ್ತೆ ಪಡೆದರು–ಎನ್ನುತ್ತದೆ ಉಮಾಸಂಹಿತೆ. ಶಿವಶಕ್ತಿಯು ಶಿವಕರುಣೆ. ಅದರಿಂದ ಮುಕ್ತಿ ಕೂಡಾ ಲಭ್ಯ.

–೭೬–

# ಪ್ರಣವ ಮಹಾತ್ಮ್ಯ

ಓಂಕಾರವು ವಟ ಬೀಜದಂತೆ ಅತಿ ಸೂಕ್ಷ್ಮವಾದುದು. ಅದು ಪ್ರಣವ. ಅದಕ್ಕೆ ಅತ್ಯಂತ ದೊಡ್ಡ ಅರ್ಥವಿದೆ. ಅದೇ ಪರಶಿವ. ಪರಬ್ರಹ್ಮ. ಅದು ವೇದಸಾರ. ಅದು ಮೂರೂವರೆ ಮಾತ್ರೆಗಳ ಒಂದು ಗುಣಿತಾಕ್ಷರ. ಅದರ ಅ,ಉ,ಮ ಎಂಬ ಅಕ್ಷರಗಳೊಡನೆ ಬಿಂದುನಾದಗಳು ಸೇರಿದ್ದರಿಂದ ಅದರ ಅಂಗಗಳು ಐದಾಗುತ್ತವೆ. ಬ್ರಹ್ಮಾದಿ ಸ್ಥಾವರಾಂತವಾದ ಸರ್ವ ಪದಾರ್ಥಗಳಿಗೆ ಅದೇ ಪ್ರಾಣ. ಅಕಾರವು ಅದರ ಮೊದಲನೆಯ ವರ್ಣ; ಉಕಾರವು ಉತ್ತರ ವರ್ಣ; ಮಕಾರವು ಮಧ್ಯಮ ವರ್ಣ. ಈ ಆದಿ ಮಧ್ಯಾಂತಗಳು ಅಕ್ಷರಗಳ ಸ್ಥಾನಮಾನಗಳು; ಅನುಕ್ರಮವಲ್ಲ. ಅರ್ಧ ಮಾತ್ರೆಯು ಮಹೇಶಾನಿ. ಮಾತ್ರಾ ಸಂಖ್ಯೆ ಒಟ್ಟು ಮೂರೂವರೆ ಎಂದದ್ದು ಸೂಕ್ಷ್ಮ ಲೆಕ್ಕ.

ಅಕಾರವು ಮಹದ್ ಬೀಜ. ಅದಕ್ಕೆ ಚತುರ್ಮುಖ. ಅದು ರಜಃ ಪ್ರಧಾನವಾದ ಸೃಷ್ಟಿ ಶಕ್ತಿ ಎನ್ನಿಸಿದ ಬ್ರಹ್ಮ. ಉಕಾರವು ಪ್ರಕೃತಿ (ಯೋನಿ), ಸತ್ವ. ಪಾಲನ ಕರ್ತೃವಾದ ಹರಿ. ಮಕಾರವು ಪುರುಷ, ಬೀಜಯುಕ್ತ. ತಮೋಹರನಾದ ಹರ.

ತಿರೋಭಾವಕ್ಕೆ (ಲಯಕ್ಕೆ) ಕಾರಣನಾದ ಮಹೇಶ್ವರನೇ ಬಿಂದು. ನಾದವು ಸದಾಶಿವ. ಅವನು ಸರ್ವಾನುಗ್ರಹಕಾರಕ. ನಾದವು ಮೂರ್ಧಸ್ಥ. ಅದು ಪರಾತ್ಪರ ಶಿವ. ಅವನು ಸರ್ವಜ್ಞನೂ ಸರ್ವಕರ್ತನೂ ಸರ್ವೇಶನೂ ನಿರ್ಮಲನೂ ಅವ್ಯಯನೂ ಆಗಿದ್ದಾನೆ. ಪರಬ್ರಹ್ಮನು ಅನಿರ್ದೇಶ್ಯ (ಬೊಟ್ಟು ಮಾಡಿ ತೋರಿಸಲಸಾಧ್ಯನಾದವನು) ಮತ್ತು ಸದಸತ್ ಪದಾರ್ಥಗಳ ಆಚೆಗಿರುವವನು. ಓಂಕಾರದಲ್ಲಿ ಅಡಗಿರುವ ಅಕಾರಾದಿ ವರ್ಣಗಳಲ್ಲಿ ಮುಂದು ಮುಂದಿನದು ಹೆಚ್ಚು ಹೆಚ್ಚು ವ್ಯಾಪಕವಾದದ್ದು; ಹಿಂದು ಹಿಂದಿನದು ಹೆಚ್ಚು ಹೆಚ್ಚು ವ್ಯಾಪ್ಯತೆಯನ್ನುಳ್ಳದ್ದು, ಸದ್ಯೋಜಾತನಿಂದ ಹಿಡಿದು ಈಶಾನನವರೆಗಿನ ಈಶ್ವರ ನಾಮಗಳಲ್ಲಿಯ ಅಕಾರಾದಿ ಪಂಚಕದಲ್ಲಿ ಪಂಚಬ್ರಹ್ಮರಿದ್ದಾರೆ. ಅವು ಪರಶಿವನ ಆಕಾರಗಳು. ಉಕಾರದಲ್ಲಿ ಶಿವಶಕ್ತಿಯ ೧೩ ರೂಪಗಳು ಅಡಕವಾಗಿವೆ; ಮಕಾರದಲ್ಲಿ ಅಘೋರರೂಪಿಣಿಯರಾದ ಎಂಟು ಶಿವಕಲೆಗಳಡಕವಾಗಿವೆ. ಬಿಂದುವಿನಲ್ಲಿ (ಅನುಸ್ವಾರದಲ್ಲಿ) ಪುರುಷಗೋಚರವಾದ ನಾಲ್ಕು ಕಲೆಗಳಿವೆ. ಈಶಾನ ಜನ್ಯವಾದ ನಾದದಲ್ಲಿ ೫ ಕಲೆಗಳಿವೆ. ಒಟ್ಟು ಕಲಾಸಂಖ್ಯೆ ೧೭. ೬ ವಿಧದ ಐಕ್ಯಾನು ಸಂಧಾನದಿಂದ

ಶಿವನಿಗೆ ಪ್ರಪಂಚದ ಆತ್ಮತ್ವವು ಸಿದ್ಧವಾಗುತ್ತದೆ. ಅವು ಯಾವುವೆಂದರೆ ಮಂತ್ರ, ಯಂತ್ರ, ದೇವತೆ, ಪ್ರಪಂಚ, ಗುರು ಮತ್ತು ಶಿಷ್ಯ.

ಹಿಂದೆ ಹೇಳಿದ ಪಂಚವರ್ಣಗಳ ಸಮೂಹವು ಮಂತ್ರ. ಯಂತ್ರವು ದೇವತಾ ರೂಪ. ದೇವತೆಯು ವಿಶ್ವರೂಪ ಶಕ್ತಿ. ಗುರು ವಿಶ್ವರೂಪ. ಶಿಷ್ಯನು ಗುರುವಿನ ದೇಹ. ಆದ್ದರಿಂದ ಓಮೆಂದರೆ ಸರ್ವ ಸ್ವರೂಪನಾದ ಪರಬ್ರಹ್ಮ, ಪರಶಿವ. ಪ್ರಣವ ಧ್ಯಾನದ ಬಲದಿಂದ ಕುಂಡಲಿನಿ ಹತ್ತುವುದು ೧) ಆಧಾರ, ೨) ಮಣಿಪೂರ, ೩) ಹೃದಯ ಯಾ ನಾಭಿ, ೪) ವಿಶುದ್ಧಿ, ೫) ಆಜ್ಞೆ, ೬) ಶಕ್ತಿ ಮತ್ತು ೭) ಶಾಂತಿಗಳೆಂಬ ಸಪ್ತ ಹಂತಗಳನ್ನು. ಶಾಂತ್ಯತೀತವಾದದ್ದು ೮ನೆಯದಾದ ಪರಾತ್ಪರ ಸ್ಥಲ (ಚಕ್ರ). ಈ ಶಿವಯೋಗಕ್ಕೆ ರಾಗ–ದ್ವೇಷಗಳನ್ನು ಬಿಟ್ಟವನು ಮಾತ್ರ ಪಾತ್ರ. ಇದರಿಂದ ಜೀವಬ್ರಹ್ಮೈಕ್ಯದ ಸಿದ್ಧಿ. ಶಮ, ದಮ, ಉಪರತಿ, ತಿತಿಕ್ಷೆ, ಶ್ರದ್ಧೆ, ಸಮಾಧಿಗಳು (ಮನೋ ನಿಗ್ರಹ, ಇಂದ್ರಿಯ ನಿಗ್ರಹ, ಅನಾಸಕ್ತಿ, ಶೀತೋಷ್ಣಾದಿ ದ್ವಂದ್ವ ಸಹಿಷ್ಣುತೆ, ನಿರ್ವಿಕಲ್ಪ ಸತ್ಯದಲ್ಲಿ ವಿಶ್ವಾಸ, ಸರ್ವ ಸಮತೋಲ ಸಮನ್ವಯ ಸ್ಥಿತಿಯ ನಿಷ್ ಪ್ರಪಂಚ ಜ್ಞಾನವು) ನಿರ್ವಿಕಲ್ಪ ಸತ್ಯದಲ್ಲಿ ಸ್ಥಿರವಾಗಿರುವುದು. ಈ ಆರು ಸಾಧಕನಿಗೆ ಸಾಧನೀಯ ಮನಃಶಿಕ್ಷಣ, ಸಿದ್ಧನಿಗೆ ಸಹಜ ಸ್ವಾಸ್ಥ್ಯ ಪ್ರಕಾಶ. ಈ ಸೂತ್ರಗಳನ್ನು ಶಿವನು ಪಾರ್ವತಿಗೆ ಹೇಳಿದನೆಂದು ಶಿವ ಪುರಾಣದ ಕೈಲಾಸ ಸಂಹಿತೆ ಉಲ್ಲೇಖಿಸಿದೆ.

**"ಈಶ್ವರ ನಿರ್ಮಿಸಿದೀ ಸೃಷ್ಟಿಯನು ಪಾರ್ವತಿ ನೀನೇ ಸಲಹು"**

ಎಂದು ಅಂಬಿಕಾತನದತ್ತರು ಹೇಳಿದ ಮಹಾ ವಾಕ್ಯದಲ್ಲಿ ಮೇಲೆ ವಿವರಿಸಿದ ವೇದಾಂತದ ಅರ್ಥವು ಅಡಕವಾಗಿದೆ. ವಿನಾಯಕರಿಗೀ ಅರ್ಥ ಹೊಳೆದಿತ್ತೇ? ವ್ಯಾಸೋಕ್ತ ಗಣಪತಿಗೆ ಹೊಳೆದಿತ್ತು. ಅದರಿಂದಲೇ ಮಹಾಭಾರತದಲ್ಲಿರುವ ೮೦೦೦ ಕೂಟ ಶ್ಲೋಕಗಳ ಅಂತರರ್ಥ ಅವನಿಗೆ ತಿಳಿಯಿತೆಂದು ಪರಂಪರೆ ನಂಬಿದೆ. ಇವೆಲ್ಲಾ ವಾಗಾಡಂಬರವೆಂಬ ಅಹಮಿಕೆ ಅಜ್ಞಾನಿಯಾದ ನಾಸ್ತಿಕ ಕವಿಂಮನ್ಯನದು. "ಈಶ ಕಲ್ಪನೆ" ಎಂದು ಈ ಜಗತ್ತನ್ನು ಕರೆದವರು ಅರುಣಗಿರಿಯ ರಮಣ ಮಹರ್ಷಿಗಳು. ಈಶನು "ಕವಿ" ಎಂದದ್ದು ವೇದೋಪನಿಷದ್ ಗಣ. ಅವನ ತೃತೀಯ ಚಕ್ಷುಸ್ಸು ಅಗ್ನಿ. ಅಗ್ನಿಯು ಸರ್ವದೇವತಾತ್ಮಕನು. ಬೇಯಿಸುವವನೂ ಅವನೇ. ಉರಿಯಿಸಿ ಹೊಳೆಯಿಸುವವನೂ ಅವನೇ; ಜಗತ್ತೂ ಅವನೇ. ಜಗಜ್ಞಾನಸಂಪನ್ನನೂ ಅವನೇ. ಅದರಿಂದ ಅಗ್ನಿಹೋತ್ರಕ್ಕಿರುವ ಪ್ರಾಧಾನ್ಯವು ಇತರ ವೈದಿಕ ಆಚಾರಗಳಿಗಿಲ್ಲ. ಜಗಜ್ ಜ್ಞಾನವು ವಿಜ್ಞಾನ; ಅದು ಪಾಕಜ ಮತ್ತು ಅನಿತ್ಯ ಎಂದು ತರ್ಕಶಾಸ್ತ್ರ ಹೇಳುತ್ತದೆ. ಜಗತ್ಕಾರಣ ಜ್ಞಾನವು, ಜ್ಞಾನವು–ಅದು ಅಪಾಕಜ. ಜ್ಞಾನವಿಲ್ಲಿ ಅನುಭವ. ಈಶನು ಭವ; ಪಾರ್ವತಿಯು ಅನುಭವ. ಅದಕ್ಕೆ ಯೋಗ ಅಥವಾ ಅನುಭಾವ ಎನ್ನುತ್ತಾರೆ. ಕೈಲಾಸ ಶಿಖರವು ಕೂಟಸ್ಥ ಅಕ್ಷರ–ಮಾಯಾ (ಪಾರ್ವತೀ) ಶಕ್ತಿ ಸಂಪನ್ನನಾದ ಪುರುಷೋತ್ತಮ. ಪುರುಷೋತ್ತಮನದು "ಶಿವೋऽಹಂ" ಸ್ಥಿತಿ–ಬ್ರಹ್ಮಾಸ್ಮಿತೆ, ನಿತ್ಯ ಶುದ್ಧ ಬುದ್ಧ ಪರಿಪೂರ್ಣ ಸಚ್ಚಿದಾನಂದ ಸ್ವರೂಪ.

–೭೭–

# ಕಾಲ ಮಹಿಮೆಯ ಅರ್ಥ

ಶಿವನಿಗೆ ಕಾಲವು ಅಧೀನ. ಕಾಲವು ಕ್ರಿಯಾಧೃತವಾದ ಅಳತೆ. ಅಳತೆಗಳೆಲ್ಲಾ ಮಾಯಾಧೀನ. ಮಾಯೆ ಶಿವಾಧೀನ. ಕಾಲವು ಜಗತ್ತಿನ ವಿದ್ಯಮಾನಗಳ ವಾಹಕ. ಕಾಲ ದೇಶಗಳು ಒಂದೇ ಮಾಧ್ಯಮ. ಸಂಬಂಧವು ಅದರ ಸ್ವರೂಪ. ಅಳತೆಗಳು ಪ್ರತ್ಯಕ್ಷ ತರ್ಕ. ಪ್ರತ್ಯಕ್ಷವು ಇಂದ್ರಿಯ ಸಾಧನ. ಇಂದ್ರಿಯವು ಮನಃ ಸಾಧನ. ಮನಸ್ಸು ಬುದ್ಧಿ ಸಾಧನ, ಬುದ್ಧಿಯು ಕರ್ಮ (ಕ್ರಿಯಾ) ಸಾಧನ. ಕ್ರಿಯೆಯು ಜ್ಞಾನದ ಆಭಾಸ ಪ್ರದರ್ಶನಕ್ಕೆ ಸಾಧನ. ಆಭಾಸವು ಪ್ರತ್ಯಕ್ಷ ಸತ್ಯ. ನಿರಾಭಾಸವು ಪರಮಾರ್ಥ ಸತ್ಯ ಅಥವಾ ಶಿವ. ಜಗತ್ತು ಕ್ರಿಯಾಮಯ. ಕ್ರಿಯೆ ಪದಾರ್ಥಗಳ ಸ್ಥಾನಾಂತರ ಅಥವಾ ರೂಪಾಂತರ.

ಶ್ರೀ ರಮಣರ ಪ್ರಕಾರ ಶಿವನು ಚಲಚ್ಚಿತ್ರದ ಬಿಳಿಪರದೆ. ಮಾಯಾ ಚಿತ್ರವಾದ ಜಗತ್ತು ಅದರ ಮೇಲಾಡುವ ಚಿತ್ರ ಸಂತಾನ. ಜೀವ ಚೈತನ್ಯದ ಡಿಗ್ರಿಗಳು (ಅಂಶಗಳು) ಬ್ರಹ್ಮಾದಿ ಸ್ತಂಬ ಪರ್ಯಂತ; ಅದು ಗಾತ್ರಾನುಗುಣವಾಗಿ ವಿಸ್ತಾರ್ಯ. ಜೀವವು ಶಿವಚೈತನ್ಯದ ಇಚ್ಛಾ ವಿಕಾರ. ಈ ಶಿವೇತರ ಪದಾರ್ಥ ವರ್ಗದಲ್ಲಿ ಕಾಲದ ಪಾತ್ರವು ಕಿಂಕರನ ಪ್ರಭುತ್ವವಿದ್ದಂತೆ. ಶಿವ ಪ್ರೇರಣೆಯಿಂದ ಅದು ಪ್ರಭುವಾಗಿ ತೋರುತ್ತದೆ.

ಶಿವ ತೇಜಸ್ಸು ಕಾಲದಲ್ಲಿ ಪ್ರತಿಷ್ಠಿತವಾಗಿದೆ ಎನ್ನುತ್ತವೆ ಶಿವ ಮಹಾಪುರಾಣ. ಶಿವನ ಪ್ರೇರಕ ಶಕ್ತಿಯನ್ನು ಅದರಲ್ಲಿ ಆವಾಹಿಸಲಾಗಿದೆ. ಆ ಶಕ್ತಿಯು ಆಂಶಿಕ. ತೇಜಸ್ಸು = ಚೈತನ್ಯ = ಶಕ್ತಿ. ಕಾಲವು ಕಾಷ್ಠೆ, ನಿಮೇಷಾದಿಗಳ ಕಲೆಗಳಿಂದ ಸಂಘಟಿತವಾದ ಕಲ್ಪನಾ ವಿಗ್ರಹ. ಶಿವನ ಅವತಾರವಾದ ಕಾಲವು ಕಾಲಭೈರವ. ಅವನಿಂದ ವಧ್ಯನಾದ ಕಾಲನು ಯಮ. ಕಾಲಭೈರವ ಬಲವು ಶಿವಬಲ. ಅದು ಜಗತ್ತಿನ ನಿಯಮಕ ಕಾರಣ. ಕಾಲ ಮರ್ಯಾದೆಯನ್ನು (ಗಡಿಯನ್ನು) ಮೀರುವುದು ದುಸ್ಸಾಧ್ಯ. ಆದ್ದರಿಂದ ಜಗತ್ತು ಕಾಲಾಧೀನವೆಂಬುದು ವ್ಯವಹಾರ. ಮಾಯೆಯ ನಾನಾಕಾರಗಳಲ್ಲಿ ಕಾಲವು ಗಣ್ಯ. ಅದು ಪ್ರೇರಿಸುವ ಘಟನೆಗಳು ಮಾನವ ನಿರೀಕ್ಷಾತೀತ. ಕಾಲವು ಜಗತ್ತಿನ ಏಕಚ್ಛತ್ರಾಧಿಪತಿ. ಕಾರ್ಯದ ಕಾರಣ ಸಾಮಗ್ರಿ ಪಂಚಾಂಗಗಳಲ್ಲಿ ದೈವವೆಂದು (ಕಾಣದ ಕೈ ಎಂದು) ಪ್ರಸಿದ್ಧವಾದದ್ದಿಲ್ಲಿ ಕಾಲ. ಅದರ ಭವಿಷ್ಯ ನಿರ್ಮಾಪಕತೆ ಜೋಯಿಸರಿಗೆ, ಹಸ್ತ ಸಾಮುದ್ರಿಕರಿಗೆ, ವಿಜ್ಞಾನಿಗಳಿಗೆ, ಇಂದ್ರಜಾಲಿಕರಿಗೆ, ಶಕ್ತ್ಯುಪಾಸಕರಿಗೆ

ಕೂಡಾ ಪೂರ್ಣವಾಗಿ ಪೂರ್ವಜ್ಞಾತವಾಗದು. ಮಹಾತ್ಮರಿಗೆ ಸಿಕ್ಕುವುದು ಅದರ ಆಂಶಿಕಮುಕ್ತಿ.

ಮೇಲೆ ವಿವರಿಸಿದ ಕಾರಣದಿಂದ ಜನರು ಕಾಲಮಹಿಮೆಯನ್ನು ಕೊಂಡಾಡುತ್ತಾರೆ; ಅದಕ್ಕೆ ವಿಧೇಯರಾಗುತ್ತಾರೆ. ಆದರೆ ಆಗ ಅವರು ಕಾಲಕಾಲನನ್ನು ಮರೆತಿರುತ್ತಾರೆ. ನೆನೆದಲ್ಲಿ ಶಿವ ಪ್ರೇರಣೆ ಲಭ್ಯ; ನೆನೆಯದಲ್ಲಿ ಆ ರಕ್ಷಣೆ ಸಿಗದು. ಆ ಸ್ಮರಣೆ ಅಮಿಶ್ರವಾದ ಪ್ರಾಮಾಣಿಕತೆಯನ್ನು ಆಧರಿಸಿರಬೇಕು. ತ್ರಿಕರಣ ಶುದ್ಧಿಯು ಸರ್ವ ಸಾಧನಾಧಾರ. ಅಶುದ್ಧಾತ್ಮದ ಸಿದ್ಧಿಯು ತಾತ್ಕಾಲಿಕ ಯಾ ಆಭಾಸಿಕ ಯಾ ಪ್ರಚ್ಛನ್ನವಾದ ದೂರ ಕಾಲೀನ ದುಷ್ಪರಿಣಾಮಕಾರಕ. ವೈಯಕ್ತಿಕ ಹಾಗೂ ಅವೈಯಕ್ತಿಕ ಕಾಲ ಸಂವೇದನೆಗಳ ಸಹಕಾರ ಮಾತ್ರ ತ್ರಿಕಾಲಗಳನ್ನು ನೆಲೆ ನಿಲ್ಲಿಸಬಲ್ಲುದು.

## –೭೮–

# ಶಿವಲೀಲೆಯ ಅರ್ಥ

ಜಗದುತತ್ತಿ ಏಕೆ ಆಯಿತೆಂಬುದಕ್ಕೆ ಪರಶಿವನಿಚ್ಛೆ ಎಂಬುದೊಂದೇ ಸದುತ್ತರ. ಅದನ್ನೇ ಬೇಕಾದರೆ "ಲೀಲೆ" ಎನ್ನಬಹುದು. ಲೀಲೆ ಆಟವಲ್ಲ. ಆಟವೆಂದು ಅರ್ಥ ಮಾಡುವುದು ಬಾಲಿಶ. ಅದರಿಂದ ಪರಶಿವನನ್ನು ಮನಸೋ ಇಚ್ಛೆ ನಡೆದುಕೊಳ್ಳುವ ದೇವ+ಸೈತಾನ ಪಾತ್ರಗಳ ಮಾನಸ ಶಾಸ್ತ್ರೀಯವಾದ ಅಭೇದ್ಯ ಯೋಗ ಎನ್ನಬೇಕಾಗುತ್ತದೆ–ಎಲ್ಲವೂ ಪರಶಿವ (ಪರಬ್ರಹ್ಮ) ಮಯವೆಂದು ಸಾರಿ ಸಾರಿ ಹೇಳುವವರಿಗೆ. ಆದುದರಿಂದ ಪರಶಿವನಿಗೆ ಅಪರಶಿವನಾಗಿ ತನ್ನನ್ನು ತಾನೇ ನೋಡಿಕೊಳ್ಳಬೇಕೆಂಬ ಸಂಕಲ್ಪ ಒಂದೇ ಸೃಷ್ಟಿ–ಸ್ಥಿತಿ–ಪ್ರಳಯಗಳ ಕಾಲಾವಧಿಕ ನಿಸರ್ಗದ ಹೇತು. ಅಸ್ಪಷ್ಟ ನಿಸರ್ಗವಾದಿಗಳೂ ನಿಯಾಮಕತ್ವವನ್ನು ದೇವರಿಗನ್ವಯಿಸುವುದರಿಂದ ನಿಯಮನ ಪ್ರಕಾರವನ್ನೂ ಉದ್ದೇಶವನ್ನೂ ಆತನ ಇಚ್ಛೆಗೇ ಬಿಟ್ಟು ಬಿಡಬೇಕಾಗುವುದು. ಇದರ ಸಮರ್ಪಕತೆ ಪ್ರಶ್ನಾತೀತ. ತನ್ನನ್ನು ತಾನಲ್ಲವಾಗಿ ಕಂಡು ಮತ್ತೆ ತಾನೇ ತಾನಾಗುವ ಬಯಕೆ ದೇವರಿಗೆ ಸಹಜ. ದೇವರು ಜೀವ+ಜಡ ಶಕ್ತಿಗಳ ಮಾನಸ ಶಾಸ್ತ್ರೀಯ ಯೋಗವಲ್ಲ–ಅಂಥ ಯೋಗದ ಮೂಲ ಹೇತು. ಬುದ್ಧನು ಈ ಕಾರಣದಿಂದ ಜಗತ್ತಿನ "ಯಾಕೆ" ಎಂಬ ಪ್ರಶ್ನೆ ಅನಾವಶ್ಯಕ ಎಂದದ್ದು.

ಪುರಾಣ ಹೇಳುವಂತೆ ಗುಣಗಳು ಕಾಲವಶದಿಂದ (ಈಶ್ವರೇಚ್ಛೆಯಿಂದ) ದೋಷಗಳಾಗುವುವು; ಹಾಗೇ ದೋಷಗಳು ಗುಣಗಳಾಗುವುವು–ಪರಿಣಾಮದ ದೃಷ್ಟಿಯಿಂದ. ಇದು ಯಾಕೆ? ಎಂದು ಕೇಳಿದರೆ ಯಾವ ವಿಜ್ಞಾನವೂ ಆತ್ಯಂತಿಕ ಉತ್ತರವನ್ನು ಕೊಡಲಾರದು. ಸೃಷ್ಟಿಯ ಮೊದಲ ಆವೃತ್ತಿಯು "ಅಬುದ್ಧಿಪೂರ್ವ" ಎಂದು ಶಿವ ಪುರಾಣ ಹೇಳುವುದು ಅದರಿಂದಲೇ. ದೇವರಿಗೆ (ಮನುಷ್ಯರ) ತಲೆಯಿಲ್ಲ; (ಮನುಷ್ಯರ) ವಿಜ್ಞಾನವಿಲ್ಲ; (ಮನುಷ್ಯರ) ಉದ್ದೇಶ ಕಲ್ಪನೆಯಿಲ್ಲ. ದೇವರನ್ನು ಬಂಧಿಸ ಬಯಸುವ ಕಾಲ್ಪನಿಕ ವಿಧಿನಿಯಮಗಳ ಪದ್ಧತಿಯನ್ನು ದೇವರ ಮೇಲೆ ಹೇರಲು ಮಾನವನಿಗೆ ಹಕ್ಕಿಲ್ಲ. ಆದ್ದರಿಂದಲೇ ಮನುಷ್ಯ ಎಷ್ಟು ಪ್ರಯತ್ನಿಸಿದರೂ ಪ್ರಜಾಪ್ರಭುತ್ವವು ಒಂದಲ್ಲ ಒಂದು ತರದ ಏಕಾಧಿಪತ್ಯವಾಗಿ ಕೊನೆಗೊಳ್ಳುತ್ತದೆ; ಎಲ್ಲರ ಪ್ರಭುತ್ವವೆಂಬುದು ಭ್ರಮೆ. ವರಕವಿ ಅಂಬಿಕಾತನಯ ದತ್ತರು ಅದರಿಂದಲೇ–

**"ಎಲ್ಲ ದೇವರು ಬಂದು ತಲ್ಲಣಗೊಂಡರು ಇಲ್ಲಿಯವರ ಕಾಟ ಇಲ್ಲುಳಿಯಿತಲ್ಲೋ– ಇಲ್ಲುಳಿಯಿತಲ್ಲಾ!"**

ಎಂದು ಉದ್ಗರಿಸಿದರು. ಅದರಿಂದಲೇ ದೇವರನ್ನು ದೂರಿದರೆ ತನ್ನನ್ನು ತಾನೇ ದೂರಿಕೊಂಡಂತೆ ಎಂದರು ಶ್ರೀ ಶಂಕರಾಚಾರ್ಯರು, ತಾನು ಮತ್ತು ದೇವರು ಬೇರೆ ಎಂಬುದು ಅವರ ಪ್ರಕಾರ ತಪ್ಪು ಕಲ್ಪನೆಯಾದ್ದರಿಂದ. ಶಿವ ಪುರಾಣದ ಪ್ರಕಾರವೂ "ಶಿವೋऽಹಂ" ಎಂಬುದು ಆತ್ಯಂತಿಕ ಸತ್ಯ. ಆತ್ಯಂತಿಕ ಸತ್ಯದ ಕಿರಣಗಳಂತೆ ನಾವಿದ್ದೇವೆ ವ್ಯವಹಾರ ಪ್ರಪಂಚದಲ್ಲಿ. ಆದ್ದರಿಂದ ಈ ಕಿರಣಗಳು ಪರಸ್ಪರ ಪ್ರತ್ಯೇಕತೆಯನ್ನು ತ್ಯಜಿಸಲು ಕಲಿಯುವುದೇ ಪರಮಾಚಾರ. ಈ ಶಿಕ್ಷಣವನ್ನು ಪಡೆಯುವಂತೆ ಮಾಡುವುದೇ "ಶಿವಲೀಲೆ" ಎಂದರೆ ಆ ಮಾತಿಗೆ ಸ್ವಲ್ಪವಾದರೂ ಅರ್ಥ ಬರುತ್ತದೆ. ಇಲ್ಲವಾದರೆ "ಶಿವಲೀಲೆ" ಎಂಬುದು ಮೂಢತಮ ನಂಬಿಗೆ. ಅದರಿಂದ ನಾವು (ಮನುಷ್ಯರು) ಸ್ವವಂಚನೆ ಮತ್ತು ಪರವಂಚನೆಗಳನ್ನು ಮಾಡುವ ದುರ್ಜೀವನವನ್ನು ನಡೆಯಿಸುವವರಾಗುತ್ತೇವೆ.

ಶಿವ ಪುರಾಣ ಕೊಡುವ ಮತ್ತೊಂದು ವಿವರಣೆ: ಅಪ್ ಪದಾರ್ಥಗಳು ಮನುಜರಲ್ಲಿರುವ ಕ್ರಿಯಾಶಕ್ತಿ; ಅವರ ಜನಕ ಶಕ್ತಿಗಣ. ನರರ ಅಯನವು (ಮಾರ್ಗವು) ನಾರಾಯಣ. ನಾರಾಯಣ ಪರಮ ಸತ್ಯದ ಯೋಗ ನಿದ್ರಾವಸ್ಥೆಯಲ್ಲಿರುತ್ತಾನೆ. ಜನಲೋಕ ನಿವಾಸಿಗಳು (ಜಗದ್ಧಿತಾಕಾಂಕ್ಷಿಗಳಾದ ಯೋಗಿ ವೀರರು) ಆ ಶಿವಸುತನನ್ನು ಎಚ್ಚರಿಸುತ್ತಾರೆ. ಆಪಃ=ನೀರು=ಚಲನಶಕ್ತಿ. ಶಿವ ಧ್ಯಾನದಿಂದ ನಾರಾಯಣನಿಗೆ ಪ್ರಪಂಚ ಜ್ಞಾನ ಬರುತ್ತದೆ. ಆಗ ಅವನು ಮತ್ಸ್ಯಕೂರ್ಮಾದ್ಯವತಾರಗಳನ್ನು ತಾಳಲಾರಂಭಿಸುತ್ತಾನೆ. ಈ ಅವತಾರಿಯೇ ಜಗದುದ್ಧಾರಕನಾದ ಅತಿ ಮಾನವ ವೀರ. ಅಂಥ ಕಾರಣ ಪುರುಷನ ನಿರ್ಮಾಣವೇ ಉಚ್ಚ ವಿದ್ಯಾಭ್ಯಾಸದ ಪರಮ ಧ್ಯೇಯ. ಗಾಂಧಿ ನಿರ್ಮಾಪಕ ಯುನಿವರ್ಸಿಟಿಯೇ ನಿಜವಾದ ಯುನಿವರ್ಸಿಟಿ, ಘಟಿಕಾ ಸ್ಥಾನ, ಗುರುಕುಲ.

ಶಿವನ ಪೂರ್ಣಾವತಾರವಾದ ರುದ್ರನ ಎಡಪಾರ್ಶ್ವವು ವಿಷ್ಣು, ಬಲ ಪಾರ್ಶ್ವವು ಬ್ರಹ್ಮ ಎಂಬಾಗ ಶಿವ ಪುರಾಣವು ತ್ರಿಮೂರ್ತಿಗಳ ಭಕ್ತರ ಪರಸ್ಪರ ಜಗಳಗಳನ್ನು ಪರಿಹರಿಸುತ್ತದೆ. ಬ್ರಹ್ಮ ವಿಷ್ಣುಗಳ ಘರ್ಷಣದ ಕಥೆಗಳು ಅವರವರ ಭಕ್ತರ ಘರ್ಷಣಗಳನ್ನು ಸೂಚಿಸುತ್ತವೆ. ತನ್ನಂತೆಯೇ ಮನುಜನು ದೇವರನ್ನು ಕಲ್ಪಿಸಿಕೊಂಡನು. ಆದ್ದರಿಂದ ದೇವತೆಗಳ ಮೇಲೆ ಕಾಮ ಕ್ರೋಧಾದಿ ಷಡ್ವೈರಿಗಳ ಆರೋಪ ಮಾಡಿ ಕಥೆ ಹೇಳುವ ರೂಢಿ ಬಂತು. ಅದಕ್ಕೆಂದೇ ಸುಭಾಷಿತ ಹೇಳುತ್ತದೆ:

**ದೇವನೊಬ್ಬ–ಕೇಶವನೋ ಶಿವನೋ**  
**ಯಾರಾದರೂ**  
**ಮಿತ್ರನೊಬ್ಬ–ಭೂಪತಿಯೋ ಯತಿಯೋ**  
**ಯಾರಾದರೂ**

**ಸತಿಯೊಬ್ಬಳು–ಸುಂದರಿಯೋ ದರಿಯೋ**
**ಯಾರಾದರೂ**
**ತಾಯೊಬ್ಬಳು–ಪಾರ್ವತಿಯೋ ಸತಿಯೋ**
**ಯಾರಾದರೂ ಹಾಗೆಯೇ**
**"ಆ ದೇವ ಈ ದೇವ ಮಾದೇವನೆನಬೇಡ–**
**ಆ ದೇವ ದೇವ ಭುವನದಾ ಪ್ರಾಣಿಗಳಿ–**
**ಗಾದವನೆ ದೇವ ಸರ್ವಜ್ಞ"**

ಎಂದ ಸರ್ವಜ್ಞನ ಮಾತಿಲ್ಲಿ ಸ್ಮರಣೀಯ.

–೭೯–

# ರಾಜವಂಶಗಳು ಮತ್ತು ಅವುಗಳ ಗಣ್ಯತೆ

## ಸೂರ್ಯವಂಶದ ದೊರೆಗಳು

(ರುದ್ರ) ಸೂರ್ಯ, ವಿಷ್ಣು, ಬ್ರಹ್ಮ, ಮರೀಚಿ, ಕಶ್ಯಪ, ವಿವಸ್ವಾನ್, ಮನು, ಇಕ್ಷ್ವಾಕು, ಕುಕ್ಷಿ, ವಿಕುಕ್ಷಿ, ಬಾಣ, ಅನರಣ್ಯ, ವೇನ, ಪೃಥು, ತ್ರಿಶಂಕು, ಧುಂಧುಮಾರ, ಯುವನಾಶ್ವ ಮಾಂಧಾತ, ಸುಸಂಧಿ, ಧ್ರುವಸಂಧಿ, ಅಸಿತ, ಸಗರ, ಅಸಮಂಜ, ನಳ, ಅಂಶುಮಾನ್, ದಿಲೀಪ, ಭಗೀರಥ, ಕಾಕುತ್‌ಸ್ಥ, ರಘು, ಅಜ, ದಶರಥ, ರಾಮ, ಕುಶ, ಪ್ರವೃದ್ಧ, ಶಂಖಣ, ಸುದರ್ಶನ, ಅಗ್ನಿವರ್ಣ, ಶೀಘ್ರ, ಮರು, ಪ್ರಶುಶ್ರುಕ, ಅಂಬರೀಷ, ಯಯಾತಿ, ನಾಭಾಗ ಇತ್ಯಾದಿಗಳು ಪ್ರಸಿದ್ಧರು. ಕಾಲಾನುಕ್ರಮ ಇಲ್ಲಿಲ್ಲ.

## ಚಂದ್ರವಂಶದ ದೊರೆಗಳು

(ವಿಷ್ಣು) ಚಂದ್ರ, ಬ್ರಹ್ಮ, ಅತ್ರಿ, ಇಂದು, ಬುಧ, ಪುರೂರವ, ಆಯು, ನಹುಷ, ಯಯಾತಿ, ಪುರು, ಪ್ರಚಿನ್ವಂತ, ಪ್ರವೀರ, ನಮಸ್ಯು, ಜಾರು ಪದ, ಸದ್ಯು, ಬಹುಗವ, ಸಂಯಾತಿ, ಅಹಂಯಾತಿ, ರೌದ್ರಾಶ್ವ, ಋತೇಯು, ರಂತಿಭಾರ. ಸುಮತಿ, ರೈಭ್ಯ, ದುಷ್ಯಂತ, ಭರತ, ಅಜಮೀಡ, ಋಕ್ಷ, ಹಸ್ತಿ, ಸಂವರಣ, ಕುರು, ಸುಧನಸ್ಸು, ಸುಹೋತ್ರ, ಋಷ್ಯ, ಪ್ರತೀಪ, ಶಂತನು, ವಿಚಿತ್ರವೀರ್ಯ, ಪಾಂಡು, ಅರ್ಜುನ, ಅಭಿಮನ್ಯು, ಪರೀಕ್ಷಿತ್, ಜನಮೇಜಯ, ಶತಾನೀಕ, ಸಹಸ್ರಾನೀಕ, ಅಸೀಮಕೃಷ್ಣ, ನೇಮಿಚಕ್ರ, ಚಿತ್ರರಥ, ಕವಿರಥ, ವೃಷ್ಟಿಮಂತ, ಸುಷೇಣ, ಸುನೀಥ, ನೃಚಕ್ಷು, ಪರಿಪ್ಲವ, ಮೇಧಾವಿ, ಚಂದ್ರಹಾಸ, ನೃಪಂಜಯ, ದುರ್ವ, ತಿಮಿ, ಬೃಹದ್ರಥ. ದುರ್ದಮನ, ಬಹೀನರ, ನಿಮಿ, ಕ್ಷೇಮಕ– ಇತ್ಯಾದಿಗಳು ಪ್ರಸಿದ್ಧರು. ಇಲ್ಲಿಯೂ ಕಾಲಾನುಕ್ರಮ ಸರಿಯಾಗಿಲ್ಲ.

ಈ ವಂಶಗಳ ಆಕರಗಳು ಶಿವ ಪುರಾಣೇತರ. ಶಿವ ಪುರಾಣವು ಸೂರ್ಯ ಚಂದ್ರ ವಂಶಗಳನ್ನು "ಸು" ಎಂದು ಬಿಟ್ಟು ಬಿಡುತ್ತದೆ. (ಪುಟ ೩೫೮)

## ಯದುವಂಶದ ದೊರೆಗಳು

ಯಯಾತಿ ಪುತ್ರನಾದ ಯದು, ಸಹಸ್ರಜಿತ್, ಶತ್‌ಜಿತ್, ಹೈಹಯ, ಧರ್ಮ, ನೇತ್ರ, ಕುಂತಿ, ಸೋಹಂಜಿ, ಭದ್ರಸೇನ, ಧನಕ, ಕೃತವೀರ್ಯ, ಕಾರ್ತವೀರ್ಯಾರ್ಜುನ,

ಜಯಧ್ವಜ, ಶೂರಸೇನ, ವೃಷಭ, ಮಧು, ಊರ್ಜಿತ, ವೃಷ್ಣಿ, ಶ್ವಪಲ್ಕ, ಚಿತ್ರರಥ, ಕುಕುರ, ಭಜಮಾನ, ಶುಚಿ, ಕಂಬಲ, ಬರ್ಹಿಷ, ಧೃಷ್ಣು, ಕಪೋತರೋಮ, ತೈತ್ತಿರಿ, ಪುನರ್ವಸು, ಅಭಿಜಿತ್, ಆಹುಕ, ಆಹುಕಿ, ದೇವಕ, ಉಗ್ರಸೇನ, ದೇವವಂತ, ಉಪದೇವ, ಸುದೇವ, ದೇವವರ್ಧನ, ಕಂಸ, ಸುನಾಮ, ನ್ಯಗ್ರೋಧ, ಕಂಕ, ಶಂಕು, ಸುಹು, ರಾಷ್ಟ್ರಪಾಲ, ಸೃಷ್ಟಿ, ತುಷ್ಟಿಮಾನ್, ವಿದೂರಥ, ರಾಜಾಧಿದೇವ, ಶೂರ, ವಸುದೇವ, ದೇವಭಾಗ, ದೇವಶ್ರವಸ್, ಸೃಂಜಯ, ಶ್ಯಾಮಕ, ಕಂಕ, ಶಮೀಕ, ವತ್ಸಕ, ವೃಕ, ಸುಭದ್ರ, ಭದ್ರವಾಹ, ದುರ್ಮದ, ಭದ್ರ, ಬಲರಾಮ, ಗದ, ಸಾರಣ, ವಿಪುಲ, ಧ್ರುವ, ಕೃತ, ಕೇಶಿ, ನಂದ, ಉಪನಂದ, ಕೃತಕ ಶೂರ, ಹಸ್ತ, ಹೇಮಾಂಗದ, ಉರು, ವಲ್ಕ, ವಿಪೃಷ್ಠ, ಶ್ರಮ, ಪ್ರತಿಶ್ರುತ, ಕಲ್ಪವರ್ಷ, ವಸು, ಹಂಸ, ಸುವಂಶ, ವಿಶ್ರುತ, ಕೀರ್ತಿಮಂತ, ಸುಷೇಣ, ಭದ್ರಸೇನ, ಋಜು, ಸಂಮರ್ದನ, ಭದ್ರ, ಸಂಕರ್ಷಣ, ಕೃಷ್ಣ, ಅನಮಿತ್ರ, ಶಿನಿ, ಸತ್ಯಕ, ಯುಯುಧಾನ, ಸಾತ್ಯಕಿ, ಜಯ, ಕುಣಿ, ಯುಗಂಧರ, ಶ್ವಫಲ್ಕ, ಅಕ್ರೂರ, ಆಸಂಗ, ಸಾರಮೇಯ, ಮೃದುರ, ಮೃದುವಿದ್ಗಿರಿ, ಅಧರ್ಮವೃದ್ಧ, ಸುಕರ್ಮ, ಕ್ಷೇತ್ರೋಪೇಕ್ಷ, ಅರಿಮರ್ದನ, ಗಂಧಮಾದ, ಪ್ರತಿಬಾಹು, ದೇವವಾನ್, ವಿದೂರರಥ, ಶಮಿ, ಪ್ರತಿ ಕ್ಷತ್ರ, ಸ್ವಯಂಭೋಜ, ಹೃದೀಕ, ದೇವಬಾಹು, ಶತಧನ್ವ, ಕೃತವರ್ಮ, ದೇವಭಾಗ, ಉದ್ಧವ, ಪ್ರದ್ಯುಮ್ನ ಇತ್ಯಾದಿಗಳು ಪ್ರಸಿದ್ಧರು.

## ನಿಮಿವಂಶದ ದೊರೆಗಳು

ಇಕ್ಷ್ವಾಕು ಪುತ್ರನಾದ ನಿಮಿಗೆ ಮಿಥಿಯು ಮಗ. ಮಿಥಿ, ಉದಾವಸು, ನಂದಿವರ್ಧನ, ಸುಕೇತು, ದೇವ ರಾತ, ಮಹಾವೀರ, ಸುಧೃತಿ, ಧೃಷ್ಟಕೇತು, ಹರ್ಯಶ್ವ, ಪ್ರತಿಂಧಕ, ಕೀರ್ತಿರಥ, ದೇವಮೀಢ, ವಿಬುಧ, ಮಹೀಧ್ರಕ, ಕೀರ್ತಿರಾತ, ಮಹಾರೋಮ, ಸ್ವರ್ಣರೋಮ, ಹ್ರಸ್ವರೋಮ, ಜನಕ, ಕುಶಧ್ವಜ ಇತ್ಯಾದಿಗಳು.

ದೇಶದ ಪರಂಪರೆಯಲ್ಲಿ ಹೆಮ್ಮೆಯನ್ನುಂಟು ಮಾಡುವ ಅಂಶಗಳನ್ನು ಮರೆತು ಬಿಡುವುದು ದೇಶ ಪ್ರೇಮಕ್ಕೆ ಸಂಪೂರ್ಣ ಮಾರಕ. ಈ ಮೇಲಿನ ರಾಷ್ಟ್ರೀಯ ಸಾಂಸ್ಕೃತಿಕ ಕ್ಷಾತ್ರ ನೇತೃಗಳ ಸಂಖ್ಯೆ ದೊಡ್ಡದಾಯಿತೆಂದು ನಮ್ಮ ಮಂಗಲಾಷ್ಟಕಕಾರರು ಮಾಂಧಾತ, ನಹುಷ, ಅಂಬರೀಷ, ಸಗರ, ಪೃಥು, ಹೇಹಯ, ಧರ್ಮರಾಯ, ನಳ, ದಶರಥ, ರಾಮಚಂದ್ರ, ಪರಶುರಾಮ, ಇಕ್ಷ್ವಾಕು ವಿಭೀಷಣ, ಭರತ, ಉತ್ಥಾನಪಾದ, ಧ್ರುವ–ಎಂಬೀ ಹದಿನಾರು ರಾಷ್ಟ್ರನಾಯಕರನ್ನಾದರೂ ನಾವು ಅನುಸ್ಮರಿಸಬೇಕು ಎಂಬುದನ್ನು ರೂಢಿಗೆ ತಂದರು. ಇವರಲ್ಲೂ ರಾಮಚಂದ್ರನ ಅನುಸ್ಮರಣೆ ಅತಿ ಪ್ರಮುಖವಾಗಿ, ರಾಮ ರಾಜ್ಯವೆಂದರೆ ಮನುಷ್ಯ ಕಟ್ಟಬಲ್ಲ ಅತ್ಯುನ್ನತ ಆದರ್ಶ ರಾಜ್ಯ ವ್ಯವಸ್ಥೆ ಎಂಬ ಪ್ರತೀತಿಯು ಜನ ಹೃದಯದಲ್ಲಿ ಪ್ರತಿಷ್ಠಿತವಾಯಿತು. ಕೇವಲ ರಾಣಾ ಪ್ರತಾಪ–ಶಿವಾಜಿಗಳಿಂದ ಅಥವಾ ಮೋ.ಕ.ಗಾಂಧಿ ಸುಭಾಷರಿಂದ ನಮ್ಮ

ದೇಶದ ಉದಾತ್ತ ಸಂಸ್ಕೃತಿ ಆರಂಭವಾಗಲಿಲ್ಲ. ವೇದಕಾಲೀನ ರಾಜರಲ್ಲಿ ಮಾಂಧಾತನು ಆದಿ ಪ್ರಮುಖ. ಹಾಗೇ ಆದಿಮನು ಕೂಡಾ. ಇವರಿಬ್ಬರಲ್ಲಿ ವೈವಸ್ವತ ಮನುವು ಹೆಚ್ಚು ಹಳಬ. ಮನುಸ್ಮೃತಿಯ ೭–೮ನೆಯ ಅಧ್ಯಾಯಗಳು ರಾಜ್ಯ ಶಾಸ್ತ್ರವನ್ನು ಬೋಧಿಸುತ್ತವೆ. ಪುರಾಣಗಳ ಪ್ರಕಾರ ಸೃಷ್ಟಿ, ವಂಶ, ಮನ್ವಂತರ, ವಂಶಾನುಚರಿತ–ಎಂಬಿವು ಪ್ರತಿ ದೇಶ ಸೇವಕನಿಗೂ ಇರಬೇಕಾದ ಸಾಮಾನ್ಯ ಜ್ಞಾನ.

-೮೦-

# ಪುರಾಣಕ್ಕೆ ವೇದಾಧಾರ ಮತ್ತು ಅದರ ಸಾರ್ಥಕತೆ

೧) ಪ್ರಜ್ಞಾನಂ ಬ್ರಹ್ಮ, ೨) ಅಹಂ ಬ್ರಹ್ಮಾಸ್ಮಿ ೩) ತತ್ವಮಸಿ, ೪) ಅಯಮಾತ್ಮಾ ಬ್ರಹ್ಮ, ೫) ಈಶಾವಾಸ್ಯಮಿದಂ ಸರ್ವಂ ೬) ಪ್ರಾಣೋಸ್ಮಿ, ೭) ಪ್ರಜ್ಞಾನ ಮಾತ್ಮಾ ೮) ಯದೇವೇಹ ತದಮುತ್ರ ತದನ್ವಿಹ, ೯) ಅನ್ಯ ದೇವ ತದ್ವಿದಿತಾದಥೋ ಅವಿದಿತಾದಪಿ ೧೦) ಏಷನ ಆತ್ಮಾಂತರ್ಯಾಮ್ಯಮೃತಃ ೧೧) ಸಯಶ್ಚಾಯಂ ಪುರುಷೋಯಶ್ಚಾ ಸಾವಾದಿತ್ಯೇ ಸ ಏಕಃ ೧೨) ಅಹಮಸ್ಮಿ ಪರಂ ಬ್ರಹ್ಮ ಪರಂ ಪರ ಪರಾತ್ಪರಂ, ೧೩) ವೇದ ಶಾಸ್ತ್ರ ಗುರುತ್ವಾತ್ತು ಸ್ವಯಮಾನಂದ ಲಕ್ಷಣಂ ೧೪) ಸರ್ವಭೂತ ಸ್ಥಿತಂ ಬ್ರಹ್ಮ ತದೇವಾಹಂ ನ ಸಂಶಯಃ ೧೫) ತತ್ವತಶ್ಚ ಪ್ರಾಣೋಹಮಸ್ಮಿ ಪೃಥಿವ್ಯಾಃ ಪ್ರಾಣೋಽಹಮಸ್ಮಿ, ೧೬) ಅಪಾಂಚ ಪ್ರಾಣೊಹಮಸ್ಮಿ, ತೇಜಸಶ್ಚ ಪ್ರಾಣೋಽ ಹಮಸ್ಮಿ, ೧೭) ವಾಯೋಶ್ಚ ಪ್ರಾಣೋಽಹಮಸ್ಮಿ. ಆಕಾಶಸ್ಯ ಪ್ರಾಣೋಽಹಮಸ್ಮಿ, ೧೮) ತ್ರಿಗುಣಸ್ಯ ಪ್ರಾಣೋಽಹಮಸ್ಮಿ ೧೯) ಸರ್ವೋಽಹಂ ಸರ್ವಾತ್ಮಕೋಽಹಂ ಸಂಸಾರೀ ಯದ್ಭೂತಂ ಯಚ್ಚಭವ್ಯಂ ಯದ್ವರ್ತಮಾನಂ ಸರ್ವಾತ್ಮಕತ್ವಾ ದದ್ವಿತೀಯೋಽ ಹಂ ೨೦) ಸರ್ವಂ ಖಲ್ವಿದಂ ಬ್ರಹ್ಮ, ೨೧) ಸರ್ವೋಽಹಂ ವಿ ಮುಕ್ತೋಽಹಂ ೨೨) ಯೋಽಸೌಸೋಹಂ ಹಂಸಃ ಸೋಹಮಸ್ಮಿ- ಶಿವ ಭಕ್ತನು ಈ ವಾಕ್ಯಗಳನ್ನು ಎಲ್ಲೆಲ್ಲೂ ಯಾವಾಗಲೂ ಧ್ಯಾನ ಮಾಡುತ್ತಿರಬೇಕು.

ಪ್ರಜ್ಞಾನವೆಂದರೆ ಬ್ರಹ್ಮ. ಅಹಮೆಂದರೆ ಶಕ್ತ್ಯಾತ್ಮನಾದ ಪರಮೇಶ್ವರ. ಅಕಾರವು ಪ್ರಕಾಶಾತ್ಮನಾದ ಪರಶಿವ. ಹಕಾರವು ಶಕ್ತ್ಯಾತ್ಮನಾದ ಶಿವನ ಆಕಾಶ ರೂಪವು. ಶಿವ-ಶಕ್ತಿ ಸಂಯೋಗದಿಂದ ಆನಂದವು ಸದಾ ಜಾಗರಿತವಾಗಿರುತ್ತದೆ. ಬ್ರಹ್ಮನೆಂದರೆ ಶಿವಶಕ್ತಿಗಳ ಸರ್ವಾತ್ಮತ್ವವು. ಅವನೇ ನಾನು. ಅದೇ ನಾನು ಎಂಬುದು ಭಾವನೀಯ (ಕಲ್ಪನೀಯವಲ್ಲ). ತತ್ ಎಂದರೆ ಅದು, ಆತ್ಯಂತಿಕ ಪೂರ್ಣ ಸತ್ಯ; ಈ "ತತ್=ಅದು, ತ್ವಂ= ನೀನು" ಎಂಬ ಅರ್ಥವನ್ನು ಗ್ರಹಿಸದಿದ್ದರೆ ಸತ್ಯಕ್ಕೆ ವ್ಯತಿರಿಕ್ತವಾದ ಭಾವನೆ (ಅನುಭವ) ಉಂಟಾಗುತ್ತದೆ. ಅಹಂ ಶಬ್ದವು ಪುರುಷವಾಚಕ, ಅದರ ನಪುಂಸಕ ರೂಪವು ತತ್. ಈ ವಾಕ್ಯಗಳನ್ನು ಸಮನ್ವಯಿಸದಿದ್ದರೆ ಭಾವಾರ್ಥ ಹೊಳೆಯದು; ಸ್ತ್ರೀ ರೂಪದ ಜಗತ್ತಿನ ಕಾರಣವು ಬೇರೆಯಾಗಿ ಹೋದೀತು. "ಸತತ್ವಮಸಿ" ಎಂಬುದು ಉಪದೇಶಾರ್ಥಕ್ಕೆ ತಕ್ಕ ಭಾವನೆ. ನಿರ್ಗುಣ = ಪರಮಜ್ಯೋತಿಯಾಗಿ ಲಯ ಕಾಲದವರೆಗೆ ಇರುವ (ಪರಶಿವನ) ಸ್ವರೂಪ. ಇದು ಅದ್ವೈತ ಶೈವವಾದವು =

ಶಿವಾದ್ವೈತ ಸಿದ್ಧಾಂತ = ವ್ಯಾಸ ತಾತ್ಪರ್ಯ ನಿರ್ಣಯ. ಸಾಂಖ್ಯ ಯೋಗ, ಪಾಶುಪತ ಮತ್ತು ಮಾಹೇಶ್ವರ ಹಾಗೂ ಶೈವಾಗಮಗಳನ್ನು ಉಕ್ತ ಮಹಾವಾಕ್ಯಗಳು ಅಡಕ ಮಾಡಿಕೊಂಡಿವೆ ಎಂಬಂತೆ ಶಿವ ಮಹಾಪುರಾಣವು ಶಿವತತ್ವವನ್ನು ವಿವರಿಸುತ್ತಾ ಹೋಗಿದೆ–ಪಾಂಚರಾತ್ರದ ಕೆಲ ಅಂಶಗಳನ್ನೂ ಅದ್ವೈತಿಸಲಾಗಿದೆ. ಈ ಅದ್ವೈತವು ಶಾಂಕರವೂ ಆಗಿದೆ, ಅಂಶತಃ ಆರವಿಂದವೂ ಆಗಿದೆ ಎಂಬಂತೆ ತೋರುವ ಅರವಿಂದೇತರ ಸಮಗ್ರತೆ ಸ್ಫುಟವಾಗಿದೆ. ಆದರೆ ಈ ಸಾಮಶ್ರುತ್ಯದಲ್ಲಿ ಎಳ್ಳಷ್ಟೂ ಅಪಸ್ವರ ಉಂಟಾಗದಂತೆ ವಿವರಿಸಿರುವುದು ಈ ವ್ಯಾಸ ಶಿಷ್ಯನ ಅದ್ಭುತ ಶಕ್ತಿ.

"ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲ ನಂದನಃ" ಎಂಬುದಕ್ಕಿಂತಲೂ ಹೆಚ್ಚು ಸಮರ್ಪಕವೆಂದು ತೋರುವ ಸಮನ್ವಯವು ಈ ಪುರಾಣದಲ್ಲಿ ವ್ಯಕ್ತವಾಗಿದೆ. ಇದರ ವಿವರಣೆಯ ಸ್ಪಷ್ಟತೆಯ ಮುಂದೆ ಇದರ ವ್ಯಾಖ್ಯೆಗಳೆಲ್ಲವೂ ತೀರಾಮಂದ. ಆದ್ದರಿಂದ ಇದನ್ನು ಸರ್ವಧರ್ಮ ಸಮನ್ವಯದ ನಿರುಪಮ ಪಥ್ಯವೆಂದರೆ ಅತಿಶಯೋಕ್ತಿಯಾಗಲಾರದು. ತ್ರಿಮೂರ್ತಿಗಳಿಂದ ಹಿಡಿದು ಸರ್ವದೇವ, ಮಾನವ, ದೈತ್ಯ ಪ್ರಕಾರಗಳೂ ಜೀವ–ಜಡಾದಿ ಭೇದಗಳೂ ಸಾಲೋಕ್ಯಾದಿ ಮುಕ್ತಿ ಪ್ರಕಾರಗಳೂ ವೈದಿಕಾಚಾರಗಳೂ ಮ್ಲೇಚ್ಛರ ಆಚಾರ ವಿಚಾರ ವಾದಗಳೂ ಚಂಡಲಾದಿ ಜನ್ಮೀಯತೆಯೂ ಇಲ್ಲಿ ಕ್ರಮ ಸಂಸ್ಕಾರ ಹೊಂದುವ ಆಶಾವಾದವನ್ನು ಎತ್ತಿ ಒತ್ತಿ ಹೇಳಲಾಗಿದೆ. ಇಲ್ಲಿಯ ಶಿವನು ಅತ್ಯುನ್ನತವೂ ಅತಿ ಸಮಗ್ರವೂ ಆದ ಶಾಶ್ವತ ನೀತಿ ಧರ್ಮದ ವಿಶ್ವಜನೀನತೆಯನ್ನು ಒತ್ತಾಯಿಸುವ ಸರ್ವತಂತ್ರ ಸ್ವತಂತ್ರನೂ ಸರ್ವನಿರಪೇಕ್ಷನೂ ಆದ ಚೈತನ್ಯ ರೂಪಿಯು; ಚರಾಚರಗಳೆಲ್ಲವುಗಳ ಸ್ಥಿತಿಗತಿಗಳೆಲ್ಲವುಗಳಿಗೂ ಆತ್ಯಂತಿಕ ಜವಾಬುದಾರ.

"ಈ ಪರಿಯ ಸೊಬಗಾವ ದೇವನಲ್ಲೂ ಕಾಣೆ!"

# ಅನುಬಂಧಗಳು

## ಪ್ರೊ.ಬಿ.ಎಚ್.ಶ್ರೀಧರ : ಜೀವನದ ಮುಖ್ಯ ಘಟನೆಗಳು

| | | |
|---|---|---|
| ಜನನ | : | ೨೪ ಏಪ್ರಿಲ್ ೧೯೧೮ |
| | | ಬಿಜೂರು ಗ್ರಾಮ (ಅವಿಭಜಿತ ದಕ್ಷಿಣ ಕನ್ನಡ)ದ ಬವಲಾಡಿಯಲ್ಲಿ |
| ತಂದೆ | : | ಸೀತಾರಾಮ ಹೆಬ್ಬಾರ |
| ತಾಯಿ | : | ನಾಗಮ್ಮ |
| ತಂಗಿಯರು | : | ರುಕ್ಮಿಣಿ, ಸುಶೀಲ, ರಮ |
| ಶಿಕ್ಷಣ | | |
| ಪ್ರಾಥಮಿಕ | : | ಬಿಜೂರಿನ ಪ್ರಾಥಮಿಕ ಶಾಲೆಯಲ್ಲಿ |
| ಮಾಧ್ಯಮಿಕ | : | ಮಿಡಲ್ ಸ್ಕೂಲ್, ಸೊರಬ (೩ ವರ್ಷ) ಮಿಡಲ್ ಸ್ಕೂಲ್, ಸಾಗರ (೧ ವರ್ಷ) |
| ಪ್ರೌಢ | : | ಮುನಿಸಿಪಲ್ ಹೈಸ್ಕೂಲ್, ಸಾಗರ, ಎಸ್.ಎಸ್.ಎಲ್.ಸಿ. ಶಿವಮೊಗ್ಗ ಕೇಂದ್ರದಲ್ಲಿ |
| ಇಂಟರ್ ಮಿಡಿಯಟ್ | : | ಮೈಸೂರಿನ ಯುವರಾಜ ಕಾಲೇಜಿನಲ್ಲಿ |
| ಬಿ.ಎ. (ಆನರ್ಸ್) | : | ಮೈಸೂರಿನ ಮಹಾರಾಜ ಕಾಲೇಜಿನಲ್ಲಿ (೧೯೪೧)ರಲ್ಲಿ ರಾಜ್ಯಕ್ಕೆ ಮೊದಲಿಗನಾಗಿ ಉತ್ತೀರ್ಣ ಪೂರ್ಣ ಕೃಷ್ಣರಾವ್ ಬಂಗಾರದ ಪದಕ ನವೀನಂ ರಾಮಾನುಜಾಚಾರ್ಯ ಬಂಗಾರದ ಪದಕ 'ಕವಿಯೂ ವಿಜ್ಞಾನಿಯೂ' ಪ್ರಬಂಧಕ್ಕೆ ಹೊನ್ನಸೆಟ್ಟಿ ಬಹುಮಾನ |
| ಎಂ.ಎ. ಆನರ್ಸ್ | : | ಮಹಾರಾಜ ಕಾಲೇಜು, ಮೈಸೂರು. |
| ವಿವಾಹ | : | ಮೇ (೧೯೪೬) ರಮಾದೇವಿಯವರೊಡನೆ |

| | | |
|---|---|---|
| ಮಕ್ಕಳು | : | ಸುಮಾ, ಪ್ರತಿಭಾ, ವಿಜಯಾ, ರಾಜಶೇಖರ, ರಾಜೇಶ್ವರಿ |
| ವೃತ್ತಿ | : | ಪುಣೆಯ ಫೀಲ್ಡ್ ಕಂಟ್ರೋಲರ್ ಆಫ್ ಮಿಲಿಟರಿ ಎಕೌಂಟ್ಸ್ ಆಫೀಸಿನಲ್ಲಿ ಒಂದು ವರ್ಷ 'ಗುಮಾಸ್ತಗಿರಿ' (೧೯೪೨) |
| | * | ಭಟ್ಕಳದ ಇಸ್ಲಾಮಿಯ ಆಂಗ್ಲೋ ಉರ್ದು ಹೈಸ್ಕೂಲಿನಲ್ಲಿ ಸಹ ಶಿಕ್ಷಕರಾಗಿ ೪ ವರ್ಷ ಹಾಗೂ ಹೆಡ್ ಮಾಸ್ಟರ್ ಆಗಿ ಒಂದು ವರ್ಷ |
| | * | 'ಕರ್ಮವೀರ' ವಾರಪತ್ರಿಕೆ (ಹುಬ್ಬಳ್ಳಿ)ಯ ಉಪಸಂಪಾದಕರಾಗಿ (೧೯೪೭–೫೧) |
| | * | ಕುಮಟದ ಕೆನರಾ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕ (೧೯೫೧–೬೨)ರಾಗಿ |
| | * | ಶಿರಸಿಯ ಎಂ.ಎಂ. ಕಲಾ–ವಿಜ್ಞಾನ ಮಹಾವಿದ್ಯಾಲಯದಲ್ಲಿ ಉಪ ಪ್ರಾಚಾರ್ಯರಾಗಿ (೧೯೬೨–೬೯) ಸಂಸ್ಕೃತ ಮತ್ತು ಕನ್ನಡ ಪ್ರಾಧ್ಯಾಪಕರಾಗಿ. |
| | * | ಸಿದ್ದಾಪುರದ ಎಂ.ಜಿ.ಸಿ. ಕಾಲೇಜಿನಲ್ಲಿ ಪ್ರಾಚಾರ್ಯರಾಗಿ (೧೯೬೯–೭೬) |
| | * | ಶಿರಸಿಯ ಮಾಡರ್ನ್ ಎಜ್ಯುಕೇಷನ್ ಸೊಸೈಟಿಯ ಆನರರಿ ಮೆನೇಜರ್‌ಗಾಗಿ ೧೫–೬–೧೯೮೨ ರವರೆಗೆ |
| ನಿಧನ | : | ಏಪ್ರಿಲ್ ೨೪, ೧೯೯೦ |
| ಪ್ರಕಟಣೆಗಳು | : | ೧೯ನೇಯ ವಯಸ್ಸಿನಲ್ಲಿ ಇಂಟರ್ ಮೀಡಿಯಟ್ ಓದುತ್ತಿದ್ದಾಗ ಬೆಂಗಳೂರಿನ 'ಸುಬೋಧ' ರಾಮರಾಯರ ಕರೆಯ ಮೇರೆಗೆ ಬರೆದು ಪ್ರಕಟಿಸಿದ ಚಂಪಕಮಾಲಾ ವೃತ್ತದಲ್ಲಿದ್ದ ಕವನ ಮೊದಲ ಪ್ರಕಟಣೆ. ೧೯೯೦ರಲ್ಲಿ ಕೈಗಾ ಅಣು ವಿದ್ಯುತ್ ಸ್ಥಾವರ ಕುರಿತು 'ನಾಗರಿಕ' ಪತ್ರಿಕೆಯಲ್ಲಿ ಕೊನೆಯ ಲೇಖನ. ಈ ಮಧ್ಯದಲ್ಲಿ ೫೦ಕ್ಕೂ ಹೆಚ್ಚು ಪುಸ್ತಕಗಳು, ನೂರಾರು ಲೇಖನಗಳು ಪ್ರಕಟವಾದವು. |

**ಪ್ರಶಸ್ತಿ/ಗೌರವಗಳು**

| | | |
|---|---|---|
| ಕಾವ್ಯಸೂತ್ರ | : | ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ |
| | | ತೀ.ನಂ.ಶ್ರೀ ಸ್ಮಾರಕ ಬಹುಮಾನ |
| | | ಮೈಸೂರು ವಿ.ವಿ. ಸುವರ್ಣ ಮಹೋತ್ಸವ ಬಹುಮಾನ |
| ರಾಷ್ಟ್ರಸೂತ್ರ | : | ರಾಜ್ಯ ಸರಕಾರ ಅನುದಾನ |
| | | ಮೂರು ಸಾವಿರ ಮಠ, ಹುಬ್ಬಳ್ಳಿ, ಬಹುಮಾನ |
| ಜ್ಞಾನಸೂತ್ರ | : | ಹುಬ್ಬಳ್ಳಿಯ ಲೋಕ ಶಿಕ್ಷಣ ಟ್ರಸ್ಟ್ ಬಹುಮಾನ |
| ಮಾನಸ ದರ್ಪಣ | : | ಮದ್ರಾಸ್ ಕ್ರಿಶ್ಚಿಯನ್ ಟೆಕ್ಸ್ಟ್‌ಬುಕ್ ಕಮಿಟಿ ಬಹುಮಾನ |
| ನೌಕಾಗೀತ | : | ಕೇಂದ್ರ ಸರಕಾರದ ಸಂರಕ್ಷಣಾ ಶಾಖೆ ಬಹುಮಾನ |
| ರಸಯಜ್ಞ | : | ದೇವರಾಜ ಬಹಾದೂರ ಬಹುಮಾನ |
| ಮನುಸ್ಮೃತಿ (ರಾಜಧರ್ಮ) | : | ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಪದವಿ ತರಗತಿ ಪಠ್ಯಪುಸ್ತಕ |
| | | ೫೫ನೇಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಪತ್ರಿಕಾ ಗೋಷ್ಠಿ ಅಧ್ಯಕ್ಷ ಉ.ಕ. ಜಿಲ್ಲಾ ಮೂರನೆಯ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ (೧೯೭೪) |
| | | ಕುಂದಾಪುರದಲ್ಲಿ 'ಜೇಸೀ' ಸನ್ಮಾನ (೧೯೮೦) |
| | | ಶಿರಸಿಯ ರೋಟರಿ ಕ್ಲಬ್ ಸನ್ಮಾನ (೧೯೮೭) |
| | | ಶಿರಸಿಯ 'ರಂಗ ಸಂಗ' ಕಲಾರಂಗದವರಿಂದ ಪೌರ ಸನ್ಮಾನ (೧೯೮೭) |
| | | ಯುಗ ಪುರುಷದ ಬಳಗದಿಂದ ಕಿನ್ನಿಗೋಳಿಯಲ್ಲಿ ಸನ್ಮಾನ (೧೯೮೮) |

# ಬಿ.ಎಚ್.ಶ್ರೀಧರ ಕೃತಿ ಸೂಚಿ

**೧. ಕಾವ್ಯ**

| | | |
|---|---|---|
| ಮೇಘನಾದ | ಸಾಹಿತ್ಯ ಮಂದಿರ, ಮೈಸೂರು | ೧೯೪೫ |
| ಕಿನ್ನರಗೀತ | ಕಥಾಂಜಲಿ ಗ್ರಂಥಮಾಲೆ, ಬೆಂಗಳೂರು | ೧೯೪೭ |
| ಅಮೃತಬಿಂದು | ಸಂಯುಕ್ತ ಕರ್ನಾಟಕ ಕಾರ್ಯಾಲಯ, ಹುಬ್ಬಳ್ಳಿ | ೧೯೪೯ |
| ಮಂಜುಗೀತ | ಲೇಖಕರು, ಕುಮಟ | ೧೯೫೮ |
| ರಸಯಜ್ಞ | ವಿದ್ಯಾರಣ್ಯ ಪ್ರಕಾಶನ ಸಂಸ್ಥೆ, ಶಿರಸಿ | ೧೯೬೪ |
| ಮುತ್ತುರತ್ನ | ಸುಲಭ ಸಾಹಿತ್ಯ ಪ್ರಕಾಶನ, ಕುಮಟ (ಮ.ಮು. ೧೯೮೭) | ೧೯೬೮ |
| ನೌಕಾಗೀತ | ಅಪ್ರಕಟಿತ (ಖಾಸಗಿ ಪ್ರಸಾರದಲ್ಲಿ) | ೧೯೬೮ |
| ಕದಂಬ ವೈಭವ | ಪ್ರಬುದ್ಧ ಕರ್ನಾಟಕದಲ್ಲಿ | ೧೯೭೦; |
| | ಸಾಹಿತ್ಯ ಮಂದಿರ ಶಿರಸಿ | ೧೯೮೭ |
| ಕಂಟಕಾರಿ ಮಹಾಕಾವ್ಯಂ | ದೀನಬಂಧು ಪ್ರಜಾಶನ, ಹೊನ್ನಾವರ | ೧೯೮೧ |
| ಜಾತವೇದ | ಪಿ.ಎ.ಎನ್. ಪಬ್ಲಿಷರ್ಸ್, ಬೆಂಗಳೂರು | ೧೯೮೪ |
| ಅಮೃತಬಿಂದು (ಶ್ರೀಧರ ಕಾವ್ಯ ವಾಚಿಕೆ) | ಸಾಹಿತ್ಯ ಪರಿಷತ್ತು ಬೆಂಗಳೂರು | ೨೦೦೭ |

**೨. ಯಕ್ಷಗಾನ**

ಯಕ್ಷಗಾನ ಪಂಚರಾತ್ರ ವಾರ್ಧಿಕ್ಯ, ಶಿರಸಿಯ 'ಧ್ಯೇಯನಿಷ್ಠ ಪತ್ರಕರ್ತ' ದಿನಪತ್ರಿಕೆಯಲ್ಲಿ ೫–೧೨–೧೯೫೩ ರಿಂದ ೮–೫–೧೯೫೪ರ ವರೆಗೆ ಪ್ರತಿ ಭಾನುವಾರ

**೩. ನಾಟಕ**

| | |
|---|---|
| ಮಯೂರ ಶರ್ಮ, ಯುಗಪುರುಷ ಪ್ರಕಟಣಾಲಯ, ಕಿನ್ನಿಗೋಳಿ | ೧೯೮೮ |
| ಸೋಮಾರಿಗಳ ಕ್ಲಬ್ (ಅಪ್ರಕಟಿತ) | ೧೯೮೭ |

**೪. ಆತ್ಮಕಥೆ**

ಜೀವಯಾನ, ಬಿ.ಎಚ್.ಶ್ರೀ. ಸಾಹಿತ್ಯ ಪ್ರಶಸ್ತಿ ಸಮಿತಿ, ಶಿರಸಿ ೧೯೯೪

**೫. ವಿನೋದ–ವಿಡಂಬನೆ**

| | | |
|---|---|---|
| ಬೇತಾಳಗಳ ಕುಣಿತ | ಸರ್ವೋದಯ ಸಾಹಿತ್ಯ ಮಾಲೆ, ಹುಬ್ಬಳ್ಳಿ | ೧೯೫೧ |
| ಭಾಷಣಗಳ ಭೈರವರ ಒಡ್ಡೋಲಗ | ಎ.ಎಂ.ಜಿ. ಸಾಹಿತ್ಯ ಪ್ರಕಾಶನ, ಉಡುಪಿ | ೧೯೬೬ |

**೬. ವಿಮರ್ಶೆ**

| | | |
|---|---|---|
| ಬೇಂದ್ರೆ | ಎಂ.ಜಿ.ಎಂ. ಕಾಲೇಜು ಉಡುಪಿ | ೧೯೫೬ |
| ಹೊಸಗನ್ನಡ ಸಾಹಿತ್ಯ ಶೈಲಿ | ಪ್ರತಿಭಾ ಗ್ರಂಥಮಾಲೆ, ಧಾರವಾಡ | ೧೯೫೬ |
| ಕವೀಂದ್ರ ರವೀಂದ್ರ | ಶಶಿ ಪ್ರಕಾಶನ, ಬೆಂಗಳೂರು | ೧೯೫೯ |
| ಕಾವ್ಯಸೂತ್ರ | ವಿದ್ಯಾರಣ್ಯ ಗ್ರಂಥ ಪ್ರಕಾಶನ, ಶಿರಸಿ | ೧೯೬೮ |
| ಪ್ರತಿಭೆ | ರವೀಂದ್ರ ಪ್ರಕಾಶನ, ಕಾರ್ಗಲ್ | ೧೯೭೮ |
| ಸಂಸ್ಕೃತಗಳ ಕನ್ನಡಗಳ ಬಾಂಧವ್ಯ | ಅಖಿಲ ಕರ್ನಾಟಕ ಸಂಸ್ಕೃತ ಪರಿಷತ್ ಮಂಗಳೂರು | ೧೯೮೧ |
| ಪಸರಿಪ ಕನ್ನಡಕ್ಕೊಡೆಯನೀಗ ದರಾಂಕಿತ ಬೇಂದ್ರೆ | ಶ್ರೀಮಾತಾ ಪ್ರಕಾಶನ ಧಾರವಾಡ | |
| ಜನ್ನ (ಸಂ.ವಿ.ಸಿ) | ಐ.ಬಿ.ಎಚ್.ಪ್ರಕಾಶನ ಬೆಂಗಳೂರು | ೧೯೭೫ |

**೭. ವೈಚಾರಿಕ**

| | | |
|---|---|---|
| ಭಾರತೀಯ ನಾಗರಿಕತೆಗೆ | ಪ್ರಸಾರಾಂಗ | ೧೯೫೯ |
| ಮನುವಿನ ಕೊಡುಗೆ | ಕ.ವಿ.ವಿ. ಧಾರವಾಡ (ಮರುಮುದ್ರಣ) | ೧೯೭೧ |
| ಪಂಚಮುಖಿ | ಅಂತರಂಗ ಕಾರ್ಯಾಲಯ, ಉಡುಪಿ | ೧೯೫೫ |
| ವಿದೇಶದ ತಿಳಿವಳಿಕೆಗಳು | ರಾಮಕೃಷ್ಣ ಪ್ರಿಂಟಿಂಗ್ ವರ್ಕ್ಸ್, ಕುಮಟ | ೧೯೫೯ |
| ಜ್ಞಾನಸೂತ್ರ | ವಿದ್ಯಾರಣ್ಯ ಗ್ರಂಥ ಪ್ರಕಾಶನ, ಶಿರಸಿ | ೧೯೬೯ |
| ಮಾನಸದರ್ಪಣ (ಹನುಮಂತರಾವ್ ಅವರೊಂದಿಗೆ) | ಸಮಾಜ ಪುಸ್ತಕಾಲಯ, ಧಾರವಾಡ | ೧೯೭೩ |
| ರಾಷ್ಟ್ರಸೂತ್ರ | ವಿಶ್ವ ಪ್ರಕಾಶನ, ಹುಬ್ಬಳ್ಳಿ | ೧೯೭೪ |
| ವಿಚಾರ ವಿಜಯ | ರವೀಂದ್ರ ಪುಸ್ತಕಾಲಯ, ಕಾರ್ಗಲ್ | ೧೯೮೧ |
| ಭಾರತೀಯ ಮೂರ್ತಿಶಿಲ್ಪ | ಬಂಡಾಯ ಪ್ರಕಾಶನ, ಅರೆಅಂಗಡಿ | ೨೦೦೯ |

**೮. ಇತಿಹಾಸ**

ಬನವಾಸಿಯ ಕದಂಬರು ಶತಮಾನೋತ್ಸವ ಸಮಿತಿ, ಬನವಾಸಿ ೧೯೬೬
(ಎಲ್.ಟಿ. ಶರ್ಮಾರೊಂದಿಗೆ)
ಬನವಾಸಿಯ ಇತಿಹಾಸ ಸಾಹಿತ್ಯ ಮಂದಿರ, ಶಿರಸಿ ೨೦೦೪

**೯. ಇತರೆ**

ಮಯೂರ ಶರ್ಮ ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ೧೯೭೧
(ಮರುಮುದ್ರಣ ೧೯೭೧)
ಕೌಶಿಕ ರಾಮಾಯಣ ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ೧೯೭೨
ರಮಣ ಮಹರ್ಷಿ ಸುಲಭ ಸಾಹಿತ್ಯ ಪ್ರಕಾಶನ, ಕುಮಟ ೧೯೬೯
ಉತ್ತರ ಕನ್ನಡ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು (ಉಪಲಬ್ಧವಿಲ್ಲ)
ಬನವಾಸಿಯ ಕೈಪಿಡಿ ೧೯೭೧
ಸಾಹಿತ್ಯ ಚಿಂತನ (ಮಂಜುವಾಣಿಯಲ್ಲಿ ಧಾರಾವಾಹಿಯಾಗಿ)
ಶಿವಪುರಾಣ (ಮಂಜುವಾಣಿಯಲ್ಲಿ ಧಾರವಾಹಿಯಾಗಿ)
ವೇದರಹಸ್ಯಸಾರ ರಾಜಶೇಖರ ಹೆಬ್ಬಾರ, ಶಿರಸಿ ೨೦೦೩

**೧೦. ಅನುವಾದ**

(ಇಂಗ್ಲಿಷಿನಿಂದ)
ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪ
(ಆರವಿಂದರ The Foundations of Indian Culture (ಭಾಗ–೧) ಅನುವಾದ)
ಸುಲಭ ಸಾಹಿತ್ಯ ಪ್ರಕಾಶನ, ಕುಮಟ ೧೯೫೫
ಭಾರತೀಯ ವಾಙ್ಮಯ
(ಅರವಿಂದರ The Foundations of Indian Culture (ಭಾಗ–೨) ಅನುವಾದ)
ಎನ್.ಆರ್.ರಾವ್‌ರೊಂದಿಗೆ ಸುಲಭ ಸಾಹಿತ್ಯ ಪ್ರಕಾಶನ, ಕುಮಟ ೧೯೫೭
ಟಿ.ಎಸ್.ಈಲಿಯಟ್ (ಎ.ಸಿ.ಬ್ರ್ಯಾಡ್ ಬ್ರೂಕ್‌ರ T.S.Eliot ಅನುವಾದ)
ಎಂ.ಜಿ.ಎಂ. ಕಾಲೇಜು ಉಡುಪಿ. ೧೯೫೭
ಸ್ವಾತಂತ್ರ್ಯ ಮೀಮಾಂಸೆ
(ಜೆ.ಎಸ್. ಮಿಲ್ಲರರ On Liberty ಅನುವಾದ ಎನ್.ಆರ್. ರಾವ್‌ರೊಂದಿಗೆ)
ಕುಮಟ ೧೯೬೧
ಮಾತೃಶ್ರೀ (ಪಶುಪತಿಯವರ On the Mother Divine ಅನುವಾದ)
ಶ್ರೀ ಅರವಿಂದೋ ಸೊಸೈಟಿ, ಶಿವಮೊಗ್ಗ ೧೯೭೫

ವೇದರಹಸ್ಯ (ಅರವಿಂದ The Secret of the Veda ಅನುವಾದ) (ಅಪ್ರಕಟಿತ)
ನೆಹರೂ ಉವಾಚ (ಉಪಲಬ್ಧವಿಲ್ಲ)
ರಮಣ ಮಾರ್ಗ ಭಾಗ ೧ ಮತ್ತು ಭಾಗ –೨
(ಓಂ ಸಾಧು ಅವರ The Path of Ramana Part-1 & Part 2 ಅನುವಾದ)
ಅಪ್ರಕಟಿತ

**ಅನುವಾದ (ಸಂಸ್ಕೃತ)**

| | | |
|---|---|---|
| ಕಾಳಿದಾನ ಕಾವ್ಯ ಸೌರಭ | ರೋಟರಿ ಕ್ಲಬ್, ಕುಮಟ (ಉಪಲಬ್ಧವಿಲ್ಲ) | ೧೯೬೨ |
| ಕುಂದಮಾಲೆ (ನಾಟಕ) | ಗೀತಾ ಬುಕ್ ಹೌಸ್, ಮೈಸೂರು | ೧೯೬೭ |
| ಸಂಸ್ಕೃತ ಸುಭಾಷಿತ ಸಂಗ್ರಹ | ಪ್ರಸಾರಾಂಬ, ಕ.ವಿ.ವಿ. ಧಾರವಾಡ | ೧೯೭೧ |
| ರಾಜಧರ್ಮ | ಪ್ರಸಾರಾಂಗ, ಕ.ವಿ.ವಿ. ಧಾರವಾಡ | ೧೯೭೪ |

(ಮನುಸ್ಮೃತಿ ೭ನೇ ಅಧ್ಯಾಯದ ಅನುವಾದ – ಟಿಪ್ಪಣಿ, ಪೀಠಿಕ ಸಹಿತ ಬಿ.ಆರ್.ಮೋಡಕರೊಂದಿಗೆ)

**೧೧. ಸಂಪಾದಿತ**

ನವರತ್ನ (ಮಿಸಲೆನಿ) ಸುಲಭ ಸಾಹಿತ್ಯ ಪ್ರಕಾಶನ, ಕುಮಟ (ವರ್ಷ ನಮೂದಿಸಿಲ್ಲ)

ಬವವಾಡಿ ಹಿರಿಯಣ್ಣ ಹೆಬ್ಬಾರ್ ವಿರಚಿತ
ಭಾನುಮತಿ ಕಲ್ಯಾಣ (ಯಕ್ಷಗಾನ) ಕಾವ್ಯಾಲಯ ಪ್ರಕಾಶಕರು, ಮೈಸೂರು ೧೯೫೮

ರಸೋ ವೈ ಸಃ (ಹಿರಿಯಣ್ಣ ಹೆಬ್ಬಾರರ ಯಕ್ಷಗಾನ ಮತ್ತು ಭಕ್ತಿ ಸ್ತೋತ್ರಗಳು)
'ಸಾಹಿತ್ಯ ಮಂದಿರ' ಶಿರಸಿ ೧೯೮೭

# ಕೆಲವು ಲೇಖನಗಳು

**೧. ಅಭಿನಂದನ ಗ್ರಂಥಗಳಲ್ಲಿ**

| | | |
|---|---|---|
| ಸಂಸ್ಕೃತ ನಾಟಕ | ಅಭಿನಂದನೆ | ೧೯೫೬ |
| ಕನ್ನಡ ಸಾಹಿತ್ಯಕ್ಕೆ ಮುಗಳಿ | ರಸಿಕರಂಗ ದರ್ಶನ | ೧೯೬೬ |
| | | ಕೊಡುಗೆ |
| ಸೌಂದರ್ಯ ಮೀಮಾಂಸೆ | ಉಪಾಯನ | ೧೯೬೭ |
| ಯಕ್ಷಗಾನ ಬಯಲಾಟ | ಕಾರಂತ ಪ್ರಪಂಚ | ೧೯೬೯ |
| ಬೆಂಗಳೂರು ಭಾರ್ಗವ (ಅ.ನ.ಕೃ) ರಸಚೇತನ | | ೧೯೭೦ |
| ಗುರುಗಳಿಗೆ ನಮಸ್ಕಾರ | ಸಮರ್ಪಣೆ | ೧೯೭೦ |
| ಕುವೆಂಪು ಗದ್ಯ | ಸಹ್ಯಾದ್ರಿ | ೧೯೭೪ |
| ಯಕ್ಷಗಾನದ ಸಾಂಸ್ಕೃತಿಕ ಕೊಡುಗೆ | ರಸ ಋಷಿ | ೧೯೭೪ |
| ಬೇಂದ್ರೆ ಕಾವ್ಯ ಸ್ತೋತ್ರ | ಇಳಿದು ಬಾ ತಾಯಿ | ೧೯೭೭ |
| ಕಾವ್ಯಾನುಶಾಸನ | ಬ್ರಹ್ಮಗಿರಿ | ೧೯೭೭ |
| ಅಭಿಜಾತ ಕೃತಿ–ನಲ್ಮೆ | ವಾಙ್ಮಯ ತಪಸ್ವಿ | ೧೯೭೭ |
| ಜ್ಞಾನದ ಪೂರ್ಣಕುಂಭ | ನಮನ | ೧೯೭೮ |
| ಮಿತ್ರಾಭಿನಂದನ | ಪ್ರವೃತ್ತ | ೧೯೭೬ |
| ಆಧುನಿಕ ಸಾಹಿತ್ಯ ಸಮೀಕ್ಷೆ | ಬೆಳ್ವೊಲ | ೧೯೮೧ |
| ಇತ್ಯಾದಿ | | |

**೨. ಸಂಸ್ಮರಣ ಸಂಚಿಕೆಗಳಲ್ಲಿ**

| | | |
|---|---|---|
| ಹೈವನಾಡಿನ ಚರಿತ್ರೆ | ಉ.ಕ.ದರ್ಶನ, ಕ.ಸಾ.ಪ. ಬೆಂಗಳೂರು | ೧೯೮೬ |
| ಬನವಾಸಿಯ ಚಕ್ರವರ್ತನ | ಪಡುವಣ (೪೫ನೇಯ ಕನ್ನಡ ಸಾಹಿತ್ಯ ಸಮ್ಮೇಳನ) | |
| ಶಿರಸಿಯ ಚಾರಿತ್ರಿಕ ಹಿನ್ನೆಲೆ | ಶಿರಸಿ ನಗರಸಭಾ ಸಂಚಿಕೆ | ೧೯೬೬ |
| ಹೊನ್ನಾವರ ಚರಿತ್ರೆ | ಹೊನ್ನಾವರ ಭೂ ಅಭಿವೃದ್ಧ ಬ್ಯಾಂಕ್ | ೧೯೭೭ |

| | | |
|---|---|---|
| ಸಿದ್ದಾಪುರದ ಚಾರಿತ್ರಿಕ ಹಿನ್ನೆಲೆ | ಅರ್ಬನ್ ಬ್ಯಾಂಕ್, ಸಿದ್ದಾಪುರ | ೧೯೭೯ |
| ಭಾರತದ ಗ್ರಂಥಾಲಯಗಳ ಇತಿಹಾಸ | ಶಿರಸಿ ಪಂಡಿತ್ ಲೈಬ್ರರಿ | ೧೯೭೦ |
| ಕೌಶಿಕ ರಾಮಾಯಣ | ಕದಂಬ (ಸಾಹಿತ್ಯ ಸಮ್ಮೇಳನಾಂಕ) | ೧೯೮೨ |
| ವಿದ್ವತ್ಕವಿ ಪಾಂಡೇಶ್ವರರು | ತಾಂಬೂಲ (ಉ.ಕ.ಸಾಹಿತ್ಯ ಸಮ್ಮೇಳನಾಂಕ) | ೧೯೮೧ |
| ಕನ್ನಡ ಸಾಹಿತ್ಯ ನಡೆದು ಬಂದ ದಾರಿ | ಮೈಸೂರು ದಸರಾ ದರ್ಶಿನಿ | ೧೯೬೪ |
| ಇತ್ಯಾದಿ | | |

**೩. ಪತ್ರಿಕೆಗಳು**

| | | |
|---|---|---|
| ಇಂದಿನ ಕನ್ನಡ ಪ್ರಬಂಧಗಳು | ಕನ್ನಡ ಸಾಹಿತ್ಯ ಪರಿಷತ್ಪತ್ರಿಕ | ೪೬/೧ |
| ಔಚಿತ್ಯ | ಜೂನ್ ೧೯೬೭ | |
| | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ | |
| | ೪೨/೧ ಜೂನ್ ೧೯೪೭ | |
| ಕುಂದಗನ್ನಡ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ | |
| | ೪೧, ೪೨, ೪೩ ಜೂನ್ ೧೯೪೬/೫೮ | |
| ಹೊಸಗನ್ನಡ ಛಂದೋವಿಕಾಸ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ | |
| | ೪/೧-೨ ಜೂನ್ -ಡಿಸೆಂ. | |
| ಕನ್ನಡತ್ರಯ ವಿಭಾಗಯೋಗ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ | |
| | ೬೨/೧ ಜೂನ್ – ಡಿಸೆಂ. ೧೯೭೭ | |
| ವಿಮರ್ಶೆ | ಸಾಧನ, ಸಂಪುಟ ೧, ಸಂಚಿಕೆ ೩೧ | |
| ಸ್ವಾತಂತ್ರ್ಯ ಮತ್ತು ಭ್ರಮೆ | ಜೀವನ | |
| | ಜುಲೈ ೧೯೬೮ | |
| ರಂಗ ಬಿನ್ನಪ | ಪ್ರಬುದ್ಧ ಕರ್ನಾಟಕ ಚಿನ್ನದ ಸಂಚಿಕೆ | |
| | ೧೯೬೯ | |
| ಸಾಹಿತ್ಯ ಚಿಂತನ–ಲೇಖನ ಸರಣಿ | ಮಂಜುವಾಣಿ | |
| | ೧೯೮೧ ರಿಂದ ೧೯೮೩ | |
| ಶಿವ ಪುರಾಣ–ಲೇಖನ ಸರಣಿ | ಮಂಜುವಾಣಿ | |
| | ೧೯೮೪ ರಿಂದ ೧೯೮೬ | |
| ಜನಜೀವನ ಹಾಗೂ | ಕಾನಡಾವೃತ್ತ | |

| | |
|---|---|
| ಜಾನಪದ ಕಲೆಗಳು | ೧೦೮೨ |
| ಯಕ್ಷಗಾನ : ಉಗಮ ಮತ್ತು ಇತಿಹಾಸ | ಸಂಯುಕ್ತ ಕರ್ನಾಟಕ ೨೪–೬–೧೯೮೪ |
| ಸಾಹಿತ್ಯ ಮತ್ತು ಮಹಾಕಲ್ಪನೆ | ಜನತಾ ೧೨–೮–೧೯೬೩ |
| ಮಾನವ ಸಂಸ್ಕೃತಿ | ಜಯಕರ್ನಾಟಕ ಜುಲೈ ೧೯೫೩ |
| ಕಾವ್ಯದಲ್ಲಿ ಪ್ರಾಸ ಏಕೆ ಬೇಕು? | ಕನ್ನಡ ನುಡಿ ೧–೪–೧೯೭೩ |
| ವಿಮರ್ಶಾ ಪರಿಭಾಷೆ | ತಾಯಿ ನುಡಿ ದೀಪಾವಳಿ ಸಂಚಿಕೆ |

* ಮುಂತಾದ ಸಾವಿರಾರು ಲೇಖನಗಳು

೪. ಇಂಗ್ಲಿಷ್ ಲೇಖನಗಳು

| | | |
|---|---|---|
| Manu's Theory of Kingship | JL of K.U.D. YV | 1971 |
| Experience and expression | XVII | 1973 |
| Classical and Modern Plays | The Mysore Orientalist | 1969 |
| Aesthetic Experience | Mysore Oriental Research Institute | 1972 |
| Indian History-A Challenge to some Fundamental Assumptions | JL of Mysore University | 1977 |
| The Hindu View of History | P.B.Desai Fel. Vol Dharwad | |
| etc. | | |

## ಶ್ರೀಧರರ ಕುರಿತು

### ೧. ಕಿರುಹೊತ್ತಿಗೆ

| | | |
|---|---|---|
| ರಾಜಶೇಖರ ಹೆಬ್ಬಾರ ಹಾಗೂ ಕಿರಣ ಭಟ್ಟ | ಪ್ರೊ.ಬಿ.ಎಚ್.ಶ್ರೀಧರ ಬಿ.ಎಚ್.ಶ್ರೀ ಸಾಹಿತ್ಯ ಪ್ರಶಸ್ತಿ ಸಮಿತಿ, ಶಿರಸಿ | ೧೯೯೨ |
| ರಾಜಶೇಖರ ಹೆಬ್ಬಾರ | ಪ್ರೊ.ಬಿ.ಎಚ್.ಶ್ರೀಧರ | ೨೦೦೭ |
| ರಾಜಶೇಖರ ಹೆಬ್ಬಾರ | ಶ್ರೀಧರ ಪ್ರಶಸ್ತಿ | ೨೦೧೦ |
| ಡಾ.ಶ್ರೀಪಾದ ಭಟ್ಟ | | |

**೨. ಸಂದರ್ಶನ**

| | | |
|---|---|---|
| ಪಾ.ವೆಂ.ಆಚಾರ್ಯ | ಕಸ್ತೂರಿ | ಫೆಬ್ರವರಿ ೧೯೭೪ |
| ಭುವನೇಶ್ವರಿ ಹೆಗಡೆ | ತರಂಗ | ೧೯೮೭ |
| ಭಾಗೀರಥಿ ಹೆಗಡೆ | ಉಷಾವಾಣಿ | ೨೧-೮-೧೯೮೮ |
| ಮೋಹನ ಹೆಗಡೆ | ಸಂಯುಕ್ತ ಕರ್ನಾಟಕ | ೨೬-೪-೧೯೮೭ |
| ಮುಂತಾದವು | | |

**೩. ಸಾಹಿತ್ಯ ವಿಮರ್ಶೆ**

ಎಚ್.ಆರ್.ಅಮರನಾಥ-ಪರಂಪರೆಯ ಕಾವಲುಗಾರ:
ಬಿ.ಎಚ್.ಶ್ರೀಧರರ ಕಾವ್ಯ ಸಮೀಕ್ಷೆ ಸೃಜನವೇದಿ ಏಪ್ರಿಲ್ ೧೯೮೭
ಪ್ರೊ.ಬಿ.ಎಚ್.ಶ್ರೀಧರ-ರಾಜಶೇಖರ ಹೆಬ್ಬಾರ ೨೦೦೭

**೪. ಗ್ರಂಥಾವಲೋಕನ**

| | | |
|---|---|---|
| ಮೇಘನಾದ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ-೩೧, ೨ | |
| ಮಂಜುಗೀತ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ-೪೩, ೨ | |
| ಜಾತವೇದ | ಪ್ರಜಾವಾಣಿ | ೫-೧-೧೯೮೬ |
| ಜಾತವೇದ | ನಾಗರಿಕ | ೧೯೮೫ |
| ಜಾತವೇದ | ಸಂಯುಕ್ತ ಕರ್ನಾಟಕ | ೫-೧-೧೯೮೬ |
| ಕಂಟಕಾರೀ ಕಾವ್ಯಂ | ಗ್ರಂಥಲೋಕ | ೧-೪-೧೯೮೨ |
| ಕವೀಂದ್ರ ರವೀಂದ್ರ | ಕರ್ನಾಟಕ ಭಾರತಿ | ೧೯೬೪ |
| ಕಾವ್ಯ ಸೂತ್ರ | ಸಂಯುಕ್ತ ಕರ್ನಾಟಕ | ೧೧-೧೦-೧೯೬೯ |
| ಬೇಂದ್ರೆ | ಶಿರಸಿ ಸಮಾಚಾರ | ೧-೭-೧೯೮೭ |
| ಪ್ರಜ್ಞಾವಾದ | ವನಶ್ರೀ ಉ.ಕ.ಜಿಲ್ಲಾ ಸಾಹಿತ್ಯ ಸಮ್ಮೇಳನ ಯಲ್ಲಾಪುರ | ೧೯೭೪ |
| ಭಾರತೀಯ ಮೂರ್ತಿಶಿಲ್ಪ | The Indian Express | ೧-೮-೧೯೮೮ |

**೫. ಬದುಕು-ಬರೆಹ ಪರಿಚಯದ ಲೇಖನಗಳು**

| | | |
|---|---|---|
| ಮೋಹನ ಹೆಗಡೆ | ಸಂಯುಕ್ತ ಕರ್ನಾಟಕ | ೨೬-೪-೧೯೮೭ |
| ರಾಜಶ್ರೀ ಹೆಗಡೆ | The Indian Express | ೧೧-೫-೧೯೮೭ |
| ಎಂ.ಎ.ಶರ್ಮ ತದ್ದಲಸೆ | ಪ್ರಜಾಮತ | ೨೪-೫-೧೯೮೭ |

| | | |
|---|---|---|
| ಹಾ.ಮಾ.ನಾಯಕ | ಪ್ರಜಾವಾಣಿ | ೨೧–೫–೧೯೮೭ |
| ಹಾ.ಮಾ.ನಾಯಕ | ಪ್ರಜಾವಾಣಿ | ೨೦–೫–೧೯೯೦ |
| ಟಿ.ಎಂ.ಸುಬ್ಬರಾಯ | ಉದಯವಾಣಿ | ೬–೫–೧೯೯೦ |
| ಎಚ್ಚೆಸ್ಕೆ | ಸುಧಾ | ೨೪–೫–೧೯೮೭ |
| ಪಾ.ವೆಂ.ಆಚಾರ್ಯ | ಉದಯವಾಣಿ | ೬–೫–೧೯೯೦ |
| ಕಿರಣ ಭಟ್ ಹಾಗೂ ಅಮರನಾಥ | ಪ್ರಜಾವಾಣಿ | ೨೧–೬–೧೯೯೧ |
| ರಾಜೇಶ್ವರಿ ಹೆಬ್ಬಾರ | ಸಂಯುಕ್ತ ಕರ್ನಾಟಕ | ೨೦೦೯ |

* ಮುಂತಾದವು.

**೬. ಶ್ರೀಧರ ಸ್ಮರಣೆ** – ಸಂ. ಡಾ.ಎಂ.ಜಿ.ಹೆಗಡೆ ೧೯೯೯
(ಅಭಿನಂದನ ಗ್ರಂಥ)

**೭. ಶ್ರೀಧರರ ನೆನಪು**

ಶ್ರೀಧರರ ನೆನಪು ಚಿರಂತನವಾಗಿ ಉಳಿಯುವಂತೆ ಮಾಡಲು ಅವರ ಕುಟುಂಬದವರು ಶಿಷ್ಯರು ಹಾಗೂ ಅಭಿಮಾನಿಗಳ ಪರವಾಗಿ ಡಾ.ಟಿ.ನಾರಾಯಣ ಭಟ್, ಎಚ್.ಆರ್.ಅಮರನಾಥ, ಕಿರಣಭಟ್, ವಿಷ್ಣುಹೆಗಡೆ ಹಾಗೂ ರಾಜಶೇಖರ ಹೆಬ್ಬಾರ, ಜಗದೀಶ ಭಂಡಾರಿ, 'ಬಿ.ಎಚ್.ಶ್ರೀಧರ ಸಾಹಿತ್ಯ ಪ್ರಶಸ್ತಿ ಸಮಿತಿಯನ್ನು ರೂಪಿಸಿ ಪ್ರತಿ ವರ್ಷ ಕನ್ನಡದ ಉತ್ತಮ ಸಾಹಿತ್ಯ ಕೃತಿಗೆ ಬಹುಮಾನ ನೀಡುವ ವ್ಯವಸ್ಥೆ ಮಾಡಿದ್ದಾರೆ (೧೯೯೧ ರಿಂದ) –ಸಿ.ಎನ್.ಹೆಗಡೆ, ಸಿ.ಆರ್.ಶಾನಭಾಗ, ಯು.ಎ.ಐತಾಳ, ವಿಠಲ ಭಂಡಾರಿ, ಶ್ರೀಪಾದ ಭಟ್, ಯಶವಂತ ನಾಯಕ ಇವರು ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

# ಬಿ.ಎಚ್.ಶ್ರೀಧರ ಸಾಹಿತ್ಯ ಪ್ರಶಸ್ತಿ ಪುರಸ್ಕೃತರು

| ವರ್ಷ | ಪ್ರಶಸ್ತಿ | ಕೃತಿ | ಅಧ್ಯಕ್ಷತೆ |
|---|---|---|---|
| ೧೯೯೧ | ನಾ.ಮೊಗಸಾಲೆ | ಪ್ರಭವ (ಕಾವ್ಯ) | ಕೀರ್ತಿನಾಥ ಕುರ್ತಕೋಟಿ |
| ೧೯೯೨ | ಗಿರೀಶ ಕಾರ್ನಾಡ | ತಲೆದಂಡ (ನಾಟಕ) | 'ಎನ್ಕೆ' ಕುಲಕರ್ಣಿ |
| ೧೯೯೩ | ಪಿ.ಲಂಕೇಶ ಹಾಗೂ | ಅಕ್ಕ (ಕಾದಂಬರಿ) | |
| | ದು.ನಿಂ.ಬೆಳಗಲಿ | ದೇವದಾಸಿ (ಕಾದಂಬರಿ) | ಶಿವರಾಮ ಕಾರಂತ |
| ೧೯೯೪ | ಪುರುಷೋತ್ತಮ ಬಿಳಿಮಲೆ | ಶಿಷ್ಟ ಪರಿಶಿಷ್ಟ (ವಿಮರ್ಶೆ) | ಕೆ.ವಿ.ಸುಬ್ಬಣ್ಣ |
| ೧೯೯೫ | ಎಚ್.ಎಸ್.ವೆಂಕಟೇಶಮೂರ್ತಿ | ಎಷ್ಟೊಂದು ಮುಗಿಲು (ಕವನ) | ಪಾಟೀಲ ಪುಟ್ಟಪ್ಪ |
| ೧೯೯೬ | ಜಿ.ಎಸ್.ಆಮೂರ | ಕನ್ನಡ ಕಥನ ಸಾಹಿತ್ಯ ಕಾದಂಬರಿ ವಿಮರ್ಶೆ | ಪ್ರಸನ್ನ |
| ೧೯೯೭ | ಜಯಂತ ಕಾಯ್ಕಿಣಿ | ಅಮೃತಬಳ್ಳಿ ಕಷಾಯ (ಕಥಾಸಂಕಲನ) | ವೇಣುಗೋಪಾಲ |
| ೧೯೯೮ | ಸವಿತಾ ನಾಗಭೂಷಣ | ಸ್ತ್ರೀಲೋಕ (ಕಾದಂಬರಿ) | ಸಿ.ಎನ್.ರಾಮಚಂದ್ರನ್ |
| ೧೯೯೯ | ಕೆ.ವಿ.ನಾರಾಯಣ | ಬೇರು–ಕಾಂಡ–ಚಿಗುರು (ವಿಮರ್ಶೆ) | ವಿಷ್ಣುನಾಯ್ಕ |
| ೨೦೦೦ | ಪ್ರತಿಭಾ ನಂದಕುಮಾರ್ | ಕವಡೆ ಆಟ (ಕವನ) | ಗಿರಡ್ಡಿ ಗೋವಿಂದರಾಜ್ |
| ೨೦೦೧ | ಕೆ.ರಾಘವೇಂದ್ರರಾವ್ | Imagining the unimaginable communities | ಟಿ.ನಾ.ಭಟ್ |
| ೨೦೦೨ | ಮೊಗಳ್ಳಿ ಗಣೇಶ | ಭೂಮಿ (ಕಥಾ ಸಂಕಲನ) | ಬರಗೂರು ರಾಮಚಂದ್ರಪ್ಪ |
| ೨೦೦೩ | ಶಿವರಾಮ ಪಡಿಕ್ಕಲ್ | ನಾಡು ನುಡಿಯ ರೂಪಕ (ವಿಮರ್ಶೆ) | ಬಿ.ಎ.ಸನದಿ |
| ೨೦೦೪ | ಚಿಂತಾಮಣಿ ಕೊಡ್ಲೆಕೆರೆ | ತಲೆಮಾರಿನ ಕೊನೆಯ ಕೊಂಡಿ | ಜಯಂತ ಕಾಯ್ಕಿಣಿ |
| ೨೦೦೫ | ಎ.ಎನ್.ಪ್ರಸನ್ನ | ರಥಸಪ್ತಮಿ (ಕಥಾಸಂಕಲನ) | ಜಿ.ಎಸ್.ಆಮೂರ |
| ೨೦೦೬ | ಎಸ್.ದಿವಾಕರ | ನಾಪತ್ತೆಯಾದ ಗ್ರಾಮಾಫೋನ್ ಮತ್ತು ಇತರ ಪ್ರಬಂಧಗಳು (ವೈಚಾರಿಕ ಗದ್ಯ) | ಶಂಭು ಹೆಗಡೆ |
| ೨೦೦೭ | ಎಸ್.ಮಂಜುನಾಥ | ಕಲ್ಲ ಪಾರಿವಾಳಗಳ ಬೇಟ (ಕವನ) | ಚಿಂತಾಮಣಿ ಕೊಡ್ಲೆಕೆರೆ |
| ೨೦೦೮ | ಗಿರಡ್ಡಿ ಗೋವಿಂದರಾಜ್ | ಹಿಡಿಯದ ಹಾದಿ (ಪ್ರಬಂಧ) | ಕಿ.ರಂ.ರಾಮಚಂದ್ರನ್ |
| ೨೦೦೯ | ಅಶೋಕ ಹೆಗಡೆ | ವಾಸನೆ, ಶಬ್ದ, ಬಣ್ಣ ಇತ್ಯಾದಿ (ಕಥಾ ಸಂಕಲನ) | ಸಿ.ಎನ್.ರಾಮಚಂದ್ರನ್ |
| ೨೦೧೦ | ಪ್ರಸನ್ನ ಹೆಗ್ಗೋಡು | ಬಾಲಗೋಪಾಲ (ಕಾದಂಬರಿ) | ಲಕ್ಷ್ಮೀಶ ತೋಳ್ಪಾಡಿ |
| ೨೦೧೧ | ಆರ್.ಪಿ.ಹೆಗಡೆ | ಸಮಗ್ರ ಸಾಧನೆಗೆ | ಜಯಂತ ಕಾಯ್ಕಿಣಿ |
| ೨೦೧೨ | ವಿವೇಕ ಶಾನಭಾಗ | ವಿಶಿಷ್ಟ ಸಾಹಿತ್ಯ | ಗೋಪಾಲಕೃಷ್ಣ ಪೈ |
| ೨೦೧೩ | ರಾಜೇಂದ್ರ ಚೆನ್ನಿ | ಸಮಗ್ರ ಸಾಧನೆಗೆ | ಎಮ್. ರಮೇಶ |

| | | | |
|---|---|---|---|
| ೨೦೧೪ | ಭುವನೇಶ್ವರಿ ಹೆಗಡೆ | ಸಮಗ್ರ ಸಾಧನೆಗೆ | ವೈದೇಹಿ |
| ೨೦೧೫ | ಕೆ.ವಿ. ಅಕ್ಷರ | ಸಮಗ್ರ ಸಾಧನೆಗೆ | ಟಿ.ಪಿ. ಅಶೋಕ |
| ೨೦೧೬ | ಕೆ. ಸತ್ಯನಾರಾಯಣ | ಸಮಗ್ರ ಸಾಧನೆಗೆ | ಗಿರಡ್ಡಿ ಗೋವಿಂದರಾಜ |
| ೨೦೧೭ | ನಾಗೇಶ ಹೆಗಡೆ | ಸಮಗ್ರ ಸಾಧನೆಗೆ | ಪ್ರಕಾಶ ಭಟ್ಟ |

* ಡಾ.ಟಿ.ಪಿ.ಅಶೋಕ, ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಸುವರ್ಣ, ಗೌರೀಶ ಕಾಯ್ಕಿಣಿ, ಡಾ.ಆರ್.ಪಿ.ಹೆಗಡೆ, ಪ್ರೊ.ಜಿ.ಎಸ್.ಅವಧಾನಿ, ಡಾ.ಆರ್.ವಿ.ಭಂಡಾರಿ, ಡಾ.ಎಂ.ಜಿ.ಹೆಗಡೆ, ಪ್ರೊ.ಎಂ.ರಮೇಶ, ರಾಜಶೇಖರ ಹೆಬ್ಬಾರ, ಡಾ.ಶ್ರೀಪಾದ ಭಟ್ ಇವರೆಲ್ಲ ನಿರ್ಣಾಯಕರಾಗಿ ಕಾರ್ಯನಿರ್ವಹಿಸಿದ್ದಾರೆ.

## ಬಿ.ಎಚ್.ಶ್ರೀಧರ ಶಿಕ್ಷಣ ಪ್ರಶಸ್ತಿ ಪುರಸ್ಕೃತರು

(೧೯೯೫ ರಿಂದ ಕೃಷ್ಣ ಲೋಕರೆಯವರು ನೀಡಿದ ಮೂಲಧನದಿಂದ ಆರಂಭವಾದ ಈ ಪ್ರಶಸ್ತಿಗೆ ಸಿದ್ಧಾಪುರದ ಎಂ.ಜಿ.ಸಿ. ಕಾಲೇಜಿನ ಬಿ.ಎ. ಭಾಗ–೩ ರಲ್ಲಿ ಪ್ರಥಮರಾದ ವಿದ್ಯಾರ್ಥಿಗೆ ಪ್ರತಿವರ್ಷ ನೀಡಲಾಗುತ್ತಿದೆ.)

| | |
|---|---|
| ೨೦೦೫ | ವರದುರ್ಗಾ ಭಟ್ |
| ೨೦೦೬ | ಪ್ರಜ್ಞಾ ಭಟ್ |
| ೨೦೦೭ | ಪ್ರಜ್ಞಾ ಹೆಗಡೆ |
| ೨೦೦೮ | ಗೀತಾ ನಾಯ್ಕ |
| ೨೦೦೯ | ವೆಂಕಟೇಶ ನರಸಿಂಹ ಹೆಗಡೆ |
| ೨೦೧೦ | ಮಧುಲತಾ ಗೌಡರ್ |
| ೨೦೧೧ | ಸಿ.ಆರ್.ರೇಷ್ಮಾ |
| ೨೦೧೨ | ಶ್ರುತಿ ಭಟ್ |
| ೨೦೧೩ | ಕಾವ್ಯಶ್ರೀ ನಾಯ್ಕ |
| ೨೦೧೪ | ಆಶಾ ಹೆಗಡೆ |
| ೨೦೧೫ | ಲೋಹಿತ್ ಮಹಾಲೆ |
| ೨೦೧೬ | ಮಾಲತಿ ನಾಯ್ಕ |
| ೨೦೧೭ | ಇಂದಿರಾ ಸಬ್ನೀಸ್ |

# ಚಿತ್ರಸಂಪುಟ



ಬಿ.ಎಚ್. ಶ್ರೀಧರರು – ನಿಷ್ಕಪಟ ನಗು



ಬಿ.ಎಚ್. ಶ್ರೀಧರರು – ಮಾತಿನ ಓಘದಲ್ಲಿ




(ಎಡದಿಂದ) ಕುಳಿತವರು – ರಮಾದೇವಿ. ಬಿ.ಎಚ್.ಶ್ರೀ, ಮೊಮ್ಮಗ ರಮಣ,
ಟಿ.ಎಮ್. ಸುಬ್ಬರಾಯ, ರಾಜಶೇಖರ ಹೆಬ್ಬಾರ, ಸಾವಿತ್ರಿ (ಸೊಸೆ), ಮೊಮ್ಮಗ ಬ್ರಹ್ಮಾನಂದ




ಕುಂದಾಪುರದಲ್ಲಿ ಕನ್ನಡ ಸಾಹಿತ್ಯೋತ್ಸವ – ಕಾರಂತರೊಂದಿಗೆ ಕಾರ್ಯಕ್ರಮ – 1.11.1988




'ಭಾರತೀಯ ಮೂರ್ತಿಶಿಲ್ಪ' ಪುಸ್ತಕ ಬಿಡುಗಡೆ (1988) ಸಮಾರಂಭದಲ್ಲಿ ಕಲಾವಿದ ಆರ್.ಜಿ. ರಾಯ್ಕರ, ಡಾ. ಟಿ. ನಾರಾಯಣಭಟ್ ಹಾಗೂ ಬಿ.ಎಚ್.ಶ್ರೀಧರ



ಅಭ್ಯಾಸ ನಿರತ ಬಿ.ಎಚ್.ಶ್ರೀಧರರು




ಬಿ.ಎಚ್.ಶ್ರೀಧರರ ಪ್ರಕಟಿತ ಪುಸ್ತಕಗಳ ಚಿತ್ರ



**26.4.1987ರ ಸನ್ಮಾನ – ನಿಂತವರು – ಶ್ರೀ ಎಲ್.ಆರ್. ಭಟ್, ಅವರ ಪತ್ನಿ ನಳಿನಿ (ಭಾರತೀಸುತರ ಮಗಳು), ಕುಳಿತವರು – (ಎಡದಿಂದ) ಶಂತರ ಕಾರಂತ (ಅಳಿಯ), ರಾಜಶೇಖರ ಹೆಬ್ಬಾರ (ಮಗ), ರಮಣ (ಮೊಮ್ಮಗ), ಸಚಿನ್ (ತಂಗಿಯ ಮೊಮ್ಮಗ), ಶ್ರೀಧರರು, ರಮಾದೇವಿ, ಸುಶೀಲೆ (ತಂಗಿ), ವಿಜಯಾ (ಮಗಳು)**



**ಬಿ.ಎಚ್.ಶ್ರೀಧರ, ರಮಾದೇವಿ, ಬ್ರಹ್ಮಾನಂದ (ಮೊಮ್ಮಗ)**



ಮಗಳು ಪ್ರತಿಭಾ ಮತ್ತು ಅಳಿಯ ರಮೇಶ ವೈದ್ಯರೊಂದಿಗೆ ಶ್ರೀಧರ ದಂಪತಿ



ಶಿವರಾಮಕಾರಂತರಿಂದ ಬಿ.ಎಚ್. ಶ್ರೀಧರರಿಗೆ ಸಿದ್ದಾಪುರದಲ್ಲಿ ನಡೆದ
ಸನ್ಮಾನ ಸಮಾರಂಭದಲ್ಲಿ ಮಾತನಾಡುತ್ತಿರುವ ಬಿ.ಎಚ್. ಶ್ರೀ



ಶಿವರಾಮಕಾರಂತರಿಂದ ಶ್ರೀಧರರಿಗೆ ಸನ್ಮಾನ (ಸಿದ್ದಾಪುರ – 1974)



ಸಿದ್ದಾಪುರದ ಎಮ್.ಜಿ.ಸಿ. ಕಾಲೇಜಿನಲ್ಲಿ ನಡೆದ ಕಾರ್ಯಕ್ರಮವೊಂದರಲ್ಲಿ
ಕೆ.ವಿ. ಸುಬ್ಬಣ್ಣನವರೊಂದಿಗೆ ಪ್ರಿನ್ಸಿಪಾಲ್ ಶ್ರೀಧರರು




ಸಿದ್ದಾಪುರದ ಎಮ್.ಜಿ.ಸಿ. ಕಾಲೇಜಿನ ಕಾರ್ಯಕ್ರಮದಲ್ಲಿ
ಚಿತ್ರನಟ ಉದಯಕುಮಾರರೊಂದಿಗೆ ಬಿ.ಎಚ್.ಶ್ರೀಧರ



ಸಿದ್ದಾಪುರದ ಕಾಲೇಜಿನ ಕಾರ್ಯಕ್ರಮವೊಂದರಲ್ಲಿ ಬಿ.ಎಚ್.ಶ್ರೀ,
ರಾಜ್ಯಪಾಲ ಧರ್ಮವೀರ, ಶ್ರೀ ರಾಮಕೃಷ್ಣ ಹೆಗಡೆ ಮತ್ತಿತರು



ಮುಖ್ಯಮಂತ್ರಿ ವೀರೇಂದ್ರ ಪಾಟೀಲರಿಗೆ ಶ್ರೀಧರರಿಂದ ಗೌರವಾರ್ಪಣೆ



ಶಿವರಾಮಕಾರಂತರಿಗೆ ಮಾಲಾರ್ಪಣೆ ಮಾಡುತ್ತಿರುವ ಶ್ರೀಧರರು




ಸಿದ್ದಾಪುರದ ಕಾಲೇಜಿನ ಶಿಲನ್ಯಾಸ ಕಾರ್ಯಕ್ರಮ (ಎಡದಿಂದ) – ಬಿ.ಎಚ್.ಶ್ರೀ,
ರಾಮಕೃಷ್ಣ ಹೆಗಡೆ, ಗಣೇಶ ಹೆಗಡೆ ಮತ್ತಿತರು



ಕವಿ ಬೇಂದ್ರೆ ಮತ್ತಿತರೊಡನೆ ಉಪಹಾರ ಸೇವನೆ



ಶಿವಮೊಗ್ಗದಲ್ಲಿ ಬೇಂದ್ರೆಯವರಿಂದ ಸನ್ಮಾನ



ಗೋಪಾಲಕೃಷ್ಣ ಅಡಿಗರೊಂದಿಗೆ (ನಾಲ್ಕನೆಯವರು) ಕುಮಟೆಯ ಕೆನರಾ ಕಾಲೇಜಿನಲ್ಲಿದ್ದಾಗ




**26.4.1987ರಂದು ಶ್ರೀಧರರ 70ನೇ ಹುಟ್ಟುಹಬ್ಬದಂದು ಶಿರಸಿಯಲ್ಲಿ ನಡೆದ ಸನ್ಮಾನದ ಚಿತ್ರ.**
**(ಎಡದಿಂದ) – ಜಿ.ವಿ. ಭಟ್, ಡಿ.ಎನ್. ಶಾನಭಾಗ, ಬಿ.ಎಚ್.ಶ್ರೀ, ರಮಾದೇವಿ**




**ಬಿ.ಎಚ್.ಶ್ರೀಧರ (1968ರ ಸುಮಾರಿಗೆ)**


ಹುಬ್ಬಳ್ಳಿಯ 'ಕರ್ಮವೀರ' ವಾರಪತ್ರಿಕೆಯ ಉಪಸಂಪಾದಕರಾಗಿದ್ದಾಗಿನ ಬಿ.ಎಚ್.ಶ್ರೀ (1947–51)


ಕುಮಟೆಯಲ್ಲಿ ವಾಸವಿದ್ದ ಮನೆಯೆದುರು (1951–1962)



ಮೈಸೂರಿನ ಮಹಾರಾಜ ಕಾಲೇಜಿನ ದಿಗ್ಗಜ ಪ್ರಾಧ್ಯಾಪಕರೊಂದಿಗೆ ಶಿಷ್ಯ ಶ್ರೀಧರ
(ನಿಂತವರದಲ್ಲಿ (ಬಲಗಡೆಯಿಂದ) ಎರಡನೇ ಸಾಲಿನಲ್ಲಿ ಮೊದಲನೆಯವರು)



ಸಭೆಯೊಂದರಲ್ಲಿ ಬಿ.ಎಚ್. ಶ್ರೀಧರರು ಮಾತನಾಡುತ್ತಿರುವುದು



ಕುಮಟೆಯ ಸಾಹಿತ್ಯ ಸಮ್ಮೇಲನದಲ್ಲಿ – (ನಿಂತವರು) – ಬಿ.ಎಚ್. ಶ್ರೀಧರ, ವೈಎನ್.ಕೆ.
(ಕುಳಿತವರು) – ಗೋಪಾಲಕೃಷ್ಣ ಅಡಿಗ, ತ.ರಾ.ಸು., ರಾಮಚಂದ್ರ ಶರ್ಮ, ಸು.ರಂ. ಎಕ್ಕುಂಡಿ



ಪುರಾಣವು ಅವತಾರಗಳನ್ನವಲಂಬಿಸಿರುವುದು ಕರ್ಮಸಿದ್ಧಾಂತದಂತಹ ಯಾಂತ್ರಿಕ ನಿಸರ್ಗನಿಯಮಗಳು ಕ್ರಮವಾಗಿ ಜೀವಿಯನ್ನು ಅನಂತ ನಿರಾಶೆಗಿಳಿಸ ಹೊರಟಾಗ ಅವನಲ್ಲಿ ಪ್ರತ್ಯಾಶೆಯು ಮೂಡುವಂತೆ ಮಾಡಲೆಂದೇ. ತ್ರಿಕರಣಪೂರ್ವಕವಾಗಿ (ತನ್ನಿಂದಾದ) ತಪ್ಪಿಗೆ ಪಶ್ಚಾತ್ತಾಪಪಟ್ಟು ಪಾಪವಿಮೋಚನೆ ಮಾಡೆಂದು ಬೇಡಿಕೊಳ್ಳಲು ಸಾಕಾರ ಸಂಕೇತವು ಸಾಮಾನ್ಯನಿಗೆ ಅಗತ್ಯ. ಆ ಆಕೃತಿ ಸಾವಯವವಾದರೂ ಸರಿಯೆ, ನಿರಯವಯವಾದರೂ ಸರಿಯೆ! ದೇವರೆಂಬ ದಕಾರಾದಿ ಸಂಕೇತದ ಸತ್ಯತೆಯು ನಿತ್ಯವೂ, ನಿರ್ವಿಕಲ್ಪವೂ, ನಿರವಧಿಕ ಸಾಮರ್ಥ್ಯಸಂಪನ್ನವೂ, ಸರ್ವಾದಿ ಕಾರಣವೂ ಆಗಿರುವುದೆಂಬ ನಂಬಿಕೆ ಪ್ರಾತಿಭೇಯವಾಗಿರುವುದರಿಂದ, ಹುಟ್ಟಾ ಇರುವುದರಿಂದ ಅದನ್ನು ಪ್ರತಿಭಟಿಸುವ ಬೌದ್ಧಿಕ ಸರ್ಕಸ್ಸು ಶಾಂತಿಮಾರಕವಾಗಿ ಪರಿಣಮಿಸುವುದು ಅನುಭವಸಿದ್ಧ. ಆದಿಕಾರಣವು ಬುದ್ಧ್ಯತೀತ. ಆದರೆ ಬುದ್ಧ್ಯೂಹ್ಯ ಅಸ್ತಿತ್ವವುಳ್ಳದ್ದು. ಜ್ಞಾನಮಯ ಭಕ್ತಿ ಯಾ ಭಕ್ತಿಮಯ ಜ್ಞಾನ ಮೂಢನಂಬಿಗೆಯಲ್ಲ   ಜ್ಞಾನವು ವೈರಾಗ್ಯದಷ್ಟು ವಸ್ತುನಿಷ್ಠ ದೃಷ್ಟಿಯುಳ್ಳದ್ದಾದಾಗ ಮತ್ತು ಭಕ್ತಿಯು ಜಗತ್ಕುಟುಂಬಿಯ ಪ್ರೀತಿಯಷ್ಟು ವಿಸ್ತಾರವೂ, ಪ್ರಾಮಾಣಿಕವೂ ಆದಾಗ!

ಬಿ.ಎಚ್. ಶ್ರೀಧರ
(ಶಿವಪುರಾಣ)

ಬಾಗೂರು ಮಾರ್ಕಂಡೇಯ



ತೇಜು ಪಬ್ಲಿಕೇಷನ್ಸ್